# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಆದಿಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೨

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 2**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ಎ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ಪರಮಾತ್ಮನ ದಿವ್ಯಾನುಗ್ರಹದಿಂದಾಗಿ ಶ್ರೀಮನ್ಮಹಾಭಾರತದ ಎರಡನೆಯ ಸಂಪುಟವನ್ನು ಶುಭಸಂಕ್ರಾಂತಿಯ ದಿನವಾದ ಇಂದು ಪರಮಾತ್ಮನ ಪಾದಾರವಿಂದಗಳಲ್ಲಿ ಸಮರ್ಪಿಸಿ, ಗ್ರಾಹಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಇಂದು ಭಾರತ ದರ್ಶನದ ಹದಿನೇಳನೆಯ ಜನ್ಮದಿನವೂ ಆಗಿದೆ. ಈ ತಿಂಗಳ ಭಾರತ ದರ್ಶನದ ಸಂಚಿಕೆಯೊಡನೆ ವಿರಾಟಪರ್ವವೂ ಮುಗಿಯುತ್ತದೆ.

ಎರಡನೆಯ ಸಂಪುಟದ ಮುದ್ರಣಕ್ಕೆ ಪೂರಾ ಹಣವನ್ನು ಮೊದಲನೆಯ ಸಂಪುಟದಿಂದ ಒದಗಿಸಿಕೊಳ್ಳಲಾಗದಿದ್ದರೂ ದಯಾಮಯನಾದ ಪರಮಾತ್ಮನು–ಹೆಚ್ಚು ಕಷ್ಟವಾಗದ ರೀತಿಯಲ್ಲಿ ನಾನಾಮುಖಗಳಿಂದ ಹಣವನ್ನು ಒದಗಿಸಿಕೊಟ್ಟು ತನ್ನದೇ ಆದ ಈ ಕಾರ್ಯವನ್ನು ಆಗುಮಾಡಿಸಿಕೊಂಡಿರುತ್ತಾನೆ. ನಿಶ್ಚಯವಾಗಿಯೂ ಪರಮಾತ್ಮನ ಸಂಕಲ್ಪವು ಅಚಿಂತ್ಯ ಮತ್ತು ಅಪ್ರಮೇಯ. ಕರುಣಾಮಯನಾದ ಅವನು ಹೆಳವನನ್ನು ಬೆಟ್ಟದ ತುದಿಗೆ ಹತ್ತಿಸುವನೆಂಬ ತನ್ನ ಅಪಾರಶಕ್ತಿಯನ್ನು ಅಡಿಗಡಿಗೂ ತೋರಿಸಿಕೊಡುತ್ತಿದ್ದಾನೆ. ಎರಡನೆಯ ಈ ಭಾರತಕುಸುಮವು ಅವನ ದಿವ್ಯಪಾದಾರವಿಂದಗಳನ್ನು ಅಲಂಕರಿಸಲಿ.

ಮೊದಲನೆಯ ಸಂಪುಟದ ಪ್ರಕಟಣೆಯಿಂದ ಇದುವರೆಗೆ ಆದ ಕೆಲವು ಸನ್ನಿವೇಶಗಳನ್ನು ವಾಚಕರ ಮುಂದಿಡುವುದು ಅಪ್ರಕೃತವಲ್ಲವೆಂದು ಭಾವಿಸಿದ್ದೇವೆ. ಪ್ರಥಮ ಸಂಪುಟವನ್ನು ಪ್ರಕಾಶನಗೊಳಿಸಿದ ವಿದ್ಯಾಮಂತ್ರಿಗಳಾದ ಮಾನ್ಯ ಶ್ರೀ ಎ. ಆರ್. ಬದರೀನಾರಾಯಣ್ ಅವರು ಆಶ್ವಾಸನೆಯನ್ನಿತ್ತಿದ್ದಂತೆ ಸರ್ಕಾರಕ್ಕೆ ತೆಗೆದುಕೊಳ್ಳುವ ಸಂಪುಟಗಳ ಬೆಲೆಯನ್ನು ಹೆಚ್ಚುಮಾಡಿದ್ದಾರೆ. ಐದುಸಾವಿರ ರೂಪಾಯಿಗಳ ಸಹಾಯಧನವನ್ನು–ಒಂದು ಸಾವಿರ ಪ್ರತಿಗಳಿಗೆ ಬದಲಾಗಿ 625 ಪ್ರತಿಗಳಿಗೇ ಕೊಡಬೇಕೆಂದು ಆಜ್ಞೆಮಾಡಲಾಗಿದೆ. ಇದಕ್ಕಾಗಿ ವಿದ್ಯಾಮಂತ್ರಿಗಳಿಗೂ ಸಂಬಂಧಪಟ್ಟ ಸರ್ಕಾರದ ಅಧಿಕಾರಿಗಳಿಗೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ಸರ್ಕಾರದ ಸಹಾಯವು ಇಂತಹ ಮಹಾಕಾರ್ಯಗಳಿಗೆ ಅನಿವಾರ್ಯ.

ಸಂಪುಟಗಳನ್ನು ವಿತರಣೆಮಾಡಿರುವವರು ಈ ಕಾರ್ಯದ ಪ್ರಗತಿಗೆ ಮುಖ್ಯ ಕಾರಣರಾಗಿರುತ್ತಾರೆ. ಯಾವ ವಿಧವಾದ ಪ್ರತಿಫಲಾಪೇಕ್ಷೆಯೂ

ಇಲ್ಲದೇ ಮಹಾಭಾರತವನ್ನು ಪ್ರಚಾರಮಾಡಬೇಕೆನ್ನುವ ಏಕೈಕಧ್ಯೇಯದಿಂದ ಸತತವಾಗಿ ದುಡಿಯುತ್ತಿರುವ ಮಿತ್ರರನೇಕರಿದ್ದಾರೆ. ವಿದ್ವಾನ್ ಟಿ. ನಾರಾಯಣಶಾಸ್ತ್ರೀ, ಶ್ರೀ ಸಿ. ಎಸ್. ಭಟ್, ಶ್ರೀ ಎಂ. ಕೆ. ಕೃಷ್ಣಮೂರ್ತಿ, ಶ್ರೀ ಬಿ. ವಿ. ರಾಮಸ್ವಾಮಿ, ಶ್ರೀ ಕೆ. ಎಸ್. ಕೇಶವಮೂರ್ತಿ, ವೇ|| ಬ್ರಂ|| ಶ್ರೀ ಸೂರ್ಯನಾರಾಯಣ ಉಪಾಧ್ಯಾಯ, ಶ್ರೀ ಎನ್. ಎಮ್. ಭಟ್, ಶ್ರೀ ಶಂಕರಕೃಷ್ಣಭಟ್, ಶ್ರೀ ರಾಮಕಾರಂತ, ಶ್ರೀ ಪುಟ್ಟಣ್ಣ, ಶ್ರೀ ರಾಮಕೃಷ್ಣ, ಶ್ರೀ ಬಿ. ಶ್ರೀಧರನಾಯಕ್, ಶ್ರೀ ಕೆ.ವಿ. ಶ್ರೀನಿವಾಸಮೂರ್ತಿ, ಶ್ರೀ ಎಂ. ಎಸ್. ಕಾಶೀಪತಯ್ಯ, ಶ್ರೀ ಹೆಚ್. ಆರ್. ಗುಂಡೂರಾವ್ ಮತ್ತು ಇನ್ನೂ ಅನೇಕರು ಇದರ ಪ್ರಚಾರಕ್ಕೆ ಬಹಳವಾಗಿ ದುಡಿದು ಸಹಾಯ ನೀಡಿದ್ದಾರೆ. ಇವರೆಲ್ಲರಿಗೂ ದಯಾಮಯನಾದ ಪರಮಾತ್ಮನು ಸಕಲೇಷ್ಟಾರ್ಥಗಳನ್ನೂ ನೀಡಲಿ.

ಶ್ರೀ ಶ್ರೀ ಜಗದ್ಗುರು ರಾಘವೇಂದ್ರಭಾರತೀ ಸ್ವಾಮಿಗಳವರು, ರಾಮ ಚಂದ್ರಾಪುರಮಠ–ಇವರು ತಮ್ಮ ಶಿಷ್ಯವರ್ಗದವರೆಲ್ಲರಿಗೂ ಈ ಸಂಪುಟ ಗಳನ್ನು ಕೊಳ್ಳಲು ಆದೇಶ ನೀಡಿ ಅನುಗ್ರಹಿಸಿರುತ್ತಾರೆ. ಶ್ರೀ ಶ್ರೀಗಳವರಿಗೆ ನಮ್ಮ ಸಾಷ್ಟಾಂಗಪ್ರಣಾಮಗಳು.

ನಿಃಸ್ವಾರ್ಥತೆಯಿಂದ ಮಹಾಭಾರತ ಪ್ರಚಾರಕ್ಕಾಗಿ ಕೆಲಸಮಾಡುತ್ತಿರು ವವರ ಸಂಖ್ಯೆಯು ದಿನ-ದಿನಕ್ಕೂ ಹೆಚ್ಚುತ್ತಿದೆ. ಇದು ಪರಮಾತ್ಮನ ಇಚ್ಛೆ. ಪರಮಾತ್ಮನ ದಯೆ.

ಈ ಎರಡನೆಯ ಸಂಪುಟದಲ್ಲಿ ಆದಿಪರ್ವದ 90ನೆಯ ಅಧ್ಯಾಯ ದಿಂದ 183ನೆಯ ಅಧ್ಯಾಯ ಪೂರ್ತಿಯಾಗಿ 94 ಅಧ್ಯಾಯಗಳನ್ನು ಅಳವಡಿಸ ಲಾಗಿದೆ. ಮೊದಲನೆಯ ಸಂಪುಟದಲ್ಲಿ ಕೊಟ್ಟಿರುವಂತೆಯೇ ಉಪಯುಕ್ತ ವಾದ ಶ್ಲೋಕಗಳನ್ನೂ ಕೊಟ್ಟಿರುತ್ತೇವೆ. ಹಲವಾರು ಚಿತ್ರಗಳನ್ನೂ ಕೊಟ್ಟಿರು ತ್ತೇವೆ. ಚಿತ್ರಗಳೆಲ್ಲವೂ ಗೋರಖಪುರದ ಗೀತಾಪ್ರೆಸ್ಸಿನವರು ಛಾಪಿಸಿರುವ ಮಹಾಭಾರತದಿಂದ ಪಡೆದ ಚಿತ್ರಗಳಾಗಿವೆ. ತಮ್ಮ ಯಾವ ಚಿತ್ರವನ್ನು ಬೇಕಾದರೂ ಪಡಿಯಚ್ಚು ( ಬ್ಲಾಕ್ ) ಮಾಡಿಸಿಕೊಳ್ಳಬಹುದೆಂದು ಕಲ್ಯಾಣ್ ಪತ್ರಿಕೆಯ ಸಂಪಾದಕರು ಅನುಮತಿಯನ್ನಿತ್ತಿದ್ದಾರೆ. ಅವರಿಗೆ ನಾವು

ಕೃತಜ್ಞರಾಗಿರುತ್ತೇವೆ. ಅವರು ಮಹಾಭಾರತದಲ್ಲಿ ಪ್ರಕಟಿಸಿದ್ದ ಒಂದು ಅತ್ಯುತ್ತಮವಾದ ಹಿಂದೀ ಲೇಖನದ ಭಾಷಾಂತರವನ್ನೂ ಪ್ರತ್ಯೇಕವಾಗಿ ಕೊಟ್ಟು, ಹಲವಾರು ವಿಷಯಗಳನ್ನೂ ವಿಮರ್ಶಿಸಲಾಗಿದೆ. ಈ ಎಲ್ಲ ವಿಷಯಗಳಲ್ಲಿಯೂ ವಾಚಕರು ತಮ್ಮ ಅಭಿಪ್ರಾಯಗಳನ್ನು ಸೂಚಿಸಬೇಕೆಂದು ಪ್ರಾರ್ಥಿಸುತ್ತೇವೆ.

ಪ್ರಕಾಶನ ಸಂಸ್ಥೆಯ ಅಧ್ಯಕ್ಷರಾದ ವಿದ್ವಾನ್ ಶ್ರೀ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು–ತಂದೆಯು ಮಗನಿಗೆ ಸಲಹೆ ನೀಡು ವಂತೆ ಎಲ್ಲ ವಿಷಯಗಳಲ್ಲಿಯೂ ಸಲಹೆ ನೀಡುತ್ತಾ ಮಾರ್ಗದರ್ಶಕರಾಗಿರು ತ್ತಾರೆ. ಇವರ ಮಾರ್ಗದರ್ಶನದಿಂದಲೇ ನಾವೀ ಮಹಾಭಾರತವನ್ನು ಪ್ರಕಾಶಿಸಿ ಭಾರತರಾಗಬೇಕಾಗಿದೆ.

ನಮ್ಮ ಸಂಸ್ಥೆಯ ಕೋಶಾಧಿಕಾರಿಗಳಾದ ಶ್ರೀ ವಿ. ಸೂರ್ಯನಾರಾ ಯಣರವರ ಸಹೃದಯತೆ–ಸರಳತೆಗಳು ನಮ್ಮನ್ನು ಎಂತಹ ಸಂದಿಗ್ಧಕಾಲ ದಲ್ಲಿಯೂ ಉತ್ಸಾಹಿತರನ್ನಾಗಿ ಮಾಡಿವೆ. ತೆರೆಮರೆಯಲ್ಲಿದ್ದು ಕಾರ್ಯವನ್ನು ನಡೆಸಬೇಕೆಂಬ ಅಭಿಲಾಷೆಯುಳ್ಳವರಿವರು. ಆದರೆ ವಿಷಯವನ್ನು ಮರೆಮಾಚಿದರೆ ನಾವು ಕರ್ತವ್ಯಚ್ಯುತರಾಗುತ್ತೇವೆ.

ಸಂಪಾದಕ ಮಂಡಲಿಯವರು ಪೂರ್ಣ ಶ್ರಮವಹಿಸಿ ಕೆಲಸ ಮಾಡುತ್ತಿ ದ್ದಾರೆ. ಇವರು ಈ ಪ್ರಕಾಶನಕ್ಕೆ ಬೆನ್ನೆಲುಬಿನಂತಿದ್ದಾರೆ. ವಿದ್ವಾನ್ ಶ್ರೀ ಹೆಚ್. ಎನ್. ರಂಗಸ್ವಾಮಿಯವರು ದಿನದ ತಮ್ಮ ಹೆಚ್ಚು ಕಾಲವನ್ನು ಈ ಕಾರ್ಯಕ್ಕಾಗಿಯೇ ವಿನಿಯೋಗಿಸುತ್ತಿದ್ದಾರೆ. ಸಂಪುಟವನ್ನು ಶುದ್ಧವಾಗಿ ಮೂಲಕ್ಕೆ ವ್ಯತ್ಯಾಸವಿಲ್ಲದಂತೆ ಪ್ರಕಾಶಿಸಲು ಹೆಚ್ಚು ಶ್ರಮವಹಿಸಿ ಕೆಲಸಮಾಡುತ್ತಿದ್ದಾರೆ. ವಿದ್ವಾನ್ ಶ್ರೀ ರಾಮೇಶ್ವರಾವಧಾನಿಗಳು, ಶ್ರೀಹರಿ, ಶ್ರೀ ನೆ. ವೆಂ. ಶ್ರೀನಿವಾಸರಾಯ ಮತ್ತು ಶ್ರೀ ಎ. ಅನಂತಾಚಾರ್ಯ–ಇವರ ನಿಃಸ್ವಾರ್ಥಸೇವೆಯು ಅನ್ಯಾದೃಶವಾಗಿದೆ. ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ವಿದ್ವತ್ಪರಿಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟು ಅನು ಗ್ರಹಿಸಿರುವ ಕರ್ನಾಟಕ ಜನತೆಯ ಅಚ್ಚುಮೆಚ್ಚಿನ ಹಿರಿಯ ಸಾಹಿತಿಗಳಾದ ಡಾ|| ಡಿ. ವಿ. ಜಿ. ಯವರ ವಿಷಯವಾಗಿ ಒಂದೆರಡು ಪಙ್ಕ್ತಿಗಳನ್ನು ಬರೆಯಲು ಮನಸ್ಸು ತವಕಿಸುತ್ತದೆ. ಅಂದು ನಾನು ನಮ್ಮ ಮಿತ್ರರಾದ ಶ್ರೀ

ಅನಂತಾಚಾರ್ಯರೊಡನೆ ಅವರನ್ನು ಸಂದರ್ಶಿಸಲು ಹೋದೆನು. ಹೋಗು ವಾಗಲೇ ನನ್ನ ಮನಸ್ಸಿನಲ್ಲಿ ಬಹುವಾದ ಸಂಕೋಚವಿತ್ತು. ಪರಮಾ ತ್ಮನ ದಯೆಯಿಂದ ಆಗತಾನೇ ಖಾಯಿಲೆಯಿಂದ ಗುಣಮುಖರಾಗುತ್ತಿದ್ದ ಡಾ|| ಡಿ. ವಿ. ಜಿ. ಯವರನ್ನು ಮುನ್ನುಡಿಯನ್ನು ಬರೆದುಕೊಡುವಂತೆ–ಹೇಗೆ ಕೇಳುವುದು? ಬೇಸರಿಸಬಹುದಲ್ಲವೇ? ಹುಲುಮನುಜನು ಮಾಡುತ್ತಿರುವ ಕಾರ್ಯಕ್ಕೆ ಉದ್ದಾಮಪಂಡಿತರಾದ ಅವರು ಮುನ್ನುಡಿ ಬರೆದು ಕೊಡಲು ಒಪ್ಪಿಯಾರೇ? ಇತ್ಯಾದ್ಯನೇಕ ಯೋಚನೆಗಳು ನನ್ನ ಮನಸ್ಸಿನಾಳದಲ್ಲಿ ಸುಳಿದಾಡಿದುವು. ಆದರೆ ಅವರನ್ನು ಸಂದರ್ಶಿಸಿದ ಮರುಕ್ಷಣದಲ್ಲಿಯೇ ಆತಂಕವು ದೂರವಾಯಿತು. ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿದರು. ನೀವಿದನ್ನು ಮಾಡಿ ಮುಗಿಸಲೇಬೇಕೆಂದು ಪ್ರೋತ್ಸಾಹಿಸಿದರು. ಕಾ ರ್ಯವು ನಿರ್ವಿಘ್ನವಾಗಿ ನಡೆಯಲಿ. ನೀವು ದೀರ್ಘಾಯುಷ್ಮಂತರಾಗಿ ಬಾಳಿರಿ–ಎಂದು ವೇದೋಕ್ತವಾಗಿ ಆಶೀರ್ವಾದಮಾಡಿ ನಮ್ಮನ್ನು ಕಳುಹಿಸಿಕೊಟ್ಟರು.

ಅವರ ಮುನ್ನುಡಿಯೊಡನೆ ಎರಡನೆಯ ಸಂಪುಟವನ್ನು ಪ್ರಕಾಶನ ಮಾಡುವ ಸುಯೋಗವು ನಮಗೆ ಲಭಿಸಿದ್ದು ಪರಮಾತ್ಮನ ಇಚ್ಛೆಯೇ ಸರಿ.

ನಮ್ಮ ಮುದ್ರಣಾಲಯದ ಕೆಲಸಗಾರರೂ ಬರೀ ಸಂಬಳಕ್ಕಾಗಿ ದುಡಿಯದೇ ಮಹಾಭಾರತದ ಕಾರ್ಯಮಾಡುತ್ತಿದ್ದೇವೆಂಬ ಶ್ರದ್ಧೆ ಮತ್ತು ಭಕ್ತಿಗಳಿಂದ ಕೆಲಸಮಾಡಿ ಸಹಕರಿಸುತ್ತಿದ್ದಾರೆ.

ತೆರೆಯ ಮರೆಯಲ್ಲಿ ಅನೇಕ ವಿಧವಾಗಿ ಸಹಕಾರವನ್ನೀಯುತ್ತಿರು ವವರೂ ಅನೇಕರಿದ್ದಾರೆ. ನೂರಾರು ಜನರ ಸಹಕಾರ-ಸದಾಶಯಗಳಿಲ್ಲದೇ ಈ ಮಹಾಕಾರ್ಯವು ಪೂರ್ಣವಾಗುವ ಸಾಧ್ಯತೆಯಿಲ್ಲ. ದಯಾಮಯನಾದ ಪರಮಾತ್ಮನು ಎಲ್ಲರಿಗೂ ಆಯುರಾರೋಗ್ಯ-ಐಶ್ವರ್ಯಾದಿಗಳನ್ನಿತ್ತು ಕಾಪಾಡಲೆಂದು ಮೌನಪ್ರಾರ್ಥನೆಯೊಡನೆ ವಿರಮಿಸುವೆವು. **–ಪ್ರಕಾಶಕರು.**

## ಎರಡನೆಯ ಮುದ್ರಣದ ಪ್ರಸ್ತಾವನೆ

ಮಹಾಭಾರತದ ಎರಡನೆಯ ಸಂಪುಟವು ಮುಗಿದು ಸುಮಾರು ಆರು ತಿಂಗಳಾದುವು. ಸುಮಾರು ಐದು ನೂರು ಗ್ರಾಹಕರಿಗೆ ಎರಡನೆಯ ಸಂಪುಟವಿಲ್ಲದೆಯೇ ಇದುವರೆಗಿನ ಎಂಟು ಸಂಪುಟಗಳನ್ನು ಕೊಟ್ಟಿರುತ್ತೇವೆ. ಎರಡನೆಯ ಸಂಪುಟವೇ ಇಲ್ಲದಿದ್ದರೆ ಓದುಗರ ಉತ್ಸಾಹವು ಕುಗ್ಗುವುದೆಂಬ ವಿಷಯವು ನಮಗೂ ತಿಳಿದಿದೆ. ಮೊದಲನೆಯ ನಾಲ್ಕು ಸಂಪುಟಗಳನ್ನು ನಾಲ್ಕು

ಸಾವಿರ ಪ್ರತಿಗಳಂತೆ ಮುದ್ರಣ ಮಾಡಿಸಲಾಗಿತ್ತು. ಈ ಕಾರಣದಿಂದಾಗಿ ನಾಲ್ಕು ಸಂಪುಟಗಳ ಪ್ರತಿಗಳೂ ಒಮ್ಮೆಲೇ ಮುಗಿದುಹೋದುವು. ಎರಡನೆಯ ಸಂಪುಟವನ್ನು ಸಾಧ್ಯವಾದಷ್ಟು ಬೇಗ ಗ್ರಾಹಕರಿಗೆ ವಿತರಣೆ ಮಾಡಬೇಕೆಂಬ ಆಶಯದಿಂದ ಹೆಚ್ಚು ವೆಚ್ಚ ಮಾಡಿದೆವು. ಹೆಚ್ಚು ಶ್ರಮಿಸಿದೆವು. ಆದರೆ ಇದು ಭಗವದಿಚ್ಛೆಯಂತೆ ತನ್ನದೇ ಆದ ನಿರ್ದಿಷ್ಟಕಾಲಕ್ಕೆ ಹೊರಬಂದಿತೇ ಹೊರತು ನಮ್ಮ ಸತತಪ್ರಯತ್ನದಿಂದಾಗಿ ಒಂದು ದಿನ ಕೂಡ ಮೊದಲು ಬರಲಿಲ್ಲ. ನಮ್ಮ ಪ್ರಿಯವಾಚಕರನೇಕರು ಬಹುವಾಗಿ ಬೇಸರಗೊಂಡಿರುತ್ತಾರೆ. ಇದಕ್ಕಾಗಿ ನಾವು ಅವರೆಲ್ಲರ ಕ್ಷಮೆಬೇಡುತ್ತೇವೆ.

1973ನೆಯ ಜನವರಿ ಸಂಕ್ರಾಂತಿಯಂದು ಎರಡನೆಯ ಸಂಪುಟದ ಪ್ರಕಾಶನವಾಯಿತು. ಮೂರು ವರ್ಷಗಳ ನಂತರ ಪುನಃ ಅದೇ ಸಂಕ್ರಾಂತಿಯಂದೇ ಪುನರ್ಮುದ್ರಣವಾದ ಎರಡನೇ ಸಂಪುಟವು ಹೊರಬಂದಿರುತ್ತದೆ. ಇದೆಲ್ಲವೂ ದೈವೇಚ್ಛೆಯಂತೆ ನಡೆಯುತ್ತಿದೆ—ಎಂದು ನಾವು ನಂಬಿರುತ್ತೇವೆ. ಸಾವಕಾಶವು ಏಕಾಯಿತೆಂಬುದಕ್ಕೆ ಇದಕ್ಕಿಂತಲೂ ಮಿಗಿಲಾದ ಕಾರಣವನ್ನು ನಾವು ಕೊಡಲು ಅಸಮರ್ಥರಾಗಿದ್ದೇವೆ.

ಒಂಬತ್ತನೆಯ ಸಂಪುಟವು 1976ನೇ ಫೆಬ್ರುವರಿಯಲ್ಲಿ ಪ್ರಕಾಶನವಾಗುವುದು. ಮೂರನೆಯ ಸಂಪುಟದ ಪುನರ್ಮುದ್ರಣವನ್ನು ಪ್ರಾರಂಭಿಸಿರುತ್ತೇವೆ.

ಮೂರು ಮತ್ತು ನಾಲ್ಕನೆಯ ಸಂಪುಟವನ್ನು ಸಾಧ್ಯವಾದಷ್ಟು ಬೇಗ ಗ್ರಾಹಕರಿಗೆ ವಿತರಣೆಮಾಡಬೇಕೆಂಬ ಸದಿಚ್ಛೆಯಿಂದ ಪ್ರಯತ್ನಿಸುತ್ತಿದ್ದೇವೆ. ಆದರೆ ದೈವಾನುಗ್ರಹದಿಂದ ಮಾತ್ರವೇ ಇದು ಕೈಗೂಡಬೇಕಾಗಿದೆ.

ಈ ಸಂಪುಟವನ್ನು ಬೆಂಗಳೂರು ಫೀನಿಕ್ಸ್ ಪ್ರೆಸ್ಸಿನ ಒಡೆಯರಾದ ಶ್ರೀ ಸಿ. ಕೃಷ್ಣರಾಯರು ಬಹಳ ಅಂದವಾಗಿ ಮುದ್ರಿಸಿಕೊಟ್ಟಿರುತ್ತಾರೆ. ಇವರಿಗೆ ನಮ್ಮ ಅಭಿನಂದನೆಗಳು.

ಪುನರ್ಮುದ್ರಣದ ಈ ಕಾರ್ಯದಲ್ಲಿಯೂ ನಮ್ಮ ಸಂಪಾದಕ ಮಂಡಲಿಯ ವಿದ್ವಾಂಸರು ಹೆಚ್ಚು ಶ್ರಮವಹಿಸಿರುತ್ತಾರೆ. ಇವರಿಗೂ ನಮ್ಮ ಅಭಿನಂದನೆಗಳು.

ಈ ಮಹಾಕಾರ್ಯಕ್ಕೆ ನೆರವು ನೀಡುತ್ತಿರುವವರಿಗೆಲ್ಲರಿಗೂ ದಯಾಮಯನಾದ ಪರಮಾತ್ಮನು ಶಾಂತಿ-ಪುಷ್ಟಿ-ತುಷ್ಟಿಗಳನ್ನಿತ್ತು ರಕ್ಷಿಸಲೆಂದು ಪ್ರಾರ್ಥಿಸುತ್ತೇವೆ.

—ಪ್ರಕಾಶಕರು.

## ಮೂರನೆಯ ಮುದ್ರಣದ ಪ್ರಸ್ತಾವನೆ

ಭಗವದನುಗ್ರಹದಿಂದ ಎರಡನೆಯ ಸಂಪುಟದ ಮೂರನೆಯ ಆವೃತ್ತಿಯನ್ನು ಮುಗಿಸಿದ್ದೇವೆ. ಈ ಸಂಪುಟವನ್ನು ಸೆಪ್ಟೆಂಬರ್ ತಿಂಗಳಲ್ಲಿಯೇ ಹೊಸ ಗ್ರಾಹಕರಿಗೆ ವಿತರಣೆಮಾಡುತ್ತೇವೆಂದು ಆಶ್ವಾಸನೆಯನ್ನಿತ್ತಿದ್ದೆವು. ಆದರೆ ಹಲವಾರು ತೊಂದರೆಗಳಿಂದಾಗಿ ಸಾಧ್ಯವಾಗಲಿಲ್ಲ. ಈ ಸಂಪುಟದ ಮುದ್ರಣವು ಸಾವಕಾಶವಾದುದರಿಂದ 21ನೆಯ ಸಂಪುಟದ ಮುದ್ರಣವೂ ಸಾವಕಾಶವಾಗುವುದು ಅನಿವಾರ್ಯವಾಗಿದೆ. ನಮ್ಮ ಪ್ರಿಯಗ್ರಾಹಕರು ತಾಳ್ಮೆಯಿಂದ ಸಹಕರಿಸಬೇಕಾಗಿ ಕೇಳಿಕೊಳ್ಳುತ್ತೇವೆ.

ಪ್ರಕಾಶಕರಿಗೆ ತಾವು ಪ್ರಕಟಿಸಿದ ಸಂಪುಟಗಳ ಪುನರ್ಮುದ್ರಣವಾಗುವುದು ಹೆಮ್ಮೆಯ ವಿಷಯವಾದರೂ ಪುನರ್ಮುದ್ರಣದ ಕಾರ್ಯವು ಬಹಳ ಜಟಿಲವಾದುದು. ಬಹುಮುಖ್ಯವಾಗಿ ಆರ್ಥಿಕಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಆದರೆ ಮುಗಿದುಹೋದ ಸಂಪುಟಗಳ ಪುನರ್ಮುದ್ರಣವೂ ಅನಿವಾರ್ಯವೇ ಸರಿ. 1981ನೇ ವರ್ಷದಲ್ಲಿ ಪುನರ್ಮುದ್ರಣದ ಅಗಾಧವಾದ ಹೊರೆಯೇ ಬೀಳಲಿದೆ. ಎರಡನೆಯ ಬಾರಿ ಮುದ್ರಿಸಿದ್ದ 3ನೆಯ ಸಂಪುಟವು ಈಗಾಗಲೇ ಮುಗಿದಿದೆ. 8 ರಿಂದ 19ರವರೆಗಿನ ಸಂಪುಟಗಳು ಹಂತ-ಹಂತವಾಗಿ ಮುಗಿದುಹೋಗುವುದರಲ್ಲಿವೆ. ಇಷ್ಟು ಸಂಪುಟಗಳನ್ನೂ ಹೇಗೆ ಪುನರ್ಮುದ್ರಣಮಾಡುವುದೆಂಬುದೇ ದೊಡ್ಡ ಸಮಸ್ಯೆಯಾಗಿದೆ. ಈ ನಮ್ಮ ಮಹಾಕಾರ್ಯದಲ್ಲಿ ಸಮಸ್ಯೆಗಳನ್ನು ಒಡ್ಡುವವನೂ ಮತ್ತು ಪರಿಹರಿಸುವವನೂ ದಯಾಮಯನಾದ ಪರಮಾತ್ಮನೇ. ಆದುದರಿಂದ ಆ ಮಹಾನುಭಾವನೇ ಈ ಸಮಸ್ಯೆಯನ್ನೂ ಬಗೆಹರಿಸುವನೆಂಬ ದೃಢವಾದ ನಂಬಿಕೆಯನ್ನಿಟ್ಟುಕೊಂಡು ಮುಂದುವರಿಯುತ್ತಿದ್ದೇವೆ. ಪುನರ್ಮುದ್ರಣಕಾರ್ಯದಲ್ಲಿಯೂ ನಮ್ಮ ಸಂಪಾದಕಮಂಡಲಿಯ ವಿದ್ವಾಂಸರು ಶ್ರಮವಹಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳು. ಮೂಲಭಾರತದೊಡನೆ ಸೇರಿಬಂದಿದ್ದ ಬೋಧಕ ವಿಷಯಗಳನ್ನು ಹಿತೈಷಿಗಳ ಅಭಿಪ್ರಾಯದಂತೆ ಟಿಪ್ಪಣಿಯಲ್ಲಿ ಕೊಡಲಾಗಿದೆ.

ಈ ಮಹಾಕಾರ್ಯಕ್ಕೆ ನೆರವು ನೀಡುತ್ತಿರುವವರೆಲ್ಲರಿಗೂ ದಯಾಮಯನಾದ ಪರಮಾತ್ಮನು ಶಾಂತಿ-ಪುಷ್ಟಿ-ತುಷ್ಟಿಗಳನ್ನಿತ್ತು ರಕ್ಷಿಸಲೆಂದು ಪ್ರಾರ್ಥಿಸಿ ವಿರಮಿಸುವೆವು.

—ಪ್ರಕಾಶಕರು.

## ನಾಲ್ಕನೆಯ ಮುದ್ರಣದ ಪ್ರಸ್ತಾವನೆ

ಕರುಣಾಮಯನಾದ ಭಗವಂತನ ಕೃಪೆಯಿಂದ ಎರಡನೆಯ ಸಂಪುಟದ ನಾಲ್ಕನೆಯ ಆವರ್ತಿಯನ್ನು ಮುಗಿಸುತ್ತಿದ್ದೇವೆ. ಇದಕ್ಕೂ ಮೊದಲು ಅನೇಕ ಸಂಪುಟಗಳು ಮುಗಿದಿವೆ. ಈ ಸಂಪುಟಗಳಿಗೆ ವಾಚಕರು ಮೂರು ವರ್ಷಗಳಿಂದ ಕಾಯುತ್ತಿದ್ದಾರೆ. ಹೊಸ ಗ್ರಾಹಕರಿಗೆ ಮೊದಲ ಸಂಪುಟಗಳೇ ಸಿಕ್ಕದೆ ನಿರಾಶೆಯಾಗುವ ಕಾರಣ ಮೊದಲ ಮೂರು ಸಂಪುಟಗಳನ್ನು ಮುಗಿಸಿದ್ದೇವೆ. ಮೂರನೆಯ ಸಂಪುಟದ ಪುನರ್ಮುದ್ರಣವು ಪ್ರಾರಂಭವಾಗಿದೆ. ಈ ಸಂಪುಟವೂ ಸೇರಿ ಈಗ ನಮ್ಮಲ್ಲಿ ಹದಿನೇಳು ಸಂಪುಟಗಳು ಸಿಕ್ಕುತ್ತವೆ. ಗ್ರಾಹಕರಿಗೆ ಸಂಪುಟಗಳನ್ನು ಬೇಗ ಒದಗಿಸಿ ಕೊಡಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದೇವೆ. ಪರಮಾತ್ಮನ ಕೃಪೆಯಿಂದ ಸಾಧ್ಯವಾಗುವುದೆಂಬ ಭರವಸೆಯಿಂದಿರುತ್ತೇವೆ.

ಈ ಸಂಪುಟದ ತಪ್ಪು-ಒಪ್ಪುಗಳನ್ನೂ ಸಂಪಾದಕಮಂಡಲಿಯ ವಿದ್ವಾಂಸರು ನೋಡಿಕೊಟ್ಟು ಸಹಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು. ಮಹಾಭಾರತದ ಓದುಗರೆಲ್ಲರಿಗೂ ಪರಮಾತ್ಮನು ಆಯುರಾರೋಗ್ಯ ಐಶ್ವರ್ಯಾದಿಗಳನ್ನಿತ್ತು ಕಾಪಾಡಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು. –ಪ್ರಕಾಶಕರು.

## ಐದನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ ದಯಾಮಯನಾದ ಸದ್ಗುರುವಿನ ಕೃಪಾಶೀರ್ವಾದಗಳಿಂದಲೂ ಮಹಾಭಾರತದ ಎರಡನೆಯ ಸಂಪುಟದ ಐದನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ.

ನಾಲ್ಕನೆಯ ಮುದ್ರಣವನ್ನು ಮುಗಿಸಿದಾಗ ಇದ್ದ ಪರಿಸ್ಥಿತಿಯೇ ಐದನೆಯ ಮುದ್ರಣವನ್ನು ಮುಗಿಸುವಾಗಲೂ ಇರುವುದು ಅಚ್ಚರಿಯ ವಿಷಯವೇ ಸರಿ. ಆಗಲೂ 16-18-19-20 ಈ ಸಂಪುಟಗಳನ್ನು ಮುದ್ರಿಸಬೇಕಾಗಿದ್ದಿತು. ಈಗಲೂ ಹಾಗೆಯೇ. 15-16ನೇ ಸಂಪುಟಗಳನ್ನು ಮುದ್ರಿಸಬೇಕು. ಜೊತೆಗೆ 27 ರಿಂದ 32ನೆಯ ಸಂಪುಟದವರೆಗೂ ಪುನರ್ಮುದ್ರಣವಾಗಬೇಕು. ಅಲ್ಲಿ ನಮೂದಿಸಿರುವಂತೆಯೇ ಇಲ್ಲಿಯೂ ಹೊಸ ಗ್ರಾಹಕರಿಗಾಗಿ ಈ ಸಂಪುಟವನ್ನು ಮುದ್ರಿಸಲಾಗಿದೆ ಮತ್ತು ಮೂರನೆಯ ಸಂಪುಟದ ಪುನರ್ಮುದ್ರಣ ಪ್ರಾರಂಭವಾಗಿದೆ.

ಈ ಸಂಪುಟದ ತಪ್ಪು-ಒಪ್ಪುಗಳನ್ನು ಸಂಪಾದಕಮಂಡಲಿಯ ವಿದ್ವಾಂಸರು ನೋಡಿಕೊಟ್ಟು ಸಹಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಮಹಾಭಾರತದ ಓದುಗರೆಲ್ಲರಿಗೂ ದಯಾಮಯನಾದ ಪರಮಾತ್ಮನು ಸಕಲ ಇಷ್ಟಾರ್ಥಗಳನ್ನೂ ದಯಪಾಲಿಸಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

—ಪ್ರಕಾಶಕರು.

## ಆರನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಕೃಪಾಕಟಾಕ್ಷದಿಂದಲೂ, ಗುರುಭಗವಂತನ ದಿವ್ಯಾಶೀರ್ವಾದದಿಂದಲೂ ಮಹಾಭಾರತದ 2ನೆಯ ಸಂಪುಟದ ಆರನೆಯ ಮುದ್ರಣವನ್ನು ಮುಗಿಸಿದ್ದೇವೆ.

ಪ್ರಸಕ್ತ ಇರುವ 11 ಸಂಪುಟಗಳಲ್ಲಿಯೂ ಒಂದೆರಡು ಸಂಪುಟಗಳು ಮುಗಿಯುವುದರಲ್ಲಿದ್ದು ಪುನರ್ಮುದ್ರಣಮಾಡಬೇಕಾಗಿರುವ ಸಂಪುಟಗಳ ಸಂಖ್ಯೆ 22 ಆಗುತ್ತದೆ. ಈ ಎಲ್ಲ ಸಂಪುಟಗಳ ಪುನರ್ಮುದ್ರಣ ಅವಶ್ಯವಾಗಿ ಆಗಬೇಕು. ಲಕ್ಷ-ಲಕ್ಷ ಕನ್ನಡಿಗರಿಗೆ ಮಹಾಭಾರತವು ಸಿಗುವಂತಾಗಬೇಕು. 3-4 ವರ್ಷಗಳ ಕಾಲ ಅವಿಚ್ಛಿನ್ನವಾಗಿ ಮಹಾಭಾರತ-ರಾಮಾಯಣ-ಭಾಗವತಗಳ ಸಂಪುಟಗಳನ್ನು ಪುನರ್ಮುದ್ರಣಮಾಡುವ ಯೋಜನೆಯಿದೆ. ಇದಕ್ಕೆ ಭಗವಂತನು ಅಸ್ತು ಎನ್ನಬೇಕು. ಗ್ರಾಹಕರೂ ಸಂಪೂರ್ಣವಾಗಿ ಸಹಕರಿಸಬೇಕು.

ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟ ಸಂಪಾದಕ ಮಂಡಲಿಯ ವಿದ್ವಾಂಸರಿಗೆ ಹೃತ್ಪೂರ್ವಕ ವಂದನೆಗಳು.

ಸಕಲರಿಗೂ ಶಾಂತಿಯೂ-ಪುಷ್ಟಿಯೂ-ತುಷ್ಟಿಯೂ ದೊರಕಲಿ.

—ಪ್ರಕಾಶಕರು.

## ಏಳನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಅಪಾರವಾದ ಕರುಣೆಯಿಂದಲೂ ಗುರುಗಳ ದಿವ್ಯಾಶೀರ್ವಾದದಿಂದಲೂ ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ಶ್ರೀಮನ್ಮಹಾಭಾರತದ 2ನೇ ಸಂಪುಟದ 7ನೆಯ ಮುದ್ರಣವನ್ನು ಹೊರತರುತ್ತಿದ್ದೇವೆ. ಇದುವರೆಗೆ 2ನೇ ಸಂಪುಟದ ಪುನರ್ಮುದ್ರಣವು 24 ಸಹಸ್ರ ಪ್ರತಿಗಳಾಗಿವೆ. ಇಂದಿಗೆ ನಮ್ಮ ಬಂಧುಗಳಿಗೆ, ಸ್ನೇಹಿತರಿಗೆ ಎಲ್ಲಾ ಸಂಪುಟಗಳನ್ನು ಒಮ್ಮೆಲೇ ವಿತರಿಸಬೇಕೆಂಬ ನಮ್ಮ ಆಶೆಯು ಭಗವಂತನ ದಯೆಯಿಂದ ಪೂರ್ಣವಾಗಿದೆಯೆಂದು ತಿಳಿಸಲು ಹರ್ಷಿಸುತ್ತೇವೆ.

—ಪ್ರಕಾಶಕರು.

# ಮುನ್ನುಡಿ

ಭಗವದ್ವೇದವ್ಯಾಸಪ್ರಣೀತವಾದ ಮಹಾಭಾರತದ ಗ್ರಂಥವನ್ನು ಯಥಾವತ್ತಾಗಿ ಕನ್ನಡ ಮಹಾಜನರಿಗೆ ಅವರ ಭಾಷೆಯಲ್ಲಿ ದೊರಕಿಸಬೇಕೆಂಬ ಉದ್ದೇಶ ಉದಾರವಾದದ್ದು ಎಂಬುದರಲ್ಲಿ ಯಾರಿಗೂ ಬೇರೆ ಅಭಿಪ್ರಾಯವಿರಲಾರದು. ಅದು ಅವಶ್ಯವಾದದ್ದೆಂಬುದರಲ್ಲಿಯೂ ಅಭಿಪ್ರಾಯ ಭೇದವಿರದು. ಅದು ಕಷ್ಟಸಾಧ್ಯವಾದ ಪ್ರಯತ್ನ. ಇದನ್ನು ಆಲೋಚಿಸಿದ ಬಹುಮಂದಿ ಹಿಂಜರಿದಿದ್ದಾರೆ. ಈಗ ನನ್ನ ಸನ್ಮಾನ್ಯ ಮಿತ್ರರಾದ ಬ್ರಹ್ಮಶ್ರೀ ರಾಮೇಶ್ವರಾವಧಾನಿಗಳೇ ಮೊದಲಾದ ಮಹನೀಯರು ಈ ಸುಸಾಹಸಕ್ಕೆ ಕೈಹಚ್ಚಿದ್ದಾರೆಂಬುದು ನನಗೆ ಪರಮಸಂತೋಷವಾಗಿದೆ. ಭಗವತ್ಕೃಪೆಯಿಂದಲೂ ಮಹಾಜನರ ಪ್ರೋತ್ಸಾಹದಿಂದಲೂ ಈ ಪವಿತ್ರ ಕಾರ್ಯವು ಸಂಪೂರ್ಣತೆ ಪಡೆಯಬೇಕಾಗಿದೆ.

ಇಂಥ ಆಲೋಚನೆ ಪ್ರಾರಂಭವಾದದ್ದು ಬಹುಶಃ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಎಂದು ತೋರುತ್ತದೆ. ಆ ಮಹಾರಾಜರವರು 'ಶ್ರೀ ಚಾಮರಾಜೋಕ್ತಿವಿಲಾಸ' ವೆಂಬ ಹೆಸರಿನಲ್ಲಿ ಶ್ರೀಮದ್ರಾಮಾಯಣವನ್ನೂ, 'ಶ್ರೀಕೃಷ್ಣರಾಜವಾಣೀ ವಿಲಾಸ' ವೆಂಬ ಹೆಸರಿನಲ್ಲಿ ಮಹಾಭಾರತವನ್ನೂ, ಇತರ ಪುರಾಣಗಳನ್ನೂ ವಿದ್ವಾಂಸರಿಂದ ಕನ್ನಡ ವಚನದಲ್ಲಿ ಬರೆಯಿಸಿ ಪ್ರಕಟಣೆಮಾಡಿಸಿದರು. ಈ ಗ್ರಂಥಗಳನ್ನು ಬೆಂಗಳೂರು ಲಾಲ್‌ಬಾಗಿನ ಬಳಿಯ ಶ್ರೀ ಎಂ. ರುದ್ರಪ್ಪನವರು ತಮ್ಮ ಶ್ರೀ ಚಾಮುಂಡೇಶ್ವರೀ ಮುದ್ರಣಾಲಯದಲ್ಲಿ ಪುನಃ ಅಚ್ಚುಮಾಡಿ ಪ್ರಕಾಶಪಡಿಸಿದರು. ಅಂದಿನ ಸರ್ಕಾರವು ಈ ಗ್ರಂಥಗಳನ್ನು ಶಾಲೆಗಳಿಗೆ ಹಂಚಿಕೊಟ್ಟಿತು. ಆ ಔದಾರ್ಯದಿಂದ ಉಪಕೃತನಾದವನು ನಾನೊಬ್ಬ. ನನ್ನಂಥವರು ಸಾವಿರಾರು ಮಂದಿ ಇದ್ದಾರು.

ಆದರೆ ಒಂದು ಕೊರತೆ : ವಾಣೀವಿಲಾಸಗ್ರಂಥದಲ್ಲಿ ಭಾರತಕಥೆಯು ಸ್ಥೂಲವಾಗಿ ಬಂದಿದ್ದರೂ ಅದು ಯಥಾವತ್ತಾಗಿಲ್ಲ. ಈ ಮಹಾಗ್ರಂಥದ ಸ್ವಾರಸ್ಯ-ವ್ಯಾಸವಾಕ್ಯದ ಸ್ವಾರಸ್ಯ-ಎಷ್ಟೋ ಸಂದರ್ಭಗಳಲ್ಲಿ ವಾಕ್ಯ-ಪದಗಳ ಸೂಕ್ಷ್ಮಾರ್ಥದಲ್ಲಿ ಅಡಗಿಕೊಂಡಿರುತ್ತದೆ. ಈ ಸೂಕ್ಷ್ಮಾಂಶಗಳು ಬೇಕೆನ್ನುವವರಿಗೆ ವಾಣೀವಿಲಾಸವು ಸಾಲದು. ಮಹಾರಾಜರ ಉಪ್ಪುತಿಂದ ಪಂಡಿತ ಮಹನೀಯರು ತಕ್ಕಷ್ಟು ಶ್ರಮೆಯನ್ನೂ, ಜಾಗರೂಕತೆಯನ್ನೂ ವಹಿಸಲಿಲ್ಲ

ವೆಂದು ನನಗನಿಸುತ್ತದೆ. ಮೂಲಗ್ರಂಥದ ಬಹ್ವಂಶಗಳು ಕೈಬಿಟ್ಟುಹೋಗಿವೆ. ಎಷ್ಟೋ ಸಂದರ್ಭಗಳು ಮೂಲದಿಂದ ವ್ಯತ್ಯಸ್ತವಾಗಿವೆ. ಕನ್ನಡ ಶೈಲಿಯೂ ಒಂದೊಂದು ಕಡೆ ಈ ಕಾಲದ ಓದುಗರಿಗೆ ಮನಮೆಚ್ಚುವಂತಿಲ್ಲವೆಂದು ಹೇಳಬೇಕಾಗಿದೆ. ಹೀಗೆ ಹೊಸ ಪ್ರಯತ್ನ ಅವಶ್ಯವಾಗಿದೆ. ನಮಗೆ ಸ್ಥೂಲ ಕಥೆ ಸಾಲದು. ಕಥೆಯ ಸೂಕ್ಷ್ಮಾಂಶ ವಿವರಣೆ ಬೇಕು. ಯಥಾವತ್ತಾಗಿ ಬೇಕು. ಸೂಕ್ಷ್ಮತತ್ತ್ವವೂ ಬೇಕು.

ಈಗ್ಗೆ ಸುಮಾರು 50 ವರ್ಷಗಳ ಹಿಂದೆ ವಿದ್ವಾನ್ ಶ್ರೀ ಕೋಮಾಂಡೂರು ರಾಮಸ್ವಾಮಿ ಅಯ್ಯಂಗಾರ್ಯರೆಂಬುವರು ಮಹಾನು ಭಾವರಾದ ಕರ್ಪೂರ ಶ್ರೀನಿವಾಸರಾಯರ ಪ್ರೋತ್ಸಾಹ-ಸಹಾಯಗಳಿಂದ ಆದಿಪರ್ವ-ವಿರಾಟಪರ್ವಗಳನ್ನು ಪ್ರಕಟಿಸಿದರು. ರಾಮಸ್ವಾಮಿ ಅಯ್ಯಂಗಾ ರ್ಯರ ಗ್ರಂಥ ಪೂರ್ತಿಯಾಗಿದ್ದರೆ ಅದು ನನಗೆ ಗೊತ್ತಿಲ್ಲ.

ಇನ್ನು ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರ ವಚನಭಾರತ. ಇದು ಸುಂದರವಾದ ರಚನೆ. ಭಾರತಕಥೆಯ ಸಾರಾಂಶವನ್ನು ಸಾಮಾನ್ಯ ವಾಚಕರಿಗೆ ತೃಪ್ತಿಯಾಗುವಂತೆ ಇಲ್ಲಿ ನಿರೂಪಿಸಿದ್ದಾಗಿದೆ. ತತ್ತ್ವವಿಚಾರಗಳ ಸೂಚನೆಯೂ ಇದೆ. ದೊಡ್ಡ ಬೆಟ್ಟವನ್ನು ಸಣ್ಣ ಕ್ಯಾಮರಾ (camera) ದಲ್ಲಿ ಫೋಟೋ ಹಿಡಿದರೆ ಬರುವ ಚಿತ್ರವು ಯಥಾವತ್ತಾಗಿರುತ್ತದೆ. ಬಂಡೆಗಳು, ಕೋಡುಗಲ್ಲು, ಮರ, ಬಳ್ಳಿ, ಏರು-ತಗ್ಗುಗಳು—ಎಲ್ಲವೂ ಆ ಚಿತ್ರದಲ್ಲಿರುತ್ತದೆ. ಆದರೆ ಆಕಾರ, ಪ್ರಮಾಣ ಸಣ್ಣದು. ದುರ್ಬೀನುಗಳನ್ನು ಹಾಕಿಕೊಂಡು ನೋಡಬೇಕಾದದ್ದು. ಈ ಮನೋಹರವಾದ ಗ್ರಂಥವನ್ನು ರಚಿಸಲಿಕ್ಕೆ ಶ್ರೀ ಕೃಷ್ಣಶಾಸ್ತ್ರಿಗಳು ಎಷ್ಟು ಶ್ರಮಪಟ್ಟರೆಂಬುದನ್ನೂ—ಹೇಗೆ ಶ್ರಮಪಟ್ಟರೆಂಬುದನ್ನೂ ಕಣ್ಣಾರೆ ಕಂಡವರಲ್ಲಿ ನಾನೊಬ್ಬ. ಶ್ರೀ ಕೃಷ್ಣಶಾಸ್ತ್ರಿಗಳವರ ಕೃತಿಯಿಂದ ಕನ್ನಡ ಜನಕ್ಕೆ ಮಹೋಪಕಾರವಾಗಿದೆ. ಆದರೆ ಮೇಲೆ ಹೇಳಿದಂತೆ ಕಥಾಸಾರಾಂಶದಲ್ಲಿ ಕುತೂಹಲವುಳ್ಳವರಿಗೆ ಹೆಚ್ಚು ವಿಚಾರ ಅದರಲ್ಲಿ ದೊರೆಯದು.

ಹೀಗೆ ಪ್ರಕೃತದ ಪ್ರಯತ್ನಕ್ಕೆ ಎಲ್ಲ ದೃಷ್ಟಿಗಳಿಂದಲೂ ಸ್ವಾಗತ ಸಲ್ಲುತ್ತದೆ. ಈ ಗ್ರಂಥವನ್ನು ಅಲ್ಲಲ್ಲಿ ಬಹುಕಡೆ ಓದಿನೋಡಿ ಸಂತೋಷಪಟ್ಟಿದ್ದೇನೆ. ಶೈಲಿ ಸರಳವಾಗಿ ಮೂಲದ ಧ್ವನಿತಾರ್ಥಗಳು ಪ್ರತಿಧ್ವನಿತವಾಗಿವೆ. ಇದರಲ್ಲಿಯ ಒಂದು ವಿಶೇಷಗುಣವು ಮೂಲವಾಕ್ಯಗಳ ಉದಾಹರಣೆಗಳು.

ಮುಖ್ಯ-ಮುಖ್ಯ ಸಂದರ್ಭಗಳಲ್ಲಿ ವ್ಯಾಸರ ಸಂಸ್ಕೃತವಚನಗಳನ್ನು ಅಕ್ಷರಶಃ ಕೊಡಲಾಗಿದೆ. ಇದು ಒಂದು ದೊಡ್ಡ ಉಪಕಾರ. ಆ ಮಹಾನುಭಾವರು ಸಂವಾದಗಳನ್ನು ವರದಿಮಾಡುವುದರಲ್ಲಿ ಮಹಾನಿಪುಣರು. ಒಬ್ಬನು ಇನ್ನೊಬ್ಬನಿಗೆ ಹೇಳಿದ್ದನ್ನು ವರದಿಮಾಡುವಾಗ ತಾತ್ಪರ್ಯಾರ್ಥವನ್ನು ಮಾತ್ರವಲ್ಲ ; ಅದರ ಮರ್ಮವನ್ನೂ, ಅದರ ಧ್ವನಿಯನ್ನೂ, ಅದರ ಕೊಂಕು-ಬಿಂಕುಗಳನ್ನೂ ನಾವು ಅಲ್ಲಿ ಕಣ್ಣಾರೆ ನೋಡಿ, ಸ್ವತಃ ಕಿವಿಯಿಂದ ಕೇಳುತ್ತಿದ್ದೇವೋ—ಎನ್ನಿಸುವಂತೆ ಹೇಳುತ್ತಾರೆ. ಈ ವಚನನೈಪುಣಿ ಒಂದು ಸೊಗಸು. ಇಲ್ಲಿ ಭಾಷಾಂತರ ಸಾಲದು. ಮೂಲವಾಕ್ಯವೇ ಬೇಕೆನ್ನಿಸುತ್ತದೆ. ಅದು ಪ್ರಕೃತಗ್ರಂಥದಲ್ಲಿ ಸಿಕ್ಕುತ್ತದೆ.

ವರ್ತಮಾನಪ್ರಪಂಚಕ್ಕೆ ಮಹಾಭಾರತದ ಅವಶ್ಯಕತೆ ಹೆಚ್ಚಾಗಿದೆ ; ಜರೂರಾಗಿ ಬೇಕಾಗಿದೆ. ಜನತೆಯ ಮನಸ್ಸಿನ ಸಂಕ್ಷೋಭೆ ಅಂದಿಗಿಂತ ಇಂದು ಹೆಚ್ಚು ಪ್ರಬಲವಾಗಿದೆ ; ಜನರಲ್ಲಿ ಅಶಾಂತಿ ಹೆಚ್ಚಿದೆ ; ದಿಕ್ಕೆಟ್ಟ ಪರಿಸ್ಥಿತಿ ಯುಂಟಾಗಿದೆ. ಅಶಾಂತಿ, ಅವ್ಯವಸ್ಥೆ, ಸಮಾಜದ ಅಸ್ತವ್ಯಸ್ತತೆ, ನಾಳೆ ಏನೋ—ಮುಂದೇನೋ ಎಂಬ ತಲ್ಲಣ, ನಿತ್ಯಚಿಂತೆ, ನೆಮ್ಮದಿಯ ದುರ್ಲಭತೆ, ಇವು ಎಲ್ಲೆಲ್ಲೂ—ಇಂಡಿಯಾದಲ್ಲೂ, ಪಾಶ್ಚಾತ್ಯದೇಶಗಳಲ್ಲೂ— ಮನುಷ್ಯ ಜೀವನದ ಲಕ್ಷಣಗಳಾಗಿ ಲೋಕವನ್ನು ಹುಚ್ಚರ ಸಂತೆಯನ್ನಾಗಿ ಮಾಡಿವೆ. ಜೀವನವು ಪುನಃ ಸಹ್ಯವಾಗಬೇಕಾದರೆ ಈ ಹೊತ್ತು ಮನುಷ್ಯನು ತನ್ನ ಜೀವನದ ಮೌಲ್ಯಗಳು ಎಂಥವಾಗಿರಬೇಕೆಂಬುದನ್ನು ಪುನಃ ಪರೀಕ್ಷೆ ಮಾಡಿ ಆ ಪುನರ್ವಿವೇಚನೆಯಿಂದ ತಿದ್ದಿಕೊಳ್ಳಬೇಕಾಗಿದೆ.

ಹಿಂದೆಯೂ ಹೀಗೆ ಇತ್ತು. ಅದರ ಕಾರಣಗಳು ಎಂಥವೋ? ಎಷ್ಟು ಆಳವಾದವೋ? ಮನುಷ್ಯನು—ತನ್ನ ಅಂತರಂಗದ ಶತ್ರುಗಳು ಯಾರು? ಅವರ ಶಕ್ತಿ ಎಂಥಾದ್ದು?—ಈ ವಿವರಗಳನ್ನು ಕಂಡುಕೊಂಡು ಈ ಅಂತಶ್ಶತ್ರು ಗಳನ್ನು ದಮನಮಾಡಲು ತನ್ನ ಸರ್ವಪ್ರಯತ್ನವನ್ನೂ ಮಾಡಬೇಕು. ಇಂಥ ಆತ್ಮಶಿಕ್ಷಣದ ಯೋಚನೆಯನ್ನು ಬಿಟ್ಟು—ಅಂತರಂಗವನ್ನು ಬಿಟ್ಟು—ಸೂರ್ಯ ಲೋಕ-ಚಂದ್ರಲೋಕಗಳನ್ನು ಗೆಲ್ಲುವೆವೆಂದು ಹೊರಟರೆ ನಮ್ಮ ಕಾಲವನ್ನು ಭಾರತದ ಕಾಲದ ಮುಂಬರಿಕೆ ಎಂದೇ ಭಾವಿಸಬೇಕಾಗುತ್ತದೆ. ಈಗ ಮನು ಷ್ಯನ ಪ್ರಯತ್ನ ಮುಖ್ಯವಾಗಿ ಇರಬೇಕಾದದ್ದು ಅಂತರಂಗಶೋಧನೆಯಲ್ಲಿ ;

ಬಹಿರಂಗಸಾಹಸದಲ್ಲಲ್ಲ. ಇದೇ ಮಹಾಭಾರತದ ತಾತ್ಪರ್ಯ. ಅಂತರಂಗ ಶೋಧನೆ ಬಹಿರಂಗಸಾಹಸಕ್ಕಿಂತ ಮುಖ್ಯವಾದದ್ದು. ಇದಕ್ಕೆ ಮಹಾಭಾರತವು ಪ್ರೇರಕವೂ ಸಹಾಯಕವೂ ಆಗುತ್ತದೆ. ಇದು ವಾಸ್ತವವಾಗಿ– **ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ಆಗಿರುತ್ತದೆ.**

ಈ ಮಹಾಗ್ರಂಥವು ಕಷ್ಟಸಾಧ್ಯವೆಂದು ಮೇಲೆ ಹೇಳಿದೆ. ಕಷ್ಟದಲ್ಲಿ ಎರಡು ಅಂಶ: ವಿದ್ವತ್ತೆಯದು ಒಂದು, ಹಣದ್ದು ಇನ್ನೊಂದು.

ನಮ್ಮ ಅದೃಷ್ಟದಿಂದ ಸಮರ್ಥರೂ ಶ್ರದ್ಧಾವಂತರೂ ಆದ ವಿದ್ವಾಂಸರು ಈ ಕೆಲಸಕ್ಕೆ ಈಗ ಮುಂದೆ ಬಂದಿದ್ದಾರೆ : ಇದು ದೊಡ್ಡಸಂಗತಿ. ಅವರ ನಿಷ್ಠೆ-ಪರಿಶ್ರಮಗಳಂತೆ ಬರವಣಿಗೆ ಇರುವುದು ಸ್ವಾಭಾವಿಕ.

ಅವರಿಗೆ ಬೆಂಬಲಕೊಟ್ಟು ಅವರ ಶ್ರಮ ಸಾರ್ಥಕವಾಗುವಂತೆ, ಅವರ ಕೆಲಸ ಪರಿಪೂರ್ಣವಾಗಿ ನಡೆಯುವಂತೆ ಆಶ್ರಯಕೊಡುವುದು ನಮ್ಮ ಮಹಾಜನರ ಕೆಲಸ. ಅವರು ಇದನ್ನು ಅರಿತುಕೊಂಡು ಈ ಸದ್ಗ್ರಂಥವನ್ನು ತಮ್ಮ ಮಕ್ಕಳ, ಅವರ ಮಕ್ಕಳ ವ್ಯಾಸಂಗ-ಪಾರಾಯಣಗಳಿಗಾಗಿ ಸಂಪಾದಿಸಿ ಕೊಳ್ಳುವರೆಂದು ನಂಬಿದ್ದೇನೆ.

ಗ್ರಂಥ ಬಹಳ ದೊಡ್ಡದು ; ವಿಸ್ತಾರವಾದದ್ದು. ಈಗಿನ ಪ್ರಕಾಶಕರು ಇದು ಮೂವತ್ತು (30) ಸಂಪುಟಗಳಾಗಬಹುದೆಂದು ಅಂದಾಜು ಮಾಡಿದ್ದಾರೆ. ಹೀಗೆ ಪ್ರಯತ್ನ ಕಷ್ಟಸಾಧ್ಯವಾದದ್ದು. ಮೈಸೂರು ಸರಕಾರದವರು ಇದಕ್ಕೆ ಸಹಾಯನೀಡಿದ್ದಾರೆಂದು ಕೇಳಿ ಕೃತಜ್ಞನಾಗಿದ್ದೇನೆ. ಆದರೂ ಸಹಾಯ ಸಾಲದು. ಸರಕಾರದ ಹಣ ಎಷ್ಟೋ ಅಪವ್ಯಯವಾಗುತ್ತಿದೆ. ಇಂತಹ ಪ್ರಯತ್ನಕ್ಕೆ ಸರಕಾರದ ಹಣ ಇನ್ನೂ ಹೆಚ್ಚಾಗಿ ದೊರೆತರೆ ಮಹಾಜನರಿಗೆ ಅದು ಸಮ್ಮತವಾದೀತೆಂದು ನಾನು ನಂಬಿಕೆ ಇಟ್ಟುಕೊಂಡಿದ್ದೇನೆ ಮತ್ತು ಮಹಾಜನರು ಸರಕಾರ ಕೊಟ್ಟ ಆಶ್ರಯದಿಂದ ತೃಪ್ತರಾಗಬಾರದು. ನಿಜವಾಗಿ ನೋಡಿದರೆ ಈ ಕೆಲಸ ಮಹಾಜನರ ಔದಾರ್ಯದಿಂದಲೇ ನೆರವೇರಬೇಕಾದದ್ದು. ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಸರಕಾರವನ್ನೇ ನಂಬಿಕೊಂಡು ಇರುವ ಗ್ರಂಥಪ್ರಕಟಣೆ ಯಾವುದು? ಸಾಹಿತ್ಯ ಮುಂದೆ ಬರಬೇಕಾದ್ದು ಮುಖ್ಯವಾಗಿ ಜನರ ಆದರಣೆಯಿಂದ. ಮಹಾಭಾರತವಾದರೋ ಮನೆ-ಮನೆಯಲ್ಲಿಯೂ ಇರಬೇಕಾದದ್ದು. ಇಂಥ ಭಾಗ್ಯವನ್ನು ನಮ್ಮ ಜನರು ಸಂಪಾದಿಸಿಕೊಳ್ಳಲಿ.

ನಮ್ಮ ಶ್ರೀ ರಾಮೇಶ್ವರಾವಧಾನಿಗಳು, ಶ್ರೀ ರಂಗಸ್ವಾಮಿಯವರು– ಮೊದಲಾದ ವಿದ್ವನ್ಮಹನೀಯರ ಭಾರತಪ್ರಯತ್ನಕ್ಕೆ ಪರಮೇಶ್ವರನು ಯಶಸ್ಸನ್ನೂ ಮಂಗಳ ವನ್ನೂ ಸಂಪೂರ್ಣವಾಗಿ ಅನುಗ್ರಹಿಸಲಿ. ಶುಭಂ ಭೂಯಾತ್ ; ಸರ್ವಂ ಶಿವಮ್.

ಬೆಂಗಳೂರು

8-1-1973 –ಡಿ. ವಿ. ಗುಂಡಪ್ಪ

---

## ಮಹಾಭಾರತ-ಆದಿಪರ್ವ-ಎರಡನೆಯ ಸಂಪುಟದ ವಿಷಯಾನುಕ್ರಮಣಿಕೆ

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|

ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಶ್ರೀಮನ್ಮಹಾಭಾರತ-ಆದಿಪರ್ವ ; ಎರಡನೆಯ ಸಂಪುಟ

೯೦ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಅಷ್ಟಕ-ಯಯಾತಿಯರ ಸಂವಾದ

ಅಷ್ಟಕನು ಯಯಾತಿಯನ್ನು ಪ್ರಶ್ನಿಸುತ್ತಾನೆ :

**ಯದಾವಾಸೋ ನನ್ದನೇ ಕಾಮರೂಪೀ**
**ಸಂವತ್ಸರಾಣಾಮಯುತಂ ಶತಾನಾಮ್ ।**
**ಕಿಂ ಕಾರಣಂ ಕಾರ್ತಯುಗಪ್ರಧಾನ**
**ಹಿತ್ವಾ ಚ ತ್ವಂ ವಸುಧಾಮನ್ವಪದ್ಯಃ ॥೧॥**

ಕೃತಯುಗದ ರಾಜರುಗಳಲ್ಲಿ ಪ್ರಧಾನನಾದವನೇ! ಇಚ್ಛಾನುಸಾರವಾಗಿ ಮನಬಂದಂತೆ ರೂಪಗಳನ್ನು ಪಡೆಯುವ ಸಾಮರ್ಥ್ಯವಿದ್ದ ನೀನು ಅನೇಕ ಲಕ್ಷವರ್ಷಗಳ ಕಾಲ ನಂದನವನದಲ್ಲಿ ಸುಖದಿಂದ ಕಾಲಕಳೆಯುತ್ತಿದ್ದೆಯಲ್ಲವೇ? ಯಾವ ಕಾರಣದಿಂದ ನೀನು ಸುಖಮಯವಾದ ನಂದನವನವನ್ನು ಬಿಟ್ಟು ಬರಬೇಕಾಯಿತು? ನೀನು ಭೂಮಿಯ ಮೇಲೆ ಬೀಳಲು ಕಾರಣವೇನು? ಎಲ್ಲ ವಿಷಯಗಳನ್ನೂ ವಿವರಿಸಿ ಹೇಳು. ಕೇಳಲು ನಾವು ಬಹಳ ಉತ್ಸುಕರಾಗಿದ್ದೇವೆ.

ಯಯಾತಿ :-

ರಾಜರ್ಷಿಸತ್ತಮರೇ! ಈಗಾಗಲೇ ನಾನು ಎಲ್ಲವನ್ನೂ ಹೇಳಿಯೇ ಇದ್ದೇನಲ್ಲವೇ?

**ಜ್ಞಾತಿಃ ಸುಹೃತ್ಸ್ವಜನೋ ವಾ ಯಥೇಹ**
**ಕ್ಷೀಣೇ ವಿತ್ತೇ ತ್ಯಜ್ಯತೇ ಮಾನವೈರ್ಹಿ ।**

**ತಥಾ ತತ್ರ ಕ್ಷೀಣಪುಣ್ಯಂ ಮನುಷ್ಯಂ**
**ತ್ಯಜನ್ತಿ ಸದ್ಯಃ ಸೇಶ್ವರಾ ದೇವಸಙ್ಘಾಃ ॥೨॥**

ಮಾನವರು ಕ್ಷೀಣವಿತ್ತರಾದ (ಐಶ್ವರ್ಯವನ್ನು ಕಳೆದುಕೊಂಡ) ಅಣ್ಣ-ತಮ್ಮಂದಿರನ್ನೂ, ಸುಹೃದರನ್ನೂ, ಪತ್ನೀ-ಪುತ್ರರನ್ನೂ ಪರಿತ್ಯಜಿಸುವಂತೆ (ಔದಾಸೀನ್ಯದಿಂದ ಕಾಣುವಂತೆ)–ಇಂದ್ರಪ್ರಮುಖರಾದ ದೇವತೆಗಳು ಕ್ಷೀಣಪುಣ್ಯನಾದವನನ್ನು ಒಡನೆಯೇ ಪುಣ್ಯಲೋಕಗಳಿಂದ ಕೆಳಕ್ಕೆ ತಳ್ಳಿ ಬಿಡುತ್ತಾರೆ."

ಅಷ್ಟಕ :–

**ತಸ್ಮಿನ್ಕಥಂ ಕ್ಷೀಣಪುಣ್ಯಾ ಭವನ್ತಿ**
**ಸಮ್ಮುಹ್ಯತೇ ಮೇಽತ್ರ ಮನೋಽತಿಮಾತ್ರಮ್ ।**
**ಕಿಂ ವಾ ವಿಶಿಷ್ಟಾಃ ಕಸ್ಯ ಧಾಮೋಪಯಾನ್ತಿ**
**ತದ್ವೈ ಬ್ರೂಹಿ ಕ್ಷೇತ್ರವಿತ್ತ್ವಂ ಮತೋ ಮೇ ॥೩॥**

"ಮಹಾನುಭಾವನೇ! ನೀನಾಡುವ ಮಾತುಗಳಿಂದ ನಾನು ನಿನ್ನನ್ನು ಆತ್ಮಜ್ಞಾನಿಯೆಂದೇ ತಿಳಿದಿರುತ್ತೇನೆ. ನೀನು ಹೇಳಿದುದು ನನಗಿನ್ನೂ ಸರಿಯಾಗಿ ಅರ್ಥವಾಗಿಲ್ಲ. ನೀನು ಹೇಳುತ್ತಿರುವ ವಿಷಯದಲ್ಲಿ ನನ್ನ ಮನಸ್ಸು ಬಹುವಾಗಿ ಮೋಹಗೊಂಡಿದೆ. ದೇವಲೋಕದಲ್ಲಿ ಮಾನವನ ಪುಣ್ಯವು ಹೇಗೆ ಕ್ಷೀಣಿಸುತ್ತದೆ? ವಿಶಿಷ್ಟರಾದವರು (ಪ್ರಾಜ್ಞರಾದವರು) ಯಾವ ಕರ್ಮವನ್ನು ಮಾಡುತ್ತಾರೆ? ಯಾವ ಪುಣ್ಯಲೋಕಗಳನ್ನು ಅವರು ಹೊಂದುತ್ತಾರೆ? (ಪುನರಾವೃತ್ತಿರಹಿತವಾದ ಸ್ಥಾನವನ್ನು ಪಡೆಯಲು ಸಾಧ್ಯತೆಯಿರುವುದೇ? ಒಂದು ವೇಳೆ ಇದ್ದರೆ ಯಾವ ಕರ್ಮಾಚರಣೆಯಿಂದ ಪುನರಾವೃತ್ತಿರಹಿತವಾದ ಲೋಕವು ಪ್ರಾಪ್ತವಾಗುತ್ತದೆ? ಈ ಎಲ್ಲ ವಿಷಯಗಳನ್ನೂ ಸ್ಪಷ್ಟವಾಗಿಯೇ ಹೇಳು.)"

ಯಯಾತಿ :

**ಇಮಂ ಭೌಮಂ ನರಕಂ ತೇ ಪತನ್ತಿ**
**ಲಾಲಪ್ಯಮಾನಾ ನರದೇವ ಸರ್ವೇ ।**

**ತೇ ಕಙ್ಕಗೋಮಾಯುಬಲಾಶನಾರ್ಥೇ**
**ಕ್ಷೀಣಾ ವಿವೃದ್ಧಿಂ ಬಹುಧಾ ವ್ರಜನ್ತಿ ॥೪॥**

"ನರದೇವನೇ! ಅಹಂಭಾವವಿರುವವರೆಗೂ ಪುನರಾವೃತ್ತಿಯು ತಪ್ಪುವುದಿಲ್ಲ. 'ನಾನು ಸಂಪಾದಿಸುತ್ತೇನೆ. ನಾನು ಯಜ್ಞಮಾಡಿ ಪುಣ್ಯಗಳಿಸುತ್ತೇನೆ'–ಎಂಬ ಭಾವನೆಯಿಂದ ಕಾರ್ಯಮಾಡಿದರೆ ಆರ್ಜಿಸಿದ ಆ ಪುಣ್ಯವೂ ಹಣದಂತೆಯೇ ವ್ಯಯಿಸಿಹೋಗುತ್ತದೆ. ಈ ಪ್ರಪಂಚದಲ್ಲಿ ಯಾರು 'ನಾನು' ಎಂಬ ಅಹಂಭಾವನೆಯಿಂದ ಪುಣ್ಯಕರ್ಮಗಳನ್ನಾಗಲೀ, ಪಾಪಕರ್ಮಗಳನ್ನಾಗಲೀ ಮಾಡುತ್ತಾ ಹೋಗುತ್ತಾರೆಯೋ–ಅವರಿಗೆ ಪುನರಾವೃತ್ತಿಯೆಂಬುದು ಖಂಡಿತವಾಗಿಯೂ ತಪ್ಪುವುದಿಲ್ಲ. ಪುಣ್ಯಮಾಡಿದವರು ಪುಣ್ಯಲೋಕಗಳಲ್ಲಿ ಪುಣ್ಯಫಲವು ಮುಗಿಯುವವರೆಗೂ ಇದ್ದು ಕ್ಷೀಣಪುಣ್ಯರಾಗಿ ಪುನಃ ಭೂಮಿಗೆ ಬರುತ್ತಾರೆ. ಭೌಮವೆಂಬ ಈ ನರಕದಲ್ಲಿ ಬೀಳುತ್ತಾರೆ. ರಣಹದ್ದು-ನರಿ-ಕಾಗೆಗಳ ಆಹಾರಾರ್ಥವಾಗಿ ಅನೇಕವಿಧವಾದ ದೇಹಗಳನ್ನು ಹೊಂದುತ್ತಲೇ ಇರುತ್ತಾರೆ.

**ತಸ್ಮಾದೇತದ್ವರ್ಜನೀಯಂ ನರೇನ್ದ್ರ**
**ದುಷ್ಟಂ ಲೋಕೇ ಗರ್ಹಣೀಯಂ ಚ ಕರ್ಮ ॥೫॥**

ಆದುದರಿಂದ, ನರೇಂದ್ರನೇ! ಈ ಭೂಲೋಕದಲ್ಲಿರುವಾಗ ದುಷ್ಟವಾದ, ನಿಂದ್ಯವಾದ ಕರ್ಮಗಳನ್ನು ಸಂಪೂರ್ಣವಾಗಿ ವರ್ಜಿಸಬೇಕು ಮತ್ತು 'ಅಹಂ' ಭಾವವನ್ನೂ ಸಂಪೂರ್ಣವಾಗಿ ತ್ಯಜಿಸಿ ಕರ್ಮಗಳನ್ನು ಮಾಡಬೇಕು. ಪುನರಾವೃತ್ತಿಯ ಮೂಲಕಾರಣವನ್ನು ನಿನಗೀಗ ಬಹುಸ್ಪಷ್ಟವಾಗಿ ಹೇಳಿದೆನಲ್ಲವೇ? ಮತ್ತೇನಾದರೂ ಹೇಳುವುದಿದ್ದರೆ ಕೇಳು. ತಿಳಿದುದನ್ನು ಹೇಳುತ್ತೇನೆ."

ಅಷ್ಟಕ :–

**ಯದಾ ತು ತಾನ್ವಿತುದನ್ತೇ ವಯಾಂಸಿ**
**ತಥಾ ಗೃಧ್ರಾಃ ಶಿತಿಕಣ್ಠಾಃ ಪತಙ್ಗಾಃ ।**
**ಕಥಂ ಭವನ್ತಿ ಕಥಮಾಭವನ್ತಿ**
**ನ ಭೌಮಮನ್ಯಂ ನರಕಂ ಶೃಣೋಮಿ ॥೬॥**

ಮಹಾರಾ ಜ! ಮೊದಲು ವಯಸ್ಸು ಮಾನವರ ಶರೀರಗಳನ್ನು ತಿಂದು ಜೀರ್ಣಮಾಡಿಬಿಡುತ್ತದೆ. (ವಯಸ್ಸು ಕಳೆದಂತೆಲ್ಲಾ ಮನುಷ್ಯನು ಜೀರ್ಣವಾಗುತ್ತಾ ಹೋಗುತ್ತಾನೆ.) ವಯಸ್ಸು ತಿಂದುಳಿಸಿದ ಪ್ರಾಣರಹಿತವಾದ ಜೀರ್ಣಶರೀರವನ್ನು ರಣಹದ್ದುಗಳೂ, ನವಿಲುಗಳೂ ಮತ್ತು ಕ್ರಿಮಿ-ಕೀಟಗಳೂ ತಿಂದು ಮುಗಿಸಿಬಿಡುತ್ತವೆ. ಮನುಷ್ಯನು ನಾಮಾವಶೇಷನಾಗು ತ್ತಾನೆ. ಹೆಸರೊಂದು ಮಾತ್ರ ಸ್ವಲ್ಪಕಾಲದವರೆಗೆ ಉಳಿದಿರುವುದೇ ಹೊರತು ಭೌತಿಕವಾಗಿ ಅವನ ಯಾವ ಕುರುಹೂ ಈ ಭೂಮಿಯಲ್ಲಿ ಉಳಿದಿರುವುದಿಲ್ಲ. ವಸ್ತುಸ್ಥಿತಿಯು ಹೀಗಿರುವಾಗ ಅವಸಾನಾನಂತರದಲ್ಲಿ ಆ ಮನುಷ್ಯನು ಎಲ್ಲಿ ಹೇಗಿರುತ್ತಾನೆ? ಮತ್ತೆ ಪುನಃ ಅವನು ಹೇಗೆ ಬರುತ್ತಾನೆ? ಈ ಭೂಮಿಯ ಮೇಲೆ ಭೌಮವೆಂಬ ಬೇರೆಯ ನರಕವಿರುವುದೆಂಬುದನ್ನು ನಾನು ಇದುವರೆಗೂ ಕೇಳಿರುವುದಿಲ್ಲ.

ಯಯಾತಿ :

ಊರ್ಧ್ವಂ ದೇಹಾತ್ಕರ್ಮಣಾ ಜೃಮ್ಭಮಾಣಾ-
ದ್ವ್ಯಕ್ತಂ ಪೃಥಿವ್ಯಾಮನುಸಂಚರನ್ತಿ ।
ಇಮಂ ಭೌಮಂ ನರಕಂ ತೇ ಪತನ್ತಿ
ನಾವೇಕ್ಷನ್ತೇ ವರ್ಷಪೂಗಾನನೇಕಾನ್ ॥೭॥

"ಶರೀರದ ವಿನಾಶದಿಂದ ಜೀವನ ವಿನಾಶವಾಗಲಾರದು. ಹರಿದು ಹೋದ ಅಂಗಿಯನ್ನು ಕಳಚಿಹಾಕುವಂತೆ ಜೀರ್ಣವಾದ ಈ ಶರೀರವನ್ನು ಕಾಲನಿಯಮಕ್ಕೆ ಅನುಸಾರವಾಗಿ ಜೀವನು ತೊರೆದುಹೋಗುತ್ತಾನೆ. ಅಂಗಿಯ ವಿನಾಶದಿಂದ ಅಂಗಿಯನ್ನು ತೊಟ್ಟವನು ಹೇಗೆ ನಾಶವಾಗುವು ದಿಲ್ಲವೋ–ಹಾಗೆಯೇ ಜೀರ್ಣಶರೀರದ ವಿನಾಶದಿಂದ ಶರೀರದಲ್ಲಿರುವ ಜೀವನು ವಿನಾಶಹೊಂದುವುದಿಲ್ಲ. ಪ್ರಪಂಚದಲ್ಲಿ ತಾನು ಮಾಡಿದ ಕರ್ಮ ಫಲದಿಂದ ಅನುಲಿಪ್ತನಾದ ಆ ಜೀವನು ಅಶರೀರನಾದರೂ ಭೂಮಿಯನ್ನು ಬಿಟ್ಟು ಹೋಗಲು ಇಚ್ಛಿಸುವುದಿಲ್ಲ. ಭೂಮಿಯ ಮೇಲೆಯೇ–ಮತ್ತೂ ವಿಶೇಷವಾಗಿ ತಾನು ಹುಟ್ಟಿ-ಬೆಳೆದು, ಜೀವನ ನಡೆಸಿದ ಸ್ಥಳದಲ್ಲಿಯೇ– ಸಂಚರಿಸುತ್ತಿರುತ್ತಾನೆ.

(ನಿಯಮಿತಕಾಲದಲ್ಲಿ ಅವನು ಪುನಃ ತನ್ನ ಕರ್ಮಫಲಾನುಸಾರವಾಗಿ ಪ್ರಾಣಿಗಳ ಗರ್ಭದಲ್ಲಿ ಬೀಳುತ್ತಾನೆ. ಇದು ಅವನ ಇಚ್ಛೆಗೆ ಸೇರಿದ್ದಾಗಿರುವುದಿಲ್ಲ. ಅವನ ಕರ್ಮಫಲವು ಅವನನ್ನು ಯಥಾಯೋಗ್ಯವಾದ ಯೋನಿಗಳಲ್ಲಿ ಬೀಳಿಸುತ್ತದೆ. ಸೂಕ್ಷ್ಮರೂಪದಲ್ಲಿರುವಾಗ ತಾನಾರು? ತಾನೆಲ್ಲಿದ್ದೇನೆ?–ಎಂಬುದೆಲ್ಲವನ್ನೂ ತಿಳಿದಿರುತ್ತಾನೆ. ಸೂಕ್ಷ್ಮರೂಪದಿಂದ ಶಿಶುರೂಪನಾಗಿ ತಾಯಿಯ ಗರ್ಭದಿಂದ ಚ್ಯುತನಾಗಿ ಭೌಮನರಕಕ್ಕೆ ಬಿದ್ದೊಡನೆಯೇ ಅವನಿಗೆ ಪೂರ್ವಜನ್ಮದ ವಿಸ್ಮರಣೆಯುಂಟಾಗುತ್ತದೆ. ತಾನು ಹಿಂದೆ ಅನೇಕಾನೇಕ ಜನ್ಮಗಳನ್ನು ತಾಳಿ ಮಾಡಿದ್ದ ಪಾಪ-ಪುಣ್ಯಕರ್ಮಗಳೆಲ್ಲವನ್ನೂ ಸಂಪೂರ್ಣವಾಗಿ ಮರೆತುಬಿಡುತ್ತಾನೆ. ಪುನಃ– ನಾನು , ನನ್ನದು , ನಮ್ಮವರು – ಎಂಬ ಅಭಿಮಾನದಿಂದಲೇ ಜೀವನವನ್ನು ಆರಂಭಿಸುತ್ತಾನೆ.)

**ಷಷ್ಟಿಂ ಸಹಸ್ರಾಣಿ ಪತನ್ತಿ ವ್ಯೋಮ್ನಿ**
**ತಥಾ ಅಶೀತಿಂ ಪರಿವತ್ಸರಾಣಿ ।**
**ತಾನ್ವೈ ತುದನ್ತಿ ಪತತಃ ಪ್ರಪಾತಂ**
**ಭೀಮಾ ಭೌಮಾ ರಾಕ್ಷಸಾಸ್ತೀಕ್ಷ್ಣದಂಷ್ಟ್ರಾಃ ॥೮॥**

ಅವರವರ ಕರ್ಮಾನುಸಾರವಾಗಿ ಭೌತಿಕಶರೀರವನ್ನು ತೊರೆದು ಜೀವರು ಅರುವತ್ತು ಸಾವಿರ ವರ್ಷಗಳ ಕಾಲ ಅಥವಾ ಎಂಬತ್ತು ಸಾವಿರ ವರ್ಷಗಳ ಕಾಲ ಸ್ವರ್ಗಾದಿ ಲೋಕಗಳಲ್ಲಿರಬಹುದು. ಪುಣ್ಯಫಲವು ಮುಗಿಯಿತೆಂದರೆ ಅವರು ಭೌಮವೆಂಬ ನರಕದಲ್ಲಿ ಬೀಳುತ್ತಾರೆ. ಅಂದರೆ ಭೂಮಿಯಲ್ಲಿ ಜನ್ಮತಾಳುತ್ತಾರೆ. ಅಂತ್ಯವೆಂಬುದೇ ಇಲ್ಲದಿರುವ ಭೌಮನರಕದಲ್ಲಿ ಬೀಳುತ್ತಿರುವಾಗಲೇ ಆ ನರಕದಲ್ಲಿರುವ ಭಯಂಕರರಾದ, ತೀಕ್ಷ್ಣವಾದ ಕೋರೆದಾಡೆಗಳನ್ನು ಹೊಂದಿರುವ ರಾಕ್ಷಸರು ಜೀವನನ್ನು ಪೀಡಿಸಲು ಪ್ರಾರಂಭಿಸುತ್ತಾರೆ. ( ಪತ್ನೀ-ಪುತ್ರ-ಬಂಧುಗಳೇ ಈ ರಾಕ್ಷಸರೆಂದು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. )

ಅಷ್ಟಕ :

**ಯದೇನಸಸ್ತೇ ಪತತಸ್ತುದನ್ತಿ**
**ಭೀಮಾ ಭೌಮಾ ರಾಕ್ಷಸಾಸ್ತೀಕ್ಷ್ಣದಂಷ್ಟ್ರಾಃ ।**

**ಕಥಂ ಭವನ್ತಿ ಕಥಮಾಭವನ್ತಿ**
**ಕಥಂಭೂತಾ ಗರ್ಭಭೂತಾ ಭವನ್ತಿ ॥೯॥**

"ಜೀವರು ಮಾಡಿದ ಯಾವ ಪಾಪದ ಕಾರಣದಿಂದಾಗಿ ಮೇಲಿನ ಲೋಕದಿಂದ ಕೆಳಗೆ ಬೀಳುತ್ತಿರುವ ಇವರನ್ನು ಭಯಂಕರವಾದ ತೀಕ್ಷ್ಣವಾದ ಕೋರೆದಾಡೆಗಳನ್ನು ಧರಿಸಿರುವ ಭೌಮರಾಕ್ಷಸರೆಂಬುವರು ಹಿಂಸಿಸುತ್ತಾರೆ? ಅಷ್ಟು ಮೇಲಿನಿಂದ ಜೀವರು ಕೆಳಕ್ಕೆ ಬಿದ್ದರೆ ನಾಶವಾಗುವುದಿಲ್ಲವೇಕೆ? ಈ ಜೀವರಿಗೆ ಇಂದ್ರಿಯಗಳ ಸಂಬಂಧವು ಹೇಗೆ ಕಲ್ಪಿತವಾಗುತ್ತದೆ? ಈ ಜೀವರು ಗರ್ಭಕೋಶವನ್ನು ಪುನಃ ಹೇಗೆ ಸೇರಿಕೊಳ್ಳುತ್ತಾರೆ?"

ಯಯಾತಿ :–

**ಅಸ್ರಂ ರೇತಃ ಪುಷ್ಪಫಲಾನುಪೃಕ್ತ-**
**ಮನ್ವೇತಿ ತದ್ವೈ ಪುರುಷೇಣ ಸೃಷ್ಟಮ್ ।**
**ಸ ವೈ ತಸ್ಯಾ ರಜ ಆಪದ್ಯತೇ ವೈ**
**ಸ ಗರ್ಭಭೂತಃ ಸಮುಪೈತಿ ತತ್ರ ॥೧೦॥**
**ವನಸ್ಪತೀನೋಷಧೀಶ್ಚಾವಿಶನ್ತಿ**
**ಆಪೋ ವಾಯುಂ ಪೃಥಿವೀಂ ಚಾನ್ತರಿಕ್ಷಮ್ ।**
**ಚತುಷ್ಪದಂ ದ್ವಿಪದಂ ಚಾಪಿ ಸರ್ವ-**
**ಮೇವಮ್ಭೂತಾ ಗರ್ಭಭೂತಾ ಭವನ್ತಿ ॥೧೧॥**

"ಮೇಲಿನಿಂದ ಕೆಳಕ್ಕೆ ಬೀಳುವಾಗ ಜೀವನು ಸೂಕ್ಷ್ಮರೂಪದಲ್ಲಿದ್ದು ಜಲರೂಪವಾಗಿರುವನು. ನೀರಿನ ರೂಪವಾಗಿರಲು ಕಾರಣವೇನೆಂದರೆ : ಕೆಳಗೆ ಬೀಳುವ ಜೀವನು ದುಃಖಿಸುತ್ತಾನಲ್ಲವೇ? ಆದುದರಿಂದ ದುಃಖಸೂಚಕವಾದ ಅಶ್ರುವಾಗಿ ಜೀವನು ಉಳಿಯುವನು. ನೀರು ಓಷಧಿಲತೆಗಳ ಮೇಲೆ ಬಿದ್ದಾಗ ಓಷಧಿಲತೆಗಳು ಅದನ್ನು ಹೀರಿಕೊಳ್ಳುವುವು. ಮಾನವನಾಗಲೀ, ಪಶು-ಪಕ್ಷಿಗಳಾಗಲೀ–ಆ ಓಷಧಿಲತೆಗಳನ್ನು ಸೇವಿಸುವುದರಿಂದ ವೀರ್ಯವು ಉತ್ಪನ್ನವಾಗುವುದು. ಆ ವೀರ್ಯವು ಋತುಕಾಲದಲ್ಲಿ ಸ್ತ್ರೀಯರಲ್ಲಿ ಸೇರಿದರೆ ಗರ್ಭವು ಉತ್ಪನ್ನವಾಗುವುದು. ಆದರೆ ಜೀವನಿಗೆ ಇಷ್ಟೊಂದು ಅವಸ್ಥಾಭೇದಗಳಿದ್ದರೂ ಅವನ ಕರ್ಮಗಳು ಅವನನ್ನು ಅಂಟಿಬರುತ್ತವೆಯೇ ಎಂಬ

ಸಂಶಯವು ಮೂಡುವುದಲ್ಲವೇ? ಯಾವುದಾದರೂ ಒಂದು ಬೀಜವನ್ನು ತೆಗೆದುಕೊಳ್ಳೋಣ. ಅದರಲ್ಲಿ ಯಾವ ವಾಸನೆಯೂ ಇರುವುದಿಲ್ಲ. ಆದರೆ ಅದನ್ನು ಭೂಮಿಯಲ್ಲಿ ಹಾಕಿದನಂತರ ಗಿಡವು ಬೆಳೆಯುತ್ತದೆ. ಬೀಜದಲ್ಲಿದ್ದ ಸೂಕ್ಷ್ಮರೂಪದ ವಾಸನೆಯು ಹೊರಸೂಸುತ್ತದೆ. ಆದರೆ ಆ ವಾಸನೆಯು ಕೇವಲ ಭೂಮಿಯ ಸಂಸರ್ಗದಿಂದ ಬಂದಿತೆಂದು ಹೇಳಲಾಗುವುದಿಲ್ಲ. ಪ್ರತಿ ಯೊಂದು ಹೂವಿಗೂ ಒಂದೇ ವಿಧವಾದ ವಾಸನೆಯು ಇರಲಾರದಲ್ಲವೇ? ಆದುದರಿಂದ ಸೂಕ್ಷ್ಮರೂಪವಾಗಿರುವ ಬೀಜದಲ್ಲಿ ಅದರ ನಿರ್ದಿಷ್ಟ ವಾಸನೆಯೂ ಇರುವುದೆಂಬುದೂ ನಿಶ್ಚಯವಾಯಿತಲ್ಲವೇ? ಅದೇ ರೀತಿ ಯಾಗಿ ಸೂಕ್ಷ್ಮರೂಪದಲ್ಲಿರುವ ಜೀವನನ್ನು ಅವನ ಕರ್ಮಗಳು ಎಡೆಬಿಡದೇ ಅಂಟಿರುತ್ತವೆ. ಅವನ ಕರ್ಮಾನುಸಾರವಾಗಿ ಅವನು ಮಾನವರಲ್ಲಿ, ಚತುಷ್ಪಾದಿಗಳಲ್ಲಿ, ದ್ವಿಪಾದೀ, ಷಟ್ಪಾದೀ, ಅಷ್ಟಪಾದೀ, ಅನೇಕಪಾದೀ ಮುಂತಾದ ಯೋನಿಗಳಲ್ಲಿ ಹುಟ್ಟಬೇಕೆಂಬ ನಿಯಮವಿರುತ್ತದೆ. ಅದರಂತೆ ಪ್ರಪಂಚದ ಸಕಲಪ್ರಾಣಿಗಳೂ ಹುಟ್ಟಿ ಸಾಯುತ್ತವೆ.”

ಅಷ್ಟಕ :–

**ಅನ್ಯದ್ವಪುರ್ವಿದಧಾತೀಹ ಗರ್ಭ-**
**ಮುತಾಹೋಸ್ವಿತ್ಸ್ವೇನ ಕಾಯೇನ ಯಾತಿ ।**
**ಆಪದ್ಯಮಾನೋ ನರಯೋನಿಮೇತಾ-**
**ಮಾಚಕ್ಷ್ವ ಮೇ ಸಂಶಯಾತ್ಪ್ರಬ್ರವೀಮಿ ॥೧೨॥**
**ಶರೀರಭೇದಾಭಿಸಮುಚ್ಛ್ರಯಂ ಚ**
**ಚಕ್ಷುಃಶ್ರೋತ್ರೇ ಲಭತೇ ಕೇನ ಸಂಜ್ಞಾಮ್ ।**
**ಏತತ್ತತ್ತ್ವಂ ಸರ್ವಮಾಚಕ್ಷ್ವ ಪೃಷ್ಟಃ**
**ಕ್ಷೇತ್ರಜ್ಞಂ ತ್ವಾಂ ತಾತ ಮನ್ಯಾಮ ಸರ್ವೇ ॥೧೩॥**

“ತಂದೆಯೇ! ನಾವೆಲ್ಲರೂ ನಿನ್ನನ್ನು ಕ್ಷೇತ್ರಜ್ಞನೆಂದು ತಿಳಿಯುವೆವು. ನೀನು ವಿಶದಪಡಿಸಿದಂತೆಲ್ಲಾ ನಮ್ಮ ಸಂಶಯಗಳು ಹೆಚ್ಚುತ್ತಲೇ ಹೋಗುತ್ತವೆ. ಸೂಕ್ಷ್ಮರೂಪದಲ್ಲಿರುವ ಜೀವನು ಪುನಃ ಗರ್ಭದಲ್ಲಿ ಪ್ರವೇಶಿಸಿ ಹೊರಬರುವಾಗ ತಾನು ಹಿಂದಿನ ಜನ್ಮದಲ್ಲಿದ್ದ ರೂಪವನ್ನೇ ಧರಿಸುತ್ತಾನೆಯೋ ಅಥವಾ ಬೇರೆಯ ವಿಧವಾದ ರೂಪವು ಬರುವುದೋ? ರೇತಸ್ಸಿನಲ್ಲಿ ಲುಪ್ತ

ವಾಗಿರುವ ಅಂಗಾಂಗಗಳು ಹೇಗೆ ಸ್ಪಷ್ಟವಾಗುವುವು ಮತ್ತು ಕಿವಿ-ಕಣ್ಣುಗಳೇ ಮೊದಲಾದ ಇಂದ್ರಿಯಗಳಿಗೆ ಗಂಧರಸಗ್ರಹಣಶಕ್ತಿ, ಶ್ರವಣಶಕ್ತಿ, ದರ್ಶನಶಕ್ತಿ, ಸ್ಪರ್ಶನಶಕ್ತಿಗಳು ಹೇಗೆ ಉಂಟಾಗುವುವು?"

ಯಯಾತಿ :

ವಾಯುಃ ಸಮುತ್ಕರ್ಷತಿ ಗರ್ಭಯೋನಿ-
ಮೃತೌ ರೇತಃ ಪುಷ್ಪರಸಾನುಪೃಕ್ತಮ್ ।
ಸ ತತ್ರ ತನ್ಮಾತ್ರಕೃತಾಧಿಕಾರಃ
ಕ್ರಮೇಣ ಸಂವರ್ಧಯತೀಹ ಗರ್ಭಮ್ ॥೧೪॥
ಸ ಜಾಯಮಾನೋ ವಿಗೃಹೀತಮಾತ್ರಃ
ಸಂಜ್ಞಾಮಧಿಷ್ಠಾಯ ತತೋ ಮನುಷ್ಯಃ ।
ಸ ಶ್ರೋತ್ರಾಭ್ಯಾಂ ವೇದಯತೀಹ ಶಬ್ದಂ
ಸ ವೈ ರೂಪಂ ಪಶ್ಯತಿ ಚಕ್ಷುಷಾ ಚ ॥೧೫॥
ಘ್ರಾಣೇನ ಗನ್ಧಂ ಜಿಹ್ವಯಾಥೋ ರಸಂ ಚ
ತ್ವಚಾ ಸ್ಪರ್ಶಂ ಮನಸಾ ವೇದ ಭಾವಮ್ ।
ಇತ್ಯಷ್ಟಕೇಹೋಪಹಿತಂ ಹಿ ವಿದ್ಧಿ
ಮಹಾತ್ಮನಾಂ ಪ್ರಾಣಭೃತಾಂ ಶರೀರೇ ॥೧೬॥

"ಪುಷ್ಪರಸದಿಂದ ಕೂಡಿರುವ ರೇತಸ್ಸನ್ನು ವಾಯುವು ಋತುಸಮಯದಲ್ಲಿ ಸ್ತ್ರೀಯರ ಗರ್ಭದೊಳಕ್ಕೆ ಸೆಳೆಯುತ್ತದೆ. ಅನಂತರದಲ್ಲಿ ಅದೇ ವಾಯುವು ಗರ್ಭಗತವಾದ ರೇತಸ್ಸನ್ನು ಅನುಕ್ರಮವಾಗಿ ವೃದ್ಧಿಪಡಿಸುತ್ತದೆ. ಜೀವನ ಸೂಕ್ಷ್ಮರೂಪದಲ್ಲಿರುವ ಆ ರೇತಸ್ಸು ಪ್ರಾಣಿಗಳಲ್ಲಿ ಅಥವಾ ಮನುಷ್ಯರಲ್ಲಿ ಸೇರಬೇಕಾದರೂ ಅದು ತನ್ನ ಹಿಂದಿನ ಕರ್ಮಫಲಾನುಸಾರವಾಗಿಯೇ ಸೇರುತ್ತದೆ.

(ಸೂಕ್ಷ್ಮರೂಪವಾದ ರೇತಸ್ಸು ಗರ್ಭದಲ್ಲಿರುವಾಗ ಅನುಕ್ರಮವಾಗಿ ಯಾವ ಯಾವ ವಿಕಾರಗಳನ್ನು ಹೊಂದುವುದೆಂಬ ವಿಷಯವಾಗಿ ನಿರುಕ್ತವನ್ನು ತಿಳಿದವರು ಹೀಗೆ ಹೇಳುತ್ತಾರೆ :

ಶುಕ್ರಾತಿರೇಕೇ ಪುಮಾನ್ಭವತಿ । ಶೋಣಿತಾತಿರೇಕೇ ಸ್ತ್ರೀ ಭವತಿ ।

**ದ್ವಾಭ್ಯಾಂ ಸಮೇನ ನಪುಂಸಕೋ ಭವತಿ । ಶುಕ್ರಭಿನ್ನೇನ ಯಮೋ ಭವತಿ। ಏಕರಾತ್ರೋಷಿತಂ ಕಲಲಂ ಭವತಿ । ಪಞ್ಚರಾತ್ರಾದ್ಬುದ್ಬುದಾಃ । ಸಪ್ತರಾತ್ರಾತ್ಪೇಶೀ । ದ್ವಿಃಸಪ್ತರಾತ್ರಾದರ್ಬುದಃ । ಪಞ್ಚವಿಂಶತಿರಾತ್ರಃ ಸ್ವಸ್ಥಿತೋ ಘನೋ ಭವತಿ । ಮಾಸಮಾತ್ರಾತ್ಕಠಿನೋ ಭವತಿ । ದ್ವಿಮಾಸಾಭ್ಯನ್ತರೇ ಶಿರಃ ಸಂಪದ್ಯತೇ । ಮಾಸತ್ರಯೇಣ ಗ್ರೀವಾವ್ಯಾದೇಶಃ । ಮಾಸಚತುಷ್ಟಯೇನ ತ್ವಗ್ವ್ಯಾದೇಶಃ । ಪಞ್ಚಮೇ ಮಾಸೇ ನಖರೋಮವ್ಯಾದೇಶಃ । ಷಷ್ಠೇ ಮುಖನಾಸಿಕಾಕ್ಷಿಶ್ರೋತ್ರಂ ಚ ಸಂಭವತಿ । ಸಪ್ತಮೇ ನವಮೇ ಚಲನಸಮರ್ಥೋ ಭವತಿ । ಅಷ್ಟಮೇ ಬುದ್ಧ್ಯಾಧ್ಯವಸತಿ । ನವಮೇ ಸರ್ವಾಙ್ಗಸಂಪೂರ್ಣೋ ಭವತಿ ।**

ಗರ್ಭದಲ್ಲಿ ಸೇರುವ ಶುಕ್ರ-ಶೋಣಿತಗಳ ಸಂಯೋಜನೆಯಲ್ಲಿ ವೀರ್ಯವು ಹೆಚ್ಚಾಗಿದ್ದರೆ ಗಂಡುಮಗುವು ಹುಟ್ಟುತ್ತದೆ. ಶೋಣಿತವು ಹೆಚ್ಚಾಗಿದ್ದರೆ ಹೆಣ್ಣುಮಗುವು ಹುಟ್ಟುತ್ತದೆ. ಎರಡೂ ಸಮವಾಗಿದ್ದರೆ ನಪುಂಸಕ ಶಿಶುವು ಹುಟ್ಟುತ್ತದೆ. ಶುಕ್ರವು ಒಡೆದಿದ್ದರೆ ಅವಳೀಮಕ್ಕಳು ಹುಟ್ಟುತ್ತಾರೆ. ಗರ್ಭದಲ್ಲಿ ಸೇರಿದ ರೇತಸ್ಸು ಮೊದಲನೆಯ ರಾತ್ರಿಯು ಕಳೆದನಂತರ ಕಲಲ ರೂಪವಾಗಿರುತ್ತದೆ. ಐದು ರಾತ್ರಿಗಳು ಕಳೆದರೆ ನೊರೆಯ ರೂಪವಾಗಿರುತ್ತದೆ. ಏಳು ರಾತ್ರಿಗಳು ಕಳೆದನಂತರ ಪೇಶಿ (ಮಾಂಸದ ಮುದ್ದೆ) ರೂಪಕ್ಕೆ ಬರುತ್ತದೆ. ಹದಿನಾಲ್ಕು ರಾತ್ರಿಗಳು ಕಳೆದನಂತರ ಅರ್ಬುದರೂಪಕ್ಕೆ ಬರುತ್ತದೆ. ಇಪ್ಪತ್ತೈದು ರಾತ್ರಿಗಳು ಕಳೆದನಂತರ ಘನರೂಪವಾಗಿರುತ್ತದೆ. ಮಾಸವು ಕಳೆದೊಡನೆ ಕಲ್ಲಿನಂತೆ ಕಠಿನವಾಗುತ್ತದೆ. ಎರಡು ಮಾಸದೊಳಗೆ ತಲೆಯ ರಚನೆಯಾಗುತ್ತದೆ. ಮೂರು ತಿಂಗಳೊಳಗಾಗಿ ಕತ್ತು ಹುಟ್ಟುವುದು. ನಾಲ್ಕು ತಿಂಗಳೊಳಗೆ ಚರ್ಮವು ಹೊದ್ದಿಸಲ್ಪಡುವುದು. ಐದನೆಯ ಮಾಸದಲ್ಲಿ ಉಗುರು-ಕೂದಲುಗಳು ಹೊರಸೂಸುವುವು. ಆರನೆಯ ಮಾಸದಲ್ಲಿ ಮುಖ, ಕಣ್ಣು, ಮೂಗು, ಕಿವಿಗಳ ರಚನೆಯಾಗುವುದು. ಏಳನೆಯ ತಿಂಗಳಲ್ಲಿ ಚಲನಸಾಮರ್ಥ್ಯವು ಬರುವುದು. ಎಂಟನೆಯ ತಿಂಗಳಲ್ಲಿ ಬುದ್ಧಿಯ ಸಂಯೋಗವಾಗುವುದು. ಒಂಭತ್ತನೆಯ ತಿಂಗಳಲ್ಲಿ ಚೇತನನು ಸರ್ವಾಂಗಪೂರ್ಣವಾಗುತ್ತಾನೆ. ಬುದ್ಧಿಯ ಸಂಯೋಗವಾದೊಡನೆಯೇ

ಸಕಲೇಂದ್ರಿಯಗಳೂ ಚೇತನಗೊಂಡಂತೆ ತಮ್ಮ-ತಮ್ಮ ಶಕ್ತಿಯನ್ನು ಪಡೆದು ಕೊಳ್ಳುವುವು.)

ಬಳಿಕ ಮನುಷ್ಯನು ಎಲ್ಲ ಅವಯವಗಳನ್ನೂ ಪಡೆದುಕೊಂಡು ಹುಟ್ಟುತ್ತಲೇ ತನ್ನೆರಡು ಕಿವಿಗಳಿಂದಲೂ ಶಬ್ದವನ್ನು ಕೇಳುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಕಣ್ಣುಗಳಿಂದ ಹೊರಗಿನ ದೃಶ್ಯಗಳನ್ನು ನೋಡುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಮೂಗಿನಿಂದ ಆಘ್ರಾಣಸಾಮರ್ಥ್ಯವನ್ನೂ, ನಾಲಿಗೆಯಿಂದ ರಸಗಳ ರುಚಿಯನ್ನು ತಿಳಿಯುವ ಸಾಮರ್ಥ್ಯವನ್ನೂ, ಚರ್ಮದಿಂದ ಸ್ಪರ್ಶಗ್ರಹಣಶಕ್ತಿಯನ್ನೂ ಪಡೆದುಕೊಳ್ಳುತ್ತಾನೆ. ಮನಸ್ಸಿನಿಂದ ಭಾವವನ್ನು ತಿಳಿದುಕೊಳ್ಳುತ್ತಾನೆ. ಅಷ್ಟಕ! ಈ ರೀತಿಯಾಗಿ ಸೂಕ್ಷ್ಮರೂಪದ ಜೀವವು ಪ್ರಾಣಧಾರಿಗಳಾದ ಮಹಾತ್ಮರ ಶರೀರದಲ್ಲಿ ಸೇರಿಕೊಳ್ಳುತ್ತದೆ."

ಅಷ್ಟಕ :

ಯಃ ಸಂಸ್ಥಿತಃ ಪುರುಷೋ ದಹ್ಯತೇ ವಾ
ನಿಖನ್ಯತೇ ವಾಪಿ ನಿಕೃಷ್ಯತೇ ವಾ ।
ಅಭಾವಭೂತಃ ಸ ವಿನಾಶಮೇತ್ಯ
ಕೇನಾತ್ಮನಾ ಚೇತಯತೇ ಪರಸ್ತಾತ್ ॥೧೭॥

"ತಾತ! ಮನುಷ್ಯನು ಪ್ರಾಣವನ್ನು ಬಿಟ್ಟೊಡನೆಯೇ ಚೇತನಾರಹಿತ ವಾದ ಅವನ ಶರೀರವನ್ನು ಸುಡುತ್ತಾರೆ, ಹೂಳುತ್ತಾರೆ ಅಥವಾ ಕಾಗೆ, ರಣಹದ್ದು, ಗುಳ್ಳೇನರಿ ಮುಂತಾದ ಪ್ರಾಣಿಗಳು ಕಿತ್ತುತಿನ್ನಲು ಬಿಟ್ಟುಬಿಡು ತ್ತಾರೆ.* ಅವನ ಶರೀರವಂತೂ ಉಳಿಯುವುದಿಲ್ಲ.

ಈ ಶರೀರವನ್ನು ತೊರೆದನಂತರ ಆ ಜೀವನಿಗೆ ಯಾವ ವಿಧವಾದ ಶರೀರವೂ ಇರುವುದೇ ಇಲ್ಲವೇ? ಒಂದು ವೇಳೆ ಇರುವುದಾದರೆ ಯಾವ ವಿಧ

* ಪಾರಸೀಕರು ಇಂದೂ ಈ ಸಂಪ್ರದಾಯವನ್ನಿಟ್ಟುಕೊಂಡಿದ್ದಾರೆ. ಬದುಕಿರುವಾಗ ಮನುಷ್ಯನು ಇತರರಿಗೆ ಉಪಕಾರವನ್ನು ಮಾಡುವಂತೆಯೇ ಸತ್ತಮೇಲೂ ಅವನ ಶರೀರವು ಹತ್ತಾರು ಪ್ರಾಣಿಗಳಿಗೆ ಆಹಾರವಾಗಿ ಪರಿಣಮಿಸಲಿ–ಎಂಬುದು ಇವರ ತತ್ತ್ವವಾಗಿದೆ. ಹೆಣಗಳನ್ನಿಡುವ ಸಲುವಾಗಿಯೇ ಎತ್ತರವಾದ ಮಂಟಪಗಳನ್ನು ಕಟ್ಟಿಸಿ ಅದರ ಮೇಲೆ ಹೆಣಗಳನ್ನಿಡುತ್ತಾರೆ. ಒಂದೆರಡು ದಿನಗಳಲ್ಲಿಯೇ ರಣಹದ್ದು ಮುಂತಾದ ಖೇಚರಗಳು ಹೆಣವನ್ನು ತಿಂದು ಮುಗಿಸಿಬಿಡುತ್ತವೆ.

ವಾದ ಶರೀರವನ್ನು ಹೊಂದಿರುತ್ತಾನೆ? ಅಥವಾ ಬೇರೊಂದು ವಿಧವಾದ ಶರೀರವನ್ನು ಹೊಂದಿರುತ್ತಾನೆಯೇ? ಹಾಗೆ ಬೇರೊಂದು ವಿಧವಾದ ಶರೀರ ವನ್ನು ಹೊಂದಿರುವುದಾದರೆ ಅವನು ಮತ್ತೊಂದು ಶರೀರದಲ್ಲಿ ಸೇರಿಕೊಳ್ಳುವ ಸಾಧ್ಯತೆಯು ಹೇಗೆ? ಮತ್ತೊಂದು ಶರೀರದಲ್ಲಿ ಹೋಗಿ ಸೇರಿಕೊಳ್ಳುವಾಗ ಆ ಮಧ್ಯದಲ್ಲಿ ಪ್ರಾಪ್ತವಾದ ಶರೀರವೇನಾಗುವುದು? ಈ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳು."

ಯಯಾತಿ :-

**ಹಿತ್ವಾ ಸೋಽಸೂನ್ಸುಪ್ತವನ್ನಿಷ್ಟನಿತ್ವಾ**
**ಪುರೋಧಾಯ ಸುಕೃತಂ ದುಷ್ಕೃತಂ ವಾ ।**
**ಅನ್ಯಾಂ ಯೋನಿಂ ಪವನಾಗ್ರಾನುಸಾರೀ**
**ಹಿತ್ವಾ ದೇಹಂ ಭಜತೇ ರಾಜಸಿಂಹ ॥೧೮॥**
**ಪುಣ್ಯಾಂ ಯೋನಿಂ ಪುಣ್ಯಕೃತೋ ವ್ರಜನ್ತಿ**
**ಪಾಪಾಂ ಯೋನಿಂ ಪಾಪಕೃತೋ ವ್ರಜನ್ತಿ ।**
**ಕೀಟಾಃ ಪತಙ್ಗಾಶ್ಚ ಭವನ್ತಿ ಪಾಪಾ**
**ನ ಮೇ ವಿವಕ್ಷಾಸ್ತಿ ಮಹಾನುಭಾವ ॥೧೯॥**
**ಚತುಷ್ಪದಾ ದ್ವಿಪದಾಃ ಷಟ್ಪದಾಶ್ಚ**
**ತಥಾಭೂತಾ ಗರ್ಭಭೂತಾ ಭವನ್ತಿ ।**
**ಆಖ್ಯಾನಮೇತನ್ನಿಖಿಲೇನ ಸರ್ವಂ**
**ಭೂಯಸ್ತು ಕಿಂ ಪೃಚ್ಛಸಿ ರಾಜಸಿಂಹ ॥೨೦॥**

"ಸ್ವಪ್ನದಲ್ಲಿ ನಾವು ಯಾವ ಶರೀರವನ್ನು ಹೊಂದಿರುತ್ತೇವೆಂಬುದನ್ನು ಸ್ಪಷ್ಟವಾಗಿ ಹೇಳಲಾರೆವು. ಸ್ವಪ್ನದಲ್ಲಿ ನಾವು ಹಾರುತ್ತೇವೆ ; ಕುಣಿಯುತ್ತೇವೆ; ಮೇಲಿನಿಂದ ಕೆಳಗೆ ಬೀಳುತ್ತೇವೆ ; ನೀರಿನಲ್ಲಿ ಮುಳುಗುತ್ತೇವೆ ; ಕೆಲವೊಮ್ಮೆ ರತಿಸುಖವನ್ನೂ ಅನುಭವಿಸುತ್ತೇವೆ. ಆದರೆ ಆ ಶರೀರವು ಯಾವುದು ಎಂಬುದಕ್ಕೆ ನಾವು ಉತ್ತರಿಸಲಾರೆವು. ಪ್ರಾಣಿಯು ಸತ್ತಮೇಲೆ ಸ್ವಪ್ನಶರೀರದಂತೆಯೇ ಒಂದು ಶರೀರವು ಅದಕ್ಕೆ ಪ್ರಾಪ್ತವಾಗುತ್ತದೆ. ಸ್ವಪ್ನ ಶರೀರದಲ್ಲಿ ಸಜೀವನಾಗಿರುವಂತೆ ಅನ್ಯಶರೀರಕ್ಕೆ ಹೋಗುವಾಗಲೂ ಪ್ರಾಣಸಹಿತನಾಗಿಯೇ ಹೋಗುತ್ತಾನೆ. ('ಹಿತ್ವಾ'–ಎಂಬುದಕ್ಕೆ ವ್ಯಾಖ್ಯಾನ

ಕಾರರು–ಧಾರಯಿತ್ವಾ = ಧರಿಸಿ–ಎಂದೇ ಅರ್ಥಮಾಡಿರುತ್ತಾರೆ. ಶ್ರುತಿ ವಾಕ್ಯವೂ ಇದನ್ನೇ ಹೇಳುತ್ತದೆ. **ತಮುತ್ಕ್ರಾಮನ್ತಂ ಪ್ರಾಣೋನೂತ್ಕ್ರಾಮತಿ । ಪ್ರಾಣಮನೂತ್ಕ್ರಾಮನ್ತಂ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ।** ) ಲೋಕಾಂತರಕ್ಕೆ ಜೀವನು ಪ್ರಾಣಸಹಿತನಾಗಿಯೇ ಹೋಗುತ್ತಾನೆ. ಆದರೆ ಸೂಕ್ಷ್ಮಶರೀರದಲ್ಲಿರುತ್ತಾನೆ. ಆ ಶರೀರದಲ್ಲಿ ಕೇವಲ ಪುಣ್ಯ-ಪಾಪಗಳ ಫಲವಿರುತ್ತದೆ. ಪಾಪ-ಪುಣ್ಯಫಲಗಳಿಂದ ಕೂಡಿದ ಜೀವನು ಗಾಳಿಯಲ್ಲಿ ಚಲಿಸುತ್ತಿರುತ್ತಾನೆ. ಜೀವನ ಕರ್ಮಫಲಾನುಸಾರವಾಗಿ ಲೋಕಗಳಲ್ಲಿ ಅವನಿಗೆ ಸ್ಥಾನವೊಂದು ಕಲ್ಪಿತವಾಗಿರುತ್ತದೆ. ಆ ಸ್ಥಾನವು ಸಿಕ್ಕುವವರೆಗೂ ಅವನು ಗಾಳಿಯಲ್ಲಿ ಅಲೆಯುತ್ತಿರುತ್ತಾನೆ. ಸಾವಿರಾರು ಹಸುಗಳಿದ್ದರೂ ಕರುವು ತನ್ನ ತಾಯಿಯನ್ನೇ ಹುಡುಕಿ ಅದರೊಡನೆ ಸೇರಿಕೊಳ್ಳುವಂತೆ–ತನ್ನ ಪಾಪ-ಪುಣ್ಯಫಲಗಳಿಂದ ಆವೃತನಾದ ಜೀವನು ಅವನಿಗೆ ನಿಯತವಾದ ಸ್ಥಾನಕ್ಕೇ ಹೋಗಿ ಸೇರಿಕೊಳ್ಳುತ್ತಾನೆ.

ಪುಣ್ಯಕರ್ಮಗಳನ್ನು ಮಾಡಿದವರು ಪುಣ್ಯಯೋನಿಗಳಲ್ಲಿ ( ಪುಣ್ಯಾತ್ಮರಾಗಿ ) ಜನ್ಮತಾಳುತ್ತಾರೆ. ಪಾಪಕರ್ಮಗಳನ್ನು ಮಾಡಿದವರು ಪಾಪಿಷ್ಠರಾಗಿ ಜನ್ಮತಾಳುತ್ತಾರೆ. ಬಹಳ ಪಾಪಿಷ್ಠರಾದವರು ಹುಳುಗಳಾಗಿಯೂ, ಪತಂಗಗಳಾಗಿಯೂ, ನಾಲ್ಕು ಕಾಲುಗಳುಳ್ಳ ಪ್ರಾಣಿಗಳಾಗಿಯೂ, ಎರಡು ಕಾಲುಗಳುಳ್ಳ ಪ್ರಾಣಿಗಳಾಗಿಯೂ, ಆರು ಕಾಲುಗಳುಳ್ಳ ಪ್ರಾಣಿಗಳಾಗಿಯೂ ಜನ್ಮತಾಳುತ್ತಾರೆ. (ಶ್ರುತಿವಾಕ್ಯವೂ ಇದನ್ನೇ ಪ್ರತಿಪಾದಿಸುತ್ತದೆ. **ಅನ್ಯಂ ನವತರಂ ಕಲ್ಯಾಣತರಂ ರೂಪಂ ಕುರುತೇ । ಪಿತ್ರ್ಯಂ ವಾ ಗಾನ್ಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾ ॥**

ಹೆಚ್ಚು ಪುಣ್ಯವಂತನು ನವನೂತನವಾಗಿಯೂ ಮಂಗಳಕರವಾಗಿಯೂ ಇರುವ ರೂಪವನ್ನು ಹೊಂದುತ್ತಾನೆ. ಪಿತೃ-ಗಂಧರ್ವ-ದೇವ-ಪ್ರಾಜಾಪತ್ಯ-ಬ್ರಹ್ಮಲೋಕಗಳಿಗೆ, ತನ್ನ ಪುಣ್ಯಕ್ಕೆ ಅನುಗುಣವಾಗಿ ಮತ್ತು ಅನುಕ್ರಮವಾಗಿ ಹೋಗುತ್ತಾನೆ.

**ರಮಣೀಯಾಚರಣಾ ಅಭ್ಯಾಶೋಹಯತ್ತೇ ರಮಣೀಯಾಂ ಯೋನಿಂ ಪ್ರತಿಪದ್ಯನ್ತೇ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾ** - ಸುಂದರವಾದ ಅಥವಾ ಸ್ವಚ್ಛವಾದ ಆಚರಣೆ

ಯುಳ್ಳವರು ( ಪುಣ್ಯವಂತರು ) ಈ ಲೋಕದಲ್ಲಿ ಸುಂದರವಾದ ( ಪರಿಶುದ್ಧ ವಾದ ) ಬ್ರಹ್ಮಯೋನಿ ಅಥವಾ ಕ್ಷತ್ರಿಯ-ವೈಶ್ಯಯೋನಿಗಳಲ್ಲಿ ಹುಟ್ಟುತ್ತಾರೆ. **ಪಾಪಕೃತೋ ನಾರಕೀಂ ಯೋನಿಂ ಭುಕ್ತ್ವಾ ಕಪೂಯಾಚರಣಾಃ ಕಪೂಯಾಂ ಯೋನಿಮಾಪದ್ಯನ್ತೇ ಶ್ವಯೋನಿಂ ವಾ ಸೂಕರಯೋನಿಂ ಚಣ್ಡಾಲಯೋನಿಂ ವಾ ।** ಕುತ್ಸಿತವಾದ ಆಚರಣೆಗಳುಳ್ಳ ಪಾಪಿಷ್ಠರು ನರಕದ ಕಷ್ಟಗಳನ್ನು ಅನು ಭವಿಸಿ ನಾಯಿ-ಹಂದಿ-ಚಂಡಾಲ–ಇವೇ ಮುಂತಾದ ಕುತ್ಸಿತಯೋನಿಗಳಲ್ಲಿ ಹುಟ್ಟುತ್ತಾರೆ.)

ಯಯಾತಿಯು ಅಷ್ಟಕನಿಗೆ ಹೇಳುತ್ತಾನೆ :

"ರಾಜಸಿಂಹ! ಹೇಳಬೇಕಾದುದೆಲ್ಲವನ್ನೂ ಹೇಳಿರುವೆನು. ಪುನಃ ಮತ್ತೇನನ್ನಾದರೂ ಕೇಳಬೇಕಾದುದಿದೆಯೇ? ( ಅವರವರ ಕರ್ಮಫಲಗಳೇ ಅವರನ್ನು ತಕ್ಕುದಾದ ಸ್ಥಾನಗಳಲ್ಲಿ ನಿಕ್ಷೇಪಿಸುತ್ತವೆ. ಭತ್ತದ ಯಂತ್ರವು ಭತ್ತದ ಕಾಳನ್ನು ಸುಲಿದು ಅದರ ಹೊಟ್ಟು, ತೌಡು, ನುಚ್ಚು, ಉಂಡೆ, ಕಾಳುಗಳನ್ನು ಪ್ರತ್ಯೇಕಿಸಿ ಅದರದರ ಸ್ಥಾನಗಳಲ್ಲಿ ನಿಕ್ಷೇಪಿಸುವಂತೆ ಕರ್ಮವೆಂಬ ಮಹಾಯಂತ್ರವು ತನ್ನ ಹಿಡಿತಕ್ಕೆ ಸಿಕ್ಕಿಕೊಳ್ಳುವ ಜೀವಕೋಟಿಯನ್ನು ಪ್ರತ್ಯೇಕಿಸಿ ಅವರವರ ಕರ್ಮಫಲಾನುಸಾರವಾಗಿ ಸ್ಥಾನವನ್ನು ಕಲ್ಪಿಸಿಕೊಡುವ ಸಾಮರ್ಥ್ಯವನ್ನು ಪಡೆದಿದೆ. )"

ಅಷ್ಟಕ :–

**ಕಿಂಸ್ವಿತ್ಕೃತ್ವಾ ಲಭತೇ ತಾತ ಲೋಕಾ–**
**ನ್ಮರ್ತ್ಯಃ ಶ್ರೇಷ್ಠಾಂಸ್ತಪಸಾ ವಿದ್ಯಯಾ ವಾ ।**
**ತನ್ಮೇ ಪೃಷ್ಟಃ ಶಂಸ ಸರ್ವಂ ಯಥಾವ–**
**ಚ್ಛುಭಾಲ್ಲೋಕಾನ್ಯೇನ ಗಚ್ಛೇತ್ಕ್ರಮೇಣ ॥೨೧॥**

"ತಾತ! ಮನುಷ್ಯನು ಯಾವ ಪುಣ್ಯಕರ್ಮಗಳನ್ನು ಮಾಡಿ ಪುಣ್ಯ ಲೋಕಗಳನ್ನು ಪಡೆಯುತ್ತಾನೆ? ಮಾನವನು ವಿದ್ಯಾರ್ಜನೆಯಿಂದ ಉತ್ತಮಲೋಕಗಳನ್ನು ಹೊಂದಬಲ್ಲನೇ? ಅಥವಾ ತಪಸ್ಸಿನಿಂದ ಪುಣ್ಯ ಲೋಕಗಳು ಪ್ರಾಪ್ತವಾಗುವುವೇ? ಅನುಕ್ರಮವಾಗಿ ಪುಣ್ಯಲೋಕಗಳನ್ನು ಪಡೆಯಬೇಕಾದರೆ ಯಾವ ಮಾರ್ಗವನ್ನು ಅನುಸರಿಸಬೇಕು? ಈ ವಿಷಯ ಗಳೆಲ್ಲವನ್ನೂ ವಿಸ್ತಾರವಾಗಿ ಹೇಳು."

ಯಯಾತಿ :–

ತಪಶ್ಚ ದಾನಂ ಚ ಶಮೋ ದಮಶ್ಚ
ಹ್ರೀರಾರ್ಜವಂ ಸರ್ವಭೂತಾನುಕಮ್ಪಾ ।
ಸ್ವರ್ಗಸ್ಯ ಲೋಕಸ್ಯ ವದನ್ತಿ ಸನ್ತೋ
ದ್ವಾರಾಣಿ ಸಪ್ತೈವ ಮಹಾನ್ತಿ ಪುಂಸಾಮ್ ।
ನಶ್ಯನ್ತಿ ಮಾನೇನ ತಮೋಽಭಿಭೂತಾಃ
ಪುಂಸಃ ಸದೈವೇತಿ ವದನ್ತಿ ಸನ್ತಃ ॥೨೨॥

"ರಾಜಸಿಂಹ! ಸ್ವರ್ಗದ ಪ್ರಾಪ್ತಿಗೆ ಏಳು ಮಾರ್ಗಗಳಿವೆಯೆಂದು ಸತ್ಪುರುಷರು ಹೇಳುತ್ತಾರೆ. ತಪಸ್ಸು, ದಾನ, ಶಮ, ದಮ, ಲಜ್ಜೆ, ಋಜುತ್ವ ಮತ್ತು ಸರ್ವಭೂತಾನುಕಂಪ–ಈ ಏಳೂ ಸ್ವರ್ಗದ ಬಾಗಿಲುಗಳು. ಈ ಏಳರಲ್ಲಿ ಯಾವುದೊಂದರ ಮೂಲಕವಾಗಿಯಾದರೂ ಸ್ವರ್ಗಕ್ಕೆ ಹೋಗ ಬಹುದು. ಆದರೆ ಈ ಏಳು ವಿಧವಾದ ಮಾರ್ಗವನ್ನು ಅನುಸರಿಸುವವರಿಗೆ ಅಹಂಭಾವವಿರಬಾರದು. ಅಹಂಕಾರವೆಂಬುದೇ ಒಂದು ಗಾಢಾಂಧಕಾರ. ಯಾವುದೇ ಮಾರ್ಗವನ್ನೇ ಅನುಸರಿಸಿದರೂ ಈ ಗಾಢಾಂಧಕಾರದಲ್ಲಿ ಸಿಕ್ಕಿ ಕೊಂಡವರಿಗೆ ಮುಂದಿನ ಹಾದಿಯು ಖಂಡಿತವಾಗಿಯೂ ಕಾಣುವುದಿಲ್ಲ. ಮದಾಂಧರಾದವರು ಬಹಳ ಬೇಗ ವಿನಾಶಹೊಂದುತ್ತಾರೆ. ತಪಸ್ಸು ಮೊದ ಲಾದುವು ಮನುಷ್ಯನ ಅಹಂಕಾರದಿಂದ ಒಡನೆಯೇ ವಿನಾಶಹೊಂದುವು ದೆಂಬುದು ಸತ್ಪುರುಷರ ಅಭಿಪ್ರಾಯವಾಗಿದೆ.

ಅಧೀಯಾನಃ ಪಣ್ಡಿತಂ ಮನ್ಯಮಾನೋ
ಯೋ ವಿದ್ಯಯಾ ಹನ್ತಿ ಯಶಃ ಪರೇಷಾಮ್ ।
ತಸ್ಯಾನ್ತವನ್ತಶ್ಚ ಭವನ್ತಿ ಲೋಕಾ
ನ ಚಾಸ್ಯ ತದ್ಬ್ರಹ್ಮ ಫಲಂ ದದಾತಿ ॥೨೩॥

ವಿದ್ಯೆಗೆ ತಕ್ಕ ವಿನಯವಿರಬೇಕೆಂಬುದು ನೀತಿಯೇ ಹೊರತು ಸಾಮಾನ್ಯ ವಾಗಿ ನಡವಳಿಕೆಯಲ್ಲಿರುವುದಿಲ್ಲ. ಮನುಷ್ಯನಿಗೆ ವಿದ್ಯಾಸಂಪತ್ತು ಹೆಚ್ಚಿ ದಂತೆಲ್ಲಾ ದುರಭಿಮಾನವೂ ಹೆಚ್ಚುತ್ತಾ ಹೋಗುವುದುಂಟು. ಯಾವನು ವಿದ್ಯೆಯನ್ನು ಕಲಿತಿರುವುದಕ್ಕಾಗಿಯೇ ಅಹಂಕಾರಪಡುವನೋ, ಇತರರು

ಬಹಳ ಕಷ್ಟದಿಂದ ಗಳಿಸಿರುವ ಯಶಸ್ಸನ್ನು ತನ್ನ ವಿದ್ಯೆಯಿಂದ ಹರಣಮಾಡಲು ಪ್ರಯತ್ನಿಸುವನೋ–ಅಂತಹವನಿಗೆ ಶಾಶ್ವತವಾದ ಪುಣ್ಯಲೋಕಗಳು ಖಂಡಿತವಾಗಿಯೂ ಸಿಕ್ಕಲಾರವು. ಬ್ರಹ್ಮವಿದ್ಯೆಯನ್ನು ಅಧ್ಯಯನ ಮಾಡಿದ್ದರಿಂದಲೇ ಅವನಿಗೆ ಪೂರ್ಣಫಲವು ಸಿಕ್ಕುವುದಿಲ್ಲ. ಸಾಧನೆಯ ಹೊರತಾಗಿ ಬ್ರಹ್ಮವಸ್ತುವಿನ ದರ್ಶನವಾಗುವುದಿಲ್ಲ.

**ಚತ್ವಾರಿ ಕರ್ಮಾಣ್ಯಭಯಂಕರಾಣಿ**
**ಭಯಂ ಪ್ರಯಚ್ಛನ್ತ್ಯಯಥಾಕೃತಾನಿ ।**
**ಮಾನಾಗ್ನಿಹೋತ್ರಮುತ ಮಾನಮೌನಂ**
**ಮಾನೇನಾಧೀತಮುತ ಮಾನಯಜ್ಞಃ ॥೨೪॥**

ರಾಜಸಿಂಹ! ನಾಲ್ಕು ಕರ್ಮಗಳು ಕರ್ತೃವಿಗೆ ಯಾವಾಗಲೂ ಕೇಳಿ ದುವುಗಳನ್ನು ಕೊಡುತ್ತವೆ. ಯಾವಾಗಲೂ ಅವನ ರಕ್ಷಣೆಯಲ್ಲಿಯೇ ಜಾಗ ರೂಕವಾಗಿದ್ದು ಅಭಯಪ್ರದಾನಮಾಡುತ್ತಿರುತ್ತವೆ. ಆದರೆ ಆ ನಾಲ್ಕು ಕರ್ಮಗಳನ್ನೂ ಅಹಂಭಾವವನ್ನು ತೊರೆದು ಮಾಡಬೇಕು. ಅಹಂಭಾವ ವನ್ನಿಟ್ಟುಕೊಂಡು ಕರ್ಮಗಳನ್ನು ಮಾಡಿದರೆ ಅಭಯಂಕರಗಳಾದ ಅದೇ ಕರ್ಮಗಳು ಕರ್ತೃವಿಗೆ ಭಯವನ್ನುಂಟುಮಾಡುತ್ತವೆ. ಅಗ್ನಿಹೋತ್ರ, ಮೌನ, ಅಧ್ಯಯನ, ಯಜ್ಞ–ಇವುಗಳೇ ಉತ್ಕೃಷ್ಟವಾದ ನಾಲ್ಕು ಕರ್ಮಗಳು.

[ಮಾನಕ್ಕಾಗಿ, ಇತರರನ್ನು ಮೆಚ್ಚಿಸುವ ಸಲುವಾಗಿ, ದಾಂಭಿಕವಾಗಿ ಅಗ್ನಿಹೋತ್ರವನ್ನು ಮಾಡಬಾರದು. ಯಾವುದೇ ವಿಧವಾದ ದಂಭಾಚಾರ, ಆಡಂಬರಗಳೂ ಇಲ್ಲದೇ ಸ್ವಾತ್ಮೋನ್ನತಿಗಾಗಿ ಅಗ್ನಿಹೋತ್ರವನ್ನು ಮಾಡಬೇಕು.

ಕೇವಲ ಮಾತನಾಡದಿರುವುದರಿಂದ ಮೌನಿಯಾಗಲಾರನು. ಮನ ಸ್ಸನ್ನೂ ಮೌನಗೊಳಿಸಬೇಕು. ಬಾಯಲ್ಲಿ ಮಾತ್ರ ಮಾತನಾಡದೇ ಮನಸ್ಸನ್ನು ಅದು ಹೋದೆಡೆಗೆ ಬಿಡುವುದು ಮೌನವ್ರತವೆನಿಸುವುದಿಲ್ಲ. ಬಾಯಲ್ಲಿ ಮಾತ್ರ ಮಾತನಾಡದೇ ಕೈಬರವಣಿಗೆ, ಕೈಸನ್ನೆಗಳನ್ನು ಮಾಡುವುದೂ ಮೌನವ್ರತವೆನಿಸುವುದಿಲ್ಲ. ಮನಶ್ಚಾಪಲ್ಯದ ಗತಿಯನ್ನು ಸಂಪೂರ್ಣವಾಗಿ ನಿರೋಧಿಸಿ, ಹೃತ್ಕಮಲದಲ್ಲಿರುವ ಪರಮಾತ್ಮನ ಬಳಿಗೆ ಒಯ್ಯುವುದು ಮೌನವ್ರತವೆನಿಸುವುದು. ಬಾಯಲ್ಲಿ ಮಾತ್ರ ಮಾತನಾಡದೇ ಕೈಕರಣ-

ಕೈಸನ್ನೆಗಳಿಂದ ಲೋಕವ್ಯವಹಾರಗಳಲ್ಲಿ ಆಸಕ್ತನಾಗಿ ಮೌನವ್ರತವನ್ನಾಚರಿಸು ವುದು ದಾಂಭಿಕವೆನಿಸುತ್ತದೆ. ಇಂತಹ ಮೌನವ್ರತದಿಂದ ಯಾವ ಸಾಧನೆಯೂ ಆಗಲಾರದು. (ಮೌನ = ಮನನಶೀಲನಾಗಿರುವಿಕೆ.)

ವಿದ್ಯೆಯನ್ನು ಕಲಿಯುವುದು ಅಹಂಭಾವದ ದಮನಕ್ಕಾಗಿ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳ ನಿಜಸ್ವರೂಪವೇನೆಂಬುದು ವಿದ್ಯಾವಂತನಿಗೆ ಚೆನ್ನಾಗಿ ತಿಳಿದಿರುತ್ತದೆ.

ಯಜ್ಞವನ್ನು ಮಾಡುವುದೂ ಮನುಷ್ಯನಿಗೆ ಅಭಯಂಕರವಾದ ಒಂದು ಶ್ರೇಷ್ಠಕರ್ಮ. ಸ್ವರ್ಗಕಾಮನಾದವನು ಯಜ್ಞಮಾಡಿ ಸ್ವರ್ಗವನ್ನೂ ಪಡೆಯಬಹುದು. ಆದರೆ ಇತರರ ( ಶತ್ರುಗಳ ) ವಿನಾಶಕ್ಕಾಗಿ ಯಜ್ಞಮಾಡ ಬಾರದು. ಯದ್ಯಪಿ ಶತ್ರುಗಳ ವಿನಾಶಕ್ಕೆಂದು ಯಜ್ಞಮಾಡಿದರೆ ಶತ್ರುಗಳ ವಿನಾಶವಾಗುವುದು ನಿಶ್ಚಯವಾದರೂ—ಶತ್ರುಗಳನ್ನು ಕ್ಷತ್ರಿಯಧರ್ಮಾನು ಸಾರವಾಗಿ ಯುದ್ಧಮಾಡಿಯೇ ವಿನಾಶಮಾಡಬೇಕು. ಯಜ್ಞ-ಯಾಗಾದಿಗಳ ಮೂಲಕ ಶತ್ರುವಿನಾಶಕ್ಕೆ ಪ್ರಯತ್ನಿಸಬಾರದು. ಆತ್ಮೋದ್ಧಾರಕ್ಕಾಗಿ ಮಾತ್ರವೇ ಯಜ್ಞಮಾಡಬೇಕು. ಇತರರ ನಿಕೃತಿಗಾಗಿ ಯಜ್ಞಮಾಡುವುದರಿಂದ ಸದ್ಯಃಫಲವು ಕಂಡುಬಂದರೂ ಕಡೆಯಲ್ಲಿ ಇಂತಹ ಕ್ರಿಯೆಗಳೇ ದುಷ್ಪರಿ ಣಾಮಗಳನ್ನುಂಟುಮಾಡುತ್ತವೆ.]

**ನ ಮಾನಮಾನ್ಯೋ ಮುದಮಾದದೀತ**
**ನ ಸಂತಾಪಂ ಪ್ರಾಪ್ನುಯಾಚ್ಚಾವಮಾನಾತ್ ।**
**ಸನ್ತಃ ಸತಃ ಪೂಜಯನ್ತೀಹ ಲೋಕೇ**
**ನಾಸಾಧವಃ ಸಾಧುಬುದ್ಧಿಂ ಲಭನ್ತೇ ॥೨೫॥**

ಅಷ್ಟಕ! ಯಾರೋ ಕೆಲವರು ಇಂದು ನಮ್ಮನ್ನು ಯಾವುದೋ ಕಾರಣಕ್ಕಾಗಿ ಹೊಗಳಿದರೆಂದು ಹಿಗ್ಗಬಾರದು. ಅಂತೆಯೇ ಇಂದು ನಮ್ಮನ್ನು ಕೆಲವರು ಅವಮಾನಿಸಿದರೆಂದು ಕುಗ್ಗಲೂಬಾರದು. ಲೋಕದಲ್ಲಿ ಮಾನಾಪ ಮಾನಗಳೆರಡೂ ಕ್ಷಣಿಕವಾದುವುಗಳು, ಶಾಶ್ವತವಾಗಿ ಉಳಿಯತಕ್ಕುವುಗಳಲ್ಲ. ಸತ್ಪುರುಷರಾದವರು ಸತ್ಪುರುಷರನ್ನು ಗೌರವಿಸುತ್ತಾರೆಂಬುದು ನಿಜ. ಅದು ಅವರ ಸ್ವಭಾವವೂ ಆಗಿರುತ್ತದೆ. ಅದರಿಂದಾಗಿ ನಾವು ಹಿಗ್ಗುವ ಕಾರಣವಿಲ್ಲ. ದುಷ್ಟಾತ್ಮರಾದವರು ಸಾಧುಬುದ್ಧಿಯುಳ್ಳವರನ್ನು ಅಥವಾ ಸತ್ಪುರುಷರನ್ನು

ಎಂದಿಗೂ ಗೌರವಿಸುವುದಿಲ್ಲ. ಸತ್ಪುರುಷರಲ್ಲಿರುವ ಗುಣಗಳನ್ನೂ ಅವರು ದೋಷವೆಂದೇ ಭಾವಿಸುತ್ತಾರೆ. ಅಥವಾ ಅವರಲ್ಲಿಯೂ ಇರಬಹುದಾದ ಚಿಕ್ಕದೊಂದು ದೋಷವನ್ನೂ ದೊಡ್ಡದನ್ನಾಗಿ ಭಾವಿಸಿ ತೆಗಳುತ್ತಾರೆ. ಇಂತಹ ವರ ತೆಗಳಿಕೆಯಿಂದ ವಿವೇಕಿಯಾದವನು ಕುಗ್ಗಬಾರದು. ಹೀಗಿರುವುದು ನಮ್ಮ ಆತ್ಮೋದ್ಧಾರದ ಹಾದಿಯನ್ನು ಸುಗಮವನ್ನಾಗಿ ಮಾಡುತ್ತದೆ.

**ಇತಿ ದದ್ಯಾಮಿತಿ ಯಜ ಇತ್ಯಧೀಯ ಇತಿ ವ್ರತಮ್ ।**
**ಇತ್ಯೇತಾನಿ ಭಯಾನ್ಯಾಹುಸ್ತಾನಿ ವರ್ಜ್ಯಾನಿ ಸರ್ವಶಃ ॥೨೬॥**

'ನಾನು ಈ ರೀತಿಯಲ್ಲಿ ಅಪಾರವಾದ ಐಶ್ವರ್ಯವನ್ನು ದಾನ ಕೊಟ್ಟೆನು'; 'ನಾನು ಈ ಪ್ರಕಾರ ಯಜ್ಞ-ಯಾಗಾದಿಗಳನ್ನು ಮಾಡಿದೆನು'; 'ನಾನು ಇಷ್ಟೊಂದು ಓದಿದ್ದೇನೆ'; 'ನಾನು ಇಷ್ಟೊಂದು ವ್ರತೋಪವಾಸಗಳನ್ನು ಮಾಡಿದ್ದೇನೆ' – ಹೀಗೆಲ್ಲಾ ಅಹಂಕಾರಪೂರ್ವಕವಾಗಿ ಭಾವಿಸಿಕೊಳ್ಳುವುದು ಭಯಕ್ಕೆ ಕಾರಣವಾಗುತ್ತದೆ. ಇದನ್ನು ಸರ್ವಥಾ ತ್ಯಾಜ್ಯಮಾಡಬೇಕು. (ಮಾಡಿದ ಸತ್ಕಾರ್ಯವನ್ನು 'ನಾನು' ಎಂಬ ದುರಭಿಮಾನಪೂರ್ವಕವಾದ ಪದದೊಡನೆ ಉಚ್ಚರಿಸುವುದರಿಂದ ಅಥವಾ ಮನಸ್ಸಿನಲ್ಲಿಯಾದರೂ ಭಾವಿಸುವುದರಿಂದ ಸತ್ಕಾರ್ಯದ ಫಲವು ಕ್ಷಣ ಮಾತ್ರದಲ್ಲಿ ವಿನಾಶ ಹೊಂದುತ್ತದೆ. ಅಹಂಕಾರವೆಂಬ ಮಹಾಶತ್ರುವಿಗೆ ನಾವು ಮಾಡಿದ ಸತ್ಕಾರ್ಯವನ್ನು ಕ್ಷಣಮಾತ್ರದಲ್ಲಿ ನಿಷ್ಫಲಗೊಳಿಸುವ ಸಾಮರ್ಥ್ಯವಿದೆ. ಆದುದರಿಂದ 'ನಾನು' ಎಂಬುದನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಹೇಳದಿರುವುದು ಮಾತ್ರವೇ ಅಲ್ಲ ; ಮನಸ್ಸಿನಲ್ಲಿಯಾದರೂ– ನಾನು ದಾನಮಾಡಿದೆನು ; 'ನಾನು ಯಜ್ಞಮಾಡಿದೆನು ; ನಾನಿಷ್ಟು ವ್ರತಗಳನ್ನು ಮಾಡಿದೆನು' ;–ಎಂಬ ಭಾವನೆಯೂ ಇರಕೂಡದು.)

**ಯೇ ಚಾಶ್ರಯಂ ವೇದಯನ್ತೇ ಪುರಾಣಂ**
**ಮನೀಷಿಣೋ ಮಾನಸಮಾರ್ಗರುದ್ಧಮ್ ।**
**ತದ್ವಃ ಶ್ರೇಯಸ್ತೇನ ಸಂಯೋಗಮೇತ್ಯ**
**ಪರಾಂ ಶಾನ್ತಿಂ ಪ್ರಾಪ್ನುಯುಃ ಪ್ರೇತ್ಯ ಚೇಹ ॥೨೭॥**

ಮನಸ್ಸಿನ ಮಾರ್ಗವನ್ನು ಪ್ರತಿರೋಧಿಸುವುದರಿಂದ ಅಥವಾ ಮನಸ್ಸಿನ ಸ್ವೇಚ್ಛಾಪ್ರವರ್ತನೆಯನ್ನು ಪ್ರತಿರೋಧಿಸುವುದರಿಂದ ಮಾತ್ರವೇ ಲಭ್ಯನಾಗುವ, ಪುರಾಣಪುರುಷನಾದ, ಚಿನ್ಮಯಬ್ರಹ್ಮನೊಬ್ಬನೇ ಆಶ್ರಯಿಸಲ್ಪಡತಕ್ಕವನೆಂದು ಮನನಶೀಲರಾದ ಯಾವ ತಪಸ್ವಿಗಳು ತಿಳಿದುಕೊಳ್ಳುತ್ತಾರೆಯೋ–ಅಂತಹವರು ಸತತವಾದ ಪ್ರಯತ್ನದಿಂದ ಬ್ರಹ್ಮವಸ್ತುವಿನ ಸಹಯೋಗವನ್ನು ಪಡೆದು, ಇಹದಲ್ಲಿಯೂ ಬ್ರಹ್ಮಾನಂದವನ್ನನುಭವಿಸುತ್ತಾ ಶಾಂತಿಯನ್ನು ಪಡೆಯುತ್ತಾರೆ. ಅವಸಾನಾನಂತರದಲ್ಲಿ ಪುನರಾವೃತ್ತಿರಹಿತವಾದ ಪುಣ್ಯಲೋಕಗಳನ್ನೂ ಪಡೆಯುತ್ತಾರೆ. ಆ ಮಾರ್ಗವೇ ನಿಮಗೂ ಶ್ರೇಯಸ್ಕರವಾದುದು."

(ಈ ಹಿಂದೆ ಯಯಾತಿಯು ಸ್ವರ್ಗಪ್ರಾಪ್ತಿಗೆ ಏಳು ಮಾರ್ಗಗಳನ್ನು ಸೂಚಿಸಿರುತ್ತಾನೆ. ಅನಂತರದಲ್ಲಿ ಅಭಯಂಕರವಾದ ನಾಲ್ಕು ಕರ್ಮಗಳನ್ನು ಸೂಚಿಸಿರುತ್ತಾನೆ. ಕಡೆಯದಾಗಿ ಎಲ್ಲ ಕರ್ಮಗಳಿಗಿಂತಲೂ ಮುಖ್ಯವಾದುದು ಅಥವಾ ಎಲ್ಲ ಕರ್ಮಗಳ ಮುಖ್ಯಧ್ಯೇಯವೂ ಆತ್ಮಸಾಕ್ಷಾತ್ಕಾರವೆಂಬುದನ್ನು ಈ ಶ್ಲೋಕದಲ್ಲಿ ಬಹಳ ಸ್ಪಷ್ಟವಾಗಿಯೇ ಹೇಳಿರುತ್ತಾನೆ. ಹೃತ್ಕಮಲಮಧ್ಯದಲ್ಲಿ ಅಂಗುಷ್ಠಮಾತ್ರನಾದ ಪುರುಷನಿದ್ದಾನೆಂದು ತಿಳಿದು ಮಾನವನು ಅಂತರ್ಮುಖನಾಗುವುದು ಬಹಳ ಕಷ್ಟಸಾಧ್ಯವಾದ ವಿಷಯ. ಹೃತ್ಕಮಲ ಮಧ್ಯದಲ್ಲಿ ಅಂಗುಷ್ಠಮಾತ್ರನಾದ ಪುರುಷನಿದ್ದಾನೆಂದು ವೇದೋಪನಿಷತ್ತುಗಳು ಘೋಷಿಸುತ್ತವೆ. ಆ ಪುರುಷನು ಅಂಗುಷ್ಠಮಾತ್ರವಿದ್ದಾನೆಯೇ? ದೀಪದಂತಿರುವನೇ? ಮುಂತಾಗಿ ವಿದ್ವಾಂಸರು ಆಧಾರಪೂರ್ವಕವಾಗಿ ಚರ್ಚಿಸಲೂಬಹುದು. ಆದರೂ ಇದನ್ನು ಪ್ರತ್ಯಕ್ಷವಾಗಿ ನೋಡಿ ಪ್ರಮಾಣಿಸಿ ಹೇಳಬೇಕೆಂದು ಪ್ರಯತ್ನಿಸುವವರು ಬಹಳ ವಿರಳ.)

೯೦ನೆಯ ಅಧ್ಯಾಯವು ಮುಗಿಯಿತು.

೯೧ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಅಷ್ಟಕ–ಯಯಾತಿಯರ ಸಂವಾದ

ಅಷ್ಟಕನು ಮುಂದೆ ಆಶ್ರಮಧರ್ಮಗಳ ವಿಷಯವಾಗಿ ಪ್ರಶ್ನೆಮಾಡುತ್ತಾನೆ :

**ಚರನ್ಗೃಹಸ್ಥಃ ಕಥಮೇತಿ ಧರ್ಮಾ–**
**ನ್ಕಥಂ ಭಿಕ್ಷುಃ ಕಥಮಾಚಾರ್ಯಕರ್ಮಾ ।**

**ವಾನಪ್ರಸ್ಥಃ ಸತ್ಪಥೇ ಸಂನಿವಿಷ್ಟೋ**
**ಬಹೂನ್ಯಸ್ಮಿನ್ಸಮ್ಪ್ರತಿ ವೇದಯನ್ತಿ ॥೧॥**

"ತಾತ! ವೇದಜ್ಞರಾದವರು ಉತ್ತಮಲೋಕಗಳನ್ನು ಪಡೆಯಲು ನಾನಾವಿಧವಾದ ಕರ್ಮಗಳನ್ನು ಹೇಳುತ್ತಾ ಹೋಗುತ್ತಾರೆ. ಅನೇಕ ವಿಧವಾದ ವ್ರತಗಳನ್ನೂ ಹೇಳುತ್ತಾರೆ. 'ವ್ರತಾನಾಮುತ್ತಮಂ ವ್ರತಂ' ಎಂದು ಪ್ರತಿಯೊಂದು ವ್ರತಕ್ಕೂ ಹೇಳುತ್ತಾರೆ. ಈ ಅಸಂಖ್ಯಾತವ್ರತಗಳಲ್ಲಿ ಮತ್ತು ಕರ್ಮಗಳಲ್ಲಿ ಯಾವುದು ಉತ್ತಮೋತ್ತಮವಾದುದು?–ಎಂದು ನಿರ್ಧರಿಸುವುದೇ ಕಷ್ಟವಾಗಿದೆ. ಆದುದರಿಂದ ಯಾವ ಆಶ್ರಮದವರು ಯಾವ ಕರ್ಮವನ್ನು ಮಾಡಿದರೆ ಉತ್ತಮಲೋಕವು ಪ್ರಾಪ್ತವಾಗುವುದೆಂಬುದನ್ನು ಹೇಳು. ಗೃಹಸ್ಥಾಶ್ರಮದಲ್ಲಿದ್ದುಕೊಂಡು ಯಾವ ಕರ್ಮಗಳನ್ನು ಮಾಡುವುದರಿಂದ ಪುಣ್ಯಲೋಕಗಳನ್ನು ಪಡೆಯುತ್ತಾನೆ? ಅಂತೆಯೇ ಆಚಾರ್ಯರ ಸೇವೆಯಲ್ಲಿಯೇ ನಿರತರಾಗಿರುವ ಬ್ರಹ್ಮಚಾರಿಗಳೂ ಸನ್ಮಾರ್ಗ ದಲ್ಲಿರುವ ವಾನಪ್ರಸ್ಥರೂ ಮತ್ತು ಸಂನ್ಯಾಸಿಗಳೂ ಯಾವ-ಯಾವ ಕರ್ಮ ಗಳನ್ನು ಮಾಡಿ ಧರ್ಮವನ್ನು ಸಂಪಾದಿಸಬಲ್ಲರು? (ಉತ್ತಮ ಲೋಕಗಳನ್ನು ಪಡೆಯಬಲ್ಲರು.) ಎಲ್ಲವನ್ನೂ ವಿಶದವಾಗಿ ಹೇಳು."

**ಆಹೂತಾಧ್ಯಾಯೀ ಗುರುಕರ್ಮಸ್ವಚೋದ್ಯಃ**
**ಪೂರ್ವೋತ್ಥಾಯೀ ಚರಮಂ ಚೋಪಶಾಯೀ ।**
**ಮೃದುರ್ದಾನ್ತೋ ಧೃತಿಮಾನಪ್ರಮತ್ತಃ**
**ಸ್ವಾಧ್ಯಾಯಶೀಲಃ ಸಿಧ್ಯತಿ ಬ್ರಹ್ಮಚಾರೀ ॥೨॥**

"ಅಷ್ಟಕ! ಬ್ರಹ್ಮಚಾರಿಗೆ ಗುರುಶುಶ್ರೂಷೆಯೇ ಉತ್ತಮವಾದ ವ್ರತ. ಬ್ರಹ್ಮಚಾರಿಯಾದವನಿಗೆ ಅದಕ್ಕಿಂತಲೂ ಉತ್ಕೃಷ್ಟವಾದ ಬೇರೆಯ ವ್ರತವೇ ಇರುವುದಿಲ್ಲ. ಬ್ರಹ್ಮಚರ್ಯದಲ್ಲಿರುವಾಗ ಅವನು ಕೆಲವು ನಿಯಮಗಳನ್ನು ಪರಿಪಾಲಿಸಬೇಕು. ಶಿಷ್ಯನು ಯಾವಾಗಲೂ ಗುರುಗಳ ಮನೆಯಲ್ಲಿ ಇದ್ದು ಕೊಂಡು ಭಿಕ್ಷಾನ್ನದಿಂದ ಜೀವಿಸಬೇಕು. ಗುರುಗಳು ಕರೆಯದೆಯೇ ಪಾಠಕ್ಕೆ ಹೋಗಬಾರದು. ಗುರುಗಳು ಸೌಮನಸ್ಯದಿಂದ ಕರೆದ ವೇಳೆಯಲ್ಲಿ ಪಾಠಕ್ಕೆ ಹೋಗಬೇಕು. ಆದರೆ ಗುರುಗಳಿಗೆ ಮಾಡಬೇಕಾದ ಶುಶ್ರೂಷೆಯನ್ನು ಹೇಳಿಸಿಕೊಳ್ಳದೆಯೇ ಮಾಡಬೇಕು. ಗುರುಗಳು ಏಳುವುದಕ್ಕಿಂತಲೂ

ಮೊದಲೇ ಏಳಬೇಕು. ರಾತ್ರಿಯ ವೇಳೆಯಲ್ಲಿ ಗುರುಗಳು ಮಲಗಿದನಂತರ ಶಿಷ್ಯನು ಮಲಗಲು ಹೋಗಬೇಕು. ಮೃದುಸ್ವಭಾವದವನಾಗಿರಬೇಕು. ಕಠಿನ ವಾದ ಪ್ರಕೃತಿಯಿರಕೂಡದು. ಯಾರ ಮೇಲೆಯೂ ಯಾವ ಕಾರಣದಿಂದಲೂ ಕೋಪಿಸಿಕೊಳ್ಳಬಾರದು. ಜಿತೇಂದ್ರಿಯನಾಗಿರಬೇಕು. ಸರ್ವದಾ ಅಧ್ಯಯನ ಶೀಲನಾಗಿರಬೇಕು. ಕ್ಷಣಕಾಲವನ್ನೂ ವ್ಯರ್ಥಮಾಡದೇ ವಿದ್ಯಾರ್ಜನೆಯನ್ನು ಮಾಡುತ್ತಿರಬೇಕು. ಈ ನಿಯಮದಿಂದಿರುತ್ತಾ ವಿದ್ಯೆಯನ್ನು ಕಲಿತರೆ ಮುಂದೆ ಮಹಾಧಾರ್ಮಿಕನಾಗುತ್ತಾನೆ. ಇಂತಹವನಿಗೆ ಎಲ್ಲ ವಿದ್ಯೆಗಳೂ ಸಿದ್ಧಿಸುವುವು.

**ಧರ್ಮಾಗತಂ ಪ್ರಾಪ್ಯ ಧನಂ ಯಜೇತ**
**ದದ್ಯಾತ್ಸದೈವಾತಿಥೀನ್ಭೋಜಯೇಚ್ಚ ।**
**ಅನಾದದಾನಶ್ಚ ಪರೈರದತ್ತಂ**
**ಸೈಷಾ ಗೃಹಸ್ಥೋಪನಿಷತ್ಪುರಾಣೀ ॥೩॥**

ಬಹುಪುರಾತನವಾದ ಗೃಹಸ್ಥಧರ್ಮದ ರಹಸ್ಯಮಯವಾದ ಸ್ವರೂಪವು ಹೀಗಿದೆ : ಧರ್ಮವಿಹಿತವಾದ ಮಾರ್ಗದಲ್ಲಿ ಅರ್ಜಿಸಿದ ಹಣದಿಂದಲೇ ಯಜ್ಞ-ಯಾಗಾದಿಗಳನ್ನು ಮಾಡಬೇಕು. ದಾನಮಾಡಬೇಕು ಮತ್ತು ಆಗಮಿಸಿದ ಅತಿಥಿ-ಅಭ್ಯಾಗತರಿಗೆ ಭೋಜನವಿಟ್ಟು ಸತ್ಕರಿಸಬೇಕು. ಅದತ್ತವಾದ (ಕೈಯೆತ್ತಿ ಕೊಡಲ್ಪಡದ) ಇತರರ ವಸ್ತುಗಳನ್ನು ಉಪಯೋಗಿಸಿ ಕೊಳ್ಳಬಾರದು. ಇದಿಷ್ಟು ಗೃಹಸ್ಥನು ಅನುಸರಿಸಬೇಕಾದ ಸಾಮಾನ್ಯ ನಿಯಮಗಳು.

**ಸ್ವವೀರ್ಯಜೀವೀ ವೃಜಿನಾನ್ನಿವೃತ್ತೋ**
**ದಾತಾ ಪರೇಭ್ಯೋ ನ ಪರೋಪತಾಪೀ ।**
**ತಾದೃಙ್ಮುನಿಃ ಸಿದ್ಧಿಮುಪೈತಿ ಮುಖ್ಯಾಂ**
**ವಸನ್ನರಣ್ಯೇ ನಿಯತಾಹಾರಚೇಷ್ಟಃ ॥೪॥**

ಮುನಿಯಾದವನು ( ವಾನಪ್ರಸ್ಥನು ) ಇತರರಿಂದ ಭಿಕ್ಷೆಯನ್ನು ಬೇಡ ಬಾರದು. ಅರಣ್ಯದಲ್ಲಿ ವಾಸಮಾಡಬೇಕು. ಅರಣ್ಯದಲ್ಲಿರುವ ಗೆಡ್ಡೆ-ಗೆಣಸು ಗಳನ್ನು ಸ್ವಪ್ರಯತ್ನದಿಂದಲೇ ತಂದು ಭುಂಜಿಸಬೇಕು. ಯಾವ ವಿಧವಾದ ಪಾಪಕಾರ್ಯಗಳನ್ನೂ ಮಾಡಬಾರದು. ಪ್ರಾಣಿಹಿಂಸೆಯನ್ನು ಮಾಡ

ಬಾರದು. ಸ್ವಶಕ್ತಿಯಿಂದ ತಂದ ಆಹಾರದಲ್ಲಿಯೇ ಇತರರಿಗೂ ಸ್ವಲ್ಪಭಾಗವನ್ನು ಕೊಟ್ಟು ತಾನೂ ಭುಂಜಿಸಬೇಕು. ಇತರರಿಗೆ ಯಾವ ಕಾರಣದಿಂದಲೂ ತೊಂದರೆಯನ್ನು ಕೊಡಬಾರದು. ನಿಯತಾಹಾರ-ವಿಹಾರನಾಗಿರಬೇಕು. ವ್ಯರ್ಥವಾಗಿ ಕಾಲಹರಣಮಾಡದೇ ಹೆಚ್ಚುಕಾಲ ಧ್ಯಾನದಲ್ಲಿಯೇ ಕಳೆಯಬೇಕು. ಇಂತಹವನು 'ಮುನಿ' ಎನಿಸಿಕೊಳ್ಳುವನು. ಈ ನಿಯಮ ದಿಂದಿದ್ದರೆ ಒಳ್ಳೆಯ ಲೋಕಗಳು ಲಭಿಸುತ್ತವೆ.

**ಅಶಿಲ್ಪಜೀವೀ ಗುಣವಾಂಶ್ಚೈವ ನಿತ್ಯಂ**
**ಜಿತೇನ್ದ್ರಿಯಃ ಸರ್ವತೋ ವಿಪ್ರಯುಕ್ತಃ ।**
**ಅನೋಕಶಾಯೀ ಲಘುರಲ್ಪಪ್ರಚಾರ-**
**ಶ್ಚರನ್ದೇಶಾನೇಕಚರಃ ಸ ಭಿಕ್ಷುಃ ॥೫॥**

ಜೀವಿಕೆಗಾಗಿ ಯಾವ ವೃತ್ತಿಯನ್ನೂ ಅವಲಂಬಿಸಿರಬಾರದು. ಸರ್ವ ಸದ್ಗುಣಸಂಪನ್ನನಾಗಿರಬೇಕು. ಜಿತೇಂದ್ರಿಯನಾಗಿರಬೇಕು. ಪ್ರಾಪಂಚಿಕ ವ್ಯವಹಾರಗಳಲ್ಲಿ ವಿರಕ್ತನಾಗಿರಬೇಕು. ಗೃಹಸ್ಥರ ಮನೆಗಳಲ್ಲಿ ಮಲಗಬಾರದು. ಮಲಗುವ ಸ್ಥಳವು ನಿಯತವಾಗಿರಕೂಡದು. ದೇವಸ್ಥಾನ, ಚಾವಡಿ, ಮರದಡಿಗಳಲ್ಲಿ ಮಲಗಬೇಕು. ತನ್ನದೆಂಬ ಪದಾರ್ಥವೇನೂ ಇರಬಾರದು. ಸ್ವಲ್ಪ-ಸ್ವಲ್ಪದೂರ ಪ್ರಯಾಣಮಾಡುತ್ತಲೇ ಇರಬೇಕು. ಒಂದು ಜಾಗದಲ್ಲಿ ಒಂದು ದಿನಕ್ಕಿಂತಲೂ ಹೆಚ್ಚುಕಾಲ ತಂಗಬಾರದು. ಇದೇ ರೀತಿಯಲ್ಲಿ ಪ್ರಪಂಚಪರ್ಯಟನವನ್ನು ಮಾಡಬೇಕು. ಇಂತಹವನು 'ಭಿಕ್ಷು' ಎಂದು ಕರೆಯಲ್ಪಡುತ್ತಾನೆ.

**ರಾತ್ರ್ಯಾ ಯಯಾ ವಾಭಿಜಿತಾಶ್ಚ ಲೋಕಾ**
**ಭವನ್ತಿ ಕಾಮಾಭಿಜಿತಾಃ ಸುಖಾಶ್ಚ ।**
**ತಾಮೇವ ರಾತ್ರಿಂ ಪ್ರಯತೇತ ವಿದ್ವಾ-**
**ನರಣ್ಯಸಂಸ್ಥೋ ಭವಿತುಂ ಯತಾತ್ಮಾ ॥೬॥**

ಕಾಮೋಪಭೋಗಗಳನ್ನು ಅನುಭವಿಸುವ ಸಾಮರ್ಥ್ಯವಿರಬೇಕು. ಅಂತಹ ಉತ್ತಮಸ್ಥಿತಿಯಲ್ಲಿರುವಾಗ ಪ್ರಾಪಂಚಿಕವಾದ ಸುಖೋಪಭೋಗ ಗಳು ಅಶಾಶ್ವತಗಳೆಂದು ಅನುಭವದಿಂದಲೂ ಮತ್ತು ವೇದ-ಶಾಸ್ತ್ರಗಳ

ಅಧ್ಯಯನದಿಂದಲೂ ಮನಗಂಡು ಸುಖೋಪಭೋಗಗಳ ಮತ್ತು ಐಶ್ವರ್ಯದ ಪರಿತ್ಯಾಗಕ್ಕೆ ಸಂಕಲ್ಪಿಸಬೇಕು. ಪ್ರಾಪಂಚಿಕಸೌಖ್ಯದ ಪರಿಮಿತಿಯಿಷ್ಟೇ ಎಂಬುದನ್ನು ಯಾವ ರಾತ್ರಿಯಲ್ಲಿ ಜಿಜ್ಞಾಸುವು ತಿಳಿದುಕೊಳ್ಳುವನೋ, ಇನ್ನೂ ಹತ್ತಾರು ವರ್ಷಗಳು ಸಾಂಸಾರಿಕಸುಖದಲ್ಲಿದ್ದು ಅಪಾರವಾದ ಐಶ್ವರ್ಯವನ್ನೂ ಗಳಿಸುತ್ತಾ ಹೋಗುವುದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಕಂಡುಕೊಳ್ಳುವನೋ–ಅಂದಿನ ರಾತ್ರಿಯೇ ಜಿತೇಂದ್ರಿಯನಾದವನು, ವಿದ್ವಾಂಸನಾದವನು ಮನೆ-ಮಠ-ಹೆಂಡತಿ- ಮಕ್ಕಳು-ಐಶ್ವರ್ಯ ಎಲ್ಲವನ್ನೂ ಪರಿತ್ಯಜಿಸಿ ಕಾಡಿಗೆ ಹೊರಟುಬಿಡಬೇಕು. ಕಾಡಿಗೆ ಹೋಗಿ ಮುನಿಯಾಗಲು ನಿರ್ಧರಿಸಿಬಿಡಬೇಕು. ಒಂದು ದಿನ ಮುಂದಕ್ಕೆ ತಳ್ಳಿದರೂ ಇಲ್ಲ-ಸಲ್ಲದ ಬಂಧನಗಳು ಮನುಷ್ಯನನ್ನು ಕಟ್ಟಿಹಾಕಿ ಬಿಡುತ್ತವೆ. '**ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್**– ಎಂದಿನ ದಿನ ಸಂಸಾರದಲ್ಲಿ ವಿರಾಗವುಂಟಾಗುತ್ತದೆಯೋ–ಅಂದಿನ ದಿನವೇ ಸಂಸಾರವನ್ನು ಬಿಟ್ಟು ಹೊರಟುಬಿಡಬೇಕು'–ಎಂಬ ಉಪನಿಷತ್ತಿನ ವಚನವೂ ಇದನ್ನೇ ಸಾರುತ್ತದೆ.

**ದಶೈವ ಪೂರ್ವಾನ್ದಶ ಚಾಪರಾಂಶ್ಚ**
**ಜ್ಞಾತೀನಥಾತ್ಮಾನಮಥೈಕವಿಂಶಮ್ ।**
**ಅರಣ್ಯವಾಸೀ ಸುಕೃತೇ ದಧಾತಿ**
**ವಿಮುಚ್ಯಾರಣ್ಯೇ ಸ್ವಶರೀರಧಾತೂನ್ ॥೭॥**

ಅಂತಹವನಿಂದ ವಂಶವೇ ಪಾವನವಾಗುತ್ತದೆ, ಅಷ್ಟಕ! ಅರಣ್ಯವಾಸಿಯಾದ ಅವನು ಯಥಾವಿಧಿಯಾಗಿ ಸಂನ್ಯಾಸಾಶ್ರಮದಲ್ಲಿದ್ದುಕೊಂಡು ಅಲ್ಲಿಯೇ ಅವಸಾನಹೊಂದಿದರೆ ತಾನು ಅರ್ಜಿಸಿದ ಮಹಾಪುಣ್ಯದಿಂದ ತನ್ನ ಹಿಂದಿನ ಹತ್ತು ತಲೆಮಾರಿನವರನ್ನೂ (ತಂದೆ-ತಾತ-ಮುತ್ತಾತ ಮೊದಲಾದವರನ್ನೂ) ತನ್ನ ಮುಂದಿನ ಹತ್ತು ತಲೆಮಾರಿನವರನ್ನೂ (ಮಗ-ಮೊಮ್ಮಗ ಮುಂತಾದವರನ್ನೂ) ಮತ್ತು ತನ್ನನ್ನೂ ಸೇರಿಸಿಕೊಂಡು ಒಟ್ಟು ಇಪ್ಪತ್ತೊಂದು ತಲೆಮಾರಿನವರನ್ನೂ ಪುಣ್ಯವಂತರನ್ನಾಗಿ ಮಾಡುತ್ತಾನೆ.

ಅಷ್ಟಕನು ಪುನಃ ಪ್ರಶ್ನಿಸುತ್ತಾನೆ :

**ಕತಿಸ್ವಿದೇವ ಮುನಯಃ ಕತಿ ಮೌನಾನಿ ಚಾಪ್ಯುತ ।**
**ಭವನ್ತೀತಿ ತದಾಚಕ್ಷ್ವ ಶ್ರೋತುಮಿಚ್ಛಾಮಹೇ ವಯಮ್ ॥೮॥**

"ತಾತ! ಲೋಕದಲ್ಲಿ ಎಷ್ಟು ವಿಧವಾದ ಮುನಿಗಳಿದ್ದಾರೆ ಮತ್ತು ಎಷ್ಟು ವಿಧವಾದ ಮುನಿವ್ರತಗಳಿವೆಯೆಂಬುದನ್ನು ದಯಮಾಡಿ ತಿಳಿಸು. ನಾವಿದನ್ನು ಕೇಳುವ ಇಚ್ಛೆಯುಳ್ಳವರಾಗಿದ್ದೇವೆ."

**ಅರಣ್ಯೇ ವಸತೋ ಯಸ್ಯ ಗ್ರಾಮೋ ಭವತಿ ಪೃಷ್ಠತಃ ।**
**ಗ್ರಾಮೇ ವಾ ವಸತೋಽರಣ್ಯಂ ಸ ಮುನಿಃ ಸ್ಯಾಜ್ಜನಾಧಿಪ ॥೯॥**

"ಅಷ್ಟಕ! ಅರಣ್ಯದಲ್ಲಿ ವಾಸಮಾಡುತ್ತಿರುವ ಯಾವನಿಗೆ ಗ್ರಾಮವು ತನ್ನ ಹಿಂದೆಯೇ ಇರುವುದೋ ಮತ್ತು ಗ್ರಾಮದಲ್ಲಿ ವಾಸಮಾಡುತ್ತಿರುವ ಯಾವನಿಗೆ ಅರಣ್ಯವು ತನ್ನ ಹಿಂದೆಯೇ ಇರುವುದೋ–ಅಂತಹವನನ್ನು ಮುನಿಯೆಂದು ಕರೆಯುತ್ತಾರೆ."

**ಕಥಂಸ್ವಿದ್ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ ।**
**ಗ್ರಾಮೇ ವಾ ವಸತೋಽರಣ್ಯಂ ಕಥಂ ಭವತಿ ಪೃಷ್ಠತಃ ॥೧೦॥**

"ತಾತ! ಮರ-ಗಿಡಗಳಿಂದಲೂ, ನಾನಾವಿಧವಾದ ಮೃಗಗಳಿಂದಲೂ ಕೂಡಿರುವ ಅರಣ್ಯದಲ್ಲಿ ವಾಸಿಸುವವನ ಹಿಂಭಾಗದಲ್ಲಿ ಗ್ರಾಮವಿರುವುದೆಂತು? ಗ್ರಾಮದಲ್ಲಿ ವಾಸಮಾಡುತ್ತಿರುವ ಗೃಹಸ್ಥನ ಹಿಂಭಾಗದಲ್ಲಿ ಅರಣ್ಯವಾದರೂ ಹೇಗಿರುತ್ತದೆ? ಇರಲು ಹೇಗೆ ತಾನೇ ಸಾಧ್ಯವಾಗುವುದು? ಒಂದು ವೇಳೆ ಇರುವುದಾಗಿ ಭಾವಿಸಿದರೂ ಅದರಿಂದವನು ಮುನಿಯು ಹೇಗಾಗುವನು? ಎಲ್ಲವನ್ನೂ ವಿವರಿಸಿ ಹೇಳು."

**ನ ಗ್ರಾಮ್ಯಮುಪಯುಞ್ಜೀತ ಯ ಅರಣ್ಯೋ ಮುನಿರ್ಭವೇತ್ ।**
**ತಥಾಸ್ಯ ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ ॥೧೧॥**

"ಅಷ್ಟಕ! ಅರಣ್ಯದಲ್ಲಿ ವಾಸಮಾಡುತ್ತಿರುವವನು ಗ್ರಾಮದಲ್ಲಿ ಸಿಕ್ಕುವ ಪದಾರ್ಥಗಳನ್ನು ಉಪಭುಂಜಿಸಬಾರದು. ಆದುದರಿಂದ ಅರಣ್ಯದಲ್ಲಿ ವಾಸಮಾಡುತ್ತಿರುವ ಮುನಿಗೆ ಗ್ರಾಮವು ಹಿಂದಕ್ಕೆ ಹೋದಂತೆಯೇ ಸರಿ. ಗ್ರಾಮವಾಗಲೀ, ಗ್ರಾಮದ ಸುಖವಾಗಲೀ ಅವನ ದೃಷ್ಟಿಗೆ ಗೋಚರ

ವಾಗುವುದಿಲ್ಲ. ಒಮ್ಮೆ ಮನಸ್ಸಿನಲ್ಲಿಯಾದರೂ ಅದನ್ನು ಮುನಿಯು ನೆನೆಯಲಾರನು. ಆದುದರಿಂದ ಅರಣ್ಯದಲ್ಲಿರುವಾಗ ಗ್ರಾಮವನ್ನು (ಗ್ರಾಮಸುಖವನ್ನು) ಹಿಂದಕ್ಕೆ ಹಾಕುವವನು (ಸಂಪೂರ್ಣವಾಗಿ ಮರೆತುಬಿಡುವವನು) ಮುನಿಯು.

**ಅನಗ್ನಿರನಿಕೇತಶ್ಚಾಪ್ಯಗೋತ್ರಚರಣೋ ಮುನಿಃ ।**
**ಕೌಪೀನಾಚ್ಛಾದನಂ ಯಾವತ್ತಾವದಿಚ್ಛೇಚ್ಚ ಚೀವರಮ್ ॥೧೨॥**

**ಯಾವತ್ಪ್ರಾಣಾಭಿಸಂಧಾನ ತಾವದಿಚ್ಛೇಚ್ಚ ಭೋಜನಮ್ ।**
**ತಥಾಸ್ಯ ವಸತೋ ಗ್ರಾಮೇಽರಣ್ಯಂ ಭವತಿ ಪೃಷ್ಠತಃ ॥೧೩॥**

ಅಗ್ನಿಯನ್ನು ಬಿಟ್ಟು, ಮನೆಯೂ ಇಲ್ಲದೇ, ಗೋತ್ರ-ಸೂತ್ರಗಳನ್ನೂ ಬಿಟ್ಟವನನ್ನು ಮುನಿಯೆಂದು ಕರೆಯುತ್ತಾರೆ. ಅಂತಹವನಿಗೆ ಬಟ್ಟೆಯೂ ಬೇಕೆನ್ನಿಸುವುದೇ ಇಲ್ಲ. ಒಂದು ವೇಳೆ ಅವನು ಬಟ್ಟೆಯನ್ನಪೇಕ್ಷಿಸಿದರೂ ಕೌಪೀನಕ್ಕೆ ಬೇಕಾಗುವಷ್ಟು ಬಟ್ಟೆಯನ್ನು ಮಾತ್ರ ಅಪೇಕ್ಷಿಸಿಯಾನು. ಮುನಿಯು ಊಟಕ್ಕಾಗಿ ಹಾತೊರೆಯುವವನೂ ಅಲ್ಲ. ಅನುದಿನವೂ ಅವನಿಗೆ ಊಟದ ಅವಶ್ಯಕತೆಯೂ ಇರುವುದಿಲ್ಲ. ನಾಲ್ಕಾರು ದಿನಗಳಿಗೊಮ್ಮೆಯಾದರೂ ಒಂದು ತುತ್ತು ಅನ್ನವನ್ನೇಕೆ ತಿನ್ನುವನೆಂದರೆ ಅವನ ಆ ಶರೀರದಲ್ಲಿ ಪ್ರಾಣಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಮಾತ್ರ. ಅಂತಹ ಮುನಿಯು ಗ್ರಾಮದಲ್ಲಿದ್ದರೇನು? ಅರಣ್ಯದಲ್ಲಿದ್ದರೇನು? ಗ್ರಾಮದಲ್ಲಿದ್ದರೂ ಅವನಿಗದು ಅರಣ್ಯಸದೃಶವಲ್ಲವೇ? ಆದುದರಿಂದ ಅಂತಹ ಪರಮಶ್ರೇಷ್ಠನಾದ ಮುನಿಯು ಗ್ರಾಮದಲ್ಲಿದ್ದರೂ ಅವನ ಹಿಂದೆಯೇ ಅರಣ್ಯವಿರುತ್ತದೆ. ಅವನು ಅರಣ್ಯಕ್ಕೂ ಗ್ರಾಮಕ್ಕೂ ಯಾವ ವಿಧವಾದ ವ್ಯತ್ಯಾಸವನ್ನೂ ಕಾಣುವುದಿಲ್ಲ. ಅಂತಹವನನ್ನು ಬಹೂದಕನೆಂದೂ ಕರೆಯುವರು.

**ಯಸ್ತು ಕಾಮಾನ್ಪರಿತ್ಯಜ್ಯ ತ್ಯಕ್ತಕರ್ಮಾ ಜಿತೇಂದ್ರಿಯಃ ।**
**ಅತಿಷ್ಠೇಚ್ಚ ಮುನಿರ್ಮೌನಂ ಸ ಲೋಕೇ ಸಿದ್ಧಿಮಾಪ್ನುಯಾತ್ ॥೧೪॥**

ಯಾವನು ಎಲ್ಲ ಕಾಮನೆಗಳನ್ನೂ ಪರಿತ್ಯಾಗಮಾಡಿ ಕಾಮ್ಯಫಲದಾಯಕವಾದ ಕರ್ಮಗಳನ್ನೂ ತ್ಯಜಿಸಿ ಅಥವಾ ಕರ್ಮಫಲಗಳನ್ನೂ ತ್ಯಾಗಮಾಡಿ ಜಿತೇಂದ್ರಿಯನಾಗಿ ಮೌನವ್ರತಸ್ಥನಾಗಿರುವನೋ–ಅಂತಹ ಮುನಿಯು ಸಿದ್ಧಿಯನ್ನು ( ಮೋಕ್ಷಸಿದ್ಧಿಯನ್ನು ) ಪಡೆಯುತ್ತಾನೆ.

**ಧೌತದನ್ತಂ ಕೃತ್ತನಖಂ ಸದಾ ಸ್ನಾತಮಲಂಕೃತಮ್ ।**
**ಅಸಿತಂ ಸಿತಕರ್ಮಾಣಂ ಕಸ್ತಮರ್ಹತಿ ನಾರ್ಚಿತುಮ್ ॥೧೫॥**

ಶುದ್ಧವಾದ ದಂತಪಂಕ್ತಿಗಳುಳ್ಳವನಾಗಿಯೂ, ಕತ್ತರಿಸಿದ ಉಗುರುಗಳುಳ್ಳವನಾಗಿಯೂ, ತ್ರಿಕಾಲಗಳಲ್ಲಿಯೂ ಸ್ನಾನಮಾಡುತ್ತಾ ಯಮ-ನಿಯಮಾದಿಗಳಿಂದ ಅಲಂಕೃತನಾಗಿಯೂ, ಶೀತೋಷ್ಣಗಳ ಸಹಿಷ್ಣುತೆಯಿಂದ ಕಪ್ಪುಛಾಯೆಗೆ ತಿರುಗಿದ ಶರೀರವುಳ್ಳವನಾಗಿಯೂ, ಯಾವಾಗಲೂ ಪರಿಶುದ್ಧವಾದ ಪುಣ್ಯಪ್ರದವಾದ ಕರ್ಮಗಳನ್ನೇ ಮಾಡುತ್ತಿರುವವನಾಗಿಯೂ ಇರುವ ಮುನಿಯನ್ನು ಅರ್ಚಿಸದಿರಲು ಯಾರಿಗೆ ತಾನೇ ಮನಸ್ಸು ಬರುವುದು?

(ಈ ಶ್ಲೋಕಕ್ಕೆ ಪರ್ಯಾಯವಾಗಿ ವ್ಯಾಖ್ಯಾನಕಾರರು ಹೀಗೂ ಅರ್ಥಮಾಡುತ್ತಾರೆ. **ಧೌತದನ್ತಂ**–ಆಹಾರವು ಶುದ್ಧವಿಲ್ಲದಿದ್ದರೆ ಹಲ್ಲುಗಳು ದುರ್ವಾಸನೆಯಿಂದ ಕೂಡಿರುತ್ತವೆ. ಪರಿಶುದ್ಧವಾಗಿರುವುದಿಲ್ಲ. ಆದುದರಿಂದ ಧೌತದಂತನೆಂದರೆ ಪರಿಶುದ್ಧವಾದ ಆಹಾರವುಳ್ಳವನು. **ಆಹಾರಶುದ್ಧೌ ಸತ್ತ್ವಶುದ್ಧಿಃ।** **ಕೃತ್ತನಖಂ** –ಜಿಗುಟುವುದು, ಪರಚುವುದು ಇವುಗಳ ಮೂಲಕ ಇನ್ನೊಬ್ಬರಿಗೆ ತೊಂದರೆಮಾಡುವುದು ಉಗುರಿನ ಲಕ್ಷಣ. ಎಲ್ಲ ದುಷ್ಟಪ್ರಾಣಿಗಳೂ ಉಗುರಿನಿಂದಲೇ ಎದುರಾಗಿ ಬಂದವರನ್ನು ಹಿಂಸಿಸುತ್ತವೆ. ಆದುದರಿಂದ **ಕೃತ್ತನಖಂ**–ಎಂದರೆ ಅಹಿಂಸಾಪರನು ಎಂದು ಅರ್ಥವಾಗುತ್ತದೆ. **ಸದಾಸ್ನಾತಂ** –ಸರ್ವದಾ ಸ್ನಾನಮಾಡುವವನು. ಆದರೆ ಎಲ್ಲ ಸಮಯಗಳಲ್ಲಿಯೂ ಸ್ನಾನಮಾಡಿಕೊಂಡಿರಲು ಸಾಧ್ಯವಿಲ್ಲ. ಮೇಲಾಗಿ ನೀರಿನಲ್ಲಿ ಮಾಡುವ ಸ್ನಾನದಿಂದ ಶಾರೀರಕವಾದ ಕೊಳೆಯು ಮಾತ್ರ ಹೋಗುವುದು. ಮುನಿಯಾದವನಿಗೆ ಮಾನಸಿಕವಾದ ಕೊಳೆಯೂ ಹೋಗಬೇಕು. ಆದುದರಿಂದ **ಸದಾ ಸ್ನಾತಂ**–ಎಂದರೆ ಮನಸ್ಸಿನ ಕಲ್ಮಷವನ್ನು ದೂರಮಾಡಿರುವವನು ; ಶುದ್ಧಚಿತ್ತನು ; ಸರ್ವಕಾಲದಲ್ಲಿಯೂ ಪರಿಶುದ್ಧವಾದ ಮನಸ್ಸಿನಿಂದ ಇರತಕ್ಕವನು. ಅಲಂಕೃತನೆಂದರೆ ಮುನಿಯಾದವನಿಗೆ ತಪಸ್ಸಿನಿಂದ ಪ್ರಾಪ್ತವಾದ ತೇಜಸ್ಸೇ ಒಂದು ಅಲಂಕಾರವಸ್ತುವು. ಅಂತಹ ತೇಜಸ್ಸಿನಿಂದ ಸರ್ವಕಾಲದಲ್ಲಿಯೂ ಬೆಳಗುತ್ತಿರುವವನು.)

**ತಪಸಾ ಕರ್ಶಿತಃ ಕ್ಷಾಮಃ ಕ್ಷೀಣಮಾಂಸಾಸ್ಥಿಶೋಣಿತಃ ।**
**ಸ ಚ ಲೋಕಮಿಮಂ ಜಿತ್ವಾ ಲೋಕಂ ವಿಜಯತೇ ಪರಮ್ ॥೧೬॥**

ರಾಜಸಿಂಹ! ಮುನಿಯಾದವನಿಗಿರುವ ಶಕ್ತಿಯು ಅಪಾರವಾದುದು. ಅವನು ತಪಸ್ಸನ್ನು ಮಾಡಿ-ಮಾಡಿ ದೇಹವನ್ನು ಶೋಷಿಸಿಬಿಟ್ಟಿರುತ್ತಾನೆ. ಅವನ ಮಾಂಸ, ಮೂಳೆ, ರಕ್ತಗಳೂ ಕ್ಷೀಣಿಸಿರುತ್ತವೆ. ಚರ್ಮವೂ ಗಾಳಿ-ಬಿಸಿಲು-ಮಳೆಗಳಿಗೆ ಸಿಕ್ಕಿ ಸುಕ್ಕಾಗಿಹೋಗಿರುತ್ತದೆ. ಅಂತಹವನು ಅರಿಷಡ್ವರ್ಗಗಳಿಂದ ಕೂಡಿರುವ ಈ ಲೋಕವನ್ನು ಜಯಿಸುವುದಲ್ಲದೇ ಉತ್ತಮೋತ್ತಮವಾದ ಇತರ ಲೋಕಗಳನ್ನೂ ಜಯಿಸುತ್ತಾನೆ. (ತಪಸ್ಸಿನಿಂದಾಗಿ ಅವನಿಗೆ ಉತ್ತಮೋತ್ತಮವಾದ ಲೋಕಗಳು ಸಿಕ್ಕುತ್ತವೆ.)

**ಯದಾ ಭವತಿ ನಿರ್ದ್ವನ್ದ್ವೋ ಮುನಿರ್ಮೌನಂ ಸಮಾಸ್ಥಿತಃ ।**
**ಅಥ ಲೋಕಮಿಮಂ ಜಿತ್ವಾ ಲೋಕಂ ವಿಜಯತೇ ಪರಮ್ ॥೧೭॥**

ಮುನಿಯು ಯಾವಾಗಲೂ ನಿರ್ದ್ವಂದ್ವನಾಗಿರಬೇಕು. ದ್ವಂದ್ವಗಳೆಂದರೆ ಶೀತೋಷ್ಣಗಳು ; ಸುಖ-ದುಃಖಗಳು ; ಮಾನಾಪಮಾನಗಳು ; ಜಯಾಪಜಯಗಳು ; ನಿಂದಾ-ಸ್ತುತಿಗಳು–ಇವುಗಳಿಂದ ರಹಿತನಾಗಿರಬೇಕು. ರಹಿತನಾಗಿರುವುದೆಂದರೆ ಇವುಗಳನ್ನು ಅತಿಕ್ರಮಿಸಿರಬೇಕು. ಶೀತಕಾಲದಲ್ಲಿ ಚಳಿಯಾಗುವುದೆಂದು ಸಂಕಟಪಡಬಾರದು. ಬೇಸಿಗೆಯಲ್ಲಿ ಸೂರ್ಯನ ತಾಪವು ಅಧಿಕವಾಗಿರುವುದೆಂದು ಪರಿತಾಪಪಡಬಾರದು. ಈ ಎರಡನ್ನೂ ಜಯಿಸಲೆಂದೇ ದೃಢಚಿತ್ತರಾದ ಮುನಿಗಳು ಶೀತಕಾಲದಲ್ಲಿ ಕೊರೆಯುವ ನೀರಿನಲ್ಲಿ ನಿಂತು ತಪಸ್ಸನ್ನು ಮಾಡುತ್ತಾರೆ. ಉರಿಯುವ ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ತಪಸ್ಸನ್ನು ಮಾಡುತ್ತಾರೆ. ಶೀತೋಷ್ಣಗಳನ್ನು ಜಯಿಸುವುದು ಅಥವಾ ಎರಡನ್ನೂ ಸಮವಾಗಿ ಕಾಣುವುದು ಸಾಧನೆಯಿಂದ ಮಾತ್ರವೇ ಸಾಧ್ಯ. ಹಾಗೆಯೇ ಸುಖವು ಬಂದಾಗ ಹಿಗ್ಗಬಾರದು ; ದುಃಖವು ಬಂದಾಗ ಕುಗ್ಗಲೂಬಾರದು. ಸುಖಬಂದಾಗ ಹಿಗ್ಗುವುದೂ ದುಃಖಬಂದಾಗ ಕುಗ್ಗುವುದೂ ಮನುಷ್ಯನ ಸ್ವಾಭಾವಿಕಗುಣಗಳು. ಮುನಿಯಾದವನು ಸುಖ-ದುಃಖಗಳೆರಡನ್ನೂ ಸಮವಾಗಿ ಕಾಣುತ್ತಾನೆ. ಸುಖಬಂದಾಗ ಸಾಮಾನ್ಯರಂತೆ ಹಿಗ್ಗುವುದಿಲ್ಲ. ದುಃಖಬಂದಾಗ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತುಕೊಳ್ಳುವುದಿಲ್ಲ. ಮಾನ ಮತ್ತು ಅಪಮಾನ–ಎರಡನ್ನೂ ಸಮಾನವಾಗಿ ಕಾಣಬೇಕು. ಮಾನಾಪಮಾನಗಳೆಂಬುದು ಸುಖ-ದುಃಖಗಳ ಒಂದು ಅಂಗವೇ ಆಗಿದೆ. ಮನುಷ್ಯನು ಸಮ್ಮಾನಿತನಾದರೆ ಸಂತೋಷ

ಪಡುತ್ತಾನೆ. ಅಪಮಾನಿತನಾದರೆ ದುಃಖಪಡುತ್ತಾನೆ. ಸಮ್ಮಾನಕ್ಕೆ ನಾಚಬೇಕೆಂದು ಹಿರಿಯರು ಹೇಳುತ್ತಾರೆ. ಅಪಮಾನವನ್ನು ಸಹಿಸಿಕೊಳ್ಳಬೇಕು. ಜಯಾಪಜಯಗಳೂ ದ್ವಂದ್ವದಲ್ಲಿ ಸೇರಿವೆ. ಆಟದಲ್ಲಿಯೇ ಆಗಲೀ ಯುದ್ಧದಲ್ಲಿಯೇ ಆಗಲೀ ಜಯವಾದರೆ ಸಂತೋಷಪಡುವುದು, ಅಪಜಯವಾದರೆ ಸಂಕಟಪಡುವುದು ಮನುಷ್ಯನ ಸ್ವಭಾವವಾಗಿರುತ್ತದೆ. ಜಯಾಪಜಯಗಳೆಂಬುವು ಯಾವಾಗಲೂ ಅನಿಶ್ಚಿತವಾದುವುಗಳು. ಇಂದು ಗೆದ್ದವನು ನಾಳೆ ಸೋಲುತ್ತಾನೆ. ಸೋತವನು ಗೆಲ್ಲುತ್ತಾನೆ. ಆದುದರಿಂದ ಸೋಲು- ಗೆಲುವುಗಳ ವಿಷಯವಾಗಿ ಮನುಷ್ಯನು ಕುಗ್ಗಿ-ಹಿಗ್ಗಬೇಕಾಗಿಲ್ಲ. ಆದರೆ ಈ ಸಮತ್ವವು ಸಾಧನೆಯಿಂದ ಮಾತ್ರವೇ ಸಾಧ್ಯವಾಗುತ್ತದೆ. ನಿಂದಾಸ್ತುತಿಗಳಿಂದ ಅತೀತನಾಗಿರಬೇಕು. ನಿಂದಿಸಿದರೆ ಸಂಕಟಪಡಬಾರದು. ಸ್ತುತಿಮಾಡಿದರೆ ಸಂತೋಷಪಡಬಾರದು.

ಮನುಷ್ಯನು ಎಷ್ಟೇ ಒಳ್ಳೆಯ ಕಾರ್ಯಮಾಡಿದರೂ ಅದರಲ್ಲಿ ಹುಳುಕನ್ನು ಹುಡುಕಿ ತೆಗಳುವವರೂ ಇರುತ್ತಾರೆ. ಹಾಗೆಯೇ ಹೊಗಳುವವರೂ ಇರುತ್ತಾರೆ. ಹೊಗಳಿಕೆಯನ್ನು ತೆರೆದ ಮನಸ್ಸಿನಿಂದ ಬರಮಾಡಿಕೊಳ್ಳುವಂತೆಯೇ ನಿಂದೆಯನ್ನೂ ಬರಮಾಡಿಕೊಳ್ಳಬೇಕು. ನಿಂದೆಯನ್ನು ಕೇಳಿ ಉದ್ವೇಗಗೊಳ್ಳಬಾರದು. ಕೆಲವು ಸಮಯಗಳಲ್ಲಿ ನಿಂದೆಯಲ್ಲಿಯೂ ತತ್ತ್ವವಿರುತ್ತದೆ. ತಿಳಿದುಕೊಳ್ಳಬೇಕಾದ ವಿಷಯಗಳಿರುತ್ತವೆ. ವೃಥಾ ನಿಂದೆಯನ್ನು ಯಾರಾದರೂ ಮಾಡಿದರೆ ಅದನ್ನು ಸ್ತುತಿಯೆಂದೇ ಭಾವಿಸಬೇಕು. ಆತಂಕಪಟ್ಟುಕೊಳ್ಳಬಾರದು. ಹೀಗೆ ದ್ವಂದ್ವಗಳಿಂದ ರಹಿತನಾದ ಅಥವಾ ದ್ವಂದ್ವಗಳಿಂದ ಅತೀತನಾದ, ಮೌನವನ್ನು ಆಶ್ರಯಿಸಿದ, ಧ್ಯಾನಪರಾಯಣನಾದ ಮುನಿಯು ಈ ಲೋಕವನ್ನು ಜಯಿಸುವುದೇ ಅಲ್ಲದೇ ಇತರ ಶ್ರೇಷ್ಠವಾದ ಲೋಕಗಳನ್ನೂ ಜಯಿಸುತ್ತಾನೆ.

**ಆಸ್ಯೇನ ತು ಯದಾಹಾರಂ ಗೋವನ್ಮೃಗಯತೇ ಮುನಿಃ ।**
**ಅಥಾಸ್ಯ ಲೋಕಃ ಸರ್ವೋಽಯಂ ಸೋಽಮೃತತ್ವಾಯ ಕಲ್ಪತೇ ॥**

ಯಾವನು ತನ್ನ ದಿನನಿತ್ಯದ ಆಹಾರವೇನೆಂಬ ವಿವೇಚನೆಯಿಲ್ಲದೇ ಹಸುವಿನಂತೆ ಸಿಕ್ಕಿದ ಕಾಲದಲ್ಲಿ ಸಿಕ್ಕಿದಷ್ಟು ಆಹಾರವನ್ನು ತಿಂದು ಸುಮ್ಮ

ನಿರುವನೋ ಮತ್ತು ನಿದ್ದೆಮಾಡುತ್ತಲೇ ತಾಯಿಯ ಸ್ತನ್ಯವನ್ನು ಕುಡಿಯುವ ಮಗುವಿನಂತೆ–ರುಚಿಯ ವಿಷಯವಾಗಿ ಸ್ವಲ್ಪವೂ ಯೋಚಿಸದೆಯೇ ಇರುವನೋ–ಅವನು ಪ್ರಪಂಚದ ಆತ್ಮಗಳೆಲ್ಲವೂ ತನ್ನಲ್ಲಿರುವುದೆಂದೂ ತಾನು ಪ್ರಪಂಚದ ಆತ್ಮಗಳೆಲ್ಲದರಲ್ಲಿಯೂ ಇರುವೆನೆಂದೂ ಸಾಧನಾನುಭವವನ್ನು ಪಡೆದು ಅಮೃತತ್ವವನ್ನು ಹೊಂದುವನು."

೯೧ನೆಯ ಅಧ್ಯಾಯವು ಮುಗಿಯಿತು.

೯೨ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಅಷ್ಟಕ-ಯಯಾತಿಯರ ಸಂವಾದ

ಅಷ್ಟಕನು ಪ್ರಶ್ನಿಸುತ್ತಾನೆ :

**ಕತರಸ್ತ್ವನಯೋಃ ಪೂರ್ವಂ ದೇವಾನಾಮೇತಿ ಸಾತ್ಮತಾಮ್ ।**
**ಉಭಯೋರ್ಧಾವತೋ ರಾಜನ್ಸೂರ್ಯಾಚನ್ದ್ರಮಸೋರಿವ ॥೧॥**

"ತಾತ! ಸೂರ್ಯ-ಚಂದ್ರರಂತೆ ಹಗಲಿರುಳೂ ಪರಮಪದಕ್ಕಾಗಿ ಸಾಧನೆಮಾಡುವ ಜ್ಞಾನಿಗಳಲ್ಲಿ ಮತ್ತು ಯೋಗಿಗಳಲ್ಲಿ ಮೊದಲು ಯಾರು ಸಿದ್ಧಿಯನ್ನು ಪಡೆಯುವರು?"

**ಅನಿಕೇತೋ ಗೃಹಸ್ಥೇಷು ಕಾಮವೃತ್ತೇಷು ಸಂಯತಃ ।**
**ಗ್ರಾಮ ಏವ ವಸನ್ಭಿಕ್ಷುಸ್ತಯೋಃ ಪೂರ್ವತರಂ ಗತಃ ॥೨॥**

**ಅವಾಪ್ಯ ದೀರ್ಘಮಾಯುಸ್ತು ಯಃ ಪ್ರಾಪ್ತೋ ವಿಕೃತಿಂ ಚರೇತ್ ।**
**ತಪ್ಯತೇ ಯದಿ ತತ್ಕೃತ್ವಾ ಚರೇತ್ಸೋಽನ್ಯತ್ತಪಸ್ತತಃ ॥೩॥**

"ಅಷ್ಟಕ! ಮೇಲೆ ಹೇಳಿದವರಲ್ಲಿ ಭಿಕ್ಷುಗಳನ್ನು ಜ್ಞಾನಿಗಳೆಂದು ಪರಿಗಣಿಸಬೇಕು. ಭಿಕ್ಷುವು ವೇದೋಪನಿಷತ್ತುಗಳ ಸಾರವನ್ನು ಸಂಪೂರ್ಣವಾಗಿ ತಿಳಿದವನಾಗಿ ಪ್ರಕೃತಿ, ಬ್ರಹ್ಮ ಸಂಸಾರ–ಈ ವಿಷಯಗಳಲ್ಲಿ ಖಚಿತವಾದ ಅಭಿಪ್ರಾಯವನ್ನು ಹೊಂದಿರುತ್ತಾನೆ. ಅವನು ಗೃಹಸ್ಥರ ಮಧ್ಯದಲ್ಲಿದ್ದರೂ ಅವನ ಮನಸ್ಸೆಲ್ಲವೂ ಸಚ್ಚಿದಾನಂದಸ್ವರೂಪನಾದ ಪರಬ್ರಹ್ಮನಲ್ಲಿಯೇ ನೆಲೆಸಿರುತ್ತದೆ. ಗ್ರಾಮದಲ್ಲಿಯೇ ವಾಸವಾಗಿದ್ದರೂ ಯಾವ ವಿಧವಾದ ಸಂಸಾರ ವಾಸನೆಯೂ ಅವನಿಗೆ ಅಂಟುವುದಿಲ್ಲ. ಅವನನ್ನು ಸುತ್ತುವರಿದಿರುವ ಜ್ಞಾನಾ

ಗ್ನಿಯು ಯಾವ ಸಂಪರ್ಕವೂ ಆಗದಂತೆ ಕಾಯುತ್ತಿರುತ್ತದೆ. ಭಿಕ್ಷುವು ಕಟ್ಟಕಡೆಗೆ ತನ್ನ ಶರೀರವನ್ನೂ ತನ್ನಿಂದ ಪ್ರತ್ಯೇಕವೆಂದು ಭಾವಿಸಲು ಅರ್ಹನಾಗುತ್ತಾನೆ. ಕಮಲದ ಎಲೆಯ ಮೇಲಿರುವ ನೀರಿನ ಬಿಂದುವಿನ ಹಾಗೆ ಯಾವ ಸೋಂಕೂ ಇಲ್ಲದೇ ಭಿಕ್ಷುವು ಪರಮಾತ್ಮನನ್ನು ಯಾವಾಗಲೂ ಧ್ಯಾನಿಸುತ್ತಾ ಪರಮಾನಂದದಲ್ಲಿರುತ್ತಾನೆ. ಅಂತಹವನು ಯೋಗಿಗಿಂತಲೂ ಮೊದಲು ಪರಮಪದವನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಯೋಗಿಯಾದವನೂ ಪರಮಪದವನ್ನು ಪಡೆಯುವನು. ಆದರೆ ಅವನಿಗೆ ಪ್ರಕೃತಿ, ಬ್ರಹ್ಮ, ಸಂಸಾರ–ಇವುಗಳಲ್ಲಿ ನಿರ್ದಿಷ್ಟವಾದ ಜ್ಞಾನವಿರುವುದಿಲ್ಲ. ಅವನು ಸಾಧನಾಜೀವಿಯು. ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ-ಧ್ಯಾನ-ಧಾರಣ ಇವುಗಳನ್ನು ದಾಟಿ ಸಮಾಧಿಯ ಅವಸ್ಥೆಯನ್ನು ಹೊಂದಬೇಕು. ಅದೂ ಅಲ್ಲದೇ ಸಾಧನೆಯ ಕಾಲದಲ್ಲಿ ಹಲವಾರು ಅನಿರ್ವಾಚ್ಯಶಕ್ತಿಗಳೂ ಅವನಲ್ಲುಂಟಾಗುತ್ತವೆ. ಪರಬ್ರಹ್ಮನ ಸಾಯುಜ್ಯ-ಸಾಮೀಪ್ಯ-ಸಾರೂಪ್ಯಾದಿಗಳ ವಿಷಯವಾಗಿ ತಿಳಿವಳಿಕೆ ಇಲ್ಲದ ಯೋಗಿಯು ಮಧ್ಯಕಾಲದಲ್ಲಿ ಉಂಟಾಗುವ ಆಶ್ಚರ್ಯಕರವಾದ ಘಟನೆಗಳಿಗೆ ಮನಸೋತಲ್ಲಿ ಅವನು ಯೋಗಭ್ರಷ್ಟನಾಗುವನು. ಮುಂದಿನ ಜನ್ಮದಲ್ಲಿಯೂ ಅವನು ಶ್ರೋತ್ರಿಯರ ಮನೆಯಲ್ಲಿ ಹುಟ್ಟಿ ಯೋಗವನ್ನು ಮುಂದುವರಿಸಬೇಕು. ಒಂದು ವೇಳೆ ತನಗೆ ಮಧ್ಯಕಾಲದಲ್ಲಿ ಸಿಕ್ಕುವ ಶಕ್ತಿಯನ್ನು ಯೋಗಿಯು ದುರುಪಯೋಗಪಡಿಸಿಕೊಂಡನಾದರೆ ಅವನಿಗೆ ಮೋಕ್ಷವೆಂಬುದು ಜನ್ಮ-ಜನ್ಮಾಂತರಗಳಲ್ಲಿಯೂ ಸಿಕ್ಕಲಾರದು. ಆದರೆ ಭಿಕ್ಷುವು ಅಥವಾ ಜ್ಞಾನಿಯು ಸಂಸಾರದ ಮಧ್ಯದಲ್ಲೇ ಇದ್ದರೂ ಕಳಂಕರಹಿತನಾಗಿರುತ್ತಾನೆ. ಅವನ ಸಾಧನೆಗೆ ಕಾಲ-ದೇಶ-ವರ್ತಮಾನಗಳ ವಿವೇಚನೆಯಿಲ್ಲ. ಯಾವಾಗಲೂ ಅವನ ಮನಸ್ಸು ಪರಬ್ರಹ್ಮನಲ್ಲಿಯೇ ಲೀನವಾಗಿರುವುದು. ಯಾವ ವಸ್ತುವನ್ನು ಕಂಡರೂ ಅವನಿಗೆ ಪರಬ್ರಹ್ಮನ ರೂಪವೇ ಅದರಲ್ಲಿ ಕಾಣುವುದು.

**ಪಾಪಾನಾಂ ಕರ್ಮಣಾಂ ನಿತ್ಯಂ ಬಿಭಿಯಾದ್ಯಸ್ತು ಮಾನವಃ ।**
**ಸುಖಮಪ್ಯಾಚರನ್ನಿತ್ಯಂ ಸೋಽತ್ಯನ್ತಂ ಸುಖಮೇಧತೇ ॥೪॥**

**ತದ್ವೈ ನೃಶಂಸಂ ತದಸತ್ಯಮಾಹು-**
**ರ್ಯಃ ಸೇವತೇಽಧರ್ಮಮನರ್ಥಬುದ್ಧಿಃ ।**

**ಅರ್ಥೋಽಪ್ಯನೀಶಸ್ಯ ತಥೈವ ರಾಜಂ-**
**ಸ್ತದಾರ್ಜವಂ ಸ ಸಮಾಧಿಸ್ತದಾರ್ಯಮ್ ॥೫॥**

ರಾಜಸತ್ತಮನೇ! ಮೇಲೆ ಹೇಳಿದುದು ಜ್ಞಾನಿಗಳು ಮತ್ತು ಯೋಗಿಗಳ ವಿಷಯವಾಯಿತು. ಜ್ಞಾನಿಗಳಾಗಲು ಅಥವಾ ಯೋಗಿಗಳಾಗಲು ಎಲ್ಲರೂ ಸಮರ್ಥರಾಗಿರುವುದಿಲ್ಲ. ಪಾಪಭೀರುಗಳಾಗಿ, ಪಾಪಕರ್ಮಗಳಾವುದನ್ನೂ ಮಾಡದೇ ವೇದವಿಹಿತವಾದ ಕರ್ಮಗಳನ್ನು ಮಾಡುತ್ತಿರುವವರು ಧರ್ಮಿಗಳೆನಿಸಿಕೊಳ್ಳುತ್ತಾರೆ. ಅಂತಹವರೂ ಸಹ ತಮ್ಮ ಜೀವನ ವನ್ನು ಸುಖದಿಂದಲೂ, ತೃಪ್ತಿಯಿಂದಲೂ ನಡೆಸುತ್ತಿರುತ್ತಾರೆ.

ಅನೇಕವಿಧವಾದ ಪ್ರಾಪಂಚಿಕಕಾಮನೆಗಳ ಪ್ರಾಪ್ತಿಗಾಗಿಯೂ ಮತ್ತು ಇತರರ ಮೇಲಿನ ಅಸೂಯೆಯಿಂದಲೂ ಯಜ್ಞ-ಯಾಗಾದಿಗಳನ್ನು ಮಾಡು ವುದೂ ಉಂಟು. ಇಂತಹ ಕಾಮ್ಯವಾದ ಮತ್ತು ಪರಹಿಂಸಕವಾದ ಯಜ್ಞ ಗಳಲ್ಲಿ ಮಾಡುವ ಪಶುಹನನವು ಕ್ರೂರವಾದುದೆಂದೂ, ನಿರ್ದಯದಿಂದ ಕೂಡಿದುದೆಂದೂ ಭಾವಿಸಲ್ಪಡುತ್ತದೆ. ಇದನ್ನು ಸತ್ಯ ಅಥವಾ ಋಜು ಮಾರ್ಗವೆಂದು ಜ್ಞಾನಿಗಳೂ ಒಪ್ಪಲಾರರು. ಪ್ರಾಪಂಚಿಕಸುಖಸಾಧನೆಗಾಗಿ ಇಂತಹ ಅಧರ್ಮವನ್ನು ಮಾಡುವವನನ್ನು ಅನರ್ಥಬುದ್ಧಿಯವನೆಂದು ಕರೆಯುತ್ತಾರೆ. ಜಿತೇಂದ್ರಿಯನಲ್ಲದ ಇವನು ಸಂಪಾದಿಸಿದ ಹಣವೂ ಪಾಪ ಭೂಯಿಷ್ಠವಾಗಿರುತ್ತದೆ. ಆದುದರಿಂದ, ಜ್ಞಾನಿಗಳ ಅಥವಾ ಯೋಗಿಗಳ ಮಾರ್ಗವು ಸರಳವಾಗಿಯೂ, ದೋಷರಹಿತವಾಗಿಯೂ, ಋಜುತ್ವದಿಂದ ಕೂಡಿದುದಾಗಿಯೂ, ಸಮಾಧಿಸ್ಥಿತಿಗೆ ಒಯ್ಯುವುದಾಗಿಯೂ ಇರುತ್ತದೆ. ಆದುದರಿಂದಲೇ ಈ ಮಾರ್ಗವು ಪರಮಶ್ರೇಷ್ಠವಾದುದು."

ಅಷ್ಟಕನು ಯಯಾತಿಯನ್ನು ಹಿಂದಿನಂತೆಯೇ ಪುನಃ ಪ್ರಶ್ನಿಸುತ್ತಾನೆ :

**ಕೇನಾಸಿ ಹೂತಃ ಪ್ರಹಿತೋಽಸಿ ರಾಜ-**
**ನ್ಯುವಾ ಸ್ರಗ್ವೀ ದರ್ಶನೀಯಃ ಸುವರ್ಚಾಃ ।**
**ಕುತ ಆಯಾತಃ ಕತರಸ್ಯಾಂ ದಿಶಿ ತ್ವ-**
**ಮುತಾಹೋಸ್ವಿತ್ಪಾರ್ಥಿವಂ ಸ್ಥಾನಮಸ್ತಿ ॥೬॥**

"ಮಹಾರಾಜ! ಯಾರು ನಿನ್ನನ್ನು ಆಹ್ವಾನಿಸಿದ್ದಾರೆ? ನಿನ್ನನ್ನು

ಯಾರು ಇಲ್ಲಿಗೆ ಕಳುಹಿಸಿದ್ದಾರೆ? ನಿನ್ನನ್ನು ನೋಡಿದರೆ ಸಾಕ್ಷಾತ್ ದೇವ ಪುರುಷನಂತೆಯೇ ಕಾಣುತ್ತಿರುವೆ. ಯುವಕನಾಗಿರುವೆ. ದೇವಮಾಲೆಯನ್ನು ಧರಿಸಿರುವೆ. ಒಳ್ಳೆಯ ತೇಜಸ್ಸಿನಿಂದಲೂ ಕೂಡಿರುವೆ. ಸುದರ್ಶನೀಯನಾಗಿ ರುವ ನಿನ್ನನ್ನು ಪುನಃ-ಪುನಃ ನೋಡುತ್ತಲೇ ಇರಬೇಕೆನ್ನಿಸುತ್ತದೆ. ನೀನು ಎಲ್ಲಿಂದ ಬಂದೆ? ಮುಂದೆ ಯಾವ ದಿಕ್ಕಿನೆಡೆಗೆ ಹೋಗಬೇಕೆಂದಿರುವೆ? ನಿನಗೆ ಭೂಮಿಯ ಮೇಲಿರಲು ಉತ್ತಮವಾದ ಸ್ಥಾನವು ಯಾವುದಾದರೂ ಇರುವುದೇ?"

**ಇಮಂ ಭೌಮಂ ನರಕಂ ಕ್ಷೀಣಪುಣ್ಯಃ**
**ಪ್ರವೇಷ್ಟುಮುರ್ವೀಂ ಗಗನಾದ್ವಿಪ್ರಹೀಣಃ ।**
**ಉತ್ಪತ್ಸ್ಯಹಂ ವಃ ಪ್ರತಿಷ್ಯಾಮ್ಯನನ್ತರಂ**
**ತ್ವರನ್ತಿ ಮಾಂ ಲೋಕಪಾ ಬ್ರಹ್ಮಣೋ ಯೇ ॥೭॥**

**ಸತಾಂ ಸಕಾಶೇ ತು ವೃತಃ ಪ್ರಪಾತ-**
**ಸ್ತೇ ಸಂಗತಾ ಗುಣವನ್ತಸ್ತು ಸರ್ವೇ ।**
**ಶಕ್ರಾಚ್ಚ ಲಬ್ಧೋ ಹಿ ವರೋ ಮಯೈಷ**
**ಪತಿಷ್ಯತಾ ಭೂಮಿತಲಂ ನರೇನ್ದ್ರ ॥೮॥**

"ರಾಜಸಿಂಹ! ಹಿಂದೆಯೇ ಹೇಳಿದಂತೆ ನಾನು ಅಹಂಕಾರಪಟ್ಟಿದ್ದ ರಿಂದ ನನ್ನ ಪುಣ್ಯವೆಲ್ಲವೂ ಕ್ಷೀಣವಾಗಿ ಹೋಯಿತು. ಪುಣ್ಯವು ಕ್ಷೀಣಿಸಿ ದೊಡನೆಯೇ ಭೌಮನರಕಕ್ಕೆ ದೂಡಲ್ಪಟ್ಟೆನು. ನಾನು ನಿಶ್ಚಯವಾಗಿಯೂ ಮುಂದಿನ ಕ್ಷಣದಲ್ಲಿ ಭೂಮಿಗೆ ಬೀಳಲಿದ್ದೇನೆ. ಆದರೆ ಪುಣ್ಯಾತ್ಮರಾದ ನಿಮ್ಮ ಗಳೊಡನೆಯೇ ಸಂಭಾಷಣೆಯನ್ನು ಮಾಡುತ್ತಿರುವುದರಿಂದ ನಾನಿಲ್ಲಿಯೇ ನಿಲ್ಲಲು ಸಾಧ್ಯವಾಗಿದೆ. ಸಂಭಾಷಣೆಯು ಮುಗಿದೊಡನೆಯೇ ಕೆಳಕ್ಕೆ ಬೀಳು ತ್ತೇನೆ. ಈಗಲೂ ಬ್ರಹ್ಮನ ಲೋಕಪಾಲಕರು ನನ್ನನ್ನು ಶೀಘ್ರವಾಗಿ ಕೆಳಗೆ ಬೀಳುವಂತೆ ಅವಸರಪಡಿಸುತ್ತಿದ್ದಾರೆ. ಆದರೆ ನಾನು ಕೆಳಗೆ ಬೀಳಲಿದ್ದಾಗ ಸತ್ಪುರುಷರ ಮಧ್ಯದಲ್ಲಿ ಬೀಳಲು ಇಚ್ಛಿಸಿದ್ದೇನೆ. ಈಗ ನನ್ನೊಡನೆ ಸೇರಿರುವ ಸಕಲರೂ ಗುಣವಂತರೇ ಆಗಿರುತ್ತಾರೆ. ಇಂದ್ರನು ನನ್ನನ್ನು ಭೂಮಿಯ ಕಡೆಗೆ ನೂಕುತ್ತಿದ್ದಾಗ ನಾನವನನ್ನು ಪ್ರಾರ್ಥಿಸಿ ಇದೇ ವರವನ್ನೇ ಅವನಿಂದ ಪಡೆದೆನು."

ಅಷ್ಟಕ :–

ಪೃಚ್ಛಾಮಿ ತ್ವಾಂ ಮಾ ಪ್ರಪತ ಪ್ರಪಾತಂ
ಯದಿ ಲೋಕಾಃ ಪಾರ್ಥಿವ ಸನ್ತಿ ಮೇಽತ್ರ ।
ಯದ್ಯನ್ತರಿಕ್ಷೇ ಯದಿ ವಾ ದಿವಿ ಸ್ಥಿತಾಃ
ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ॥೯॥

"ತಾತ! ನೀನು ಪಾರಲೌಕಿಕಧರ್ಮವನ್ನು ತಿಳಿದಿರುವೆಯೆಂದು ನಾನು ಭಾವಿಸಿದ್ದೇನೆ. ಈ ಕಾರಣದಿಂದಾಗಿ ನಿನಗೆ ಪುಣ್ಯಾಪುಣ್ಯಕರ್ಮಗಳಿಗೆ ಪ್ರಾಪ್ತ ವಾಗುವ ಲೋಕಗಳಾವುವೆಂಬುದೂ ತಿಳಿದಿರುವುದು. ನಾನು ಇದುವರೆಗೆ ಮಾಡಿರುವ ಸತ್ಕರ್ಮಗಳಿಂದ ನನಗೇನಾದರೂ ಅಂತರಿಕ್ಷದಲ್ಲಿಯೇ ಆಗಲೀ, ಸ್ವರ್ಗದಲ್ಲಿಯೇ ಆಗಲೀ–ಯಾವುದಾದರೂ ಪುಣ್ಯಲೋಕಗಳು ಲಭಿಸು ವುವೇ? ಒಂದು ವೇಳೆ ಅಂತಹ ಫಲವು ನನಗೆ ಲಭ್ಯವಿರುವುದಾದರೆ ಆ ಫಲದ ಪ್ರಭಾವದಿಂದ ನೀನು ಕೆಳಕ್ಕೆ ಬೀಳಬೇಡ."

"ಅಷ್ಟಕ! ನೀನು ಮಾಡಿರುವ ಸತ್ಕರ್ಮಗಳಿಂದ ನಿನಗೆ ಪ್ರಾಪ್ತ ವಾಗುವ ಲೋಕಗಳು ಅಗಣಿತವಾಗಿವೆ. ಈ ಪೃಥ್ವಿಯಲ್ಲಿ ಎಷ್ಟು ಹಸುಗಳೂ ಕುದುರೆಗಳೂ ಇರುವುವೋ, ಅರಣ್ಯಗಳಲ್ಲಿ ಮತ್ತು ಪರ್ವತಗಳಲ್ಲಿ ಎಷ್ಟು ಇತರ ಪ್ರಾಣಿಗಳಿರುವುವೋ–ಅಷ್ಟು ಸಂಖ್ಯೆಯಲ್ಲಿ ಪುಣ್ಯಲೋಕಗಳು ನಿನಗೆ ಸಿದ್ಧವಾಗಿವೆ. ಆ ಲೋಕಗಳಲ್ಲೆಲ್ಲಾ ಅನೇಕ ಸಹಸ್ರವರ್ಷಗಳ ಪರ್ಯಂತವಾಗಿ ನೀನು ಸುಖೋಪಭೋಗಗಳನ್ನು ಅನುಭವಿಸುತ್ತಿರಬಹುದು."

"ರಾಜೇಂದ್ರ! ಹಾಗಾದರೆ ಆ ಲೋಕಗಳಲ್ಲಿನ ಸುಖೋಪಭೋಗ ಗಳನ್ನು ಅನುಭವಿಸುವ ಇಚ್ಛೆಯು ನನಗಿರುವುದಿಲ್ಲ. ಅವುಗಳು ಲಭಿಸುವು ವೆಂದು ಭಾವಿಸಿ ನಾನು ಸತ್ಕಾರ್ಯಗಳನ್ನು ಮಾಡಿರುವುದಿಲ್ಲ. ಆದುದರಿಂದ ಸತ್ಕರ್ಮಫಲದಿಂದ ಪ್ರಾಪ್ತವಾಗಿರುವ ಲೋಕಗಳೆಲ್ಲವನ್ನೂ (ತತ್ಸಾಧಕವಾದ ಪುಣ್ಯವನ್ನು) ನಿನಗೇ ಕೊಟ್ಟುಬಿಟ್ಟಿದ್ದೇನೆ. ನೀನು ಕೆಳಗೆ ಬೀಳಬೇಡ. ಆ ಪುಣ್ಯಲೋಕಗಳು ಅಂತರಿಕ್ಷದಲ್ಲಿದ್ದರೂ ಸರಿಯೇ, ಸ್ವರ್ಗದಲ್ಲಿದ್ದರೂ ಸರಿಯೇ–ಅವುಗಳನ್ನು ನೀನು ಆಕ್ರಮಿಸಿ ಚಿರಕಾಲದವರೆಗೆ ಅಲ್ಲಿಯ ಸುಖೋಪಭೋಗಗಳನ್ನು ಅನುಭವಿಸು. ನಿನಗೆ ಈಗ ಉಂಟಾಗಿರುವ ಭ್ರಾಂತಿಯು ನಿರಸನವಾಗಲಿ."

ಧಾರ್ಮಿಕನಾದ ಯಯಾತಿಯು ಅಷ್ಟಕನಿತ್ತ ಮಹಾಪುಣ್ಯವನ್ನು ಒಡನೆಯೇ ಪರಿಗ್ರಹಿಸಲಿಲ್ಲ. ಅಷ್ಟಕನಿಗೆ ಹೇಳಿದನು :

**ನಾಸ್ಮದ್ವಿಧೋ ಬ್ರಾಹ್ಮಣೋ ಬ್ರಹ್ಮವಿಚ್ಚ**
**ಪ್ರತಿಗ್ರಹೇ ವರ್ತತೇ ರಾಜಮುಖ್ಯ ।**
**ಯಥಾ ಪ್ರದೇಯಂ ಸತತಂ ದ್ವಿಜೇಭ್ಯ-**
**ಸ್ತಥಾದದಂ ಪೂರ್ವಮಹಂ ನರೇನ್ದ್ರ ॥೧೨॥**

**ನಾಬ್ರಾಹ್ಮಣಃ ಕೃಪಣೋ ಜಾತು ಜೀವೇ-**
**ದ್ಯಾಙ್ಞಾಪಿ ಸ್ಯಾದ್ಬ್ರಾಹ್ಮಣೀ ವೀರಪತ್ನೀ ।**
**ಸೋಽಹಂ ನೈವಾಕೃತಪೂರ್ವಂ ಚರೇಯಂ**
**ವಿಧಿತ್ಸಮಾನಃ ಕಿಮು ತತ್ರ ಸಾಧು ॥೧೩॥**

"ನೃಪಶ್ರೇಷ್ಠನೇ! ನನ್ನಂತಹವನೂ ಮತ್ತು ಬ್ರಹ್ಮಜ್ಞಾನಿಯಾದ ಬ್ರಾಹ್ಮಣನೂ ದಾನವನ್ನು ತೆಗೆದುಕೊಳ್ಳಬಾರದು. ನಾನು ಅನೇಕ ಬ್ರಾಹ್ಮಣರಿಗೆ ಯಥಾಯೋಗ್ಯವಾಗಿ ದಾನಮಾಡಿರುವೆನು. ಬ್ರಾಹ್ಮಣನಲ್ಲದವನು ದೀನನಾಗಿ ಬೇಡುತ್ತಾ ಯಾವಾಗಲೂ ಜೀವಿಸದಿರಲಿ. ಬ್ರಾಹ್ಮಣಿಯಾದ (ಬ್ರಾಹ್ಮಣನಿಗೆ ಮಾತ್ರವೇ ವರಿಸಲು ಯೋಗ್ಯಳಾದ) 'ಯಾಚನಾ' ಎಂಬುವಳು ವೀರನ ಪತ್ನಿಯಾಗದಿರಲಿ. (ಕ್ಷತ್ರಿಯನೆಂದಿಗೂ ಯಾಚನೆಯನ್ನು ಅವಲಂಬಿಸುವುದು ಬೇಡ.) ಇಂತಹ ಅಭಿಪ್ರಾಯವನ್ನಿಟ್ಟುಕೊಂಡಿರುವ ನಾನು ಹಿಂದೆ ಮಾಡದಿರುವ ಪ್ರತಿಗ್ರಹವನ್ನು ಈಗ ಖಂಡಿತವಾಗಿಯೂ ಮಾಡುವುದಿಲ್ಲ. ಈ ವಿಷಯದಲ್ಲಿ ಸಾಧುವಾದುದನ್ನು ಮಾಡಲು ಇಚ್ಛಿಸುವವನು ಬೇರೇನು ತಾನೇ ಮಾಡಿಯಾನು?"

ತಮ್ಮ ಅಗ್ರಜನಾದ ಅಷ್ಟಕನ ಮತ್ತು ಯಯಾತಿಯ ಮಾತುಗಳನ್ನು ಕೇಳುತ್ತಾ ನಿಂತಿದ್ದ ಪ್ರತರ್ದನ, ವಸುಮಂತ, ಶಿಬಿ–ಇವರುಗಳು ತಮ್ಮ ಸತ್ಕರ್ಮದ ಫಲಗಳನ್ನು ಯಯಾತಿಗೆ ಕೊಡಲು ಇಚ್ಛಿಸಿದರು. ಪ್ರತರ್ದನನು ಮೊದಲು ಮಾತನಾಡುತ್ತಾ ಹೇಳಿದನು :

"ದಿವ್ಯವಾದ ರೂಪವುಳ್ಳವನೇ! ನಾನೂ ಸಹ ನಿನ್ನನ್ನು ಕುರಿತು ಒಂದು ಪ್ರಶ್ನೆಯನ್ನು ಕೇಳಬೇಕೆಂದಿರುವೆನು. ನನ್ನ ಹೆಸರು ಪ್ರತರ್ದನ. ನೀನು ಪಾರಲೌಕಿಕಧರ್ಮವನ್ನು ತಿಳಿದಿರುವೆಯೆಂಬ ನಮ್ಮಣ್ಣನ ಅಭಿಪ್ರಾಯವನ್ನೇ ನಾನೂ ಹೊಂದಿರುವೆನು. ನಿನಗೆ ಈ ಮೂರು ಜಗತ್ತುಗಳಲ್ಲಿಯೂ ತಿಳಿಯದಿರುವ ವಿಷಯಗಳೇ ಇಲ್ಲ. ಅಂತರಿಕ್ಷದಲ್ಲಿಯೇ ಆಗಲೀ, ಸ್ವರ್ಗದಲ್ಲಿಯೇ ಆಗಲೀ–ನಾನು ಮಾಡಿರುವ ಸತ್ಕರ್ಮಗಳಿಗೆ ಫಲರೂಪ ವಾದ ಪುಣ್ಯಲೋಕಗಳಿವೆಯೇ?"

"ತೇಜಸ್ಸಿನಿಂದ ಕೂಡಿರುವ ಸಾವಿರಾರು ಲೋಕಗಳು ನಿನ್ನನ್ನು ಪ್ರತೀಕ್ಷಿಸುತ್ತಿವೆ. ಆ ಲೋಕಗಳೆಲ್ಲವೂ ಅಮೃತಮಯವಾಗಿವೆ. ದುಃಖ ಶೂನ್ಯವಾಗಿವೆ. ಏಳೇಳು ದಿನಗಳು ನೀನು ಆ ಲೋಕಗಳಲ್ಲಿ ವಾಸಮಾಡುತ್ತಾ ಹೋದರೂ ನಿನ್ನನ್ನು ಪ್ರತೀಕ್ಷಿಸುತ್ತಿರುವ ಲೋಕಗಳು ಅನೇಕ ಕಲ್ಪ-ಕಲ್ಪಾಂತರಗಳವರೆಗೂ ಮುಗಿಯಲಾರವು."

"ರಾಜೇಂದ್ರ! ನನಗೆ ಉಪಲಬ್ಧವಾಗಿರುವ ಆ ಲೋಕಗಳೆಲ್ಲವನ್ನೂ ನಿನಗೇ ಕೊಟ್ಟುಬಿಟ್ಟಿದ್ದೇನೆ. ಅವುಗಳೆಲ್ಲವೂ ಈ ಕ್ಷಣದಿಂದಲೇ ನಿನ್ನವು ಗಳಾಗಲಿ. ಆ ಮಹಾಲೋಕಗಳು ಅಂತರಿಕ್ಷದಲ್ಲಿರಲಿ ಅಥವಾ ಸ್ವರ್ಗದಲ್ಲಿ ರಲಿ–ಅವುಗಳೆಲ್ಲವನ್ನೂ ನೀನು ಆಕ್ರಮಿಸಿ ಯಥಾಪೂರ್ವವಾಗಿ ಸುಖೋಪ ಭೋಗಗಳನ್ನು ಅನುಭವಿಸು. ಕೆಳಕ್ಕೆ ಬೀಳಬೇಡ. ಭೌಮನರಕಕ್ಕೆ ಬಿದ್ದು ಬಿಡುತ್ತೇನೆಂಬ ನಿನ್ನ ಭ್ರಾಂತಿಯು ನಿರಸನಹೊಂದಲಿ."

ಯಯಾತಿಯು ಪ್ರತರ್ದನನಿಗೂ ಧರ್ಮಮಾರ್ಗಾನುಸಾರವಾಗಿಯೇ ಉತ್ತರಿಸಿದನು :

**ನ ತುಲ್ಯತೇಜಾಃ ಸುಕೃತಂ ಕಾಮಯೇತ**
**ಯೋಗಕ್ಷೇಮಂ ಪಾರ್ಥಿವ ಪಾರ್ಥಿವಃ ಸನ್ ।**
**ದೈವಾದೇಶಾದಾಪದಂ ಪ್ರಾಪ್ಯ ವಿದ್ವಾಂ-**
**ಶ್ಚರೇನ್ನೃಶಂಸಂ ನ ಹಿ ಜಾತು ರಾಜಾ ॥೧೭॥**

**ಧರ್ಮ್ಯಂ ಮಾರ್ಗಂ ಯತಮಾನೋ ಯಶಸ್ಯಂ**
**ಕುರ್ಯಾನ್ನೃಪೋ ಧರ್ಮಮವೇಕ್ಷಮಾಣಃ ।**

**ನ ಮದ್ವಿಧೋ ಧರ್ಮಬುದ್ಧಿಃ ಪ್ರಜಾನ-**
**ನ್ಕುರ್ಯಾದೇವಂ ಕೃಪಣಂ ಮಾಂ ಯಥಾತ್ಥ ॥೧೮॥**

"ಪ್ರತರ್ದನ! ಸಮಾನಪ್ರಭಾವವುಳ್ಳ ರಾಜರಲ್ಲಿ ಒಬ್ಬರು ಮತ್ತೊಬ್ಬರಿಂದ ದಾನವನ್ನು ತೆಗೆದುಕೊಳ್ಳುವುದು ಉಚಿತವೆನಿಸಲಾರದು. ಅಂತಹುದರಲ್ಲಿ ವಿದ್ವಾಂಸನಾದ ರಾಜನು ದುರ್ವಿಧಿಯ ಕಾರಣದಿಂದುಂಟಾಗಿರುವ ದುರವಸ್ಥೆಯನ್ನು ನೀಗಿಕೊಳ್ಳಲು ಅಧರ್ಮಮಾರ್ಗವನ್ನೆಂದಿಗೂ ಅನುಸರಿಸಬಾರದು. ಯಾವಾಗಲೂ ರಾಜನಾದವನು ಧರ್ಮದೃಷ್ಟಿಯುಳ್ಳವನಾಗಿ ಧರ್ಮಾಚರಣೆಯನ್ನು ಮಾಡುತ್ತಾ ಕೀರ್ತಿಯನ್ನು ಗಳಿಸಬೇಕು. ಧರ್ಮದ ಸ್ವರೂಪವೇನೆಂಬುದನ್ನೂ, ನನ್ನ ಕರ್ತವ್ಯವೇನೆಂಬುದನ್ನೂ ತಿಳಿದಿರುವ ನಾನು, ಮೇಲೆ ಹೇಳಿದಂತೆ ನೀನು ಅರ್ಜಿಸಿದ ತಪಸ್ಸಿನ ಫಲವನ್ನು ಪರಿಗ್ರಹಿಸಿ ಹೀನಕಾರ್ಯವನ್ನೆಸಗಲೇ? ನನ್ನಂತೆಯೇ ಇರುವ ಇತರ ರಾಜರು ದಾನವನ್ನು ತೆಗೆದುಕೊಳ್ಳದೇ ಇರುವಾಗ ನಾನು ಹೇಗೆ ತಾನೇ ತೆಗೆದುಕೊಳ್ಳಲಿ?"

ಹೀಗೆ ಹೇಳಿದ ನೃಪತಿಯಾದ ಯಯಾತಿಯನ್ನು ಕುರಿತು ನೃಪೋತ್ತಮನಾದ ವಸುಮಂತನು ಹೇಳತೊಡಗಿದನು.

೯೨ನೆಯ ಅಧ್ಯಾಯವು ಮುಗಿಯಿತು.

೯೩ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ವಸುಮಂತ ಮತ್ತು ಶಿಬಿಗಳೊಡನೆ ಯಯಾತಿಯ ಸಂಭಾಷಣೆ: ಯಯಾತಿಯೊಡನೆ ಅಷ್ಟಕ ಮುಂತಾದವರ ಸ್ವರ್ಗಾರೋಹಣ

ವಸುಮಂತನು ಯಯಾತಿಯನ್ನು ಪ್ರಶ್ನಿಸುತ್ತಾನೆ :

"ಮಹಾರಾಜ! ನಾನು ಉಷದಶ್ವನ ಮಗನು. ನನ್ನನ್ನು ವಸುಮಂತನೆಂದು ಕರೆಯುತ್ತಾರೆ. ಅಷ್ಟಕ-ಪ್ರತರ್ದನರು ಕೇಳಿದಂತೆ ನಾನೂ ನಿನ್ನನ್ನು ಪ್ರಶ್ನಿಸಲಿಚ್ಛಿಸಿದ್ದೇನೆ. ನೀನು ಆತ್ಮಜ್ಞಾನಿಯಾಗಿರುವೆ. ಪರಲೋಕದ ಧರ್ಮವು ನಿನಗೆ ಸಂಪೂರ್ಣವಾಗಿ ತಿಳಿದಿರುವುದೆಂದು ನಾನೂ ಭಾವಿಸಿದ್ದೇನೆ. ನಾನು ಮಾಡಿರುವ ಸತ್ಕರ್ಮಗಳ ಫಲವಾಗಿ ಅಂತರಿಕ್ಷ

ದಲ್ಲಿಯೇ ಆಗಲೀ, ಸ್ವರ್ಗದಲ್ಲಿಯೇ ಆಗಲೀ–ನನಗೂ ಯಾವುದಾದರೂ ಪುಣ್ಯಲೋಕಗಳು ಲಭ್ಯವಾಗತಕ್ಕುವುಗಳಿವೆಯೇ?"

"ಅಂತರಿಕ್ಷದಲ್ಲಿ, ಪೃಥ್ವಿಯಲ್ಲಿ ಮತ್ತು ದಿಕ್ಕುಗಳಲ್ಲಿ ಸೂರ್ಯನ ತೇಜಸ್ಸಿನಿಂದ ಎಷ್ಟು ಪ್ರದೇಶಗಳು ಪ್ರಕಾಶಮಾನವಾಗಿರುವುವೋ–ಸ್ವರ್ಗದಲ್ಲಿ ಅಷ್ಟು ಲೋಕಗಳೂ ನಿನ್ನ ಪ್ರತೀಕ್ಷೆಯಲ್ಲಿವೆ. ನಿನ್ನ ಸತ್ಕರ್ಮಗಳ ಫಲವಾಗಿ ಉಪಲಬ್ಧವಾಗಿರುವ ಲೋಕಗಳ ಸಂಖ್ಯೆಯನ್ನು ಗಣನೆಮಾಡುವ ಸಾಧ್ಯತೆಯೇ ಇಲ್ಲ. ಅವುಗಳಿಗೆ ಅಂತ್ಯವೆಂಬುದೂ ಇಲ್ಲ, ವಸುಮಂತ!"

"ತಾತ! ಅವುಗಳೆಲ್ಲವನ್ನೂ ನಿನಗೆ ಕೊಟ್ಟುಬಿಡುತ್ತೇನೆ. ಮಹಾರಾಜ! ಕೆಳಕ್ಕೆ ಮಾತ್ರ ಬೀಳಬೇಡ. ನನ್ನ ಪಾಲಿನ ಆ ಲೋಕಗಳೆಲ್ಲವೂ ನಿನ್ನವುಗಳೇ ಆಗಲಿ. ಪ್ರತಿಗ್ರಹದ ವಿಷಯವಾಗಿ ನೀನು ಸ್ವಲ್ಪ ಸಂಕೋಚಪಟ್ಟೆಯಲ್ಲವೇ? ನೀನು ಅವುಗಳನ್ನು ದಾನವಾಗಿ ಪ್ರತಿಗ್ರಹಿಸುವುದು ದೋಷಯುಕ್ತವೆಂದು ಭಾವಿಸುವೆಯಾದರೆ ಒಂದು ಹುಲ್ಲುಕಡ್ಡಿಯನ್ನು ಮೌಲ್ಯವನ್ನಾಗಿ ಕೊಟ್ಟು ನೀನು ಆ ಲೋಕಗಳನ್ನು ಪಡೆಯಬಹುದಾಗಿದೆ."

ನ ಮಿಥ್ಯಾಹಂ ವಿಕ್ರಯಂ ವೈ ಸ್ಮರಾಮಿ
ವೃಥಾ ಗೃಹೀತಂ ಶಿಶುಕಾಚ್ಛಙ್ಕಮಾನಃ ।
ಕುರ್ಯಾಂ ನ ಚೈವಾಕೃತಪೂರ್ವಮನ್ಯೈ–
ರ್ವಿಧಿತ್ಸಮಾನಃ ಕಿಮು ತತ್ರ ಸಾಧು ॥೪॥

"ವಸುಮಂತ! ಹುಟ್ಟಿದ ಮೊದಲ್ಗೊಂಡು ನಡೆದುದೆಲ್ಲವನ್ನೂ ಜ್ಞಾಪಿಸಿಕೊಂಡರೂ ನಾನು ವಸ್ತುವಿಗೆ ತಕ್ಕುದಾದ ಬೆಲೆಯನ್ನು ಕೊಡದೇ ತೆಗೆದುಕೊಂಡಿರುವ ಸ್ಮರಣೆಯೇ ನನಗಿರುವುದಿಲ್ಲ. ಅಸಮಾನವಾದ ಮೌಲ್ಯವನ್ನು ಕೊಡುವುದು ಅಥವಾ ಮೌಲ್ಯವನ್ನು ಕೊಡದೇ ಇರುವುದು–ಎರಡೂ ಒಂದೇ ಆಗುತ್ತದೆ. ನಿನ್ನ ತಪಃಫಲವನ್ನು ಹುಲ್ಲುಕಡ್ಡಿಯನ್ನು ಕೊಟ್ಟು ಪಡೆದರೆ ಸುಮ್ಮನೆ ತೆಗೆದುಕೊಂಡಂತೆಯೇ ಆಗುತ್ತದೆ. ನಮ್ಮ ವಂಶದಲ್ಲಿ ಹಿಂದೆ ಯಾರೂ ಈ ವಿಧವಾದ ವ್ಯವಹಾರವನ್ನು ಮಾಡಿರುವುದಿಲ್ಲ. ಆದುದರಿಂದ, ಸಾಧು ಯಾವುದು ಅಸಾಧು ಯಾವುದು–ಎಂದು ವಿವೇಚಿಸಲು ಶಕ್ತಿಯಿರುವ ನಾನು ನೀನು ಹೇಳಿದಂತಹ ವ್ಯವಹಾರವನ್ನು ಮಾಡುವುದಿಲ್ಲ."

**ತಾಂಸ್ತ್ವಂ ಲೋಕಾನ್ಪ್ರತಿಪದ್ಯಸ್ವ ರಾಜ-**
**ನ್ಮಯಾ ದತ್ತಾನ್ಯದಿ ನೇಷ್ಟಃ ಕ್ರಯಸ್ತೇ ।**
**ಅಹಂ ನ ತಾನ್ವೈ ಪ್ರತಿಗನ್ತಾ ನರೇನ್ದ್ರ**
**ಸರ್ವೇ ಲೋಕಾಸ್ತವ ತೇ ವೈ ಭವನ್ತು ॥೫॥**

"ತಾತ! ದರ್ಭೆಯ ಮೌಲ್ಯವನ್ನು ಕೊಟ್ಟು ಪುಣ್ಯಲೋಕಗಳ ಪ್ರಾಪಕವಾದ ನನ್ನ ಪುಣ್ಯಫಲವನ್ನು ನೀನು ಕ್ರಯಕ್ಕೆ ಪಡೆಯಲು ಇಚ್ಛಿಸು ವುದಿಲ್ಲವಾದರೆ ನಾನೇ ನಿನಗೆ ಅರ್ಪಿಸಲಿರುವ ಲೋಕಗಳನ್ನು ನೀನು ಪಡೆಯಬಹುದಾಗಿದೆ. ನಾನೆಂದಿಗೂ ಆ ಲೋಕಗಳಿಗೆ ಹೋಗುವುದಿಲ್ಲ. ಆದುದರಿಂದ ಆ ಲೋಕಗಳೆಲ್ಲವೂ ನಿನ್ನವುಗಳೇ ಆಗಲಿ."

ವಸುಮಂತನು ಹೀಗೆಂದು ಹೇಳಿದನಂತರ ಶಿಬಿಯು ಯಯಾತಿಯನ್ನು ಪ್ರಶ್ನಿಸಿದನು :

**ಪೃಚ್ಛಾಮಿ ತ್ವಾಂ ಶಿಬಿರೌಶೀನರೋಽಹಂ**
**ಮಮಾಪಿ ಲೋಕಾ ಯದಿ ಸನ್ತೀಹ ತಾತ ।**
**ಯದ್ಯನ್ತರಿಕ್ಷೇ ಯದಿ ವಾ ದಿವಿ ಶ್ರಿತಾಃ**
**ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ॥೬॥**

"ತಾತ! ನಾನು ಉಶೀನರನ ಮಗನು. ನನ್ನನ್ನು ಶಿಬಿಯೆಂದು ಕರೆಯುತ್ತಾರೆ. ಅಂತರಿಕ್ಷದಲ್ಲಿಯೇ ಆಗಲೀ, ಸ್ವರ್ಗದಲ್ಲಿಯೇ ಆಗಲೀ– ಇರುವ ಲೋಕಗಳಲ್ಲಿ ಯಾವುದಾದರೂ ಲೋಕಗಳನ್ನು ನಾನು ಮಾಡಿರುವ ಸತ್ಕರ್ಮಗಳಿಂದ ಪಡೆದಿರುವೆನೇ? ತಿಳಿಸು. ನಾನೂ ಸಹ ನಿನ್ನನ್ನು ಕ್ಷೇತ್ರಜ್ಞ ನೆಂದೂ ಪಾರಲೌಕಿಕಧರ್ಮಜ್ಞನೆಂದೂ ತಿಳಿದಿರುವೆನು."

**ಯತ್ತ್ವಂ ವಾಚಾ ಹೃದಯೇನಾಪಿ ಸಾಧೂ-**
**ನ್ಪರೀಪ್ಸಮಾನಾನ್ನಾವಮಂಸ್ಥಾ ನರೇನ್ದ್ರ ।**
**ತೇನಾನನ್ತಾ ದಿವಿ ಲೋಕಾಃ ಶ್ರಿತಾಸ್ತೇ**
**ವಿದ್ಯುದ್ರೂಪಾಃ ಸ್ವನವನ್ತೋ ಮಹಾನ್ತಃ ॥೭॥**

"ಶಿಬಿಯೇ! ನಿನ್ನ ಸಮೀಪಕ್ಕೆ ಆಗಮಿಸಿದ ಸಾಧು-ಸತ್ಪುರುಷರನ್ನು

ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ ನೀನು ಅವಮಾನಗೊಳಿಸಿರು ವುದಿಲ್ಲ. ಆದುದರಿಂದ ವಿದ್ಯುತ್ತಿನ ರೂಪದಲ್ಲಿರುವ, ಬಹುಪ್ರಕಾಶಮಾನ ವಾಗಿರುವ, ಸುಮಧುರಶಬ್ದಗಳಿಂದ ಕೂಡಿರುವ ಅನಂತವಾದ ಮಹಾ ಲೋಕಗಳು ಸ್ವರ್ಗದಲ್ಲಿ ನಿನಗಾಗಿ ಸಿದ್ಧವಾಗಿವೆ."

**ತಾಂಸ್ತ್ವಂ ಲೋಕಾನ್ಪ್ರತಿಪದ್ಯಸ್ವ ರಾಜ-**
**ನ್ಮಯಾ ದತ್ತಾನ್ಯದಿ ನೇಷ್ಟಃ ಕ್ರಯಸ್ತೇ ।**
**ನ ಚಾಹಂ ತಾನ್ಪ್ರತಿಪತ್ಸ್ಯೇಹ ದತ್ತ್ವಾ**
**ಯತ್ರ ಗತ್ವಾ ನಾನುಶೋಚನ್ತಿ ಧೀರಾಃ ॥೮॥**

"ಮಹಾರಾಜ! ಆ ಪುಣ್ಯಲೋಕಗಳೆಲ್ಲವನ್ನೂ ನೀನೇ ಪರಿಗ್ರಹಿಸು. ನಿನಗೆ ಆ ಲೋಕಗಳನ್ನು ಕ್ರಯಕ್ಕೆ ತೆಗೆದುಕೊಳ್ಳುವ ಇಚ್ಛೆಯಿಲ್ಲದಿದ್ದರೂ ನಾನೇ ನಿನಗೆ ಅವುಗಳನ್ನು ಕೊಟ್ಟುಬಿಟ್ಟಿದ್ದೇನೆ. ನೀನವುಗಳನ್ನು ಪರಿಗ್ರಹಿಸಲೇಬೇಕು. ನಾನು ದಾನಮಾಡಿದ ಲೋಕಗಳಿಗೆ ಪುನಃ ಹೋಗಲಾರೆನು. ಯಾವ ಲೋಕಕ್ಕೆ ಹೋಗಿ ಧೀರರಾದವರು ( ಆತ್ಮಜ್ಞಾನಿಗಳು ) ಪುನರಾವೃತ್ತಿಯನ್ನು ಕುರಿತು ಶೋಕಿಸುವುದಿಲ್ಲವೋ–ಆ ಒಂದು ಲೋಕಕ್ಕೆ ಮಾತ್ರವೇ ನಾನು ಹೋಗಲು ಇಚ್ಛಿಸುತ್ತೇನೆ. (ಪುಣ್ಯವು ಕ್ಷಯಿಸಿದೊಡನೆಯೇ ಕೆಳಕ್ಕೆ ಬೀಳಬೇಕಾಗುವ ಯಾವ ಲೋಕಗಳಿಗೂ ನಾನು ಹೋಗಲಾರೆನು.)"

"ಶಿಬಿ! ನೀನು ಇಂದ್ರನಿಗೆ ಸಮಾನವಾದ ಪ್ರಭಾವವುಳ್ಳವನಾಗಿರುವೆ. ಆದುದರಿಂದ ನಿನ್ನ ಉಪಭೋಗಕ್ಕಾಗಿ ಅಪಾರವಾದ ಲೋಕಗಳು ಸಿದ್ಧ ವಾಗಿವೆ. ನೀನು ಆ ಲೋಕಗಳಿಗೆ ಹೋದರೂ ಅಥವಾ ಹೋಗದೆಯೇ ಇದ್ದರೂ ನಾನು ಮಾತ್ರ ನಿನ್ನ ದಾನವನ್ನು ಸ್ವೀಕರಿಸಲು ಸಿದ್ಧನಾಗಿಲ್ಲ. ನೀನು ಜಯಿಸಿರುವ ಆ ಪುಣ್ಯಲೋಕಗಳಿಗೆ ನಾನು ಹೋಗುವುದಿಲ್ಲ."

ಯಯಾತಿಯ ಮಾತುಗಳನ್ನು ಕೇಳಿ ಅಷ್ಟಕನು ಹೇಳಿದನು :

"ಮಹಾರಾಜ! ನಾವು ನಾಲ್ವರೂ ಪ್ರತ್ಯೇಕ-ಪ್ರತ್ಯೇಕವಾಗಿ ನಮ್ಮ-ನಮ್ಮ ಪುಣ್ಯಫಲಗಳನ್ನು ಅಥವಾ ಪುಣ್ಯದ ಫಲವಾಗಿ ನಾವು ಸಾಧಿಸಿರುವ

ಲೋಕಗಳನ್ನು ನಿನಗೆ ಸೌಮನಸ್ಯದಿಂದ ಕೊಟ್ಟುಬಿಟ್ಟಿದ್ದೇವೆ. ನೀನವುಗಳನ್ನು ಪ್ರತಿಗ್ರಹಿಸದಿದ್ದರೆ ದತ್ತಮಾಡಿದನಂತರ ಅವನ್ನು ಪುನಃ ಪಡೆಯಲು ನಾವೂ ಸಿದ್ಧರಾಗಿಲ್ಲ. ಆದುದರಿಂದ ನಾವುಗಳೆಲ್ಲರೂ ನಮ್ಮ ಪುಣ್ಯಗಳನ್ನು ನಿನಗೇ ಧಾರೆಯೆರೆದು ಭೌಮನರಕಕ್ಕೆ ( ಭೂಲೋಕಕ್ಕೆ ) ಹೊರಟುಹೋಗುತ್ತೇವೆ."

"ರಾಜರ್ಷಿಗಳೇ! ನೀವುಗಳೆಲ್ಲರೂ ಸತ್ಯಸಂಧರೂ, ಧರ್ಮನಿಷ್ಠರೂ, ಸತ್ಪುರುಷರೂ ಆಗಿರುವಿರಿ. ಪರಿಗ್ರಹಿಸಲು ಯೋಗ್ಯವಾದುದನ್ನು ನನಗೆ ಕೊಡಿರಿ. ಸ್ವೀಕರಿಸುತ್ತೇನೆ. ಏಕೆಂದರೆ : ಸಾಧುಪುರುಷನಾದವನು ಯೋಗ್ಯ ವಾದುದನ್ನಷ್ಟೇ ಸ್ವೀಕರಿಸುತ್ತಾನೆ. ಆದರೆ ಹಿಂದೆಂದೂ ಮಾಡದ ಪುಣ್ಯ ಪ್ರತಿಗ್ರಹಕಾರ್ಯವನ್ನು ಇಂದು ಮಾಡುವುದು ಸರಿಯಲ್ಲವೆಂದು ನಾನು ಭಾವಿಸಿದ್ದೇನೆ."

ಜನಮೇಜಯ! ಆ ವೇಳೆಗೆ ಸರಿಯಾಗಿ ಸ್ವರ್ಣಮಯವಾದ ಐದು ವಿಮಾನಗಳು ಆಕಾಶದಲ್ಲಿ ಕಾಣಿಸಿಕೊಂಡುವು. ಅವುಗಳನ್ನು ನೋಡಿದ ಅಷ್ಟಕನು ಯಯಾತಿಯನ್ನು ಪ್ರಶ್ನಿಸಿದನು :

"ಮಹಾರಾಜ! ಯಾವ ದಿವ್ಯರಥಗಳಲ್ಲಿ ಕುಳಿತು ಮನುಷ್ಯನು ಶಾಶ್ವತವಾದ ಲೋಕಗಳಿಗೆ ಹೋಗಲಿಚ್ಛಿಸುತ್ತಾನೆ? ಅಲ್ಲಿ ಕಾಣುತ್ತಿರುವ ಆ ಐದು ಸುವರ್ಣಮಯವಾದ ರಥಗಳು ಯಾರವು?"

"ಅಷ್ಟಕ! ಆ ಐದು ಸುವರ್ಣಮಯ ರಥಗಳೂ ನಿಮ್ಮನ್ನು ಶಾಶ್ವತ ವಾದ ಲೋಕಗಳಿಗೆ ಒಯ್ಯುತ್ತವೆ. ಎತ್ತರದಲ್ಲಿರುವ ಆ ಐದು ರಥಗಳು ಅಗ್ನಿಗಳ ಜ್ವಾಲೆಗಳಂತೆಯೇ ಆಕಾಶದಲ್ಲಿ ಪ್ರಕಾಶಿಸುತ್ತಿವೆ."

"ತಾತ! ರಥವನ್ನು ಆರೋಹಣಮಾಡಿ ಆಕಾಶದ ಮೇಲ್ಭಾಗಕ್ಕೆ ಪ್ರಯಾಣಮಾಡು. ಕಾಲವು ಬಂದಾಗ ನಾವೂ ಅಲ್ಲಿಗೇ ಆಗಮಿಸುತ್ತೇವೆ."

"ಅಷ್ಟಕ! ನಾವೆಲ್ಲರೂ ಈಗ ಈ ಐದು ರಥಗಳಲ್ಲಿ ಕುಳಿತು ಸ್ವರ್ಗಕ್ಕೆ ಹೋಗಬೇಕಾಗಿದೆ. ನಾವೆಲ್ಲರೂ ನಮ್ಮ-ನಮ್ಮ ಸತ್ಕರ್ಮಗಳಿಂದ ಸ್ವರ್ಗ ವನ್ನು ಜಯಿಸಿರುತ್ತೇವೆ. ಸ್ವಲ್ಪವಾದರೂ ಧೂಳಿಲ್ಲದ ( ರಜಸ್ಸಿಲ್ಲದ

ಸಾತ್ತ್ವಿಕವಾದ ) ದೇವಲೋಕದ ಮಾರ್ಗಗಳು ನಮಗೆ ಈಗಾಗಲೇ ಕಾಣು ತ್ತಿವೆಯಲ್ಲವೇ?"

ಜನಮೇಜಯ! ಐವರೂ ಐದು ರಥಗಳಲ್ಲಿ ಕುಳಿತು ಧರ್ಮದ ಬಲದಿಂದ ಸ್ವರ್ಗಾರೋಹಣಮಾಡಿದರು. ಆ ಸಮಯದಲ್ಲಿ ಭೂಮ್ಯಂತರಿಕ್ಷ ಗಳಲ್ಲಿಯೂ ಅವರ ದಿವ್ಯಪ್ರಭೆಯು ವ್ಯಾಪ್ತವಾಯಿತು.

ಆ ಐದು ರಥಗಳಲ್ಲಿ ಶಿಬಿಯು ಕುಳಿತಿದ್ದ ರಥವು ಬಹಳ ವೇಗವಾಗಿ ಮುಂದೆ-ಮುಂದೆ ಹೋಗುತ್ತಿದ್ದಿತು. ಅದನ್ನು ಕಂಡ ಅಷ್ಟಕನು ಯಯಾತಿ ಯನ್ನು ಪ್ರಶ್ನಿಸಿದನು :

"ಮಹಾರಾಜ! ಮಹಾತ್ಮನಾದ ಇಂದ್ರನು ನನ್ನ ಪರಮಮಿತ್ರನಾಗಿ ರುವುದರಿಂದ ನಾನೇ ಮೊದಲು ಸ್ವರ್ಗವನ್ನು ಸೇರುವೆನೆಂಬುದು ನನ್ನ ಭಾವನೆಯಾಗಿದ್ದಿತು. ಆದರೆ ನಮ್ಮೆಲ್ಲರನ್ನೂ ಹಿಂದುಳಿಸಿ ಶಿಬಿಯೊಬ್ಬನೇ ಬಹುವೇಗವಾಗಿ ಹೋಗುತ್ತಿದ್ದಾನೆ. ಯಾವ ಕಾರಣದಿಂದ ಶಿಬಿಯು ಇತರರ ರಥಗಳನ್ನು (ವಾಹನಗಳನ್ನು ) ಅತಿಕ್ರಮಿಸಿ ವೇಗದಿಂದ ಮುಂದೆ ಹೋಗುತ್ತಿದ್ದಾನೆ?"

ಯಯಾತಿ :

**ಆದದದ್ದೇವಯಾನಾಯ ಯಾವದ್ವಿತ್ತಮುಮಿನ್ದತ ।**
**ಉಶೀನರಸ್ಯ ಪುತ್ರೋಽಯಂ ತಸ್ಮಾಚ್ಛ್ರೇಷ್ಠೋ ಹಿ ವಃ ಶಿಬಿಃ ॥೧೮॥**

**ದಾನಂ ತಪಃ ಸತ್ಯಮಥಾಪಿ ಧರ್ಮೋ**
**ಹ್ರೀಃ ಶ್ರೀಃ ಕ್ಷಮಾ ಸೌಮ್ಯಮಥೋ ವಿಧಿತ್ಸಾ ।**
**ರಾಜನ್ನೇತಾನ್ಯಪ್ರಮೇಯಾಣಿ ರಾಜ್ಞಃ**
**ಶಿಬೇಃ ಸ್ಥಿತಾನ್ಯಪ್ರತಿಮಸ್ಯ ಬುದ್ಧ್ಯಾ ।**
**ಏವಂವೃತ್ತೋ ಹ್ರೀನಿಷೇವಶ್ಚ ಯಸ್ಮಾ-**
**ತ್ತಸ್ಮಾಚ್ಛಿಬಿರತ್ಯಗಾದ್ವೈ ರಥೇನ ॥೧೯॥**

"ಅಷ್ಟಕ! ಶಿಬಿಯು ತನ್ನದಾಗಿ ಏನೊಂದನ್ನೂ ಇಟ್ಟುಕೊಳ್ಳಲಿಲ್ಲ. ದೇವಮಾರ್ಗವನ್ನು ಹಿಡಿಯಲೆಂದೇ ಎಲ್ಲವನ್ನೂ ದಾನಮಾಡಿಬಿಟ್ಟನು. ಇದು ಮಹಾದಾನವೇ ಸರಿ. ( ಮೇಲಾಗಿ ಅವನಿಗೆ ಪುನರಾವೃತ್ತಿರಹಿತವಾದ

ಬ್ರಹ್ಮಲೋಕವು ಬೇಕೆಂಬ ಅಪೇಕ್ಷೆಯೇ ಹೊರತು ಪುಣ್ಯಲೋಕಗಳೂ ಅವನಿಗೆ ಬೇಡವಾದುವು.) ಆದುದರಿಂದ ಅವನು ನಿಮ್ಮೆಲ್ಲರಿಗಿಂತಲೂ ಶ್ರೇಷ್ಠನೆಂಬುದರಲ್ಲಿ ಸಂಶಯವೇ ಇಲ್ಲ.

ದಾನ, ತಪಸ್ಸು, ಸತ್ಯನಿಷ್ಠೆ, ಧರ್ಮನಿಷ್ಠೆ, ಸೌಜನ್ಯ, ಕ್ಷಮೆ, ದಯೆ ಇವೆಲ್ಲವೂ ಶಿಬಿಯಲ್ಲಿ ಮೂರ್ತಿಮತ್ತಾಗಿವೆ. ಬುದ್ಧಿಯಲ್ಲಿಯೂ ಅವನಿಗೆ ಸಮಾನರಾದವರು ಯಾರೂ ಇರುವುದಿಲ್ಲ.

ಶಿಬಿಯು ಸದಾಚಾರಸಂಪನ್ನನಾಗಿಯೂ, ಲಜ್ಜಾಶೀಲನಾಗಿಯೂ, ಸಕಲಗುಣಪರಿಪೂರ್ಣನಾಗಿಯೂ ಇದ್ದುದರಿಂದಲೇ ನಮ್ಮೆಲ್ಲರನ್ನೂ ಹಿಂದುಳಿಸಿ ಅವನು ಮುಂದೆ ಹೊರಟುಹೋದನು."

ಜನಮೇಜಯ! ರಥವು ಮುಂದೆ ಸ್ವಲ್ಪದೂರ ಸಾಗಿದನಂತರ ಪುನಃ ಅಷ್ಟಕನು ಇಂದ್ರನಿಗೆ ಸಮಾನನಾದ, ತನ್ನ ಮಾತಾಮಹನಾದ ಯಯಾತಿಯನ್ನು ಕುತೂಹಲದಿಂದ ಕೇಳಿದನು :

"ಮಹಾರಾಜ! ನಿನ್ನನ್ನು ಪುನಃ ಪ್ರಶ್ನಿಸಬೇಕೆಂಬ ಆಶಯದಿಂದಿರು ವೆನು. ನಿನ್ನನ್ನು ಪ್ರಶ್ನಿಸಿದರೂ, ನಿನ್ನಿಂದ ಅನೇಕವಾದ ಉತ್ತರಗಳನ್ನು ಪಡೆದರೂ ನನ್ನ ಅನೇಕಸಂಶಯಗಳು ನಿವಾರಣೆಯಾಗದೇ ಹಾಗೆಯೇ ಉಳಿದಿವೆ. ನೀನು ಸತ್ಯವಾಗಿ ಹೇಳು. ನೀನು ಯಾರು? ಎಲ್ಲಿಂದ ಬಂದೆ? ಯಾರ ಮಗ? ನೀನು ಮಾಡಿದ ಕಾರ್ಯವನ್ನು ಪ್ರಪಂಚದಲ್ಲಿರುವ ಬ್ರಾಹ್ಮಣರಲ್ಲಿ ಅಥವಾ ಕ್ಷತ್ರಿಯರಲ್ಲಿ ಬೇರೆ ಯಾರಾದರೂ ಮಾಡಿದ್ದಾರೆಯೇ?

"ಅಷ್ಟಕ! ನಾನು ಇದುವರೆಗೂ ಯಾವುದೊಂದು ಸುಳ್ಳನ್ನೂ ಹೇಳಿರುವುದಿಲ್ಲ. ಸುಳ್ಳು ಹೇಳಬೇಕಾದ ಪ್ರಮೇಯವೂ ಇಲ್ಲ. ನಾನು ನಹುಷನ ಮಗನಾದ ಯಯಾತಿಯಾಗಿದ್ದೇನೆ. ಪೂರುವಿನ ತಂದೆ. ನಾನು ಈ ಭೂಮಂಡಲಕ್ಕೆ ಚಕ್ರವರ್ತಿಯಾಗಿದ್ದೆನು. ನೀವು ನಮ್ಮವರೇ ಆದುದರಿಂದ ರಹಸ್ಯವಿಷಯಗಳನ್ನೂ ನಿಮ್ಮೊಡನೆ ಹೇಳಿಬಿಡುತ್ತೇನೆ. ನಾನು ನಿಮ್ಮ ತಾಯಿಯ ತಂದೆ. ಈ ಭೂಮಂಡಲವನ್ನೆಲ್ಲಾ ಜಯಿಸಿದೆನು. ಅನೇಕ ಬ್ರಾಹ್ಮಣರಿಗೆ ವಸ್ತ್ರದಾನಮಾಡಿದೆನು. ಸರ್ವಶುಭಲಕ್ಷಣಸಂಪನ್ನವಾದ ನೂರು ಅಶ್ವಮೇಧಾಶ್ವಗಳನ್ನು ದಾನವಾಗಿ ಕೊಟ್ಟೆನು. ನೂರು

ಅಶ್ವಮೇಧಾಶ್ವಗಳನ್ನು ದಾನಮಾಡಿದರೆ ಅಥವಾ ನೂರು ಅಶ್ವಮೇಧಯಾಗ ಗಳನ್ನು ಮಾಡಿದರೆ ಮನುಷ್ಯರೂ ಪುಣ್ಯಾತ್ಮರಾದ ದೇವತೆಗಳೇ ಆಗುತ್ತಾರೆ. ಸಕಲವಿಧವಾದ ವಾಹನಗಳಿಂದಲೂ, ಗೋವುಗಳಿಂದಲೂ, ಸುವರ್ಣ ದಿಂದಲೂ, ಐಶ್ವರ್ಯದಿಂದಲೂ ಸಮೃದ್ಧವಾಗಿದ್ದ ಭೂಮಿಯನ್ನು ಬ್ರಾಹ್ಮಣ ರಿಗೆ ದಾನಮಾಡಿದೆನು. ಅಷ್ಟಕ! ನೀನು ಸತ್ಯವನ್ನು ಹೇಳಬೇಕೆಂದು ನನ್ನನ್ನು ಒತ್ತಿ ಒತ್ತಿ ಕೇಳಿದೆಯಲ್ಲವೇ? ನಾನು ಸತ್ಯದ ಸ್ವರೂಪವನ್ನು ಚೆನ್ನಾಗಿ ಅರಿತಿ ದ್ದೇನೆ. ಆದುದರಿಂದ ಸತ್ಯವಲ್ಲದುದನ್ನು ಖಂಡಿತವಾಗಿಯೂ ಹೇಳುವುದಿಲ್ಲ.

ಸತ್ಯೇನ ವೈ ದ್ಯೌಶ್ಚ ವಸುನ್ಧರಾ ಚ
ತಥೈವಾಗ್ನಿರ್ಜ್ವಲತೇ ಮಾನುಷೇಷು ।
ನ ಮೇ ವೃಥಾ ವ್ಯಾಹೃತಮೇವ ವಾಕ್ಯಂ
ಸತ್ಯಂ ಹಿ ಸನ್ತಃ ಪ್ರತಿಪೂಜಯನ್ತಿ ॥೨೫॥

ಸತ್ಯದ ಆಧಾರದಿಂದಲೇ ಮನುಷ್ಯಲೋಕದಲ್ಲಿ ಅಗ್ನಿದೇವನು ಪ್ರಜ್ವ ಲಿಸುತ್ತಿರುವನು. ನನ್ನ ಮುಖದಿಂದ ಯಾವಾಗಲೂ ವ್ಯರ್ಥವಾದ ಅಥವಾ ಸುಳ್ಳಾದ ಮಾತೆಂದಿಗೂ ಹೊರಡುವುದಿಲ್ಲ. ಅಷ್ಟಕ! ಸತ್ಯವನ್ನಲ್ಲವೇ ಸತ್ಪುರುಷರೂ ಕೊಂಡಾಡುವುದು? ನಾನು ನಿನ್ನೊಡನೆ ಹೇಳಿರುವ ಮತ್ತು ಪ್ರತರ್ದನ, ವಸುಮಂತ ಹಾಗೂ ಶಿಬಿಗಳೊಡನೆ ಹೇಳಿರುವ ಮಾತು ಗಳೆಲ್ಲವೂ ಸಂಪೂರ್ಣ ಸತ್ಯಾಂಶಗಳಿಂದ ಕೂಡಿದುವುಗಳಾಗಿವೆ. ಈ ಲೋಕ ದಲ್ಲಿರುವ ಮುನಿಗಳೂ ಮತ್ತು ದೇವತೆಗಳೂ, ಅವರು ಸತ್ಯಸಂಧರಾಗಿರು ವುದರಿಂದ ಮಾತ್ರವೇ ಪೂಜಾರ್ಹರಾಗಿದ್ದಾರೆಂದು ನಾನು ಭಾವಿಸಿದ್ದೇನೆ. ಅವರು ಸತ್ಯನಿಷ್ಠರಾಗಿರದಿದ್ದರೆ ಮುನಿಗಳೆಂದೂ ಎನಿಸಿಕೊಳ್ಳುವುದಿಲ್ಲ ; ದೇವತೆಗಳೆಂದೂ ಎನಿಸಿಕೊಳ್ಳುವುದಿಲ್ಲ. ಆದುದರಿಂದ ನೀನು ನನ್ನ ಮಾತು ಗಳನ್ನು ಸಂಶಯಿಸುವ ಕಾರಣವಿಲ್ಲ. ನಾನು ನಿಮ್ಮೊಡನೆ ಬಹುಮಹತ್ತ್ವ ಪೂರ್ಣವಾದ ಮಾತುಗಳನ್ನಾಡಿದ್ದೇನೆ. ಇವು ಅನುದಿನದ ಪಾರಾಯಣಕ್ಕೂ ಯೋಗ್ಯವಾಗಿವೆ.

ಯೋ ನಃ ಸ್ವರ್ಗಜಿತಃ ಸರ್ವಾನ್ಯಥಾ ವೃತ್ತಂ ನಿವೇದಯೇತ್ ।
ಅನಸೂಯುರ್ದ್ವಿಜಾಗ್ರ್ಯೇಭ್ಯಃ ಸ ಲಭೇನ್ನಃ ಸಲೋಕತಾಮ್ ॥೨೬॥

ಈರ್ಷ್ಯಾಸೂಯೆಗಳಿಲ್ಲದ ಯಾವ ಮನುಷ್ಯನು ನಾವೈವರೂ ಸ್ವರ್ಗವನ್ನು ಜಯಿಸಿದ ಈ ಪುಣ್ಯಕಥೆಯನ್ನು ಬ್ರಾಹ್ಮಣಶ್ರೇಷ್ಠರಿಗೆ ಹೇಳುತ್ತಾನೆಯೋ–ಅವನು ನಾವು ಮುಂದೆ ಪಡೆಯಲಿರುವ ಪುಣ್ಯಲೋಕಗಳನ್ನೇ ಪಡೆಯುತ್ತಾನೆ."

ಜನಮೇಜಯ! ಈ ರೀತಿಯಾಗಿ ಶತ್ರುಹಂತಕನಾದ, ಉದಾರಿಯಾದ, ಮಹಾತ್ಮನಾದ ಯಯಾತಿಯು ತನ್ನ ದೌಹಿತ್ರರಿಂದ ಭೌಮನರಕವನ್ನು ತ್ಯಜಿಸಿ, ಸತ್ಕೃತಿಯಿಂದ ಸಂಪಾದಿಸಿದ್ದ ತನ್ನ ಕೀರ್ತಿಯನ್ನು ಭೂಮಿಯಲ್ಲಿ ಹರಡಿ, ಅಷ್ಟಕಾದಿಗಳೊಡನೆ ಸ್ವರ್ಗಲೋಕದ ಕಡೆಗೆ ಪ್ರಯಾಣ ಮಾಡಿದನು."

೯೩ನೆಯ ಅಧ್ಯಾಯವು ಮುಗಿಯಿತು.

೯೪ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಪೂರುವಂಶದ ವರ್ಣನೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಪೂಜ್ಯನೇ! ನಾನೀಗ ಪೂರುವಿನ ವಂಶಪ್ರದೀಪಕರಾದ ರಾಜರುಗಳ ನಾಮಧೇಯಗಳನ್ನೂ, ಅವರ ಪರಾಕ್ರಮಗಳನ್ನೂ ತಿಳಿದುಕೊಳ್ಳಲಿಚ್ಛಿಸಿದ್ದೇನೆ. ಒಬ್ಬೊಬ್ಬರೂ ಎಷ್ಟು ವೀರ್ಯವಂತರಾಗಿದ್ದರು? ಎಷ್ಟು ಪರಾಕ್ರಮಿಗಳಾಗಿದ್ದರು ಮತ್ತು ಅವರ ಸಾಧನೆಗಳೇನು?–ಎಂಬುದನ್ನು ಸವಿಸ್ತರವಾಗಿ ಹೇಳಿರಿ. ಪೂರುವಿನ ವಂಶೀಯರಲ್ಲಿ ಶೀಲಹೀನರಾಗಲೀ, ನಿರ್ವೀರ್ಯರಾಗಲೀ, ಅಪುತ್ರವಂತರಾಗಲೀ ಇರಲೇ ಇಲ್ಲವೆಂದು ನಾನು ಕೇಳಿದ್ದೇನೆ. ಸದಾಚಾರಸಂಪನ್ನರಾದ, ವಿವೇಕಸಂಪನ್ನರಾದ, ಸುಪ್ರಸಿದ್ಧರಾದ, ಸಕಲವಿದ್ಯಾಸಂಪನ್ನರಾದ ಪೂರುವಂಶದವರ ಪುಣ್ಯಚರಿತ್ರೆಯನ್ನು ವಿಶದವಾಗಿ ಕೇಳಲಿಚ್ಛಿಸಿದ್ದೇನೆ."

"ಜನಮೇಜಯ! ನೀನು ಕೇಳಿದ ಈ ಸುಚರಿತ್ರೆಯನ್ನು ಆನಂದದಿಂದಲೇ ಹೇಳುತ್ತೇನೆ. ಪೂರುವಂಶಪ್ರದೀಪಕರಾದ, ವೀರರಾದ, ಇಂದ್ರಸಮಾನತೇಜಸ್ವಿಗಳಾದ, ಅಷ್ಟೈಶ್ವರ್ಯಸಂಪನ್ನರಾದ, ಸರ್ವಲಕ್ಷಣಸಂಪನ್ನ

ರಾದ ಆ ರಾಜರುಗಳ ಇತಿಹಾಸವನ್ನು ವಿಶದವಾಗಿಯೇ ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು.

ಪೂರುವಿಗೆ ಪೌಷ್ಟೀ ಎಂಬ ಪತ್ನಿಯಲ್ಲಿ ಪ್ರವೀರ, ಈಶ್ವರ ಮತ್ತು ರೌದ್ರಾಶ್ವರೆಂಬ ಮೂವರು ಮಕ್ಕಳು ಹುಟ್ಟಿದರು. ಅವರೆಲ್ಲರೂ ಮಹಾ ರಥರಾಗಿದ್ದರು. ಅವರಲ್ಲಿ ಜ್ಯೇಷ್ಠನಾದ ಪ್ರವೀರನು ಪೂರುವಿನ ಅನಂತರ ರಾಜ್ಯಕ್ಕೆ ಅಧಿಪತಿಯಾದನು. ಪ್ರವೀರನು ಶೂರಸೇನೀ ಎಂಬ ಪಟ್ಟಮಹಿಷಿ ಯಲ್ಲಿ ಮನಸ್ಯು ಎಂಬ ಪುತ್ರನನ್ನು ಪಡೆದನು. ಕಮಲನೇತ್ರನಾದ, ಚಾರುದರ್ಶನನಾದ ಮನಸ್ಯುವು ಸಮುದ್ರಾಂತವಾದ ಈ ಭೂಮಂಡಲದ ರಕ್ಷಕನಾಗಿದ್ದನು. ಮನಸ್ಯುವು ಪಟ್ಟಮಹಿಷಿಯಾದ ಸೌವೀರಿ ಎಂಬುವಳಲ್ಲಿ ಶಕ್ತ, ಸಂಹನನ, ವಾಗ್ಮೀ–ಎಂಬ ಮೂವರು ಪುತ್ರರನ್ನು ಪಡೆದನು. ಅವರೆಲ್ಲರೂ ಮಹಾರಥರೂ ಮಹಾಶೂರರೂ ಆಗಿದ್ದರು.

ಪೂರುವಿನ ಮೂರನೆಯ ಮಗ ರೌದ್ರಾಶ್ವನೆಂದು ಹಿಂದೆಯೇ ಹೇಳಿದೆ ನಲ್ಲವೇ? ಅವನು ಮಿತ್ರಕೇಶೀ ಎಂಬ ಅಪ್ಸರೆಯಲ್ಲಿ ಅನ್ವಗ್ಭಾನುವೇ ಮೊದಲಾದ ಹತ್ತು ಮಂದಿ ಒಳ್ಳೆಯ ಮನಸ್ಸಿನಿಂದ ಕೂಡಿದ್ದ ಮಕ್ಕಳನ್ನು ಪಡೆದನು. ಅವರೆಲ್ಲರೂ ಮಹಾಧನುರ್ಧರರಾಗಿದ್ದರು. ಅವರು ಕಾಲ-ಕಾಲ ಗಳಲ್ಲಿ ಯಜ್ಞಮಾಡುತ್ತಿದ್ದರು. ಪುತ್ರವಂತರಾಗಿಯೂ, ಬಹುಶ್ರುತರಾಗಿಯೂ, ಸರ್ವಾಸ್ತ್ರವಿಶಾರದರಾಗಿಯೂ, ಧರ್ಮಪರಾಯಣರಾಗಿಯೂ ಇದ್ದರು. ಋಚೇಯು, (ಅನ್ವಗ್ಭಾನುವಿಗೆ ಋಚೇಯು ಮತ್ತು ಅನಾಧೃಷ್ಟಿ ಎಂಬ ಹೆಸರುಗಳೂ ಇದ್ದುವು.) ಕಕ್ಷೇಯು, ಪರಾಕ್ರಮಿಯಾದ ಕೃಕಣೇಯು, ಸ್ಥಂಡಿಲೇಯು, ವನೇಯು, ಯಶೋವಂತನಾದ ಜಲೇಯು, ಬಲವಂತ ನಾದ ಮತ್ತು ಧೀಮಂತನಾದ ತೇಜೇಯು, ಇಂದ್ರಸಮಾನವಿಕ್ರಮನಾದ ಸತ್ಯೇಯು, ಧರ್ಮೇಯು, ದೇವತುಲ್ಯಪರಾಕ್ರಮಿಯಾದ ಸಂನತೇಯು– ಇವರುಗಳೇ ರೌದ್ರಾಶ್ವನ ಹತ್ತು ಮಂದಿ ಮಕ್ಕಳು. ಇವರುಗಳಲ್ಲಿ ಜ್ಯೇಷ್ಠನಾದ ಅನಾಧೃಷ್ಟಿಯು ಉಳಿದವರಿಗಿಂತಲೂ ವಿದ್ವಾಂಸನೂ ಮಹಾಪರಾಕ್ರಮಿಯೂ ಆಗಿದ್ದನು. ದೇವತೆಗಳಿಗೆಲ್ಲರಿಗೂ ಇಂದ್ರನು ರಾಜನಾಗಿರುವಂತೆ ಮಾನವಕೋಟಿಗೆ ಋಚೇಯುವು ಚಕ್ರವರ್ತಿಯಾಗಿದ್ದನು. ಮತಿನಾರ ನೆಂಬುವನು ಅನಾಧೃಷ್ಟಿಯ ಮಗ. ಅವನು ಅಶ್ವಮೇಧ-ರಾಜಸೂಯಯಜ್ಞ

ಗಳನ್ನು ಮಾಡಿ ಪರಮಧಾರ್ಮಿಕನಾದ ರಾಜನೆಂದು ಪೃಥ್ವಿಯಲ್ಲಿ ಪ್ರಸಿದ್ಧ ನಾಗಿದ್ದನು. ಮತಿನಾರನಿಗೆ ತಂಸು, ಮಹಾಂತ, ಅತಿರಥ ಮತ್ತು ಅಪ್ರತಿಮ ದ್ಯುತಿಯುಳ್ಳ ದ್ರುಹ್ಯು ಎಂಬ ನಾಲ್ವರು ಮಕ್ಕಳು ಹುಟ್ಟಿದರು. ಆ ಎಲ್ಲ ರಾಜಕುಮಾರರೂ ಮಹಾಪರಾಕ್ರಮಿಗಳಾಗಿದ್ದರು. ಅವರಲ್ಲಿ ಹಿರಿಯನಾದ ತಂಸುವು ಪೂರುವಂಶದ ಉದ್ಧಾರಕನಾದನು. ಪ್ರಪಂಚವೆಲ್ಲವನ್ನೂ ಜಯಿಸಿ ತನ್ನ ವಂಶಕ್ಕೆ ಯಶಸ್ಸನ್ನೂ, ಕೀರ್ತಿಯನ್ನೂ ಗಳಿಸಿಕೊಟ್ಟನು. ತಂಸುವಿಗೆ ಈಲಿನನೆಂಬ ಮಗನು ಹುಟ್ಟಿದನು. ಅವನೂ ಸಹ ವೀರ್ಯವಂತನಾಗಿಯೂ, ವಿಜಯಿಗಳಲ್ಲಿ ಶ್ರೇಷ್ಠನಾಗಿಯೂ ಇದ್ದು ಪ್ರಪಂಚವೆಲ್ಲವನ್ನೂ ಜಯಿಸಿ ಚಕ್ರವರ್ತಿಯಾದನು. ಈಲಿನನು ರಥಂತರೀ ಎಂಬ ಧರ್ಮಪತ್ನಿಯಲ್ಲಿ ಪಂಚಭೂತೋಪಮರಾದ ದುಷ್ಯಂತನೇ ಮೊದಲಾದ ಐವರು ಮಕ್ಕಳನ್ನು ಪಡೆದನು. ದುಷ್ಯಂತ, ಶೂರ, ಭೀಮ, ಪ್ರವಸು ಮತ್ತು ವಸು–ಈ ಐವರೇ ಈಲಿನನ ಮಕ್ಕಳು. ಅವರಲ್ಲಿ ಮೊದಲನೆಯವನಾದ ದುಷ್ಯಂತನು ಜ್ಯೇಷ್ಠ ಪುತ್ರನು. ಮಾತ್ರವಲ್ಲದೇ ಪುರುಷಶ್ರೇಷ್ಠನೂ ಆಗಿದ್ದನು. ದುಷ್ಯಂತನು ತನ್ನ ಪತ್ನಿಯಾದ ಶಕುಂತಲೆಯಲ್ಲಿ ಭರತನೆಂಬ ಪುತ್ರನನ್ನು ಪಡೆದನು. ಭರತನು ಮಹಾವಿದ್ವಾಂಸನಾಗಿದ್ದನು. ಪೂರುವಿನ ವಂಶವು ಮುಂದೆ ಶಾಕುಂತಲನ ಶಕ್ತಿ-ಪರಾಕ್ರಮಗಳಿಂದಾಗಿ ಭರತವಂಶವೆಂಬ ಹೆಸರನ್ನು ಗಳಿಸಿ ಬಹಳ ಪ್ರಖ್ಯಾತವಾಯಿತು. ಭರತನು ತನ್ನ ಮೂವರು ಭಾರ್ಯೆಯರಲ್ಲಿ ಒಂಬತ್ತು ಮಂದಿ ಮಕ್ಕಳನ್ನು ಪಡೆದನು. ಅವರಾರೂ ತನಗೆ ಅನುರೂಪರಾದವರಲ್ಲ ವೆಂದು ಭಾವಿಸಿ ಭರತನು ಆ ಒಂಬತ್ತು ಮಂದಿ ಮಕ್ಕಳನ್ನೂ ತಿರಸ್ಕರಿಸಿದನು. ಅದರಿಂದ ಕುಪಿತರಾದ ಭರತನ ಭಾರ್ಯೆಯರು ತಮ್ಮ ಮಕ್ಕಳನ್ನೇ ಸಂಹರಿಸಿಬಿಟ್ಟರು. ಅದರಿಂದಾಗಿ ಭರತನು ಪುತ್ರಪ್ರಾಪ್ತಿಗಾಗಿ ಅನೇಕಾ ನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಭರದ್ವಾಜರ ಅನುಗ್ರಹದಿಂದ ಭುಮನ್ಯುವೆಂಬ ಪುತ್ರನನ್ನು ಪಡೆದನು. ಸತ್ಪುತ್ರವಂತನಾದೆನೆಂದು ಸಂತುಷ್ಟನಾದ ಭರತನು ಭುಮನ್ಯುವನ್ನು ಯುವರಾಜನನ್ನಾಗಿ ಮಾಡಿದನು. ಭುಮನ್ಯುವಿಗೆ ತನ್ನ ಪತ್ನಿಯಾದ ಪುಷ್ಕರಿಣೀ ಎಂಬುವಳಲ್ಲಿ ಸುಹೋತ್ರ, ದಿವಿರಥ, ಸುಹೋತಾ, ಸುಹವಿ, ಸುಯಜು, ಋಚೀಕ–ಎಂಬ ಆರು ಮಂದಿ ಮಕ್ಕಳು ಹುಟ್ಟಿದರು. ಅವರಲ್ಲಿ ಜ್ಯೇಷ್ಠನಾದ ಸುಹೋತ್ರನು ಭುಮನ್ಯುವಿನ ಅನಂತರ ರಾಜ್ಯಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದನು. ಸುಹೋತ್ರನು

ರಾಜಸೂಯ, ಅಶ್ವಮೇಧಗಳೇ ಮೊದಲಾದ ಅನೇಕ ಯಜ್ಞಗಳನ್ನು ಮಾಡಿ ತನ್ಮೂಲಕವಾಗಿ ಸಾಗರಾಂತವಾದ, ಆನೆಗಳಿಂದಲೂ, ಗೋವುಗಳಿಂದಲೂ, ಅಶ್ವಗಳಿಂದಲೂ ತುಂಬಿದ್ದ, ಬಹುರತ್ನಗಳಿಂದಲೂ ಸಮಾಕುಲವಾಗಿದ್ದ ಅಖಂಡಭೂಮಂಡಲಕ್ಕೂ ಚಕ್ರವರ್ತಿಯಾದನು. ಸುಹೋತ್ರನು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿರುವಾಗ–ಪ್ರಪಂಚದಲ್ಲಿ ಪ್ರಾಣಿಗಳಿಗಾಗಲೀ, ಪ್ರಜೆಗಳಿಗಾಗಲೀ ಯಾವ ವಿಧವಾದ ಉಪದ್ರವಗಳೂ ಇಲ್ಲವಾಯಿತು. ದೇಶವು ಸುಭಿಕ್ಷವಾಗಿದ್ದಿತು. ಪ್ರಜೆಗಳೇ ಆಗಲೀ, ಪ್ರಾಣಿಗಳೇ ಆಗಲೀ ಅಕಾಲಮರಣಕ್ಕೆ ತುತ್ತಾಗುತ್ತಿರಲಿಲ್ಲ. ಆ ಕಾರಣದಿಂದಾಗಿ ಹಸ್ತ್ಯಶ್ವಾದಿ ಪ್ರಾಣಿಗಳೂ, ಪ್ರಜೆಗಳೂ ವೃದ್ಧಿಹೊಂದುತ್ತಲೇ ಇದ್ದರು. ಪ್ರಜೆಗಳ ಮತ್ತು ಪಶು-ಪ್ರಾಣಿಗಳ ಅಪರಿಮಿತವಾದ ವೃದ್ಧಿಯಿಂದುಂಟಾದ ಭಾರದಿಂದ ಭೂಮಿಯು ಮುಳುಗಿಹೋಗುವುದೋ ಎಂದೆನಿಸುತ್ತಿದ್ದಿತು. ಪ್ರಜೆಗಳ ಮತ್ತು ಪಶು-ಪ್ರಾಣಿಗಳ ಹಿತಕ್ಕಾಗಿ ಸುಹೋತ್ರನು ಭೂಮಂಡಲದ ಎಲ್ಲ ಭಾಗಗಳಲ್ಲಿಯೂ ಯಜ್ಞಮಾಡುತ್ತಿದ್ದುದರಿಂದ ಭೂಮಂಡಲವು ಸಾವಿರಾರು ಯಜ್ಞಸ್ತಂಭಗಳಿಂದ ಪರಿಶೋಭಿಸುತ್ತಿದ್ದಿತು. ಸಸ್ಯಸಮೃದ್ಧಿಯಿದ್ದಿತು. ಪ್ರಜೆಗಳು ಅಪರಿಮಿತವಾಗಿ ವೃದ್ಧಿಹೊಂದಿದರೂ ಆಹಾರದ ಕೊರತೆಯಿರಲಿಲ್ಲ. ಅದರಿಂದಾಗಿ ಪ್ರಜೆಗಳು ಯಾವಾಗಲೂ ಹೃಷ್ಟರಾಗಿಯೂ ಪುಷ್ಟರಾಗಿಯೂ ಇರುತ್ತಿದ್ದರು. ಸುಹೋತ್ರನು ಧರ್ಮಪತ್ನಿಯಾದ ಐಕ್ಷ್ವಾಕಿಯಲ್ಲಿ ಅಜಮೀಢ, ಸುಮೀಢ ಮತ್ತು ಪುರುಮೀಢರೆಂಬ ಮೂವರು ಮಕ್ಕಳನ್ನು ಪಡೆದನು. ಆ ಮೂವರಲ್ಲಿ ಅಜಮೀಢನೇ ಜ್ಯೇಷ್ಠನೂ, ಶ್ರೇಷ್ಠನೂ ಆಗಿದ್ದನು. ಸುಹೋತ್ರನ ನಂತರ ಅವನೇ ರಾಜ್ಯಭಾರವನ್ನು ವಹಿಸಿಕೊಂಡನು. ಅಜಮೀಢನು ತನ್ನ ಮೂವರು ಪತ್ನಿಯರಲ್ಲಿ ಆರು ಮಂದಿ ಮಕ್ಕಳನ್ನು ಪಡೆದನು. ಧೂಮಿನೀ ಎಂಬುವಳಲ್ಲಿ ಋಕ್ಷನನ್ನೂ, ನೀಲಿ ಎಂಬುವಳಲ್ಲಿ ದುಷ್ಯಂತ ಮತ್ತು ಪರಮೇಷ್ಠೀ ಎಂಬಿಬ್ಬರು ಮಕ್ಕಳನ್ನೂ, ಕೇಶಿನೀ ಎಂಬುವಳಲ್ಲಿ ಜಹ್ನು, ವ್ರಜನ ಮತ್ತು ರೂಪಿಣ ಎಂಬ ಮೂವರು ಮಕ್ಕಳನ್ನೂ ಪಡೆದನು. ದುಷ್ಯಂತನ ಮತ್ತು ಪರಮೇಷ್ಠಿಯ ಪೀಳಿಗೆಯವರು ಪಾಂಚಾಲರೆಂದು ಪ್ರಸಿದ್ಧರಾದರು. ಅಮಿತತೇಜಸ್ವಿಯಾದ ಜಹ್ನುವಿನ

ಪೀಳಿಗೆಯವರು ಕುಶಿಕರೆಂದು ಪ್ರಸಿದ್ಧರಾದರು. ಅಜಮೀಢನ ಮಕ್ಕಳಲ್ಲಿ ವ್ರಜನ-ರೂಪಿಣರಿಗಿಂತಲೂ ಜ್ಯೇಷ್ಠನಾದ ಋಕ್ಷನೇ ಅಜಮೀಢನ ನಂತರ ರಾಜ್ಯಭಾರವನ್ನು ವಹಿಸಿಕೊಂಡನು.

ಋಕ್ಷನಿಗೆ ಸಂವರಣನೆಂಬ ಮಗನು ಹುಟ್ಟಿದನು. ಸಂವರಣನು ರಾಜನಾಗಿರುವಾಗ ದೇಶದಲ್ಲಿ ಭಯಂಕರವಾದ ಕ್ಷಾಮವು ತಲೆದೋರಿ ಲಕ್ಷ-ಲಕ್ಷ ಪ್ರಜೆಗಳು ಮೃತರಾದರು. ಹೊಟ್ಟೆಗಿಲ್ಲದಿರುವುದು, ಅಕಾಲಮರಣ, ಅನಾವೃಷ್ಟಿ ಮತ್ತು ವ್ಯಾಧಿ–ಇತ್ಯಾದಿಗಳಿಂದ ಜನರು ಪೀಡಿತರಾದರು. ಶತ್ರುಸೈನ್ಯಗಳೂ ಭಾರತವಂಶೀಯರನ್ನು ನಾಶಪಡಿಸಿದುವು. ಅದೇ ಸಮಯದಲ್ಲಿ ಪಾಂಚಾಲದ ಅರಸನು ಚತುರಂಗಬಲಸಮೇತನಾಗಿ ಭೂಮಿಯನ್ನೇ ನಡುಗಿಸುತ್ತಾ ಬಂದು ಸಂವರಣನ ರಾಜ್ಯಕ್ಕೆ ಮುತ್ತಿಗೆಹಾಕಿದನು. ಎರಡು ಪಕ್ಷಗಳಿಗೂ ನಡೆದ ಘೋರಯುದ್ಧದಲ್ಲಿ ಸಂವರಣನ ಸೈನಿಕರೆಲ್ಲರೂ ಹತರಾದರು. ಹತ್ತು ಅಕ್ಷೌಹಿಣೀಸೈನ್ಯಸಮೇತನಾಗಿ ಬಂದಿದ್ದ ಪಾಂಚಾಲರಾಜನು ಸಂವರಣನಿಗೆ ಸೇರಿದ್ದ ರಾಜ್ಯಗಳೆಲ್ಲವನ್ನೂ ಗೆದ್ದು ಕಡೆಗೆ ಸಂವರಣನನ್ನೂ ಪರಾಜಯಗೊಳಿಸಿದನು. ಪ್ರಾಣವನ್ನಾದರೂ ಉಳಿಸಿಕೊಳ್ಳಬೇಕೆಂಬ ಆಶಯದಿಂದ ಬಹುಭೀತನಾಗಿದ್ದ ಸಂವರಣನು ಪತ್ನೀ-ಪುತ್ರ-ಮಿತ್ರಾಮಾತ್ಯಸಮೇತನಾಗಿ ರಾಜಧಾನಿಯಿಂದ ಪಲಾಯನಮಾಡಿದನು. ಸಿಂಧೂನದದ ತೀರದಲ್ಲಿದ್ದ ಅರಣ್ಯಕ್ಕೆ ಹೋಗಿ ಅಲ್ಲವನು ಪತ್ನೀ-ಪುತ್ರಸಹಿತನಾಗಿ ವಾಸಮಾಡತೊಡಗಿದನು. ಸಿಂಧೂನದದ ತೀರಪ್ರದೇಶದ ಸಮೀಪದಲ್ಲಿಯೇ ಒಂದು ಪರ್ವತವೂ ಇದ್ದಿತು. ಅಲ್ಲಿಯೇ ಇದ್ದ ಒಂದು ದುರ್ಗದಲ್ಲಿ ಸಂವರಣನ ಪೀಳಿಗೆಯವರು ಅರ್ಥಾತ್ ಭಾರತರು ಒಂದು ಸಾವಿರ ವರ್ಷಗಳ ಕಾಲ ವಾಸಮಾಡಿಕೊಂಡಿದ್ದರು.

ಆ ಸಮಯದಲ್ಲಿ ವಸಿಷ್ಠರು ಆಕಸ್ಮಿಕವಾಗಿ ಭಾರತರ ದುರ್ಗಕ್ಕೆ ಆಗಮಿಸಿದರು. ಮಹರ್ಷಿಗಳಾದ ವಸಿಷ್ಠರು ಆಗಮಿಸಿದೊಡನೆಯೇ ಭಾರತ ಕ್ಷತ್ರಿಯರು ಮೇಲೆದ್ದು ಅಭಿವಾದನಮಾಡಿ ವಿನಮ್ರರಾಗಿ ಸ್ವಾಗತಿಸಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿದರು. ಔಪಚಾರಿಕವಾಗಿ ರಾಜನು ತನ್ನ ಸರ್ವಸ್ವವನ್ನೂ ಮಹರ್ಷಿಗಳಿಗರ್ಪಿಸಿದನು. ಸುವರ್ಚಸ್ಕರಾದ ಮಹರ್ಷಿ

ಗಳಿಗೆ ರಾಜನು ತನ್ನ ಕಷ್ಟಪರಂಪರೆಗಳೆಲ್ಲವನ್ನೂ ತಿಳಿಯಪಡಿಸುತ್ತಾ ಹೇಳಿದನು:

**ತಮಾಸನೇ ಚೋಪವಿಷ್ಟಂ ರಾಜಾ ವವ್ರೇ ಸ್ವಯಂ ತದಾ ।**
**ಪುರೋಹಿತೋ ಭವಾನ್ನೋಽಸ್ತು ರಾಜ್ಯಾಯ ಪ್ರಯತೇ ಮಹಿ ॥**

ಆಸನದಲ್ಲಿ ಕುಳಿತಿದ್ದ ವಸಿಷ್ಠರನ್ನು ರಾಜನು ಪುರೋಹಿತರನ್ನಾಗಿ ಅಂಗೀಕರಿಸುತ್ತಾ ಹೇಳಿದನು :

"ಮಹರ್ಷಿಗಳೇ! ನೀವು ನಮ್ಮ ಪುರೋಹಿತರಾಗಿರಿ. ಕಳೆದುಕೊಂಡ ರಾಜ್ಯವನ್ನು ಪಡೆಯಲು ನಾವು ಪ್ರಯತ್ನಿಸುತ್ತೇವೆ."

ಸಂವರಣನ ಪ್ರಾರ್ಥನೆಯನ್ನು ಅಂಗೀಕರಿಸುತ್ತಾ ವಸಿಷ್ಠರು 'ಓಂ' ಎಂದು ಪ್ರಣವೋಚ್ಚಾರಣೆಯನ್ನು ಮಾಡಿ ಸಂವರಣನಿಗೆ ಪುರೋಹಿತ ರಾದರು. ಪೃಥ್ವಿಯ ರಾಜರೆಲ್ಲರಿಗೂ ಶೃಂಗಪ್ರಾಯನಾಗಿದ್ದ ಪೂರುವಂಶೀಯ ನಾದ ಸಂವರಣನನ್ನು ವಸಿಷ್ಠರು ತಮ್ಮ ತಪೋಬಲದಿಂದ ಭರತನ ಸಿಂಹಾ ಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿದರು. ಪಟ್ಟಾಭಿಷಿಕ್ತನಾದ ಸಂವರ ಣನು ಪುನಃ ಚತುರಂಗಬಲವನ್ನು ಸಿದ್ಧಮಾಡಿಕೊಂಡು, ಭೂಮಂಡಲದಲ್ಲಿದ್ದ ಎಲ್ಲ ರಾಜರನ್ನೂ ಜಯಿಸಿ, ಅನೇಕವಿಧವಾದ ಯಜ್ಞ-ಯಾಗಾದಿಗಳನ್ನೂ ಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ಭೂರಿದಕ್ಷಿಣೆಗಳನ್ನು ಕೊಟ್ಟನು. ಸಂವರಣನಿಗೆ ಸೂರ್ಯನ ಮಗಳಾದ ತಪತೀ ಎಂಬುವಳಿಂದ ಕುರು ಎಂಬ ಮಗನು ಹುಟ್ಟಿದನು. ಕುರುವು ಮಹಾಧರ್ಮಜ್ಞನಾಗಿದ್ದುದರಿಂದ (ಸಂವರಣನಿಗೆ ಹಿರಿಯ ಹೆಂಡತಿಯಲ್ಲಿ ಹುಟ್ಟಿದ ಜ್ಯೇಷ್ಠಪುತ್ರನಿದ್ದರೂ ಸಹ) ಅವನನ್ನೇ ಪ್ರಜೆಗಳು ತಮ್ಮ ರಾಜನನ್ನಾಗಿ ಮಾಡಿಕೊಂಡರು. ಅವನ ಹೆಸರಿನಿಂದಲೇ ದೇಶವು ಕುರುಜಾಂಗಲವೆಂದು ಪ್ರಸಿದ್ಧಿಯಾಯಿತು.

ಕುರುವು ತನ್ನ ತಪಃಪ್ರಭಾವದಿಂದ ಕುರುಜಾಂಗಲವನ್ನು ಅಥವಾ ಕುರುಕ್ಷೇತ್ರವನ್ನು ಪುಣ್ಯಕ್ಷೇತ್ರವನ್ನಾಗಿ ಪರಿವರ್ತಿಸಿದನು. ಅವನಿಗೆ ಮನನ ಶೀಲಳಾದ ವಾಹಿನೀ ಎಂಬ ಪತ್ನಿಯಲ್ಲಿ ಅಶ್ವವಂತ, ಅಭಿಷ್ಯಂತ, ಚೈತ್ರರಥ, ಮುನಿ ಮತ್ತು ಜನಮೇಜಯ–ಎಂಬ ಐವರು ಮಕ್ಕಳು ಹುಟ್ಟಿದರು. ಅವ ರಲ್ಲಿ ಜನಮೇಜಯನು ಬಹಳ ವಿಖ್ಯಾತನಾದನು. ಅಶ್ವವಂತನಿಗೆ ಅವಿಕ್ಷಿತ

ನೆಂಬ ಮತ್ತೊಂದು ನಾಮಧೇಯವೂ ಇದ್ದಿತು. ಅವನಿಗೆ ಪರೀಕ್ಷಿತ್, ಶಬಲಾಶ್ವ, ಆದಿರಾಜ, ವಿರಾಜ, ಶಾಲ್ಮಲಿ, ಉಚ್ಚೈಃಶ್ರವಸ, ಭಂಗಕಾರ ಮತ್ತು ಜಿತಾರಿ–ಎಂಬ ಎಂಟು ಮಂದಿ ಮಕ್ಕಳಾದರು. ಅವರ ವಂಶದಲ್ಲಿ ಜನಮೇಜಯನೇ ಮೊದಲಾದ ಇನ್ನೂ ಏಳು ಮಂದಿ ಮಹಾರಥರು ಹುಟ್ಟಿದರು. ಅವರೆಲ್ಲರೂ ಸತ್ಕರ್ಮಗಳಿಂದಲೂ, ಸುಗುಣಗಳಿಂದಲೂ ವಿಖ್ಯಾತರಾದರು. ಅವಿಕ್ಷಿತನ ಮಗನಾದ ಪರೀಕ್ಷಿತನಿಗೆ ಕಕ್ಷಸೇನ, ಉಗ್ರಸೇನ, ಚಿತ್ರಸೇನ, ಇಂದ್ರಸೇನ, ಸುಷೇಣ ಮತ್ತು ಭೀಮಸೇನ–ಎಂಬ ಆರು ಮಂದಿ ಮಕ್ಕಳು ಹುಟ್ಟಿದರು. ಅವರೆಲ್ಲರೂ ಧರ್ಮಾರ್ಥಕೋವಿದರೂ, ವೀರ್ಯವಂತರೂ ಆಗಿದ್ದರು. ಕುರುವಿನ ಕಡೆಯ ಮಗನಾದ ಜನಮೇಜಯನಿಗೆ ಧೃತರಾಷ್ಟ್ರ, ಪಾಂಡು, ಬಾಹ್ಲೀಕ, ಮಹಾತೇಜಸ್ವಿಯಾದ ನಿಷಧ, ಬಲಿಷ್ಠನಾದ ಜಾಂಬೂನದ, ಕುಂಡೋದರ, ಪದಾತಿ, ವಸಾತಿಗಳೆಂಬ ಎಂಟು ಮಂದಿ ಮಕ್ಕಳಿದ್ದರು. ಅವರೆಲ್ಲರೂ ಮಹಾಬಲಿಷ್ಠರಾಗಿಯೂ, ಧರ್ಮಾರ್ಥ ಕುಶಲರಾಗಿಯೂ, ಸರ್ವಪ್ರಾಣಿಗಳ ಹಿತದಲ್ಲಿ ನಿರತರಾಗಿಯೂ ಇದ್ದರು. ಅವರಲ್ಲಿ ಹಿರಿಯನಾದ ಧೃತರಾಷ್ಟ್ರನು ಪಟ್ಟಾಭಿಷಿಕ್ತನಾದನು. ಅವನಿಗೆ ಕುಂಡಿಕ, ಹಸ್ತೀ, ವಿತರ್ಕ, ಕ್ರಾಥ, ಕುಂಡಿನ, ಹವಿಃಶ್ರವಸ, ಇಂದ್ರಾಭ, ಭುಮನ್ಯು ಮತ್ತು ಅಪರಾಜಿತರೂ–ಹಾಗೂ ಪ್ರತೀಪ, ಧರ್ಮನೇತ್ರ ಮತ್ತು ಸುನೇತ್ರರೆಂಬ ಪ್ರಸಿದ್ಧರಾದ ಮೂವರು ಮಕ್ಕಳೂ ಹುಟ್ಟಿದರು. ಅವರಲ್ಲಿ ಪ್ರತೀಪನು ಸುವಿಖ್ಯಾತನೂ, ಪ್ರಪಂಚದಲ್ಲಿಯೇ ಅಪ್ರತಿಮಸಾಹಸಿಯೂ ಆಗಿದ್ದನು. (ಆದುದರಿಂದ ಅವನೇ ಮುಂದೆ ರಾಜನಾದನು.)

ಪ್ರತೀಪನಿಗೆ ದೇವಾಪಿ, ಶಾಂತನು, ಬಾಹ್ಲೀಕರೆಂಬ ಮೂವರು ಮಕ್ಕಳಿದ್ದರು. ಬಾಹ್ಲೀಕನು ಮಹಾರಥನೆಂದು ಪ್ರಸಿದ್ಧನಾಗಿದ್ದನು. ಮೊದಲನೆಯವನಾದ, ಪರಮಧಾರ್ಮಿಕನಾಗಿದ್ದ ದೇವಾಪಿಯು ಧರ್ಮಾಚರಣೆಯಿಂದ ಕಲ್ಯಾಣವನ್ನು ಪಡೆಯುವ ಉತ್ಕಟೆಚ್ಛೆಯಿಂದ ಅರಣ್ಯಕ್ಕೆ ಹೊರಟುಹೋದನು. ಅನಂತರದಲ್ಲಿ ಆ ಸಾಮ್ರಾಜ್ಯವು ಶಾಂತನುವಿಗೂ, ಬಾಹ್ಲೀಕನಿಗೂ ಸೇರಿತು.

ಜನಮೇಜಯ! ನಾನೀಗ ನಿನಗೆ ಭರತನ ವಂಶದಲ್ಲಿ ಬಹುಮುಖ್ಯ

ರಾಗಿದ್ದ ರಾಜರುಗಳ ಪರಿಚಯವನ್ನು ಮಾಡಿಕೊಟ್ಟಿರುತ್ತೇನೆ. ಅವರೆಲ್ಲರೂ ಸತ್ತ್ವಶಾಲಿಗಳಾಗಿಯೂ ದೇವರ್ಷಿಸದೃಶರಾಗಿಯೂ ಇದ್ದರು. ಅದೇ ರೀತಿಯಲ್ಲಿ ದೇವಕಲ್ಪರಾದ ರಾಜರು ಮನುವಂಶದಲ್ಲಿ ಹುಟ್ಟಿ ಐಲವಂಶವನ್ನು (ಪೂರುವಂಶವನ್ನು ) ವೃದ್ಧಿಪಡಿಸಿದರು."

೯೪ನೆಯ ಅಧ್ಯಾಯವು ಮುಗಿಯಿತು.

೯೫ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಪೂರುವಂಶ-ಭರತವಂಶ-ಪಾಂಡುವಂಶಗಳ ವಿವರಣೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಮಹರ್ಷಿಗಳೇ! ನಾನು ನಿಮ್ಮ ಮುಖಾರವಿಂದದಿಂದ ನನ್ನ ಪೂರ್ವಜರ ನಾಮಧೇಯಗಳೆಲ್ಲವನ್ನೂ ಕೇಳಿದೆನು. ಹಾಗೂ ಪೂರುವಂಶ ದಲ್ಲಿ ಹುಟ್ಟಿದ ಉದಾರಿಗಳಾದ, ಕೀರ್ತಿಮಂತರಾದ ರಾಜರ ನಾಮಧೇಯ ಗಳನ್ನೂ ಕೇಳಿದೆನು. ಆದರೆ ಆ ಮಹಾತ್ಮರುಗಳ ನಾಮಶ್ರವಣಮಾತ್ರದಿಂದಲೇ ನನಗೆ ತೃಪ್ತಿಯುಂಟಾಗಿಲ್ಲ. ಬ್ರಾಹ್ಮಣೋತ್ತಮರೇ! ಆದುದರಿಂದ ನನ್ನ ವಿಷಯದಲ್ಲಿ ಸುಪ್ರೀತರಾಗಿ ಆ ವಂಶಾವಳಿಯನ್ನು ಸವಿಸ್ತರವಾಗಿಯೇ ಹೇಳಿರಿ. ದಕ್ಷಪ್ರಜಾಪತಿಯಿಂದ ಮತ್ತು ಮನುವಿನಿಂದ ಪ್ರಾರಂಭಿಸಿ ಪೂರುವಂಶೀಯರ ಅಥವಾ ಭರತವಂಶೀಯರ ಸುಚರಿತ್ರೆಗಳನ್ನು ಹೇಳಿರಿ. ಆ ಮಹಾತ್ಮರೆಲ್ಲರ ಜನ್ಮವೃತ್ತಾಂತಗಳನ್ನು ಕೇಳುವುದು ಪುಣ್ಯಪ್ರಾಪಕವಾದುದು. ಅಂತಹವರ ಸುಚರಿತ್ರೆಗಳನ್ನು ಕೇಳಿ ಸಂತೋಷಿಸದವರು ಯಾರು ತಾನೇ ಇರುವರು? ಸದ್ಧರ್ಮ-ಸದ್ಗುಣ-ಮಾಹಾತ್ಮ್ಯಗಳಿಂದ ವೃದ್ಧಿಹೊಂದಿದ ಆ ರಾಜರ ಅಕಳಂಕವಾದ ಯಶಸ್ಸು ಮೂರು ಲೋಕಗಳಲ್ಲಿಯೂ ಪ್ರಸರಿಸಿದ್ದಿತು. ಸದ್ಗುಣ-ಪ್ರಭಾವ-ವೀರ್ಯ-ಓಜಸ್ಸು, ಸತ್ತ್ವ-ಉತ್ಸಾಹ–ಇವೇ ಮುಂತಾದ ಉತ್ತಮಗುಣಗಳಿಂದ ಕೂಡಿದ ನನ್ನ ಪೂರ್ವಜರ ಅಮೃತೋಪಮವಾದ ಉಪಾಖ್ಯಾನಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೇ ಆಗುತ್ತಿಲ್ಲ."

"ಮಹಾರಾಜ! ಹಿಂದೆ ನಾನು ಕೃಷ್ಣದ್ವೈಪಾಯನರಿಂದ ಕೇಳಿದ ನಿನ್ನ

ಪೂರ್ವಜರ ಸಂಪೂರ್ಣಚರಿತ್ರೆಯನ್ನು ಯಥಾವತ್ತಾಗಿಯೇ ಹೇಳುತ್ತೇನೆ. ನಾನೀಗ ಹೇಳಲಿರುವ ನಿನ್ನ ಪೂರ್ವಜರ ಪುಣ್ಯಚರಿತ್ರೆಯನ್ನು ಸಾವಧಾನ ಚಿತ್ತನಾಗಿ ಕೇಳು :

ದಕ್ಷನಿಗೆ ಅದಿತಿ ಎಂಬ ಮಗಳು ಹುಟ್ಟಿದಳು. ಕಶ್ಯಪನಿಗೆ ಅದಿತಿಯಲ್ಲಿ ವಿವಸ್ವಂತನು (ಸೂರ್ಯನು) ಹುಟ್ಟಿದನು. ವಿವಸ್ವಂತನ ಮಗ ಮನು. ಮನುವಿನ ಮಗಳು ಇಲಾ. ಇಲಾ ಎಂಬುವಳ ಪುತ್ರ ಪುರೂರವಸ್ಸು. ಪುರೂರವಸ್ಸಿನ ಮಗ ಆಯು. ಆಯುಷನ ಮಗ ನಹುಷ. ನಹುಷನ ಮಗ ಯಯಾತಿ. ಯಯಾತಿಗೆ ಇಬ್ಬರು ಪತ್ನಿಯರು. ಶುಕ್ರರ ಮಗಳಾದ ದೇವಯಾನೀ ಮತ್ತು ವೃಷಪರ್ವನ ಮಗಳಾದ ಶರ್ಮಿಷ್ಠಾ. ಯದು ಮತ್ತು ತುರ್ವಸು ಎಂಬುವರು ಯಯಾತಿಗೆ ದೇವಯಾನಿಯಲ್ಲಿ ಹುಟ್ಟಿದರು. ದ್ರುಹ್ಯು, ಅನು ಮತ್ತು ಪೂರು ಎಂಬುವರು ಶರ್ಮಿಷ್ಠೆಯಲ್ಲಿ ಹುಟ್ಟಿದರು. ಯದುವಿನ ಪೀಳಿಗೆಯವರೆಲ್ಲರೂ ಯಾದವರೆಂಬ ಹೆಸರಿನಿಂದ ಪ್ರಸಿದ್ಧರಾದರು. ಪೂರುವಿನ ವಂಶದವರು ಪೌರವರು. ಪೂರುವಿನ ಭಾರ್ಯೆಯ ಹೆಸರು ಕೌಸಲ್ಯಾ. ಅವಳಲ್ಲಿ ಪೂರುವಿಗೆ ಜನಮೇಜಯನೆಂಬ ಮಗನು ಹುಟ್ಟಿದನು. ಅವನನ್ನು ಪ್ರವೀರನೆಂದೂ ಕರೆಯುತ್ತಿದ್ದರು. ಪೂರುವು ಮೂರು ಅಶ್ವಮೇಧ ಯಾಗಗಳನ್ನೂ, ವಿಶ್ವಜಿತ್ ಎಂಬ ಯಜ್ಞವನ್ನೂ ಮಾಡಿ ಅನೇಕವರ್ಷಗಳವರೆಗೆ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಕಾಡಿಗೆ ಹೊರಟುಹೋದನು. ಜನಮೇಜಯನು ಮಧುವಂಶಸಂಭೂತಳಾದ ಅನಂತಾ ಎಂಬ ಕನ್ಯೆಯನ್ನು ಮದುವೆಯಾಗಿದ್ದನು. ಅವಳಲ್ಲಿ ಜನಮೇಜಯನು ಪ್ರಾಚಿನ್ವಾನನೆಂಬ ಮಗನನ್ನು ಪಡೆದಿದ್ದನು. 'ಪ್ರಾಚಿನ್ವಾನ'–ಎಂಬುದು ಅವನಿಗೆ ಅನ್ವರ್ಥವಾಗಿಯೂ ಇದ್ದಿತು. ಸೂರ್ಯನ ಉದಯಾಚಲಪರ್ಯಂತವಾದ ಪೂರ್ವದಿಕ್ಕಿನ ಸಕಲ ಭೂಪ್ರದೇಶಗಳನ್ನೂ ಅವನು ಗೆದ್ದುಬಂದನಾದ್ದರಿಂದ ಅವನಿಗೆ ಪ್ರಾಚಿನ್ವಾನತ್ವವು ಸಾರ್ಥಕವಾಗಿ ಉಳಿಯಿತು. ಪ್ರಾಚಿನ್ವಾನನು ಯದುವಂಶಸಂಭೂತಳಾದ ಅಶ್ಮಕೀ ಎಂಬುವಳನ್ನು ಮದುವೆಯಾದನು. ಅವಳಲ್ಲಿ ಸಂಯಾತಿ ಎಂಬ ಮಗನನ್ನು ಪಡೆದನು.

ಸಂಯಾತಿಯು ದೃಷದ್ವಂತನ ಮಗಳಾದ ವರಾಂಗೀ ಎಂಬುವಳನ್ನು

ಮದುವೆಯಾಗಿ ಅವಳಲ್ಲಿ ಅಹಂಯಾತಿ ಎಂಬ ಪುತ್ರನನ್ನು ಪಡೆದನು. ಅಹಂಯಾತಿಯು ಕೃತವೀರ್ಯನ ಮಗಳಾದ ಭಾನುಮತೀ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಸಾರ್ವಭೌಮನೆಂಬ ಹೆಸರಿನ ಪುತ್ರನನ್ನು ಪಡೆದನು. ಸಾರ್ವಭೌಮನು ಕೇಕಯರಾಜನನ್ನು ಗೆದ್ದು ಅವನ ಮಗಳಾದ ಸುನಂದಾ ಎಂಬುವಳನ್ನು ತನ್ನ ದೇಶಕ್ಕೆ ಕರೆತಂದು ಮದುವೆಯಾದನು. ಸುನಂದೆಯಲ್ಲಿ ಸಾರ್ವಭೌಮನಿಗೆ ಜಯತ್ಸೇನನೆಂಬ ಮಗನು ಹುಟ್ಟಿದನು. ಜಯತ್ಸೇನನು ವಿದರ್ಭದೇಶದ ರಾಜಕುಮಾರಿಯಾದ ಸುಶ್ರವಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಅವಾಚೀನನೆಂಬ ಪುತ್ರನನ್ನು ಪಡೆದನು. ಅವಾಚೀನನು ವಿದರ್ಭದೇಶದ ಮರ್ಯಾದಾ ಎಂಬ ಹೆಸರಿನ ರಾಜಕುಮಾರಿ ಯನ್ನು ಮದುವೆಯಾಗಿ ಅವಳಲ್ಲಿ ಅರಿಹನೆಂಬ ಮಗನನ್ನು ಪಡೆದನು. ಅರಿಹನು ಅಂಗದೇಶದ ರಾಜಕುಮಾರಿಯನ್ನು ಮದುವೆಯಾಗಿ ಅವಳಲ್ಲಿ ಮಹಾಭೌಮನೆಂಬ ಹೆಸರಿನ ರಾಜಪುತ್ರನನ್ನು ಪಡೆದನು. ಮಹಾಭೌಮನು ಪ್ರಸೇನಜಿತನ ಮಗಳಾದ ಸುಯಜ್ಞಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಅಯುತನಾಯೀ ಎಂಬ ಹೆಸರಿನ ಮಗನನ್ನು ಪಡೆದನು. ಅವನು ಪುರುಷಮೇಧವೆಂಬ ಯಜ್ಞವನ್ನು ಅಯುತ (ಹತ್ತು ಸಾವಿರ) ಸಂಖ್ಯೆಯಲ್ಲಿ ಮಾಡಿದುದರಿಂದ ಅವನಿಗೆ ಅಯುತನಾಯಿತ್ವವು ಸಾರ್ಥಕವಾಯಿತು. ಅಯುತನಾಯಿಯು ಪೃಥುಶ್ರವಸನ ಮಗಳಾದ ಕಾಮಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಅಕ್ರೋಧನನೆಂಬ ಹೆಸರಿನ ಪುತ್ರನನ್ನು ಪಡೆದನು. ಅಕ್ರೋಧನನು ಕಲಿಂಗರಾಜಕುಮಾರಿಯಾದ ಕರಂಭಾ ಎಂಬುವಳ ಪಾಣಿ ಗ್ರಹಣಮಾಡಿಕೊಂಡು ಅವಳಲ್ಲಿ ದೇವಾತಿಥಿ ಎಂಬ ಹೆಸರಿನ ಮಗನನ್ನು ಪಡೆದನು. ದೇವಾತಿಥಿಯು ವಿದೇಹರಾಜಪುತ್ರಿಯಾದ ಮರ್ಯಾದಾ ಎಂಬುವಳಲ್ಲಿ ಅರಿಹನೆಂಬ ಪುತ್ರನನ್ನು ಪಡೆದನು.

ಅರಿಹನು ಅಂಗರಾಜಕುಮಾರಿಯಾದ ಸುದೇವಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಋಕ್ಷನೆಂಬ ಮಗನನ್ನು ಪಡೆದನು. ಋಕ್ಷನು ತಕ್ಷಕನ ಮಗಳಾದ ಜ್ವಾಲಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಮತಿ ನಾರ ಎಂಬ ಮಗನನ್ನು ಪಡೆದನು. ಮತಿನಾರನು ಸರಸ್ವತೀನದಿಯ ತೀರ ದಲ್ಲಿ ಉತ್ತಮಗುಣಯುಕ್ತವಾದ, ದ್ವಾದಶವಾರ್ಷಿಕವಾದ ಸತ್ರಯಾಗವನ್ನು

ಮಾಡಿದನು. ಅವನು ಮಾಡಿದ ಯಜ್ಞದಿಂದ ಸುಪ್ರೀತಳಾದ ನದಿಯ ಅಧಿದೇವತೆಯಾದ ಸರಸ್ವತಿಯು ಸಶರೀರಳಾಗಿ ಬಂದು ಮತಿನಾರನನ್ನು ವರಿಸಿದಳು. ಮತಿನಾರನು ಸರಸ್ವತಿಯಲ್ಲಿ ತಂಸು ಎಂಬ ಹೆಸರಿನ ಪುತ್ರನನ್ನು ಪಡೆದನು.

**ತಂಸುಂ ಸರಸ್ವತೀ ಪುತ್ರಂ ಮತಿನಾರಾದಜೀಜನತ್ ।**
**ಈಲಿನಂ ಜನಯಾಮಾಸ ಕಾಲಿಙ್ಗ್ಯಾಂ ತಂಸುರಾತ್ಮಜಮ್ ॥೨೭॥**

ಸರಸ್ವತಿಯು ಮತಿನಾರನಿಂದ ತಂಸುವೆಂಬ ಮಗನನ್ನು ಪಡೆದಳು. ತಂಸುವು ಕಲಿಂಗರಾಜಕುವರಿಯನ್ನು ಮದುವೆಯಾಗಿ ಅವಳಲ್ಲಿ ಈಲಿನನೆಂಬ ಮಗನನ್ನು ಪಡೆದನು. ಈಲಿನನು ರಥಂತರೀ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ದುಷ್ಯಂತನೇ ಮೊದಲಾದ ಐವರು ಮಕ್ಕಳನ್ನು ಪಡೆದನು. ದುಷ್ಯಂತನು ವಿಶ್ವಾಮಿತ್ರನ ಮಗಳಾದ ಶಕುಂತಲೆಯನ್ನು ಮದುವೆಯಾಗಿ ಅವಳಲ್ಲಿ ಭರತನೆಂಬ ಪುತ್ರನನ್ನು ಪಡೆದನು. ಭರತನ ಸಂಬಂಧವಾದ ಎರಡು ಶ್ಲೋಕಗಳನ್ನು ಇಲ್ಲಿ ಉದಾಹರಿಸಲಾಗಿದೆ. ದುಷ್ಯಂತನು, ಮಗನಾದ ಭರತನನ್ನು ತನ್ನ ಮಗನೇ ಅಲ್ಲವೆಂದು ಹೇಳಿಬಿಡುತ್ತಾನೆ.* ಆ ಸಮಯದಲ್ಲಿ ದುಷ್ಯಂತನನ್ನು ಕುರಿತು ಅಶರೀರವಾಣಿಯು ಹೀಗೆ ಹೇಳುತ್ತದೆ.

**ಭಸ್ತ್ರಾ ಮಾತಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ।**
**ಭರಸ್ವ ಪುತ್ರಂ ದುಷ್ಯನ್ತ ಮಾವಮಂಸ್ಥಾಃ ಶಕುನ್ತಲಾಮ್ ॥೩೦॥**

“ದುಷ್ಯಂತಸಾರ್ವಭೌಮ! ಮಾನವನು ಪುತ್ರನೆಂಬ ಅಭಿಧಾನದಿಂದ ಪುನಃ ಹುಟ್ಟುವುದಕ್ಕೆ ತಾಯಿಯ ಗರ್ಭಕೋಶವೆಂಬುದು ಕಾರಣವಾಗುತ್ತದೆ. ತನ್ನದೇ ಆದ ರೇತಸ್ಸಿನ ಮೂಲಕವಾಗಿ ಪತ್ನಿಯ ಗರ್ಭಕೋಶದಲ್ಲಿ ಪ್ರವೇಶಿಸಿ ಪುನಃ ತಾನೇ ಪುತ್ರರೂಪನಾಗಿ ಮಾನವನು ಹೊರಬರುತ್ತಾನೆ. ಆದುದರಿಂದ ಪತ್ನಿಯಾದವಳು ತಾಯಿಗೆ ಸಮಾನಳು. ನಿನ್ನ ಪ್ರತಿಕೃತಿಯಂತಿರುವ ಪುತ್ರನ ಪಾಲನೆಯನ್ನು ಮಾಡು. ಶಕುಂತಲೆಯನ್ನು ಅವಮಾನಗೊಳಿಸಬೇಡ.

---

* ಶಕುಂತಲೋಪಾಖ್ಯಾನ : ಮೊದಲನೆಯ ಸಂಪುಟ, ಪುಟ ೪೨೮ ರಿಂದ ೪೯೩-

**ರೇತೋಧಾಃ ಪುತ್ರ ಉನ್ನಯತಿ ನರದೇವ ಯಮಕ್ಷಯಾತ್ ।**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುನ್ತಲಾ ॥೩೧॥**

ನಿನ್ನ ರೇತಸ್ಸಿನಿಂದಲೇ ಉತ್ಪನ್ನನಾದ ಈ ನಿನ್ನ ಪುತ್ರನು ನಿನ್ನ ಪಿತೃ ದೇವತೆಗಳನ್ನು ನರಕದಿಂದ ಉದ್ಧರಿಸುತ್ತಾನೆ. ಈ ಪುತ್ರನು ಹುಟ್ಟಲು ಗರ್ಭಾಧಾನಮಾಡಿದವನು ನೀನೇ ಆಗಿರುವೆ. ಶಕುಂತಲೆಯು ಸತ್ಯವಾದ ಮಾತನ್ನೇ ಹೇಳಿರುತ್ತಾಳೆ."

ಜನಮೇಜಯ! ಅಶರೀರವಾಣಿಯು ದುಷ್ಯಂತನಿಗೆ ಪುತ್ರನನ್ನು ಭರಿಸುವಂತೆ ( ಪೋಷಣೆಮಾಡುವಂತೆ ) ಹೇಳಿದುದರಿಂದ ಅವನಿಗೆ ಭರತ ನೆಂದೇ ಹೆಸರಾಯಿತು. ಭರತನು ಕಾಶೀರಾಜನಾದ ಸರ್ವಸೇನನೆಂಬುವನ ಮಗಳಾದ ಸುನಂದಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಭುಮನ್ಯು ಎಂಬ ಮಗನನ್ನು ಪಡೆದನು. ಭುಮನ್ಯುವು ದಶಾರ್ಹಕನ್ಯೆಯಾದ ವಿಜಯಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಸುಹೋತ್ರನೆಂಬ ಮಗನನ್ನು ಪಡೆ ದನು. ಸುಹೋತ್ರನು ಇಕ್ಷ್ವಾಕುವಂಶೀಯಳಾದ ಸುವರ್ಣಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಹಸ್ತೀ ಎಂಬ ಮಗನನ್ನು ಪಡೆದನು. ಸುಹೋತ್ರನ ಮಗನಾದ ಆ ಹಸ್ತಿಯೇ ಕುರುವಂಶೀಯರ ರಾಜಧಾನಿಯಾದ ಹಾಸ್ತಿನಪುರದ ಸಂಸ್ಥಾಪಕನು. ಈ ಪಟ್ಟಣಕ್ಕೆ ಹಾಸ್ತಿನಪುರತ್ವವು ಹಸ್ತಿಯು ಸ್ಥಾಪಿಸಿದ ಕಾರಣದಿಂದ ಪ್ರಾಪ್ತವಾಯಿತು. ಹಸ್ತಿಯು ತ್ರಿಗರ್ತರಾಜನ ಮಗಳಾದ ಯಶೋಧರಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ವಿಕುಂಠನ ಎಂಬ ಹೆಸರಿನ ಮಗನನ್ನು ಪಡೆದನು. ವಿಕುಂಠನನು ದಶಾರ್ಹಕುಲವಧುವಾದ ಸುದೇವಾ ಎಂಬುವಳನ್ನು ಮದುವೆಯಾಗಿ ಅಜಮೀಢ ಎಂಬ ಹೆಸರಿನ ಪುತ್ರ ನನ್ನು ಪಡೆದನು. ಅಜಮೀಢನು ಕೈಕೇಯೀ, ಗಾಂಧಾರೀ, ವಿಶಾಲಾ, ಋಕ್ಷಾ– ಎಂಬ ನಾಲ್ವರು ಕನ್ಯೆಯರನ್ನು ಮದುವೆಯಾಗಿ ಅವರಲ್ಲಿ ನೂರಇಪ್ಪತ್ತು ನಾಲ್ಕು ಪುತ್ರರನ್ನು ಪಡೆದನು. ಅವರೆಲ್ಲರೂ ನೂತನವಂಶಗಳ ಪ್ರವರ್ತಕ ರಾದರು. ಅವರಲ್ಲಿ ಸಂವರಣನು ಕುರುವಂಶಾವಳಿಯನ್ನು ಮುಂದು ವರಿಸಿದನು. ಅವನು ಸೂರ್ಯನ ಮಗಳಾದ ತಪತಿಯನ್ನು ಮದುವೆಯಾಗಿ ಅವಳಲ್ಲಿ ಕುರು ಎಂಬ ಪುತ್ರನನ್ನು ಪಡೆದನು. ಕುರುವು ದಶಾರ್ಹಕುಲವಧು

ವಾದ ಶುಭಾಂಗೀ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ವಿದೂರನೆಂಬ ಮಗನನ್ನು ಪಡೆದನು. ವಿದೂರನು ಮಧುವಂಶಸಂಭೂತಳಾದ ಸುಪ್ರಿಯಾ ಎಂಬುವಳನ್ನು ಮದುವೆಯಾಗಿ ಅನಶ್ವನೆಂಬ ಹೆಸರಿನ ಮಗನನ್ನು ಪಡೆದನು. ಅನಶ್ವನು ಮಗಧದೇಶದ ರಾಜಕುಮಾರಿಯಾದ ಅಮೃತಾ ಎಂಬುವಳನ್ನು ಮದುವೆಯಾಗಿ ಪರಿಕ್ಷಿತನೆಂಬ ಪುತ್ರನನ್ನು ಪಡೆದನು. ಪರಿಕ್ಷಿತನು ಬಾಹುದ ನೆಂಬ ರಾಜನ ಮಗಳಾದ ಸುಯಶಾ ಎಂಬುವಳನ್ನು ಮದುವೆಯಾಗಿ ಭೀಮ ಸೇನನೆಂಬ ಪುತ್ರನನ್ನು ಪಡೆದನು. ಭೀಮಸೇನನು ಕೇಕಯದೇಶದ ರಾಜಕುಮಾರಿಯಾದ ಕುಮಾರೀ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಪ್ರತಿಶ್ರವಸನೆಂಬ ಪುತ್ರನನ್ನು ಪಡೆದನು. ಪ್ರತಿಶ್ರವಸನ ಮಗನೇ ಪ್ರತೀಪನು. ಪ್ರತೀಪನು ಶಿಬಿದೇಶದ ರಾಜಕುಮಾರಿಯಾದ ಸುನಂದಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ದೇವಾಪಿ, ಶಾಂತನು, ಬಾಹ್ಲೀಕ–ಎಂಬ ಮೂವರು ಮಕ್ಕಳನ್ನು ಪಡೆದನು. ದೇವಾಪಿಯು ಬಾಲಕನಾಗಿದ್ದಾಗಲೇ ಐಹಿಕಜೀವನ ದಲ್ಲಿ ವಿರಕ್ತಿಯನ್ನು ಹೊಂದಿದವನಾಗಿ ತಪಸ್ಸುಮಾಡಲು ಕಾಡಿಗೆ ಹೊರಟು ಹೋದನು. ಆದುದರಿಂದ ಎರಡನೆಯವನಾದ ಶಾಂತನುವೇ ಪ್ರತೀಪನ ಅನಂತರದಲ್ಲಿ ರಾಜನಾದನು. ಶಾಂ ತನು ಎಂಬುದೂ ಅನ್ವರ್ಥನಾಮ, ಜನಮೇಜಯ! ಶಾಂತನುವಿನಲ್ಲಿ ಒಂದು ವಿಶೇಷವಾದ ಶಕ್ತಿಯಿದ್ದಿತು.

**ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಸ ಸುಖಮಶ್ನುತೇ ।**
**ಪುನರ್ಯುವಾ ಚ ಭವತಿ ತಸ್ಮಾತ್ತಂ ಶಾನ್ತನುಂ ವಿದುಃ**
**ಇತಿ ತದಸ್ಯ ಶಾನ್ತನುತ್ವಮ್ ॥೪೬॥**

ಯಾವ-ಯಾವ ವೃದ್ಧನನ್ನು ಶಾಂತನುವು ತನ್ನೆರಡು ಕೈಗಳಿಂದಲೂ ಸ್ಪರ್ಶಿಸುತ್ತಿದ್ದನೋ ಆ ಮುದುಕನು ಅನಿರ್ವಾಚ್ಯವಾದ ಸ್ಪರ್ಶಸುಖವನ್ನು ಪಡೆಯುತ್ತಿದ್ದನು. ಶಾಂತನುವಿನ ಸ್ಪರ್ಶದಿಂದ ಆತನಲ್ಲಿದ್ದ ವೃದ್ಧತ್ವದ ನಿವಾರಣೆಯಾಗಿ, ಯೌವನವು ಪುನಃ ಪ್ರಾಪ್ತವಾಗುತ್ತಿತ್ತು. ಆದುದರಿಂದಲೇ ಅವನನ್ನು 'ಶಾಂತನು' ಎಂ ದು ಕರೆದರು. ಶಾಂತನುತ್ವವು ಇದರಿಂದ ಅವನಿಗೆ ಪ್ರಾಪ್ತವಾಯಿತು. ಶಾಂತನುವು ಭಗೀರಥನ ಮಗಳಾದ ಗಂಗೆಯನ್ನು ಮದುವೆಯಾಗಿ ಅವಳಲ್ಲಿ ದೇವವ್ರತನೆಂಬ ಪುತ್ರನನ್ನು ಪಡೆದನು. ದೇವವ್ರತ

ನನ್ನು ಭೀಷ್ಮನೆಂದೂ ಕರೆಯುತ್ತಿದ್ದರು. ಭೀಷ್ಮನು ತಂದೆಯಾದ ಶಾಂತನು ವಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಸತ್ಯವತಿಯನ್ನು ಕರೆತಂದು, ತಂದೆಗೆ ಮದುವೆಮಾಡಿಸಿ, ಅವಳನ್ನು ತನ್ನ ತಾಯಿಯನ್ನಾಗಿ ಗೌರವಿಸಿದನು. ಸತ್ಯವತಿಯನ್ನು ಗಂಧಕಾಲೀ ಎಂದೂ ಕರೆಯುತ್ತಿದ್ದರು. ಸತ್ಯವತಿಯು ಕನ್ಯಾವಸ್ಥೆಯಲ್ಲಿದ್ದಾಗಲೇ ಪರಾಶರರ ದಿವ್ಯಾನುಗ್ರಹದಿಂದ ದ್ವೈಪಾಯನರಿಗೆ ಜನ್ಮವನ್ನಿತ್ತಳು. ಅವಳಲ್ಲಿಯೇ ಶಾಂತನುವಿಗೆ ವಿಚಿತ್ರವೀರ್ಯ-ಚಿತ್ರಾಂಗದರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಎರಡನೆಯವನಾದ ಚಿತ್ರಾಂಗದನು ಅಪ್ರಾಪ್ತವಯಸ್ಕನಾಗಿದ್ದಾಗಲೇ ಗಂಧರ್ವನಿಂದ ಕೊಲ್ಲಲ್ಪಟ್ಟನು. ಶಾಂತನುವಿನ ಅನಂತರ ವಿಚಿತ್ರವೀರ್ಯನು ಕುರುಚಕ್ರಾಧಿಪತ್ಯಕ್ಕೆ ರಾಜನಾದನು. ಅದೇ ಸಮಯದಲ್ಲಿ ಕಾಶೀರಾಜನಿಗೆ ಕೌಸಲ್ಯಾ ಎಂಬ ಪತ್ನಿಯಲ್ಲಿ ಅಂಬಾ, ಅಂಬಿಕಾ, ಅಂಬಾಲಿಕಾ–ಎಂಬ ಮೂವರು ಪುತ್ರಿಯರು ಹುಟ್ಟಿದರು. ಅವರಲ್ಲಿ ಅಂಬಿಕೆ ಮತ್ತು ಅಂಬಾಲಿಕೆಯರನ್ನು ವಿಚಿತ್ರ ವೀರ್ಯನು ಮದುವೆಯಾದನು. ಆದರೆ ಪುತ್ರಹೀನನಾಗಿಯೇ ವಿಚಿತ್ರ ವೀರ್ಯನು ದೇಹತ್ಯಾಗಮಾಡಿದನು. ಅವನ ತಾಯಿಯಾದ ಸತ್ಯವತಿಯು ಚಿಂತೆಗೊಳಗಾದಳು. ದುಷ್ಯಂತನ ವಂಶವು ನಷ್ಟವಾಗಿ ಹೋಗದಂತೆ ನಡೆದು ಕೊಳ್ಳುವುದು ಹೇಗೆಂಬ ವಿಷಯವಾಗಿ ಗಂಧಕಾಲಿಯು ಬಹುವಾಗಿ ಯೋಚಿಸಿದಳು. ತಾನು ಕನ್ಯೆಯಾಗಿದ್ದಾಗ ಪರಾಶರರ ಅನುಗ್ರಹದಿಂದ ಹುಟ್ಟಿದ್ದ ದ್ವೈಪಾಯನರನ್ನು ಸತ್ಯವತಿಯು ಮನಸಾ ಧ್ಯಾನಿಸಿದಳು. ವ್ಯಾಸರು ಒಡನೆಯೇ ಅವಳ ಮುಂದೆ ಬಂದು 'ಏನು ಮಾಡಲಮ್ಮಾ?'–ಎಂದು ವಿನೀತರಾಗಿ ಪ್ರಶ್ನಿಸಿದರು.

"ಮಗು! ನಿನ್ನ ಅನುಜನಾದ ವಿಚಿತ್ರವೀರ್ಯನು ಅನಪತ್ಯನಾಗಿಯೇ (ಪುತ್ರರಹಿತನಾಗಿಯೇ) ಸ್ವರ್ಗಲೋಕಕ್ಕೆ ಪ್ರಯಾಣಮಾಡಿಬಿಟ್ಟನು. (ಅವಸಾನಹೊಂದಿದನು.) ಆದುದರಿಂದ ಅವನ ವಂಶದ ಉದ್ಧಾರಕ್ಕಾಗಿ ಅವನ ಕ್ಷೇತ್ರದಲ್ಲಿ ಉತ್ತಮವಾದ ಸಂತಾನವನ್ನು ಅನುಗ್ರಹಿಸು."

ವ್ಯಾಸರು– 'ಹಾಗೆಯೇ ಆಗಲಮ್ಮ' –ಎಂದು ಹೇಳಿ ಧೃತರಾಷ್ಟ್ರ, ಪಾಂಡು ಮತ್ತು ವಿದುರ–ಈ ಮೂವರ ಜನ್ಮಕ್ಕೂ ಕಾರಣರಾದರು. ವ್ಯಾಸರ ವರದಾನದ ಪ್ರಭಾವದಿಂದಾಗಿ ಧೃತರಾಷ್ಟ್ರನಿಗೆ ಅವನ ಭಾರ್ಯೆಯಾದ

ಗಾಂಧಾರಿಯಲ್ಲಿ ನೂರು ಮಂದಿ ಮಕ್ಕಳು ಜನಿಸಿದರು. ಧೃತರಾಷ್ಟ್ರನ ಆ ನೂರು ಮಕ್ಕಳಲ್ಲಿ ದುರ್ಯೋಧನ, ದುಃಶಾಸನ, ವಿಕರ್ಣ ಮತ್ತು ಚಿತ್ರಸೇನ–ಈ ನಾಲ್ವರು ಪ್ರಮುಖರಾಗಿದ್ದರು. ಕುಂತಿಭೋಜನ ಮಗಳಾದ ಪೃಥಾ ಎಂಬುವಳೂ ಮತ್ತು ಮಾದ್ರೀ ಎಂಬುವಳೂ ಪಾಂಡುರಾಜನ ಭಾರ್ಯೆಯ ರಾದರು. ಅವರು ಸ್ತ್ರೀಯರಲ್ಲಿಯೇ ರತ್ನಪ್ರಾಯರಾಗಿದ್ದರು.

ಒಮ್ಮೆ ಪಾಂಡುರಾಜನು ಬೇಟೆಯಾಡಲು ಹೋಗಿದ್ದನು. ಅದೇ ಸಮಯದಲ್ಲಿ ಋಷಿದಂಪತಿಗಳು ತಮ್ಮ ವೇಷಗಳನ್ನು ಮರೆಯಿಸಿಕೊಂಡು ಜಿಂಕೆಯ ರೂಪಗಳನ್ನು ತಾಳಿ ಸುರತಕ್ರಿಯೆಯಲ್ಲಿ ನಿರತರಾಗಿದ್ದರು. ಪ್ರಾಣಿಗಳಾದರೂ ಸುರತದಲ್ಲಿರುವಾಗ ಭಂಗಪಡಿಸುವುದು ಧರ್ಮವಲ್ಲ ವೆಂಬುದನ್ನು ಪಾಂಡುವು ವಿವೇಚಿಸಬೇಕಾಗಿದ್ದಿತು. ಆದರೆ ವಿಧಿಚೋದಿತ ನಾದವನಂತೆ ಕಾಮಕೇಳಿಯಲ್ಲಿಯೇ ತಲ್ಲೀನರಾಗಿ ಅದರಲ್ಲಿ ಪೂರ್ಣವಾದ ತೃಪ್ತಿಯನ್ನಿನ್ನೂ ಹೊಂದದಿದ್ದ ಹರಿಣಯುಗ್ಮಕ್ಕೆ ಬಾಣದಿಂದ ಗುರಿಯಿಟ್ಟು ಹೊಡೆದನು. ಬಾಣದ ಆಘಾತಕ್ಕೆ ಸಿಕ್ಕಿದ ಋಷಿಯು ಜಿಂಕೆಯ ರೂಪವನ್ನು ತೊರೆದು ರಾಜನನ್ನು ಕುರಿತು ಹೇಳಿದನು :

"ಮಹಾರಾಜ! ಪ್ರಾಣಿಯೇ ಆದರೂ ಅದು ಸುರತಕ್ರಿಯೆಯಲ್ಲಿರು ವಾಗ ಅದನ್ನು ತೊಂದರೆಪಡಿಸಕೂಡದೆಂಬ ಅಥವಾ ವಧಿಸಕೂಡದೆಂಬ ಧರ್ಮವನ್ನು ನೀನು ಸಂಪೂರ್ಣವಾಗಿ ತಿಳಿದವನಾಗಿರುವೆ. ಆದರೂ ನೀನಿಂದು ಕಾಮಕೇಳಿಯಲ್ಲಿ ಸಂಪೂರ್ಣವಾಗಿ ತೃಪ್ತಿಹೊಂದದಿರುವ ನನ್ನನ್ನು ಬಾಣದಿಂದ ಘಾಸಿಪಡಿಸಿದೆ . ನಾನಿಷ್ಟರಲ್ಲಿಯೇ ಪ್ರಾಣಗಳನ್ನು ತ್ಯಜಿಸಲಿದ್ದೇನೆ. ಆದರೆ ನೀನು ಮಾಡಿರುವ ಈ ಅಪರಾಧಕ್ಕೆ ತಕ್ಕುದಾದ ಶಿಕ್ಷೆಯನ್ನು ಅನುಭವಿಸಲೇಬೇಕು. ನೀನೂ ಸಹ ಕಾಮಕೇಳಿಯಲ್ಲಿ ನಿರತನಾಗಿರುವಾಗ, ಕಾಮರಸವನ್ನು ಸಂಪೂರ್ಣವಾಗಿ ಆಸ್ವಾದನೆಮಾಡುವ ಮೊದಲೇ ನಿನ್ನ ಪ್ರಾಣಗಳು ಹಾರಿಹೋಗುವುವು"–ಎಂದು ಋಷಿಯು ಶಾಪವನ್ನಿತ್ತು ಪತ್ನಿಯೊಡನೆ ಪ್ರಾಣಬಿಟ್ಟನು. ಪಾಂಡುವಿನ ಮುಖವು ವಿವರ್ಣವಾಯಿತು. ಋಷಿಯ ಶಾಪದ ಭಯದಿಂದಾಗಿ ಅಂದಿನಿಂದ ಪಾಂಡುವು ಭಾರ್ಯೆಯ ರೊಡನೆ ಸಮಾಗಮವನ್ನೇ ತೊರೆಯಬೇಕಾಯಿತು. ಪತ್ನಿಯರೊಡನೆ ಸಮಾ ಗಮಮಾಡುವ ಸಾಧ್ಯತೆಯಿರದಿದ್ದರೂ ಪಾಂಡುವಿಗೆ ತಾನು ಪುತ್ರವಂತನಾಗ

ಬೇಕೆಂಬ ಆಶೆಯು ಮೂಡಿತು. ಅಂತೆಯೇ ತನ್ನ ಪತ್ನಿಯನ್ನು ( ಕುಂತಿಯನ್ನು) ಕುರಿತು ಹೇಳಿದನು :

"ಪ್ರಿಯಳೇ! ನನ್ನ ಚಪಲತೆಯಿಂದ ಶಾಪಗ್ರಸ್ತನಾಗಿ ನಾನು ನಿನ್ನೊಡನೆ ಸಮಾಗಮವನ್ನೇ ಮಾಡದಂತಾಯಿತು. ಆದರೆ ನಾನು ಮಕ್ಕಳನ್ನು ಪಡೆಯಬೇಕೆಂಬ ಅಭಿಲಾಷೆಯುಳ್ಳವನಾಗಿದ್ದೇನೆ. ಏಕೆಂದರೆ : ಅಪುತ್ರ ನಾದವನಿಗೆ ಪುಣ್ಯಲೋಕಗಳು ಸಿಕ್ಕಲಾರವೆಂದು ಹಿರಿಯರು ಹೇಳುವುದನ್ನು ನಾನು ಕೇಳಿದ್ದೇನೆ. ಆದುದರಿಂದ ನೀನು ನನ್ನ ಸಲುವಾಗಿ ಪುತ್ರರನ್ನು ಪಡೆದುಕೊ."

ಸಾಧ್ವಿಯಾದ ಕುಂತಿಯು ಹಾಗೆಯೇ ಆಗಲೆಂದು ಹೇಳಿ ಯಮಧರ್ಮನಿಂದ ಯುಧಿಷ್ಠಿರನನ್ನೂ, ವಾಯುವಿನಿಂದ ಭೀಮನನ್ನೂ, ಇಂದ್ರನಿಂದ ಅರ್ಜುನನನ್ನೂ ಪಡೆದುಕೊಂಡಳು. ಕುಂತಿಯ ವಿಷಯದಲ್ಲಿ ಸುಪ್ರೀತನಾದ ಪಾಂಡುವು ಪುನಃ ಅವಳಿಗೆ ಹೇಳಿದನು :

"ಕುಂತಿ! ನಿನ್ನ ಸಪತ್ನಿಯಾಗಿರುವ ಈ ಮಾದ್ರಿಯೂ ಅಪುತ್ರವತಿ ಯಾಗಿಯೇ ಇರುವಳಲ್ಲವೇ? ನೀನು ಸಿದ್ಧಿಮಾಡಿಕೊಂಡಿರುವ ಮಹಾ ಮಂತ್ರವನ್ನು ಇವಳಿಗೂ ಉಪದೇಶಿಸು. ತತ್ಫಲವಾಗಿ ಇವಳೂ ಪುತ್ರರನ್ನು ಪಡೆದು ಪುತ್ರವತಿಯಾಗಲಿ."

ಕುಂತಿಯು ಹಾಗೆಯೇ ಆಗಲೆಂದು ಹೇಳಿ ಆ ಮಹಾವಿದ್ಯೆಯನ್ನು ಮಾದ್ರಿಗೂ ಉಪದೇಶಿಸಿದಳು. ಮಾದ್ರಿಯು ಮಹಾಮಂತ್ರದ ಪುನಶ್ಚರಣೆ ಮಾಡಿ ಅಶ್ವಿನೀದೇವತೆಗಳನ್ನು ಸ್ಮರಿಸಲಾಗಿ ದಿವ್ಯರೂಪರಾದ ಅಶ್ವಿನೀ ದೇವತೆಗಳು ಬಂದು ಮಾದ್ರಿಗೆ ನಕುಲ-ಸಹದೇವರೆಂಬ ಇಬ್ಬರು ಮಕ್ಕಳನ್ನು ಅನುಗ್ರಹಿಸಿದರು. ಒಂದಾನೊಂದು ದಿನ ಅಲಂಕೃತೆಯಾಗಿದ್ದ ಮಾದ್ರಿಯನ್ನು ನೋಡಿ ಪಾಂಡುವು ಕಾಮವಶನಾಗಿ ಆಲಿಂಗಿಸಿದೊಡನೆಯೇ ಋಷಿಯ ಶಾಪಾನುಸಾರವಾಗಿ ಪ್ರಾಣತೊರೆದನು. ಗಂಡನೊಡನೆಯೇ ಸಹಗಮನ ಮಾಡಲು ಚಿತೆಯೇರಿದ ಮಾದ್ರಿಯು ಕುಂತಿಯನ್ನು ಕುರಿತು ಹೇಳಿದಳು : "ನನ್ನ ಮಕ್ಕಳಾದ ನಕುಲ-ಸಹದೇವರ ವಿಷಯದಲ್ಲಿ ನೀನು ಯಾವಾ

ಗಲೂ ಜಾಗರೂಕಳಾಗಿರಬೇಕಕ್ಕಾ! ಈ ನನ್ನ ಕಡೆಯ ಆಸೆಯನ್ನು ನಡೆಸಿಕೊಡು."

"ನನ್ನ ಮಕ್ಕಳಿಗಿಂತಲೂ ಹೆಚ್ಚಾಗಿ ನಿನ್ನ ಮಕ್ಕಳನ್ನು ನೋಡಿ ಕೊಳ್ಳುತ್ತೇನೆ"–ಎಂದು ಕಣ್ಣೀರಿಡುತ್ತಾ ಕುಂತಿಯು ಮಾದ್ರಿಯನ್ನು ಸಂತೈಸಿದಳು.

ಪಾಂಡು-ಮಾದ್ರಿಯರ ದಹನಕ್ರಿಯೆಯಾದನಂತರ, ಅಲ್ಲಿದ್ದ ತಪಸ್ವಿ ಗಳು ಕುಂತಿಯನ್ನೂ ಮತ್ತು ಅವಳ ಐವರು ಮಕ್ಕಳನ್ನೂ, ಹಸ್ತಿನಾಪುರಕ್ಕೆ ಕರೆದುಕೊಂಡು ಬಂದು, ಭೀಷ್ಮನಿಗೂ ಮತ್ತು ವಿದುರನಿಗೂ ನಡೆದ ವಿಷಯ ಗಳೆಲ್ಲವನ್ನೂ ನಿವೇದಿಸಿ, ಕುಂತಿಯನ್ನೂ ಮತ್ತು ಮಕ್ಕಳನ್ನೂ ಅವರಿಗೊಪ್ಪಿಸಿ ಅವರೆಲ್ಲರ ಸಮಕ್ಷದಲ್ಲಿಯೇ ಅಂತರ್ಹಿತರಾದರು.

ಋಷಿ-ಮಹರ್ಷಿಗಳು ಯುಧಿಷ್ಠಿರಾದಿಗಳ ಪರಿಚಯವನ್ನು ಭೀಷ್ಮಾದಿ ಗಳಿಗೆ ಮಾಡಿಕೊಡುತ್ತಿದ್ದಾಗ ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದುವು.

ಧೃತರಾಷ್ಟ್ರ-ಭೀಷ್ಮಾದಿಗಳು ಪಾಂಡುವಿನ ಪುತ್ರರನ್ನು ಪ್ರತಿಗ್ರಹಿಸಿದ ನಂತರ ಪಾಂಡವರು–ಪಾಂಡುವಿಗೆ ಮಾಡಬೇಕಾಗಿದ್ದ ಉತ್ತರಕ್ರಿಯೆಗಳೆಲ್ಲ ವನ್ನೂ ಯಥಾವಿಧಿಯಾಗಿ ಹಾಸ್ತಿನಪುರದಲ್ಲಿಯೇ ಮಾಡಿ ಮುಗಿಸಿದರು.

ಹಾಸ್ತಿನಪುರದಲ್ಲಿಯೇ ವಾಸಮಾಡತೊಡಗಿದ ಪಾಂಡವರೊಡನಿರಲು ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೆ ಬಾಲ್ಯದಿಂದಲೂ ಸಹ್ಯವಾಗು ತ್ತಿರಲಿಲ್ಲ. ಪಾಪಕರ್ಮಗಳಲ್ಲಿಯೇ ಆಸಕ್ತನಾಗಿದ್ದ, ರಾಕ್ಷಸರಿಗೆ ಅನುರೂಪ ವಾದ ಬುದ್ಧಿಯನ್ನೇ ಹೊಂದಿದ್ದ ದುರ್ಯೋಧನನು ಪಾಂಡವರನ್ನು ಹಾಸ್ತಿನ ಪುರದಿಂದ ಓಡಿಸಲು ( ಕೊಲ್ಲಲು ) ಬಹುಪ್ರಕಾರವಾಗಿ ಪ್ರಯತ್ನಿಸಿದನು. ಆದರೆ ಭವಿತವ್ಯತೆಯ ಕಾರಣದಿಂದ ದುರ್ಯೋಧನನ ಪ್ರಯತ್ನಗಳೆಲ್ಲವೂ ವ್ಯರ್ಥವಾಗಿ ಹೋದುವು.

ಅನಂತರದಲ್ಲಿ ಧೃತರಾಷ್ಟ್ರನು ವ್ಯಾಜಾಂತರದಿಂದ ಪಾಂಡವರನ್ನು ವಾರಣಾವತಕ್ಕೆ ಕಳುಹಿಸಿಕೊಟ್ಟನು. ಯದ್ಯಪಿ ಧೃತರಾಷ್ಟ್ರನ ಆಶಯ

ವೇನೆಂಬುದು ಪಾಂಡವರಿಗೆ ತಿಳಿಯದಾಗಿದ್ದರೂ ದುರ್ಯೋಧನನಿಂದ ದೂರವಾಗಿ ಹೋಗಲು ಪಾಂಡವರೂ ಇಚ್ಛಿಸಿ ಪ್ರಯಾಣಹೊರಟರು. ವಾರಣಾವತದಲ್ಲಿದ್ದ ಅರಗಿನ ಮನೆಯಲ್ಲಿ ಅವರನ್ನು ಸುಟ್ಟು ಭಸ್ಮಮಾಡ ಬೇಕೆಂದು ಸಕಲ ಸನ್ನಾಹಗಳನ್ನೂ ಮಾಡಲಾಗಿದ್ದಿತು. ಆದರೆ ವಿದುರನ ತಂತ್ರದಿಂದಾಗಿ ಪಾಂಡವರು ಆ ಅಪಾಯದಿಂದಲೂ ಪಾರಾದರು. ಆ ಘಟನೆಯು ನಡೆದನಂತರದಲ್ಲಿ ಪಾಂಡವರು ಅರಣ್ಯಕ್ಕೆ ಪ್ರಯಾಣಮಾಡಿ ದರು. ಅಲ್ಲಿ ಹಿಡಿಂಬಾಸುರನನ್ನು ಭೀಮನು ಸಂಹರಿಸಿದನಂತರ ಪಾಂಡವರು ಏಕಚಕ್ರನಗರಿಗೆ ಪ್ರಯಾಣಮಾಡಿದರು. ಅಲ್ಲಿಯೇ ಸ್ವಲ್ಪಕಾಲದವರೆಗೆ ಬ್ರಾಹ್ಮಣರ ವೇಷದಲ್ಲಿ ವಾಸಮಾಡುತ್ತಿದ್ದಾಗ ಭೀಮಸೇನನು ಬಕನೆಂಬ ರಾಕ್ಷಸನನ್ನು ಸಂಹರಿಸಿದನು. ಅನಂತರ ಪಾಂಡವರು ಪಾಂಚಾಲನಗರಕ್ಕೆ ತೆರಳಿದರು. ಅಲ್ಲಿ ದ್ರೌಪದಿಯನ್ನು ಮದುವೆಯಾಗಿ ಹಾಸ್ತಿನಪುರಕ್ಕೆ ಹಿಂದಿರು ಗಿದರು. ಖಾಂಡವಪ್ರಸ್ಥದಲ್ಲಿದ್ದಾಗ ಪಾಂಡವರಿಗೆ ದ್ರೌಪದಿಯಲ್ಲಿ ಐವರು ಮಕ್ಕಳು ಜನಿಸಿದರು. ಯುಧಿಷ್ಠಿರನಿಗೆ ಪ್ರತಿವಿಂಧ್ಯನೂ, ವೃಕೋದರನಿಗೆ ಸುತಸೋಮನೂ, ಅರ್ಜುನನಿಗೆ ಶ್ರುತಕೀರ್ತಿಯೂ, ನಕುಲನಿಗೆ ಶತಾನೀಕನೂ, ಸಹದೇವನಿಗೆ ಶ್ರುತಕರ್ಮನೂ ಹುಟ್ಟಿದರು.

ಯುಧಿಷ್ಠಿರನು ಶಿಬಿದೇಶದ ರಾಜನಾದ ಗೋವಾಸನನ ಪುತ್ರಿ ದೇವಿಕಾ ಎಂಬುವಳನ್ನು ಸ್ವಯಂವರದಲ್ಲಿ ಮದುವೆಯಾಗಿ ಅವಳಲ್ಲಿ ಯೌಧೇಯನೆಂಬ ಮಗನನ್ನು ಪಡೆದನು. ಭೀಮಸೇನನು ವೀರ್ಯಶುಲ್ಕಳಾದ (ವೀರ್ಯಪ್ರದರ್ಶನದಿಂದ ಲಭಿಸತಕ್ಕವಳಾಗಿದ್ದ ) ಕಾಶೀದೇಶದ ರಾಜಪುತ್ರಿಯಾದ ಬಲಂಧರಾ ಎಂಬುವಳನ್ನು ವೀರ್ಯಶುಲ್ಕದ ಮೂಲಕ ವಾಗಿ ಮದುವೆಯಾಗಿ ಅವಳಲ್ಲಿ ಸರ್ವಗ ಎಂಬ ಹೆಸರಿನ ಮಗನನ್ನು ಪಡೆದನು. ಅರ್ಜುನನಾದರೋ ದ್ವಾರವತಿಗೆ ಹೋಗಿ ಸುಭಾಷಿಣಿಯಾದ, ವಾಸುದೇವನ ತಂಗಿಯಾದ ಸುಭದ್ರೆಯನ್ನು ಎತ್ತಿಕೊಂಡು ತನ್ನ ದೇಶಕ್ಕೆ ಕರೆತಂದು ಅಲ್ಲಿ ಮದುವೆಯಾದನು. ಅವಳಲ್ಲಿ ಬಹುಗುಣಸಂಪನ್ನನಾದ, ವಾಸುದೇವನ ಪ್ರೀತಿಪಾತ್ರನಾದ ಅಭಿಮನ್ಯುವೆಂಬ ಹೆಸರಿನ ಪುತ್ರನನ್ನು ಪಡೆದನು. ನಕುಲನು ಚೇದಿದೇಶದ ರಾಜಕುಮಾರಿಯಾದ ಕರೇಣುಮತೀ ಎಂಬ ಹೆಸರಿನ ರಾಜಕುಮಾರಿಯನ್ನು ಮದುವೆಯಾಗಿ ಅವಳಲ್ಲಿ ನಿರಮಿತ್ರ

ನೆಂಬ ಹೆಸರಿನ ಪುತ್ರನನ್ನು ಪಡೆದನು. ಸಹದೇವನು ಮದ್ರಾಧಿಪತಿಯಾದ ದ್ಯುತಿಮಂತರಾಜನ ಪುತ್ರಿಯಾದ ವಿಜಯಾ ಎಂಬುವಳನ್ನು ಸ್ವಯಂವರವಿಧಿಯಿಂದ ಮದುವೆಯಾಗಿ ಅವಳಲ್ಲಿ ಸುಹೋತ್ರನೆಂಬ ಮಗನನ್ನು ಪಡೆದನು. ಪಾಂಡವರಲ್ಲಿ ಯಾರಿಗೂ ಮದುವೆಯಾಗುವ ಮೊದಲೇ ಭೀಮಸೇನನು ಅರಣ್ಯದಲ್ಲಿ ಹಿಡಿಂಬಾ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಘಟೋತ್ಕಚನೆಂಬ ಮಗನನ್ನು ಪಡೆದನು. ಈ ರೀತಿಯಾಗಿ ಐವರು ಪಾಂಡವರಿಗೆ ಹನ್ನೊಂದು ಮಕ್ಕಳಿದ್ದರು. ಅವರಲ್ಲಿ ಅಭಿಮನ್ಯುವಿನಿಂದ ಮಾತ್ರ ವಂಶಾಭಿವೃದ್ಧಿಯಾಯಿತು. ಅರ್ಜುನನ ಪುತ್ರನಾದ ಅಭಿಮನ್ಯುವು ವಿರಾಟರಾಜನ ಪುತ್ರಿಯಾದ ಉತ್ತರಾ ಎಂಬುವಳನ್ನು ಮದುವೆಯಾದನು. ಅವಳ ಗರ್ಭದಲ್ಲಿ ಪ್ರಾಣರಹಿತವಾದ ಶಿಶುವು ಹುಟ್ಟಿತು. ವಾಸುದೇವನ ನಿರ್ದೇಶದಂತೆ ಕುಂತಿಯು ಸತ್ತುಹೋಗಿದ್ದ ಆ ಶಿಶುವನ್ನು ತನ್ನ ತೊಡೆಯಮೇಲಿಟ್ಟುಕೊಂಡಳು. ಕೇವಲ ಆರು ತಿಂಗಳಿಗೇ ಹುಟ್ಟಿದ ಆ ಶಿಶುವನ್ನು ತಾನು ಜೀವಂತವನ್ನಾಗಿ ಮಾಡುವೆನೆಂದು ವಾಸುದೇವನು ಪ್ರತಿಜ್ಞೆಮಾಡಿದನು. ಜನಮೇಜಯ! ದಿನ ತುಂಬುವ ಮೊದಲೇ ಆ ಶಿಶುವು ಹುಟ್ಟಿದುದರಿಂದ ಶಿಶುವಿಗೆ ಸ್ವಲ್ಪವಾದರೂ ಚೈತನ್ಯವೆಂಬುದೇ ಇರಲಿಲ್ಲ. ಮೇಲಾಗಿ ಆ ಶಿಶುವು ಗರ್ಭದಲ್ಲಿದ್ದಾಗಲೇ ಅಶ್ವತ್ಥಾಮನ ಅಸ್ತ್ರಾಗ್ನಿಯಿಂದ ದಹಿಸಲ್ಪಟ್ಟಿದ್ದಿತು. ಅಂತಹ ಶಿಶುವನ್ನು ಸಜೀವಗೊಳಿಸಿದನಂತರ ವಾಸುದೇವನು ಹೇಳಿದನು :

**ಪರಿಕ್ಷೀಣೇ ಕುಲೇ ಜಾತೋ ಭವತ್ವಯಂ ಪರಿಕ್ಷಿನ್ನಾಮ ।।೮೪।।**

"ಕ್ಷೀಣಿಸಿಹೋಗುವುದರಲ್ಲಿದ್ದ ಕುಲದಲ್ಲಿ ಹುಟ್ಟಿ ಈ ಕುಲದ ವೃದ್ಧಿಗೆ ಕಾರಣನಾದ ಇವನು ಪರಿಕ್ಷಿತನೆಂದೇ ಪ್ರಸಿದ್ಧನಾಗಲಿ."

ಪರಿಕ್ಷಿತನಾದರೋ ಮಾದ್ರವತೀ ಎಂಬ ನಿಮ್ಮ ತಾಯಿಯನ್ನು ಮದುವೆಯಾಗಿ ಕುಲದೀಪಕನಾದ ನಿನ್ನನ್ನು ಪಡೆದನು. ನೀನು ವಪುಷ್ಟಮಾ ಎಂಬುವಳನ್ನು ಮದುವೆಯಾಗಿ ಶತಾನೀಕ ಮತ್ತು ಶಂಕುಕರ್ಣ ಎಂಬ ಇಬ್ಬರು ಮಕ್ಕಳನ್ನು ಪಡೆದಿರುವೆ. ನಿನ್ನ ಹಿರಿಯ ಮಗನಾದ ಶತಾನೀಕನಿಗೆ ವೈದೇಹೀ ಎಂಬ ಕನ್ಯೆಯನ್ನು ತಂದು ಮದುವೆಮಾಡಿರುವೆ. ಅವಳಲ್ಲಿ ಶತಾನೀಕನಿಗೆ ಅಶ್ವಮೇಧದತ್ತನೆಂಬ ಮಗನು ಹುಟ್ಟಿದ್ದಾನೆ.

ಜನಮೇಜಯ! ಇದೇ ಪೂರುವಂಶೀಯರ ಅಥವಾ ಪಾಂಡುವಂಶೀಯರ ಪುಣ್ಯಚರಿತ್ರೆಯಾಗಿದೆ. ಈ ವಂಶಾವಳಿಯ ಕೀರ್ತನವು ಧನಪ್ರಾಪಕವೂ, ಪುಣ್ಯಪ್ರದವೂ, ಪರಮಪವಿತ್ರವೂ ಆಗಿರುವುದು. ನಿಯಮನಿಷ್ಠರಾದ ಬ್ರಾಹ್ಮಣರಿಂದಲೂ, ಪ್ರಜಾಪಾಲನತತ್ಪರರಾದ ಕ್ಷತ್ರಿಯರಿಂದಲೂ, ವೈಶ್ಯರಿಂದಲೂ ಮತ್ತು ಈ ಮೂರು ವರ್ಣದವರ ಸೇವೆಯಲ್ಲಿ ನಿರತರಾಗಿರುವ ಶ್ರದ್ಧಾಳುಗಳಾದ ಶೂದ್ರರಿಂದಲೂ ಇದು ಸತತವಾಗಿ ಕೇಳಲ್ಪಡಬೇಕು. ನಿಯತಾತ್ಮರಾದ, ಮಾತ್ಸರ್ಯರಹಿತರಾದ, ಎಲ್ಲರ ವಿಷಯದಲ್ಲಿಯೂ ಮೈತ್ರೀಭಾವವನ್ನು ಹೊಂದಿರುವ, ವೇದಪಾರಾಯಣದಲ್ಲಿಯೇ ಸರ್ವದಾ ನಿರತರಾದ ಯಾರು ಈ ಇತಿಹಾಸವನ್ನು ಮೊದಲಿನಿಂದ ಕಡೆಯವರೆಗೂ ಹೇಳುತ್ತಾರೆಯೋ ಅಥವಾ ಕೇಳುತ್ತಾರೆಯೋ–ಅವರು ಸ್ವರ್ಗವನ್ನು ಜಯಿಸಿ ಅನೇಕಾನೇಕ ಪುಣ್ಯಲೋಕಗಳನ್ನು ಪಡೆಯುತ್ತಾರೆ. ಅಂತಹವರನ್ನು ಯಾವಾಗಲೂ ದೇವ-ಬ್ರಾಹ್ಮಣ-ಮನುಷ್ಯರು ಗೌರವಿಸಿ ಪೂಜಿಸುತ್ತಾರೆ. ಭಗವಾನ್ ವ್ಯಾಸರಿಂದ ಪ್ರೋಕ್ತವಾದ, ಪರಮಪವಿತ್ರವಾದ ಮತ್ತು ಶ್ರೇಷ್ಠವಾದ ಈ ಮಹಾಭಾರತವನ್ನು ಶ್ರದ್ಧಾವಂತರಾದ, ಮಾತ್ಸರ್ಯರಹಿತರಾದ, ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಮೈತ್ರೀಭಾವಯುಕ್ತರಾದ, ವೇದಸಂಪನ್ನರಾದ ಬ್ರಾಹ್ಮಣಾದಿ ವರ್ಣಗಳಲ್ಲಿ ಹುಟ್ಟಿದ ಯಾರು ಹೇಳುತ್ತಾರೆಯೋ ಮತ್ತು ಕೇಳುತ್ತಾರೆಯೋ–ಅವರೂ ಸಹ ಸ್ವರ್ಗವನ್ನು ಜಯಿಸಿದವರಾಗಿ ಸುಕೃತಿಗಳಾಗಿ ಶೋಕರಹಿತರಾಗುತ್ತಾರೆ. ಆಕಸ್ಮಿಕವಾಗಿ ಅವರು ಅಲ್ಪ-ಸ್ವಲ್ಪ ತಪ್ಪುಗಳನ್ನು ಮಾಡಿದರೂ ತಪ್ಪುಮಾಡದವರಂತೆಯೇ ಆಗುತ್ತಾರೆ. ಅರಿವಿಲ್ಲದೇ ಮಾಡಿದ ತಪ್ಪಿನ ದೋಷವು ಅವರನ್ನು ಬಾಧಿಸುವುದಿಲ್ಲ. (ಕರ್ತವ್ಯಾಕರ್ತವ್ಯಗಳಲ್ಲಿ ನಿಂದ್ಯರೆನಿಸಿಕೊಳ್ಳುವುದಿಲ್ಲ.)

**ಇದಂ ಹಿ ವೇದೈಃ ಸಮ್ಮಿತಂ ಪವಿತ್ರಮಪಿ ಚೋತ್ತಮಮ್ ।**
**ಧನ್ಯಂ ಯಶಸ್ಯಮಾಯುಷ್ಯಂ ಶ್ರೋತವ್ಯಂ ನಿಯತಾತ್ಮಭಿಃ ॥೯೦॥**

ಈ ಮಹಾಭಾರತವು ವೇದಗಳಿಗೆ ಸಮಾನವಾದುದು ; ಪವಿತ್ರವಾದುದು; ಉತ್ತಮವಾದುದು; ಧನಪ್ರಾಪಕವಾದುದು; ಯಶಃಪ್ರಾಪಕವಾದುದು;

ಆಯುಃಕಾರಕವಾದುದು. ಈ ಮಹಾಭಾರತವನ್ನು ಮಾನವರು ಏಕಾಗ್ರತೆಯಿಂದ ಕೇಳುತ್ತಲೇ ಇರಬೇಕು."

೯೫ನೆಯ ಅಧ್ಯಾಯವು ಮುಗಿಯಿತು.

೯೬ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಮಹಾಭಿಷನಿಗೆ ಬ್ರಹ್ಮನ ಶಾಪ : ಶಾಪಗ್ರಸ್ತರಾದ ವಸುಗಳೊಡನೆ ಗಂಗಾದೇವಿಯ ಸಂಭಾಷಣೆ

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಇಕ್ಷ್ವಾಕುವಂಶದಲ್ಲಿ ಸತ್ಯವಾದಿಯೂ ಮತ್ತು ಸತ್ಯಪರಾಕ್ರಮಿಯೂ ಆದ ಮಹಾಭಿಷನೆಂಬ ಪ್ರಸಿದ್ಧನಾದ ರಾಜನೊಬ್ಬ ನಿದ್ದನು. ಅವನು ಸಾವಿರ ಅಶ್ವಮೇಧಯಾಗಗಳನ್ನೂ ಮತ್ತು ನೂರು ರಾಜಸೂಯಯಾಗಗಳನ್ನೂ ಮಾಡಿ ದೇವೇಶನಾದ ಇಂದ್ರನನ್ನು ತೃಪ್ತಿಪಡಿಸಿದನು. ಅದರ ಫಲವಾಗಿ ಅವನಿಗೆ ಸ್ವರ್ಗಪ್ರಾಪ್ತಿಯಾಯಿತು.

ಒಮ್ಮೆ ದೇವತೆಗಳು ಬ್ರಹ್ಮಲೋಕದಲ್ಲಿ ಬ್ರಹ್ಮನ ಉಪಾಸನೆಯನ್ನು ಮಾಡುತ್ತಿದ್ದರು. ಆ ಪೂಜೆಗೆ ಅನೇಕ ರಾಜರ್ಷಿಗಳೂ ಆಗಮಿಸಿದ್ದರು. ಮಹಾಭಿಷನೂ ಬ್ರಹ್ಮನ ಪೂಜೆಯಲ್ಲಿ ಭಾಗವಹಿಸಿದ್ದನು.

ನದಿಗಳಲ್ಲೆಲ್ಲಾ ಶ್ರೇಷ್ಠಳಾದ ಗಂಗಾದೇವಿಯೂ ಆ ಸಮಯದಲ್ಲಿ ದಿವ್ಯವಾದ ರೂಪವನ್ನು ಧರಿಸಿದವಳಾಗಿ, ಚಂದ್ರನ ಬೆಳದಿಂಗಳಿಗೆ ಸಮಾನ ವಾಗಿದ್ದ ಶ್ವೇತವಸ್ತ್ರವನ್ನುಟ್ಟು ಬ್ರಹ್ಮನ ಸಮೀಪಕ್ಕೆ ಆಗಮಿಸಿದಳು. ಅದೇ ಸಮಯದಲ್ಲಿ ಆಕಸ್ಮಿಕವಾಗಿ ಬೀಸಿದ ಬಿರುಗಾಳಿಯಿಂದ ಗಂಗಾದೇವಿಯು ವಿವಸ್ತ್ರಳಾದಳು. ಒಡನೆಯೇ ದೇವತೆಗಳೆಲ್ಲರೂ ಅಧೋಮುಖರಾದರು. ರಾಜರ್ಷಿಯಾದ ಮಹಾಭಿಷನು ಮಾತ್ರ ಅಧೋಮುಖನಾಗಲಿಲ್ಲ. ( ಅವನು ಪ್ರಕೃತಿಯನ್ನು ಜಯಿಸಲು ಸಮರ್ಥನಾಗಲಿಲ್ಲ. ) ಯಾವ ವಿಧವಾದ ಶಂಕೆ ಯಾಗಲೀ ಸಂಕೋಚವಾಗಲೀ ಇಲ್ಲದೇ ವಿವಸ್ತ್ರಳಾಗಿದ್ದ ಗಂಗಾದೇವಿಯನ್ನು ನೆಟ್ಟದೃಷ್ಟಿಯಿಂದ ನೋಡುತ್ತಲೇ ಇದ್ದನು. ಬ್ರಹ್ಮನ ಸಭೆಯಲ್ಲಿ ಋಷಿ-

ಮಹರ್ಷಿಗಳ ಮತ್ತು ರಾಜರ್ಷಿಗಳ ಮಧ್ಯದಲ್ಲಿ ಕುಳಿತಿದ್ದರೂ ನಿಷ್ಕಲ್ಮಷ ಚಿತ್ತನಾಗಿರದೇ ದುಷ್ಟಯೋಚನೆಯನ್ನು ಮಾಡುತ್ತಾ ವಿವಸ್ತ್ರಳಾಗಿದ್ದ ಗಂಗೆಯ ಶರೀರದ ಮೇಲೆಯೇ ನೆಟ್ಟದೃಷ್ಟಿಯುಳ್ಳವನಾಗಿದ್ದ ಮಹಾಭಿಷನನ್ನು ಕುರಿತು ಬ್ರಹ್ಮನು ಹೇಳಿದನು :

"ದುರ್ಮತಿಯಾದ ಮಹಾಭಿಷನೇ! ಸಕಲಕಾಮನೆಗಳನ್ನೂ ಪರಿತ್ಯಜಿಸಿದವನಿಗೆ ಮಾತ್ರವೇ ಲಭ್ಯವಾಗುವ ಪುಣ್ಯಲೋಕವಿದಾಗಿರುತ್ತದೆ. ಗಂಗೆಯನ್ನು ನೋಡಿದೊಡನೆಯೇ ನೀನು ಕಾಮಭೂಯಿಷ್ಠನಾದೆ. ನಿನ್ನ ಮನಸ್ಸು ಅವಳ ರೂಪಿನಿಂದ ಆಕರ್ಷಿತವಾಯಿತು. ಆದುದರಿಂದ ನೀನು ಈ ಸಭೆಯಲ್ಲಿರಲು ಅರ್ಹತೆಯನ್ನು ಪಡೆದಿರುವುದಿಲ್ಲ. ಇನ್ನೂ ಹಲವಾರು ವರ್ಷಗಳವರೆಗೆ ನೀನು ಮರ್ತ್ಯಲೋಕದಲ್ಲಿಯೇ ಇದ್ದು ನಿನ್ನ ಕಾಮನೆಗಳೆಲ್ಲವನ್ನೂ ಪೂರೈಸಿಕೊಂಡು ಸ್ವರ್ಗಲೋಕಕ್ಕೆ ಹಿಂದಿರುಗಬಹುದು. ನೀನು ಗಂಗಾದೇವಿಗೆಸಗಿದ ಈ ಅಪರಾಧಕ್ಕಾಗಿ ಅವಳು ಭೂಮಿಯಲ್ಲಿ ನಿನಗೆ ಅಪ್ರಿಯವಾದ ಕಾರ್ಯಗಳನ್ನು ಮಾಡುವಳು. ಅವಳು ಅಪ್ರಿಯವಾದ ಕಾರ್ಯಗಳನ್ನೆಸಗಿದರೂ ಕಾಮಾಭಿಭೂತನಾದ ನೀನು ಅದನ್ನು ಸಹಿಸಿಕೊಳ್ಳುವೆ. ಅವಳು ಮಾಡುವ ಅಪ್ರಿಯವಾದ ಕಾರ್ಯಕ್ಕೆ ನೀನು ಕುಪಿತನಾಗಿ ವಿರೋಧವನ್ನು ವ್ಯಕ್ತಪಡಿಸಿದಂದು ನನ್ನ ಈ ಶಾಪದಿಂದ ಬಿಡುಗಡೆಯನ್ನು ಹೊಂದುವೆ."

ಶಾಪ-ಪ್ರತಿಶಾಪಗಳೆರಡನ್ನೂ ಕೊಟ್ಟನಂತರದಲ್ಲಿ ಮುಂದೆ ಮಾತನಾಡುವುದೇನಿದೆ? ಮೇಲಾಗಿ ಮಹಾಭಿಷನ ಮನಸ್ಸು ಕಾಮದಿಂದ ಕಲುಷಿತವಾಗಿಯೂ ಇದ್ದಿತು. ತಾನು ಯಾವ ವಂಶದಲ್ಲಿ ಹುಟ್ಟಬೇಕೆಂಬುದರ ವಿಷಯವಾಗಿ ಮಹಾಭಿಷನು ಪರ್ಯಾಲೋಚಿಸಿದನು. ಆಗಿನ ಸಮಯದಲ್ಲಿ ಭೂಮಿಯಲ್ಲಿ ರಾಜ್ಯಭಾರಮಾಡುತ್ತಿದ್ದ ಅನೇಕ ರಾಜ-ಮಹಾರಾಜರುಗಳನ್ನು ಸ್ಮರಿಸಿಕೊಂಡನು. ಅನೇಕ ತಪೋಧನರನ್ನೂ ನೆನೆಸಿಕೊಂಡನು. ಭರತವಂಶೀಯನಾದ ಪ್ರತಿಶ್ರವಸನ ಮಗನಾದ ಪ್ರತೀಪನೇ ತನ್ನ ತಂದೆಯಾಗಲು ಅರ್ಹನಾಗಿರುವನೆಂದು ಭಾವಿಸಿದನು.

ಬ್ರಹ್ಮನ ಶಾಪವನ್ನು ಕೇಳಿ ಅಧೀರನಾಗಿ ಕುಳಿತು ಯೋಚಿಸುತ್ತಿದ್ದ

ಮಹಾಭಿಷನನ್ನು ನೋಡಿ, ಅವನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಗಂಗೆಯು ಭೂಲೋಕಾಭಿಮುಖಳಾಗಿ ಹೊರಟಳು. ಹಾಗೆ ಹೋಗುತ್ತಿದ್ದಾಗ, ತನ್ನ ಹಿಂದೆಯೇ ವೇಗವಾಗಿ ಸ್ವರ್ಗದಿಂದ ಕೆಳಗೆ ಬೀಳುತ್ತಿದ್ದ ಮತ್ತು ಮ್ಲಾನಿಹೊಂದಿದ್ದ ಮುಖಭಾವದಿಂದ ಕೂಡಿದ್ದ, ಸ್ವರ್ಗವಾಸಿಗಳಾದ ವಸುಗಳನ್ನು ನೋಡಿದಳು. ಕುಂದಿದ ಮುಖಭಾವದಿಂದ ಕೂಡಿದ್ದ ಅವರನ್ನು ನೋಡಿ ಅನುಕಂಪಿತಳಾದ ಗಂಗೆಯು ಪ್ರಶ್ನಿಸಿದಳು :

"ವಸುಗಳೇ! ನಿಮ್ಮ ದಿವ್ಯರೂಪಗಳು ನಾಶವಾಗಿವೆಯಲ್ಲಾ! ಕಾರಣವೇನು? ನಿಮ್ಮ ಮುಖಗಳು ಏಕೆ ಬಾಡಿಹೋಗಿವೆ? ಇದಕ್ಕೆ ಕಾರಣ ವಾದರೂ ಏನು? ಸ್ವರ್ಗವಾಸಿಗಳೆಲ್ಲರೂ ಸೌಖ್ಯದಿಂದಿರುವವರಲ್ಲವೇ?"

"ಮಹಾನದಿಯೇ! ನಾವು ಮಾಡಿದ ಅಲ್ಪವಾದ ಅಪರಾಧದಿಂದಲೇ ಮಹಾತ್ಮರಾದ ವಸಿಷ್ಠರು ಕುಪಿತರಾಗಿ ನಮಗೆ ಶಾಪವನ್ನಿತ್ತರು. ಅದರಿಂದಲೇ ನಾವಿಂದು ವಿಮೂಢರಾಗಿದ್ದೇವೆ."

"ಅಲ್ಪಾಪರಾಧಕ್ಕಾಗಿ ಸತ್ತ್ವಗುಣಸಂಪನ್ನರಾದ ಮಹರ್ಷಿಗಳು ಶಪಿಸಿದರೇ?"

"ನಾವೆಲ್ಲರೂ ಯಥಾಪೂರ್ವವಾಗಿ ಸ್ವೇಚ್ಛೆಯಿಂದ ವಿಹರಿಸುತ್ತಿದ್ದಾಗ, ನಿಗೂಢವಾಗಿದ್ದ ಸ್ಥಳದಲ್ಲಿ ಕುಳಿತು ಮಹರ್ಷಿಗಳು ಸಂಧ್ಯೋಪಾಸನೆಯನ್ನು ಮಾಡುತ್ತಿದ್ದರು. ಆ ಮಹಾತ್ಮರು ಅಲ್ಲಿರುವರೆಂಬುದನ್ನು ಲಕ್ಷಿಸದೇ ನಾವು ಆಶ್ರಮದ ಮರ್ಯಾದೆಯನ್ನು ಮೀರಿ ನಡೆದುಕೊಂಡೆವು. (ಅವರ ಹೋಮ ಧೇನುವನ್ನು ಅಪಹರಿಸಿದೆವು.) ಮಹರ್ಷಿಗಳದನ್ನು ಮಹಾಪಚಾರವೆಂದು ಭಾವಿಸಿ ಕುಪಿತರಾಗಿ ಯೋನಿಜರಾಗಿರೆಂದು ಶಾಪವನ್ನಿತ್ತರು.

**ನ ನಿವರ್ತಯಿತುಂ ಶಕ್ಯಂ ಯದುಕ್ತಂ ಬ್ರಹ್ಮವಾದಿನಾ ।**
**ತ್ವಮಸ್ಮಾನ್ಮಾನುಷೀ ಭೂತ್ವಾ ಸೃಜ ಪುತ್ರಾನ್ವಸೂನ್ಭುವಿ ॥೧೫॥**

ಬ್ರಹ್ಮಜ್ಞರಾದ ಆ ಬ್ರಾಹ್ಮಣರು ಹೇಳಿದುದನ್ನು ನಮಗೆ ಅನ್ಯಥಾ ಮಾಡುವ ಸಾಮರ್ಥ್ಯವಿಲ್ಲ. ಅವರ ಶಾಪದಂತೆ ನಾವು ಭೂಮಿಯಲ್ಲಿ ಮನುಷ್ಯರಾಗಿ ಜನ್ಮತಾಳಲೇಬೇಕಾಗಿದೆ. ಭೂಮಿಯಲ್ಲಿ ನಮ್ಮ ತಾಯಿ

ಯಾಗಲು ಅರ್ಹತೆಯುಳ್ಳವರನ್ನು ನಾವು ಕಾಣೆವು. ಆದುದರಿಂದ ನೀನೇ ಮನುಷ್ಯಳಾಗಿ ಭೂಮಿಯಲ್ಲಿ ಅವತರಿಸಿ ನಮ್ಮ ಜನನಿಯಾಗು. (ಅಷ್ಟ ವಸುಗಳಾದ ನಾವು ನಿನ್ನ ಪುತ್ರರಾಗಿ ಭೂಮಿಯಲ್ಲಿ ಅವತರಿಸುವಂತಾಗಲಿ.) ಶುಭಾಂಗಿ! ನಾವೆಂದಿಗೂ ಮಾನವಸ್ತ್ರೀಯರ ಜಠರವನ್ನು ಪ್ರವೇಶಿಸ ಲಾರೆವು."

ವಸುಗಳೆಲ್ಲರೂ ಏಕಕಂಠದಿಂದ ಗಂಗೆಯನ್ನು ಹೀಗೆ ಪ್ರಾರ್ಥಿಸಲಾಗಿ, ಗಂಗಾದೇವಿಯು ಹಾಗೆಯೇ ಆಗಲೆಂದು ವಸುಗಳ ಪ್ರಾರ್ಥನೆಯನ್ನು ಅಂಗೀಕರಿಸಿದವಳಾಗಿ ಪುನಃ ಅವರನ್ನು ಪ್ರಶ್ನಿಸಿದಳು :

"ನಾನು ನಿಮ್ಮನ್ನು ಗರ್ಭದಲ್ಲಿ ಧರಿಸುವೆನಾದರೂ ಗರ್ಭಾಧಾನ ಮಾಡಲು ಒಬ್ಬ ಮಹಾಪುರುಷನ ಅಗತ್ಯವಿದೆಯಲ್ಲವೇ? ಭೂಲೋಕ ದಲ್ಲಿರುವ ಪುರುಷಶ್ರೇಷ್ಠರಲ್ಲಿ ನಿಮ್ಮ ತಂದೆ ಎನಿಸಿಕೊಳ್ಳಲು ಅರ್ಹರಾದವರು ಯಾರಿದ್ದಾರೆ? ಈ ವಿಷಯವನ್ನೂ ನೀವು ಆಲೋಚಿಸಿದ್ದೀರಾ?"

"ಗಂಗಾದೇವಿ! ಈ ವಿಷಯವನ್ನೂ ನಾವಾಗಲೇ ತೀರ್ಮಾನಿಸಿ ಬಿಟ್ಟಿದ್ದೇವೆ. ಪ್ರತೀಪಮಹಾರಾಜನಿಗೆ ಶಾಂತನುವೆಂಬ ಲೋಕವಿಖ್ಯಾತನಾದ ಮಗನು ಹುಟ್ಟುವನು. ಭೂಲೋಕದಲ್ಲಿ ಅವನೇ ನಮ್ಮ ಉತ್ಪತ್ತಿಗೆ ಕಾರಣನಾಗುವನು."

ವಿವಸ್ತ್ರಳಾಗಿದ್ದ ತನ್ನನ್ನು ದಿಟ್ಟಿಸಿ ನೋಡಿ ಬ್ರಹ್ಮನ ಶಾಪಕ್ಕೊಳಗಾದ ಮಹಾಭಿಷನೇ ಶಾಂತನುವಾಗಿ ಹುಟ್ಟುವನೆಂಬ ವಿಷಯವನ್ನು ಗಂಗೆಯು ತಿಳಿದುಕೊಂಡಳು. ಅಂತೆಯೇ ಅವಳು ಅಷ್ಟವಸುಗಳನ್ನು ಕುರಿತು ಹೇಳಿದಳು:

"ವಸುಗಳೇ! ಪಾಪರಹಿತವಾದ ನಿಮ್ಮ ಅಭಿಮತವೇ ನನ್ನ ಅಭಿಮತವೂ ಆಗಿರುವುದು. ಶಾಂತನುವು ನಿಮ್ಮ ತಂದೆಯಾಗಲು ಅಂದರೆ ನನ್ನ ಪತಿಯಾಗಲು ಅರ್ಹನಾಗುವನು. ಶಾಂತನುವಿಗೂ ಪ್ರಿಯವನ್ನುಂಟು ಮಾಡುವೆನು. ನಿಮ್ಮ ಅಭಿಲಾಷೆಯನ್ನೂ ನಡೆಸಿಕೊಡುವೆನು."

"ಗಂಗಾದೇವಿ! ನೀನು ನಮ್ಮ ಮತ್ತೊಂದು ಪ್ರಾರ್ಥನೆಯನ್ನೂ ನಡೆಸಿಕೊಡಬೇಕಾಗಿದೆ. ನಾವು ವಸಿಷ್ಠರ ಶಾಪದ ಫಲವನ್ನು ಅನಿವಾರ್ಯ ವಾಗಿ ಅನುಭವಿಸಬೇಕಾಗಿದೆ. ಆದರೆ ನಾವು ಅವರ ಶಾಪಾನುಸಾರವಾಗಿ

ಮನುಷ್ಯಯೋನಿಯಲ್ಲಿ ಜನ್ಮತಾಳಲು ಮಾತ್ರ ಇಚ್ಛಿಸುತ್ತೇವೆಯೇ ಹೊರತು ಭೂಮಿಯಲ್ಲಿಯೇ ಹೆಚ್ಚುಕಾಲ ಬದುಕಿರುವ ಇಚ್ಛೆಯುಳ್ಳವರಾಗಿಲ್ಲ. ಆದುದರಿಂದ :

**ಜಾತಾನ್ಕುಮಾರಾನ್ಸ್ವಾನಪ್ಸು ಪ್ರಕ್ಷೇಪ್ತುಂ ವೈ ತ್ವಮರ್ಹಸಿ ।**
**ಯಥಾ ನ ಚಿರಕಾಲಂ ನೋ ನಿಷ್ಕೃತಿಃ ಸ್ಯಾತ್ತ್ರಿಲೋಕಗೇ ॥೧೯॥**

ಮೂರು ಲೋಕಗಳಲ್ಲಿಯೂ ಪ್ರವಹಿಸುವ ಗಂಗಾದೇವಿಯೇ! ಹುಟ್ಟಿದ ನಿನ್ನ ಮಕ್ಕಳನ್ನು ಒಡನೆಯೇ ನೀನು ನೀರಿನಲ್ಲಿ ಹಾಕಿಬಿಡಬೇಕು. ನಾವು ಚಿರಕಾಲ ಭೂಲೋಕದಲ್ಲಿರದಂತೆಯೂ ಮತ್ತು ನಮಗೆ ಪ್ರಾಪ್ತವಾಗಿರುವ ಬ್ರಾಹ್ಮಣಶಾಪದಿಂದ ಬಿಡುಗಡೆಯು ಬೇಗ ಆಗುವಂತೆಯೂ ನೀನು ವರ್ತಿಸಬೇಕಾಗಿದೆ."

"ನೀವು ಹೇಳಿದಂತೆಯೇ ಮಾಡುವೆನು. ಆದರೆ ನಿಮ್ಮಲ್ಲಿ ಒಬ್ಬ ನಾದರೂ ಶಾಂತನುವಿನ ಮಗನಾಗಿ ಚಿರಕಾಲ ಉಳಿದುಕೊಳ್ಳಬೇಕು. ನಾನು ಅವನೊಡನೆ ಮಾಡುವ ಸಂಗಮವು ವ್ಯರ್ಥವಾಗಬಾರದು. ಸತ್ಪುತ್ರರಾಗ ಬೇಕೆನ್ನುವ ಕಾಮನೆಯಿಂದಲೇ ಸ್ತ್ರೀ-ಪುರುಷರ ಸಮಾಗಮವು ನಡೆಯುವು ದಾದ್ದರಿಂದ ನನ್ನ ಮತ್ತು ಶಾಂತನುವಿನ ಸಮಾಗಮದ ಫಲವಾಗಿ ಒಬ್ಬನಾ ದರೂ ಪುತ್ರನು ಉಳಿಯಲೇಬೇಕು. ಇದಕ್ಕೆ ನೀವು ಒಪ್ಪುವುದಾದರೆ..."

"ಗಂಗಾದೇವಿ! ನಿನ್ನ ಆಶಯದಂತೆಯೇ ನಡೆದುಕೊಳ್ಳುತ್ತೇವೆ. ನಮ್ಮ ಶಕ್ತಿಯ ಎಂಟನೆಯ ಒಂದಂಶವನ್ನು ಒಟ್ಟಾಗಿ ಕೂಡಿಸಿ ಶಾಂತನುವಿಗೊಬ್ಬ ಮಗನು ನಿನ್ನಲ್ಲಿ ಹುಟ್ಟುವಂತೆ ಮಾಡುತ್ತೇವೆ. ಅವನು ನಿಮ್ಮಿಬ್ಬರ ಸಮಾಗಮದ ಫಲವಾಗಿ ಚಿರಕಾಲ ಭೂಮಿಯಲ್ಲಿ ಉಳಿಯುವುದು ಮಾತ್ರವಲ್ಲದೇ ಶಾಂತನುವಿನ ಆಜ್ಞಾಧಾರಕನೂ ಮತ್ತು ಅವನಿಗೆ ಇಷ್ಟನೂ ಆಗುವನು. ಆದರೆ ಮರ್ತ್ಯಲೋಕದಲ್ಲಿ ಅವನ ಸಂತತಿಯು ಮುಂದುವರಿಯುವುದಿಲ್ಲ. ಈ ಕಾರಣದಿಂದಾಗಿ ವೀರ್ಯವಂತನಾದ ನಿನ್ನ ಆ ಪುತ್ರನು ಅಪುತ್ರವಂತನಾಗಿಯೇ ಅವಸಾನವನ್ನು ಹೊಂದುತ್ತಾನೆ. ಈ ಪ್ರಾರ್ಥನೆಯನ್ನೂ ನೀನು ಅಂಗೀಕರಿಸಬೇಕು, ದೇವಿ!"

ಜನಮೇಜಯ! ಗಂಗಾದೇವಿಯು ವಸುಗಳ ಪ್ರಾರ್ಥನೆಯನ್ನು ಅಂಗೀಕರಿಸಿದಳು. ಈ ವಿಧವಾಗಿ ವಸುಗಳು ಗಂಗಾದೇವಿಯೊಡನೆ ಪರಸ್ಪರ

ಒಡಂಬಡಿಕೆಯನ್ನು ಮಾಡಿಕೊಂಡು ಪ್ರಹೃಷ್ಟಾಂತರಂಗರಾಗಿ ಅದರಂತೆ ನಡೆದುಕೊಳ್ಳಲು ವೇಗವಾಗಿ ಹೊರಟುಹೋದರು."

೯೬ನೆಯ ಅಧ್ಯಾಯವು ಮುಗಿಯಿತು.

೯೭ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಶಾಂತನುವಿನ ಜನನ

"ಜನಮೇಜಯ! ಎಲ್ಲ ಪ್ರಾಣಿಗಳಿಗೂ ಹಿತವನ್ನುಂಟುಮಾಡುವುದರಲ್ಲಿಯೇ ಸರ್ವದಾ ನಿರತನಾಗಿದ್ದ ಪ್ರತೀಪನೆಂಬ ಕುರುವಂಶಪ್ರದೀಪನಾದ ರಾಜನೊಬ್ಬನಿದ್ದನು. ಅವನು ಅನೇಕವರ್ಷಗಳ ಕಾಲ ಗಂಗಾದ್ವಾರದಲ್ಲಿ ಆಶ್ರಮವೊಂದನ್ನು ನಿರ್ಮಿಸಿಕೊಂಡು ಮಹಾಮಂತ್ರಗಳ ಜಪದಲ್ಲಿ ನಿರತನಾಗಿದ್ದನು. ಒಂದಾನೊಂದು ದಿನ ಪ್ರತೀಪನು ಜಪಮಾಡುತ್ತಾ ಕುಳಿತಿದ್ದಾಗ ಗಂಗಾದೇವಿಯು ನೀರಿನಿಂದ ಮೇಲೆ ಬಂದು, ಕಮನೀಯವಾದ ಸ್ತ್ರೀರೂಪವನ್ನು ಧರಿಸಿದವಳಾಗಿ, ಸಾಲವೃಕ್ಷಕ್ಕೆ ಸಮಾನನಾಗಿದ್ದ ಪ್ರತೀಪನ ಬಲ ತೊಡೆಯ ಮೇಲೆ ಕುಳಿತುಕೊಂಡಳು. ನಿರುದ್ವಿಗ್ನನಾದ ಪ್ರತೀಪನು ತನ್ನ ತೊಡೆಯ ಮೇಲೆ ಕುಳಿತಿದ್ದ ಯಶಸ್ವಿನಿಯಾದ ಗಂಗಾದೇವಿಯನ್ನು ಪ್ರಶ್ನಿಸಿದನು:

"ಕಲ್ಯಾಣಿ! ನಾನು ನಿನಗಾಗಿ ಏನು ಮಾಡಲಿ? ನಿನ್ನ ಮನಸ್ಸಿನಲ್ಲಿರುವ ಆಕಾಂಕ್ಷೆಯೇನು?"

"ಮಹಾರಾಜ! ನಾನು ನಿನ್ನನ್ನು ಕಾಮಿಸಿ ಬಂದಿರುವೆನು. ನನ್ನನ್ನು ಪರಿಗ್ರಹಿಸುವುದು ಯೋಗ್ಯವಾಗಿದೆ.

**ತ್ಯಾಗಃ ಕಾಮವತೀನಾಂ ಹಿ ಸ್ತ್ರೀಣಾಂ ಸದ್ಭಿರ್ವಿಗರ್ಹಿತಃ ॥೫॥**

ಕಾಮಾಭಿಲಾಷೆಯಿಂದ ಬರುವ ಸ್ತ್ರೀಯನ್ನು ಪರಿತ್ಯಜಿಸುವುದು ಸತ್ಪುರುಷರಿಂದ ನಿಂದ್ಯವಾಗಿ ಪರಿಗಣಿಸಲ್ಪಡುತ್ತದೆ."

"ಕಲ್ಯಾಣಿ! ನಾನು ಕಾಮೇಚ್ಛೆಯಿಂದ ಪರಸ್ತ್ರೀಗಮನವನ್ನು ಮಾಡತಕ್ಕವನಲ್ಲ. ಹಾಗಾದರೆ ನಿನ್ನನ್ನೇ ಮದುವೆಯಾಗುವಂತೆ ನೀನು ಹೇಳಬಹುದು. ನಾನು ನನ್ನ ವರ್ಣದವರನ್ನು (ಕ್ಷತ್ರಿಯರನ್ನು) ಬಿಟ್ಟು

ಬೇರೆಯವರನ್ನು ಪರಿಗ್ರಹಿಸುವುದೂ ಇಲ್ಲ. ಇದು ನನ್ನ ನಿಯತವಾದ ಧರ್ಮವಾಗಿರುತ್ತದೆ."

"ಮಹಾರಾಜ! ಯದ್ಯಪಿ ನಾನು ನಿನ್ನ ಸಜಾತೀಯಳಲ್ಲದಿದ್ದರೂ ಅಶುಭಾಂಗಿಯಲ್ಲ ( ಕುರೂಪಿಯಲ್ಲ .) ಸಂಗಮಕ್ಕೆ ಅಯೋಗ್ಯಳಾದವಳಲ್ಲ. ನನ್ನ ಪಾವಿತ್ರ್ಯದ ವಿಷಯವಾಗಿ ಹೇಳುವುದಾದರೆ–ಮೂರು ಲೋಕಗಳಲ್ಲಿ ಯಾರೊಬ್ಬರೂ ನನ್ನ ವಿಷಯದಲ್ಲಿ ಲಘುವಾದ ಮಾತುಗಳನ್ನಾಡಲಾರರು. ಸ್ವೇಚ್ಛೆಯಿಂದ ನಿನ್ನನ್ನೇ ಕಾಮಿಸಿ ಬಂದಿರುವ, ಶ್ರೇಷ್ಠಸ್ತ್ರೀಯೆಂದು ಪ್ರಸಿದ್ಧಳಾಗಿರುವ, ದೇವಕನ್ಯೆಯಾದ ನನ್ನನ್ನು ಸೇವಿಸುವವನಾಗು (ಪರಿಗ್ರಹಿಸು.)"

"ಕಲ್ಯಾಣಿ! ನಾನು ನಿನ್ನ ಪ್ರಿಯನಾಗಬೇಕೆಂದು ನೀನು ಪ್ರಚೋದಿಸುತ್ತಿರುವುದೇನೋ ನಿಜ. ಆದರೆ ನೀನು ಮಾಡಿರುವ ಕ್ರಿಯೆಯು ಮಾತ್ರ ನಿನ್ನನ್ನು ಪತ್ನಿಯನ್ನಾಗಿ ಪರಿಗ್ರಹಿಸಕೂಡದೆಂಬುದನ್ನು ಬಹುಸ್ಪಷ್ಟವಾಗಿ ಸೂಚಿಸುತ್ತದೆ. ಈ ಸಮಯದಲ್ಲಿ ನಾನೇನಾದರೂ ನನ್ನ ಪ್ರತಿಜ್ಞಾತವಾದ ಧರ್ಮವನ್ನೂ ಮತ್ತು ನೀನು ಕಾರ್ಯತಃ ತೋರಿಸಿಕೊಟ್ಟಿರುವ ಸೂಚನೆಯನ್ನೂ ಮೀರಿ ನಿನ್ನ ಪ್ರೇರಣೆಯಂತೆ ನಡೆದುಕೊಂಡೆನಾದರೆ ಈ ಧರ್ಮ ವಿಪರ್ಯಾಸವು ನನ್ನನ್ನು ನಾಶಮಾಡಿಬಿಡುತ್ತದೆ. ಕೇಳಿಕೆಗೆ ಅಥವಾ ಪ್ರಾರ್ಥನೆಗೆ ವಿರುದ್ಧವಾದ ಯಾವ ಕಾರ್ಯವನ್ನು ಮಾಡಿದೆನೆಂದು ನೀನು ಪ್ರಶ್ನಿಸಬಹುದಲ್ಲವೇ? ಅದಕ್ಕೂ ಉತ್ತರವನ್ನು ನೀನು ಕೇಳುವ ಮೊದಲೇ ಹೇಳಿಬಿಡುತ್ತೇನೆ. ನೀನು ನೇರವಾಗಿ ಬಂದು ನನ್ನ ಬಲತೊಡೆಯ ಮೇಲೆ ಕುಳಿತೆಯಲ್ಲವೇ?

**ಪ್ರಾಪ್ಯ ದಕ್ಷಿಣಮೂರುಂ ಮೇ ತ್ವಮಾಶ್ಲಿಷ್ಟಾ ವರಾಙ್ಗನೇ ।**
**ಅಪತ್ಯಾನಾಂ ಸ್ನುಷಾಣಾಂ ಚ ಭೀರು ವಿದ್ಧ್ಯೇತದಾಸನಮ್ ॥೯॥**

**ಸವ್ಯೋರುಃ ಕಾಮಿನೀಭೋಗ್ಯಸ್ತ್ವಯಾ ಸ ಚ ವಿವರ್ಜಿತಃ ।**
**ತಸ್ಮಾದಹಂ ನಾಚರಿಷ್ಯೇ ತ್ವಯಿ ಕಾಮಂ ವರಾಙ್ಗನೇ ॥೧೦॥**

ವರಾಂಗನೆಯೇ! ನನ್ನ ಬಲತೊಡೆಯನ್ನಾಕ್ರಮಿಸಿ ನೀನು ಕುಳಿತೆ. ಹೆಣ್ಣುಮಕ್ಕಳು ಮತ್ತು ಸೊಸೆಯರು ಮಾತ್ರವೇ ಬಲತೊಡೆಯ ಮೇಲೆ

ಕುಳಿತುಕೊಳ್ಳಲು ಅರ್ಹರಾಗಿರುತ್ತಾರೆ. ಬಲತೊಡೆಯು ಅವರಿಗಾಗಿಯೇ ಮೀಸಲಾದುದು. ಎಡಭಾಗದ ತೊಡೆಯು ಕಾಮಿನಿಗೆ ಅಥವಾ ಪತ್ನಿಗೆ ಕುಳಿತುಕೊಳ್ಳಲು ಯೋಗ್ಯವಾದುದು. ನಿನ್ನ ಮಾತಿನಂತೆ ಕೃತಿಯೂ ಇದ್ದಿದ್ದರೆ ನೀನು ಎಡತೊಡೆಯನ್ನೇ ಆಕ್ರಮಿಸಿ ಕುಳಿತುಕೊಳ್ಳುತ್ತಿದ್ದೆ. ಅದನ್ನು ನೀನು ವಿಸರ್ಜಿಸಿದ್ದರಿಂದ ನೀನು ನನ್ನನ್ನು ಕಾಮಿಸಲೂಬಾರದು ; ನಾನು ನಿನ್ನನ್ನು ಪತ್ನಿಯನ್ನಾಗಿ ಪರಿಗ್ರಹಿಸಲೂಬಾರದು. ಇದಕ್ಕೆ ವಿರುದ್ಧವಾಗಿ ನಡೆದರೆ ಧರ್ಮದ ವಿಪರ್ಯಾಸವಾಗುತ್ತದೆ. ಈ ಧರ್ಮದ ವಿಪರ್ಯಾಸವೇ ನನ್ನನ್ನು ಹಾಳುಮಾಡಿಬಿಡುತ್ತದೆ. ಆದುದರಿಂದ ನಾನು ಖಂಡಿತವಾಗಿಯೂ ನಿನ್ನಲ್ಲಿ ಕಾಮವೃತ್ತಿಯನ್ನು ನಡೆಸುವುದಿಲ್ಲ. ನೀನು ನನ್ನ ಸೊಸೆಯಾಗಲಡ್ಡಿಯಿಲ್ಲ. ನಿನ್ನನ್ನು ನಾನು ನನ್ನ ಮಗನ ಹೆಂಡತಿಯನ್ನಾಗಿ ಪರಿಗ್ರಹಿಸುತ್ತೇನೆ. ನೀನು ಬಂದು ನನ್ನ ಬಲತೊಡೆಯನ್ನಾಕ್ರಮಿಸಿ ಕುಳಿತೆ. ಇದರಿಂದಲೇ ನೀನು ನನ್ನ ಸೊಸೆಯಾಗಲು ಅರ್ಹಳಾಗಿರುವೆಯೆಂದು ನಾನು ಭಾವಿಸಿದ್ದೇನೆ."

"ಧರ್ಮಜ್ಞನೇ! ನೀನು ಹೇಳಿದಂತೆಯೇ ನಾನು ನಿನ್ನ ಮಗನ ಹೆಂಡತಿಯಾಗುತ್ತೇನೆ. ನಿನ್ನ ಮೇಲಿನ ಭಕ್ತಿಯಿಂದಾಗಿ ( ಗೌರವದಿಂದಾಗಿ ) ನಾನು ಭರತವಂಶದ ಕುಲವಧುವಾಗುತ್ತೇನೆ. ಭರತಕುಲದರಸರ ಹಿರಿಮೆಯನ್ನು ನಾನು ಚೆನ್ನಾಗಿ ಅರಿತಿದ್ದೇನೆ. ಪೃಥ್ವಿಯಲ್ಲಿರುವ ಸಕಲರಾಜರಿಗೂ ನೀವು ಆಶ್ರಯರಾಗಿರುವಿರಿ. ನಿಮ್ಮ ಗುಣಕಥನವು ಹಲವು ನೂರು ವರ್ಷಗಳ ಕಾಲ ಸತತವಾಗಿ ಹೇಳಿದರೂ ಮುಗಿಯತಕ್ಕುದಲ್ಲ. ನಿಮ್ಮ ಕುಲದರಸರು ಸಾಧುತ್ವಕ್ಕೂ ಮತ್ತು ಸುಚಾರಿತ್ರ್ಯಕ್ಕೂ ಹೆಸರಾಂತವರಾಗಿದ್ದಾರೆ. ನೀನು ಹೇಳಿದಂತೆಯೇ ನಾನು ನಿನ್ನ ಸೊಸೆಯಾಗುತ್ತೇನೆ. ಆದರೆ ನಿನ್ನ ಪುತ್ರನೊಡನಿರುವ ಸಮಯದಲ್ಲಿ ನನ್ನದೇ ಆದ ನಿಯಮವೊಂದನ್ನು ನಾನು ಪರಿಪಾಲಿಸಬೇಕಾಗಿದೆ. ನಾನು ಅನುಸರಿಸುವ ನಿಯಮವು ನಿನ್ನ ಮಗನಿಗೆ ಇಷ್ಟವಾಗಿರಲಿ; ಇಷ್ಟವಾಗದಿರಲಿ—ಅದನ್ನು ವಿವೇಚಿಸಲು ಅಥವಾ ವಿಮರ್ಶಿಸಲು ಅವನು ಹೋಗಬಾರದು. ನಾನು ಇದೇ ನಿಯಮದಿಂದಿದ್ದುಕೊಂಡು ನಿನ್ನ ಮಗನ ಸಂತೋಷವನ್ನು ಹೆಚ್ಚಿಸುತ್ತೇನೆ. ( ನಿನ್ನ ಮಗನಿಗೆ ಸಂತೋಷದಾಯಕಳಾಗಿರುತ್ತೇನೆ. ) ನನ್ನ ಸಂಬಂಧದಿಂದಾಗಿ ನಿನ್ನ ಪುತ್ರನು ಪ್ರಿಯ

ರಾದ, ಪುಣ್ಯಾತ್ಮರಾದ ಮಕ್ಕಳನ್ನು ಪಡೆದು ಅವಸಾನಾನಂತರದಲ್ಲಿ ಸಕಲ ಸುಖದಾಯಕವಾದ ಸ್ವರ್ಗವನ್ನು ಸೇರುವನು."

ಜನಮೇಜಯ! ಪ್ರತೀಪನು 'ತಥಾಸ್ತು' ಎಂದು ಪ್ರತಿವಚನವಿತ್ತ ನಂತರ ದೇವಕನ್ಯೆಯು (ಗಂಗಾದೇವಿಯು) ಅಂತರ್ಧಾನಹೊಂದಿದಳು.

ಆ ವೇಳೆಗೆ ವೃದ್ಧನಾದ ರಾಜನಿಗಿನ್ನೂ ಮಕ್ಕಳೇ ಆಗಿರಲಿಲ್ಲ. ಸೊಸೆ ಯನ್ನಾಗಿ ಮಾಡಿಕೊಳ್ಳುವೆನೆಂದು ಗಂಗೆಗೆ ಪ್ರತಿವಚನವನ್ನಿತ್ತಿದ್ದುದರಿಂದ ಪ್ರತೀಪನಿಗೆ ಪುತ್ರನನ್ನು ಪಡೆಯುವುದು ಅನಿವಾರ್ಯವಾಯಿತು. ಮಗನನ್ನು ಪಡೆಯಲು ಪ್ರತೀಪನು ಭಾರ್ಯೆಯೊಡನೆ ತಪಸ್ಸನ್ನು ಮಾಡಿದನು. ತಪಸ್ಸಿನ ಫಲವಾಗಿ ವೃದ್ಧದಂಪತಿಗಳು ಮಹಾಭಿಷನನ್ನು ಪುತ್ರನನ್ನಾಗಿ ಪಡೆದರು.

ಶಾನ್ತಸ್ಯ ಜಜ್ಞೇ ಸನ್ತಾನಸ್ತಸ್ಮಾದಾಸೀತ್ಸ ಶಾನ್ತನುಃ ||೧೯||

ವಂಶವು ಶಾಂತವಾಗುವುದರಲ್ಲಿದ್ದಾಗ (ಕ್ಷಯಿಸುವುದರಲ್ಲಿದ್ದಾಗ) ಹುಟ್ಟಿದುದರಿಂದ ಅಥವಾ ತಪಶ್ಚರ್ಯೆಯಲ್ಲಿಯೇ ನಿರತನಾಗಿದ್ದು ಶಾಂತ ನಾಗಿದ್ದ ಪ್ರತೀಪನಿಗೆ ವೃದ್ಧಾಪ್ಯದಲ್ಲಿ ಹುಟ್ಟಿದವನಾದ್ದರಿಂದ ಅವನಿಗೆ ಶಾಂತನು ಎಂದೇ ನಾಮಕರಣವನ್ನು ಮಾಡಿದರು.

ಶಾಂತನುವು ತನ್ನ ಸತ್ಕರ್ಮಗಳಿಂದಲೇ ಪ್ರಾಪ್ತವಾಗಿರುವ ಉತ್ತ ಮೋತ್ತಮವಾದ ಮತ್ತು ಅಕ್ಷಯವಾದ ಪುಣ್ಯಲೋಕಗಳನ್ನು ಸ್ಮರಿಸಿಕೊಳ್ಳುತ್ತಾ ಯಾವಾಗಲೂ ಪುಣ್ಯಕರ್ಮಗಳಲ್ಲಿಯೇ ನಿರತನಾಗಿರುತ್ತಿದ್ದನು.

ಶಾಂತನುವು ಯುವಕನಾದುದನ್ನು ಕಂಡು ಪ್ರತೀಪನು ತಾನು ಸ್ತ್ರೀಯೋರ್ವಳಿಗಿತ್ತಿದ್ದ ಭಾಷೆಯನ್ನು ಸ್ಮರಿಸಿದವನಾಗಿ ಪುತ್ರನನ್ನು ಕುರಿತು ಹೇಳಿದನು :

"ಮಗು! ಹಲವಾರು ವರ್ಷಗಳ ಹಿಂದೆ ಶ್ರೇಷ್ಠಳಾದ ಸ್ತ್ರೀಯೊಬ್ಬಳು ನಿನ್ನ ಶ್ರೇಯಸ್ಕಾಮಳಾಗಿ ನನ್ನ ಸಮೀಪಕ್ಕೆ ಬಂದಿದ್ದಳು. ವರವರ್ಣಿನಿ ಯಾದ, ದೇವಕನ್ಯೆಯಾದ ಅವಳೇನಾದರೂ ಪುತ್ರಕಾಮನೆಯಿಂದ ರಹಸ್ಯ ದಲ್ಲಿ ನಿನ್ನನ್ನು ಸಂಧಿಸಿ ಪ್ರಾರ್ಥಿಸಿದ್ದೇ ಆದರೆ ನೀನವಳನ್ನು ಪರಿಗ್ರಹಿಸು.

ಅವಳಾರು? ಅವಳ ಕುಲಗೋತ್ರಗಳೇನು?–ಎಂಬ ಯಾವ ಪ್ರಶ್ನೆಯನ್ನೂ ಕೇಳುವ ಕಾರಣವಿಲ್ಲ. ಅವಳು ನಿನಗಿಷ್ಟವಾಗುವ ಕಾರ್ಯವನ್ನೇ ಮಾಡಲಿ ಅನಿಷ್ಟವೆನಿಸಿದ ಕಾರ್ಯವನ್ನೇ ಮಾಡಲಿ–ನೀನವಳನ್ನು ಹೀಗೇಕೆ ಮಾಡಿದೆ ಯೆಂದೂ ಪ್ರಶ್ನಿಸಕೂಡದು. ಈ ನಿಯಮಗಳನ್ನನುಸರಿಸಿ ನನ್ನ ನಿರ್ದೇಶನ ದಂತೆ ನೀನವಳನ್ನು ಪರಿಗ್ರಹಿಸಬೇಕು."

ಜನಮೇಜಯ! ಪ್ರತೀಪನು ಶಾಂತನುವಿಗೆ ಹೀಗೆ ನಿರ್ದೇಶಿಸಿ ಅವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿ ಪತ್ನಿಯೊಡನೆ ಅರಣ್ಯಕ್ಕೆ ಹೊರಟುಹೋದನು.

ಶಾಂತನುವು ಮಹಾಪರಾಕ್ರಮಿಯಾಗಿದ್ದನು. ದೇವಾಧಿಪತಿಯಾದ ಇಂದ್ರನಿಗೆ ಸಮಾನನೆನಿಸಿದ್ದನು. ಅವನಿಗೆ ಬೇಟೆಯಲ್ಲಿ ಹೆಚ್ಚಿನ ಆಸಕ್ತಿ ಯಿದ್ದಿತು. ಯಾವಾಗಲೂ ಸಾಮಾನ್ಯವಾಗಿ ಜಿಂಕೆಗಳನ್ನೂ, ಕಾಡುಕೋಣ ಗಳನ್ನೂ ಬೇಟೆಯಾಡುತ್ತಾ ಅರಣ್ಯದಲ್ಲಿಯೇ ಇದ್ದುಬಿಡುತ್ತಿದ್ದನು. ಅವ ನೊಮ್ಮೆ ಸಿದ್ಧ-ಚಾರಣಸೇವಿತಳಾದ ಗಂಗಾನದಿಯ ಸಮೀಪದಲ್ಲಿ ಏಕಾಕಿ ಯಾಗಿ ಸಂಚರಿಸುತ್ತಿದ್ದನು. ಅಲ್ಲವನು, ಜಾಜ್ವಲ್ಯಮಾನವಾದ ಶರೀರಕಾಂತಿ ಯನ್ನು ಹೊಂದಿದ್ದ, ಸಾಕ್ಷಾತ್ ಲಕ್ಷ್ಮೀದೇವಿಯಂತೆಯೇ ಕಾಣುತ್ತಿದ್ದ ನಯನಮನೋಹರಳಾದ ಸ್ತ್ರೀಯೊಬ್ಬಳನ್ನು ಕಂಡನು. ಅವಳು ದೋಷ ರಹಿತಳಾಗಿದ್ದಳು. ಬೆಳದಿಂಗಳ ಕಾಂತಿಯನ್ನು ಚೆಲ್ಲುವ, ಮುಕ್ತಾಫಲಗಳಂತಿ ರುವ ದಂತಪಂಕ್ತಿಗಳಿಂದ ಸುಶೋಭಿತವಾದ ಮುಖಾರವಿಂದವನ್ನು ಹೊಂದಿ ದ್ದಳು. ದಿವ್ಯವಾದ ಆಭರಣಗಳನ್ನು ತೊಟ್ಟಿದ್ದಳು. ಕಮಲದ ಗರ್ಭದಲ್ಲಿರುವ ರೇಣುವಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದಳು. ನವಿರಾದ ವಸ್ತ್ರವನ್ನು ಧರಿಸಿದ್ದಳು. ಮೇಲಾಗಿ ಅವಳು ಏಕಾಕಿನಿಯಾಗಿದ್ದಳು. ಆಕಸ್ಮಿಕವಾಗಿ ಅಂತಹ ಸೊಬಗಿನ ಸುಂದರಯುವತಿಯನ್ನು ಕಂಡೊಡನೆಯೇ ಶಾಂತನುವು ಅಚ್ಚರಿಗೊಂಡನು. ಅವನ ರೋಮಗಳು ನಿಮಿರಿನಿಂತುವು. ತನ್ನೆರಡು ಕಣ್ಣುಗಳೆಂಬ ಭ್ರಮರಗಳಿಂದಲೇ ಶಾಂತನುವು ವರವರ್ಣಿನಿಯ ಸೌಂದರ್ಯಮಧುವನ್ನು ಹೀರತೊಡಗಿದನು. ಎಷ್ಟು ಹೊತ್ತು ಮುಖ ಕಮಲದ ಮಧುವನ್ನು ಸವಿದರೂ ನೇತ್ರಭ್ರಮರಗಳಿಗೆ ತೃಪ್ತಿಯೆಂಬುದೇ

ಉಂಟಾಗಲಿಲ್ಲ. ಆ ಶುಭಾಂಗಿಯಾದರೋ ರಾಜನ ದಿವ್ಯತೇಜಸ್ಸನ್ನು ಎವೆಯಿಕ್ಕದೇ ನೋಡುತ್ತಿದ್ದಳು. ಪರಸ್ಪರ ನೇತ್ರಭ್ರಮರಗಳು ಒಂದಾಗಿ ಸೇರಿಕೊಂಡುವು. ಒಡನೆಯೇ ವರವರ್ಣಿನಿಯ ಹೃದಯದಲ್ಲಿ ಸ್ನೇಹ-ಪ್ರೇಮ ಗಳು ಅಂಕುರಿಸಿದುವು. ನೆಟ್ಟ ದೃಷ್ಟಿಯನ್ನು ಹಿಂದಕ್ಕೆ ತೆಗೆದುಕೊಳ್ಳಲು ಯುವತಿಗೂ ಸಾಧ್ಯವಾಗಲಿಲ್ಲ. ಮನ್ಮಥಾಕಾರನಾದ ರಾಜನಲ್ಲಿಯೇ ಲೀನಳಾಗಿ ಹೋದಳು. ಹಲವಾರು ನಿಮಿಷಗಳವರೆಗೆ ಇಬ್ಬರೂ ಸ್ತಬ್ಧರಾಗಿ ನಿಂತು ಒಬ್ಬರನ್ನೊಬ್ಬರು ನೋಡುತ್ತಲೇ ಇದ್ದುಬಿಟ್ಟರು. ಅನಂತರದಲ್ಲಿ ರಾಜನು ವರವರ್ಣಿನಿಯ ಮುಖಭಾವದಿಂದ–ತನ್ನಂತೆಯೇ ಅವಳೂ ಕಾಮ ಮೋಹಿತಳಾಗಿರುವಳೆಂಬುದನ್ನು ತಿಳಿದು ಸುಮಧುರವಾದ ಮಾತುಗಳಿಂದ ಅವಳನ್ನು ಸಂತೈಸುತ್ತಾ ಹೇಳಿದನು :

"ಸುಮಧ್ಯಮೇ! ನೀನೇನು ದೇವತೆಯೇ? ದಾನವಿಯೇ? ಗಂಧರ್ವಿಯೇ? ಅಥವಾ ಅಪ್ಸರೆಯರಲ್ಲಿ ಒಬ್ಬಳಾಗಿರುವೆಯಾ? ಅಥವಾ ನೀನೇನು ಯಕ್ಷಿಯೇ? ಪನ್ನಗಿಯೇ? ಮನುಷ್ಯಳೇ? ನೀನು ಯಾರೇ ಆಗಿದ್ದರೂ ಸರಿಯೇ ; ದೇವಕನ್ಯೆಯಂತೆಯೇ ಅನಿರ್ವಾಚ್ಯವಾದ ಸೌಂದರ್ಯದಿಂದ ಬೆಳಗುತ್ತಿರುವ ನೀನು ನನ್ನ ಭಾರ್ಯೆಯಾಗು."

೯೭ನೆಯ ಅಧ್ಯಾಯವು ಮುಗಿಯಿತು.

೯೮ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಭೀಷ್ಮನ ಜನನ

"ಜನಮೇಜಯ! ಶಾಂತನುವಿನ ಸುಮಧುರವಾದ, ಸುಮನೋಹರ ವಾದ ಮತ್ತು ಮಂದಹಾಸಯುಕ್ತವಾದ ಮಾತುಗಳನ್ನು ಕೇಳಿ ಗಂಗಾದೇವಿಯು ತಾನು ವಸುಗಳಿಗಿತ್ತಿದ್ದ ಮಾತನ್ನೂ ಸ್ಮರಿಸಿ, ರಾಜನ ಸಮೀಪಕ್ಕೆ ಮೆಲ್ಲನೆ ಹೋದಳು. ಮಂದಹಾಸದೊಡನೆ ಮೃದುವಾಗಿ ಹೇಳಿದಳು :

**ಭವಿಷ್ಯಾಮಿ ಮಹೀಪಾಲ ಮಹಿಷೀ ತೇ ವಶಾನುಗಾ ॥೨॥**

"ಭೂಪಾಲನೇ! ನಾನು ನಿನ್ನ ಭಾರ್ಯೆಯಾಗಿ ನಿನ್ನ ಅಧೀನಳಾಗು ತ್ತೇನೆ. ಆದರೆ....

**ಯತ್ತು ಕುರ್ಯಾಮಹಂ ರಾಜಞ್ಛುಭಂ ವಾ ಯದಿ ವಾಶುಭಮ್ ।**
**ನ ತದ್ವಾರಯಿತವ್ಯಾಸ್ಮಿ ನ ವಕ್ತವ್ಯಾ ತಥಾಪ್ರಿಯಮ್ ॥೩॥**

**ಏವಂ ಹಿ ವರ್ತಮಾನೇಽಹಂ ತ್ವಯಿ ವತ್ಸ್ಯಾಮಿ ಪಾರ್ಥಿವ ।**
**ವಾರಿತಾ ವಿಪ್ರಿಯಂ ಚೋಕ್ತಾ ತ್ಯಜೇಯಂ ತ್ವಾಮಸಂಶಯಮ್ ॥೪॥**

"ನಾನು ಶುಭವಾದ ಅಥವಾ ಅಶುಭವಾದ, ನಿನಗಿಷ್ಟವಾದ ಅಥವಾ ಅನಿಷ್ಟವೆನಿಸಿದ ಯಾವ ಕಾರ್ಯವನ್ನೇ ಮಾಡಿದರೂ ಸರಿಯೇ–ನೀನು ನನ್ನನ್ನು ತಡೆಯಬಾರದು. ನಾನು ಮಾಡಿದ ಕಾರ್ಯಕ್ಕೆ–ನಿನಗದು ಪ್ರಿಯವಾಗದಿದ್ದರೆ ನನ್ನನ್ನು ನಿಂದಿಸಲೂಬಾರದು. ಈ ನಿಯಮವನ್ನನುಸರಿಸುವುದಾದರೆ ನಾನು ನಿನ್ನೊಡನಿರುವೆನು. ನಿನಗಿಷ್ಟವಾಗದ ಕಾರ್ಯವನ್ನು ನಾನು ಮಾಡುವಾಗ ನೀನೇನಾದರೂ ತಡೆದರೆ ಅಥವಾ ನನ್ನನ್ನು ಅಪ್ರಿಯವಾದ ಮಾತುಗಳಿಂದ ನಿಂದಿಸಿದರೆ–ನಾನು ನಿನ್ನನ್ನು ಬಿಟ್ಟು ಹೊರಟು ಹೋಗುವೆನು. ಇದರಲ್ಲಾವ ಸಂಶಯವೂ ಇರುವುದಿಲ್ಲ. ಅಲ್ಲಿಂದ ಮುಂದೆ ನಿಮಿಷಮಾತ್ರವೂ ನಾನು ನಿನ್ನೊಡನಿರಲಾರೆನು. ಆಗಬಹುದೇ?"

ಶಾಂತನುವು ಮುಂದೆ ಏನೊಂದನ್ನೂ ಪ್ರಶ್ನಿಸದೆ ಹಾಗೆಯೇ ಆಗಲೆಂದು ಹೇಳಿ ಅವಳ ನಿಯಮಗಳಿಗೆ ತನ್ನ ಒಪ್ಪಿಗೆಯನ್ನಿತ್ತನು.

ತನ್ನ ಮಾತಿಗೆ ಒಪ್ಪಿಗೆಯನ್ನಿತ್ತುದಕ್ಕಾಗಿ ವರವರ್ಣಿನಿಗೆ ಅತುಲವಾದ ಸಂತೋಷವುಂಟಾಯಿತು. ಪಾರ್ಥಿವೋತ್ತಮನಾದ ಶಾಂತನುವನ್ನು ವರಿಸಿದಳು. ಶಾಂತನುವೂ ಸಹ ಅವಳನ್ನು ಮದುವೆಯಾಗಿ ಅತುಲವಾದ ಆನಂದವನ್ನು ಪಡೆದನು. ತಾನಿತ್ತಿದ್ದ ಮಾತಿಗೆ ಅನುಸಾರವಾಗಿ ಶಾಂತನುವು ಅವಳೇನೇ ಮಾಡಿದರೂ– "ನೀನೇಕೆ ಈ ಕಾರ್ಯಮಾಡಿದೆ?" – ಎಂದು ಅವಳನ್ನು ಪ್ರಶ್ನಿಸುತ್ತಿರಲಿಲ್ಲ. ಶಾಂತನುವು ಗಂಗಾದೇವಿಯ ಸೌಶೀಲ್ಯ-ಸದಾಚಾರಗಳಿಂದಲೂ, ರೂಪ-ಔದಾರ್ಯಗಳಿಂದಲೂ, ಏಕಾಂತದಲ್ಲಿ ಮಾಡುತ್ತಿದ್ದ ಸೇವೆಯಿಂದಲೂ ಬಹಳ ಸಂತುಷ್ಟನಾಗಿದ್ದನು. ಸ್ವರ್ಗ-ಮರ್ತ್ಯ-ಪಾತಾಳ ಲೋಕಗಳಲ್ಲಿ ಪ್ರವಹಿಸುವ ಗಂಗಾದೇವಿಯಾದರೋ ದಿವ್ಯಮಾನುಷ ವಿಗ್ರಹವನ್ನು ಹೊಂದಿದವಳಾಗಿ, ದೇವರಾಜಸಮಪ್ರಭನಾದ, ನೃಸಿಂಹನಾದ, ಶ್ರೀಮಂತನಾದ ಶಾಂತನುವನ್ನು ಪತಿಯನ್ನಾಗಿ ಪಡೆದು ಪರಮ

ಸುಖವನ್ನು ಅನುಭವಿಸಿದಳು. ಶಾಂತನುವು ಅದೃಷ್ಟವಿಶೇಷದಿಂದ ಪರಮ ಪಾವನೆಯಾದ ಗಂಗಾದೇವಿಯನ್ನು ಪಡೆದು ತನ್ನ ಅಭಿಲಾಷೆಯನ್ನು ಪೂರೈಸಿಕೊಂಡನು. ಕಾಮಕೇಳಿಯ ಸಮಯದಲ್ಲಿ ತೋರಿಸುತ್ತಿದ್ದ ಹಾವ-ಭಾವಗಳಿಂದಲೂ ಮತ್ತು ಸುಮನೋಹರವಾದ ನೃತ್ಯಗಳಿಂದಲೂ ಗಂಗಾ ದೇವಿಯು ಶಾಂತನುವಿನ ಮನಸ್ಸನ್ನು ಸೂರೆಗೊಂಡಳು. ಅದಕ್ಕೆ ಪ್ರತಿಯಾಗಿ ಶಾಂತನುವೂ ಸಹ ತನ್ನ ಪ್ರೇಯಸಿಯನ್ನು ಚತುರೋಕ್ತಿಗಳಿಂದಲೂ, ಅನರ್ಘವಾದ ವಸ್ತ್ರಾಭರಣಗಳಿಂದಲೂ ಆನಂದಭರಿತಳನ್ನಾಗಿ ಮಾಡುತ್ತಿದ್ದನು. ತನಗೆ ಅನುರೂಪಳಾದ ಭಾರ್ಯೆಯು ಸಿಕ್ಕಿದಳೆಂದು ಶಾಂತನುವೂ, ತನಗೆ ಅನುರೂಪನಾದ ಪ್ರಿಯತಮನು ಸಿಕ್ಕಿದನೆಂದು ಗಂಗಾದೇವಿಯೂ ಪರಸ್ಪರವಾಗಿ ಆನಂದಿಸಿದರು. ಉತ್ತಮಸ್ತ್ರೀಯ ಸದ್ಗುಣ ಗಳಿಂದ ಆಕರ್ಷಿತನಾಗಿ ಅವಳೊಡನೆಯೇ ಅನವರತವೂ ರತಿಸುಖವನ್ನು ಅನುಭವಿಸುತ್ತಿದ್ದ ರಾಜನಿಗೆ ದಿನ-ಪಕ್ಷ-ಮಾಸ-ಋತು-ಅಯನ-ವರ್ಷಗಳು ಕಳೆದರೂ ಕಾಲದ ಪರಿವೆಯೇ ಇಲ್ಲವಾಯಿತು. ವರ್ಷಗಳು ಕ್ಷಣದಂತೆ ಉರುಳಿಹೋದುವು. ಶಾಂತನುವು ಯಥೇಚ್ಛವಾಗಿ ಗಂಗಾದೇವಿಯೊಡನೆ ವಿಹರಿಸುತ್ತಿದ್ದ ಕಾಲದಲ್ಲಿ ಅವಳಲ್ಲಿ ದೇವಸುತೋಪಮರಾದ ಎಂಟು ಮಕ್ಕಳನ್ನು ಪಡೆದನು.

ಆದರೆ ಒಂದೊಂದು ಮಗುವು ಹುಟ್ಟಿದಾಗಲೂ ಗಂಗಾದೇವಿಯು ಅದನ್ನು ತೆಗೆದುಕೊಂಡು ಹೋಗಿ–'ತ್ವಾಂ ಪ್ರೀಣಾಮ್ಯಹಂ'–"ನಾನು ನಿನ್ನನ್ನು ಸುಪ್ರೀತನನ್ನಾಗಿ ಮಾಡುತ್ತೇನೆ. ಅರ್ಥಾತ್ ನಿನಗೆ ಒಳ್ಳೆಯದನ್ನು ಮಾಡುತ್ತೇನೆ"–ಎಂದು ಹೇಳಿ ಗಂಗಾಪ್ರವಾಹದಲ್ಲಿ ಹಾಕಿಬಿಡುತ್ತಿದ್ದಳು. ಅದೇ ರೀತಿಯಲ್ಲಿ ಏಳು ಮಕ್ಕಳನ್ನೂ ಹಾಕಿಬಿಟ್ಟಳು. ಅವಳು ನದಿಯಲ್ಲಿ ಹಾಕಿದ ಮಗುವು ಪುನಃ ಮೇಲಕ್ಕೆ ಬರುತ್ತಿರಲಿಲ್ಲ. ತನ್ನ ಪ್ರೇಯಸಿಯ ಆ ಕಾರ್ಯವು ಶಾಂತನುವಿಗೆ ಪ್ರಿಯವಾಗಿರಲಿಲ್ಲ. ಆದರೂ ಅವಳು ಮಾಡುತ್ತಿದ್ದ ಕಾರ್ಯಕ್ಕೆ ಶಾಂತನುವು ಅಡ್ಡಿಯನ್ನುಂಟುಮಾಡಲಿಲ್ಲ. ಏಕೆಂದರೆ : ತನ್ನ ಅಸಮಾಧಾನವನ್ನು ಸೂಚಿಸಿದರೆ ಅವಳು ತನ್ನನ್ನು ಬಿಟ್ಟುಹೋಗಿಬಿಡುವಳೆಂಬ ಭಯವೇ ಅದಕ್ಕೆ ಕಾರಣವಾಗಿತ್ತು.

ಶಾಂತನುವಿಗೆ ಗಂಗಾದೇವಿಯಲ್ಲಿ ಎಂಟನೆಯ ಮಗುವು ಹುಟ್ಟಿತು.

ಹಿಂದಿನಂತೆಯೇ ಗಂಗಾದೇವಿಯು ನಗು-ನಗುತ್ತಲೇ ಹುಟ್ಟಿದ ಮಗುವನ್ನು ನದಿಯಲ್ಲಿ ಹಾಕಲು ಹೊರಟಳು. ಆ ಸಮಯದಲ್ಲಿ ಶಾಂತನುವಿಗೆ ಅದನ್ನು ಸಹಿಸಲಾಗಲಿಲ್ಲ. ವ್ಯಾಮೋಹವನ್ನು ತೊರೆದಾದರೂ ಮಗುವನ್ನು ಉಳಿಸಿ ಕೊಳ್ಳಬೇಕೆಂದು ಶಾಂತನುವಿನ ಮನಸ್ಸು ತವಕಿಸುತ್ತಿತ್ತು. ಮುಖವನ್ನು ಗಂಟಿಕ್ಕಿಕೊಂಡು ದುಃಖಪೀಡಿತನಾಗಿ ಪತ್ನಿಯನ್ನು ಕುರಿತು ಹೇಳಿದನು :

"ಈ ಮಗುವನ್ನೂ ಕೊಲೆಮಾಡಿಬಿಡಬೇಡ. ನೀನಾರು? ನಿನ್ನ ಕುಲ-ಗೋತ್ರಗಳೇನು? ನಿನ್ನಲ್ಲಿ ಹುಟ್ಟಿದ ಮಕ್ಕಳನ್ನೇ ಏಕೆ ಕೊಲೆ ಮಾಡುವೆ? ಪುತ್ರಘಾತಿನಿಯೇ! ಇದರಿಂದ ನಿನಗೆ ಮಹಾಪಾಪವುಂಟಾಗಿರುವುದು. ಪ್ರಪಂಚದ ದೃಷ್ಟಿಯಿಂದ ನೀನಿಂದು ಬಹುನಿಂದ್ಯಳಾಗಿರುವೆ."

ರಾಜನು ಮುಖವನ್ನು ಗಂಟಿಕ್ಕಿಕೊಂಡು ಬಹಳ ಕಠೋರವಾದ ಮಾತುಗಳನ್ನಾಡಿದರೂ ಗಂಗಾದೇವಿಯು ನಸುನಗುತ್ತಲೇ ಇದ್ದಳು. ಅವಳ ಮುಖದಲ್ಲಿ ಯಾವ ವಿಧವಾದ ವಿಕಾರವೂ ಉಂಟಾಗಲಿಲ್ಲ. ರಾಜನನ್ನು ಕುರಿತು ಸಾವಧಾನದಿಂದಲೇ ಹೇಳಿದಳು :

"ಪುತ್ರಕಾಮನೇ! ಪುತ್ರವಂತರಲ್ಲಿ ಶ್ರೇಷ್ಠನಾದವನೇ! ನಾನು ನಿನ್ನೀ ಮಗನನ್ನು ಕೊಲೆಮಾಡುವುದಿಲ್ಲ. ಆದರೆ ನಮ್ಮಿಬ್ಬರ ಸಂಬಂಧವು ಮಾತ್ರ ಇಂದಿಗೆ ಅಂತ್ಯವಾಗುತ್ತದೆ. ನನ್ನ ಮೊದಲನೆಯ ನಿಬಂಧನೆಯೇ ಇದಾಗಿದ್ದಿತು. ನನ್ನ ಕುಲ-ಗೋತ್ರಗಳನ್ನೂ ನೀನಿಂದು ಕೇಳಿದೆಯಲ್ಲವೇ? ಮಹರ್ಷಿಗಳ ಸಮೂಹದಿಂದ ಅನವರತವೂ ಸೇವಿತಳಾಗಿರುವ ಗಂಗಾ ದೇವಿಯೇ ನಾನು. ಜಹ್ನು ಎಂಬ ಮಹರ್ಷಿಯೇ ನನ್ನ ತಂದೆ. ನನ್ನನ್ನು ಜಾಹ್ನವೀ ಎಂದೂ ಕರೆಯುತ್ತಾರೆ. ದೇವಕಾರ್ಯದ ಸಿದ್ಧಿಗಾಗಿ ನಾನು ನಿನ್ನ ಪತ್ನಿಯಾಗಿ ಇಷ್ಟು ಕಾಲವಿದ್ದೆನು. ನಿನ್ನ ಸಮಾಗಮದಿಂದ ನನ್ನಲ್ಲಿ ಹುಟ್ಟಿದ ಈ ಮಕ್ಕಳು ಸಾಮಾನ್ಯರಲ್ಲ. ಮಹಾಭಾಗರಾದ, ಮಹೌಜಸ್ವಿಗಳಾದ ಅಷ್ಟವಸುಗಳೇ ನಿನ್ನ ಮಕ್ಕಳಾಗಿ ಜನ್ಮತಾಳಿದ್ದರು. ಆಪವರಿತ್ತ ಶಾಪದ ಕಾರಣದಿಂದಾಗಿ ಅವರು ಮಾನವರಾಗಿ ಜನ್ಮವನ್ನು ಪಡೆಯಲೇಬೇಕಾ ಗಿತ್ತು. ಅಂತಹ ಮಹಾಭಾಗರನ್ನು ಮಕ್ಕಳನ್ನಾಗಿ ಪಡೆಯುವ ಅರ್ಹತೆ ಯುಳ್ಳವನು ನಿನ್ನ ಹೊರತಾಗಿ ಈ ಪ್ರಪಂಚದಲ್ಲಿ ಬೇರೊಬ್ಬರಿರಲಿಲ್ಲ.

ಅವರ ತಾಯಿ ಎನಿಸಿಕೊಳ್ಳಲು ಅರ್ಹಳಾದವಳೂ ಈ ಲೋಕದಲ್ಲಿ ನನ್ನ ಹೊರತಾಗಿ ಬೇರೊಬ್ಬರಿರಲಿಲ್ಲ. ಅವರಿಗೆ ತಾಯಿಯಾಗಬೇಕಾಗಿದ್ದ ಕಾರಣ ದಿಂದಲೇ ನಾನು ಮಾನುಷಸ್ತ್ರೀಯಾಗಿ ಅವತರಿಸಿ ನಿನ್ನನ್ನು ವರಿಸಬೇಕಾಯಿತು. ನಿನಗೆ ಹುಟ್ಟಿದ ಮಕ್ಕಳು ಬದುಕಿರದಿದ್ದರೂ ಮಹಾಮಹಿಮರಾದ ವಸುಗಳಿಗೆ ತಂದೆ ಎನಿಸಿಕೊಂಡ ಮಾತ್ರದಿಂದಲೇ ನಿನಗೆ ಅನೇಕವಾದ ಅಕ್ಷಯಪುಣ್ಯಲೋಕಗಳು ಲಭಿಸಿವೆ. ಭೂಲೋಕದಲ್ಲಿ ಹೆಚ್ಚು ದಿನಗಳು ಜೀವಿಸಲಿಚ್ಛಿಸದ ವಸುಗಳು ನನ್ನನ್ನು ಹಾಗೆಯೇ ಪ್ರಾರ್ಥಿಸಿದ್ದರು. ಶಾಪದ ಕಾರಣದಿಂದ ಮಾನವರಾಗಿ ಹುಟ್ಟಿದ ಅವರನ್ನು ಮರುಕ್ಷಣದಲ್ಲಿಯೇ ಗಂಗೆ ಯೊಳಕ್ಕೆ ಹಾಕಿ ಮಾನವಜನ್ಮದಿಂದ ವಿಮೋಚಿಸಬೇಕೆಂಬುದು ನಮ್ಮಗ್ರಳ ಒಪ್ಪಂದವಾಗಿದ್ದಿತು. ಈ ಕಾರಣದಿಂದಲೇ ನಾನು ಅವರೆಲ್ಲರನ್ನೂ ನೀರಿನಲ್ಲಿ ಹಾಕಿ, ಋಷಿಯ ಶಾಪದಿಂದಲೂ ಮತ್ತು ಮನುಷ್ಯತ್ವದಿಂದಲೂ ವಿಮೋಚಿ ಸಿದೆನು. ನಿನಗೆ ಮಂಗಳವಾಗಲಿ, ಮಹಾರಾಜ! ನಾನಿನ್ನು ಹೋಗಿಬರುತ್ತೇನೆ. ಮಹಾವ್ರತನಾದ ಈ ಪುತ್ರನನ್ನು ಸಂರಕ್ಷಿಸು. ನಮ್ಮಿಬ್ಬರ ಸಮಾಗಮವು ವ್ಯರ್ಥವಾಗಬಾರದೆಂದೂ, ದೀರ್ಘಾಯುಷ್ಮಂತನಾದ ಒಬ್ಬ ಪುತ್ರನು ಹುಟ್ಟಬೇಕೆಂದೂ ನಾನು ವಸುಗಳೊಡನೆ ಹೇಳಿದ್ದುದರ ಫಲವಾಗಿ ವಸುಗಳ ಅಂಶಗಳಿಂದ ಈ ಮಗನು ನಿನಗೆ ಹುಟ್ಟಿರುವನು.

**ಮತ್ಪ್ರಸೂತಿಂ ವಿಜಾನೀಹಿ ಗಂಗಾದತ್ತಮಿಮಂ ಸುತಮ್ ॥೨೪॥**

ನನ್ನಿಂದ ಹುಟ್ಟಿದ ಈ ಮಗನನ್ನು ಗಂಗಾದತ್ತನೆಂದು ತಿಳಿಯುವವ ನಾಗು."

೯೮ನೆಯ ಅಧ್ಯಾಯವು ಮುಗಿಯಿತು.

## ವಸಿಷ್ಠರಿಂದ ವಸುಗಳಿಗೆ ಬಂದ ಶಾಪ

"ಜನಮೇಜಯ! ಗಂಗಾದೇವಿಯು ತನ್ನನ್ನು ಬಿಟ್ಟು ಹೊರಟು ಹೋಗುವಳೆಂಬುದು ಶಾಂತನುವಿಗೆ ಸ್ಪಷ್ಟವಾಯಿತು. ದೇವರಹಸ್ಯಗಳನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕೆನ್ನುವ ಆಶಯದಿಂದ ಗಂಗಾದೇವಿಯನ್ನು ಪ್ರಶ್ನಿಸಿದನು :

**ಆಪವೋ ನಾಮ ಕೋ ನ್ವೇಷ ವಸೂನಾಂ ಕಿಂ ಚ ದುಷ್ಕೃತಮ್ ।**
**ಯಸ್ಯಾಭಿಶಾಪಾತ್ತೇ ಸರ್ವೇ ಮಾನುಷೀಂ ಯೋನಿಮಾಗತಾಃ ॥೧॥**

"ಜಾಹ್ನವಿ! ನೀನು ಈ ಮಧ್ಯದಲ್ಲಿ ಆಪವರೆಂದೆಯಲ್ಲಾ? ಅವ ರಾರು? ಅವರಿಗೆ ಆ ಹೆಸರು ಬರಲು ಕಾರಣವೇನು? ವಸುಗಳು ಆಪವರಿಗೆ ಮಾಡಿದ ಅಪರಾಧವಾದರೂ ಏನು? ಆಪವರ ಶಾಪದಿಂದಾಗಿ ವಸುಗಳು ಮನುಷ್ಯಜನ್ಮವನ್ನೇಕೆ ಪಡೆದರು? ಎರಡನೆಯದಾಗಿ ಸಪ್ತವಸುಗಳೂ ಹುಟ್ಟಿದೊಡನೆಯೇ ಶಾಪದಿಂದಲೂ, ಮಾನವಜನ್ಮದಿಂದಲೂ ಮೋಕ್ಷ ಹೊಂದಿದರೆಂದು ಹೇಳಿದೆ. ಈ ಒಬ್ಬ ಮಗನೇಕೆ ಚಿರಕಾಲದವರೆಗೂ ಭೂಮಿಯಲ್ಲಿ ಜೀವಿಸಿರುವನು? ನಮ್ಮಿಬ್ಬರ ಸಮಾಗಮವು ವ್ಯರ್ಥವಾಗ ಕೂಡದೆಂಬ ಒಂದೇ ಕಾರಣದಿಂದ ಇವನು ಚಿರಕಾಲ ಜೀವಿಸಿರುವನೇ? ಮತ್ತೇನಾದರೂ ಕಾರಣವಿರುವುದೇ? ಇವನೇನಾದರೂ ಋಷಿಯ ವಿಷಯ ದಲ್ಲಿ ಹೆಚ್ಚಿನ ಅಪರಾಧವನ್ನು ಮಾಡಿರುವನೇ? ವಸುಗಳೆಂದರೆ ಸಾಮಾನ್ಯ ರಲ್ಲ. ಸರ್ವಲೋಕಗಳಿಗೂ ಅವರು ಅಧೀಶ್ವರರಾಗಿರುತ್ತಾರೆ. ಅಂತಹವರು ಮನುಷ್ಯರಾಗಿ ಹುಟ್ಟಲು ಕಾರಣವೇನು? ಈ ಎಲ್ಲ ವಿಷಯಗಳನ್ನೂ ಸವಿಸ್ತರವಾಗಿ ನನ್ನೊಡನೆ ಹೇಳು, ದೇವಿ!"

ಜನಮೇಜಯ! ಹೀಗೆಂದು ಪ್ರಶ್ನಿಸಿದ, ಪತಿಯಾದ ಶಾಂತನುಮಹಾ ರಾಜನಿಗೆ ಗಂಗಾದೇವಿಯು ಎಲ್ಲ ವಿಷಯಗಳನ್ನೂ ಯಥಾನುಕ್ರಮವಾಗಿ ಹೇಳತೊಡಗಿದಳು :

**ಯಂ ಲೇಭೇ ವರುಣಃ ಪುತ್ರಂ ಪುರಾ ಭರತಸತ್ತಮ ।**
**ವಸಿಷ್ಠನಾಮಾ ಸ ಮುನಿಃ ಖ್ಯಾತ ಆಪವ ಇತ್ಯುತ ॥೫॥**

"ಭರತಸತ್ತಮ! ಹಿಂದೆ ವರುಣನು ಯಾವ ಪುತ್ರನನ್ನು ಪಡೆದಿದ್ದನೋ–ಆ ಮುನಿಯೇ ವಸಿಷ್ಠನೆಂಬ ಹೆಸರಿನಿಂದಲೂ ವರುಣನ ಮಗನಾಗಿದ್ದುದರಿಂದ ಆಪವ–ಎಂಬ ಹೆಸರಿನಿಂದಲೂ ಖ್ಯಾತನಾಗಿದ್ದನು. ಆ ಮಹರ್ಷಿಯ ಆಶ್ರಮವು ಮೇರುಪರ್ವತದ ಪಾರ್ಶ್ವದಲ್ಲಿದ್ದಿತು. ಆ ಪುಣ್ಯಾಶ್ರಮವು ಮೃಗ-ಪಕ್ಷಿಗಳಿಂದ ಕೂಡಿದ್ದಿತು. ಆಶ್ರಮದ ಸುತ್ತಲೂ ಇದ್ದ ಮರ-ಗಿಡ-ಬಳ್ಳಿಗಳು ಎಲ್ಲ ಋತುಗಳಲ್ಲಿಯೂ ಕುಸುಮಿತವಾಗಿರುತ್ತಿದ್ದುವು.

ದಕ್ಷಬ್ರಹ್ಮನಿಗೆ ಸುರಭೀ ಎಂಬ ಮಗಳೊಬ್ಬಳಿದ್ದಳು. ಅವಳನ್ನೂ ಕಶ್ಯಪನೇ ಮದುವೆಯಾಗಿದ್ದನು. ಕಶ್ಯಪನಿಗೆ ಸುರಭಿಯಲ್ಲಿ ಸರ್ವಾಂಗ ಸುಂದರವಾದ ಗೋವು ಹುಟ್ಟಿತು. ಅದರ ಹೆಸರು ನಂದಿನೀ. ಸರ್ವಕಾಮ ಪ್ರದರಲ್ಲಿ ಶ್ರೇಷ್ಠಳಾದ, ಪ್ರಪಂಚಕ್ಕೆ ಅನುಗ್ರಹಮಾಡಲೆಂದೇ ಹುಟ್ಟಿದ್ದ ಆ ನಂದಿನಿಯನ್ನು ಧರ್ಮಾತ್ಮರಾದ, ವರುಣಪುತ್ರರಾದ ವಸಿಷ್ಠರು ಹೋಮ ಧೇನುವನ್ನಾಗಿ ಪರಿಗ್ರಹಿಸಿದರು. ಶಾಂತಮನಸ್ಕರಾದ ಋಷಿ-ಮಹರ್ಷಿಗಳಿಂದ ಸಂಸೇವಿತರಾಗಿದ್ದ ವಸಿಷ್ಠರ ಆಶ್ರಮದಲ್ಲಿ ವಾಸಮಾಡುತ್ತಿದ್ದ ನಂದಿನಿಯು ಆಶ್ರಮದ ಸುತ್ತಲೂ ಇದ್ದ ಪುಣ್ಯತಮವಾದ ಮತ್ತು ರಮ್ಯವಾದ ಅರಣ್ಯದಲ್ಲಿ ಯಾರ ಭಯವೂ ಇಲ್ಲದೇ ಯಥೇಚ್ಛವಾಗಿ ಸಂಚಾರಮಾಡುತ್ತಿದ್ದಳು. ಮಹಾರಾಜ! ಒಂದು ದಿನ ದೇವರ್ಷಿಸೇವಿತವಾದ ಆ ಅರಣ್ಯಕ್ಕೆ ಪೃಥುವೇ ಮೊದಲಾದ ವಸುಗಳೂ ಮತ್ತು ದೇವತೆಗಳೂ ವಿಹಾರಾರ್ಥವಾಗಿ ಆಗಮಿಸಿದರು. ವಸುಗಳೆಲ್ಲರೂ ತಮ್ಮ-ತಮ್ಮ ಪತ್ನಿಯರೊಡನೆ ಬಂದಿದ್ದರು. ಅವರು ಅಲ್ಲಿರುವ ಮನೋಹರವಾದ ವನ-ಪರ್ವತಗಳಲ್ಲಿ ವಿಹರಿಸುತ್ತಿದ್ದರು. ಆ ವಸುಗಳಲ್ಲಿ ಒಬ್ಬ ವಸುವಿನ ಪತ್ನಿಯು ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ಸಕಲವಿಧವಾದ ಕಾಮನೆಗಳನ್ನೂ ಕೊಡುವುದರಲ್ಲಿ ಉತ್ತಮಳೆನಿಸಿದ್ದ ನಂದಿನೀ ಎಂಬ ಆ ಕಾಮಧೇನುವನ್ನು ನೋಡಿದಳು. ನಂದಿನಿಯ ಶೀಲ ಮತ್ತು ಅವಳಲ್ಲಿದ್ದ ಅತ್ಯಮೋಘವಾದ ಸಂಪತ್ತಿಯನ್ನು ಕಂಡು ಆಶ್ಚರ್ಯಚಕಿತಳಾದ ಆ ವಸುಪತ್ನಿಯು ತನ್ನ ಗಂಡನಾದ ದ್ಯುವನ್ನು ಹತ್ತಿರಕ್ಕೆ ಕರೆದು ಹಸುವನ್ನು ತೋರಿಸಿ ಹೇಳಿದಳು :

"ಈ ನಂದಿನಿಯು ಅದೆಷ್ಟು ಹೃಷ್ಟ-ಪುಷ್ಟಳಾಗಿರುವಳು! ಇವಳ ಕೆಚ್ಚಲುಗಳನ್ನು ನೋಡಿದರೆ ಬಹಳವಾಗಿ ಹಾಲುಕೊಡುವವಳೆಂದು ಕಾಣುತ್ತದೆ. ಇವಳ ಬಾಲವೂ ಬಹಳ ಚೆಲುವಾಗಿದೆ. ಶುಭಲಕ್ಷಣಗಳುಳ್ಳ ಗೊರಸುಗಳೂ ಇವೆ. ಇವಳು ಸರ್ವಶುಭಲಕ್ಷಣಗಳಿಂದ ಕೂಡಿರುವುದು ಮಾತ್ರವಲ್ಲದೇ– ಒಳ್ಳೆಯ ಶೀಲವತಿಯೂ ಆಗಿರುತ್ತಾಳೆ. ನಾನು ಇಂತಹ ಕಾಮಧೇನುವನ್ನೇ ಇದುವರೆಗೂ ಕಂಡಿರಲಿಲ್ಲ."

ಜನಮೇಜಯ! ದ್ಯುವು ನಂದಿನಿಯನ್ನು ನೋಡಿ ಅವಳ ರೂಪ-ಗುಣಗಳನ್ನು ವರ್ಣನೆಮಾಡುತ್ತಾ ಪತ್ನಿಗೆ ಹೇಳಿದನು :

"ವರಾರೋಹೇ! ಈ ಉತ್ತಮೋತ್ತಮಳಾದ ನಂದಿನಿಯು ವಾರುಣಿಗೆ (ವರುಣಪುತ್ರರಾದ ವಸಿಷ್ಠರಿಗೆ) ಸೇರಿದವಳಾಗಿದ್ದಾಳೆ. ನಾವು ಸಂಚರಿಸುತ್ತಿರುವ ಈ ಅರಣ್ಯವು ಅವರಿಗೇ ಸೇರಿದುದಾಗಿರುತ್ತದೆ. ಕಲ್ಯಾಣಿ! ಈ ನಂದಿನಿಯಲ್ಲಿ ಮತ್ತೊಂದು ಮಹತ್ತ್ವವೂ ಇರುವುದು.

**ಅಸ್ಯಾಃ ಕ್ಷೀರಂ ಪಿಬೇನ್ಮರ್ತ್ಯಃ ಸ್ವಾದು ಯೋ ವೈ ಸುಮಧ್ಯಮೇ ।**
**ದಶವರ್ಷಸಹಸ್ರಾಣಿ ಸ ಜೀವೇತ್ ಸ್ಥಿರಯೌವನಃ ॥೧೯॥**

ಬಹಳ ರುಚಿಯಾದ ಇವಳ ಹಾಲನ್ನು ಯಾವ ಮನುಷ್ಯನು ಪಾನ ಮಾಡುವನೋ-ಅವನು ಹತ್ತು ಸಾವಿರ ವರ್ಷಗಳ ಕಾಲ ಯುವಕನಾಗಿಯೇ ಜೀವಿಸಿರುವನು."

ಪತಿಯು ಹೀಗೆ ಹೇಳಿದೊಡನೆಯೇ ವಸುಪತ್ನಿಗೆ ಭೂಲೋಕದಲ್ಲಿದ್ದ ತನ್ನ ಗೆಳತಿಯೊಬ್ಬಳ ಸ್ಮರಣೆಯಾಯಿತು. ಒಡನೆಯೇ ಸುಮಧ್ಯಮೆಯಾದ, ಅನಿಂದ್ಯವಾದ ಶರೀರದಿಂದ ಕೂಡಿದ್ದ ವಸುಪತ್ನಿಯು ದೀಪ್ತತೇಜಸ್ಕನಾದ ದ್ಯುವನ್ನು ಕುರಿತು ಹೇಳಿದಳು :

"ಪತಿದೇವ! ಮನುಷ್ಯಲೋಕದಲ್ಲಿ ನನ್ನ ಗೆಳತಿಯೊಬ್ಬಳಿದ್ದಾಳೆ. ಅವಳು ಸತ್ಯಸಂಧನಾದ ಉಶೀನರರಾಜನ ಮಗಳು. ಜಿತವತೀ ಎಂದು ಅವಳ ಹೆಸರು. ಈಗೇನೋ ಅವಳು ರೂಪ-ಯೌವನಗಳಿಂದ ಕಂಗೊಳಿಸುತ್ತಿದ್ದಾಳೆ. ಮುಂದವಳು ಮಾನವಧರ್ಮದಂತೆ ಬಹಳಬೇಗ ವೃದ್ಧೆಯಾಗಿಬಿಡಬಹುದು. ಅವಳು ವೃದ್ಧೆಯಾಗಕೂಡದೆಂಬುದು ನನ್ನ ಅಭಿಮತವಾಗಿದೆ. ಅವಳು

ಯಾವಾಗಲೂ ಯುವತಿಯಾಗಿಯೇ ಇರಬೇಕು. ಅವಳು ನನ್ನ ಬಹುಪ್ರಿಯ ಳಾದ ಗೆಳತಿಯಾದುದರಿಂದ ನಾನವಳಿಗೆ ಈ ಉಪಕಾರವನ್ನು ಮಾಡಲೇ ಬೇಕು. ಮೇಲಾಗಿ ಅವಳು ಸಾಮಾನ್ಯನೊಬ್ಬನ ಮಗಳಲ್ಲ. ಸತ್ಯಸಂಧನಾದ, ರಾಜರ್ಷಿಯಾದ, ಧೀಮಂತನಾದ ಉಶೀನರನ ಮಗಳು.

ಮಹಾಭಾಗ! ಅವಳಿಗಾಗಿ ನೀನು ಕರುವಿನೊಡನೆ ಕೂಡಿರುವ ಈ ಹಸುವನ್ನು ಇಲ್ಲಿಂದ ಹೊಡೆದುಕೊಂಡು ಬರಬೇಕು. ಬಹುಶೀಘ್ರವಾಗಿ ನಾವಲ್ಲಿಗೆ ಹೋಗಬೇಕು. ಅವಳು ಇದರ ಹಾಲನ್ನು ಕುಡಿದು, 'ಮನುಷ್ಯ ಲೋಕದಲ್ಲಿ ಜಿತವತಿಯೊಬ್ಬಳೇ ಜರಾ-ರೋಗವರ್ಜಿತಳಾದವಳು'–ಎಂಬ ಖ್ಯಾತಿಯನ್ನೂ ಹೊಂದಬೇಕು. ನನಗೆ ಪ್ರಿಯವಾದ ಕಾರ್ಯವನ್ನು ಪೂರೈಸಿ ಕೊಡಲು ನೀನು ಸಮರ್ಥನಾಗಿರುವೆ. ಕಳಂಕರಹಿತನೇ! ಈ ಕಾರ್ಯ ಕ್ಕಿಂತಲೂ ಪ್ರಿಯಕರವಾದುದು ನನಗೆ ಬೇರೊಂದಿಲ್ಲ."

ಗಂಗೆಯು ಮುಂದುವರಿದು ಹೇಳಿದಳು : "ದೈನ್ಯದಿಂದ ಕೂಡಿದ ಪತ್ನಿಯ ಮುದ್ದುಮಾತುಗಳನ್ನು ಕೇಳಿದೊಡನೆಯೇ ದ್ಯುವಿಗೆ ಕಾರ್ಯಾ ಕಾರ್ಯವಿವೇಚನೆಯು ತಪ್ಪಿತು. ನಂದಿನಿಯು ಯಾರ ಅಧೀನದಲ್ಲಿದ್ದಾ ಳೆಂಬುದನ್ನೂ ಮರೆತನು. ಮಹರ್ಷಿಗಳು ತೀಕ್ಷ್ಣತಪಸ್ವಿಗಳೆಂದಾಗಲೀ, ಅವರು ಕುಪಿತರಾದರೆ ತನಗೆ ಶಾಪವು ತಪ್ಪಲಾರದೆಂದಾಗಲೀ ಅವನು ಯೋಚಿಸಹೋಗಲಿಲ್ಲ. ತಾನು ಹಸುವನ್ನು ಕದ್ದರೆ ಮಹರ್ಷಿಯ ಶಾಪಕ್ಕೆ ಗುರಿಯಾಗಿ ಸ್ವರ್ಗದಿಂದ ಚ್ಯುತನಾಗಬಹುದೆಂಬುದನ್ನೂ ಅವನು ತರ್ಕಿಸಲಿಲ್ಲ. ಪತ್ನಿಯ ಇಚ್ಛೆಯನ್ನು ಪೂರೈಸುವುದೊಂದೇ ಅವನ ಧ್ಯೇಯವಾಯಿತು. ದ್ಯುವು ಪೃಥುವೇ ಮೊದಲಾದ ಸಹೋದರರಿಂದೊಡಗೂಡಿ ನಂದಿನಿಯನ್ನು ಅಪಹರಿಸಿಯೇ ಬಿಟ್ಟನು.

ಸಾಯಂಕಾಲವಾಯಿತು. ವಸಿಷ್ಠರು ಹಣ್ಣು-ಹಂಪಲುಗಳನ್ನು ಹೊತ್ತು ಆಶ್ರಮವನ್ನು ಪ್ರವೇಶಿಸಿದರು. ಆದರೆ ಎಂದಿನಂತೆ ನಂದಿನಿಯು ಕರುವಿನೊಡನೆ ಬಾಲವೆತ್ತಿ ವಸಿಷ್ಠರ ಬಳಿ ಓಡಿಬರಲಿಲ್ಲ. ವಸಿಷ್ಠರಿಗೆ ಮಗಳನ್ನು ಕಾಣದೆ ವ್ಯಥೆಯಾಯಿತು. ಆಶ್ರಮದ ಸುತ್ತಲೂ ನೋಡಿದರು.

ಅದು ಎಲ್ಲೂ ಕಾಣಲಿಲ್ಲ. ಶಿಷ್ಯರೊಡನೆ ಕಾಡು-ಮೇಡುಗಳಲ್ಲಿ ಬಹಳ ದೂರ ಅಲೆದಾಡಿ ನೋಡಿದರು. ನಂದಿನಿಯ ಸುಳಿವಿಲ್ಲ. ಹತಾಶರಾಗಿ ಆಶ್ರಮಕ್ಕೆ ಬಂದರು. ಕೈ-ಕಾಲುಗಳನ್ನು ತೊಳೆದು ಆಚಮನಮಾಡಿ ಪದ್ಮಾಸನದಲ್ಲಿ ಕುಳಿತು ಪ್ರಣವಪೂರ್ವಕವಾಗಿ ಮನಸ್ಸನ್ನು ಅಂತರ್ಗುಹೆಯಲ್ಲಿ ಸೇರಿಸಿದರು. ಅಲ್ಲಿಯ ದಿವ್ಯಜ್ಯೋತಿಯಿಂದ ನಂದಿನಿಯಿರುವ ಪ್ರದೇಶವು ತಿಳಿಯಿತು. ವಸುಗಳು ಅಪಹರಿಸಿರುವರೆಂಬ ಅರಿವಾಯಿತು. ಒಡನೆಯೇ ಬಹಿರ್ಮುಖರಾದರು. ಕೋಪವು ಉಕ್ಕೇರಿ ಬಂದಿತು. "ನನ್ನ ಹೋಮಕ್ಕೆ ಸಹಕಾರಿಯಾಗಿದ್ದ, ಅಮೃತವರ್ಷಿಣಿಯಾಗಿದ್ದ, ಸುಂದರವಾದ ಬಾಲದಿಂದ ಕೂಡಿ ರುವ ನಂದಿನಿಯನ್ನು ಅಪಹರಿಸಿರುವ ವಸುಗಳೆಲ್ಲರೂ ಭೂಮಿಯಲ್ಲಿ ಜನ್ಮತಾಳುವರು. ಇದರಲ್ಲಾವ ಸಂಶಯವೂ ಇಲ್ಲ."

ಭರತರ್ಷಭನೇ! ಆಪವಮಹರ್ಷಿಗಳು ಕ್ರೋಧವಶರಾಗಿ ವಸುಗಳಿಗೆ ಹೀಗೆ ಶಾಪವನ್ನಿತ್ತರು. ಶಾಪಕೊಟ್ಟನಂತರ ಬ್ರಹ್ಮರ್ಷಿಗಳು ಪುನಃ ತಪಸ್ಸಿನಲ್ಲಿಯೇ ನಿರತರಾದರು. ಮಹತ್ತರವಾದ ತಪಃಪ್ರಭಾವವುಳ್ಳ ಬ್ರಹ್ಮರ್ಷಿಗಳಾದ ವಸಿಷ್ಠರು ತಮ್ಮನ್ನು ಮನುಷ್ಯಲೋಕದಲ್ಲಿ ಹುಟ್ಟುವಂತೆ ಶಪಿಸಿದ್ದಾರೆಂಬ ವಾರ್ತೆಯನ್ನು ತಿಳಿದೊಡನೆಯೇ ಭ್ರಾಂತರಾದ ವಸುಗಳೆಲ್ಲರೂ ಆಪವರ ಆಶ್ರಮಕ್ಕೆ ಧಾವಿಸಿ ಬಂದರು. ತಮ್ಮನ್ನು ಶಾಪದಿಂದ ವಿಮುಕ್ತರನ್ನಾಗಿ ಮಾಡುವಂತೆ ಅಂಗಲಾಚಿ ಬೇಡಿದರು.

ಮಹರ್ಷಿಗಳ ಬಾಯಿಂದ ಹೊರಡುವ ಶಾಪಾನುಗ್ರಹಗಳು ಯಾವ ರೀತಿಯಿಂದಲೂ ಸುಳ್ಳಾಗಲಾರವು. ಸರ್ವಧರ್ಮವಿಶಾರದರಾದ, ಋಷಿಸತ್ತಮರಾದ ಆಪವರಿಂದ ಶಾಪದ ವಿಮುಕ್ತಿಯ ವಿಷಯವಾಗಿ ಯಾವ ವಿಧವಾದ ಆಶ್ವಾಸನೆಯೂ ಸಿಕ್ಕಲಿಲ್ಲ. ಶಾಂತರಾಗಿದ್ದ ವಸಿಷ್ಠರು ವಸುಗಳನ್ನು ಕುರಿತು ಸಾವಧಾನವಾಗಿಯೇ ಹೇಳಿದರು :

"ವಸುಗಳಿರಾ! ನಾನಿತ್ತಿರುವ ಶಾಪವನ್ನು ನೀವು ಅನುಭವಿಸಿಯೇ ತೀರಬೇಕು. ಆದರೆ ಮಾನುಷಗರ್ಭದಲ್ಲಿ ಸೇರಿ ಒಂದು ವರ್ಷದೊಳಗಾಗಿ ನನ್ನ ಶಾಪದಿಂದ ವಿಮೋಚನೆಯನ್ನು ಹೊಂದುವಿರಿ. ನೀವು ಯಾವನ ಅಪರಾಧದ ಕಾರಣಕ್ಕಾಗಿ ನನ್ನಿಂದ ಶಪಿಸಲ್ಪಟ್ಟಿರುವಿರೋ–ಅವನು ಮಾತ್ರ

ಭೂಮಿಯಲ್ಲಿ ಬಹಳ ಕಾಲ ಜೀವಿಸಿರಬೇಕಾಗುವುದು. ಅವನು ಮಾಡಿರುವ ಅಕಾರ್ಯದಿಂದ ನಾನು ಕುಪಿತನಾಗಿ ಯಾವ ಮಾತನ್ನು ಹೇಳಿದೆನೋ ಅದನ್ನು ಸುಳ್ಳುಮಾಡುವ ಇಚ್ಛೆಯು ನನಗಿರುವುದಿಲ್ಲ. ದ್ಯುವು ಪ್ರಪಂಚದಲ್ಲಿ ಬಹಳ ವರ್ಷಗಳ ಕಾಲ ಜೀವಿಸಿದ್ದರೂ ಅಪುತ್ರವಂತನಾಗಿಯೇ ಇರುವನು. ಧಾರ್ಮಿಕನಾಗಿ, ಸರ್ವಶಾಸ್ತ್ರಪಾರಂಗತನಾಗಿ, ಪಿತೃವಾಕ್ಯಪರಿಪಾಲಕನಾಗಿ ಸ್ತ್ರೀಸುಖವನ್ನು ತ್ಯಜಿಸುವನು"–ಎಂದು ಹೇಳಿ ವಸಿಷ್ಠರು ಆಶ್ರಮದಿಂದ ಹೊರಟುಹೋದರು.

ಚಿತ್ತೈಕಾಗ್ರತೆಯಿಂದ ಕಥೆಯನ್ನು ಕೇಳುತ್ತಿದ್ದ ರಾಜನನ್ನು ಕುರಿತು ಗಂಗೆಯು ಪುನಃ ಹೇಳಿದಳು : "ಅನಂತರ ವಸುಗಳೆಲ್ಲರೂ ನನ್ನ ಬಳಿಗೆ ಬಂದು ಭೂಲೋಕದಲ್ಲಿ ತಮ್ಮ ಜನನಿಯಾಗಬೇಕೆಂದೂ ಮತ್ತು ತಾವು ಹುಟ್ಟಿದ ಕೂಡಲೇ ತಮ್ಮನ್ನು ನೀರಿನಲ್ಲಿ ಹಾಕಿ ಮಾನವಶರೀರದಿಂದ ವಿಮೋಚನೆಮಾಡಬೇಕೆಂದೂ ಕೇಳಿಕೊಂಡರು. ಅವರ ಪ್ರಾರ್ಥನೆಯಂತೆ ಮನುಷ್ಯಲೋಕದಿಂದ ಅವರನ್ನು ವಿಮುಕ್ತರನ್ನಾಗಿ ಮಾಡಲು ಹುಟ್ಟಿದೊಡನೆಯೇ ಅವರನ್ನು ನದಿಗೆ ಹಾಕಿಬಿಡುತ್ತಿದ್ದೆನು. ಮಹಾರಾಜ! ಈಗ ನೀನು ಅಪೇಕ್ಷಿಸಿರುವ ಶಿಶುವು ದ್ಯುವಿನ ಅಂಶಜನಾಗಿರುವನು. ವಸಿಷ್ಠರ ಶಾಪದಂತೆ ಇವನು ಇನ್ನೂ ಚಿರಕಾಲ ಪೃಥ್ವಿಯಲ್ಲಿಯೇ ಜೀವಿಸಿರುವನು. ನಾನಿನ್ನು ಹೋಗಿಬರಲೇ?"

ಗಂಗಾದೇವಿಯು ಮೇಲೆದ್ದಳು. ಶಾಂತನುವು ಕಣ್ಣುಮುಚ್ಚಿ ತೆಗೆಯುವುದರೊಳಗಾಗಿ ಗಂಗೆಯು ಮಗುವಿನೊಡನೆ ಅದೃಶ್ಯಳಾಗಿದ್ದಳು. ಆ ಗಂಗಾಪುತ್ರನೇ ದೇವವ್ರತನೆಂದು ಪ್ರಸಿದ್ಧನಾದನು. ತನ್ನ ತಂದೆಯಾದ ಶಾಂತನುವಿಗಿಂತಲೂ ಅಧಿಕಗುಣವಂತನಾದನು.

ಶಾಂತನುವಿಗೆ ಇವೆಲ್ಲವೂ ಒಂದು ಸ್ವಪ್ನಪ್ರಾಯವಾಗಿತ್ತು. ಹೃದಯವೂ ಬಹಳ ಭಾರವಾಗಿತ್ತು. ಮೆಲ್ಲ-ಮೆಲ್ಲನೆ ಅಡಿಯಿಡುತ್ತಾ ರಾಜಧಾನಿಯನ್ನು ಸೇರಿದನು. ಜನಮೇಜಯ! ಶಾಂತನುವಿನ ಉತ್ತಮವಾದ ಕಲ್ಯಾಣ ಗುಣಗಳನ್ನು ನಾನು ಮುಂದೆ ನಿನಗೆ ಹೇಳುತ್ತೇನೆ. ಭರತವಂಶಪ್ರದೀಪನಾದ

ಶಾಂತನುವಿನ ಸೌಭಾಗ್ಯದ ವರ್ಣನೆಯನ್ನೂ ಮಾಡುತ್ತೇನೆ. ಅವನ ಮತ್ತು ಅವನ ಮೊಮ್ಮಕ್ಕಳ ಇತಿಹಾಸವೇ ಮಹಾಭಾರತವೆಂದು ಪ್ರಖ್ಯಾತವಾಗಿದೆ."

೯೯ನೆಯ ಅಧ್ಯಾಯವು ಮುಗಿಯಿತು.

೧೦೦ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಶಾಂತನುವಿನ ಗುಣವರ್ಣನೆ: ದೇವವ್ರತನ ಭೀಷ್ಮಪ್ರತಿಜ್ಞೆ

"ಜನಮೇಜಯ! ದೇವತೆಗಳಿಂದಲೂ, ರಾಜರ್ಷಿಗಳಿಂದಲೂ, ಸತ್ಕೃತನಾದ, ಧೀಮಂತನಾದ, ರಾಜನಾದ ಶಾಂತನುವು ಧರ್ಮಾತ್ಮನೆಂದೂ, ಸತ್ಯಸಂಧನೆಂದೂ ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗಿದ್ದನು. ದಮ, ದಾನ, ಕ್ಷಮೆ, ಬುದ್ಧಿ, ಲಜ್ಜೆ, ಧೈರ್ಯ, ಉತ್ತಮವಾದ ತೇಜಸ್ಸು–ಇವುಗಳು ಮಹಾಸತ್ತ್ವನಾದ, ಪುರುಷರ್ಷಭನಾದ ಶಾಂತನುವಿನಲ್ಲಿ ಮೂರ್ತಿಮತ್ತಾಗಿ ನೆಲೆಸಿದ್ದುವು. ಸಕಲಗುಣಪರಿಪೂರ್ಣನಾಗಿದ್ದ ಶಾಂತನುವು ಧರ್ಮಾರ್ಥ ಕುಶಲನಾಗಿಯೂ ಇದ್ದು ಭರತವಂಶದ ರಕ್ಷಕನಾಗಿಯೂ– ಸರ್ವಜನರಕ್ಷಕ ನಾಗಿಯೂ ಇದ್ದನು.

ಅವನ ಕುತ್ತಿಗೆಯು ಶಂಖಕ್ಕೆ ಸಮಾನವಾಗಿದ್ದಿತು. ವಕ್ಷಃಸ್ಥಳವು ವಿಶಾಲವಾಗಿದ್ದಿತು. ಹೆಗಲು ಉನ್ನತವಾಗಿದ್ದಿತು. ಮದಿಸಿದ ಆನೆಯಂತೆಯೇ ಅವನು ಮಹಾಪರಾಕ್ರಮಿಯಾಗಿದ್ದನು. ಹೆಚ್ಚೇನು ಹೇಳಲಿ, ಜನಮೇಜಯ! ಸಕಲರಾಜಲಕ್ಷಣಗಳೂ ಸಂಪೂರ್ಣವಾದ ಕಳೆಗಳಿಂದ ಕೂಡಿದುವುಗಳಾಗಿ ಆ ರಾಜನಲ್ಲಿಯೇ ನಿವಾಸಮಾಡಿಕೊಂಡಿದ್ದುವು. ಕೀರ್ತಿಮಂತನಾದ ಶಾಂತನುವಿನ ಸದಾಚಾರ-ಸದ್ಗುಣಗಳನ್ನೂ ಮತ್ತು ಅವನ ಪ್ರಭಾವವನ್ನೂ ಕಂಡ ಪ್ರಜೆಗಳು :

**ಧರ್ಮ ಏವ ಪರಃ ಕಾಮಾದರ್ಥಾಚ್ಚೇತಿ ವ್ಯವಸ್ಥಿತಾಃ ॥೫॥**

ಕಾಮ ಮತ್ತು ಅರ್ಥಗಳಿಗಿಂತಲೂ ಧರ್ಮವೇ ಶ್ರೇಷ್ಠವೆಂಬ ನಿಶ್ಚಯಕ್ಕೆ ಬಂದರು. ಮಹಾಸತ್ತ್ವನಾದ ಶಾಂತನುವಿನಲ್ಲಿ ಎಲ್ಲ ಸದ್ಗುಣಗಳೂ ಇದ್ದುವು. ಧರ್ಮಮೂಲವಾಗಿ ರಾಜ್ಯಭಾರಮಾಡುವವರಲ್ಲಿ ಅವನಿಗೆ ಸಮಾನನಾದ ರಾಜನು ಪೃಥ್ವಿಯಲ್ಲಿಯೇ ಆ ಸಮಯದಲ್ಲಿ ಬೇರೊಬ್ಬನಿರಲಿಲ್ಲ. ಧರ್ಮದಲ್ಲಿಯೇ ಯಾವಾಗಲೂ ನಿರತನಾಗಿರುತ್ತಿದ್ದನು. ಧರ್ಮಾತ್ಮರಲ್ಲಿ

ಶ್ರೇಷ್ಠನೆನಿಸಿದ್ದ, ಮಹೀಪಾಲನಾದ ಶಾಂತನುವನ್ನು ಪೃಥ್ವಿಯ ಎಲ್ಲ ರಾಜರೂ ಸೇರಿ ಚಕ್ರವರ್ತಿಯ ಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಚಿಸಿದರು. ಧರ್ಮಾತ್ಮನಾದ ಅವನಿಗೆ ರಾಜ್ಯಗಳೆಲ್ಲವನ್ನೂ ಗೆದ್ದು ಚಕ್ರವರ್ತಿಯಾಗ ಬೇಕಾದ ಶ್ರಮವೂ ಇಲ್ಲವಾಯಿತು. ಕೇವಲ ಧರ್ಮದ ಬಲದಿಂದಲೇ ಅವನು ಸಮಸ್ತರಾಜರ ಮನಸ್ಸನ್ನೂ ಗೆದ್ದನು. ಎಲ್ಲ ರಾಜರೂ ಅವನಿಗೆ ಬಹಳ ಸಂತೋಷದಿಂದಲೇ ಆಶ್ರಿತರಾಗಲು ಒಪ್ಪಿದರು. ಅವನನ್ನು ಚಕ್ರವರ್ತಿಯನ್ನಾಗಿ ಪಡೆದುದಕ್ಕೆ ಅವನ ಆಶ್ರಿತರಾಜರಿಗೆ ಸದ್ಯಃಫಲವೇ ಸಿಕ್ಕಿತು. ಅವನನ್ನು ಪತಿಯನ್ನಾಗಿ ಅಥವಾ ರಕ್ಷಕನನ್ನಾಗಿ ಪಡೆದು ಭೂಮಿ ಪಾಲರು ಶೋಕ, ಭಯ ಮತ್ತು ಮಾನಸಿಕಸಂತಾಪಗಳಿಂದ ವಿಮುಕ್ತ ರಾದರು. ಸ್ವಪ್ನದಲ್ಲಿಯೂ ಅವರಿಗೆ ಭೀತಿಯೆಂಬುದಿರಲಿಲ್ಲ. ಶಾಂತಮನಸ್ಕ ರಾಗಿದ್ದ ಅವರಿಗೆ ಅನುದಿನವೂ ಸುಖಸ್ವಪ್ನಗಳಾಗುತ್ತಿದ್ದುವು. ಚಿಂತೆಯಿಲ್ಲದೇ ನಿದ್ದೆಮಾಡಿ ಏಳುತ್ತಿದ್ದರು.

ಚಕ್ರವರ್ತಿಯು ಪರಮಧಾರ್ಮಿಕನಾಗಿದ್ದುದರಿಂದ ಆಶ್ರಿತರಾಜ ರೆಲ್ಲರೂ ಧಾರ್ಮಿಕಪ್ರವೃತ್ತಿಯುಳ್ಳವರಾಗಿದ್ದರು. ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಕೀರ್ತಿಮಂತನಾದ ಶಾಂತನುವಿನ ಆಶ್ರಿತರಾಜರು ಶಿಷ್ಟರೂ, ಯಜ್ಞ-ದಾನ-ಕ್ರಿಯಾಶೀಲರೂ ಆಗಿದ್ದರು.

ಶಾಂತನುಪ್ರಮುಖರಾದ ರಾಜರಿಂದ ಭೂಲೋಕವು ಸಂರಕ್ಷಿಸಲ್ಪಡು ತ್ತಿದ್ದ ಆ ಸಮಯದಲ್ಲಿ ಪ್ರಪಂಚದ ಎಲ್ಲ ವರ್ಣದವರೂ ಧರ್ಮವನ್ನೇ ಪ್ರಧಾನವನ್ನಾಗಿಟ್ಟುಕೊಂಡು ತಮ್ಮ-ತಮ್ಮ ಕರ್ತವ್ಯಗಳನ್ನು ಪರಿಪಾಲಿಸು ತ್ತಿದ್ದರು. ಧರ್ಮಕ್ಕೆ ಎಲ್ಲರೂ ಅಡಿಯಾಳಾಗಿದ್ದರು.*

ಶಾಂತನುವಿನ ಆಳ್ವಿಕೆಯಲ್ಲಿ ಕ್ಷತ್ರಿಯರು ಬ್ರಾಹ್ಮಣರ ಪರಿಚರ್ಯೆ

---

* ಧರ್ಮಮೂಲವಾಗಿ, ಧರ್ಮಪ್ರಧಾನವಾಗಿ ಜನರೆಲ್ಲರೂ ನಡೆದುಕೊಳ್ಳಬೇಕೆಂಬು ದರಲ್ಲಿ ಬಹಳ ತತ್ತ್ವವಿದೆ. ಭಾರತದೇಶದಲ್ಲಿ ಹಿಂದೆ ರಾಜರೂ ಸ್ವತಂತ್ರರಾಗಿರಲಿಲ್ಲ. ಸ್ವೇಚ್ಛೆಯಂತೆ ಕೆಲಸಮಾಡುತ್ತಿರಲಿಲ್ಲ. ಧರ್ಮವೆಂಬುದು ಅವರನ್ನು ನಿಯಂತ್ರಿಸುತ್ತಿ ದ್ದಿತು. ವೇದಮೂಲವಾದ ಧರ್ಮಗಳನ್ನೂ, ಸ್ಮೃತಿಗಳನ್ನೂ ಯಾರೂ ಪ್ರಶ್ನಿಸ ಹೋಗುತ್ತಿರ ಲಿಲ್ಲ. ಸ್ಮೃತಿಗಳಾಗಲೀ, ಧರ್ಮಶಾಸ್ತ್ರಗಳಾಗಲೀ ಯಾವುದೇ ವರ್ಣದವರಿಗಾದರೂ ಅನುಕ್ರಮವಾಗಿ ಆತ್ಮವಿಕಾಸವಾಗುವಂತೆ ಅವರವರಿಗೆ ಯೋಗ್ಯವಾದ ಕರ್ತವ್ಯಗಳನ್ನು

ಯನ್ನು ಮಾಡುತ್ತಿದ್ದರು. ವೈಶ್ಯರು ಬ್ರಹ್ಮ-ಕ್ಷತ್ರಿಯರ ಪರಿಚರ್ಯೆಯನ್ನು ಮಾಡುತ್ತಿದ್ದರು. ಶೂದ್ರರು ಬ್ರಹ್ಮ-ಕ್ಷತ್ರಿಯ-ವೈಶ್ಯರಲ್ಲಿ ಅನುರಕ್ತಿಯುಳ್ಳವರಾಗಿ ಸೇವಿಸುತ್ತಿದ್ದರು.

ಮಹಾರಾಜನಾದ ಶಾಂತನುವು ಕುರುವಂಶದ ರಮಣೀಯ ರಾಜಧಾನಿಯಾದ ಹಸ್ತಿನಾಪುರದಲ್ಲಿ ವಾಸಮಾಡುತ್ತಾ ಚತುಸ್ಸಾಗರಪರ್ಯಂತವಾದ ಭೂಮಿಯನ್ನು ಆಳುತ್ತಿದ್ದನು. ದೇವರಾಜಸದೃಶನಾಗಿದ್ದ ಶಾಂತನುವು ಧರ್ಮಜ್ಞನಾಗಿಯೂ, ಸತ್ಯಸಂಧನಾಗಿಯೂ, ಕಪಟರಹಿತನಾಗಿಯೂ ಇದ್ದನು. ದಾನ, ಧರ್ಮ ಮತ್ತು ತಪಸ್ಸು–ಈ ಮೂರೂ ಅವನಲ್ಲಿ ಮೂರ್ತಿಮತ್ತಾಗಿ ನೆಲೆಸಿದ್ದುದರಿಂದ ಅವನು ಪರಮಾದ್ಭುತವಾದ ಕಾಂತಿಯಿಂದ ಬೆಳಗುತ್ತಿದ್ದನು. ರಾಗ-ದ್ವೇಷಾದಿಗಳೊಂದೂ ಅವನಲ್ಲಿರಲಿಲ್ಲ. ಚಂದ್ರನಂತೆ ಪ್ರಿಯದರ್ಶನನಾಗಿದ್ದನು. ತೇಜಸ್ಸಿನಲ್ಲಿ ಸೂರ್ಯಸದೃಶನಾಗಿದ್ದನು. ವೇಗದಲ್ಲಿಯೂ ಮತ್ತು ಬಲದಲ್ಲಿಯೂ ವಾಯುವಿಗೆ ಸಮಾನನಾಗಿದ್ದನು. ಕೋಪದಲ್ಲಿ ಯಮಪ್ರಾಯನಾಗಿದ್ದನು. ಕ್ಷಮೆಯಲ್ಲಿ ಪೃಥ್ವಿಗೆ ಸಮಾನನೆನಿಸಿದ್ದನು. ಶಾಂತನುವು ಪೃಥ್ವಿಯನ್ನು ಆಳುತ್ತಿರುವಾಗ ಪಶು-ವರಾಹಗಳ ಮತ್ತು ಮೃಗ-ಪಕ್ಷಿಗಳ ವಧೆಯೂ ನಿಷೇಧಿಸಲ್ಪಟ್ಟಿದ್ದಿತು. ಪ್ರಜೆಗಳನ್ನು ಸಂರಕ್ಷಿಸುವಂತೆಯೇ ಶಾಂತನುವು ಪಶು-ಪ್ರಾಣಿ-ಪಕ್ಷಿಗಳನ್ನೂ ಸಂರಕ್ಷಿಸುತ್ತಿದ್ದನು. ಶಾಂತನುವಿನ ರಾಜ್ಯದಲ್ಲಿ ಸತ್ಯ-ಧರ್ಮಗಳೇ ಪ್ರಮುಖಸ್ಥಾನವನ್ನು ವಹಿಸಿದ್ದುವು. ರಾಜನೇ ಮೊದಲಾಗಿ ಸಕಲಪ್ರಜೆಗಳೂ ನುಡಿದಂತೆ ನಡೆಯುತ್ತಿದ್ದರು. ವಿನಯಶೀಲನಾದ, ಕಾಮ-ರಾಗವಿವರ್ಜಿತನಾದ ಶಾಂತನುವು ಸಕಲಪ್ರಜೆಗಳನ್ನೂ ನಿಷ್ಪಕ್ಷಪಾತವಾಗಿ ಆಳುತ್ತಿದ್ದನು. ದೇವ-ಋಷಿ-ಪಿತೃಯಜ್ಞಗಳು ಯಥಾವಿಧಿಯಾಗಿ ನಡೆಯುತ್ತಿದ್ದುವು. ಅಧರ್ಮದಿಂದ ಯಾವ ಪ್ರಾಣಿಯನ್ನೂ ಯಾರೂ ಹಿಂಸಿಸುತ್ತಿರಲಿಲ್ಲ. ದುಃಖಿಗಳಿಗೆ

---

ಬೋಧಿಸುತ್ತವೆ. ಧರ್ಮಶಾಸ್ತ್ರಕಾರರಿಗೆ ಯಾವ ವಿಧವಾದ ಪಕ್ಷಪಾತವೂ ಇರಲಿಲ್ಲ. ಈ ಕಾರಣದಿಂದಲೇ ಇಂತಹ ಧರ್ಮವನ್ನು ರಾಜರೂ ಸಂರಕ್ಷಿಸುತ್ತಿದ್ದರು. ಧರ್ಮದ ಶಕ್ತಿಯು ಎಷ್ಟೆಂಬುದನ್ನು ನಾವು ಇಂದೂ ಕಾಣಬಹುದಾಗಿದೆ. ಧರ್ಮದ ಭಾವನೆಯಿಂದ ಉಪವಾಸಾದಿಗಳನ್ನು ಇಂದೂ ಮಾಡುತ್ತಾರೆ. ಏಕಾದಶೀ ವ್ರತವನ್ನು ಆಚರಿಸುತ್ತಾರೆ. ಧರ್ಮದ ಕಾರಣದಿಂದಾಗಿ ಕಾಯಕ್ಲೇಶಗಳನ್ನೂ ಸಹಿಸಿಕೊಳ್ಳುತ್ತಾರೆ. ಆದರೆ ಕೇವಲ ರಾಜದಂಡನೆಯಿಂದ ಇದು ಸಾಧ್ಯವಾಗಲಾರದು.

ಅನಾಥರಿಗೆ, ಪಶು-ಪಕ್ಷಿಗಳಿಗೆ, ಎಲ್ಲ ಪ್ರಾಣಿಗಳಿಗೂ ಶಾಂತನುವು ರಾಜನೂ ಆಗಿದ್ದನು ; ತಂದೆಯೂ ಆಗಿದ್ದನು. ಕುರುಪತಿಶ್ರೇಷ್ಠನಾದ ಶಾಂತನುವು ರಾಜಾಧಿರಾಜನಾಗಿರಲಾಗಿ ಮಾತು ಸತ್ಯದೊಡನೆ ಸೇರುತ್ತಿದ್ದಿತು. ಪ್ರಜೆಗಳಿಗೆ ಸುಳ್ಳನ್ನು ಹೇಳಲೇ ತಿಳಿಯುತ್ತಿರಲಿಲ್ಲ. ಅವರ ಮನಸ್ಸು ಯಾವಾಗಲೂ ದಾನ ಮತ್ತು ಧರ್ಮಗಳಲ್ಲಿಯೇ ಲೀನವಾಗಿರುತ್ತಿತ್ತು. ಇಂತಹ ಪರಮಧಾರ್ಮಿಕನಾದ ಶಾಂತನುವು ಮೂವತ್ತಾರು ವರ್ಷಗಳ ಕಾಲ ಸ್ತ್ರೀಯರೊಡನೆ ಯಾವ ವಿಧವಾದ ಸಂಬಂಧವನ್ನೂ ಇಟ್ಟುಕೊಂಡಿರಲಿಲ್ಲ. ಅರಣ್ಯದಲ್ಲಿಯೇ ಹೆಚ್ಚು ಕಾಲ ಇದ್ದುಬಿಡುತ್ತಿದ್ದನು. ಶಾಂತನುವಿಗೆ ಗಂಗೆಯಲ್ಲಿ ಹುಟ್ಟಿದ್ದ ವಸ್ವಂಶ ಸಂಭೂತನಾದ ದೇವವ್ರತನಾಮಕನಾದ ಪುತ್ರನು ರೂಪ-ಆಚಾರ-ನಡೆ-ನುಡಿ ಮತ್ತು ವಿದ್ಯೆ–ಈ ಎಲ್ಲದರಲ್ಲಿಯೂ ಶಾಂತನುವನ್ನೇ ಪ್ರತಿಬಿಂಬಿಸಿದ್ದನು. ದೇವವ್ರತನು ಸರ್ವಾಸ್ತ್ರನಿಪುಣನೂ, ಮಹಾಬಲನೂ, ಸತ್ತ್ವಪೂರ್ಣನೂ, ವೀರ್ಯಶಾಲಿಯೂ, ಮಹಾರಥನೂ ಆಗಿದ್ದನು.

ಒಂದು ದಿನ ಶಾಂತನುವು ಬೇಟೆಯಾಡಲು ಹೋದಾಗ ಒಂದು ಜಿಂಕೆಗೆ ಗುರಿಯಿಟ್ಟು ಬಾಣಹೊಡೆದನು. ಬಾಣವು ತಗುಲಿತಾದರೂ ಜಿಂಕೆಯು ಬಹಳ ದೂರ ಓಡಿಹೋಯಿತು. ಅದನ್ನೇ ಹುಡುಕುತ್ತಾ ಗಂಗೆಯ ದಂಡೆಯ ಮೇಲೆ ಹೋಗುತ್ತಿದ್ದಾಗ, ಎಂದಿನಂತೆ ಪ್ರವಾಹದ ಭೋರ್ಗರೆಯುವ ಶಬ್ದವು ಕೇಳಲಿಲ್ಲ. ಪಕ್ಕಕ್ಕೆ ತಿರುಗಿನೋಡಿದನು. ನದಿಯಲ್ಲಿ ಹೆಚ್ಚು ನೀರೇ ಇರಲಿಲ್ಲ. ಎಲ್ಲಿಯೋ ಸ್ವಲ್ಪ ನೀರು ಜಿನುಗುತ್ತಿತ್ತು. ಶಾಂತನುವಿಗೆ ಬಹಳ ಆಶ್ಚರ್ಯವಾಯಿತು. ಕೆಲವೇ ದಿನಗಳ ಹಿಂದೆ ತುಂಬಿ ಹರಿಯುತ್ತಿದ್ದ ನದಿಯು ಇಂದು ಬತ್ತಿಹೋಗಿದೆಯಲ್ಲಾ?–ಎಂದು ತವಕಿಸಿದನು. ನದಿಯು ಬತ್ತಿರುವ ಕಾರಣವನ್ನು ತಿಳಿಯಲು ಕುತೂಹಲದಿಂದ ದಂಡೆಯ ಮೇಲೆ ಮೆಲ್ಲ-ಮೆಲ್ಲನೆ ಸೂಕ್ಷ್ಮವಾಗಿ ಪರಿಶೀಲಿಸುತ್ತಾ ನಡೆದನು. ಮುಂದೆ ಅನತಿ ದೂರದಲ್ಲಿಯೇ ಸುಂದರನಾದ ಬಾಲಕನೊಬ್ಬನು ಧನುರ್ಬಾಣಗಳನ್ನು ಹಿಡಿದು ನಿಂತಿರುವುದು ರಾಜನ ದೃಷ್ಟಿಗೆ ಗೋಚರವಾಯಿತು. ಆತುರದಿಂದ ಮುಂದೆ ಹೋಗಿ ಇಂದ್ರನಂತೆ ಶೋಭಿಸುತ್ತಿದ್ದ ಬಾಲಕನ ಕಾರ್ಯವನ್ನು ವೀಕ್ಷಿಸಿದನು. ಬಾಣಪ್ರಯೋಗದಿಂದಲೇ ನದಿಯನ್ನು ತಡೆದಿರುವ ಬಾಲಕನ

ಚತುರತೆಯನ್ನು ವೀಕ್ಷಿಸಿ ರಾಜನಿಗೆ ಪರಮಾಶ್ಚರ್ಯವಾಯಿತು. ಬಾಣ ಪ್ರಯೋಗದ ಚಾತುರ್ಯದಿಂದ ಬಾಲಕನು ಗಂಗಾನದಿಗೆ ಒಂದು ಅಣೆಯನ್ನೇ ಕಟ್ಟಿಬಿಟ್ಟಿದ್ದನು. ಅತ್ಯಾಶ್ಚರ್ಯಕರವಾದ ಮತ್ತು ಅಮಾನುಷವಾದ ಅಂತಹ ಬಾಣಪ್ರಯೋಗವನ್ನೇ ನೋಡುತ್ತಾ ರಾಜನು ಸ್ತಬ್ಧನಾಗಿ ನಿಂತನು. ಆದರೆ ಬಾಲಕನಾರೆಂಬ ಅರಿವು ರಾಜನಿಗುಂಟಾಗಲಿಲ್ಲ. ಹುಟ್ಟಿದಾಗ ಮಾತ್ರ



ನೋಡಿದ್ದ ಮಗುವಿನ ಸ್ಮೃತಿಯಾದರೂ ಇರುವುದೆಂತು? ಆದರೆ ಬಾಲಕನಿಗೆ ಮಾತ್ರ ತನ್ನ ಸಮೀಪದಲ್ಲಿ ನಿಂತಿರುವವರಾರೆಂಬ ಅರಿವುಂಟಾಯಿತು. ಆದರೆ ತಾನಾರೆಂಬುದನ್ನು ಹೇಳಿಕೊಳ್ಳುವ ಇಚ್ಛೆಯಿಲ್ಲದೇ ರಾಜನು ನೋಡುತ್ತಿದ್ದಂತೆಯೇ ಬಾಲಕನು ಅದೃಶ್ಯನಾದನು.

ರಾಜನಿಗೆ ಭ್ರಾಂತಿಯುಂಟಾಯಿತು. ಬಾಲಕನನ್ನು ಪುನಃ ನೋಡ

ಬೇಕೆನ್ನುವ ತವಕವೂ ಉಂಟಾಯಿತು. ಹಿಂದಿನದೆಲ್ಲವೂ ಸ್ಮರಣೆಗೆ ಬಂದು ತನ್ನ ತವಕಕ್ಕೆ ಕಾರಣ ಈ ಬಾಲಕನು ತನ್ನ ಮಗನಾಗಿರುವುದೇ ಇರಬಹುದೆಂದೂ ರಾಜನು ಶಂಕಿಸಿದನು. ಮಗನನ್ನು ತೋರಿಸುವಂತೆ ಜಲರೂಪಳಾಗಿ ಹರಿಯುತ್ತಿದ್ದ ಗಂಗಾದೇವಿಯನ್ನು ದೈನ್ಯದಿಂದ ಕೇಳಿದನು.

ಸುಮಂಗಲಿಯಾದ ದೇವಿಯು ಸುಂದರರೂಪವನ್ನು ಧರಿಸಿದವಳಾಗಿ ಆಭರಣಗಳಿಂದ ಅಲಂಕೃತನಾದ ಸುಂದರಬಾಲಕನನ್ನು ಬಲಗೈಯಲ್ಲಿ ಹಿಡಿದುಕೊಂಡು, ಮುಗುಳ್ನಗೆಯನ್ನು ಬೀರುತ್ತಾ ರಾಜನ ಸಮೀಪದಲ್ಲಿ ನಿಂತಳು. ಗಂಗೆಯೊಡನೆ ರಾಜನು ಅನೇಕ ವರ್ಷಗಳ ಕಾಲ ಕಳೆದಿದ್ದ ನಾದರೂ, ಆಭರಣಗಳಿಂದ ಅಲಂಕೃತಳಾಗಿದ್ದ, ಧೂಳಿನಿಂದ ಕೂಡಿರದ ಸ್ವಚ್ಛ ವಾದ ಮತ್ತು ಸುಂದರವಾದ ಸೀರೆಯನ್ನುಟ್ಟಿದ್ದ, ತನ್ನ ಸಮೀಪದಲ್ಲಿ ನಿಂತಿದ್ದ ಯುವತಿಯು ಗಂಗಾದೇವಿಯೇ ಎಂದು ರಾಜನಿಗೆ ಗುರುತಿಸಲಾಗಲಿಲ್ಲ.

ಹಿಂದೆ ಮಾನವನೊಡನೆ ಸಂಪರ್ಕವನ್ನು ಹೊಂದಲು ಮಾನುಷ ರೂಪವನ್ನು ಧರಿಸಿದ್ದ ಗಂಗೆಗೂ, ಮಗನನ್ನರ್ಪಿಸಿಹೋಗಲು ಬಂದಿರುವ ಗಂಗಾದೇವಿಗೂ ಬಹಳ ವ್ಯತ್ಯಾಸವಿದ್ದಿತು.

ಗಂಗೆಯು ಶಾಂತನುವಿನ ವಿಸ್ಮರಣೆಯನ್ನು ತಿಳಿದವಳಾಗಿ ತಾನೇ ಹೇಳತೊಡಗಿದಳು :

"ಮಹಾರಾಜ! ಕೆಲವು ವರ್ಷಗಳ ಹಿಂದೆ ನಿನ್ನಿಂದ ನನ್ನಲ್ಲಿ ಜನಿಸಿದ ಎಂಟನೆಯ ಪುತ್ರನೇ ಇವನು. ಈ ಬಾಲಕನು ಶಸ್ತ್ರಾಸ್ತ್ರಗಳಲ್ಲಿ ನಿಷ್ಣಾತ ನಾಗಿರುವನು. ನಾನಿವನನ್ನು ಇದುವರೆವಿಗೂ ಸಾಕಿ ಸಲಹಿರುವೆನು. ನೀನಿನ್ನು ಇವನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗಬಹುದು"

ರಾಜನ ಮುಖವು ಪ್ರಫುಲ್ಲವಾಯಿತು. ಗಂಗಾದೇವಿಯು ಮುಂದು ವರಿದು ಹೇಳಿದಳು :

"ಮಹಾರಾಜ! ಇವನು ಸಾಮಾನ್ಯನೆಂದು ಭಾವಿಸಬೇಡ. ಇವನು ವಸಿಷ್ಠರಲ್ಲಿ ವೇದ-ವೇದಾಂಗಗಳನ್ನು ಅಧ್ಯಯನಮಾಡಿರುವನು. ಅಸ್ತ್ರವಿದ್ಯೆ ಯಲ್ಲಿ ಸಂಪೂರ್ಣವಾಗಿ ನಿಷ್ಣಾತನಾಗಿರುವ ಮತ್ತು ಮಹಾಧನುಸ್ಸನ್ನು ಧರಿಸಿರುವ ಇವನು ಯುದ್ಧದಲ್ಲಿ ಇಂದ್ರನಿಗೆ ಸಮಾನನಾಗಿ ಯುದ್ಧಮಾಡ ಬಲ್ಲನು. ಸುರಾಸುರರೂ ಇವನನ್ನು ಸಮ್ಮಾನಿಸುವರು. ಅಸುರರ ಗುರು

ಗಳಾದ ಶುಕ್ರರಿಗೆ ತಿಳಿದಿರುವ ಸಕಲಶಾಸ್ತ್ರಗಳನ್ನೂ ಇವನು ಸಂಪೂರ್ಣವಾಗಿ ತಿಳಿದಿರುವನು. ಅಂಗಿರಸನ ಪುತ್ರನಾದ, ಸುರಾಸುರನಮಸ್ಕೃತನಾದ ಬೃಹಸ್ಪತಿಗೆ ತಿಳಿದಿರುವ ಸಕಲವಿದ್ಯೆಗಳೂ ಇವನಿಗೆ ತಿಳಿದಿವೆ. ಜಮದಗ್ನಿಯ ಮಗನಾದ ಪರಶುರಾಮನಲ್ಲಿರುವ ಸಕಲಶಸ್ತ್ರಾಸ್ತ್ರಗಳೂ ಈ ನಿನ್ನ ಪುತ್ರನಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ. ಇಷ್ಟುಮಾತ್ರವಲ್ಲದೇ ಇವನು ರಾಜಧರ್ಮ ದಲ್ಲಿಯೂ ನಿಷ್ಣಾತನಾಗಿರುವನು. ಇಂತಹ ಅತುಲಪರಾಕ್ರಮಿಯಾದ ನಿನ್ನ ನಿಜಸುತನನ್ನು ಆದರದಿಂದ ಸ್ವೀಕರಿಸಿ, ಅರಮನೆಗೆ ಕರೆದುಕೊಂಡು ಹೋಗು, ರಾಜೇಂದ್ರ!"

ಹೀಗೆ ಹೇಳಿ ಗಂಗೆಯು ರಾಜನಿಗೆ ಮಗನನ್ನು ಒಪ್ಪಿಸಿದಳು. ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು, ಮಂದಸ್ಮಿತನಾಗಿ ಒಂದೊಂದೇ ಹೆಜ್ಜೆಯನ್ನು ಮೆಲ್ಲ-ಮೆಲ್ಲನಿಡುತ್ತಾ ರಾಜನ ಕಡೆಗೆ ಬಾಲಕನು ಬರುತ್ತಿದ್ದಂತೆ ರಾಜನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದುವು. ಮಗನ ಮಂದಗಮನವನ್ನು ಸಹಿಸಲಾರದ ರಾಜನ ಹೃದಯವೇದನೆಯನ್ನು ಯೋಚಿಸಿಯೋ ಎಂಬಂತೆ ರಾಜನ ಕಾಲುಗಳು ಮಗುವಿನ ಕಡೆಗೆ ಒಡನೆಯೇ ಧಾವಿಸಿದುವು. ಮಗನ ಸ್ಪರ್ಶಸುಖವನ್ನು ತಾನು ಮೊದಲು ಅನುಭವಿಸಬೇಕೆಂಬ ಅತ್ಯಾಸೆಯಿಂದಲೋ ಎಂಬಂತೆ ರಾಜನ ನೀಳವಾದ ಕೈಗಳು ಗಂಗಾಸುತನನ್ನು ಬಾಚಿ ತಬ್ಬಿದುವು. ಅಷ್ಟರೊಳಗಾಗಿ ಅದೃಶ್ಯಳಾಗಿದ್ದ ಗಂಗಾದೇವಿಯು ನದಿಯೊಳಗೆ ಸೇರಿಹೋಗಿ ಪಿತಾ-ಪುತ್ರರ ಸಮಾಗಮವನ್ನು ನೋಡುತ್ತಾ ಹೆಚ್ಚಿನ ಸಂತೋಷದಿಂದ ಕಿಲ-ಕಿಲನೆ ನಗುತ್ತಿರುವಳೋ ಎಂಬಂತೆ ಶಬ್ದಮಾಡುತ್ತಾ ಪ್ರವಹಿಸುತ್ತಿದ್ದಳು.

ಗಂಗಾದೇವಿಯು ತನ್ನ ಮಗನ ವಿಷಯವಾಗಿ ಹೀಗೆ ಹೇಳಿ ಮಗನನ್ನು ಒಪ್ಪಿಸಿದ ಬಳಿಕ ಸಾಕ್ಷಾತ್ ಸೂರ್ಯದೇವನಂತೆಯೇ ಭ್ರಾಜಮಾನನಾಗಿದ್ದ ದೇವವ್ರತನನ್ನು ಕರೆದುಕೊಂಡು ರಾಜನು ರಾಜಧಾನಿಗೆ ಆಗಮಿಸಿದನು. ಪುರುವಂಶಪ್ರದೀಪನಾದ ಶಾಂತನುವು ಸ್ವರ್ಗೋಪಮವಾದ ರಾಜಧಾನಿ ಯನ್ನು ಸೇರಿದನಂತರ ತನ್ನ ಸಕಲಕಾಮನೆಗಳೂ ಪರಿಪೂರ್ಣವಾದುವೆಂದೂ, ಇಂತಹ ದೇವಸುತೋಪಮನಾದ ಪುತ್ರನನ್ನು ಪಡೆದ ತಾನು ಮಹಾಪುಣ್ಯ ಶಾಲಿಯೆಂದೂ ಭಾವಿಸಿಕೊಂಡನು. ಸಕಲಪ್ರಜೆಗಳಿಗೂ ಸಕಲಪ್ರಾಣಿಗಳಿಗೂ

ಅಭಯಪ್ರದನಾದ, ಸಕಲಸದ್ಗುಣಪರಿಪೂರ್ಣನಾದ, ಮಹಾತ್ಮನಾದ ಪುತ್ರನನ್ನು ರಾಜ್ಯದ ಸುಖಸಂಪತ್ತಿಗಾಗಿ ಸಕಲಪ್ರಜೆಗಳ ಸಮ್ಮುಖದಲ್ಲಿ ಯುವರಾಜನನ್ನಾಗಿ ಮಾಡಿಕೊಂಡನು. ಮಹಾಯಶೋವಂತನಾದ ಶಾಂತನುವಿನ ಪುತ್ರನಾದ ದೇವವ್ರತನು ಸದ್ವೃತ್ತಿ-ಸದಾಚಾರಗಳಿಂದ ಪಟ್ಟಣಿಗರನ್ನೂ, ತಂದೆಯನ್ನೂ ಮತ್ತು ರಾಷ್ಟ್ರದ ಸಕಲಪ್ರಜೆಗಳನ್ನೂ ಸಂತೃಪ್ತಿಗೊಳಿಸಿದನು. ಅಮಿತವಿಕ್ರಮನಾದ ಶಾಂತನುವು ಸಕಲಸದ್ಗುಣಪರಿಪೂರ್ಣನಾದ ಮಗನ ಜೊತೆಯಲ್ಲಿ ನಾಲ್ಕು ವರ್ಷಗಳು ಸುಖದಿಂದಲೂ-ಸಮಾಧಾನದಿಂದಲೂ ಇದ್ದನು.

ಶಾಂತನುವಿಗೆ ಯಾವ ವಿಧವಾದ ಚಿಂತೆಯೂ ಇರಲಿಲ್ಲ. ಯುವರಾಜನಾಗಿದ್ದ ದೇವವ್ರತನೇ ರಾಜ್ಯಭಾರವನ್ನು ನಡೆಸುತ್ತಿದ್ದನು. ಪ್ರಜೆಗಳೆಲ್ಲರೂ ಗಾಂಗೇಯನ ರಾಜ್ಯಪಾಲನೆಯಲ್ಲಿ ಸಂತುಷ್ಟರಾಗಿದ್ದರು.

ಒಂದಾನೊಂದು ದಿನ ಶಾಂತನುವು ಯಮುನೆಯ ದಂಡೆಯ ಮೇಲೆ ವಿಹರಿಸುತ್ತಿರುವಾಗ ಘಮ-ಘಮಿಸುವ ವಾಸನೆಯು ಗಾಳಿಯ ಮೂಲಕ ಯಾವುದೋ ಕಡೆಯಿಂದ ಬರುತ್ತಿತ್ತು. ನಾಲ್ಕಾರು ಸಲ ಆಘ್ರಾಣಿಸಿದನು. ವಾಸನೆಯು ಅವರ್ಣನೀಯವಾಗಿತ್ತು. ಅಂತಹ ಸುಗಂಧವನ್ನು ರಾಜನು ಅದುವರೆಗೂ ಆಘ್ರಾಣಿಸಿಯೇ ಇರಲಿಲ್ಲ. ಸುವಾಸನೆಯನ್ನು ಬೀರುವ ವಸ್ತುವನ್ನು ಹುಡುಕಲು ಹೊರಟನು.

ಕ್ಷಣ-ಕ್ಷಣಕ್ಕೂ ವಾಸನೆಯನ್ನು ಆಘ್ರಾಣಮಾಡುತ್ತಾ, ವಾಸನೆಯು ಬರುತ್ತಿದ್ದ ಹಾದಿಯನ್ನೇ ಹಿಡಿದು ಹೊರಟನು. ಕಡೆಗೆ ಸುಗಂಧಮಾರುತವು ರಾಜನನ್ನು ಒಂದು ದೋಣಿಯ ಸಮೀಪಕ್ಕೆ ಕರೆದೊಯ್ದಿತು. ರಾಜನು ದೋಣಿಯ ಸುತ್ತಲೂ ಆಘ್ರಾಣಿಸಿದನು. ಆದರೆ ಸುಗಂಧಮಯವಾದ ವಸ್ತುವಾವುದೂ ಅಲ್ಲಿರುವಂತೆ ಕಾಣಲಿಲ್ಲ. ಸುಗಂಧವು ಮಾತ್ರ ಮೂಗಿನ ಹೊಳ್ಳೆಗಳು ಒಡೆಯುವಷ್ಟು ಅಲ್ಲಿ ನಿಂತಿದ್ದ ದೋಣಿಯ ಕಡೆಯಿಂದ ಹೊರ ಸೂಸುತ್ತಿದ್ದಿತು. ದೋಣಿಯೊಳಗೆ ಬಿದುರಿನ ಹುಟ್ಟು ಹಿಡಿದಿದ್ದ ಸುಂದರ ಯುವತಿಯೊಬ್ಬಳನ್ನು ಕಂಡನು.

ರಾಜನಿಗೂ ತಾನರಸುತ್ತಿದ್ದ ವಸ್ತುವು ಸಿಕ್ಕಿತೆಂಬ ಸಂತೋಷ

ವಾಯಿತು. ಅರಳಿದ ಕುಸುಮದಂತೆ, ಶುಭ್ರವಾದ ದಂತಪಂಕ್ತಿಗಳಿಂದ ಬೆಳದಿಂಗಳ ಕಾಂತಿಯನ್ನು ಹೊರಸೂಸುತ್ತಾ ನಿಂತಿದ್ದ ಯುವತಿಯನ್ನು ಶಾಂತನುವು ಪ್ರಶ್ನಿಸಿದನು :



"ಭೀರುವೇ! ನೀನು ಯಾರು? ಯಾರ ಮಗಳು? ಇಲ್ಲೇನು ಮಾಡುವೆ?"

"ನಿನಗೆ ಮಂಗಳವಾಗಲಿ. ನಾನು ಬೆಸ್ತರ ರಾಜನ ಮಗಳು. ನಮ್ಮ ತಂದೆಯವರ ಆಜ್ಞಾಧಾರಕಳಾಗಿ ಧರ್ಮಾರ್ಥವಾಗಿ ದೋಣಿಯನ್ನು ನಡೆಸುವ ಕಾರ್ಯವನ್ನು ಮಾಡುತ್ತಿರುವೆನು" ಎಂದು ಹೇಳಿ ಹುಟ್ಟನ್ನು ಮೀಟಿದಳು.

ಅದರೊಡನೆಯೇ ಮನ್ಮಥನ ಬಾಣಗಳು ರಾಜನ ಹೃದಯವನ್ನೂ

ಮೀಟತೊಡಗಿದುವು. ಅವನಿಗೆ ಆ ಗಂಧವತಿಯನ್ನು ವಿವಾಹವಾಗಬೇಕೆಂಬ ಆಸೆಯುಂಟಾಯಿತು.

ಶಾಂತನುವು ಚಕ್ರವರ್ತಿ. 'ರತ್ನಹಾರೀ ಚ ಪಾರ್ಥಿವಃ' ಎಂಬ ಪ್ರವಾದವೂ ರಾಜರಿಗಿದೆ. ಗಂಧವತಿಯು ಸ್ತ್ರೀರತ್ನವೆಂಬುದೂ ನಿಜ. ಆದರೆ ಅರಸನು ಕನ್ಯೆಯನ್ನು ಅಪಹರಿಸುವ ಯೋಚನೆಯನ್ನು ಮಾಡಲಿಲ್ಲ. ಗಂಧವತಿಯ ತಂದೆಯಾದ ಬೆಸ್ತರಾಜನ ಬಳಿಗೆ ಹೋಗಿ ಮಗಳನ್ನು ತನಗೆ ಮದುವೆಮಾಡಿಕೊಡಬೇಕೆಂದು ಕೇಳಿದನು. ಇದಕ್ಕೆ ಉತ್ತರವಾಗಿ ನಿಷಾದರಾಜನು ವಿನೀತನಾಗಿಯೇ ರಾಜನಿಗೆ ಹೇಳಿದನು :

**ಜಾತಮಾತ್ರೈವ ಮೇ ದೇಯಾ ವರಾಯ ವರವರ್ಣಿನೀ ।**
**ಹೃದಿ ಕಾಮಸ್ತು ಮೇ ಕಶ್ಚಿತ್ತಂ ನಿಬೋಧ ಜನೇಶ್ವರ ॥೫೨॥**

"ಜನೇಶ್ವರನೇ! ಈ ಕನ್ಯೆಯು ಹುಟ್ಟಿದಂದಿನಿಂದಲೇ ಇವಳನ್ನು ಒಳ್ಳೆಯ ವರನಿಗೆ ಕೊಟ್ಟು ವಿವಾಹಮಾಡಬೇಕೆಂಬ ಚಿಂತೆಯು ನನಗಿದ್ದೇ ಇದೆ. ನಿನಗಿಂತಲೂ ಉತ್ತಮನಾದ ವರನು ನನ್ನ ಮಗಳಿಗೆ ಬೇರೊಬ್ಬನಿಲ್ಲ ವೆಂಬುದೂ ನಿಜ. ಆದರೆ ನಾನು ಬಹಳ ದಿನಗಳಿಂದಲೂ ನನ್ನ ಮನಸ್ಸಿನಲ್ಲಿ ಆಸೆಯೊಂದನ್ನಿಟ್ಟುಕೊಂಡಿರುತ್ತೇನೆ. ಅದನ್ನು ಸತ್ಯವಾದಿಯಾದ ನೀನು ನಡೆಸಿಕೊಡುವೆಯಾದರೆ... ನಡೆಸಿಕೊಡುವೆನೆಂದು ವಾಗ್ದಾನಮಾಡುವೆ ಯಾದರೆ...."

ರಾಜನು ಕ್ಷಣಕಾಲ ಯೋಚಿಸಿದನು. ಧರ್ಮಿಷ್ಠನಾದ ರಾಜನು ಮನ್ಮಥನ ಬಾಣಗಳಿಂದ ಪೀಡಿತನಾಗಿದ್ದರೂ ದಾಶರಾಜನ ಆಸೆಯನ್ನು ನೆರವೇರಿಸಿಬಿಡುವೆನೆಂದು ಹೇಳಿಬಿಡಲಿಲ್ಲ.

"ದಾಶರಾಜ! ನೀನು ನಿನ್ನ ಆಸೆಯೇನೆಂಬುದನ್ನು ಹೇಳಿದನಂತರ ಅದನ್ನು ನೆರವೇರಿಸಲು ಇರುವ ಸಾಧ್ಯಾಸಾಧ್ಯತೆಗಳನ್ನು ವಿವೇಚಿಸಿ ಹೇಳು ವೆನು. ಒಂದು ವೇಳೆ ನಿನ್ನ ಆಸೆಯನ್ನು ನೆರವೇರಿಸಿಕೊಡುವ ಸಾಧ್ಯತೆಯೇ ಇಲ್ಲದಿದ್ದರೆ ಹೇಗೆ ತಾನೇ ನಾನು ವಾಗ್ದಾನವನ್ನು ಮಾಡಲಿ?"

"ನನ್ನ ಆಸೆಯು ಮತ್ತೇನೂ ಇಲ್ಲ. ಮಹಾರಾಜ! ನನ್ನ ಮಗಳ ಮಗನೇ ಮುಂದೆ ರಾಜ್ಯದ ಚಕ್ರವರ್ತಿಯಾಗಬೇಕು. ಇಷ್ಟುಮಾತ್ರ ನನ್ನ ಅಭಿಲಾಷೆಯಾಗಿದೆ."

ದಾಶರಾಜನಿಗೆ ಅದು ಇಷ್ಟುಮಾತ್ರವೆನಿಸಿದರೂ ರಾಜನಿಗದು ಸಹ್ಯ ವೆನಿಸಲಿಲ್ಲ. ಯದ್ಯಪಿ ಶರೀರದಲ್ಲಿ ಹುಟ್ಟಿದ್ದ ಕಾಮಾಗ್ನಿಯಿಂದ ದಗ್ಧನಾಗಿ ಹೋಗುತ್ತಿದ್ದರೂ ದಾಶರಾಜನಿಗೆ ಒಪ್ಪಿಗೆಯನ್ನು ಕೊಡಲು ಶಾಂತನುವು ಇಚ್ಛಿಸಲಿಲ್ಲ. ಯುವರಾಜನಾದ ದೇವವ್ರತನ ಚಿತ್ರವು ಕಣ್ಮುಂದೆ ನಿಂತಿತು. ಅವನನ್ನು ಬಿಟ್ಟು ಬೇರೆಯವರು ರಾಜ್ಯಭಾರಮಾಡಲು ಅರ್ಹರೇ? ಎನ್ನಿಸಿರ ಬಹುದು. ಭಾರವಾದ ಹೃದಯದಿಂದ ಮೇಲೆದ್ದು ಮುಂದೆ ನಡೆದನು. ದಾಶ ರಾಜನ ಪರಿವಾರದವರು ಕೈಜೋಡಿಸಿ ಹಿಂದೆಯೇ ನಿಂತರು. ಶಾಂತನುವು ದಾರಿಯುದ್ದಕ್ಕೂ ದಾಶಕನ್ಯೆಯನ್ನೇ ನೆನೆಯುತ್ತಾ, ಕಾಮೋಪಹತನಾಗಿ ನಿಟ್ಟುಸಿರುಬಿಡುತ್ತಾ ಹಾಸ್ತಿನಪುರದ ಅರಮನೆಯನ್ನು ಸೇರಿದನು.

ಗಾಂಗೇಯನು ರಾಜ್ಯಾಂಗದ ಅತಿಮುಖ್ಯವಾದ ವಿಷಯಗಳಲ್ಲಿ ಶಾಂತನುವಿನ ಸಲಹೆಯನ್ನು ಪಡೆಯಲು ಹೋಗುತ್ತಿದ್ದನು. ಆದರೆ ಇತ್ತೀಚೆಗೆ ಹಲವಾರು ದಿನಗಳಿಂದಲೂ ತಂದೆಯು ಹೆಚ್ಚು ಮಾತನಾಡದೇ ಮೌನವಾಗಿದ್ದುದು ಗಾಂಗೇಯನಿಗೆ ಬಹಳ ಬೇಸರವೆನಿಸಿತು. ರಾಜನು ದೈನಂದಿನವಿಹಾರವನ್ನೂ ನಿಲ್ಲಿಸಿಬಿಟ್ಟಿದ್ದನು. ಒಂದೆರಡು ದಿನಗಳು ರಾಜನ ಶರೀರದಲ್ಲಿ ಸ್ವಾಸ್ಥ್ಯವಿಲ್ಲದಿರಬಹುದೆಂದು ಭಾವಿಸಿದ್ದ ಗಾಂಗೇಯನಿಗೆ ಕೆಲವು ದಿನಗಳನಂತರ ತಂದೆಗೆ ಯಾವುದೋ ಚಿಂತೆಯು ಆವರಿಸಿರಬಹುದೆಂದು ಭಾಸವಾಯಿತು.

ಅದರ ಕಾರಣವನ್ನು ತಿಳಿಯುವ ಕುತೂಹಲದಿಂದ ಗಾಂಗೇಯನು ರಾಜನ ಅರಮನೆಯನ್ನು ಪ್ರವೇಶಿಸಿ ಚಿಂತಾಕ್ರಾಂತನಾಗಿ ಕುಳಿತಿದ್ದ ರಾಜನಿಗೆ ಅಭಿವಾದನಮಾಡಿ ಹೇಳಿದನು :

"ಜನಕನೇ! ನಿನಗೆ ಮಂಗಳವಾಗಲಿ. ನಮ್ಮ ಸಾಮ್ರಾಜ್ಯದಲ್ಲಿ ಎಲ್ಲರೂ ಕ್ಷೇಮದಿಂದಿದ್ದಾರೆ. ಪ್ರಜೆಗಳಿಗೆ ಯಾವ ವಿಧವಾದ ಉಪಟಳವೂ ಇರುವುದಿಲ್ಲ. ಭೂಮಿಯಲ್ಲಿರುವ ಎಲ್ಲ ರಾಜರೂ ವಿಧೇಯರಾಗಿದ್ದಾರೆ. ಹೀಗಿರುವಾಗ ನೀನೇಕೆ ಚಿಂತಿಸುತ್ತಿರುವೆ?

**ಧ್ಯಾಯನ್ನಿವ ಚ ಮಾಂ ರಾಜನ್ನಾಭಿಭಾಷಸಿ ಕಿಂಚನ ।**
**ನ ಚಾಶ್ವೇನ ವಿನಿರ್ಯಾಸಿ ವಿವರ್ಣೋ ಹರಿಣಃ ಕೃಶಃ ॥೬೧॥**

ತಂದೆಯೇ! ನೀನು ಯಾವುದೋ ಆಲೋಚನೆಯಲ್ಲಿ ಮಗ್ನ ನಾಗಿರುವಂತಿದೆ. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನೂ ಕೊಡುತ್ತಿಲ್ಲ. ಕುದುರೆ ಸವಾರಿಯನ್ನೂ ಮಾಡುತ್ತಿಲ್ಲ. ಈಗ ನಿನ್ನ ಪ್ರಕೃತಿಯಲ್ಲಿ ಉತ್ಸಾಹವೆಂಬುದೇ ಕಾಣುವುದಿಲ್ಲ. ದಿನ-ದಿನಕ್ಕೂ ಕೃಶನಾಗುತ್ತಿರುವೆ ಯಲ್ಲದೇ–ಮುಖದಲ್ಲಿ ಕಾಂತಿಹೀನತೆಯೂ ಎದ್ದುಕಾಣುತ್ತಿದೆ. ಅಪ್ಪಾ! ನನ್ನಲ್ಲಿ ಮರೆಮಾಚದೇ ನೀನು ಯಾವ ವ್ಯಾಧಿಯಿಂದ ನರಳುತ್ತಿರುವೆಯೆಂಬುದನ್ನು ದಯೆಯಿಟ್ಟು ತಿಳಿಸು. ಅದಕ್ಕೆ ಯೋಗ್ಯವಾದ ಚಿಕಿತ್ಸೆಯ ವ್ಯವಸ್ಥೆಯನ್ನು ಮಾಡುವೆನು."

ವಿಷಣ್ಣವದನನಾಗಿದ್ದ ಶಾಂತನುವು ಮಗನ ಮುಖವನ್ನು ತಲೆಯೆತ್ತಿ ನೋಡಿದನು. ಹತ್ತಿರ ಕುಳಿತುಕೊಳ್ಳುವಂತೆ ಸಂಜ್ಞೆಮಾಡಿ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟು ಹೇಳಿದನು : "ಗಾಂಗೇಯ! ನೀನು ಹೇಳಿದು ದೆಲ್ಲವೂ ನಿಜ. ನಾನು ಒಂದು ಸಂಕಟದಿಂದ ತೊಳಲುತ್ತಿದ್ದೇನೆ. ಅದು ಮಾನಸಿಕವಾದ ವ್ಯಥೆ. ಅದರ ಕಾರಣವನ್ನು ನಿನಗೆ ಹೇಳುವೆನು."

ಕೆಲವು ಕ್ಷಣಗಳು ಕಳೆದುವು. ತಂದೆಯ ಬಾಯಿಂದ ಏನು ಬರು ವುದೋ ಎಂದು ತವಕಿಸುತ್ತಾ ಕುಳಿತಿದ್ದ ಗಂಗಾಸುತನ ತಲೆಯನ್ನು ಶಾಂತನುವು ಸವರುತ್ತಾ ಹೇಳಿದನು :

"ದೇವವ್ರತನೇ! ನಮ್ಮ ವಂಶದ ಉದ್ಧಾರಕ್ಕಾಗಿ ಇರುವವನು ನೀನೊಬ್ಬನೇ. ನೀನಾದರೋ ಯಾವಾಗಲೂ ಧನುರ್ವಿದ್ಯೆಯಲ್ಲಿಯೂ, ಯುದ್ಧದ ವಿಜ್ಞಾನದಲ್ಲಿಯೂ ಆಸಕ್ತನಾಗಿರುವೆ. ಅದೂ ಅಲ್ಲದೇ ಮಾನವ ಶರೀರವು ಸ್ಥಿರವಲ್ಲ.

**ಕಥಂಚಿತ್ತವ ಗಾಙ್ಗೇಯ ವಿಪತ್ತೌ ನಾಸ್ತಿ ನಃ ಕುಲಮ್ ।**
**ಅಸಂಶಯಂ ತ್ವಮೇವೈಕಃ ಶತಾದಪಿ ವರಃ ಸುತಃ ॥೬೫॥**

ಅಪಮೃತ್ಯುವು ಯಾವಾಗಲಾದರೂ ಯಾವ ಕಾರಣದಿಂದಲಾದರೂ ಸಂಭವಿಸಬಹುದು. ಅಂತಹ ಅಪಮೃತ್ಯುವು ದುರ್ದೈವವಶಾತ್ ನಿನಗೆ ಸಂಭವಿಸಿದರೆ ನಾನು ಅಪುತ್ರವಂತನಾಗುತ್ತೇನೆ. ಹಾಗಾಗಿಬಿಟ್ಟರೆ ನಮ್ಮ ಭರತವಂಶವೂ ವಿನಾಶಹೊಂದುವುದು. ಆದರೆ ನೀನೊಬ್ಬನೇ ನನಗೆ ನೂರು

ಮಕ್ಕಳಿಗೆ ಸಮನಾಗಿರುವೆಯೆಂಬುದರಲ್ಲಿ ಸ್ವಲ್ಪವಾದರೂ ಸಂದೇಹವಿಲ್ಲ. ಈ ಕಾರಣದಿಂದಲೇ ನಾನು ಪುನರ್ವಿವಾಹವಾಗಲೂ ಇಚ್ಛಿಸುವುದಿಲ್ಲ. ನೀನು ದೀರ್ಘಾಯುಷ್ಮಂತನಾಗಿ ಬಾಳಿ ನಮ್ಮ ವಂಶವೃಕ್ಷವು ಶಾಖೋಪ ಶಾಖೆಗಳಿಂದ ಬೆಳಗಲಿ–ಎಂಬುದೊಂದೇ ನನ್ನ ಹಿರಿಯಾಸೆಯಾಗಿದೆ."

ಪುನಃ ಎರಡು ನಿಮಿಷಗಳು ಕಳೆದುವು. ದೇವವ್ರತನಿಗೆ ಶಾಂತನುವು ಮಾತು ಮುಗಿಸಿದನೆಂಬ ಭಾವನೆಯುಂಟಾಗಲಿಲ್ಲ. ಇನ್ನೂ ಕೆಲವು ಮಾತು ಗಳನ್ನು ಕೇಳುವುದಿದೆಯೆಂದು ಗಂಭೀರವಾಗಿ ಕುಳಿತಿದ್ದನು. ಅವನ ನಿರೀಕ್ಷಣೆ ಯಂತೆಯೇ ರಾಜನ ಬಾಯಿಂದ ಮತ್ತೂ ಕೆಲವು ನುಡಿಗಳು ಹೊರಬಿದ್ದುವು.

**ಅನಪತ್ಯತೈಕಪುತ್ರತ್ವಮಿತ್ಯಾಹುರ್ಧರ್ಮವಾದಿನಃ ।**
**ಅಗ್ನಿಹೋತ್ರಂ ತ್ರಯೀವಿದ್ಯಾ ಸಂತಾನಮಪಿ ಚಾಕ್ಷಯಮ್ ।**
**ಸರ್ವಾಣ್ಯೇತಾನ್ಯಪತ್ಯಸ್ಯ ಕಲಾಂ ನಾರ್ಹನ್ತಿ ಷೋಡಶೀಮ್ ॥೬೮॥**

"ಆದರೆ ಧರ್ಮವನ್ನು ತಿಳಿದವರು ಒಬ್ಬನೇ ಮಗನ ಇರುವಿಕೆಯು ಮಕ್ಕಳಿಲ್ಲದೆ ಇರುವಿಕೆಗೆ ಸಮಾನವೆಂದೇ ಹೇಳುತ್ತಾರೆ. ಅಗ್ನಿಹೋತ್ರ ಮಾಡುವುದರಿಂದಲೂ, ವೇದ-ವೇದಾಂಗಗಳ ಅಧ್ಯಯನದಿಂದಲೂ ಅನೇಕ ಉತ್ತಮಲೋಕಗಳ ಸಾಧನೆಯಾಗುವುದು ನಿಶ್ಚಯ. ಆದರೆ ಪುತ್ರಪ್ರಾಪ್ತಿಯ ಫಲಕ್ಕೆ ಹೋಲಿಸಿದರೆ ಅವುಗಳಿಂದ ಪ್ರಾಪ್ತವಾಗುವ ಫಲವು ಅತ್ಯಲ್ಪವೆಂದು ಪರಿಗಣಿತವಾಗುತ್ತದೆ. ಅಗ್ನಿಹೋತ್ರಾದಿಗಳಿಂದುಂಟಾಗುವ ಫಲವು ಪುತ್ರಪ್ರಾಪ್ತಿಯ ಫಲದಲ್ಲಿ ಹದಿನಾರನೆಯ ಒಂದು ಭಾಗಕ್ಕೂ ಸಮಾನವಾಗಲಾರದೆಂದು ಧರ್ಮಜ್ಞರು ಹೇಳುವರು. ಈ ವಿಷಯವು ಪ್ರಾಣಿಸಾಮಾನ್ಯಕ್ಕೂ ಅನ್ವಯಿಸುತ್ತದೆ.

**ಯದಪತ್ಯಂ ಮಹಾಪ್ರಾಜ್ಞ ತತ್ರ ಮೇ ನಾಸ್ತಿ ಸಂಶಯಃ ।**
**ಏಷಾ ತ್ರಯೀ ಪುರಾಣಾನಾಂ ದೇವತಾನಾಂ ಚ ಶಾಶ್ವತೀ ॥೬೯॥**

ಕೇವಲ ಪುತ್ರಪ್ರಾಪ್ತಿಯಿಂದಲೇ ಒಬ್ಬನಿಗೆ ಸ್ವರ್ಗಪ್ರಾಪ್ತಿಯುಂಟಾಗುವು ದೆಂಬುದರಲ್ಲಿ ನನಗೆ ಸಂಶಯವಿಲ್ಲ. ಮೂರು ವೇದಗಳ, ಪುರಾಣಗಳ ಮತ್ತು ದೇವತೆಗಳ ಸನಾತನವಾದ ಅಭಿಪ್ರಾಯವೂ ಇದೇ ಆಗಿದೆ. ಆದರೆ ವಂಶವು ಬೆಳೆಯುವ ವಿಷಯವಾಗಿ ನಾನು ಹೆಚ್ಚು ಆಲೋಚಿಸುತ್ತಿದ್ದೇನೆ.

ಭರತಕುಲಕ್ಕೆಲ್ಲಾ ಜ್ಯೋತಿಃಸ್ವರೂಪನಾಗಿರುವ ನೀನು ಅತಿಶೂರನಾಗಿರುವೆ. ಆದರೆ ನೀನು ಶೀಘ್ರಕೋಪಿಯು. ಸರ್ವದಾ ಶಸ್ತ್ರಪಾಣಿಯಾಗಿ ಶಸ್ತ್ರಾಸ್ತ್ರಗಳ ಅಭ್ಯಾಸದಲ್ಲಿಯೇ ಆಸಕ್ತಿಯುಳ್ಳವನಾಗಿರುವೆ. ಆದುದರಿಂದ ಯಾವುದಾದರೂ ಕಾರಣದಿಂದ ಸಂಭವಿಸಬಹುದಾದ ಸಮರದಲ್ಲಿ ನೀನು ಪ್ರಾಣತ್ಯಾಗಮಾಡಲೂಬಹುದೆಂಬುದೊಂದೇ ನನ್ನ ಮಾನಸಿಕಚಿಂತೆಯಾಗಿದೆ. ಹಾಗೇನಾದರೂ ಆಗಿಬಿಟ್ಟರೆ ಭರತಮಹಾವಂಶದ ಗತಿಯೇನು? ಇದೇ ಇಂದಿನ ದುಃಖಕ್ಕೂ ಚಿಂತೆಗೂ ಮೂಲಕಾರಣ, ಮಗು!"

ಶಾಂತನುವಿನ ಮುಖವು ಅಧೋಮುಖವಾಯಿತು. ಪುನಃ ಚಿಂತೆಯಲ್ಲಿ ಮಗ್ನನಾಗಿರುವಂತೆ ಭಾಸವಾಯಿತು. ಮತ್ತಾವ ಮಾತುಗಳನ್ನೂ ತಂದೆಯ ಮುಖದಿಂದ ಕೇಳುವ ಸೂಚನೆಯು ಗಾಂಗೇಯನಿಗೆ ಕಂಡುಬರಲಿಲ್ಲ. "ಹೋಗಿ ಬರುವೆನಪ್ಪ!"–ಎಂದು ಕೇಳಿಯೂ ಕೇಳಿಸದಂತಹ ಸಣ್ಣದನಿಯಲ್ಲಿ ಹೇಳಿ ಅಲ್ಲಿಂದ ತೆರಳಿದನು.

ಸಮಾಲೋಚನಾಮಂದಿರದಲ್ಲಿ ಗಾಂಗೇಯನೊಬ್ಬನೇ ಕುಳಿತು ತಂದೆಯ ಮಾತುಗಳೆಲ್ಲವನ್ನೂ ಸ್ಮೃತಿಪಥಕ್ಕೆ ತಂದುಕೊಂಡು ತನ್ನಲ್ಲಿಯೇ ಆಲೋಚಿಸಿದನು. "ಒಬ್ಬನೇ ಮಗನಿರುವುದು ಮಕ್ಕಳಿಲ್ಲದಿರುವಿಕೆಗೆ ಸಮಾನ. ನೀನೊಬ್ಬನೇ ನನಗೆ ನೂರು ಮಕ್ಕಳಿಗೆ ಸಮಾನ. ಈ ಕಾರಣ ದಿಂದಲೇ ನಾನು ಪುನರ್ವಿವಾಹವಾಗಲೂ ಇಚ್ಛಿಸಲಿಲ್ಲ. ಯಾವುದಾದರೂ ಕಾರಣದಿಂದ ಸಮರದಲ್ಲಿ ನೀನು ಪ್ರಾಣತ್ಯಾಗಮಾಡಿದರೆ..."

"ಇದರ ಅಂತರಾರ್ಥವೇನೋ ಇರಬೇಕಲ್ಲವೇ? ನಮ್ಮ ತಂದೆಯು ಅಜೇಯನು. ನಾನಾದರೋ ಸಕಲಶಸ್ತ್ರಾಸ್ತ್ರಗಳನ್ನೂ ತಿಳಿದು ಧನುರ್ವಿದ್ಯೆಯಲ್ಲಿ ನಿಷ್ಣಾತನಾಗಿರುವೆನು. ನನಗೆ ಸಾವೇ?' – ದೇವವ್ರತನು ಶತಪಥ ತಿರುಗುತ್ತಾ ಯೋಚಿಸಿದನು. ಕಟ್ಟಕಡೆಗೆ ತಂದೆಯು ಹೇಳಿದ ಕಾರಣದ ಹಿಂದೆ ಬೇರೊಂದು ಕಾರಣವೂ ಇರಬಹುದೆಂದು ನಿಶ್ಚಯಿಸಿದನು.

ಒಡನೆಯೇ ಶಾಂತನುವಿನ ಹಿತಚಿಂತಕನಾದ ವೃದ್ಧಮಂತ್ರಿಯನ್ನು ಸಂದರ್ಶಿಸಿ ತಂದೆಯವರ ಮನೋವ್ಯಥೆಗೆ ಕಾರಣವೇನೆಂದು ಕೇಳಿದನು.

ಶಾಂತನುವಿಗೆ ಆತ್ಮೀಯನಾಗಿದ್ದ ವೃದ್ಧಮಂತ್ರಿಯು ಗಂಧವತಿಯ ವಿಷಯ ವನ್ನೂ ಮತ್ತು ಗಂಧವತಿಯನ್ನು ವಿವಾಹಮಾಡಿಕೊಳ್ಳಲು ಅವಳ ತಂದೆಯು ಹಾಕಿದ ನಿಬಂಧನೆಯನ್ನೂ ಸವಿಸ್ತರವಾಗಿ ಗಂಗಾಸುತನಿಗೆ ಹೇಳಿದನು.

ದೇವವ್ರತನಿಗೆ ತಾನು ಆಲೋಚಿಸಿದುದು ಸರಿ ಎನ್ನಿಸಿತು. ಪ್ರಕೃತ ಸಂದರ್ಭದಲ್ಲಿ ತನ್ನ ಕರ್ತವ್ಯವೇನೆಂಬುದನ್ನು ಅವನು ಒಡನೆಯೇ ನಿರ್ಧರಿಸಿ ದನು. ತಂದೆಯ ಮನೋಭೀಷ್ಟವನ್ನು ನೆರವೇರಿಸಲು ಸರ್ವತ್ಯಾಗಕ್ಕೂ ಸಿದ್ಧನಾಗಿ, ವೃದ್ಧಕ್ಷತ್ರಿಯರಿಂದೊಡಗೂಡಿ ದಾಶರಾಜನ ಬಳಿಗೆ ತೆರಳಿ, ತಂದೆಯ ಸಲುವಾಗಿ ಕನ್ಯೆಯನ್ನು ಪ್ರಾರ್ಥಿಸಿದನು.

ಮನೆಗೆ ಬಂದ ರಾಜಪರಿವಾರವನ್ನು ದಾಶರಾಜನು ಸಮ್ಮಾನಿಸಿದನು. ಕುಶಲಪ್ರಶ್ನೆಗಳಾದುವು. ದಾಶರಾಜನು ಗಂಗಾಸುತನ ಆಗಮನದ ಕಾರಣ ವನ್ನು ತಿಳಿದವನಾಗಿ ಸುಖಾಸನದಲ್ಲಿ ರಾಜರ ( ಕ್ಷತ್ರಿಯರ ) ಮಧ್ಯದಲ್ಲಿ ಕುಳಿತಿದ್ದ ಗಾಂಗೇಯನಿಗೆ ಹೇಳಿದನು :

"ಭರತಕುಲತಿಲಕನೇ! ನೀನು ಧನುರ್ವಿದ್ಯಾಪಾರಂಗತರಲ್ಲಿ ಸರ್ವ ಶ್ರೇಷ್ಠನೆನಿಸಿರುವೆ. ಮೇಲಾಗಿ ಶಾಂತನುವಿಗೆ ನೀನು ಏಕಮಾತ್ರಪುತ್ರನಾಗಿರು ವುದರಿಂದ ಸಕಲರಿಗೂ ನಾಥನೆನಿಸಿರುವೆ. ನಿನ್ನೊಡನೆ ಕೆಲವು ಮಾತು ಗಳನ್ನು ನಿವೇದಿಸಲು ಇಚ್ಛಿಸುವೆನು. ಕನ್ಯಾಪಿತೃವು ಇಂದ್ರನೇ ಆಗಿದ್ದರೂ ಶಾಂತನುವಿನಂತಹವನನ್ನು ಅನಾದರಣೆ ಮಾಡಿದಲ್ಲಿ ಪಶ್ಚಾತ್ತಾಪಕ್ಕೆ ಒಳ ಗಾಗುತ್ತಾನೆ. ಈ ಕನ್ಯೆಯು ಆರ್ಯಪುರುಷನೊಬ್ಬನ ಸಂತಾನವು. ಸತ್ಯವತಿಯ ನಿಜಜನಕನು ಉಪರಿಚರವಸುವು. ಅವನು ಪರಾಕ್ರಮದಲ್ಲಿಯೂ, ಧರ್ಮರಕ್ಷಣೆಯಲ್ಲಿಯೂ ನಿಮಗೆ ಸಮಾನನು. ಅವನೇ ನನಗೆ ಅನೇಕ ಸಮಯಗಳಲ್ಲಿ–ಶಾಂತನು ಚಕ್ರವರ್ತಿಯೇ ಸತ್ಯವತಿಗೆ ಅನುರೂಪನಾದ ವರನೆಂದೂ ಹೇಳಿರುವನು. ಋಷಿಶ್ರೇಷ್ಠರಾದ ಅಸಿತರು ಸತ್ಯವತಿಯನ್ನು ಮದುವೆಮಾಡಿಕೊಡುವಂತೆ ಒತ್ತಾಯಪೂರ್ವಕವಾಗಿಯೇ ಪ್ರಾರ್ಥಿಸಿದರು. ಆದರೆ ನಾನು ದೇವರ್ಷಿಗಳಾದ ಅವರ ಪ್ರಾರ್ಥನೆಯನ್ನೂ ತಿರಸ್ಕರಿಸಿಬಿಟ್ಟೆನು. ಆದುದರಿಂದ ಶಾಂತನುವಿಗೆ ನನ್ನ ಮಗಳನ್ನು ಕೊಡುವುದರಲ್ಲಿ ನನಗೆ ಸಂಪೂರ್ಣವಾದ ಸಮ್ಮತಿಯಿದೆ. ಆದರೆ :

**ಕನ್ಯಾಪಿತೃತ್ವಾತ್ಕಿಂಚಿತ್ತು ವಕ್ಷ್ಯಾಮಿ ತ್ವಾಂ ನರಾಧಿಪ ।**
**ಬಲವತ್ಸಪತ್ನತಾಮತ್ರ ದೋಷಂ ಪಶ್ಯಾಮಿ ಕೇವಲಮ್ ॥೮೩॥**

ನಾನು ಕನ್ಯೆಯ ತಂದೆಯಾಗಿರುವುದರಿಂದ ಈ ಮಾತನ್ನು ಹೇಳಲೇ ಬೇಕಾಗಿದೆ. ಈ ಸಂಬಂಧವನ್ನು ಬೆಳೆಸುವುದರಲ್ಲಿ ಒಂದೇ ಒಂದು ದೋಷ ವಿದೆ. ನನ್ನ ಮಗಳು ಸೇರುವ ಕಡೆಯಲ್ಲಿ ಬಲಿಷ್ಠನಾದ ಸವತಿಯ ಮಗ ನೊಬ್ಬನಿರುವನು. ಅದೊಂದೇ ದೋಷ. ನೀನಾದರೋ ಅಸಾಧಾರಣ ಪರಾಕ್ರಮಿಯು. ನಿನ್ನ ವಿರೋಧಿಗಳಾದವರು ಅಸುರರಾಗಲೀ, ಗಂಧರ್ವ ರಾಗಲೀ–ಸುರಕ್ಷಿತರಾಗಿರುವರೆಂದು ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ನನ್ನ ಮಗಳ ಮಕ್ಕಳ ಪಾಡೇನು? ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದರೂ ಸಹೋದರರಲ್ಲಿ ರಾಜ್ಯ-ಕೋಶಗಳ ವಿಷಯವಾಗಿ ವೈಮನಸ್ಯವುಂಟಾಗುವ ಸಂಭವವುಂಟು. ಹೀಗಿರುವಾಗ ಮಹಾಪರಾಕ್ರಮಿಯಾದ ಸಪತ್ನಿಯ ಮಗನೊಬ್ಬನಿರುವಾಗ ನನ್ನ ಮಗಳ ಮಕ್ಕಳು ರಾಜ್ಯವನ್ನು ಪಡೆಯಲು ಸಾಧ್ಯವೇ? ಕನ್ಯೆಯನ್ನು ದಾನಮಾಡಲು ಇಷ್ಟವಿದ್ದರೂ ದಾನ ಮಾಡದಿರುವುದಕ್ಕೆ ಇರುವ ದೋಷವು ಇದೊಂದೇ ಆಗಿರುವುದು, ಗಾಂಗೇಯ!"

ದೇವವ್ರತನು ದಾಶರಾಜನ ಮಾತುಗಳನ್ನು ಕೇಳಿ, ತಂದೆಯ ಹಿತಕ್ಕಾಗಿ ಸಿಂಹಾಸನವನ್ನೇ ತ್ಯಾಗಮಾಡಲು ನಿಶ್ಚಯಿಸಿ, ಅಲ್ಲಿ ನೆರೆದಿದ್ದ ಮಂತ್ರಿಗಳೂ ಮತ್ತು ರಾಜರೂ ಕೇಳುತ್ತಿರುವಂತೆ ದಾಶರಾಜನನ್ನು ಕುರಿತು ಹೇಳಿದನು :

**ಇದಂ ಮೇ ವ್ರತಮಾದತ್ಸ್ವ ಸತ್ಯಂ ಸತ್ಯವತಾಂ ವರ ।**
**ನೈವ ಜಾತೋ ನ ವಾ ಜಾತ ಈದೃಶಂ ವಕ್ತುಮುತ್ಸಹೇತ್ ॥೮೬॥**

**ಏವಮೇತತ್ಕರಿಷ್ಯಾಮಿ ಯಥಾ ತ್ವಮನುಭಾಷಸೇ ।**
**ಯೋಽಸ್ಯಾಂ ಜನಿಷ್ಯತೇ ಪುತ್ರಃ ಸ ನೋ ರಾಜಾ ಭವಿಷ್ಯತಿ ॥೮೭॥**

"ಸತ್ಯವಂತರಲ್ಲಿ ಶ್ರೇಷ್ಠನೇ! ನಾನೀಗ ಮಾಡುವ ಸತ್ಯಪ್ರತಿಜ್ಞೆ ಯನ್ನು ಲಾಲಿಸು. ಇಂತಹ ಪ್ರತಿಜ್ಞೆಯನ್ನು ಮಾಡುವವನು ಹಿಂದೆಯೂ ಹುಟ್ಟಲಿಲ್ಲ, ಮುಂದೆಯೂ ಹುಟ್ಟಲಾರನು. ದಾಶರಾಜ! ನೀನು ಹೇಳಿದು

ದೆಲ್ಲವನ್ನೂ ನಾನು ಕಾರ್ಯರೂಪಕ್ಕೆ ತರುವೆನು. ಎಂದರೆ ನಿನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗನೇ ನಮ್ಮೆಲ್ಲರಿಗೂ ಅರಸನಾಗುವನು. ಆಗಬಹುದೇ?"

"ಸರ್ವಮಾನ್ಯನೇ! ನೀನು ಕೀರ್ತಿವಂತನಾದ ಶಾಂತನುವಿನ ಪ್ರತಿನಿಧಿಯಾಗಿ ಅವನ ಹಿತಾಕಾಂಕ್ಷಿಯಾಗಿ ಬಂದಿರುವೆಯಲ್ಲವೇ? ಹಾಗೆಯೇ ನೀನು ನನ್ನ ಪ್ರತಿನಿಧಿಯೂ ಆಗಿದ್ದು ನನ್ನ ಮಗಳ ಹಿತಚಿಂತನೆಯನ್ನೂ ಸಂಪೂರ್ಣವಾಗಿ ಸಮಾಲೋಚಿಸು. ಹೆಣ್ಣುಮಕ್ಕಳನ್ನು ಹೆತ್ತಿರುವವರು ಸ್ವಾಭಾವಿಕವಾಗಿಯೇ ಇವೆಲ್ಲವನ್ನೂ ಪೂರ್ವಭಾವಿಯಾಗಿ ಯೋಚಿಸಿಯೇ ಹೇಳುವರು. ಸತ್ಯವತಿಯ ಹಿತಕ್ಕಾಗಿ ಈ ಸಭಾಮಧ್ಯದಲ್ಲಿ ನೀನು ಮಾಡಿರುವ ಪ್ರತಿಜ್ಞೆಯು ನಿಶ್ಚಯವಾಗಿಯೂ ನಿನಗೆ ಅನುರೂಪವಾಗಿಯೇ ಇದೆ. ಈ ಪ್ರತಿಜ್ಞೆಯನ್ನು ಉಲ್ಲಂಘಿಸುವೆಯೆಂಬ ಸಂಶಯದ ಲೇಶವೂ ನನಗಿರುವುದಿಲ್ಲ. ಆದರೆ ನಿನ್ನ ಮಕ್ಕಳೂ ನಿನ್ನ ಪ್ರತಿಜ್ಞೆಯನ್ನೇ ಅನುಸರಿಸುವರೇ?"

ದೇವವ್ರತನು ದಾಶರಾಜನ ಮಾತುಗಳನ್ನು ಕೇಳಿ ಸ್ವಲ್ಪ ಹೊತ್ತು ಯೋಚಿಸಿದನು. ಅವನ ಅಂತರಂಗವೇನೆಂಬುದು ಗಂಗಾಸುತನಿಗೆ ಸ್ಪಷ್ಟವಾಗಿ ತಿಳಿಯಿತು. ತನ್ನ ಕರ್ತವ್ಯವೇನೆಂಬುದನ್ನೂ ಒಡನೆಯೇ ನಿರ್ಧರಿಸಿಬಿಟ್ಟನು. ತಂದೆಗೆ ಹಿತವುಂಟುಮಾಡುವುದೇ ದೇವವ್ರತನ ಏಕೈಕವ್ರತವಾಗಿತ್ತು. ತಲೆಯೆತ್ತಿ ಸುತ್ತಲೂ ನೋಡಿ ಗಂಭೀರವದನನಾಗಿ ದಾಶರಾಜನಿಗೆ ಹೇಳಿದನು :

ದಾಶರಾಜ! ಈ ಮೊದಲೇ ತಂದೆಗೆ ಪ್ರಿಯವನ್ನುಂಟುಮಾಡಲು ನಾನು ಸಿಂಹಾಸನಪರಿತ್ಯಾಗಮಾಡಿದ ಪ್ರತಿಜ್ಞೆಯನ್ನು ನೀವೆಲ್ಲರೂ ಕೇಳಿರುವಿರಲ್ಲವೇ? ಈಗ ನಾನು ಸಕಲರಾಜರೂ ಕೇಳುತ್ತಿರುವಂತೆ ನನ್ನ ಮಕ್ಕಳಿಂದುಂಟಾಗಬಹುದಾದ ತೊಂದರೆಯನ್ನೂ ನಿವಾರಿಸಲು ಮತ್ತೊಂದು ಪ್ರತಿಜ್ಞೆಯನ್ನೂ ಮಾಡುವೆನು.

**ಅದ್ಯಪ್ರಭೃತಿ ಮೇ ದಾಶ ಬ್ರಹ್ಮಚರ್ಯಂ ಭವಿಷ್ಯತಿ ।**
**ಅಪುತ್ರಸ್ಯಾಪಿ ಮೇ ಲೋಕಾ ಭವಿಷ್ಯನ್ತ್ಯಕ್ಷಯಾ ದಿವಿ ॥೯೬॥**

ದಾಶರಾಜ! ಇಂದಿನಿಂದ ನಾನು ನನ್ನ ಆಯುಷ್ಯವೆಲ್ಲವನ್ನೂ ಬ್ರಹ್ಮಚರ್ಯದಲ್ಲಿಯೇ ಕಳೆಯುವೆನು. ಇದರಿಂದ ನಾನು ಅಪುತ್ರವಂತನಾಗುವೆ

ನಾದರೂ ನನಗೆ ಅಕ್ಷಯವಾದ ಉತ್ತಮಲೋಕಗಳ ಪ್ರಾಪ್ತಿಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ."

ದೇವವ್ರತನ ನುಡಿಗಳು ಕಂಚಿನ ಧ್ವನಿಯಂತೆ ಆ ಮಹಾಸಭೆಯಲ್ಲಿ ಪ್ರತಿಧ್ವನಿತವಾದುವು. ದಾಶರಾಜನ ಶರೀರವು ಆನಂದದಿಂದ ಉಬ್ಬಿ



ಹೋಯಿತು. ರೋಮಕೋಟಿಗಳು ನಿಮಿರಿ ನಿಂತುವು. 'ದದಾನಿ' ಎಂಬ ಶಬ್ದವು ಪ್ರಯತ್ನವಿಲ್ಲದೆಯೇ ದಾಶರಾಜನ ಮುಖಾರವಿಂದದಿಂದ ಹೊರ ಬಂದಿತು.

ದೇವವ್ರತನ ಧೀರಪ್ರತಿಜ್ಞೆಯನ್ನು ಕೇಳಿ ದೇವತೆಗಳೂ, ಋಷಿಗಳೂ, ಅಪ್ಸರೆಯರೂ ಹೂವಿನ ಮಳೆಗರೆದರು. ತಂದೆಯ ಹಿತಕ್ಕಾಗಿ ತನ್ನ ಜೀವ

ಮಾನವನ್ನೇ ಬ್ರಹ್ಮಚರ್ಯದಲ್ಲಿ ಕಳೆಯುತ್ತೇನೆಂದು ಭಯಂಕರವಾದ ಪ್ರತಿಜ್ಞೆಮಾಡಿದ ಗಾಂಗೇಯನಿಗೆ 'ಭೀಷ್ಮ'ನೆಂಬ ಬಿರುದನ್ನಿತ್ತರು. ಅಂದಿ ನಿಂದವನು ಭೀಷ್ಮನೇ ಆದನು.

ಅನಂತರ ಭೀಷ್ಮನು ಸತ್ಯವತಿಯ ಬಳಿಗೆ ಹೋಗಿ ನಮಸ್ಕರಿಸಿ– "ತಾಯೇ! ರಥದಲ್ಲಿ ಕುಳಿತುಕೋ ; ನಮ್ಮ ಮನೆಗಿನ್ನು ಹೋಗೋಣ" ಎಂದು ಬದ್ಧಾಂಜಲಿಯಾಗಿ ಬೇಡಿದನು.

ಪುಷ್ಪರಥದಲ್ಲಿ ಗಂಧವತಿಯನ್ನು ಕುಳ್ಳಿರಿಸಿಕೊಂಡು ಚತುರಂಗಬಲ ಸಮೇತನಾಗಿ ಮಂಗಳವಾದ್ಯಗಳೊಡನೆ ಭೀಷ್ಮನು ಪಟ್ಟಣವನ್ನು ಸೇರಿದನು. ಶಾಂತನುವಿನ ಸಮೀಪಕ್ಕೆ ಸತ್ಯವತಿಯನ್ನು ಕರೆದೊಯ್ದು ನಡೆದ ವೃತ್ತಾಂತ ಗಳೆಲ್ಲವನ್ನೂ ವಿವರವಾಗಿ ತಿಳಿಸಿದನು. ಅವನ ದುಷ್ಕರವಾದ ಪ್ರತಿಜ್ಞೆಯನ್ನು ಕೇಳಿದ ರಾಜರೆಲ್ಲರೂ ಭೀಷ್ಮನನ್ನು ಬಹುವಾಗಿ ಶ್ಲಾಘಿಸಿದರು. ಏಕಕಂಠ ದಿಂದ–'ಇವನು ನಿಜವಾಗಿಯೂ ಭೀಷ್ಮನೇ ಆಗಿದ್ದಾನೆ'–ಎಂದು ಘೋಷಿಸಿ ದರು. ಶಾಂತನುವು ಮಗನನ್ನು ಬಾಚಿ ತಬ್ಬಿಕೊಂಡು ಆನಂದಬಾಷ್ಪಗಳಿಂದ ಅಭಿಷೇಚಿಸಿದನು. "ಮಗನೇ! ನೀನಿಂದು ಮಾಡಿದ ಸರ್ವತ್ಯಾಗಕ್ಕೆ ಅನು ರೂಪವಾದ ವರವೊಂದನ್ನು ಕೊಡುವೆನು. ನೀನು ಇಚ್ಛಾಮರಣಿಯಾಗು.

**ನ ತೇ ಮೃತ್ಯುಃ ಪ್ರಭವಿತಾ ಯಾವಜ್ಜೀವಿತುಮಿಚ್ಛಸಿ ।**
**ತ್ವತ್ತೋ ಹ್ಯನುಜ್ಞಾಂ ಸಂಪ್ರಾಪ್ಯ ಮೃತ್ಯುಃ ಪ್ರಭವಿತಾನಘ ॥೧೦೩॥**

ನೀನು ಬದುಕಲು ಇಚ್ಛಿಸುವವರೆಗೂ ಮೃತ್ಯುವು ನಿನ್ನನ್ನು ಸಮೀಪಿ ಸುವುದಿಲ್ಲ. ಅನಘನೇ! ನಿನ್ನ ಅನುಜ್ಞೆಯನ್ನು ಪಡೆದನಂತರವೇ ಮೃತ್ಯುವು ನಿನ್ನ ಪ್ರಾಣಗಳನ್ನು ಅಪಹರಿಸಬಲ್ಲುದು."

ಶುಭಮುಹೂರ್ತದಲ್ಲಿ ಶಾಂತನು-ಸತ್ಯವತಿಯರ ವಿವಾಹವು ವಿಜೃಂಭಣೆಯಿಂದ ನೆರವೇರಿತು"

೧೦೦ನೆಯ ಅಧ್ಯಾಯವು ಮುಗಿಯಿತು.

೧೦೧ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಚಿತ್ರಾಂಗದ-ವಿಚಿತ್ರವೀರ್ಯರ ಜನನ : ಶಾಂತನು-ಚಿತ್ರಾಂಗದರ ನಿಧನ : ವಿಚಿತ್ರವೀರ್ಯನಿಗೆ ರಾಜ್ಯಾಭಿಷೇಕ

"ಜನಮೇಜಯ! ಶಾಂತನುವು ಸತ್ಯವತಿಯನ್ನು ವಿಧಿಪೂರ್ವಕವಾಗಿ ಪಾಣಿಗ್ರಹಣಮಾಡಿಕೊಂಡು ಅವಳೊಡನೆ ಅನೇಕವರ್ಷಗಳ ಕಾಲ ಸುಖ ದಿಂದ ಕಳೆದನು. ಶಾಂತನುವಿನ ಆನಂದಮಯವಾದ ಸಂಸಾರಸಾಗರದಲ್ಲಿ ಎರಡು ಪುತ್ರರತ್ನಗಳು ಉದಯಿಸಿದುವು. ಅವರಲ್ಲಿ ಚಿತ್ರಾಂಗದನೇ ಹಿರಿಯ ಮಗನು. ಎರಡನೆಯವನಾದ ವಿಚಿತ್ರವೀರ್ಯನು ಬಾಲಕನಾಗಿದ್ದಾಗಲೇ ಶಾಂತನುವು ತನ್ನ ಪಾರ್ಥಿವಶರೀರವನ್ನು ತೊರೆದನು.

ಸತ್ಯವತಿಯ ಅಭಿಪ್ರಾಯದಂತೆ ನಡೆದುಕೊಳ್ಳುತ್ತಿದ್ದ ಭೀಷ್ಮನು ಚಿತ್ರಾಂಗದನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಚಿತ್ರಾಂಗದನು ಬಹಳ ಪರಾಕ್ರಮಿಯಾಗಿದ್ದು ತನ್ನ ಭುಜಬಲ-ಪರಾಕ್ರಮಗಳಿಂದ ಪ್ರಪಂಚದ ಸಕಲರಾಜರನ್ನೂ ಗೆದ್ದನು. ತನಗೆ ಸಮಾನರಾದ ಪರಾಕ್ರಮಿಗಳು ಭೂಮಿ ಯಲ್ಲಿಯೇ ಇಲ್ಲವೆಂಬ ಭಾವನೆಯು ಅವನಲ್ಲಿ ಮೂಡಿತ್ತು. ದೇವ-ದಾನವ-ರಾಕ್ಷಸರಲ್ಲಿ ತನಗೆ ಸಮಾನರು ಯಾರೂ ಇಲ್ಲವೆಂದೇ ಭಾವಿಸಿದನು.

ಚಿತ್ರಾಂಗದನೆಂಬ ಹೆಸರನ್ನು ಹೊಂದಿದ್ದ ಗಂಧರ್ವರಾಜನಿಗೆ ಅವನ ದರ್ಪವನ್ನು ಕಂಡು ಅಸಹನೆಯುಂಟಾಯಿತು. ತನ್ನ ಹೆಸರನ್ನು ಹೊಂದಿದ್ದು ದನ್ನೇ ವ್ಯಾಜವನ್ನಾಗಿಟ್ಟುಕೊಂಡು ಕುರುರಾಜನನ್ನು ಯುದ್ಧಕ್ಕೆ ಆಹ್ವಾನಿಸಿ ದನು. ಸರ್ವರನ್ನೂ ನಿರ್ಲಕ್ಷಿಸಿದ್ದ ಚಿತ್ರಾಂಗದನಿಗೆ ಗಂಧರ್ವನ ವಿಷಯ ದಲ್ಲಿಯೂ ಅಲಕ್ಷ್ಯವೇ ಇದ್ದಿತಾದ ಕಾರಣ ಯುದ್ಧದ ಆಹ್ವಾನವನ್ನು ಅವನು ಆದರದಿಂದಲೇ ಸ್ವೀಕರಿಸಿದನು. ಕುರುಮುಖ್ಯನಿಗೂ-ಗಂಧರ್ವನಿಗೂ ಕುರು ಕ್ಷೇತ್ರದಲ್ಲಿ ಸರಸ್ವತೀನದಿಯ ತೀರದಲ್ಲಿ ಮೂರು ವರ್ಷಗಳ ಕಾಲ ಭಯಂಕರ ವಾದ ಯುದ್ಧವಾಯಿತು. ಆದರೆ ಕುರುರಾಜನು ಎಷ್ಟೇ ಪರಾಕ್ರಮಿಯಾಗಿ ದ್ದರೂ ಯುದ್ಧದಲ್ಲಿ ಮಾಯಾಪ್ರಕ್ರಿಯೆಯನ್ನು ತಿಳಿದವನಾಗಿರಲಿಲ್ಲ. ಗಂಧರ್ವನು ಮಾಯಾಯುದ್ಧದಿಂದ ಕುರುಭೂಪನನ್ನು ಮೃತ್ಯುವಿಗೀಡು ಮಾಡಿ ತನ್ನ ಲೋಕಕ್ಕೆ ತೆರಳಿದನು.

* ಭೀಷ್ಮನು ಚಿತ್ರಾಂಗದನ ಉತ್ತರಕ್ರಿಯೆಗಳನ್ನು ಯಥಾವಿಧಿಯಾಗಿ ನೆರವೇರಿಸಿದನು. ಬಾಲಕನಾಗಿದ್ದ ವಿಚಿತ್ರವೀರ್ಯನನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿದನು. ವಿಚಿತ್ರವೀರ್ಯನು ಬಾಲಕನಾಗಿದ್ದರೂ ಭೀಷ್ಮನ ಸಲಹೆ ಯಂತೆ ಧರ್ಮದಿಂದ ರಾಜ್ಯವಾಳುತ್ತಿದ್ದನು. ವಿಚಿತ್ರವೀರ್ಯನಿಗೆ ಭೀಷ್ಮನಲ್ಲಿ ಅಪಾರವಾದ ಭಕ್ತಿ-ಗೌರವಗಳಿದ್ದಂತೆಯೇ ಭೀಷ್ಮನೂ ಸಹ ಬಹಳ ವಿಧೇಯತೆಯಿಂದ ವರ್ತಿಸುತ್ತಿದ್ದ ವಿಚಿತ್ರವೀರ್ಯನ ಹಿತರಕ್ಷಣೆಯಲ್ಲಿ ಜಾಗರೂಕನಾಗಿರುತ್ತಿದ್ದನು."

೧೦೧ನೆಯ ಅಧ್ಯಾಯವು ಮುಗಿಯಿತು.

೧೦೨ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಭೀಷ್ಮನಿಂದ ಕಾಶೀರಾಜಪುತ್ರಿಯರ ಹರಣ : ಶಾಲ್ವನ ಪರಾಜಯ : ವಿಚಿತ್ರವೀರ್ಯನ ವಿವಾಹ : ನಿಧನ

"ಜನಮೇಜಯ! ವಿಚಿತ್ರವೀರ್ಯನು ಪ್ರಾಪ್ತವಯಸ್ಕನಾಗುವ ವರೆಗೂ ಭೀಷ್ಮನ ರಾಜ್ಯಭಾರವೇ ನಡೆಯುತ್ತಿತ್ತು. ರಾಜ್ಯಾಡಳಿತದ ವಿಷಯದಲ್ಲಿ ಪ್ರವೇಶಿಸಲು ಭೀಷ್ಮನಿಗೆ ಇಚ್ಛೆಯಿರದಿದ್ದರೂ ತಾಯಿಯಾದ ಸತ್ಯವತಿಯ ಆಜ್ಞೆಯಂತೆ ಆ ಕಾರ್ಯವನ್ನು ಭೀಷ್ಮನು ನಡೆಸಲೇಬೇಕಾ ಗಿತ್ತು. ವಿಚಿತ್ರವೀರ್ಯನು ಪ್ರಾಪ್ತವಯಸ್ಕನಾದೊಡನೆಯೇ ಅವನಿಗೆ ವಿವಾಹಮಾಡಲು ಭೀಷ್ಮನು ಯೋಚಿಸಿದನು. ಆ ಸಮಯಕ್ಕೆ ಸರಿಯಾಗಿ ತ್ರಿಲೋಕಸುಂದರಿಯರೆನಿಸಿದ್ದ, ಅಪ್ಸರೋಪಮೆಯರಾದ ಕಾಶೀರಾಜನ ಮೂವರು ಹೆಣ್ಣುಮಕ್ಕಳು ಸ್ವಯಂವರಮಾಡಿಕೊಳ್ಳುವರೆಂಬ ವಾರ್ತೆಯು

---

* ಆ ಯುದ್ಧದಲ್ಲಿ ಗಂಧರ್ವನನ್ನು ಪರಾಜಿತನನ್ನಾಗಿ ಮಾಡಲು ಭೀಷ್ಮನೇಕೆ ಪ್ರವೇಶಿಸಲಿಲ್ಲವೆಂಬ ಸಂದೇಹವುಂಟಾಗಬಹುದಲ್ಲವೆ? ಗಂಧರ್ವನಿಗೂ ಚಿತ್ರಾಂಗದನಿಗೂ ಉಂಟಾದ ಸಮರವು ದೇಶ-ಕೋಶಾದಿಗಳಿಗೆ ಸಂಬಂಧಿಸಿದುದಲ್ಲ. ಕೇವಲ ವೈಯ್ಯಕ್ತಿಕ ವಾದುದು. ಚಿತ್ರಾಂಗದ ಎಂಬ ಹೆಸರಿನ ಇಬ್ಬರು ಚತುರ್ದಶಭುವನಗಳಲ್ಲಿ ಎಲ್ಲಿಯೂ ಇರಕೂಡದೆಂಬ ಛಲದಿಂದ ಯುದ್ಧಮಾಡಿದರು. ದ್ವಂದ್ವಯುದ್ಧದಲ್ಲಿ ಮೂರನೆಯವರ ಪ್ರವೇಶವು ಧರ್ಮವಲ್ಲ. ಆದುದರಿಂದ ಆ ಯುದ್ಧದಲ್ಲಿ ಭೀಷ್ಮನ ಪ್ರವೇಶವು ಚಿತ್ರಾಂಗದನಿಗೂ ಸಹ್ಯವಾಗದೇ ಇದ್ದಿರಬಹುದು.

ಭೀಷ್ಮನಿಗೂ ತಿಳಿಯಿತು. ಮಹಾಪರಾಕ್ರಮಿಯಾದ ಭೀಷ್ಮನು ಸತ್ಯವತಿಯ ಅನುಜ್ಞೆಯನ್ನು ಪಡೆದು ರಥದಲ್ಲಿ ಕುಳಿತು ಏಕಾಕಿಯಾಗಿ ವಾರಣಾಸಿಗೆ ತೆರಳಿದನು.

ಅಸಂಖ್ಯಾತರಾಜರು ಪ್ರಪಂಚದ ಮೂಲೆ-ಮೂಲೆಗಳಿಂದಲೂ ಸ್ವಯಂವರಕ್ಕೆ ಆಗಮಿಸಿದ್ದರು. ಸ್ವಯಂವರಮಂಟಪವು ತಳಿರು-ತೋರಣ ಗಳಿಂದ ಅಲಂಕೃತವಾಗಿತ್ತು. ರಾಜರೆಲ್ಲರೂ ರತ್ನಸಿಂಹಾಸನಗಳಲ್ಲಿ ನಾನಾ ವಿಧವಾದ ಆಭರಣಗಳಿಂದಲೂ ವಸ್ತ್ರಗಳಿಂದಲೂ ಅಲಂಕೃತರಾಗಿ ಠೀವಿ ಯಿಂದ ಕುಳಿತಿದ್ದರು. ಮೂವರಲ್ಲಿ ಒಬ್ಬಳಾದರೂ ತಮ್ಮನ್ನು ವರಿಸಬಹುದೆಂಬ ಆಶಾಭಾವನೆಯು ಎಲ್ಲರ ಮುಖಗಳಲ್ಲಿಯೂ ಎದ್ದು ಕಾಣುತ್ತಿತ್ತು. ಅಂಬೆ, ಅಂಬಿಕೆ, ಅಂಬಾಲಿಕೆಯರು ಸ್ವಯಂವರಮಾಲೆಗಳನ್ನು ಹಿಡಿದು, ಸ್ವಯಂವರ ಮಂಟಪವನ್ನು ಪ್ರವೇಶಿಸಿ, ಒಬ್ಬೊಬ್ಬ ರಾಜನ ಮುಂದೆ ನಿಂತಾಗಲೂ ರಾಜಭಟರು ಆಯಾ ರಾಜರ ಕುಲ-ಗೋತ್ರ-ಕೀರ್ತಿ-ಪ್ರತಿಷ್ಠೆಗಳನ್ನು ಹಾಡುತ್ತಿದ್ದರು. ಭೀಷ್ಮನ ಮುಂದೆ ಬಂದು ನಿಂತಾಗ ಪರಮಶೋಭನೆಯರಾದ ಆ ಮೂವರು ರಾಜಕನ್ಯೆಯರೂ ಅವನನ್ನು ನೋಡಿ, ವೃದ್ಧನಾದವನೊಬ್ಬನು ತಮ್ಮನ್ನು ವರಿಸಲು ಬಂದಿರುವುದನ್ನು ಕಂಡು ಉದ್ವಿಗ್ನರಾಗಿ ದೂರಸರಿದು ನಿಂತರು.

"ಭೀಷ್ಮನೇಕೆ ಇಲ್ಲಿಗೆ ಬಂದಿದ್ದಾನೆ? ಇವನ ಕೂದಲು ನೆರೆತು ಹೋಗಿದೆ. ಶರೀರದ ಚರ್ಮವು ಸುಕ್ಕಿಹೋಗಿದೆ. ಇಂತಹವನಿಗೂ ಹೆಣ್ಣಿನ ಮೇಲೆ ಆಸೆಯೇ?"

"ಮೇಲಾಗಿವನು ಧರ್ಮಾತ್ಮನೆಂದೂ ಪ್ರಖ್ಯಾತನಾಗಿದ್ದಾನೆ. ಮದುವೆ ಯನ್ನೇ ಮಾಡಿಕೊಳ್ಳುವುದಿಲ್ಲವೆಂದು ಪ್ರತಿಜ್ಞೆಯನ್ನೂ ಮಾಡಿರುವನಂತೆ. ಇಂತಹವನಿಂದು ಲಜ್ಜಾಹೀನನಾಗಿ ಇಲ್ಲಿಗೇಕೆ ಬಂದನು?"

"ಇವನ ಪ್ರತಿಜ್ಞೆಯು ನಿರರ್ಥಕವಾಯಿತಲ್ಲವೇ? ಭೀಷ್ಮನು ನಿತ್ಯ ಬ್ರಹ್ಮಚಾರಿಯೆಂಬ ಹೆಸರು ಮಾತ್ರ ಎಲ್ಲ ಲೋಕಗಳಲ್ಲಿಯೂ ಹರಡಿಬಿಟ್ಟಿದೆ. ತನಗೆ ಪ್ರಾಪ್ತವಾಗಿರುವ ಖ್ಯಾತಿಗಾದರೂ ಬೆಲೆಕೊಡಬಾರದೇ? ಈ ಯುವಕ

ರಾಜರ ಮಧ್ಯದಲ್ಲಿ ಲಜ್ಜಾಹೀನನಾಗಿ ಇವನು ಹೇಗೆ ತಾನೇ ಕುಳಿತುಕೊಂಡನು?"

"ಆಸೆಯೆಂಬುದು ಯಾರಿಗೂ ತಪ್ಪಿದ್ದಲ್ಲ. ವೃದ್ಧರಾದಮಾತ್ರಕ್ಕೆ ಆಸೆಯಿರಕೂಡದೆಂಬ ನಿಯಮವಿಲ್ಲ. ಆಸೆಯು ಮಿತಿಮೀರಿದರೆ ತಾನು ಮಾಡಿದ ಪ್ರತಿಜ್ಞೆಯೂ ಮರೆತೇಹೋಗಬಹುದು. ಆದರೆ ತಾನು ಇಚ್ಛಿಸಿದ ಮಾತ್ರಕ್ಕೆ ದೇವಕನ್ಯೆಯರಂತೆಯೇ ಅನುಪಮವಾದ ಸೌಂದರ್ಯದಿಂದ ಬೆಳಗುತ್ತಿರುವ ಈ ಕನ್ಯೆಯರು ತನ್ನನ್ನು ವಿವಾಹವಾಗುವರೇ?– ಎಂಬುದನ್ನಾದರೂ ಕ್ಷಣಕಾಲ ಯೋಚಿಸಬೇಡವೇ?"

ಇವೇ ಮುಂತಾಗಿ ತನ್ನನ್ನು ನೋಡಿ ನಗುತ್ತಾ ಮಾತನಾಡಿಕೊಳ್ಳುತ್ತಿದ್ದ ಕ್ಷತ್ರಿಯರ ಪಿಸುಮಾತುಗಳನ್ನು ಕೇಳಿ, ಭೀಷ್ಮನು ತನ್ನ ಸೋದರನಿಗೆ ವಿವಾಹ ಮಾಡುವ ಸಲುವಾಗಿ ತಾನು ಬಂದಿರುವೆನೆಂದು ರಾಜಸಭೆಯಲ್ಲಿ ಘೋಷಿಸಿದನು. ಒಡನೆಯೇ ಆ ಮೂವರು ರಾಜಕುಮಾರಿಯರನ್ನೂ ಸ್ವಯಂವರ ಮಾಲೆಗಳೊಡನೆ ತನ್ನ ರಥವನ್ನೇರುವಂತೆ ನಿರ್ದೇಶಿಸಿದನು. ಅನಿರೀಕ್ಷಿತ ಘಟನೆಯ ಪರಿಣಾಮವಾಗಿ ಮುಂದೇನು ಮಾಡಬೇಕೆಂಬುದನ್ನರಿಯದ ರಾಜಕುಮಾರಿಯರು ಮಂತ್ರಮುಗ್ಧವಾದ ಹಾವಿನಂತೆ ಭೀಷ್ಮನ ರಥವೇರಿದರು.

ಅನಂತರ ಭೀಷ್ಮನು ತಾನೂ ರಥದಲ್ಲಿ ಕುಳಿತು ಅಲ್ಲಿ ಸೇರಿದ್ದ ಸಾವಿರಾರು ಮಂದಿ ರಾಜರನ್ನು ಕುರಿತು ಹೇಳಿದನು : "ರಾಜ-ಮಹಾರಾಜರೇ! ನಾನು ಹೇಳುವುದನ್ನು ಲಾಲಿಸಿರಿ. ಧರ್ಮಜ್ಞರಿಂದ ವಿವಾಹಪ್ರಕ್ರಿಯೆಯು ನಾನಾವಿಧವಾಗಿ ಹೇಳಲ್ಪಟ್ಟಿದೆ.

**ಆಹೂಯ ದಾನಂ ಕನ್ಯಾನಾಂ ಗುಣವದ್ಭ್ಯಃ ಸ್ಮೃತಂ ಬುಧೈಃ ।**
**ಅಲಂಕೃತ್ಯ ಯಥಾಶಕ್ತಿ ಪ್ರದಾಯ ಚ ಧನಾನ್ಯಪಿ ।**
**ಪ್ರಯಚ್ಛನ್ತ್ಯಪರೇ ಕನ್ಯಾಂ ಮಿಥುನೇನ ಗವಾಮಪಿ ॥೧೩॥**
**ವಿತ್ತೇನ ಕಥಿತೇನಾನ್ಯೇ ಬಲೇನಾನ್ಯೇಽನುಮಾನ್ಯ ಚ ।**
**ಪ್ರಮತ್ತಾಮುಪಯನ್ತ್ಯನ್ಯೇ ಸ್ವಯಮನ್ಯೇ ಚ ವಿನ್ದತೇ ॥೧೪॥**

**ಆರ್ಷಂ ವಿಧಿಂ ಪುರಸ್ಕೃತ್ಯ ದಾರಾನ್ವಿನ್ದತಿ ಚಾಪರೇ ।**
**ಅಷ್ಟಮಂ ತಮಥೋ ವಿತ್ತ ವಿವಾಹಂ ಕವಿಭಿರ್ವೃತಮ್ ॥೧೫॥**

**ಸ್ವಯಂವರಂ ತು ರಾಜನ್ಯಾಃ ಪ್ರಶಂಸನ್ತ್ಯುಪಯಾನ್ತಿ ಚ ।**
**ಪ್ರಮಥ್ಯ ತು ಹೃತಾಮಾಹುರ್ಜ್ಯಾಯಸೀಂ ಧರ್ಮವಾದಿನಃ ॥೧೬॥**

ಸರ್ವಗುಣಸಂಪನ್ನನಾದ ವರನನ್ನು ಆಹ್ವಾನಿಸಿ ಸರ್ವಾಲಂಕಾರ ಭೂಷಿತೆಯಾದ ಕನ್ಯೆಯನ್ನು ಯಥಾವಿಧಿಯಾಗಿ ದಾನಕೊಡುವುದು ಕೆಲವರ ಸಂಪ್ರದಾಯವಾಗಿದೆ ( ಬ್ರಾಹ್ಮ ). ಎರಡು ಹಸುಗಳನ್ನು ಕನ್ಯಾಶುಲ್ಕವನ್ನಾಗಿ ತೆಗೆದುಕೊಂಡು ಪಾಣಿಗ್ರಹಣಮಾಡಿಕೊಡುವ ಸಂಪ್ರದಾಯವೂ ಕೆಲವರಲ್ಲಿದೆ (ಆರ್ಷ). ಕೆಲವರು ನಿಶ್ಚಿತಧನವನ್ನು ಸ್ವೀಕರಿಸಿ ಕನ್ಯಾದಾನವನ್ನು ಮಾಡುತ್ತಾರೆ (ಆಸುರ). ಕೆಲವರು ಕನ್ಯೆಯನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋಗಿಯೂ ಪಾಣಿಗ್ರಹಣ ಮಾಡಿಕೊಳ್ಳುತ್ತಾರೆ (ರಾಕ್ಷಸ). ಕೆಲವು ವಿವಾಹಗಳು ಕನ್ಯಾ-ವರರ ಪರಸ್ಪರ ಒಪ್ಪಿಗೆಯಿಂದಲೇ ನಡೆಯುವುದು. (ಸ್ವಯಂವರ ಅಥವಾ ಗಾಂಧರ್ವ). ಕೆಲವರು ಅಚೇತನಳಾದ ಕನ್ಯೆಯನ್ನು ಬಲಾತ್ಕಾರವಾಗಿ ವಿವಾಹವಾಗುವರು (ಪೈಶಾಚ). ಕೆಲವೆಡೆಗಳಲ್ಲಿ ಕನ್ಯೆಯ ಮಾತಾ-ಪಿತೃಗಳು ತಮಗೆ ಒಪ್ಪಿಗೆಯಾದ ವರನಿಗೆ ಮಗಳನ್ನು ಮದುವೆ ಮಾಡಿಕೊಡುವರು ( ಪ್ರಾಜಾಪತ್ಯ ). ಯಜ್ಞ-ಯಾಗಾದಿಗಳಲ್ಲಿ ಸಹಕರಿಸಿ ದವರಿಗೆ ಕನ್ಯೆಯನ್ನು ಪಾರಿತೋಷಿಕವಾಗಿಯೂ ಕೊಡುವ ಸಂಪ್ರದಾಯವಿದೆ (ದೈವ). ಈ ವಿಧವಾದ ಎಂಟು ರೀತಿಯ ವಿವಾಹಗಳಲ್ಲಿ ರಾಕ್ಷಸ ಸಂಪ್ರದಾಯ ವನ್ನು ವೀರರಾದವರು ಪ್ರಶಂಸಿಸುತ್ತಾರೆ. ರಾಜರು ಐದನೆಯದಾದ ಸ್ವಯಂ ವರ ಅಥವಾ ಗಾಂಧರ್ವಪದ್ಧತಿಯ ವಿವಾಹವನ್ನು ಪ್ರಶಂಸಿಸುವರು ಮತ್ತು ಅದರಂತೆಯೇ ಆಚರಿಸುವರು. ಆದರೂ ಸ್ವಯಂವರಕಾಲದಲ್ಲಿ ಸೇರಿದ ಎಲ್ಲ ರಾಜರನ್ನೂ ಪರಾಜಿತರನ್ನಾಗಿ ಮಾಡಿ ಪಡೆಯುವ ಭಾರ್ಯೆಯು ಅತಿಪ್ರಿಯ ಳಾಗುವಳೆಂದು ಧರ್ಮಜ್ಞರು ಹೇಳುತ್ತಾರೆ. ಆದುದರಿಂದ ಈ ಮೂವರು ಕನ್ಯೆಯರನ್ನೂ ನಾನು ಬಲಾತ್ಕಾರದಿಂದ ನಿಮ್ಮೆಲ್ಲರ ಸಮ್ಮುಖದಲ್ಲಿಯೇ ಸೆಳೆದೊಯ್ಯುತ್ತಿದ್ದೇನೆ. ಈ ಸಮಯದಲ್ಲಿ ಸಾಧ್ಯವಿದ್ದರೆ ನೀವೆಲ್ಲರೂ ಸೇರಿ ನನ್ನನ್ನು ಪರಾಜಿತನನ್ನಾಗಿ ಮಾಡಿ ಕನ್ಯೆಯರನ್ನು ಹಿಂದಕ್ಕೆ ಪಡೆಯಿರಿ. ಇಲ್ಲದಿದ್ದರೆ ಪರಾಜಿತರಾಗಿ ನಿಮ್ಮ ದೇಶಗಳಿಗೆ ಹಿಂದಿರುಗಿರಿ. ನಾನಂತೂ ಯುದ್ಧಮಾಡಿಯೇ ತೀರಬೇಕೆಂಬ ದೃಢನಿಶ್ಚಯದಿಂದ ನಿಂತಿದ್ದೇನೆ.”

ಭೀಷ್ಮನು ಹೀಗೆ ರಾಜಕುಮಾರರಿಗೂ, ಕಾಶೀರಾಜನಿಗೂ ಹೇಳಿ ರಾಜ

ಕುಮಾರಿಯರು ಕುಳಿತಿದ್ದ ತನ್ನ ರಥವನ್ನು ನಡೆಸುವಂತೆ ಸಾರಥಿಗೆ ಹೇಳಿ ತಾನು ಯುದ್ಧಸನ್ನದ್ಧನಾಗಿ ನಿಂತನು.

ಆ ಘಟನೆಯನ್ನು ಕಂಡು ಸ್ವಯಂವರಕ್ಕಾಗಿ ಬಂದಿದ್ದ ರಾಜರೆಲ್ಲರೂ ಚಕಿತರಾದರು. ತಮ್ಮ ಭುಜಗಳನ್ನು ತಟ್ಟಿಕೊಳ್ಳುತ್ತಾ ಕೋಪಾವಿಷ್ಟರಾಗಿ ಆಸನಗಳಿಂದೆದ್ದು ಧರಿಸಿದ್ದ ಆಭರಣಗಳನ್ನು ಬದಿಗಿಟ್ಟು ಯುದ್ಧಕವಚಗಳನ್ನೂ, ಶಸ್ತ್ರಾಸ್ತ್ರಗಳನ್ನೂ ಧರಿಸಿ ಯುದ್ಧಸನ್ನದ್ಧರಾದರು. ಆಭರಣಗಳ ಮತ್ತು ಯುದ್ಧಕವಚಗಳ ವಿನಿಮಯಕಾಲದಲ್ಲಿ ಹೊರಟ ಕಾಂತಿಯು ನಭೋಮಂಡಲದಲ್ಲಿರುವ ನಕ್ಷತ್ರಗಳ ಪರ್ಯಟನದ ಹೊಳಪಿನಂತೆಯೇ ಕಾಣುತ್ತಿತ್ತು. ಹುಬ್ಬುಗಳನ್ನು ಗಂಟಿಕ್ಕಿ, ಕಣ್ಣುಗಳಲ್ಲಿ ಕೆಂಡವನ್ನು ಕಾರುತ್ತಾ, ಸಹನೆಯನ್ನು ಮೀರಿ ಇಡುತ್ತಿದ್ದ ಅವರ ಕಾಲಿನ ಸಪ್ಪಳಕ್ಕೆ ಸರಿಯಾಗಿ ಅವರು ಧರಿಸಿದ್ದ ಯುದ್ಧಕವಚಗಳು ಝಣ-ಝಣ ಎಂದು ತಾಳಹೊಡೆಯು ತ್ತಿರುವಂತೆ ಭಾಸವಾಗುತ್ತಿತ್ತು. ರಾಜಕುಮಾರರ ಮುಖದರ್ಶನಮಾತ್ರ ದಿಂದಲೇ ಅವರ ಹೃದಯದ ಇಚ್ಛೆಯನ್ನು ತಿಳಿದ ಸಾರಥಿಗಳು ಸುಂದರವಾದ ರಥಗಳನ್ನು ಸಜ್ಜುಗೊಳಿಸಿ ತಂದರು.

ಕ್ಷಣಮಾತ್ರದಲ್ಲಿ ರಥವೇರಿ, ಆಯುಧಪಾಣಿಗಳಾಗಿ, ಮುಂದೆಹೋಗು ತ್ತಿದ್ದ ಭೀಷ್ಮನ ರಥವನ್ನು ಹಿಂಬಾಲಿಸಿದರು. ಏಕಾಕಿಯಾದ ಭೀಷ್ಮನಿಗೂ–ನೂರಾರು ರಾಜರಿಗೂ ರೋಮಾಂಚಕಾರಕವಾದ ಘೋರಯುದ್ಧವಾಯಿತು. ರಾಜಕುಮಾರರೆಲ್ಲರೂ ಸೇರಿ ಹತ್ತು ಸಾವಿರ ಬಾಣಗಳನ್ನು ಭೀಷ್ಮನ ಮೇಲೆ ಪ್ರಯೋಗಿಸಿದರು. ಭೀಷ್ಮನು ನಿಮಿಷಮಾತ್ರದಲ್ಲಿ ಆ ಬಾಣಗಳೆಲ್ಲವನ್ನೂ ಕತ್ತರಿಸಿದನು. ಭೀಷ್ಮನು ಬಿಡುತ್ತಿದ್ದ ಬಾಣಗಳ ಸಂಖ್ಯೆಯು ಅಸಂಖ್ಯಾತ ವಾಗಿತ್ತು. ಅವನ ರೋಮಕೋಟಿಗಳೇ ಬಾಣಗಳ ರೂಪದಲ್ಲಿ ಅವನ ಶರೀರ ದಿಂದ ಹೊರಬರುತ್ತಿವೆಯೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದುವು. ಮೋಡಗಳು ಬೆಟ್ಟದ ಮೇಲೆ ಮಳೆಗರೆಯುವಂತೆ–ರಾಜರು ಭೀಷ್ಮನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು. ಆದರೆ ರಾಜರು ಅವನ ಮೇಲೆ ಪ್ರಯೋಗಿಸುತ್ತಿದ್ದ ಬಾಣಗಳು–ಮೋಡಗಳು ಪರ್ವತವನ್ನು ಉರುಳಿಸಲು ಸುರಿಸಿದ ಮಳೆಯಂತೆ–ಅಪ್ರಯೋಜಕವಾಗುತ್ತಿದ್ದುವು. ಭೀಷ್ಮನು ತನ್ನ

ಕಡೆಗೆ ಬರುತ್ತಿದ್ದ ಶರಜಾಲವನ್ನು ಕತ್ತರಿಸುತ್ತಿದ್ದುದು ಮಾತ್ರವಲ್ಲದೇ ಪ್ರತಿಯೊಬ್ಬ ರಾಜನ ಮೇಲೂ ಮೂರು-ಮೂರು ಬಾಣಗಳನ್ನು ಪ್ರಯೋಗಿಸಿ ಘಾಸಿಮಾಡಿದನು. ಮರುಕ್ಷಣವೇ ಪ್ರತಿಯೊಬ್ಬ ರಾಜರೂ ಭೀಷ್ಮನೊಬ್ಬನ ಮೇಲೆ ಐದೈದು ಬಾಣಗಳನ್ನು ಪ್ರಯೋಗಿಸಿದರು. ಭೀಷ್ಮನು



ಅವೆಲ್ಲವನ್ನೂ ಕತ್ತರಿಸಿ ಪುನಃ ಅವರ ಮೇಲೆ ಎರಡೆರಡು ಬಾಣಗಳನ್ನು ಪ್ರಯೋಗಿಸಿದನು. ಅದನ್ನು ವೀಕ್ಷಿಸುತ್ತಿದ್ದ ಭೂಲೋಕವೀರರಿಗೆ ಆ ಯುದ್ಧವು ದೇವಾಸುರರ ಸಮರವೋ–ಎಂಬ ಭ್ರಾಂತಿಯನ್ನೇ ಉಂಟುಮಾಡುತ್ತಿದ್ದಿತು.

ಭೀಷ್ಮನ ಬಾಣಪ್ರಯೋಗವು ಕ್ಷಣ-ಕ್ಷಣಕ್ಕೂ ಉಗ್ರತೆಯನ್ನು ತಾಳು

ತ್ತಿತ್ತು. ರಾಜಕುಮಾರರ ಧನುಸ್ಸು, ತುರಗ, ಪತಾಕೆ, ಕವಚಗಳೆಲ್ಲವೂ ಧ್ವಂಸವಾದುವು. ವೀರರ ತಲೆಗಳು ಚೆಂಡುಗಳಂತೆ ಸಾವಿರಾರು ಸಂಖ್ಯೆಯಲ್ಲಿ ಕೆಳಗುರುಳಿ ಕುಪ್ಪಳಿಸಿದುವು. ಅವನ ಪರಾಕ್ರಮವನ್ನು ನೋಡಿ ಅಳಿದುಳಿದ ರಾಜರು ಬಾಣಪ್ರಯೋಗದಲ್ಲಿ ಭೀಷ್ಮನಿಗಿದ್ದ ಕೈಚಳಕವನ್ನು ಪ್ರಶಂಸಿಸಿದರು. ಎಲ್ಲರನ್ನೂ ಪರಾಜಿತರನ್ನಾಗಿ ಮಾಡಿದ ಬಳಿಕ ಭೀಷ್ಮನು ರಾಜಕುಮಾರಿಯರೊಡನೆ ಹಾಸ್ತಿನಪುರದೆಡೆಗೆ ರಥವನ್ನು ತಿರುಗಿಸಿದನು. ಆ ವೇಳೆಗೆ ಸರಿಯಾಗಿ ಶಾಲ್ವನೆಂಬ ರಾಜನು ಪ್ರತ್ಯೇಕವಾಗಿ ಮುಂದೆ ಬಂದು ಭೀಷ್ಮನನ್ನು ಯುದ್ಧಕ್ಕೆ ಕರೆದನು.

ತಾನು ಕಾಮಿಸಿದ್ದ ಕನ್ಯೆಯರ ಮುಂದೆ ಶಾಲ್ವನು ತನ್ನ ಪರಾಕ್ರಮವನ್ನು ತೋರಿಸಬೇಕೆಂಬ ಆಕಾಂಕ್ಷೆಯಿಂದ ರಾಜರ ಮಧ್ಯದಿಂದ ಮುಂದೆ ಬಂದು–ಹೆಣ್ಣಾನೆಗೋಸ್ಕರವಾಗಿ ಬೇರೊಂದು ಸಲಗವನ್ನು ತನ್ನ ದಂತಗಳಿಂದ ಹಿಂದುಗಡೆಯಲ್ಲಿ ತಿವಿಯುವ ಮದಗಜದಂತೆ–ಭೀಷ್ಮನನ್ನು ನಿಲ್ಲು-ನಿಲ್ಲೆನ್ನುತ್ತಾ ಧನುಷ್ಟೇಂಕಾರವನ್ನು ಮಾಡಿದನು.

ಶಾಲ್ವನ ರಣನಿನಾದವನ್ನು ಕೇಳಿ ಭೀಷ್ಮನ ಮುಖವು ಕೆಂಪೇರಿತು. ಧೂಮರಹಿತನಾದ ಯಜ್ಞೇಶ್ವರನಂತೆ ಪ್ರಜ್ವಲಿಸಿದನು. ಎಲ್ಲ ರಾಜರೂ ಶಾಲ್ವ-ಭೀಷ್ಮರ ಯುದ್ಧವನ್ನು ಉತ್ಸುಕತೆಯಿಂದ ನೋಡುವ ಪ್ರೇಕ್ಷಕರಾಗಿ ನಿಂತರು.

ಅಲೆಬಂದಿರುವ ಹಸುವಿಗಾಗಿ ಎರಡು ಮದಿಸಿದ ಹೋರಿಗಳು ಗರ್ಜನೆ ಮಾಡುವಂತೆ–ಭೀಷ್ಮ-ಶಾಲ್ವರು ಸಿಂಹನಾದಗಳನ್ನು ಮಾಡಿದರು. ಘೋರ ಯುದ್ಧವು ಪ್ರಾರಂಭವಾಯಿತು. ಶಾಲ್ವನು ನಿಮಿಷಮಾತ್ರದಲ್ಲಿ ಸಾವಿರಾರು ಬಾಣಗಳಿಂದ ಭೀಷ್ಮನನ್ನು ಮುಚ್ಚಿಬಿಟ್ಟನು. ಅವನ ಶರಪ್ರಯೋಗ ಚಾತುರ್ಯವನ್ನು ಕಂಡು ಉಳಿದ ರಾಜರೆಲ್ಲರೂ ಅಚ್ಚರಿಗೊಂಡು ಜಯಧ್ವನಿಗೈದರು. ರಾಜನ ಜಯಕಾರವನ್ನು ಕೇಳಿ ಭೀಷ್ಮನ ಕೋಪವು ಇಮ್ಮಡಿಯಾಯಿತು. “ಗರುಡನು ಹಾವನ್ನು ಕೊಲ್ಲುವಂತೆ–ಶಾಲ್ವನನ್ನು ಕೊಲ್ಲುವೆನು; ಅವನ ಬಳಿಗೆ ರಥವನ್ನು ಬಿಡು!”–ಎಂದು ಭೀಷ್ಮನು ಸಾರಥಿಗೆ ಹೇಳಿದನು. ಅನಂತರ ಸರ್ಪವನ್ನು ಕಂಡ ಗರುಡನು ನಿಮಿಷಮಾತ್ರದಲ್ಲಿ ಅಂತರಿಕ್ಷದಿಂದ

ಕೆಳಗಿಳಿಯುವಂತೆ ಭೀಷ್ಮನು ಬಹಳ ವೇಗವಾಗಿ ಶಾಲ್ವನ ರಥವನ್ನು ಸಮೀಪಿಸಿ ವಾರುಣಾಸ್ತ್ರವನ್ನು ಪ್ರಯೋಗಿಸಿದನು. ಅದರ ಪರಿಣಾಮವಾಗಿ ಶಾಲ್ವನ ನಾಲ್ಕು ಕುದುರೆಗಳೂ ತತ್ತರಿಸಿದುವು. ಅದನ್ನೂ ನಿರ್ಲಕ್ಷಿಸಿ ಶರವರ್ಷವನ್ನೇ ಸುರಿಸುತ್ತಿದ್ದ ಶಾಲ್ವನ ಬಾಣಜಾಲವನ್ನು ಕ್ಷಣಮಾತ್ರದಲ್ಲಿ ಕತ್ತರಿಸಿದ ಭೀಷ್ಮನು ಪುನಃ ದಿವ್ಯಾಸ್ತ್ರವೊಂದನ್ನು ಪ್ರಯೋಗಿಸಿ ಶಾಲ್ವನ ಸಾರಥಿಯನ್ನು ಯಮಪುರಿಗೆ ಕಳುಹಿಸಿದನು. ಐಂದ್ರಾಸ್ತ್ರಪ್ರಯೋಗದಿಂದ ಶಾಲ್ವನ ರಥದ ನಾಲ್ಕು ಕುದುರೆಗಳನ್ನೂ ಸಾರಥಿಯನ್ನೇ ಅನುಸರಿಸುವಂತೆ ಮಾಡಿದನು. ಸಾರಥಿ ಮತ್ತು ಕುದುರೆಗಳಿಂದ ವಿಹೀನನಾದ ಶಾಲ್ವನು ಮುಂದೇನು ಮಾಡಬೇಕೆಂದು ತೋರದೇ ಭ್ರಾಂತನಾಗಿ ನಿಂತನು.

ಮಹಾಪರಾಕ್ರಮಿಯಾದ ಭೀಷ್ಮನೂ ಕಂಗೆಟ್ಟಿದ್ದ ಶಾಲ್ವನನ್ನು ಸಂಹರಿಸದೇ ಜೀವಸಹಿತವಾಗಿಯೇ ಬಿಟ್ಟು ತನ್ನ ರಥವನ್ನು ರಾಜಧಾನಿಯ ಕಡೆಗೆ ತಿರುಗಿಸಿದನು. ಪರಾಜಿತನಾದ ಶಾಲ್ವನೂ ಭೀಷ್ಮನ ಮೇಲೆ ಯಾವ ವಿಧವಾದ ಮಾತ್ಸರ್ಯವನ್ನೂ ತಾಳದೇ, ಪ್ರತಿಕ್ರಿಯೆಯನ್ನು ಮಾಡಬೇಕೆಂಬ ಅಭಿಲಾಷೆಯೂ ಇಲ್ಲದವನಾಗಿ ಶಾಂತಮನಸ್ಕನಾಗಿಯೇ ತನ್ನ ನಗರಿಯನ್ನು ಸೇರಿ ಧರ್ಮದಿಂದ ರಾಜ್ಯಪಾಲನೆ ಮಾಡುತ್ತಿದ್ದನು.

ಸ್ವಯಂವರಕ್ಕಾಗಿ ಬಂದಿದ್ದ ರಾಜರೆಲ್ಲರೂ ತಮ್ಮ-ತಮ್ಮ ದೇಶಗಳಿಗೆ ತೆರಳಿದರು. ಭೀಷ್ಮನು ಅನೇಕ ನದೀ-ನದ-ತಟಾಕಗಳನ್ನು ದಾಟಿ ಹಾಸ್ತಿನ ಪುರವನ್ನು ಸೇರಿದನು. ಘೋರಯುದ್ಧದ ಪರಿಣಾಮವಾಗಿ ಭೀಷ್ಮನ ಶರೀರದ ಮೇಲೆ ಒಂದು ಸಣ್ಣ ಗಾಯವೂ ಆಗಿರಲಿಲ್ಲ. ರಾಜಕುಮಾರಿಯರನ್ನು ಅವರು ಮುಡಿದಿದ್ದ ಹೂಗಳೂ ಬಾಡದಂತೆ ರಾಜಧಾನಿಗೆ ಕರೆತಂದನು. ಅಣ್ಣನು ತಂಗಿಯನ್ನು ತವರುಮನೆಗೆ ಕರೆತರುವಂತೆ–ತಂದೆಯು ಹೆಣ್ಣುಮಕ್ಕಳನ್ನು ಅಥವಾ ಮಾವನು ಸೊಸೆಯನ್ನು ಕರೆತರುವಂತೆ– ಭೀಷ್ಮನು ಅಂಬೆ-ಅಂಬಿಕೆ-ಅಂಬಾಲಿಕೆಯರನ್ನು ಹಾಸ್ತಿನಪುರಕ್ಕೆ ಕರೆತಂದನು.

ರಾಜಕುಮಾರಿಯರನ್ನು ಹಾಸಿನಪುರಕ್ಕೆ ಕರೆತಂದ ಭೀಷ್ಮನ ಉದ್ದೇಶವು

ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಅವರನ್ನು ಕೊಟ್ಟು ಮದುವೆ ಮಾಡುವುದೇ ಆಗಿದ್ದಿತು. ಸತ್ಯವತಿಯ ಅನುಜ್ಞೆಯನ್ನು ಪಡೆದು ವಿವಾಹಕ್ಕೆ ಸಕಲಸಂಭಾರಗಳನ್ನೂ ಭೀಷ್ಮನು ಸಿದ್ಧಗೊಳಿಸಿದನು. ಮೂವರು ರಾಜ ಕುಮಾರಿಯರನ್ನೂ ವಿಚಿತ್ರವೀರ್ಯನಿಗಿತ್ತು ವಿವಾಹಮಾಡಬೇಕೆಂದು ಸಿದ್ಧ ಪಡಿಸಿದ ಕಾಲಕ್ಕೆ ಸರಿಯಾಗಿ ಕಾಶೀರಾಜನ ಹಿರಿಯ ಮಗಳಾದ ಅಂಬೆಯು ಭೀಷ್ಮನಲ್ಲಿಗೆ ಬಂದು ಮುಗುಳ್ನಗೆಯನ್ನು ಬೀರುತ್ತಾ ಹೇಳಿದಳು :

"ಸರ್ವಮಾನ್ಯನೇ! ನಾನು ನನ್ನ ಮನಸ್ಸಿನಲ್ಲಿ ಸೌಭಪುರದ ಅಧಿಪತಿ ಯಾದ ಶಾಲ್ವನನ್ನೇ ವರಿಸಿದ್ದೆನು. ಶಾಲ್ವನೂ ನನ್ನನ್ನೇ ಪತ್ನಿಯನ್ನಾಗಿ ಮನದಲ್ಲಿ ಪರಿಗ್ರಹಿಸಿದ್ದನು. ನಮ್ಮಿಬ್ಬರ ಮನೋನಿಶ್ಚಯಕ್ಕೆ ನಮ್ಮ ತಂದೆಯವರ ಅನುಮೋದನೆಯೂ ಇದ್ದಿತು. ಸ್ವಯಂವರಮಂಟಪದಲ್ಲಿ ನಾನು ಸೌಭಾಧಿಪತಿಗೇ ಸ್ವಯಂವರಮಾಲೆಯನ್ನು ಹಾಕಬೇಕೆಂದೂ ನಿಶ್ಚಯಮಾಡಿ ದ್ದೆನು. ನೀನು ಧರ್ಮಸೂಕ್ಷ್ಮವನ್ನು ತಿಳಿದವನಾಗಿರುವೆ. ನಾನು ಹೇಳಿದ ಅಂಶಗಳನ್ನು ಮನಸ್ಸಿಗೆ ತಂದುಕೊಂಡು ಧರ್ಮತತ್ತ್ವದಂತೆ ಆಚರಿಸು."

ಭೀಷ್ಮನು ಅಂಬೆಯ ಆ ಮಾತುಗಳನ್ನು ಕೇಳಿ ಬಹಳವಾಗಿ ಯೋಚಿಸಿ ದನು. ವೇದ-ವೇದಾಂಗಗಳನ್ನು ತಿಳಿದ ಬ್ರಾಹ್ಮಣರೊಡನೆ ಸಮಾಲೋಚನೆ ಮಾಡಿದನು. ಬೇರೊಬ್ಬ ರಾಜನಲ್ಲಿ ಅನುರಕ್ತಳಾಗಿದ್ದ ಅಂಬೆಯನ್ನು ತನ್ನ ತಮ್ಮನಿಗೆ ತಂದುಕೊಳ್ಳುವುದು ಅನುಚಿತವೆನಿಸಿತು. ಅವಳ ಇಚ್ಛೆಯಂತೆ ಸಕಲರಾಜಮರ್ಯಾದೆಗಳೊಡನೆ ಅಂಬೆಯನ್ನು ಸೌಭದೇಶಕ್ಕೆ ಕಳುಹಿಸಿ ಕೊಟ್ಟನು.

ಉಳಿದ ರಾಜಕುಮಾರಿಯರಿಬ್ಬರೂ ಸರ್ವಾಂಗಸುಂದರನಾದ ವಿಚಿತ್ರ ವೀರ್ಯನನ್ನು ವಿವಾಹವಾಗಲು ಒಪ್ಪಿಗೆಯನ್ನಿತ್ತರು. ಶುಭಮುಹೂರ್ತದಲ್ಲಿ ಸಂಭ್ರಮದಿಂದ ಅಂಬಿಕೆ-ಅಂಬಾಲಿಕೆಯರೊಡನೆ ವಿಚಿತ್ರವೀರ್ಯನ ವಿವಾಹಮಹೋತ್ಸವವು ನೆರವೇರಿತು.

ಅಂಬಿಕೆ-ಅಂಬಾಲಿಕೆಯರು ರೂಪದಲ್ಲಿ ರತಿಯನ್ನೂ ಮೀರಿಸಿದ್ದರು. ನೀಳವಾದ ಶರೀರ, ಮೇಘದಂತೆ ಶ್ಯಾಮಲವಾದ ಶರೀರಕಾಂತಿ, ಸ್ವಾಭಾವಿಕ ವಾಗಿಯೇ ಗುಂಗುರು-ಗುಂಗುರು ಕೂದಲುಗಳಿಂದ ಅಲಂಕೃತವಾದ ನೀಳ

ಕೇಶರಾಶಿ, ಲಾಕ್ಷಾರಸವಿಲ್ಲದೆಯೇ ಕೆಂಪಾಗಿ ಕಾಣುತ್ತಿದ್ದ ಕೈಗಳ ಉಗುರುಗಳು, ದುಂಡಾಗಿದ್ದ ನಿತಂಬಗಳು, ತಾವರೆಯ ಮೊಗ್ಗಿನಂತಿದ್ದ (ಪುಷ್ಟವಾದ) ಕುಚದ್ವಯಗಳು–ಇಂತಹ ಸರ್ವಾಂಗಸುಂದರಿಯರಾಗಿದ್ದ ಯುವತಿಯರನ್ನು ಮದುವೆಯಾದನಂತರ ಧರ್ಮಾತ್ಮನಾದ ವಿಚಿತ್ರವೀರ್ಯನು ಕಾಮುಕನಾಗಿ ಪರಿವರ್ತಿತನಾದನೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಅವನ ಶಕ್ತಿ-ಪರಾಕ್ರಮ ಮತ್ತು ಅಶ್ವಿನೀದೇವತೆಗಳ ರೂಪವನ್ನೂ ನಾಚಿಸುವ ದೇವಸದೃಶ ಸೌಂದರ್ಯ–ಇವುಗಳಿಂದ ಸಕಲಯುವತಿಯರೂ ಆಕರ್ಷಿತರಾಗುತ್ತಿದ್ದ ರೆಂದರೆ–ಅವನನ್ನು ವಿವಾಹವಾದ ಅಂಬಿಕೆ-ಅಂಬಾಲಿಕೆಯರ ಸಂತೋಷ ವೆಷ್ಟೆಂಬುದನ್ನು ವರ್ಣಿಸಬೇಕಾದ ಕಾರಣವಿಲ್ಲ. ತಮಗೆ ಸಕಲವಿಧಗಳಲ್ಲಿಯೂ ಅನುರೂಪನಾದ ಪತಿಯೇ ಸಿಕ್ಕಿದನೆಂಬ ಆನಂದದಿಂದಿದ್ದರು.

ಸುಖಮಯವಾದ ಸಂಸಾರವು ಏಳು ವರ್ಷಗಳ ಕಾಲ ನಿರಾತಂಕವಾಗಿ ಸಾಗಿತು. ವಿಚಿತ್ರವೀರ್ಯನಿಗೆ ಕಾಮೋಪಭೋಗಗಳ ಅಭಿಲಾಷೆಯು ಅತಿ ಯಾಗಿದ್ದುದರಿಂದಲೂ, ದೇಶದ ಆಡಳಿತವನ್ನು ಭೀಷ್ಮನೇ ನೋಡುತ್ತಿದ್ದುದ ರಿಂದಲೂ ವಿಚಿತ್ರವೀರ್ಯನು ರಾಣೀವಾಸವನ್ನೇ ಬಿಟ್ಟು ಹೊರಬರುತ್ತಿರ ಲಿಲ್ಲ. ಆದರೆ ಎಲ್ಲಕ್ಕೂ ಒಂದು ಮಿತಿಯಿರಬೇಕಲ್ಲವೇ? ಅವನ ಅತಿಯಾದ ಕಾಮೋಪಭೋಗಗಳ ಫಲವಾಗಿ ಕ್ಷಯರೋಗವು ಅವನನ್ನು ಆವರಿಸಿತು. ರೋಗನಿವಾರಣೆಗೆ ಎಂತಹ ದಿವ್ಯೌಷಧವನ್ನು ಪ್ರಯೋಗಮಾಡಿದರೂ ಫಲಕಾರಿಯಾಗಲಿಲ್ಲ. ಬಂಧು-ಬಾಂಧವರ ಮತ್ತು ಗೆಳೆಯರ ಪ್ರಯತ್ನ ಗಳೆಲ್ಲವೂ ವ್ಯರ್ಥವಾಗಿಹೋದುವು. ಸೂರ್ಯನು ಅಸ್ತಂಗತನಾಗುವಂತೆ– ಆನಂದಮಯವಾಗಿದ್ದ ಸಂಸಾರವನ್ನು ದುಃಖಕ್ಕೀಡುಮಾಡಿ ವಿಚಿತ್ರವೀರ್ಯನು ಯಮಾಲಯವನ್ನು ಸೇರಿದನು.

ಸತ್ಯವತಿ, ಭೀಷ್ಮ, ಅಂಬಾಲಿಕೆ ಮತ್ತು ಅಂಬಿಕೆಯರ ಶೋಕವನ್ನು ವರ್ಣಿಸಲು ಸಾಧ್ಯವೇ? ಒಬ್ಬರು ಮತ್ತೊಬ್ಬರಿಗೆ ಸಮಾಧಾನ ಹೇಳುವ ಸ್ಥಿತಿಯಲ್ಲಿರಲಿಲ್ಲ. ಧರ್ಮಜ್ಞನಾದ ಭೀಷ್ಮನೇ ಸತ್ಯವತಿಯ ಅನುಜ್ಞೆಯನ್ನು

ಪಡೆದು ಋತ್ವಿಜರೊಡನೆ ಮತ್ತು ಕುರುಶ್ರೇಷ್ಠರೊಡನೆ ವಿಚಿತ್ರವೀರ್ಯನ ಉತ್ತರಕ್ರಿಯೆಗಳನ್ನು ನೆರವೇರಿಸಿದನು."

೧೦೨ನೆಯ ಅಧ್ಯಾಯವು ಮುಗಿಯಿತು.

೧೦೩ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಸಂತಾನೋತ್ಪಾದನೆಗಾಗಿ ಭೀಷ್ಮನಿಗೆ ಸತ್ಯವತಿಯ ಆಗ್ರಹ : ಭೀಷ್ಮನ ನಿರಾಕರಣೆ

ವೈಶಂಪಾಯನರು ಹೇಳುತ್ತಾರೆ :

**ತತಃ ಸತ್ಯವತೀ ದೀನಾ ಕೃಪಣಾ ಪುತ್ರಗೃದ್ಧಿನೀ ।**
**ಪುತ್ರಸ್ಯ ಕೃತ್ವಾ ಕಾರ್ಯಾಣಿ ಸ್ನುಷಾಭ್ಯಾಂ ಸಹ ಭಾರತ ॥೧॥**

**ಸಮಾಶ್ವಾಸ್ಯ ಸ್ನುಷೇ ತೇ ಚ ಭೀಷ್ಮಂ ಶಸ್ತ್ರಭೃತಾಂ ವರಮ್ ।**
**ಧರ್ಮಂ ಚ ಪಿತೃವಂಶಂ ಚ ಮಾತೃವಂಶಂ ಚ ಭಾಮಿನೀ ।**
**ಪ್ರಸಮೀಕ್ಷ್ಯ ಮಹಾಭಾಗಾ ಗಾಙ್ಗೇಯಂ ವಾಕ್ಯಮಬ್ರವೀತ್ ॥೨॥**

"ಜನಮೇಜಯ! ಬಳಿಕ ಪುತ್ರಪ್ರಿಯಳಾದ ಸತ್ಯವತಿಯು ಪುತ್ರ ವಿಯೋಗದಿಂದ ಬಹಳ ದುಃಖಿತಳಾದಳು. ಆದರೂ ಧೈರ್ಯವನ್ನು ತಂದು ಕೊಂಡು ತನ್ನ ಸೊಸೆಯರೊಡನೆ ಮಗನ ಅಪರಕ್ರಿಯೆಗಳನ್ನು ಮುಗಿಸಿ ಯಾವಾಗಲೂ ರೋದನಮಾಡುತ್ತಿದ್ದ ಅಂಬಿಕೆ-ಅಂಬಾಲಿಕೆಯರನ್ನೂ ಮತ್ತು ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಭೀಷ್ಮನನ್ನೂ ನಾನಾವಿಧವಾದ ಸಾಂತ್ವವಚನ ಗಳಿಂದ ಸಮಾಧಾನಪಡಿಸಿದಳು. 'ಕುರುವಂಶದ ದೀಪವೇ ನಂದಿಹೋಯಿ ತಲ್ಲಾ!'–ಎಂಬ ಚಿಂತೆಯು ಸತ್ಯವತಿಯನ್ನು ಹಗಲಿರುಳೂ ಪೀಡಿಸುತ್ತಿತ್ತು. ಇಂತಹ ಆಪತ್ಕಾಲದಲ್ಲಿ ಪಿತೃವಂಶ, ಮಾತೃವಂಶ ಮತ್ತು ಧರ್ಮ ಇವೆಲ್ಲವನ್ನೂ ಸಂಪೂರ್ಣವಾಗಿ ವಿವೇಚಿಸಿ, ಕಡೆಗೊಂದು ನಿರ್ಧಾರಕ್ಕೆ ಬಂದು ಸಮಾಧಾನವನ್ನು ಹೊಂದಿ ಭೀಷ್ಮನನ್ನು ಕರೆದು ಹೇಳಿದಳು :

**ಶಾನ್ತನೋರ್ಧರ್ಮನಿತ್ಯಸ್ಯ ಕೌರವ್ಯಸ್ಯ ಯಶಸ್ವಿನಃ ।**
**ತ್ವಯಿ ಪಿಣ್ಡಶ್ಚ ಕೀರ್ತಿಶ್ಚ ಸಂತಾನಂ ಚ ಪ್ರತಿಷ್ಠಿತಮ್ ॥೩॥**

"ಮಗು! ಧರ್ಮನಿತ್ಯನಾದ, ಯಶೋವಂತನಾದ ಮಹಾಮಹಿಮ

ನಾದ ಶಾಂತನುವಿಗೆ ಪಿಂಡಪ್ರದಾನ, ಕೀರ್ತಿ ಮತ್ತು ವಂಶದ ಬೆಳವಣಿಗೆ–ಇವುಗಳೆಲ್ಲವೂ ಈಗ ನಿನ್ನನ್ನೇ ಅವಲಂಬಿಸಿವೆ.

**ಯಥಾ ಕರ್ಮ ಶುಭಂ ಕೃತ್ವಾ ಸ್ವರ್ಗೋಪಗಮನಂ ಧ್ರುವಮ್ ।**
**ಯಥಾ ಚಾಯುರ್ಧ್ರುವಂ ಸತ್ಯೇ ತ್ವಯಿ ಧರ್ಮಸ್ತಥಾ ಧ್ರುವಃ ॥೪॥**

ಪುಣ್ಯಕರ್ಮಗಳಿಂದ ಸ್ವರ್ಗಪ್ರಾಪ್ತಿ–ಎಂಬ ಫಲವು ಹೇಗೆ ನಿಶ್ಚಿತವೋ, ಸತ್ಯವ್ರತನಾದವನಿಗೆ ದೀರ್ಘಾಯುಷ್ಯವು ಹೇಗೆ ನಿಶ್ಚಿತವೋ–ಹಾಗೆಯೇ ಧರ್ಮವು ನಿನ್ನಲ್ಲಿ ಸ್ಥಿರವಾಗಿ ನೆಲೆಸಿದೆ. ನೀನು ವೇದ-ವೇದಾಂಗಗಳನ್ನೂ ತಿಳಿದವನಾಗಿರುವುದು ಮಾತ್ರವಲ್ಲದೇ–ಧರ್ಮಸೂಕ್ಷ್ಮವನ್ನೂ ತಿಳಿದಿರುವೆ. ಧರ್ಮದ ವ್ಯವಸ್ಥೆಮಾಡುವುದರಲ್ಲಿಯೂ, ಒಂದೊಂದು ಮನೆತನಕ್ಕೂ ಇರುವ ಪ್ರತ್ಯೇಕವಾದ ಆಚಾರ-ವ್ಯವಹಾರಗಳ ವಿಷಯವಾಗಿಯೂ, ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮಗಳ ವಿಷಯವಾಗಿಯೂ ನಿನಗಿರುವ ಜ್ಞಾನವು ಶುಕ್ರ-ಬೃಹಸ್ಪತಿಗಳಿಗೆ ಇರುವ ಜ್ಞಾನಕ್ಕೆ ಸಮನಾದುದೆಂಬುದರಲ್ಲಿ ನನಗೆ ಸಂಶಯವೇ ಇಲ್ಲ. ಈ ಕಾರಣಗಳಿಂದ ಧರ್ಮಿಷ್ಠನಾದ ನಿನ್ನನ್ನೇ ಸಂಪೂರ್ಣವಾಗಿ ಅವಲಂಬಿಸಿ, ನಿನ್ನನ್ನು ಒಂದು ಕಾರ್ಯದಲ್ಲಿ ನಿಯೋಜಿಸಬೇಕೆಂದಿರುವೆನು. ನನ್ನ ಆಜ್ಞೆಯನ್ನು ಪರಿಪಾಲಿಸುವುದು ಖಂಡಿತವಾಗಿಯೂ ನಿನಗೆ ಉಚಿತವಾಗಿದೆ."

ಭೀಷ್ಮನಿಗೂ ವಿಚಿತ್ರವೀರ್ಯನ ಸಾವಿನ ದುಃಖವು ಅತಿಯಾಗಿದ್ದುದರಿಂದ ತಾಯಿಯಾಡಿದ ಮಾತುಗಳನ್ನು ಕೇಳುತ್ತಾ ಮೌನದಿಂದ ಕುಳಿತಿದ್ದನು. ಸತ್ಯವತಿಯು ಮುಂದುವರಿದು ಹೇಳಿದಳು :

"ಇಬ್ಬರು ಮಕ್ಕಳಲ್ಲಿ ಒಬ್ಬನು ಮದುವೆಯಾಗದೆಯೇ ಸ್ವರ್ಗವನ್ನೈದಿದನು. ಮತ್ತೊಬ್ಬನು ಮದುವೆಯಾಗಿ ಇನ್ನೂ ಯೌವನಾವಸ್ಥೆಯಲ್ಲಿರುವಾಗಲೇ ನಮ್ಮನ್ನಗಲಿದನು. ಅವನ ಮೇಲೆ ನೀನಿಟ್ಟಿದ್ದ ಪ್ರೀತಿಯು ಅಸಾಧಾರಣವಾದುದು."

ಎರಡು ನಿಮಿಷಗಳು ಮೌನವಾಗಿ ಕುಳಿತುಬಿಟ್ಟಳು. ಮುಂದಕ್ಕೆ ಮಾತೇ ಹೊರಡಲಿಲ್ಲ. ಭೀಷ್ಮನ ಕಣ್ಣುಗಳಿಂದಲೂ ಅಶ್ರುಬಿಂದುಗಳು ಉದುರುತ್ತಿದ್ದುವು. ಕಣ್ಣೀರೊರೆಸಿಕೊಂಡು ಸತ್ಯವತಿಯು ಹೇಳಿದಳು :

“ನನ್ನ ದೌರ್ಭಾಗ್ಯವನ್ನು ಏನೆಂದು ಹೇಳಲಿ? ವಿಚಿತ್ರವೀರ್ಯನ ಹೆಂಡತಿಯರ ನವತಾರುಣ್ಯವನ್ನು ನೋಡುತ್ತಿದ್ದಂತೆ ನನ್ನ ಹೃದಯದಲ್ಲಿ ದುಃಖವು ಮತ್ತಷ್ಟು ಹೆಚ್ಚುವುದು. ಆದರೆ ವ್ಯರ್ಥವಾಗುವ ಇವರ ತಾರುಣ್ಯದ ವಿಷಯವಾಗಿ ನಾನು ಯೋಚಿಸುತ್ತಿಲ್ಲ. ಇವರು ಪುತ್ರಪ್ರಾಪ್ತಿಗಾಗಿ ಹಾತೊರೆಯುತ್ತಿದ್ದಾರೆ. ನಮ್ಮ ಕುಲದ ಅಭಿವೃದ್ಧಿಗಾಗಿ ಇವರಿಗೆ ಪುತ್ರ ಪ್ರಾಪ್ತಿಯಾಗುವುದರ ಅವಶ್ಯಕತೆಯಿದೆಯಲ್ಲವೇ? ನಮ್ಮ ಕುಲವು ವಿನಾಶ ವಾಗದಿರಲು ನಿನ್ನ ಮೂಲಕ ಇವರಲ್ಲಿ ಮೊಮ್ಮಕ್ಕಳನ್ನು ಕಾಣುವ ಅಭಿಲಾಷೆ ಯಿಂದಿರುವೆನು. ಇಷ್ಟುಮಾತ್ರವಲ್ಲದೇ ರಾಜ್ಯಸಿಂಹಾಸನದಲ್ಲಿ ಕುಳಿತು ಭಾರತದೇಶವನ್ನು ಧರ್ಮದಿಂದ ಪಾಲಿಸುವ ಹೊಣೆಯೂ ನಿನ್ನದೇ ಆಗಿರು ವುದು. ಮುಂದೆ ಕನ್ಯೆಯೊಬ್ಬಳನ್ನು ವಿವಾಹಮಾಡಿಕೊಳ್ಳುವುದೂ ನಿನ್ನ ಕರ್ತವ್ಯವಾಗಿದೆ. ಆಪತ್ಕಾಲಕ್ಕೆ ಉಳಿದಿರುವ ಧರ್ಮವಿದೊಂದೇ ಎಂದು ನಿಶ್ಚಯಮಾಡಿ ಹೇಳುತ್ತಿದ್ದೇನೆ. ನೀನು ಹಾಗೆ ಮಾಡದಿದ್ದರೆ ಭರತವಂಶದ ಪೂರ್ವಜರು ವಂಶವಿನಾಶದಿಂದ ಪಿಂಡೋದಕಾದಿಗಳನ್ನು ನೀಡುವವರಿಲ್ಲದೇ ನರಕದಲ್ಲಿ ಬೀಳುವರು. ಇದಕ್ಕೆ ನೀನು ಕಾರಣನಾಗಬೇಡ, ಮಗು!”

ಸತ್ಯವತಿಯ ಅಭಿಪ್ರಾಯವನ್ನೇ ಸುಹೃದರೂ ಅನುಮೋದಿಸಿದರು. ಸುಹೃದರ ಮತ್ತು ಸತ್ಯವತಿಯ ಮಾತುಗಳನ್ನು ಕೇಳಿ ಧರ್ಮಜ್ಞನಾದ ಭೀಷ್ಮನು ಗಂಭೀರವಾದ ಮತ್ತು ಅಸ್ಖಲಿತವಾದ ವಾಣಿಯಿಂದ ಧರ್ಮಸಮ್ಮತವೆನಿಸಿದ ರೀತಿಯಲ್ಲಿಯೇ ತಾಯಿಗೆ ಉತ್ತರಿಸಿದನು :

**ಅಸಂಶಯಂ ಪರೋಧರ್ಮಸ್ತ್ವಯಾ ಮಾತರುದಾಹೃತಃ ।**
**ರಾಜ್ಯಾರ್ಥೇ ನಾಭಿಷಿಞ್ಚ್ಯೇಯಂ ನೋಪೇಯಾಂ ಜಾತು ಮೈಥುನಮ್ ।**
**ತ್ವಮಪತ್ಯಂ ಪ್ರತಿ ಚ ಮೇ ಪ್ರತಿಜ್ಞಾಂ ವೇತ್ಥ ವೈ ಪರಾಮ್ ॥೧೩॥**
**ಜಾನಾಸಿ ಚ ಯಥಾವೃತ್ತಂ ಶುಲ್ಕಹೇತೋಸ್ತ್ವದನ್ತರೇ ।**
**ಸ ಸತ್ಯವತಿ ಸತ್ಯಂ ತೇ ಪ್ರತಿಜಾನಾಮ್ಯಹಂ ಪುನಃ ॥೧೪॥**

“ತಾಯೇ! ನೀನು ಹೇಳುವ ವಿಷಯವು ನಿಶ್ಚಯವಾಗಿಯೂ ಆಪತ್ಕಾಲ ದಲ್ಲಿ ಅನುಸರಿಸಬೇಕಾದ ಧರ್ಮವೆಂಬುದರಲ್ಲಿ ಸಂಶಯವಿಲ್ಲ. ಆದರೆ

ರಾಜ್ಯವಾಳುವ ಸಲುವಾಗಿ ನಾನು ಅಭಿಷಿಕ್ತನಾಗುವುದಿಲ್ಲ; ಮದುವೆ ಯಾಗುವುದಿಲ್ಲ; ಸ್ತ್ರೀಸಂಗವನ್ನು ಮಾಡುವುದಿಲ್ಲ. ನಿನ್ನ ಮಕ್ಕಳ ಸಲುವಾಗಿ ನಾನು ಹಿಂದೆ ಮಾಡಿದ ಆ ಪ್ರತಿಜ್ಞೆಯು ನಿನಗೆ ತಿಳಿದೇ ಇದೆ. ನಿನ್ನ ಸಂಬಂಧವಾದ ಕನ್ಯಾಶುಲ್ಕಕ್ಕಾಗಿ ನನ್ನ ಜೀವಮಾನವನ್ನೇ ಬ್ರಹ್ಮಚರ್ಯೆಯಲ್ಲಿ ಕಳೆಯುವೆನೆಂದು ಅಂದಿನ ಮಹಾಸಭೆಯಲ್ಲಿ ಪ್ರತಿಜ್ಞೆ ಮಾಡಿರುವೆನಲ್ಲವೇ? ತಾಯೇ! ಈಗಲೂ ಮತ್ತೊಮ್ಮೆ ಪ್ರತಿಜ್ಞೆ ಮಾಡುತ್ತೇನೆ.

**ಪರಿತ್ಯಜೇಯಂ ತ್ರೈಲೋಕ್ಯಂ ರಾಜ್ಯಂ ದೇವೇಷು ವಾ ಪುನಃ ।**
**ಯದ್ವಾಪ್ಯಧಿಕಮೇತಾಭ್ಯಾಂ ನ ತು ಸತ್ಯಂ ಕಥಂಚನ ॥೧೫॥**

**ತ್ಯಜೇಚ್ಚ ಪೃಥಿವೀ ಗನ್ಧಮಾಪಶ್ಚ ರಸಮಾತ್ಮನಃ ।**
**ಜ್ಯೋತಿಸ್ತಥಾ ತ್ಯಜೇದ್ರೂಪಂ ವಾಯುಃ ಸ್ಪರ್ಶಗುಣಂ ತ್ಯಜೇತ್ ॥೧೬॥**

**ಪ್ರಭಾಂ ಸಮುತ್ಸೃಜೇದರ್ಕೋ ಧೂಮಕೇತುಸ್ತಥೋಷ್ಮತಾಮ್ ।**
**ತ್ಯಜೇಚ್ಛಬ್ದಂ ತಥಾಕಾಶಂ ಸೋಮಃ ಶೀತಾಂಶುತಾಂ ತ್ಯಜೇತ್ ॥೧೭॥**

**ವಿಕ್ರಮಂ ವೃತ್ರಹಾ ಜಹ್ಯಾದ್ಧರ್ಮಂ ಜಹ್ಯಾಚ್ಚ ಧರ್ಮರಾಟ್ ।**
**ನ ತ್ವಹಂ ಸತ್ಯಮುತ್ಸ್ರಷ್ಟುಂ ವ್ಯವಸೇಯಂ ಕಥಂಚನ ॥೧೮॥**

ತ್ರಿಲೋಕಗಳನ್ನೂ ತ್ಯಜಿಸಿಯೇನು; ದೇವತೆಗಳ ಸಾಮ್ರಾಜ್ಯವನ್ನೂ ಪರಿತ್ಯಜಿಸಿಯೇನು; ಇದಕ್ಕಿಂತಲೂ ಹೆಚ್ಚೆನಿಸಿದ ಸ್ಥಾನವನ್ನೂ ತ್ಯಾಗಮಾಡಿ ಯೇನು. ಆದರೆ ಸತ್ಯಚ್ಯುತನೆಂದಿಗೂ ಆಗಲಾರೆನು, ತಾಯೇ! ಭೂಮಿಯು ತನಗೆ ಸ್ವಭಾವಜನ್ಯವಾದ ವಾಸನೆಯನ್ನೇ ಪರಿತ್ಯಜಿಸಬಹುದು; ನೀರು ರಸಭಾವವನ್ನೇ ತ್ಯಜಿಸಬಹುದು; ತೇಜಸ್ಸು ರೂಪವನ್ನೇ ವಿಸರ್ಜಿಸಬಹುದು; ವಾಯುವು ಸ್ಪರ್ಶಗುಣವನ್ನಾದರೂ ಬಿಡಬಹುದು; ಸೂರ್ಯನು ತನ್ನ ಪ್ರಭೆಯನ್ನಾದರೂ ವಿಸರ್ಜಿಸಬಹುದು; ಅಗ್ನಿಯು ಸುಡುವಿಕೆಯನ್ನಾದರೂ ಪರಿತ್ಯಜಿಸಬಹುದು; ಆಕಾಶವು ಶಬ್ದೋತ್ಪತ್ತಿಯ ಶಕ್ತಿಯನ್ನಾದರೂ ಕಳೆದುಕೊಳ್ಳಬಹುದು; ಚಂದ್ರನು ಶೀತರಶ್ಮಿಯೇ ಆಗದಿರಬಹುದು; ತ್ರೈಲೋಕ್ಯಾಧಿಪತಿಯಾದ ಇಂದ್ರನು ಬಲಹೀನನಾದರೂ ಆಗಬಹುದು; ಯಮಧರ್ಮನು ನ್ಯಾಯನಿರ್ಣಯದಲ್ಲಿ ಪಕ್ಷಪಾತವನ್ನಾದರೂ ಮಾಡ ಬಹುದು–ಆದರೆ ಭೀಷ್ಮನು ಮಾತ್ರ ಸತ್ಯಚ್ಯುತನಾಗಲಾರನು."

ತೇಜಸ್ಸನ್ನೇ ಐಶ್ವರ್ಯವನ್ನಾಗಿ ಹೊಂದಿದ್ದ ಪುತ್ರನ ಮುಖಾರವಿಂದದಿಂದ ಬಂದ ಮಾತುಗಳನ್ನು ಕೇಳಿದ ಸತ್ಯವತಿಗೆ ಭೀಷ್ಮನನ್ನು ತನ್ನ ಮಾತಿಗೊಪ್ಪಿಸುವ ಆಸೆಯುಳಿಯಲಿಲ್ಲ. ಆದರೂ ಪುನಃ ಹೇಳಿದಳು :

**ಜಾನಾಮಿ ತೇ ಸ್ಥಿತಿಂ ಸತ್ಯೇ ಪರಾಂ ಸತ್ಯಪರಾಕ್ರಮ ।**
**ಇಚ್ಛನ್ ಸೃಜೇಥಾಸ್ತ್ರೀಂಲ್ಲೋಕಾನನ್ಯಾಂಸ್ತ್ವಂ ಸ್ವೇನ ತೇಜಸಾ ॥೨೧॥**

**ಜಾನಾಮಿ ಚೈವ ಸತ್ಯಂ ತನ್ಮದರ್ಥೇ ಯಚ್ಚ ಭಾಷಿತಮ್ ।**
**ಆಪದ್ಧರ್ಮಂ ತ್ವಮಾವೇಕ್ಷ್ಯ ವಹ ಪೈತಾಮಹೀಂ ಧುರಮ್ ॥೨೨॥**

“ಸತ್ಯಪರಾಕ್ರಮನೇ! ಸತ್ಯದಲ್ಲಿ ನಿನಗಿರುವ ಸ್ಥಿರತೆಯನ್ನು ನಾನು ಅರಿತಿರುವೆನು. ನೀನು ಸತ್ಯ-ಧರ್ಮಗಳ ಮೂರ್ತಿಯಾಗಿರುವೆ. ನೀನು ಇಚ್ಛಿಸಿದರೆ ನಿನ್ನ ಶಕ್ತಿಯಿಂದ ಪ್ರತ್ಯೇಕವಾದ ಸ್ವರ್ಗ-ಮರ್ತ್ಯ-ಪಾತಾಳ ಲೋಕಗಳನ್ನು ಸೃಷ್ಟಿಸಲೂ ಸಮರ್ಥನಾಗಿರುವೆ. ನನ್ನ ಸಲುವಾಗಿ ನೀನು ಮಾಡಿರುವ ಪ್ರತಿಜ್ಞೆಯೂ ನನ್ನ ಸ್ಮರಣೆಯಲ್ಲಿದೆ. ಆದರೂ ಇದು ನಮಗೆ ಆಪತ್ಕಾಲವೆಂಬುದನ್ನು ನೀನು ಯೋಚಿಸಬೇಕಲ್ಲವೇ? ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮವೇನೆಂಬುದನ್ನು ಪರಿಶೀಲಿಸಿ, ಪಿತೃ-ಪಿತಾಮಹರು ಹೊತ್ತಿದ್ದ ಈ ರಾಜ್ಯಭಾರವನ್ನು ನೀನು ಹೊರಲೇಬೇಕು. ನಮ್ಮ ಪೂರ್ವಜರ ಹಿತಚಿಂತನೆಗಾಗಿ ಮತ್ತು ರಾಜ್ಯದ ಕ್ಷೇಮಕ್ಕಾಗಿ ನೀನಿಂದು ಈ ಕಾರ್ಯವನ್ನು ಮಾಡಬೇಕಾಗಿದೆ.

**ಯಥಾ ತೇ ಕುಲತನ್ತುಶ್ಚ ಧರ್ಮಶ್ಚ ನ ಪರಾಭವೇತ್ ।**
**ಸುಹೃದಶ್ಚ ಪ್ರಹೃಷ್ಯೇರಂಸ್ತಥಾ ಕುರು ಪರಂತಪ ॥೨೨॥**

ಪರಂತಪನೇ! ನಮ್ಮ ವಂಶವು ವಿನಾಶವಾಗದಂತೆ, ಧರ್ಮದ ಅವಹೇಳನವೂ ಆಗದಂತೆ ಮತ್ತು ನಮ್ಮ ಪ್ರಜೆಗಳೂ ಮತ್ತು ಸುಹೃದರೂ ಸಂತೋಷಿಸುವಂತೆ ಮಾಡುವುದು ನಿನ್ನ ಕರ್ತವ್ಯವಾಗಿದೆ.”

**ರಾಜ್ಞಿ ಧರ್ಮಾನವೇಕ್ಷಸ್ವ ಮಾ ನಃ ಸರ್ವಾನ್ವ್ಯನೀನಶಃ ।**
**ಸತ್ಯಾಚ್ಚ್ಯುತಿಃ ಕ್ಷತ್ರಿಯಸ್ಯ ನ ಧರ್ಮೇಷು ಪ್ರಶಸ್ಯತೇ ॥೨೩॥**

“ರಾಜಮಾತೆಯೇ! ಆಪತ್ತೊದಗಿರುವುದೆಂದು ಭ್ರಾಂತಳಾಗಬೇಡಮ್ಮ.

ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮಗಳೇನೆಂಬುದನ್ನು ತಿಳಿದುನೋಡು ತಾಯೇ! ಅಧರ್ಮಬೋಧನೆಯಿಂದ ನಮ್ಮೆಲ್ಲರನ್ನೂ ವಿನಾಶಮಾಡಬೇಡ. ಎಂತಹ ಆಪತ್ಕಾಲದಲ್ಲಿಯಾದರೂ ಸತ್ಯವಾಕ್ಯಕ್ಕೆ ತಪ್ಪಿ ನಡೆಯಬಹುದೆಂಬ ವಚನವು ನಮ್ಮ ಗ್ರಂಥಗಳಲ್ಲಿ ಎಲ್ಲಿಯೂ ಕಾಣಸಿಗದು. ಕ್ಷತ್ರಿಯನು ಸತ್ಯದಿಂದ ಚ್ಯುತನಾಗುವುದನ್ನು ಶಾಸ್ತ್ರಗಳೆಂದಿಗೂ ಪ್ರಶಂಸಿಸುವುದಿಲ್ಲ. ಆಪತ್ಕಾಲ ದಲ್ಲಿಯೂ ಸತ್ಯಚ್ಯುತನಾಗಕೂಡದೆಂದೇ ಸ್ಪಷ್ಟವಾಗಿ ಹೇಳುತ್ತವೆ. ಆದರೆ ವಂಶವಿನಾಶವೆಂಬ ಇಂತಹ ಆಪತ್ಕಾಲದಲ್ಲಿ–ಶಾಂತನುವಿನ ವಂಶದ ಉದ್ಧಾರ ಕ್ಕಾಗಿ, ಹಿಂದೆ ಪರಮಧಾರ್ಮಿಕರಾಗಿದ್ದ ಕ್ಷತ್ರಿಯರು ಅನುಸರಿಸುತ್ತಿದ್ದ ರೀತಿ-ನೀತಿಗಳನ್ನು ಹೇಳುವೆನು. ಅನಂತರ ಆಪದ್ಧರ್ಮವನ್ನು ಕೂಲಂಕಷವಾಗಿ ತಿಳಿದ ಪುರೋಹಿತರೊಡನೆ ಸಮಾಲೋಚಿಸಿ, ಲೋಕವ್ಯವಹಾರಕ್ಕೆ ವಿರೋಧವೆನಿಸದ ರೀತಿಯಲ್ಲಿ ಕಾರ್ಯಮಾಡುವುದು ಯುಕ್ತವೆನಿಸುವುದು."

ಗ೦೩ನೆಯ ಅಧ್ಯಾಯವು ಮುಗಿಯಿತು.

ಗ೦೪ನೆಯ ಅಧ್ಯಾಯ — ಸಂಭವಪರ್ವ (ಮುಂದುವರಿದಿದೆ.)

## ದೀರ್ಘತಮಸನ ವೃತ್ತಾಂತ

"ಜನಮೇಜಯ! ರಾಜ್ಯಭಾರವನ್ನು ವಹಿಸಿಕೊಳ್ಳುವಂತೆ ಬಾರಿ-ಬಾರಿಗೂ ಪ್ರಿಯೋಕ್ತಿಗಳಿಂದ ಹೇಳುತ್ತಿದ್ದ, ಪುತ್ರಪ್ರಿಯಳಾದ, ತನ್ನ ಮಗನ ಪತ್ನಿಯರಲ್ಲಿ ಮಕ್ಕಳನ್ನು ಪಡೆಯಬೇಕೆಂಬ ಒಂದೇ ಒಂದು ಆಶಯದಿಂದ ಧರ್ಮವಿಹಿತವಲ್ಲದ ಮಾತುಗಳನ್ನಾಡುತ್ತಿದ್ದ ಸತ್ಯವತಿಗೆ ಭೀಷ್ಮನು ಪುನಃ ಹೇಳತೊಡಗಿದನು :

**ಜಾಮದಗ್ನ್ಯೇನ ರಾಮೇಣ ಪಿತುರ್ವಧಮಮೃಷ್ಯತಾ ।**
**ರಾಜಾ ಪರಶುನಾ ಪೂರ್ವಂ ಹೈಹಯಾಧಿಪತಿರ್ಹತಃ ॥೧॥**

**ಶತಾನಿ ದಶ ಬಾಹೂನಾಂ ನಿಕೃತ್ತಾನ್ಯರ್ಜುನಸ್ಯ ವೈ ।**
**ಲೋಕಸ್ಯಾಚರಿತೋ ಧರ್ಮಸ್ತೇನಾತಿ ಕಿಲ ದುಶ್ಚರಃ ॥೨॥**

"ಮಾತೆಯೇ! ಭಗವಾನ್ ಪರಶುರಾಮನ ಇತಿಹಾಸವನ್ನು ನೀನೂ

ಕೇಳಿರಬಹುದು. ಕಾರ್ತವೀರ್ಯನು ಪರಶುರಾಮನ ತಂದೆಯನ್ನು ಸಂಹರಿಸಿ ದನು. ನಿರಪರಾಧಿಯಾದ ತನ್ನ ತಂದೆಯನ್ನು ರಾಜನು ಕೊಂದುದನ್ನು ಸಹಿಸಿಕೊಳ್ಳಲು ಪರಶುರಾಮನಿಗೆ ಸಾಧ್ಯವಾಗಲಿಲ್ಲ. ಅತಿಕ್ರುದ್ಧನಾದ ಪರಶುರಾಮನು ಹೈಹಯರ ಅಧಿಪತಿಯಾದ ಕಾರ್ತವೀರ್ಯಾರ್ಜುನನ ಬಳಿಗೆ ಹೋಗಿ, ಅವನ ಒಂದು ಸಾವಿರ ತೋಳುಗಳನ್ನೂ ಕತ್ತರಿಸಿದ ನಲ್ಲದೇ–ಯುದ್ಧದಲ್ಲಿ ಅವನನ್ನು ಸಂಹರಿಸಿ ಅತಿದುಷ್ಕರವಾದ ಕಾರ್ಯವನ್ನು ಮಾಡಿದನು. ಅಷ್ಟರಿಂದಲೂ ಅವನ ಕೋಪವು ಶಾಂತವಾಗಲಿಲ್ಲ. ರಥದ ಮೇಲೆ ಕುಳಿತು ಪ್ರಪಂಚದಲ್ಲಿದ್ದ ದುಷ್ಟಕ್ಷತ್ರಿಯರೆಲ್ಲರನ್ನೂ ಧ್ವಂಸಮಾಡಲು ಹೊರಟುಬಿಟ್ಟನು. ತನ್ನ ಧನುಸ್ಸಿನಿಂದ ಮಹಾಸ್ತ್ರಗಳನ್ನು ಬಿಡುತ್ತಾ ಕ್ಷತ್ರಿಯಕುಲವನ್ನೇ ಸಂಪೂರ್ಣವಾಗಿ ದಹಿಸಿಬಿಟ್ಟನು. ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ಒಬ್ಬ ಕ್ಷತ್ರಿಯನನ್ನೂ ಬಿಡದೇ ಧ್ವಂಸಮಾಡಿ ಪ್ರಪಂಚವನ್ನು ಕ್ಷತ್ರಿಯರಹಿತವನ್ನಾಗಿ ಮಾಡಿಬಿಟ್ಟನು.

ಆದರೆ ಪರಶುರಾಮನು ಕ್ಷತ್ರಿಯಯೋಧರನ್ನು ಸಂಹರಿಸಿದನೇ ಹೊರತು ಕ್ಷತ್ರಿಯ ಸ್ತ್ರೀಯರನ್ನು ಸಂಹರಿಸಲಿಲ್ಲ.

**ತತಃ ಸಂಭೂಯ ಸರ್ವಾಭಿಃ ಕ್ಷತ್ರಿಯಾಭಿಃ ಸಮನ್ತತಃ ।**
**ಉತ್ಪಾದಿತಾನ್ಯಪತ್ಯಾನಿ ಬ್ರಾಹ್ಮಣೈರ್ವೇದಪಾರಗೈಃ ।**
**ಪಾಣಿಗ್ರಾಹಸ್ಯ ತನಯಾ ಇತಿ ವೇದೇಷು ನಿಶ್ಚಿತಮ್ ॥೬॥**

ಪತಿ-ಪುತ್ರವಿಹೀನೆಯರಾದ ಕ್ಷತ್ರಿಯರಮಣಿಯರು ಆಪದ್ಧರ್ಮವನ್ನು ಅನುಸರಿಸಿ ತಮ್ಮ-ತಮ್ಮ ವಂಶಗಳ ವೃದ್ಧಿಗಾಗಿ ವೇದ-ವೇದಾಂಗಪಾರಂಗತ ರಾದ ಬ್ರಾಹ್ಮಣರ ಮೂಲಕ ಮಕ್ಕಳನ್ನು ಪಡೆದರೆಂದು ನಾವು ಕೇಳಿದ್ದೇವೆ. ಆಪತ್ಕಾಲದಲ್ಲಿ ಆಚರಿಸುವ ಧರ್ಮವಿದು. ಅಂತಹ ಸಂದರ್ಭಗಳಲ್ಲಿ ಪುರುಷನಿಗಾಗಲೀ–ಸ್ತ್ರೀಗಾಗಲೀ ಕಾಮವಾಸನೆಯು ಇರುವುದಿಲ್ಲ. ಅನುಸರಿಸ ಬೇಕಾದ ನೀತಿ-ನಿಯಮಗಳೂ ಬಹಳ ಕಠಿನವಾಗಿಯೇ ಇರುತ್ತವೆ. ಹೀಗೆ ಹುಟ್ಟಿದ ಮಕ್ಕಳು ಆ ಸ್ತ್ರೀಯನ್ನು ವಿಧ್ಯುಕ್ತವಾಗಿ ಮದುವೆಯಾಗಿದ್ದವನ ಮಕ್ಕಳೆಂದೇ ಶ್ರುತಿಗಳು ಸಾರುತ್ತವೆ. ಪರಶುರಾಮನು ಕ್ಷತ್ರಿಯಕುಲವನ್ನು ವಿನಾಶಮಾಡಿದನಂತರವೂ ಆಪದ್ಧರ್ಮವೆನಿಸಿದ ಧರ್ಮಶಾಸ್ತ್ರೋಕ್ತವಾದ ನೀತಿಯನ್ನು ಅನುಸರಿಸಿ ಕ್ಷತ್ರಿಯಕುಲವು ಬೆಳೆಯಿತು.”

ಸತ್ಯವತಿಯು ಆಲೋಚಿಸುತ್ತಾ ಕುಳಿತಿದ್ದಳು. ಇನ್ನೂ ಯಾವ ನಿರ್ಧಾರಕ್ಕೂ ಬಂದಂತೆ ಕಾಣಲಿಲ್ಲ. ಭೀಷ್ಮನು ಪುನಃ ಹೇಳಿದನು :

"ಇದೇ ರೀತಿಯಲ್ಲಿರುವ ಮತ್ತೊಂದು ಇತಿಹಾಸವನ್ನೂ ಹೇಳುವೆನು, ಕೇಳಮ್ಮಾ!

ಹಿಂದೆ ಉತಥ್ಯನೆಂಬ ಹೆಸರಿನಿಂದ ವಿಖ್ಯಾತನಾದ ಮಹರ್ಷಿಯೊಬ್ಬ ನಿದ್ದನು. ಅವನಿಗೆ ಮಮತಾ ಎಂಬ ಮಡದಿಯಿದ್ದಳು. ಅವಳನ್ನು ಮಹರ್ಷಿಯು ಬಹಳವಾಗಿ ಪ್ರೀತಿಸುತ್ತಿದ್ದನು. ಒಂದು ದಿನ ಉತಥ್ಯನ ಕಿರಿಯ ತಮ್ಮನಾದ, ದೇವಗುರುವಾದ ಬೃಹಸ್ಪತಿಯು ಕಾಮಪೀಡಿತನಾಗಿ ಮಮತೆಯ ಬಳಿಗೆ ಹೋದನು. ದೇವಗುರುವಿನ ಮನಸ್ಸಿನ ಇಂಗಿತವನ್ನು ತಿಳಿದು ಮಮತೆಯು ಹೇಳಿದಳು : "ಮಹರ್ಷಿಯೇ! ನಿಮ್ಮಣ್ಣನ ಸಂಪರ್ಕದಿಂದ ಗರ್ಭಧರಿಸಿರುವ ನಾನು ನಿನ್ನೊಡನೆ ರಮಿಸಲು ಅಪಾತ್ರಳು. ನನ್ನ ಹೊಟ್ಟೆಯಲ್ಲಿರುವ ಮಗುವು ಈಗಾಗಲೇ ವೇದಾಂತಗಳನ್ನು ಅಧ್ಯಯನ ಮಾಡಿದೆ. ಮೇಲಾಗಿ ನಿನ್ನ ರೇತಸ್ಸೂ ಅಮೋಘವಾದುದು. ಎರಡು ಅಮೋಘಶಕ್ತಿಗಳನ್ನು ಧರಿಸಲು ನನ್ನ ಗರ್ಭಕೋಶವು ಸಮರ್ಥವಾಗಿಲ್ಲ. ಆದುದರಿಂದ ಈ ಸಮಯದಲ್ಲಿ ನನ್ನೊಡನೆ ರಮಿಸುವ ಇಚ್ಛೆಯನ್ನು ತೊರೆಯುವುದು ಯೋಗ್ಯವಾಗಿದೆ."*

ದೇವಗುರುವಾದ ಬೃಹಸ್ಪತಿಯು ಸಾಮಾನ್ಯನಲ್ಲ. ಮಹಾಮಹಿಮನು. ಅಘಟಿತಘಟನೆಯಲ್ಲಿಯೂ ಸಮರ್ಥನು. ಧರ್ಮಸೂಕ್ಷ್ಮವನ್ನು ತಿಳಿದವನು. ಆದರೂ ತನ್ನ ತಾತ್ಕಾಲಿಕವಾದ ಕಾಮೇಚ್ಛೆಯನ್ನು ತಡೆಯಲು ಸಮರ್ಥನಾಗಲಿಲ್ಲ. ಮಮತೆಯ ಮಾತುಗಳನ್ನು ಲೆಕ್ಕಿಸಲಿಲ್ಲ. ಕಾಮೇಚ್ಛೆಯಿಲ್ಲದವಳೊಡನೆ ರಮಿಸಕೂಡದೆಂಬ ಸ್ಮೃತಿವಾಕ್ಯವನ್ನೂ ಪರಿಗಣಿಸಲಿಲ್ಲ. ಕಾಮಬಾಣದ ಲಕ್ಷ್ಯಕ್ಕೆ ಸಿಕ್ಕಿ ಲೋಕಮರ್ಯಾದೆ-ಧರ್ಮಮರ್ಯಾದೆಗಳೆಲ್ಲವನ್ನೂ ತೊರೆದು ಮಮತೆಯೊಡನೆ ರಮಿಸಲು

---

* ಪ್ರಕೃತಿಗೆ ವಶರಾಗಿ ಕೆಲವೊಮ್ಮೆ ಮಹಾತ್ಮರೂ ಧರ್ಮವಲ್ಲದ ರೀತಿಯಲ್ಲಿ ನಡೆದುಕೊಳ್ಳುವಂತೆ ತೋರುವುದು. ಆದರೆ ಅದರ ಪರಿಣಾಮಗಳು ಯಾವಾಗಲೂ ಜಗನ್ಮಂಗಳಕಾರಕವಾಗಿಯೇ ಆಗುವುವು. ಸಾಮಾನ್ಯರಿಗೆ ಇದು ಅನುಕರಣಯೋಗ್ಯ ವಲ್ಲವೆಂದು ಶಾಸ್ತ್ರಗಳು ಖಂಡಿತವಾಗಿ ಹೇಳುವುವು.

ಹೋದನು. ಕಡೆಯಲ್ಲಿ ಬೃಹಸ್ಪತಿಯು ಶುಕ್ರೋತ್ಸರ್ಜನಮಾಡುವುದರಲ್ಲಿದ್ದಾಗ, ಅಕಾರ್ಯವನ್ನೆಸಗುತ್ತಿರುವುದನ್ನು ತಿಳಿದು ಗರ್ಭದಲ್ಲಿದ್ದ ಶಿಶುವೂ ಮಾತನಾಡಿತು.

"ತಂದೆಯೇ! ಕಾಮಕೇಳಿಯನ್ನು ನಿಲ್ಲಿಸು. ಶುಕ್ರೋತ್ಸರ್ಜನವನ್ನು ಮಾಡಬೇಡ. ಇಲ್ಲಿ ಇಬ್ಬರಿಗೆ ಸ್ಥಳವಿಲ್ಲ. ನಾನು ಮೊದಲು ಇಲ್ಲಿ ಸ್ಥಾನಮಾಡಿಕೊಂಡಿರುವೆನು. ನಿನ್ನ ರೇತಸ್ಸೂ ಅತ್ಯಂತ ಅಮೋಘವಾದುದು. ಆದುದರಿಂದ ಮೊದಲೇ ಇಲ್ಲಿರುವ ನನ್ನನ್ನು ಪೀಡಿಸುವುದು ನಿನಗೆ ಸರ್ವಥಾ ಯುಕ್ತವಲ್ಲ."

ಶುಕ್ರೋತ್ಸರ್ಜನದಿಂದ ಕಾಮೇಚ್ಛೆಯು ಪೂರ್ಣವಾಗುವುದೆಂದು ಹೇಳುವರು. ಗರ್ಭಸ್ಥಶಿಶುವಿನ ಆ ಮಾತಿನಿಂದಾಗಿ ಬೃಹಸ್ಪತಿಗುಂಟಾದ ಕೋಪಕ್ಕೆ ಪಾರವೇ ಇಲ್ಲವಾಯಿತು.

ಕೋಪಾವಿಷ್ಟನಾಗಿ ತನ್ನ ಇಚ್ಛೆಯ ಅಪೂರ್ಣತೆಗೆ ಕಾರಣವಾದ ಶಿಶುವನ್ನು ಶಪಿಸಿದನು. "ಶುಕ್ರೋತ್ಸರ್ಜನಕಾಲವು ಸಕಲಪ್ರಾಣಿಗಳೂ ಆಸಕ್ತಿಯಿಂದ ಆಶಿಸುವ ಕಾಲವಾಗಿರುತ್ತದೆ. ಅಂತಹ ಕಾಲವು ಸಮೀಪಿಸಿದಾಗ ನೀನು ಹೀಗೆ ಮಾತನಾಡಿ, ನನ್ನ ಸುಖಕ್ಕೆ ಭಂಗತಂದುದರಿಂದ ನಿನ್ನನ್ನು ದೀರ್ಘವಾದ ಕತ್ತಲೆಯು ಆವರಿಸಲಿ. ನೀನು ಜಾತ್ಯಂಧನಾಗು."

ಉತಥ್ಯನ ಮಗನು ಕುರುಡನಾಗಿಯೇ ಹುಟ್ಟಬೇಕಾಯಿತು. ದೀರ್ಘತಮಸನೆಂಬ ಅನ್ವರ್ಥನಾಮವನ್ನೇ ಅವನಿಗಿಟ್ಟರು. ಅವನು ಹುಟ್ಟುಕುರುಡನಾಗಿದ್ದರೂ ವೇದ-ವೇದಾಂಗಗಳನ್ನು ತಿಳಿದು ಬೃಹಸ್ಪತಿಯಂತೆಯೇ ತೇಜಸ್ವಿಯಾಗಿಯೂ, ವಿದ್ಯಾಪಾರಂಗತನಾಗಿಯೂ ಇದ್ದುದರಿಂದ, ಪ್ರದ್ವೇಷೀ ಎಂಬ ರೂಪಸಂಪನ್ನೆಯಾದ ಬ್ರಾಹ್ಮಣಕನ್ಯೆಯನ್ನು ವಿವಾಹವಾದನು. ಅವಳಲ್ಲಿ ದೀರ್ಘತಮಸನಿಗೆ ಗೌತಮನೇ ಮೊದಲಾದ ಅನೇಕ ಪುತ್ರರು ಜನಿಸಿದರು. ಮಹಾಮಹಿಮನಾದ ಮಹರ್ಷಿಯು ಹೆಚ್ಚಿನ ಸಂತಾನಪ್ರಾಪ್ತಿಗಾಗಿ ಸುರಭಿಯ ಮಗನಿಂದ ಗೋಧರ್ಮವನ್ನೂ ತಿಳಿದುಕೊಂಡು ಅದರಂತೆಯೇ ಆಚರಿಸತೊಡಗಿದನು. ಆದರೆ ಆಶ್ರಮವಾಸಿಗಳಿಗೆ ಅದು ಮಾನವಧರ್ಮದ ಅತಿಕ್ರಮಣವೆನಿಸಿತು. ಅವನನ್ನು ಆ ಸ್ಥಳದಿಂದಲೇ ಹೊರಡಿಸಿಬಿಡಬೇಕೆಂದು ನಿಶ್ಚಯಿಸಿಯೂ ಬಿಟ್ಟರು.

ಎಲ್ಲಕ್ಕಿಂತಲೂ ಹೆಚ್ಚಾಗಿ ಗೋಧರ್ಮಾಚರಣೆಯಿಂದ ಸಂತಾನಪಡೆದ ಅವನನ್ನು ಪತ್ನಿಯೂ ಮೂದಲಿಸಲು ಮೊದಲಿಟ್ಟಳು. ನಿಷ್ಕಳಂಕನಾಗಿದ್ದ ದೀರ್ಘತಮಸನಿಗೆ ಅವಳ ವರ್ತನೆಯು ಸಹ್ಯವಾಗಲಿಲ್ಲ.

ಪತ್ನಿಯ ವರ್ತನೆಯಿಂದ ಬೇಸತ್ತ ಮಹರ್ಷಿಯು ಪ್ರದ್ವೇಷಿಯನ್ನು ಕೇಳಿದನು : "ನೀನೂ ನನ್ನನ್ನು ದ್ವೇಷಿಸುವೆಯಾ?"

ಪತ್ನಿಯಿಂದ ಒಡನೆಯೇ ಉತ್ತರ ಬಂದಿತು ;

**ಭಾರ್ಯಯಾ ಭರಣಾದ್ಭರ್ತಾ ಪಾಲನಾಚ್ಚ ಪತಿಃ ಸ್ಮೃತಃ ॥೨೦॥**

"ಪತ್ನಿಯನ್ನು ಪೋಷಣೆ ಮಾಡುವುದರಿಂದ ಗಂಡನು 'ಭರ್ತಾ' ಎನಿಸುತ್ತಾನೆ. ಪಾಲನೆಮಾಡುವುದರಿಂದ ಗಂಡನನ್ನು 'ಪತಿ'ಯೆಂದು ಕರೆಯುವರು. ಆದರೆ ನೀನು ನನಗೆ ಭರ್ತೃವೂ ಅಲ್ಲ ; ಪತಿಯೂ ಅಲ್ಲ. ನೀನು ನನ್ನ ಪೋಷಣೆಯನ್ನೂ ಮಾಡುತ್ತಿಲ್ಲ ; ರಕ್ಷಣೆಯನ್ನೂ ಮಾಡುತ್ತಿಲ್ಲ. ಇದಕ್ಕೆ ಪ್ರತಿಯಾಗಿ ಹುಟ್ಟುಕುರುಡನಾದ ನಿನ್ನನ್ನೂ ನಿನ್ನ ಮಕ್ಕಳನ್ನೂ ನಾನೇ ಸಂರಕ್ಷಿಸುತ್ತಿರುವೆನು. ಆದರೆ ಇನ್ನು ಮುಂದೆ ನಿನ್ನ ರಕ್ಷಣೆಯು ನನ್ನಿಂದಾಗದು."

ಪ್ರದ್ವೇಷಿಯ ಮಾತುಗಳನ್ನು ಕೇಳಿ ದೀರ್ಘತಮಸನಿಗೆ ಬಹಳ ಕೋಪವೇ ಬಂದಿತು.

ದೀರ್ಘತಮಸನು ಮಕ್ಕಳನ್ನೂ ಪತ್ನಿಯನ್ನೂ ಕರೆದು ಕೇಳಿದನು : "ನಿಮಗೆ ಹಣವೇ ಹೆಚ್ಚೆನಿಸಿದರೆ ನನ್ನನ್ನು ಕ್ಷತ್ರಿಯರಾಜರ ಸಮೀಪಕ್ಕೆ ಕರೆದು ಕೊಂಡುಹೋಗಿರಿ. ನಿಮ್ಮನ್ನು ಹಣದಲ್ಲಿಯೇ ಮುಳುಗಿಸಿಬಿಡುವೆನು."

ಆ ಮಾತುಗಳೂ ಪ್ರದ್ವೇಷಿಗೆ ಹಿತವಾಗಲಿಲ್ಲ. "ಬ್ರಾಹ್ಮಣೋತ್ತ ಮನೇ! ನೀನು ಸಂಪಾದಿಸುವ ಹಣವು ಮತ್ತಷ್ಟು ದುಃಖಕ್ಕೆ ಕಾರಣವಾಗು ವುದೇ ಹೊರತು ಸುಖಕ್ಕೆ ಕಾರಣವಾಗಲಾರದು. ಆದುದರಿಂದ ನಾನು ನಿನ್ನ ಹಣವನ್ನು ಇಚ್ಛಿಸುವವಳಲ್ಲ. ಆದರೆ ಹಿಂದೆ ನಿನ್ನನ್ನು ಸಾಕಿದಂತೆ ಮುಂದೆ ಸಾಕಲಾರೆನು. ನಿನ್ನ ಇಚ್ಛೆಯಿದ್ದಂತೆ ಇರಬಹುದು"–ಎಂದು ಹೇಳಿಬಿಟ್ಟಳು.

ಪತ್ನಿಯ ಇಂಗಿತವನ್ನು ದೀರ್ಘತಮಸನು ಸಂಪೂರ್ಣವಾಗಿ ತಿಳಿದನು. ಪ್ರದ್ವೇಷಿಯು ತನ್ನ ಪತ್ನಿಯಾಗಿ ಮುಂದುವರಿಯಲು ಇಚ್ಛೆಪಡುತ್ತಿಲ್ಲ

ವೆಂದು ಭಾವಿಸಿದನು. ಪತಿಯು ಜೀವಿಸಿರುವಾಗಲೇ ಪತ್ನಿಯು ಬೇರೆಯವರನ್ನು ಸೇರುವ ದುಷ್ಟಪದ್ಧತಿಯನ್ನು ತೊಡೆದುಹಾಕಬೇಕೆಂದು ನಿಶ್ಚಯಿಸಿದನು. ನೂತನವಾದ ಒಂದು ಧರ್ಮವನ್ನೂ ಸಾರಿದನು. ಅವನ ಧರ್ಮವಾಣಿಯು ಅಸ್ಖಲಿತವಾಗಿತ್ತು.

**ಅದ್ಯ ಪ್ರಭೃತಿ ಮರ್ಯಾದಾ ಮಯಾ ಲೋಕೇ ಪ್ರತಿಷ್ಠಿತಾ ।**
**ಏಕ ಏವ ಪತಿರ್ನಾರ್ಯಾ ಯಾವಜ್ಜೀವಂ ಪರಾಯಣಮ್ ।**
**ಮೃತೇ ಜೀವತಿ ವಾ ತಸ್ಮಿನ್ನಾಪರಂ ಪ್ರಾಪ್ನುಯಾನ್ನರಮ್ ॥೩೫॥**

**ಅಭಿಗಮ್ಯ ಪರಂ ನಾರೀ ಪತಿಷ್ಯತಿ ನ ಸಂಶಯಃ ।**
**ಅಪತೀನಾಂ ತು ನಾರೀಣಾಮದ್ಯಪ್ರಭೃತಿ ಪಾತಕಮ್ ॥೩೬॥**

**ಯದ್ಯಸ್ತಿ ಚೇದ್ಧನಂ ಸರ್ವಂ ವೃಥಾಭೋಗಾ ಭವನ್ತು ತಾಃ ।**
**ಅಕೀರ್ತಿಃ ಪರಿವಾದಶ್ಚ ನಿತ್ಯಂ ತಾಸಾಂ ಭವನ್ತು ವೈ ॥೩೭॥**

"ನಾನು ಈ ದಿನದಿಂದ ನೂತನವಾದ ಒಂದು ನಿಯಮವನ್ನು ಸಾರುವೆನು. ಪ್ರತಿಯೊಬ್ಬ ಹೆಂಗಸೂ ಅವಳ ಜೀವಿತಕಾಲದಲ್ಲಿ ಒಬ್ಬನೇ ಒಬ್ಬ ಗಂಡನಲ್ಲಿ ಅನುರಕ್ತಳಾಗಿರಬೇಕು. ಗಂಡನು ಮೃತನಾದನಂತರವೂ ಹೆಂಗಸು ತನ್ನ ಜೀವಮಾನದಲ್ಲಿ ಬೇರೆಯವರನ್ನು ಸೇರಬಾರದು. ಒಂದು ವೇಳೆ ಕಾಮೇಚ್ಛೆಯಿಂದ ಒಬ್ಬ ಹೆಂಗಸು, ಗಂಡನು ಜೀವಂತನಾಗಿದ್ದಾಗ ಅಥವಾ ಮೃತನಾದಮೇಲೂ ಇನ್ನೊಬ್ಬನಲ್ಲಿ ಅನುರಕ್ತಳಾದರೆ ಅವಳು ಪತಿತೆಯಾಗುವವಳು. ಗಂಡನನ್ನು ತೊರೆದ ಸ್ತ್ರೀಯು 'ಪಾಪಿಷ್ಠೆ' ಎನಿಸುವಳು. ಸ್ತ್ರೀಗೆ ಯಥೇಷ್ಟವಾದ ಐಶ್ವರ್ಯವಿದ್ದರೂ ಐಹಿಕಾಮುಷ್ಮಿಕಸುಖಪ್ರಾಪ್ತಿಗೆ ಕಾರಣವಾದ ಸಂತಾನಕ್ಕೆ ಕಾರಣಭೂತನಾದ ಪತಿಯಿಲ್ಲದಿದ್ದರೆ ಅದು ವ್ಯರ್ಥವಾಗಲಿ. ಅಪಕೀರ್ತಿ-ಅಪವಾದಗಳು ಪತಿವಿಹೀನಳಾದ, ಪರಪುರುಷನನ್ನರಸಿ ಹೋಗುವ ಸ್ತ್ರೀಯನ್ನು ಅನುಸರಿಸಿ ಹೋಗಲಿ."

ಅವನ ಪತ್ನೀ-ಸುತರಿಗೆ ಆ ಮಾತುಗಳು ಸ್ವಾಭಾವಿಕವಾಗಿಯೇ ಸಹ್ಯವಾಗಲಿಲ್ಲ. ಪ್ರದ್ವೇಷಿಗೆ ಬಹಳವಾಗಿ ಕೋಪವೇ ಬಂದಿತು. ಮಕ್ಕಳನ್ನು ಕರೆದು ದೀರ್ಘತಮಸನ ಕೈ-ಕಾಲುಗಳನ್ನು ಕಟ್ಟಿ ಗಂಗೆಯಲ್ಲಿ ಹಾಕಿಬಿಡುವಂತೆ ಆಜ್ಞಾಪಿಸಿದಳು. ತಾಯಿಯ ಐಶ್ವರ್ಯದಿಂದ–ತಾಯಿಯ ಅಂಕೆ

ಯಲ್ಲಿಯೇ ಬೆಳೆದ ಮಕ್ಕಳಿಗೆ ಹುಟ್ಟುಕುರುಡನಾಗಿದ್ದ ತಂದೆಯ ವಿಷಯ ದಲ್ಲಿ ಸ್ವಾಭಾವಿಕವಾಗಿಯೇ ಗೌರವವಿರಲಿಲ್ಲ. ಮೇಲಾಗಿ ಗೌತಮಾದಿಗಳು ದುಷ್ಟರಾಗಿಯೂ, ಕಾಮ-ಕ್ರೋಧಾದಿ ಅರಿಷಡ್ವರ್ಗದಿಂದ ಪೀಡಿತರಾಗಿಯೂ ಇದ್ದರು. ತಾಯಿಯ ಆಜ್ಞೆಯು ಪಾಲನೆಮಾಡಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?–ಎಂಬ ವಿವೇಚನೆಯನ್ನೂ ಮಾಡಲಿಲ್ಲ. ಈ ಮುದುಕ ನನ್ನು ನಾವೇಕೆ ಸಾಕಬೇಕೆಂದು ಪರಸ್ಪರವಾಗಿ ಹೇಳಿಕೊಳ್ಳುತ್ತಾ, ಎಲ್ಲರೂ ಸೇರಿ ತಪೋಧನನಾದ ದೀರ್ಘತಮಸನನ್ನು ಗಂಗೆಯ ದಂಡೆಗೆ ಎತ್ತಿ ಕೊಂಡು ಹೋಗಿ ಸಮೀಪದಲ್ಲಿದ್ದ ದೋಣಿಯೊಂದಕ್ಕೆ ಅವನನ್ನು ಕಟ್ಟಿ, ಗಂಗೆಯಲ್ಲಿ ತೇಲಿಬಿಟ್ಟು, ನಿಷ್ಕರುಣೆಯಿಂದ ತಮ್ಮ ಆಶ್ರಮಕ್ಕೆ ಹಿಂದಿರುಗಿದರು.

ಪರಬ್ರಹ್ಮನಲ್ಲಿ ಕೇಂದ್ರೀಕೃತವಾಗಿದ್ದ ಮನಃಪ್ರವೃತ್ತಿಯುಳ್ಳ ದೀರ್ಘತಮಸನಿಗೆ ಪುತ್ರರು ಮಾಡಿದ ಕ್ರೂರಕಾರ್ಯದಿಂದ ಸಂತೋಷ ವಾಗಲೀ, ದುಃಖವಾಗಲೀ, ಕೋಪವಾಗಲೀ ಉಂಟಾಗಲಿಲ್ಲ. ಪರಬ್ರಹ್ಮ ವಸ್ತುವನ್ನೇ ನೆನೆಯುತ್ತಾ ಗಂಗೆಯ ತೊಡೆಯ ರೂಪದಲ್ಲಿದ್ದ ಪ್ರವಾಹದ ಮಧ್ಯದಲ್ಲಿ ನಿಶ್ಚಿಂತನಾಗಿದ್ದನು. ಪುತ್ರವಾತ್ಸಲ್ಯದಿಂದಲೋ ಎಂಬಂತೆ ಗಂಗೆಯು ದೀರ್ಘತಮಸನಿಗೆ ಸ್ವಲ್ಪವೂ ಘಾಸಿಯಾಗದ ರೀತಿಯಲ್ಲಿ ತನ್ನ ಪ್ರವಾಹದ ಮೂಲಕವಾಗಿ ನಾನಾದೇಶಗಳನ್ನು ದಾಟಿಸಿದಳು.

ಆ ಸಮಯದಲ್ಲೊಂದು ದಿನ ಪರಮಧಾರ್ಮಿಕನಾದ ಬಲಿರಾಜನು ಗಂಗೆಯಲ್ಲಿ ಸ್ನಾನಮಾಡಲು ಹೋದನು. ಶೌಚ-ಮುಖಮಾರ್ಜನಾದಿಗಳನ್ನು ಮುಗಿಸಿ, ನಡುಗಂಗೆಯಲ್ಲಿ ಮೀಯಲು ಇಳಿದಾಗ, ದೀರ್ಘತಮಸನಿದ್ದ ದೋಣಿಯು ತೇಲುತ್ತಾ ಅವನ ಸಮೀಪಕ್ಕೆ ಬಂದಿತು. ಅನೇಕ ದಿನಗಳು ಅನ್ನ-ಪಾನಗಳಿಲ್ಲದೇ ಕಳೆದಿದ್ದರೂ ಮಹರ್ಷಿಯ ಮುಖವು ಸ್ವಲ್ಪವಾದರೂ ಕುಂದಿರಲಿಲ್ಲ. ಒಡನೆಯೇ ಬಲಿರಾಜನು ಸ್ನಾನಮಾಡಿ ಪರಿಶುದ್ಧನಾಗಿ, ದೋಣಿಯನ್ನು ಎಳೆದು ದಡಕ್ಕೆ ತಂದು, ಮಹರ್ಷಿಗೆ ಸ್ವಲ್ಪವೂ ತೊಂದರೆ ಯಾಗದ ರೀತಿಯಲ್ಲಿ ಬಿಗಿದಿದ್ದ ಕಟ್ಟುಗಳನ್ನು ಬಿಚ್ಚಿದನು. ಮಹರ್ಷಿಯ ಕುಲ-ಗೋತ್ರಗಳೆಲ್ಲವನ್ನೂ ತಿಳಿದನಂತರ, ತಾನು ಬಹಳ ದಿವಸಗಳಿಂದ ಯೋಚಿಸುತ್ತಿದ್ದ, ಪುತ್ರಪ್ರಾಪ್ತಿಯ ಸಮಸ್ಯೆಯು ಪರಿಹಾರವಾಯಿತೆಂದು

ನಿಶ್ಚಯಿಸಿದ ರಾಜನು ಸಂತುಷ್ಟನಾದನು. ಮಹರ್ಷಿಗೆ ಅರ್ಘ್ಯ-ಪಾದ್ಯಾದಿ ಗಳನ್ನಿತ್ತು ಸಂತೈಸಿದನಂತರ ರಾಜನು ಕೈಜೋಡಿಸಿಕೊಂಡು–"ಮಹರ್ಷೇ! ನನ್ನ ಭಾರ್ಯೆಯಲ್ಲಿ ಸದ್ಗುಣಸಂಪನ್ನರಾದ ಮತ್ತು ಪರಮಧಾರ್ಮಿಕರಾದ ಮಕ್ಕಳು ಹುಟ್ಟುವಂತೆ ಅನುಗ್ರಹಿಸಬೇಕು"–ಎಂದು ದೈನ್ಯದಿಂದ ಬೇಡಿದನು.

ಸಂತಾನಾಭಿವೃದ್ಧಿಯಲ್ಲಿ ಗೋಧರ್ಮ–ಪುರುಷಧರ್ಮಗಳೆರಡರ ಲ್ಲಿಯೂ ನಿಷ್ಣಾತನಾಗಿದ್ದ ಮಹರ್ಷಿಯು ರಾಜನ ಮಾತಿಗೆ ಒಪ್ಪಿದನು. ರಾಜನು ಸಂತುಷ್ಟನಾಗಿ ತನ್ನ ಪಟ್ಟಮಹಿಷಿಯಾದ ಸುದೇಷ್ಣೆಯನ್ನು ಮಹರ್ಷಿಯ ಸೇವೆಗೆಂದು ಕಳುಹಿಸಿದನು. ಆದರೆ ಸುದೇಷ್ಣೆಯು ಜಾತ್ಯಂಧನಾಗಿದ್ದ ಮತ್ತು ಮುದುಕನಾಗಿದ್ದ ದೀರ್ಘತಮಸನ ಬಳಿಗೆ ಹೋಗಲು ಇಚ್ಛಿಸಲಿಲ್ಲ. ತನಗೆ ಬದಲಾಗಿ ತನ್ನ ಚೇಟಿಗೆ ಸರ್ವವಿಧವಾದ ಅಲಂಕಾರಗಳನ್ನೂ ಮಾಡಿ ಕಳುಹಿಸಿಕೊಟ್ಟಳು. ಜಿತೇಂದ್ರಿಯನಾದ ಮಹರ್ಷಿಯ ಅನುಗ್ರಹದಿಂದ ರಾಣಿಯ ಸೇವಕಿಗೆ ಕಾಕ್ಷೀವಂತನೇ ಮುಂತಾದ ಹನ್ನೊಂದು ಮಕ್ಕಳು ಜನಿಸಿದರು. ಅವರೆಲ್ಲರೂ ವೇದ-ವೇದಾಂಗಪಾರಂಗತರಾಗಿ ಋಷಿ ಸಮಾನರಾದರು.

ಒಂದು ದಿನ ರಾಜನು ದೀರ್ಘತಮಸನನ್ನು ಕರೆಯಿಸಿ–"ಬ್ರಾಹ್ಮಣೋ ತ್ತಮರೇ! ನಿಮ್ಮ ಅನುಗ್ರಹದಿಂದ ಜನಿಸಿರುವ ಈ ನನ್ನ ಮಕ್ಕಳನ್ನು ಧನುರ್ವಿದ್ಯಾಭ್ಯಾಸಕ್ಕಾಗಿ ಕಳುಹಿಸಬೇಕೆಂದಿರುವೆನು. ಆಶೀರ್ವದಿಸಿರಿ"– ಎಂದನು. ದೀರ್ಘತಮಸನು ಒಮ್ಮೆ ನಿಟ್ಟುಸಿರುಬಿಟ್ಟು– "ಮಹಾರಾಜ! ಇವರು ನಿನ್ನ ಮಕ್ಕಳಲ್ಲ. ನನ್ನ ಮಕ್ಕಳು. ನಿನ್ನ ಅದೃಷ್ಟಹೀನ ಪತ್ನಿಯು ನನ್ನನ್ನು ಕುರುಡನೆಂದು ತಿರಸ್ಕರಿಸಿ, ನಿನ್ನ ಆಜ್ಞೆಯನ್ನು ನಡೆಸಿ ಕೊಡಲು ತನ್ನ ಚೇಟಿಯನ್ನು ಕಳುಹಿಸಿಕೊಟ್ಟಳು. ಅವಿವಾಹಿತೆಯಾದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಈ ಬಾಲಕರೆಲ್ಲರೂ ನನ್ನ ಮಕ್ಕಳು"–ಎಂದು ನಡೆದ ವೃತ್ತಾಂತವೆಲ್ಲವನ್ನೂ ದೀರ್ಘತಮಸನು ರಾಜನಿಗೆ ತಿಳಿಸಿದನು. ರಾಜನಿಗೆ ಬಹಳ ದುಃಖವಾಯಿತು. ಪುನಃ ಮಹರ್ಷಿಯನ್ನು ಸಂತೈಸಿ, ತನ್ನ ಹೆಂಡತಿಯಾದ ಸುದೇಷ್ಣೆಗೆ ಮಕ್ಕಳಾಗುವಂತೆ ಅನುಗ್ರಹಿಸಬೇಕೆಂದು ಕೇಳಿಕೊಂಡನು. ಪರಮಕಾರುಣಿಕನಾದ ತಪಸ್ವಿಯು ರಾಜನ ಮಾತಿಗೆ

ಪುನಃ ಒಪ್ಪಿದನು. ಋತುಸ್ನಾತೆಯಾಗಿ ಬಂದ ಸುದೇಷ್ಣೆಯನ್ನು ಕೇವಲ ಸ್ಪರ್ಶಮಾಡಿ–"ನಿನಗೆ ಅಂಗ, ವಂಗ, ಕಳಿಂಗ, ಪುಂಡ್ರ ಮತ್ತು ಕುಂಭರೆಂಬ ಸೂರ್ಯನಂತೆ ತೇಜಸ್ವಿಗಳಾದ ಐವರು ಮಕ್ಕಳು ಜನಿಸುವರು. ಅವರು ತಮ್ಮ-ತಮ್ಮ ಹೆಸರಿನಲ್ಲಿಯೇ ಪ್ರತ್ಯೇಕವಾದ ರಾಜ್ಯಗಳನ್ನು ಕಟ್ಟಿ ಧರ್ಮದಿಂದ ರಾಜ್ಯವಾಳುವರು"–ಎಂದು ಅನುಗ್ರಹಿಸಿ ಕಳುಹಿಸಿದನು. ಸತ್ಯವ್ರತನಾದ ಮಹರ್ಷಿಯ ಮಾತು ಅಸತ್ಯವಾಗುವುದೆಂತು? ಅವನು ಹೇಳಿದಂತೆಯೇ ಸುದೇಷ್ಣೆಗೆ ಐವರು ಪುತ್ರರು ಜನಿಸಿದರು. ಅವರು ಕ್ರಮವಾಗಿ ಅಂಗ, ವಂಗ, ಕಳಿಂಗ, ಪುಂಡ್ರ, ಕುಂಭಗಳೆಂಬ ಐದು ರಾಜ್ಯಗಳನ್ನು ಕಟ್ಟಿ ರಾಜ್ಯವಾಳಿದರು. ಫಲಹೀನವಾಗಿದ್ದ ಬಲಿರಾಜನ ವಂಶವೃಕ್ಷವು ಮಹರ್ಷಿಯ ಅನುಗ್ರಹದಿಂದ ಫಲಭರಿತವಾಯಿತು.

ಹೀಗೆಯೇ ಅನೇಕಕ್ಷತ್ರಿಯರಾಜರು ವಂಶವು ಕ್ಷೀಣಿಸಿ ಹೋಗುವಂತಹ ಆಪತ್ಕಾಲದಲ್ಲಿ ಜಿತೇಂದ್ರಿಯರಾದ ಬ್ರಾಹ್ಮಣರ ಅನುಗ್ರಹದಿಂದ ಪರಮಧರ್ಮಜ್ಞರಾದ, ವೀರ್ಯವಂತರಾದ, ಮಹಾಬಲರಾದ ಕ್ಷತ್ರಿಯ ಪುರುಷರನ್ನು ಪಡೆದ ಇತಿಹಾಸವಿದೆ. ಅಮ್ಮಾ! ನನಗೆ ತಿಳಿದುದನ್ನು ನಾನು ಹೇಳಿರುವೆನು. ಇವೆಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡು ನಿನ್ನ ಇಚ್ಛೆಯಿದ್ದಂತೆ ಮಾಡಬಹುದು."

೧೦೪ನೆಯ ಅಧ್ಯಾಯವು ಮುಗಿಯಿತು.

೧೦೫ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಸತ್ಯವತಿಯ ಆಹ್ವಾನದಂತೆ ವ್ಯಾಸರ ಆಗಮನ: ವ್ಯಾಸರು ಕುರುವಂಶದ ಅಭಿವೃದ್ಧಿಗಾಗಿ ತಾಯಿಯ ಅಪೇಕ್ಷೆಯಂತೆ ವಿಚಿತ್ರವೀರ್ಯನ ಪತ್ನಿಯರಲ್ಲಿ ಸಂತಾನೋತ್ಪಾದನೆಗೆ ಸಮ್ಮತಿಸಿದುದು

ಜನಮೇಜಯ! ಭೀಷ್ಮನು ಮುಂದುವರಿದು ಹೇಳಿದನು :

**ಪುನರ್ಭರತವಂಶಸ್ಯ ಹೇತುಂ ಸಂತಾನವೃದ್ಧಯೇ ।**
**ವಕ್ಷ್ಯಾಮಿ ನಿಯತಂ ಮಾತಸ್ತನ್ಮೇ ನಿಗದತಃ ಶೃಣು ॥೧॥**

**ಬ್ರಾಹ್ಮಣೋ ಗುಣವಾನ್ಕಶ್ಚಿದ್ಧನೇನೋಪನಿಯನ್ತ್ರ್ಯತಾಮ್ ।**
**ವಿಚಿತ್ರವೀರ್ಯಕ್ಷೇತ್ರೇಷು ಯಃ ಸಮುತ್ಪಾದಯೇತ್ಪ್ರಜಾಃ ॥೨॥**

"ಅಮ್ಮಾ! ಭರತವಂಶದ ಸಂತಾನವು ಅಭಿವೃದ್ಧಿಯಾಗಲು ನಾನು ಕೊಡಲಿರುವ ಸೂಚನೆಗಳನ್ನು ಕೇಳು. ಶ್ರೋತ್ರಿಯನಾದ, ಧರ್ಮನಿಷ್ಠನಾದ ಬ್ರಾಹ್ಮಣನೊಬ್ಬನನ್ನು ಕರೆದು, ಅವನಿಗೆ ಯಥೇಚ್ಛವಾಗಿ ಧನವನ್ನು ಕೊಟ್ಟು, ಅವನ ಮೂಲಕವಾಗಿ ವಿಚಿತ್ರವೀರ್ಯನ ಭಾರ್ಯೆಯರಲ್ಲಿ ಸಂತಾನವನ್ನು ಪಡೆಯಬಹುದು."*

ಭೀಷ್ಮನು ಹೇಳಿದ ಉಪಾಖ್ಯಾನಗಳನ್ನು ಕೇಳಿದನಂತರ ಸತ್ಯವತಿಗೆ ಸ್ವಲ್ಪ ಸಮಾಧಾನವಾಯಿತು. ತನ್ನ ಮಗನೊಬ್ಬನು ಬ್ರಹ್ಮರ್ಷಿ ಎಂಬುದನ್ನು ಸತ್ಯವತಿಯು ಸ್ಮರಿಸಿಕೊಂಡಳು. ಒಡನೆಯೇ ಮುಗುಳ್ನಗೆಯೂ, ಸ್ತ್ರೀಸ್ವಭಾವಜನ್ಯವಾದ ನಾಚಿಕೆಯೂ ಮುಖವನ್ನು ಆವರಿಸಿತು. ವಿಷಯವು

---

* ಭೀಷ್ಮನು ಹೇಳಿರುವುದು ನಿಯೋಗದ ವಿಷಯವಾಗಿದೆ. ನಿಯೋಗದ ವಿಷಯವಾಗಿ ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ :

**ವಿಧವಾಯಾಂ ನಿಯುಕ್ತಸ್ತು ಘೃತಾಕ್ತೋ ವಾಗ್ಯತೋ ನಿಶಿ ।**
**ಏಕಮುತ್ಪಾದಯೇತ್ಪುತ್ರಂ ನ ದ್ವಿತೀಯಂ ಕಥಂಚನ ॥**

ಅಧ್ಯಾಯ ೯-ಶ್ಲೋಕ ೬೦

ಪತಿವಂಶದ ಗುರುಜನರ ಅಪೇಕ್ಷೆಯಂತೆ ವಿಧವೆಯೊಡನೆ ಸಮಾಗಮವನ್ನು ಮಾಡುವವನು ರಾತ್ರಿಯಲ್ಲಿ ಮೈಗೆಲ್ಲ ತುಪ್ಪವನ್ನು ಹಚ್ಚಿಕೊಂಡು, ಏನೊಂದನ್ನೂ ಮಾತನಾಡದೇ ಸ್ತ್ರೀಸಂಗವನ್ನು ಮಾಡಬೇಕು. ಈ ವಿಧವಾದ ನಿಯಮದಲ್ಲಿದ್ದುಕೊಂಡು ಕೇವಲ ಒಬ್ಬ ಪುತ್ರನನ್ನು ಪಡೆಯಬೇಕೇ ಹೊರತು ಎರಡನೆಯವನನ್ನು ಪಡೆಯಕೂಡದು.

**ವಿಧವಾಯಾಂ ನಿಯೋಗಾರ್ಥೇ ನಿರ್ವೃತ್ತೇ ತು ಯಥಾವಿಧಿ ।**
**ಗುರುವಚ್ಚ ಸ್ನುಷಾವಚ್ಚ ವರ್ತೇಯಾತಾಂ ಪರಸ್ಪರಮ್ ॥**

– ಅಧ್ಯಾಯ ೯ ಶ್ಲೋಕ ೬೩

ವಿಧವೆಯಲ್ಲಿ ಕೇವಲ ಸಂತಾನಾರ್ಥವಾಗಿ ಅನಾಸಕ್ತನಾಗಿ ಸಮಾಗಮಮಾಡಿ ಸಂತಾನವು ಪ್ರಾಪ್ತವಾದನಂತರ ಸ್ತ್ರೀ-ಪುರುಷರ ಸಂಬಂಧವು ಮಾವ ಮತ್ತು ಸೊಸೆಯ ರೀತಿಯಲ್ಲಿರಬೇಕು. ಪುನಃ ಆ ಸ್ತ್ರೀಯನ್ನು ಕಾಮೋಪಭೋಗ್ಯಳೆಂದು ಪುರುಷನು ಭಾವಿಸಬಾರದು. (ಕಲಿಯುಗದಲ್ಲಿ ಈ ವಿಧವಾದ ಮನಸ್ಸಂಯಮವು ಅಸಾಧ್ಯವಾದುದರಿಂದ ಈ ಯುಗಕ್ಕೆ ಇದು ವರ್ಜ್ಯವಾಗಿದೆ.)

ಗೋಪ್ಯವಾಗಿದ್ದುದರಿಂದ ನಾಚಿಕೆಬಿಟ್ಟು ಹೇಳಲು ಸತ್ಯವತಿಗೆ ಸಾಧ್ಯವಾಗಲಿಲ್ಲ. ಆದರೂ ಆ ಸಮಯದಲ್ಲಿ ಹೇಳದೇ ವಿಧಿಯಿರಲಿಲ್ಲ. 'ಭೀಷ್ಮ' ಎಂದಳು. ಮುಂದೆ ಒಂದೆರಡು ನಿಮಿಷಗಳು ಮಾತು ಹೊರಡಲಿಲ್ಲ. ಆ ವೇಳೆಯಲ್ಲಿ ಸತ್ಯವತಿಯ ಮುಖಲಕ್ಷಣಗಳನ್ನು ನೋಡಿ ಭೀಷ್ಮನು ಅವಳು ಹೇಳುವ ವಿಷಯವು ಅತಿಗೋಪ್ಯವಾಗಿರಬಹುದೆಂದು ಊಹಿಸಿದನು. "ನಾನು ಹೇಳಿದುದೆಲ್ಲವೂ ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮವಮ್ಮಾ!"–ಎಂದು ಪುನಃ ಹೇಳಿ ಸತ್ಯವತಿಯ ಮಾತಿಗೆ ಭೀಷ್ಮನು ಪೀಠಿಕೆ ಹಾಕಿಕೊಟ್ಟನು.

"ನಿಜ. ಮಗು! ನೀನು ಹೇಳಿದುದೆಲ್ಲವೂ ನಿಜ! ಆಪತ್ಕಾಲದಲ್ಲಿ ನೀನು ಹೇಳಿದ ಮಾರ್ಗವನ್ನೇ ಅನುಸರಿಸಬೇಕು. ನಮ್ಮ ವಂಶವು ಬೆಳೆಯಲು ಈಗ ನಾನು ಹೇಳುವ ವಿಧಾನವನ್ನು ನೀನು ನಿರಾಕರಿಸಲಾರೆಯೆಂಬ ಭರವಸೆಯು ನನಗಿದೆ. ಈಗ ಹೇಳಲಿರುವ ವಿಷಯವು ಸಕಲವಿಧಗಳಿಂದಲೂ ಧರ್ಮಸಮ್ಮತವಾಗುವುದೆಂದು ನಾನು ಭಾವಿಸಿರುತ್ತೇನೆ. ಧರ್ಮಜ್ಞನೂ, ಸತ್ಯಪ್ರಿಯನೂ ಆಗಿರುವ ನೀನೇ ನಮ್ಮೆಲ್ಲರಿಗೂ ಆಶ್ರಯಭೂತನಾಗಿರುವೆ. ನನ್ನ ಮಾತನ್ನು ಕೇಳಿದನಂತರ ಯುಕ್ತಾಯುಕ್ತತೆಯನ್ನು ವಿವೇಚನೆಮಾಡಿ ಮಾಡಬೇಕಾದ ಕರ್ತವ್ಯವನ್ನು ಮಾಡು."

ಮತ್ತೆರಡು ನಿಮಿಷಗಳು ಕಳೆದುವು. ಭೀಷ್ಮನೂ ಮೌನವಾಗಿಯೇ ಕುಳಿತಿದ್ದನು. ಸತ್ಯವತಿಯು ಮುಂದುವರಿದು ಹೇಳಿದಳು :

"ನನ್ನ ತಂದೆಯು ಧರ್ಮಾತ್ಮನಾಗಿಯೂ, ಸತ್ಯಪ್ರಿಯನಾಗಿಯೂ ಇದ್ದನು. ಪ್ರಯಾಣಿಕರನ್ನು ಯಮುನೆಯ ಒಂದು ದಡದಿಂದ ಮತ್ತೊಂದು ದಡಕ್ಕೆ ಒಯ್ಯಲು ದೋಣಿಯನ್ನು ಇಟ್ಟಿದ್ದನು. ಪ್ರತಿಫಲವನ್ನೇನೂ ತೆಗೆದುಕೊಳ್ಳುತ್ತಿರಲಿಲ್ಲ. ಧರ್ಮಕ್ಕಾಗಿಯೇ ಆ ಕಾರ್ಯವನ್ನವನು ಮಾಡುತ್ತಿದ್ದನು. ಅವನಿಗೆ ವೇಳೆಯಿಲ್ಲದಿದ್ದಾಗ ನಾನೇ ದೋಣಿಯನ್ನು ನಡೆಸುತ್ತಿದ್ದೆನು. ಋತುಮತಿಯಾದನಂತರ ಒಂದು ದಿನ ನಾನು ದೋಣಿಯನ್ನು ನಡೆಸುತ್ತಿದ್ದಾಗ ಮಹರ್ಷಿಗಳಾದ ಪರಾಶರರು ಯಮುನೆಯನ್ನು ದಾಟಲು

ದೋಣಿಯನ್ನು ಹತ್ತಿದರು. ದೋಣಿಯು ನದಿಯ ಮಧ್ಯಭಾಗವನ್ನು ಸೇರಿತು. ಅಂತೆಯೇ ಮಹರ್ಷಿಗಳ ಮನಸ್ಸೂ ನನ್ನೆಡೆಗೆ ಪ್ರವಹಿಸಿತು. ಪ್ರಿಯವಾಕ್ಯಗಳಿಂದ ನನ್ನೊಡನೆ ಸಮಾಗಮದ ಇಚ್ಛೆಯನ್ನು ವ್ಯಕ್ತಪಡಿಸಿದರು. ತಮ್ಮ ಜನ್ಮ ಮತ್ತು ಕುಲಗಳ ಪರಿಚಯವನ್ನೂ ಮಾಡಿಕೊಟ್ಟರು. ನಾನಾಗ ನಿಷಾದಪುತ್ರಿಯೆಂದು ನನ್ನನ್ನು ಪರಿಚಯಮಾಡಿಕೊಟ್ಟೆನು. ನಾನು ಪ್ರೌಢೆಯಾಗಿದ್ದರೂ ನಮ್ಮ ತಂದೆಯವರ ಆಶ್ರಯದಲ್ಲಿದ್ದೆನಾದ ಕಾರಣ ಮಹರ್ಷಿಗಳ ಇಚ್ಛೆಯಂತೆ ನಡೆಯಲು ಭಯಪಟ್ಟೆನು. ಆದರೆ ಮಹರ್ಷಿಗಳಿಗೆ ವಿರೋಧವಾಗಿ ನಡೆಯುವುದರಿಂದ ಶಾಪಕೊಡಬಹುದೆಂಬ ಭೀತಿಯೂ ಉಂಟಾಯಿತು. ಅವರಿಂದ ಅಮೋಘವಾದ ವರವನ್ನು ಪಡೆದ ನಾನು ಅವರ ಇಚ್ಛೆಗೆ ಪ್ರತಿಯಾಗಿ ನಡೆಯಲಾಗಲಿಲ್ಲ. ತಮ್ಮ ದಿವ್ಯತೇಜಸ್ಸಿನಿಂದಲೇ ಅವರು ನನ್ನನ್ನು ತಮ್ಮ ವಶಳನ್ನಾಗಿ ಮಾಡಿಕೊಂಡುಬಿಟ್ಟರು. ನಾವಿದ್ದ ಯಮುನಾನದಿಯ ಮಧ್ಯಭಾಗದಲ್ಲಿ ಮಂಜುಕವಿದು ಅಂಧಕಾರವಾಗುವಂತೆ ಮಾಡಿ ತಮ್ಮ ಆಸೆಯನ್ನು ಪೂರೈಸಿಕೊಂಡರು. ಅವರಿತ್ತ ವರದಿಂದ ನನ್ನ ಶರೀರದಲ್ಲಿ ಹುಟ್ಟಿನಿಂದಿದ್ದ ಮೀನಿನ ವಾಸನೆಯು ಹೋಗಿ ಸುಗಂಧವುಂಟಾಯಿತು. ನವಮಾಸಗಳ ಗರ್ಭಧಾರಣೆಯೇ ಇಲ್ಲದೇ ತೇಜಃಪುಂಜಪೂರ್ಣನಾದ ಮಗನನ್ನು ಪಡೆದೆನು.* ಪುತ್ರವತಿಯಾದ ಮೇಲೆಯೂ ಹಿಂದಿನ ಕನ್ಯಾವಸ್ಥೆಗೆ ಕಳಂಕವುಂಟಾಗದಂತೆ ಮಹರ್ಷಿಗಳು ಅನುಗ್ರಹಿಸಿದರು. ನನ್ನ ಮಗನು ನದಿಯ ಮಧ್ಯದಲ್ಲಿದ್ದ ದ್ವೀಪದಲ್ಲಿ ಹುಟ್ಟಿದನಾದ ಕಾರಣ ದ್ವೈಪಾಯನನೆಂದೇ ಕರೆಯಲ್ಪಟ್ಟನು.

**ಯೋ ವ್ಯಸ್ಯ ವೇದಾಂಶ್ಚತುರಸ್ತಪಸಾ ಭಗವಾನೃಷಿಃ ।**
**ಲೋಕೇ ವ್ಯಾಸತ್ವಮಾಪೇದೇ ಕಾರ್ಷ್ಣ್ಯಾತ್ಕೃಷ್ಣತ್ವಮೇವ ಚ ॥೧೫॥**

ವೇದಗಳನ್ನು ಋಗ್ಯಜುಸ್ಸಾಮಾಥರ್ವಣಗಳೆಂದು ನಾಲ್ಕು ವಿಭಾಗ ಗಳನ್ನಾಗಿ ವಿಂಗಡಿಸಿದ ಅವನನ್ನು ಮಹರ್ಷಿಗಳು ವ್ಯಾಸನೆಂದೂ ಕರೆದರು.

---

*ಕಾಲ-ಕರ್ಮಸಂಯೋಗಗಳು ಆ ಸಮಯದಲ್ಲಿ ಒಬ್ಬ ಮಹಾವಿಭೂತಿಯ ಅವತಾರಕ್ಕೆ ತಕ್ಕುದಾಗಿದ್ದುವು. ಅದಕ್ಕೆ ಉಪರಿಚರವಸುವಿನ ಪುತ್ರಿಯಂತಹ ಸುಪಾತ್ರವೂ ದೊರಕಿತು.

ಅವನ ವರ್ಣವು ಕಪ್ಪಾದುದರಿಂದ ಕೃಷ್ಣನೆಂದೂ ಹಲವರು ಕರೆಯುವುದುಂಟು.

**ಸತ್ಯವಾದೀ ಶಮಪರಸ್ತಪಸ್ವೀ ದಗ್ಧಕಿಲ್ಬಿಷಃ ।**
**ಸಮುತ್ಪನ್ನಃ ಸ ತು ಮಹಾನ್ಸಹ ಪಿತ್ರಾ ತತೋ ಗತಃ ॥೧೯॥**

ಸತ್ಯವ್ರತನಾದ, ರಾಗರಹಿತನಾದ, ತಪೋನಿಷ್ಠನಾದ ಮಹರ್ಷಿಯು ಹುಟ್ಟಿದೊಡನೆಯೇ ತಪಶ್ಚರಣೆಗಾಗಿ ತಂದೆಯೊಡನೆ ಹೊರಟುಹೋದನು.

ಅವನು ನನ್ನ ಆಜ್ಞೆಗೆ ಒಳಪಟ್ಟು ನಮ್ಮ ವಂಶದ ಬೆಳವಣಿಗೆಗೆ ಕಾರಣನಾಗಲು ಒಪ್ಪುವನೆಂಬ ಭರವಸೆಯು ನನಗಿದೆ. ಅವನು ನನ್ನನ್ನಗಲಿ ಹೊರಡುವಾಗ "ಸ್ಮರೇಃ ಕೃಚ್ಛ್ರೇಷು ಮಾಂ" "ತಾಯೀ! ಆಪತ್ಕಾಲದಲ್ಲಿ ನನ್ನನ್ನು ಸ್ಮರಿಸು. ನೀನು ನೆನೆದೊಡನೆಯೇ ಬರುವೆನು"–ಎಂದು ಹೇಳಿ ಹೋಗಿರುವನು. ಗಾಂಗೇಯನೇ! ನೀನು ಇದಕ್ಕೆ ಒಪ್ಪುವೆಯಾದರೆ ಮಾತ್ರ ನಾನು ನನ್ನ ಮಗನನ್ನು ಸ್ಮರಿಸಿಕೊಳ್ಳುವೆನು. ಆ ಮಹಾತಪಸ್ವಿಯಿಂದ ವಿಚಿತ್ರವೀರ್ಯನ ಮಡದಿಯರಲ್ಲಿ ಸಂತಾನಪ್ರಾಪ್ತಿಯಾಗುವುದೆಂಬುದರಲ್ಲಿ ನನಗಾವ ಸಂಶಯವೂ ಇಲ್ಲ.

ಸತ್ಯವತಿಯು ವ್ಯಾಸಮಹರ್ಷಿಗಳ ಹೆಸರನ್ನು ಹೇಳಿದೊಡನೆಯೇ ಭೀಷ್ಮನು ಬದ್ಧಾಂಜಲಿಯಾಗಿ ತಾಯಿಗೆ ಹೇಳಿದನು :

**ಧರ್ಮಮರ್ಥಂ ಚ ಕಾಮಂ ಚ ತ್ರೀನೇತಾನ್ಯೋಽನುಪಶ್ಯತಿ ।**
**ಅರ್ಥಮರ್ಥಾನುಬನ್ಧಂ ಚ ಧರ್ಮಂ ಧರ್ಮಾನುಬನ್ಧನಮ್ ॥೨೦॥**

**ಕಾಮಂ ಕಾಮಾನುಬನ್ಧಂ ಚ ವಿಪರೀತಾನ್ಪೃಥಕ್ಪೃಥಕ್ ।**
**ಯೋ ವಿಚಿನ್ತ್ಯ ಧಿಯಾ ಧೀರೋ ವ್ಯವಸ್ಯತಿ ಸ ಬುದ್ಧಿಮಾನ್ ॥೨೧॥**

"ತಾಯೇ! ಮೇಧಾವಿಯಾದವನು ಧರ್ಮಾರ್ಥ-ಕಾಮಗಳನ್ನು ಬಹಳ ವಿವೇಚನೆಯಿಂದ ತಿಳಿದು ಸಾಧಿಸಬೇಕು. ಇಂದಿನ ಧರ್ಮಾನುಸರ ಣೆಯು ಮುಂದೆಯೂ ಧಾರ್ಮಿಕಪ್ರವೃತ್ತಿಗೆ ಕಾರಣವಾಗಬೇಕು. ಅರ್ಥ- ಕಾಮಗಳು ಧರ್ಮದ ಬೆಂಗಾವಲಿನಿಂದ ಕೂಡಿದ್ದಾಗಿರಬೇಕು. ಅವೂ ಸಹ

ಮುಂದಿನ ಅರ್ಥ-ಕಾಮಗಳ ಪ್ರಾಪ್ತಿಗೆ ಕಾರಣವಾಗುವಂತಿರಬೇಕು. ಈ ರೀತಿಯಲ್ಲಿ ನಡೆಯುವುದು ಬುದ್ಧಿವಂತನೆನಿಸಿದ ಮಾನವನ ಕರ್ತವ್ಯವಾಗಿರುತ್ತದೆ. ಆದುದರಿಂದ ಧರ್ಮಸಮ್ಮತವಾದ ಮತ್ತು ನಮ್ಮ ಕುಲಕ್ಕೆ ಹಿತವೆನಿಸುವ ನಿನ್ನ ಉತ್ತಮವಾದ ಸಲಹೆಗೆ ನನ್ನ ಸಂಪೂರ್ಣವಾದ ಅನುಮತಿಯಿರುವುದು."

ಇಷ್ಟು ಮಾತ್ರದಿಂದಲೇ ಸತ್ಯವತೀ-ಭೀಷ್ಮರಿಗೆ ವಂಶವು ಬೆಳೆದಷ್ಟು ಸಮಾಧಾನವೇ ಉಂಟಾಯಿತು. ಆಪತ್ಕಾಲದಲ್ಲಿ ಧರ್ಮಸಮ್ಮತವಾದ ಮಾರ್ಗವು ತೋರಿದುದಕ್ಕಾಗಿ ಸಮಾಧಾನಹೊಂದಿ ಇಬ್ಬರೂ ತಮ್ಮ-ತಮ್ಮ ನಿವಾಸಗಳನ್ನು ಸೇರಿದರು.

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

"ಮಹಾರಾಜ! ತನ್ನ ಅಭಿಪ್ರಾಯಕ್ಕೆ ಭೀಷ್ಮನೂ ಒಪ್ಪಿಗೆಯನ್ನಿತ್ತ ನಂತರ ಕಾಲಿಯು ಸತ್ಯನಿಷ್ಠರಾದ ಕೃಷ್ಣದ್ವೈಪಾಯನರನ್ನು ಸ್ಮರಿಸಿ ಕೊಂಡಳು. ಸತ್ಯನಿಷ್ಠರಾದ, ಧೀಮಂತರಾದ, ವೇದ-ವೇದಾಂಗತತ್ತ್ವ ವಿಚಾರಗಳಲ್ಲಿ ಮಗ್ನರಾಗಿದ್ದ ವ್ಯಾಸರು ತಾಯಿಯು ತಮ್ಮನ್ನು ಸ್ಮರಿಸಿದಳೆಂಬು ದನ್ನು ತಿಳಿದೊಡನೆಯೇ ಬೇರಾರಿಗೂ ತಿಳಿಯದ ರೀತಿಯಲ್ಲಿ ತಾಯಿಯ ಸಮೀಪಕ್ಕೆ ಆಗಮಿಸಿದರು. ಮಗನ ಆಗಮನದಿಂದ ಸತ್ಯವತಿಯು ಆನಂದ ತುಂದಿಲಳಾದಳು. ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ಸತ್ಕಾರಮಾಡುವಂತೆ–ವ್ಯಾಸರಿಗೆ-ಅರ್ಘ್ಯ-ಪಾದ್ಯಾದಿಗಳನ್ನು ಅರ್ಪಿಸಿದ ಬಳಿಕ ಪುತ್ರನನ್ನು ಬಾಚಿ ತಬ್ಬಿಕೊಂಡು, ಆನಂದಬಾಷ್ಪಗಳಿಂದ ಅವರನ್ನು ಅಭಿಷೇಚಿಸಿದಳು. ಬಹಳ ದಿನಗಳನಂತರ ಪುತ್ರನನ್ನು ನೋಡಿದಳಾದ್ದರಿಂದ ಸತ್ಯವತಿಗೆ ತನ್ನ ಕಣ್ಣೀರನ್ನು ತಡೆದುಕೊಳ್ಳಲು ಸಾಧ್ಯವಾಗಲೇ ಇಲ್ಲ. ಸಂತೋಷಾಧಿಕ್ಯದಿಂದ ಆನಂದಬಾಷ್ಪಗಳು ಧಾರಾಕಾರವಾಗಿ ಪ್ರವಹಿಸುತ್ತಿದ್ದುವು. ವ್ಯಾಸರು ಕಮಂಡಲುವಿನ ನೀರಿನಿಂದ ತಾಯಿಯ ಕಣ್ಣೊರೆಸುತ್ತಾ, ಅಭಿವಾದನಮಾಡಿ ವಿನೀತರಾಗಿ ಹೇಳಿದರು :

**ಭವತ್ಯಾ ಯದಭಿಪ್ರೇತಂ ತದಹಂ ಕರ್ತುಮಾಗತಃ ।**
**ಶಾಧಿ ಮಾಂ ಧರ್ಮತತ್ತ್ವಜ್ಞೇ ಕರವಾಣಿ ಪ್ರಿಯಂ ತವ ॥೨೮॥**

"ಅಮ್ಮಾ! ನಾನು ನಿನ್ನ ಮನಸ್ಸಿನಲ್ಲಿರುವ ಆಶಯವನ್ನು ನಡೆಸಿ

ಕೊಡಲು ಬಂದಿರುವೆನು. ನೀನು ಧರ್ಮತತ್ತ್ವಜ್ಞಳಾಗಿರುವೆ. ನಾನೇನು ಮಾಡಬೇಕೆಂಬುದನ್ನು ಆಜ್ಞಾಪಿಸು. ನಿನಗೆ ಪ್ರಿಯವಾದ ಯಾವ ಕಾರ್ಯವನ್ನಾದರೂ ಮಾಡಿಕೊಡುವೆನು."

ಮಗನು ಹೀಗೆಂದು ಹೇಳಿದನಂತರ, ಸತ್ಯವತಿಯ ಆದೇಶದಂತೆ ಅರಮನೆಯ ಪುರೋಹಿತರು ವ್ಯಾಸರಿಗೆ ವಿಧಿಪೂರ್ವಕವಾಗಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿದರು. ವ್ಯಾಸರು ಮಂತ್ರಪೂರ್ವಕವಾದ ಸತ್ಕಾರವನ್ನು ವಿಧಿಪೂರ್ವಕವಾಗಿ ಸ್ವೀಕರಿಸಿದರು. ವಿಧಿವತ್ತಾಗಿಯೂ, ಮಂತ್ರಪೂರ್ವಕವಾಗಿಯೂ ಅರ್ಪಿಸಿದ ಆ ಸತ್ಕಾರದಿಂದ ವ್ಯಾಸರು ಬಹಳ ಸುಪ್ರೀತರಾದರು. ಸತ್ಕಾರವಾದನಂತರದಲ್ಲಿ ಸೌಮನಸ್ಯದಿಂದ ಸುಖಾಸನ ದಲ್ಲಿ ಕುಳಿತಿದ್ದ ಮಗನ ಕುಶಲಪ್ರಶ್ನೆಮಾಡಿ, ಮಗನನ್ನೊಮ್ಮೆ ದಿಟ್ಟಿಸಿ ನೋಡಿ, ಸತ್ಯವತಿಯು ಹೇಳಿದಳು :

**ಮಾತಾಪಿತ್ರೋಃ ಪ್ರಜಾಯನ್ತೇ ಪುತ್ರಾಃ ಸಾಧಾರಣಾಃ ಕವೇ ।**
**ತೇಷಾಂ ಪಿತಾ ಯಥಾ ಸ್ವಾಮೀ ತಥಾ ಮಾತಾ ನ ಸಂಶಯಃ ॥೩೧॥**

"ಪ್ರಾಜ್ಞನೇ! ತಾಯಿ-ತಂದೆಗಳಿಬ್ಬರ ಅಂಶಗಳಿಂದ ಪುತ್ರರು ಜನಿಸುವರು. ಆದುದರಿಂದ ಮಕ್ಕಳ ಮೇಲೆ ತಂದೆಗಿರುವ ಸ್ವಾಮ್ಯವೇ ತಾಯಿಗೂ ಇರುವುದೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ವಾವೆಯಲ್ಲಿ ನೀನು ನನಗೆ ಹಿರಿಯ ಮಗನು. ವಿಚಿತ್ರವೀರ್ಯನು ಕಿರಿಯವನಾಗುವನು. ಹಾಗೆಯೇ ತಂದೆಯ ಕಡೆಯಿಂದ ಭೀಷ್ಮನು ಶಾಂತನುವಿಗೆ ಹಿರಿಯ ಮಗ ನಾಗಿ, ವಿಚಿತ್ರವೀರ್ಯನು ಭೀಷ್ಮನ ತಮ್ಮನಾಗುವನು. ತಾಯಿಯ ಕಡೆ ಯಿಂದ ನಿನಗೂ ವಿಚಿತ್ರವೀರ್ಯನು ತಮ್ಮನಾಗುವನೆಂದು ನಾನು ಭಾವಿಸು ತ್ತೇನೆ. ನಿನ್ನ ಅಭಿಪ್ರಾಯವು ಈ ವಿಷಯದಲ್ಲಿ ಹೇಗಿದೆಯೆಂಬುದನ್ನು ನಾನರಿಯೆನು. ಪ್ರಕೃತ ಶಾಂತನುವಿನ ಹಿರಿಯಮಗನಾದ ಭೀಷ್ಮನು ಸತ್ಯ ಸಂಕಲ್ಪನಾಗಿ, ಸತ್ಯಚ್ಯುತನಾಗಬಾರದೆಂಬ ಕಾರಣದಿಂದ ಪುತ್ರನನ್ನು ಪಡೆ ಯಲು ಮತ್ತು ಸಿಂಹಾಸನಾರೋಹಣ ಮಾಡಲು ಇಚ್ಛೆಪಡುತ್ತಿಲ್ಲ. ಆದುದ ರಿಂದ ನಿನ್ನ ತಮ್ಮನಾದ ವಿಚಿತ್ರವೀರ್ಯನ ಮೇಲಿನ ಪ್ರೀತಿಯಿಂದಲೂ, ನಮ್ಮ ರಾಜವಂಶದ ಉದ್ಧಾರಕ್ಕಾಗಿಯೂ, ಭೀಷ್ಮನ ಪ್ರಾರ್ಥನಾನುಸಾರ ವಾಗಿಯೂ ಮತ್ತು ನನ್ನ ಆಜ್ಞೆಯಂತೆಯೂ, ಅನಾಯಕತ್ವದಿಂದ ತೊಳ

ಲುವ ಪ್ರಜೆಗಳ ಮತ್ತು ಪ್ರಾಣಿಗಳ ಹಿತರಕ್ಷಣೆಯ ಕಾರಣದಿಂದಲೂ, ನಿನ್ನ ಮನಸ್ಸಿನ ಉದಾರತೆಯಿಂದಲೂ (ದಯೆಯಿಂದಲೂ) ನಾನು ಮುಂದೆ ಹೇಳುವಂತೆ ಮಾಡುವುದು ನಿನ್ನ ಕರ್ತವ್ಯವಾಗಿದೆ. ನಿನ್ನ ಕಿರಿಯ ತಮ್ಮನಾದ ವಿಚಿತ್ರವೀರ್ಯನು ತ್ರಿಲೋಕಸುಂದರಿಯರಾದ, ದೇವಕನ್ಯೆಯರಂತಿರುವ, ಅಪುತ್ರವತಿಯರಾದ ಇಬ್ಬರು ಮಡದಿಯರನ್ನಗಲಿ ಪರಂಧಾಮವನ್ನೈದಿದನು. ಧರ್ಮದ ಕಾರಣಕ್ಕಾಗಿ ಆ ಯುವತಿಯರು ಪುತ್ರಾಪೇಕ್ಷಿಗಳಾಗಿದ್ದಾರೆ. ಅವರ ಪುತ್ರಪ್ರಾಪ್ತಿಗೆ ನೀನೊಬ್ಬನೇ ಸಮರ್ಥನಾಗಿರುವೆ. ಆದುದರಿಂದ ನಮ್ಮ ವಂಶಕ್ಕೆ ಅನುರೂಪರಾದ ಪುತ್ರರು ಅವರಲ್ಲಿ ಹುಟ್ಟಿ, ನಮ್ಮ ವಂಶವು ಬೆಳೆಯುವಂತೆ ಮಾಡಬೇಕು. ಇದು ನನ್ನ ಉತ್ಕಟೇಚ್ಛೆಯಾಗಿದೆ."

ವ್ಯಾಸರು ಹೇಳುತ್ತಾರೆ :

**ವೇತ್ಥ ಧರ್ಮಂ ಸತ್ಯವತಿ ಪರಂ ಚಾಪರಮೇವ ಚ ।**
**ತಥಾ ತವ ಮಹಾಪ್ರಾಜ್ಞೇ ಧರ್ಮೇ ಪ್ರಣಿಹಿತಾ ಮತಿಃ ॥೩೯॥**

**ತಸ್ಮಾದಹಂ ತ್ವನ್ನಿಯೋಗಾದ್ಧರ್ಮಮುದ್ದಿಶ್ಯ ಕಾರಣಮ್ ।**
**ಈಪ್ಸಿತಂ ತೇ ಕರಿಷ್ಯಾಮಿ ದೃಷ್ಟಂ ಹ್ಯೇತತ್ಸನಾತನಮ್ ।**
**ಭ್ರಾತುಃ ಪುತ್ರಾನ್ಪ್ರದಾಸ್ಯಾಮಿ ಮಿತ್ರಾವರುಣಯೋಃ ಸಮಾನ್ ॥೪೦॥**

"ಅಮ್ಮಾ! ನೀನು ಧರ್ಮಸೂಕ್ಷ್ಮವನ್ನು ತಿಳಿದವಳಾಗಿರುವೆ. ಪರಾ ಮತ್ತು ಅಪರಾ ಎಂಬ ಎರಡು ಧರ್ಮಗಳೂ ನಿನಗೆ ತಿಳಿದಿವೆ. ನಿನ್ನ ಮನಸ್ಸು ಯಾವಾಗಲೂ ಧರ್ಮದಲ್ಲಿಯೇ ಲೀನವಾಗಿರುವುದು. ಆದುದರಿಂದ ನಿನ್ನ ವಾಣಿಯಲ್ಲಿ ಅಧರ್ಮದ ಮಾತುಗಳು ಸೇರುವುದಾದರೂ ಸಾಧ್ಯವೇ? ನಿನ್ನ ಆಜ್ಞಾಧಾರಕನಾಗಿ ಧರ್ಮದ ರಕ್ಷಣೆಯನ್ನೇ ದೃಷ್ಟಿಯಲ್ಲಿಟ್ಟು, ನಿನ್ನ ಇಷ್ಟಾರ್ಥವನ್ನು ನಡೆಸಿಕೊಡುವೆನು. ಆಪತ್ಕಾಲದಲ್ಲಿ ಅನುಸರಿಸುತ್ತಿದ್ದ ಸನಾತನಧರ್ಮವಿದೆಂಬುದನ್ನು ನಾನೂ ತಿಳಿದಿರುವೆನು. ನಿನ್ನ ಮಾತು ಧರ್ಮ ಸಮ್ಮತವಾಗಿದೆ. ನನ್ನ ತಮ್ಮನ ಮಡದಿಯರಲ್ಲಿ ಮಿತ್ರಾ-ವರುಣರಿಗೆ ಸಮಾನ ರಾದ ಮಕ್ಕಳು ಜನಿಸುವರು. ಆದರೆ ಅವರು ಒಂದು ವರ್ಷಕಾಲ ನಿಯಮ ವ್ರತಾನುಷ್ಠಾನಗಳಲ್ಲಿರಬೇಕು. ಅನಂತರ ಅವರು ಪರಿಶುದ್ಧರಾಗುವರು. ಏಕೆಂದರೆ : ವ್ರತನಿಷ್ಠಳಾಗಿರದ ಸ್ತ್ರೀಯು ನನ್ನ ಸಮೀಪಕ್ಕೆ ಬರಲಾರಳು."

"ಮಗು! ನೀನು ಹೇಳಿದಂತೆ ವರ್ಷಪರ್ಯಂತ ನಿಷ್ಠೆಯಲ್ಲಿದ್ದು ಅನಂತರ ಪುತ್ರಪ್ರಾಪ್ತಿಯೆಂದರೆ ವಿಳಂಬವಾಗುವುದಿಲ್ಲವೇ? ಈಗಿನ ಪರಿಸ್ಥಿತಿಯಲ್ಲಿ ಕಾಲವಿಳಂಬಕ್ಕೆ ಅವಕಾಶವೇ ಇಲ್ಲ. ಆದುದರಿಂದ ವಿಚಿತ್ರವೀರ್ಯನ ಮಡದಿಯರು ಒಡನೆಯೇ ಗರ್ಭವತಿಯರಾಗುವಂತೆ ಅನುಗ್ರಹಿಸು.

**ಅರಾಜಕೇಷು ರಾಷ್ಟ್ರೇಷು ಪ್ರಜಾನಾಥಾ ವಿನಶ್ಯತಿ ।**
**ನಶ್ಯನ್ತಿ ಚ ಕ್ರಿಯಾಃ ಸರ್ವಾ ನಾಸ್ತಿ ವೃಷ್ಟಿರ್ನ ದೇವತಾ ॥೪೪॥**

ರಾಜನಿಲ್ಲದ ದೇಶದಲ್ಲಿ ಜನರು ರಕ್ಷಕರಿಲ್ಲದೇ ವಿನಾಶಹೊಂದುತ್ತಾರೆ. ಯಜ್ಞ-ಯಾಗಾದಿಗಳು ನಡೆಯಲಾರವು. ಸಕಾಲದಲ್ಲಿ ಮಳೆ-ಬೆಳೆಗಳಾಗುವುದಿಲ್ಲ. ಅಂತಹ ರಾಜ್ಯದಲ್ಲಿ ದೇವತಾಸಾನ್ನಿಧ್ಯವೂ ಇರುವುದಿಲ್ಲ. ಪ್ರಜೆಗಳೆಲ್ಲರೂ ಕ್ಷಾಮ-ಡಾಮರಾದಿಗಳಿಗೆ ಗುರಿಯಾಗುವರು. ರಾಜನಿಲ್ಲದ ದೇಶವನ್ನು ರಕ್ಷಿಸಲು ಸಾಧ್ಯವೇ ಎಂಬುದನ್ನು ನೀನೇ ಯೋಚಿಸು. ಆದುದರಿಂದ ವಿಚಿತ್ರವೀರ್ಯನ ಪತ್ನಿಯರು ಒಡನೆಯೇ ಗರ್ಭಧರಿಸುವಂತಾಗಲಿ. ಹುಟ್ಟಿದ ರಾಜಕುಮಾರರು ಪ್ರೌಢರಾಗುವವರೆಗೂ ಭೀಷ್ಮನು ರಾಜ್ಯದ ಸಂರಕ್ಷಣೆಯನ್ನು ಮಾಡುವನು."

"ಅಮ್ಮ! ಅಕಾಲದಲ್ಲಿಯೇ ಅವರು ಗರ್ಭಧರಿಸಬೇಕೆನ್ನುವುದಾದರೆ ನನ್ನೀ ವಿರೂಪವು ಅವರಿಗೆ ಸಹ್ಯವಾಗಬೇಕು. ನನ್ನ ಶರೀರದ ಕಟುವಾಸನೆ, ಅರಣ್ಯವಾಸಿಯ ವೇಷ-ಭೂಷಣ, ಕಪ್ಪಾದ ಮತ್ತು ಒರಟಾದ ಶರೀರ–ಇವುಗಳ ಸಹನೆಯೇ ಅವರಿಗೆ ವ್ರತವೆನಿಸುವುದು. ಇಂತಹ ವಿರೂಪವು ಅವರಿಗೆ ಸಹ್ಯವಾಗುವುದಾದರೆ ಕೌಸಲ್ಯೆಯು (ಅಂಬಿಕೆಯ) ಇಂದೇ ಗರ್ಭಧಾರಣೆಗೆ ಸಿದ್ಧಳಾಗಲಿ. ರಾಜಕುಮಾರಿಯು ಶುಭ್ರವಸ್ತ್ರಧಾರಿಣಿಯಾಗಿ, ಸರ್ವಾಭರಣಭೂಷಿತೆಯಾಗಿ ಶಯನಮಂದಿರದಲ್ಲಿ ನನ್ನ ಆಗಮನವನ್ನು ನಿರೀಕ್ಷಿಸುತ್ತಿರಲಿ. ನಾನಿನ್ನು ಹೋಗಿಬರುವೆನು"–ಎಂದು ಹೇಳಿ ತಾಯಿಗೆ ನಮಸ್ಕರಿಸಿ ವ್ಯಾಸರು ಇದ್ದಲ್ಲಿಯೇ ಅದೃಶ್ಯರಾದರು.*

---

* ಧರ್ಮಶಾಸ್ತ್ರಗಳಲ್ಲಿಯೂ ಪುತ್ರಪ್ರಾಪ್ತಿಗೆ ಈ ವಿಧವಾದ ರೀತಿಯನ್ನೇ ಸೂಚಿಸಲಾಗಿದೆ. ಕೇವಲ ವಂಶಾಭಿವೃದ್ಧಿಯೇ ಅವರ ಏಕೈಕಧ್ಯೇಯವಾಗಿತ್ತೇ ಹೊರತು ಕಾಮವಾಸನಾಲೇಶವೂ ಅವರಿಗಿರುತ್ತಿರಲಿಲ್ಲ. ವ್ಯಾಸರೂ ಸಹ ತಾಯಿಯ ಕಡೆಯ ವಂಶವು ಬೆಳೆಯಬೇಕೆಂಬ ಒಂದೇ ಒಂದು ಇಚ್ಛೆಯಿಂದ ಧರ್ಮವಿಹಿತವಾದ ರೀತಿಯಲ್ಲಿ ರಾಜಕುಮಾರಿಯರೊಡನೆ ಸೇರಲು ಒಪ್ಪಿದರು. ಅಪ್ಸರೆಯರಿಗೂ ಕೂಡ ವ್ಯಾಸರ

ಸತ್ಯವತಿಯು ಹಿರಿಯ ಸೊಸೆಯಾದ ಅಂಬಿಕೆಯನ್ನು ಏಕಾಂತದಲ್ಲಿ ಕರೆದು ಹೇಳಿದಳು : "ರಾಜಕುಮಾರಿ! ನಾನು ಹೇಳಲಿರುವ ಧರ್ಮಾರ್ಥ ಪ್ರತಿಪಾದಕವಾದ ಮತ್ತು ಹಿತಕರವಾದ ಮಾತುಗಳನ್ನು ಕೇಳು. ನನ್ನ ದುರ್ವಿಧಿಯಿಂದ ನಮ್ಮ ವಂಶವೇ ವಿನಾಶಹೊಂದುವುದರಲ್ಲಿದೆ. ವಂಶ ವಿನಾಶದಿಂದುಂಟಾದ ನನ್ನ ಆರ್ತಪ್ರಲಾಪವನ್ನು ಕೇಳಿ ಭೀಷ್ಮನು ವಂಶಾಭಿವೃದ್ಧಿಗಾಗಿ ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮವೊಂದನ್ನು ಹೇಳಿರುವನು. ಅದನ್ನು ಕಾರ್ಯರೂಪಕ್ಕೆ ತರುವ ಭಾರವು ನಿನ್ನದಾಗಿದೆ. ಆದುದರಿಂದ ನಾನು ಹೇಳಿದಂತೆ ಮಾಡಿ ವಿನಾಶಹೊಂದುವುದರಲ್ಲಿರುವ ಭರತಕುಲವನ್ನು ಉದ್ಧರಿಸು, ದೇವಿ! ದೇವರಾಜನಿಗೆ ಸಮಾನನಾದ ಪುತ್ರ ನನ್ನು ಪಡೆಯುವವಳಾಗು. ಆ ನಿನ್ನ ಪುತ್ರನು ಈ ರಾಷ್ಟ್ರದ ರಾಜ್ಯಭಾರವನ್ನು ವಹಿಸಲಿ. ನಮ್ಮ ವಂಶದ ಉದ್ಧಾರಕನಾಗಲಿ."

ಸತ್ಯವತಿಯು ಒಂದೆರಡು ಮಾತುಗಳಿಂದ ರಾಜಕುಮಾರಿಯನ್ನು ಒಪ್ಪಿಸಲು ಸಾಧ್ಯವಾಗಲಿಲ್ಲ. ಅನೇಕ ಧರ್ಮವಚನಗಳನ್ನೂ ಮತ್ತು ಇತಿಹಾಸಗಳನ್ನೂ ಹೇಳಿ, ಬಹಳ ಕಷ್ಟದಿಂದ ಸೊಸೆಯನ್ನು ವ್ಯಾಸರೊಡನೆ ಸಮಾಗಮಕ್ಕೆ ಒಪ್ಪಿಸಿದಳು. ಪೂರ್ವಭಾವಿಯಾಗಿ ಬ್ರಾಹ್ಮಣರನ್ನೂ, ಋಷಿ-ಮಹರ್ಷಿಗಳನ್ನೂ, ಅತಿಥಿಗಳನ್ನೂ ಭೋಜನಾದಿಗಳಿಂದ ತೃಪ್ತಿ ಪಡಿಸಿದಳು."

೧೦೫ನೆಯ ಅಧ್ಯಾಯವು ಮುಗಿಯಿತು.

೧೦೬ನೆಯ ಅಧ್ಯಾಯ    ಸಂಭವಪರ್ವ (ಮುಂದುವರಿದಿದೆ.)

## ವ್ಯಾಸರ ಅನುಗ್ರಹದಿಂದ ಧೃತರಾಷ್ಟ್ರ, ಪಾಂಡು ಮತ್ತು ವಿದುರರ ಜನನ

"ಜನಮೇಜಯ! ಋತುಸ್ನಾತೆಯಾಗಿದ್ದ ಅಂಬಿಕೆಯನ್ನು ಸತ್ಯ ವತಿಯು ಸರ್ವವಿಧವಾದ ಅಲಂಕಾರಗಳಿಂದ ಸಿಂಗರಿಸಿ, ಶಯನಮಂದಿರಕ್ಕೆ

---

ಮನಸ್ಸನ್ನು ಚಂಚಲಗೊಳಿಸಲು ಸಾಧ್ಯವಾಗುತ್ತಿರಲಿಲ್ಲ. ಸತ್ಯವತಿಯು ಸಾಧಿಸಹೊರಟಿರುವ ಕಾರ್ಯವು ದುಸ್ತರವಾದುದು. ಮಗನನ್ನು ಒಪ್ಪಿಸಿದನಂತರ ಮುಂದೆ ಸೊಸೆಯರನ್ನು ಒಪ್ಪಿಸಬೇಕು. ಎಷ್ಟೇ ಧರ್ಮವೆನಿಸಿದರೂ ಅನೇಕಕಾರ್ಯಗಳು ನಮಗೆ ಸಹ್ಯವಾಗದೇ ಇರಬಹುದಲ್ಲವೇ?

ಕರೆದುಕೊಂಡು ಹೋಗಿ, ಹಂಸತೂಲಿಕಾತಲ್ಪದ ಮೇಲೆ ಕುಳ್ಳಿರಿಸಿ ಹೇಳಿದಳು: "ರಾಜಕುಮಾರಿ! ನಿನ್ನ ಪತಿಯ ಅಣ್ಣನೊಬ್ಬನಿರುವನು. ಅವನಿಂದು ಅರ್ಧರಾತ್ರಿಯಲ್ಲಿ ನಿನ್ನ ಗರ್ಭದಲ್ಲಿ ನಿನ್ನ ಮಗನ ರೂಪದಲ್ಲಿ ಪ್ರವೇಶಿಸುವನು. ಅವನು ಬರುವವರೆಗೂ ಕಾದು ಕುಳಿತಿರು. ನಿದ್ರಾವಶಳಾಗಬೇಡ"–ಎಂದು ಹೇಳಿ ತಲೆಯನ್ನೊಮ್ಮೆ ಸವರಿ ಶಯನಮಂದಿರದ ಬಾಗಿಲೆಳೆದುಕೊಂಡು ಹೊರಟುಹೋದಳು.

ಅಂಬಿಕೆಗೆ–'ಬರುವವರಾರು? ಹೇಗಿರುವರು? ಎಲ್ಲಿಂದ ಬರುವರು?'–ಎಂಬ ಅರಿವಿರಲಿಲ್ಲ. ಎದೆಯು ಡವ-ಡವನೆ ಹೊಡೆದುಕೊಳ್ಳಲಾರಂಭಿಸಿತು. ಆದರೂ ಧೈರ್ಯವನ್ನು ತಂದುಕೊಂಡಳು. ಭೀಷ್ಮನೇ ಮೊದಲಾದ ತನ್ನ ವಂಶದ ರಾಜರನ್ನೆಲ್ಲಾ ಸ್ಮರಿಸುತ್ತಾ ಕುಳಿತಳು. ದೀಪವು ಪ್ರಜ್ವಲಿಸುತ್ತಿತ್ತು. ಸತ್ಯನಿಷ್ಠರಾದ ಮಹರ್ಷಿಗಳು ಶಯನಮಂದಿರವನ್ನು ಪ್ರವೇಶಿಸಿದರು. ಅವರ ಜಟೆ, ವಲ್ಕಲ, ಕಪ್ಪಾದ ಶರೀರ, ಕೆಂಪಾದ ಕಣ್ಣುಗಳು, ಎದೆಯನ್ನು ಮುಚ್ಚಿದ ಗಡ್ಡ-ಮೀಸೆ–ಇವುಗಳನ್ನು ನೋಡಿದೊಡನೆಯೇ ರಾಜಕುಮಾರಿಯು ಭಯದಿಂದ ಕಣ್ಣುಗಳನ್ನು ಮುಚ್ಚಿಕೊಂಡಳು. ಆದರೆ ರಾಜಕುಮಾರಿಯನ್ನು ಪ್ರಿಯೋಕ್ತಿಗಳಿಂದ ಒಲಿಸಿಕೊಳ್ಳುವುದು ವ್ಯಾಸರ ಕಾರ್ಯವಾಗಿರಲಿಲ್ಲ. ಅದು ಕೇವಲ ಧರ್ಮಕ್ಕೆ ಸಂಬಂಧಿಸಿದ ಸಮಾಗಮ. ಕಾಮಕೇಳಿಗೆ ಅಥವಾ ಕಾಮತೃಪ್ತಿಗೆ ಅದು ಸ್ಥಾನವಾಗಿರಲಿಲ್ಲ. ವ್ಯಾಸರು ಅಂಬಿಕೆಯನ್ನು ಕಣ್ಣುಬಿಡುವಂತೆ ಕೂಡ ಹೇಳಲಿಲ್ಲ. ತಾಯಿಗೆ ಕೊಟ್ಟಿದ್ದ ಮಾತಿನಂತೆ ಪುತ್ರನನ್ನು ಅನುಗ್ರಹಿಸಿ ಹೊರಬಂದರು.

ಮಗನನ್ನು ಕಂಡ ಸತ್ಯವತಿಯು ಚಾಪಲ್ಯದಿಂದ ಕೇಳಿದಳು : "ರಾಜಲಕ್ಷಣಯುಕ್ತನಾದ ಕುಮಾರನ ಜನನವಾಗುವುದೇ?"

"ಅಮ್ಮಾ! ನಿನ್ನ ಇಚ್ಛೆಯಂತೆಯೇ ಹತ್ತು ಸಾವಿರ ಆನೆಗಳ ಬಲಕ್ಕೆ ಸಮಾನವಾದ ಬಲವುಳ್ಳ ವೀರಪುತ್ರನೇ ಜನಿಸುವನು. ಅವನು ಸಕಲವಿದ್ಯಾ ಪಾರಂಗತನಾಗುವುದು ಮಾತ್ರವಲ್ಲದೇ–ರಾಜರ್ಷಿಯೆಂದೂ ಪ್ರಸಿದ್ಧನಾಗುವನು. ಮಹಾಪರಾಕ್ರಮಿಯೂ, ಹೆಚ್ಚಾದ ಮೇಧಾಶಕ್ತಿಯುಳ್ಳವನೂ ಆಗುವನು. ಅವನಿಗೆ ನೂರು ಮಂದಿ ಮಕ್ಕಳೂ ಹುಟ್ಟುವರು. ನಿನ್ನ

ವಂಶವೂ ಬೆಳೆಯುವುದು. ಆದರೆ ತಾಯಿಯು ಮಾಡಿದ ಅಪರಾಧಕ್ಕಾಗಿ ಮಗುವು ಕುರುಡಾಗಿ ಹುಟ್ಟುವುದು.

ಸತ್ಯವತಿಗೆ ಬಹಳ ಸಂಕಟವಾಯಿತು. "ಈ ಕುರುಡುಮಗುವು ರಾಜನಾಗಲು ಸಾಧ್ಯವಾದೀತೇ? ತಾಪಸೋತ್ತಮ!"–ಎಂದು ಬಹುದುಃಖ ದಿಂದ ಗಡುಸಾದ ಧ್ವನಿಯಲ್ಲಿ ಕೇಳಿದಳು :

**ನಾನ್ಧಃ ಕುರೂಣಾಂ ನೃಪತಿರನುರೂಪಸ್ತಪೋಧನ ।**
**ಜ್ಞಾತಿವಂಶಸ್ಯ ಗೋಪ್ತಾರಂ ಪಿತೃಣಾಂ ವಂಶವರ್ಧನಮ್ ।**
**ದ್ವಿತೀಯಂ ಕುರುವಂಶಸ್ಯ ರಾಜಾನಂ ದಾತುಮರ್ಹಸಿ ॥೧೧॥**

"ತಪೋಧನನೇ! ಕುರುಡನು ಕುರುವಂಶಕ್ಕೆ ಯೋಗ್ಯನಾದ ರಾಜ ನಾಗುವುದಿಲ್ಲ. ಅವನು ಪ್ರಜೆಗಳನ್ನೂ, ಬಂಧು-ಬಾಂಧವರನ್ನೂ ರಕ್ಷಿಸಲು ಹೇಗೆ ತಾನೇ ಸಾಧ್ಯವಾದೀತು? ಕುಮಾರ! ಇದು ಸರ್ವಥಾ ಸಾಧ್ಯವಾಗ ಲಾರದು. ಆದುದರಿಂದ ನೀನು ಜ್ಞಾತಿಕುಲರಕ್ಷಕನಾದ, ಪಿತೃವಂಶವರ್ಧಕ ನಾದ, ಕುರುವಂಶದ ಸಿಂಹಾಸನಕ್ಕೆ ಯೋಗ್ಯನಾದ ಮತ್ತೊಬ್ಬ ಪುತ್ರನನ್ನು ಅನುಗ್ರಹಿಸುವುದು ಯುಕ್ತವಾಗಿದೆ. ನನ್ನ ಮಾತನ್ನು ನಿರಾಕರಿಸಬೇಡ."

ವ್ಯಾಸರು ಒಂದೆರಡು ಕ್ಷಣಗಳು ಯೋಚಿಸಿ–'ಹಾಗೆಯೇ ಆಗಲಮ್ಮಾ' ಎಂದು ಹೇಳಿ ಹೊರಟುಹೋದರು.

ಕೆಲವು ದಿನಗಳ ನಂತರ ಕೋಸಲದೇಶದ ರಾಜಕುಮಾರಿಯಾದ ಅಂಬಿಕೆಯು ಒಂದು ಕುರುಡುಮಗುವನ್ನು ಪ್ರಸವಿಸಿದಳು.

ಸತ್ಯವತಿಯ ಮನಸ್ಸಿನ ಆತಂಕವು ಪರಿಹಾರವಾಗಲಿಲ್ಲವೆಂದು ಹೇಳಲೇಬೇಕಾಗಿಲ್ಲ. ಸಿಂಹಾಸನಕ್ಕೆ ಯೋಗ್ಯವಾದ ಶಿಶುವನ್ನು ಪಡೆಯಲು ತವಕಿಸಿದಳು. ವ್ಯಾಸರ ಅಭಯಪ್ರದಾನದಿಂದ ನಿರಾಸೆಗೆ ಕಾರಣವಿರಲಿಲ್ಲ. ವಿಚಿತ್ರವೀರ್ಯನ ಕಿರಿಯ ಹೆಂಡತಿಯಾದ ಅಂಬಾಲಿಕೆಯ ಬಳಿಗೆ ಹೋಗಿ ಅವಳನ್ನು ಚತುರೋಕ್ತಿಗಳಿಂದಲೂ, ಧಾರ್ಮಿಕವಾದ ಮಾತುಗಳಿಂದಲೂ, ವ್ಯಾಸರೊಡನೆ ಸಮಾಗಮಕ್ಕೆ ಒಪ್ಪಿಸಿದಳು.

ತಾಯಿಗಿತ್ತಿದ್ದ ಮಾತಿನ ಪ್ರಕಾರ ವ್ಯಾಸರೂ ಆಗಮಿಸಿದರು. ಶಯನ ಮಂದಿರದಲ್ಲಿ ಅಂಬಾಲಿಕೆಯು ವ್ಯಾಸರನ್ನು ನೋಡುತ್ತಲೇ ಭಯದಿಂದ

ಕಂಪಿಸಿದಳು. ಶರೀರವು ಬೆವರಿ ಬಿಳುಪೇರಿತು. ಆದರೆ ಅಂಬಿಕೆಯಂತೆ ಅಂಬಾಲಿಕೆಯು ಕಣ್ಣುಗಳನ್ನು ಮುಚ್ಚಿಕೊಳ್ಳಲಿಲ್ಲ. ಭಯದಿಂದ ಕೂಡಿದ್ದ ರಾಜಕುಮಾರಿಯನ್ನು ಕುರಿತು ವ್ಯಾಸರು ಹೇಳಿದರು :

**ಯಸ್ಮಾತ್ತ್ವಾಣ್ಡುತ್ವಮಾಪನ್ನಾ ವಿರೂಪಂ ಪ್ರೇಕ್ಷ್ಯ ಮಾಮಿಹ ।**
**ತಸ್ಮಾದೇಷ ಸುತಸ್ತೇ ವೈ ಪಾಣ್ಡುರೇವ ಭವಿಷ್ಯತಿ ।**
**ನಾಮ ಚಾಸ್ಯೈತದೇವೇಹ ಭವಿಷ್ಯತಿ ಶುಭಾನನೇ ॥೧೭॥**

"ಶುಭಾನನೆಯೇ! ನನ್ನ ವಿರೂಪವನ್ನು ನೋಡಿ ನೀನು ಭಯದಿಂದ ಕಂಪಿಸಿದೆ. ನಿನ್ನ ಶರೀರವೂ ಪಾಂಡುರವಾಗಿ ವಿವರ್ಣವಾಯಿತು. ಆದುದರಿಂದ ನಿನ್ನಲ್ಲಿ ಹುಟ್ಟುವ ಶಿಶುವೂ ಬಿಳುಪಾಗಿರುತ್ತದೆ ಮತ್ತು ಆ ಶಿಶುವಿಗೆ ಪಾಂಡುವೆಂದೇ ಅನ್ವರ್ಥನಾಮವಾಗುತ್ತದೆ"–ಎಂದು ಹೇಳಿ ಶಯನಮಂದಿರದಿಂದ ಹೊರಬಂದರು. ಸತ್ಯವತಿಯನ್ನೂ ಬಾಗಿಲ ಬಳಿ ಕಂಡರು. ಮುಂದೆ ಹುಟ್ಟುವ ಮಗುವಿನ ರೀತಿ-ನೀತಿಗಳನ್ನು ತಿಳಿಯುವ ಕುತೂಹಲದಿಂದ ಮಗನನ್ನು ಕೇಳಿದಳು : "ಸರ್ವಲಕ್ಷಣಗಳಿಂದ ಕೂಡಿದ ಶಿಶುವು ಜನಿಸುವುದೇ?"

ವ್ಯಾಸರು ಉತ್ತರಿಸಿದರು. "ತಾಯೇ! ಸಿಂಹಾಸನಕ್ಕೆ ಯೋಗ್ಯವಾದ ಶಿಶುವು ಹುಟ್ಟುವುದು. ಆದರೆ ಶಿಶುವಿನ ಶರೀರವೆಲ್ಲವೂ ಬಿಳುಪಿನ ಛಾಯೆಯಿಂದ ಕೂಡಿರುವುದು. ಇದರಿಂದ ಅದರ ಹೆಸರೂ ಪಾಂಡುವೆಂದೇ ಆಗುವುದು. ಅಂಬಾಲಿಕೆಯು ನನ್ನನ್ನು ನೋಡಿ ಭಯದಿಂದ ಕಂಪಿಸಿ ವಿವರ್ಣಳಾದುದೇ ಇದಕ್ಕೆ ಕಾರಣವಮ್ಮಾ!"

ಸತ್ಯವತಿಯ ಮನಸ್ಸಿನ ಆತಂಕವು ಪರಿಹಾರವಾಗಲಿಲ್ಲ. "ಇಂತಹ ಮಹರ್ಷಿಯ ಅನುಗ್ರಹದಿಂದಲೂ ಸರ್ವಲಕ್ಷಣಸಂಪನ್ನನಾದ, ನಿಷ್ಕಳಂಕನಾದ ರಾಜಪುತ್ರನನ್ನು ಪಡೆಯಲು ಸಾಧ್ಯವಾಗಲಿಲ್ಲವಲ್ಲಾ!" ಎಂದು ಹಲುಬಿದಳು. ಮಗನನ್ನು ಕುರಿತು ಪುನಃ ಕೇಳಿದಳು : "ವ್ಯಾಸ! ಮತ್ತೊಂದು ಮಗುವನ್ನು ಕರುಣಿಸಲಾರೆಯಾ?"

ತ್ರಿಕಾಲಜ್ಞರಾದ ವ್ಯಾಸರು ತಾಯಿಯ ಭ್ರಾಂತಿಯನ್ನು ನೋಡಿ ಮನದಲ್ಲಿಯೇ ಮರುಗಿದರು. ಉದಾತ್ತಹೃದಯರಾದ ಮಹರ್ಷಿಗಳು ತಾಯಿಯ ಮಾತಿಗೆ ಪುನಃ 'ಅಸ್ತು' ಎಂದು ಹೇಳಿ ಹೊರಟುಹೋದರು.

ನವಮಾಸಗಳು ತುಂಬಿದ ನಂತರ ಅಂಬಾಲಿಕೆಯು ಸರ್ವಲಕ್ಷಣ ಸಂಪನ್ನನಾದ, ದಿವ್ಯಕಾಂತಿಯಿಂದ ಪ್ರಜ್ವಲಿಸುತ್ತಿರುವ ಗಂಡುಮಗುವನ್ನು ಪ್ರಸವಿಸಿದಳು. ಆದರೆ ವ್ಯಾಸರು ಹೇಳಿದಂತೆ ಶರೀರವೆಲ್ಲವೂ ಬಿಳಿಯ ಛಾಯೆಯಿಂದ ಕೂಡಿತ್ತು. ಆ ಶಿಶುವನ್ನು ಪಾಂಡುವೆಂದೇ ಕರೆದರು. ಮುಂದೆ ಪಾಂಡುವೇ ಧನುರ್ವಿದ್ಯೆಯಲ್ಲಿ ತ್ರಿಲೋಕಪ್ರಸಿದ್ಧರಾದ ಪಾಂಡವರಿಗೆ ತಂದೆಯಾದನು.

ಸತ್ಯವತಿಯು ಮತ್ತೊಂದು ಶಿಶುವನ್ನು ಪಡೆಯಲು ಕಾಲನಿರೀಕ್ಷಣೆ ಯನ್ನು ಮಾಡುತ್ತಿದ್ದಳು. ಋತುಸ್ನಾನಮಾಡಿದ್ದ ಅಂಬಿಕೆಯ ಬಳಿಗೆ ಹೋಗಿ, ವ್ಯಾಸರೊಡನೆ ಸಮಾಗಮದ ಪ್ರಸ್ತಾಪವನ್ನೆತ್ತಿದಳು. ಆದರೆ ವ್ಯಾಸರ ವಿರೂಪವನ್ನು ನೆನೆದೊಡನೆಯೇ ದೇವಕನ್ಯಾಸದೃಶಳಾದ ರಾಜಕುಮಾರಿಯ ಹೃದಯವು ಕಂಪಿಸಿತು. ಅತ್ತೆಯ ಮಾತಿಗೆ ಒಪ್ಪಲಿಲ್ಲ ; ಸತ್ಯವತಿಯೂ ಬಿಡಲಿಲ್ಲ ; ಬಹಳ ಕಷ್ಟದಿಂದ ಒಪ್ಪಿಸಿದಳು.

ವ್ಯಾಸರೊಡನೆ ಸಮಾಗಮದ ಕಾಲವು ಸನ್ನಿಹಿತವಾದಂತೆಲ್ಲಾ ಅಂಬಿಕೆಯ ಹೃದಯವು ಹೆಚ್ಚು ಕಂಪಿಸಲು ಪ್ರಾರಂಭಿಸಿತು. ಅವರೊಡನೆ ಸೇರಲು ಸಾಧ್ಯವೇ ಇಲ್ಲವೆಂದು ನಿರ್ಧರಿಸಿದಳು. ಒಡನೆಯೇ ತನ್ನ ಸಮೀಪದಲ್ಲಿದ್ದ, ಅಪ್ಸರೆಯಂತಿದ್ದ ಚೇಟಿಗೆ ತನ್ನ ಆಭರಣಗಳನ್ನು ತೊಡಿಸಿ ಸಿಂಗರಿಸಿದಳು. ಮಹರ್ಷಿಗಳು ಬರುವರೆಂಬ ಸೂಚನೆಯನ್ನಿತ್ತು ಶಯನ ಮಂದಿರಕ್ಕೆ ತನ್ನ ಚೇಟಿಯನ್ನು ಕಳುಹಿಸಿಕೊಟ್ಟಳು.

ಹಿಂದಿನ ವಿರೂಪದಲ್ಲಿಯೇ ವ್ಯಾಸರು ಆಗಮಿಸಿದರು. ಅವರ ವಿರೂಪ ವನ್ನು ನೋಡಿ ರಾಜಕುಮಾರಿಯ ವೇಷವನ್ನು ಧರಿಸಿದ್ದ ಚೇಟಿಯು ಸ್ವಲ್ಪ ವಾದರೂ ಭಯಪಡಲಿಲ್ಲ. ಮುಗುಳ್ನಗೆಯಿಂದಲೇ ಸ್ವಾಗತಿಸಿದಳು. ಸೇವಾ ಪೂಜಾದಿಗಳಿಂದ ಸತ್ಕರಿಸಿ ಹಂಸತೂಲಿಕೆಯಲ್ಲಿ ಕುಳ್ಳಿರಿಸಿ ಉಪಚರಿಸಿದಳು.

ವರಾಂಗನೆಯ ಸಂಗಮದಿಂದ ಮಹರ್ಷಿಗಳು ಅವಳ ವಿಷಯದಲ್ಲಿ ಬಹಳ ಸಂತುಷ್ಟರಾದರು. ಪ್ರಸನ್ನವದನರಾಗಿ ಹೇಳಿದರು : "ಶುಭಾಂಗಿಯೇ! ನೀನು ಇನ್ನು ಮುಂದೆ ಚೇಟಿಯಾಗಿರುವುದಿಲ್ಲ. ನಿನ್ನಲ್ಲಿ ಹುಟ್ಟುವ ಶಿಶುವು ಶ್ರೇಯಃ-ಪ್ರೇಯಗಳಿಂದ ಕೂಡಿದ್ದಾಗಿರುವುದು. ಅವನು ಮುಂದೆ ಧರ್ಮಾತ್ಮನೂ, ವಿದ್ವಾಂಸನೂ, ಮಹಾಮೇಧಾವಿಯೂ ಆಗುವನು."

ಜನಮೇಜಯ! ಮುಂದೆ ಅವಳಲ್ಲಿ ಹುಟ್ಟಿದ ಶಿಶುವೇ ವಿದುರನೆಂದು ಪ್ರಸಿದ್ಧನಾದನು. ಯದ್ಯಪಿ ಅವನು ರಾಜವಂಶಕ್ಕೆ ಸೇರಿದವನಲ್ಲದಿದ್ದರೂ ಕೃಷ್ಣದ್ವೈಪಾಯನರ ಮಗನಾಗಿ ಹುಟ್ಟಿದುದರಿಂದ ಧೃತರಾಷ್ಟ್ರನಿಗೆ ಮತ್ತು ಪಾಂಡುವಿಗೆ ಅನುಜನೆನಿಸಿದನು. ಅವನು ಕಾಮ-ಕ್ರೋಧಾದಿಗಳನ್ನು ಜಯಿಸಿದವನೂ, ಧರ್ಮಾತ್ಮನೂ, ಸತ್ಯಸಂಧನೂ ಆಗಿದ್ದನು. ಸಾಕ್ಷಾತ್ ಯಮಧರ್ಮನೇ ಮಾಂಡವ್ಯಮಹರ್ಷಿಯ ಶಾಪದಿಂದ ವಿದುರನಾಗಿ ಜನಿಸಿದನು.



ವ್ಯಾಸರು ಶಯನಮಂದಿರವನ್ನು ಬಿಟ್ಟು ಹೊರಬಂದೊಡನೆಯೇ ಸತ್ಯವತಿಯು 'ಮಗು!' ಎಂದು ಮುಂದೆ ಬಂದಳು. ಆಶಾಭರಿತಳಾಗಿದ್ದ ಸತ್ಯವತಿಗೆ ವ್ಯಾಸರು, ರಾಜಕುಮಾರಿಯು ತಮ್ಮನ್ನು ಮೋಸಗೊಳಿಸಿದ ರೀತಿಯನ್ನೂ, ಶೂದ್ರಸ್ತ್ರೀಯಲ್ಲಿ ವಿದುರನ ಜನ್ಮವನ್ನೂ ತಿಳಿಸಿ ಅಲ್ಲಿಯೇ ಅದೃಶ್ಯರಾದರು.

ಈ ರೀತಿಯಲ್ಲಿ ವ್ಯಾಸರು ಮಾತೆಯ ವಾಕ್ಯಪರಿಪಾಲನೆಮಾಡಿ ಮಾತೃಋಣದಿಂದ ವಿಮುಕ್ತರಾದರು.

ಜನಮೇಜಯ! ಈ ಪ್ರಕಾರವಾಗಿ ಕೃಷ್ಣದ್ವೈಪಾಯನರಿಂದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ (ಅವನ ಪತ್ನಿಯರಲ್ಲಿ) ದೇವಕುಮಾರಸದೃಶ ರಾದ ಕುರುವಂಶವರ್ಧನರಾದ ಮಕ್ಕಳು ಹುಟ್ಟಿದರು."

೧೦೬ನೆಯ ಅಧ್ಯಾಯವು ಮುಗಿಯಿತು.

೧೦೭ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಅಣಿಮಾಂಡವ್ಯೋಪಾಖ್ಯಾನ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ : "ಬ್ರಾಹ್ಮಣೋತ್ತಮರೇ!

**ಧರ್ಮೋ ವಿದುರರೂಪೇಣ ಶಾಪಾತ್ತಸ್ಯ ಮಹಾತ್ಮನಃ ।**
**ಮಾಣ್ಡವ್ಯಸ್ಯಾರ್ಥತತ್ತ್ವಜ್ಞಃ ಕಾಮಕ್ರೋಧವಿವರ್ಜಿತಃ ॥೨೮॥**

(ಅಧ್ಯಾಯ ೧೦೬)

ಮಾಂಡವ್ಯಮಹರ್ಷಿಯ ಶಾಪದಿಂದ ಯಮಧರ್ಮನು ಶೂದ್ರಯೋನಿ ಯಲ್ಲಿ ವಿದುರನಾಗಿ ಹುಟ್ಟಿದನೆಂದು ಹೇಳಿದಿರಿ. ಧರ್ಮಸ್ವರೂಪನಾದ ಯಮನು ಮಹರ್ಷಿಗೆ ಮಾಡಿದ ಯಾವ ಅಪರಾಧಕ್ಕಾಗಿ ಮನುಷ್ಯನಾಗಿ ಜನ್ಮತಾಳಬೇಕಾಯಿತು? ಯಮಧರ್ಮನನ್ನೇ ಶಪಿಸಿದ ಮಹಾಮಹಿಮನಾದ ಮಾಂಡವ್ಯನೆಂಬುವನಾರು? ಆ ಮಹಾತ್ಮನ ಉಪಾಖ್ಯಾನವನ್ನು ಯಥಾವತ್ತಾಗಿ ತಮ್ಮಿಂದ ಕೇಳಿ ತಿಳಿಯಬೇಕೆಂದಿರುವೆನು."

"ಮಹಾರಾಜ! ಮಾಂಡವ್ಯನೆಂಬ ಪ್ರಖ್ಯಾತನಾದ ಬ್ರಾಹ್ಮಣನೊಬ್ಬ ನಿದ್ದನು. ಅವನು ಸತ್ಯಸಂಧನಾಗಿಯೂ, ಸದಾ ತಪಸ್ವಿಯಾಗಿಯೂ, ಧರ್ಮಜ್ಞನಾಗಿಯೂ ಇದ್ದನು. ತನ್ನ ಆಶ್ರಮದ ಸಮೀಪದಲ್ಲಿದ್ದ ವೃಕ್ಷಚ್ಛಾಯೆಯಲ್ಲಿ ಎರಡು ಕೈಗಳನ್ನೂ ಮೇಲೆತ್ತಿ, ಯೋಗನಿಷ್ಠನಾಗಿ ಮೌನವ್ರತದಿಂದ ಅನೇಕವರ್ಷಗಳನ್ನು ಕಳೆದನು.

ಒಂದು ದಿನ ಅವನ ಆಶ್ರಮದ ಸಮೀಪಕ್ಕೆ ಹಲವಾರು ಮಂದಿ ಕಳ್ಳರು

ಕೊಳ್ಳೆಹೊಡೆದ ನಗ-ನಾಣ್ಯಗಳ ಸಮೇತ ಬಂದರು. ತಮ್ಮ ಹಿಂದೆಯೇ ರಾಜಭಟರು ಬೆನ್ನಟ್ಟಿಬರುತ್ತಿದ್ದ ಸುಳಿವನ್ನು ಅರಿತ ಕಳ್ಳರು ತಾವು ತಂದಿದ್ದ ನಗ-ನಾಣ್ಯಗಳೆಲ್ಲವನ್ನೂ ಆಶ್ರಮದೊಳಗೆ ಬಚ್ಚಿಟ್ಟು ತಾವೂ ಅಲ್ಲಿಯೇ ಅಡಗಿ ನಿಂತರು.

ರಾಜಭಟರು ಆಶ್ರಮದ ಸಮೀಪಕ್ಕೆ ಬಂದು ಮರದ ಕೆಳಗೆ ಮೌನ ವಾಗಿ ಕುಳಿತಿದ್ದ ಮುನಿಯನ್ನು ಕಂಡು ವಿನೀತರಾಗಿಯೇ ಕೇಳಿದರು : "ಬ್ರಾಹ್ಮಣೋತ್ತಮರೇ! ಇತ್ತಕಡೆ ಬಂದ ಕಳ್ಳರು ಎಲ್ಲಿ ಹೋದರು? ಕೂಡಲೇ ತಿಳಿಸಿದರೆ ಅವರನ್ನು ಬೆನ್ನಟ್ಟಿಹೋಗುವೆವು. ದಯೆಯಿಟ್ಟು ಹೇಳಿರಿ."

ಅವರ ಪ್ರಶ್ನೆಗೆ ಋಷಿಯಿಂದ ಉತ್ತರವೇನೂ ಬರಲಿಲ್ಲ. ನಾಲ್ಕಾರು ಬಾರಿ ಪ್ರಶ್ನಿಸಿದರೂ ಪ್ರಯೋಜನವಾಗಲಿಲ್ಲ. ಆಶ್ರಮದೊಳಗೆ ಪ್ರವೇಶಿಸಿ ಪರಿಶೋಧಿಸಿದರು. ಕಳ್ಳರು ಕೊಳ್ಳೆಹೊಡೆದಿದ್ದ ನಗ-ನಾಣ್ಯಗಳೆಲ್ಲವೂ ಸಿಕ್ಕಿದುವು. ಕಳ್ಳರೂ ಸಿಕ್ಕಿದರು.

ಕೊಳ್ಳೆಹೊಡೆದ ನಗ-ನಾಣ್ಯಗಳೂ ಮತ್ತು ಕಳ್ಳರೂ ಆಶ್ರಮದಲ್ಲಿ ಸಿಕ್ಕಿ ದುದರಿಂದ, ಮಾತನಾಡದೇ ಮರದ ಕೆಳಗೆ ಕುಳಿತಿದ್ದ ಮಾಂಡವ್ಯನೇ ಕಳ್ಳರ ಗುರುವಿರಬಹುದೆಂಬ ಸಂಶಯವು ರಾಜಭಟರಿಗೆ ಸ್ವಾಭಾವಿಕವಾಗಿಯೇ ಉಂಟಾಯಿತು. ಕಳ್ಳರೊಡನೆ ಮಹರ್ಷಿಯನ್ನೂ ರಾಜನ ಬಳಿಗೆ ಸೆಳೆದು ತಂದರು. ಅವನನ್ನು ಕಳ್ಳರ ಗುರುವೆಂದೇ ರಾಜನೂ ನಿರ್ಧರಿಸಿ ಕಳ್ಳರೊಡನೆ ಮಾಂಡವ್ಯನನ್ನೂ ಶೂಲಕ್ಕೇರಿಸುವಂತೆ ಆಜ್ಞಾಪಿಸಿದನು.*

ರಾಜಭಟರೂ ರಾಜಾಜ್ಞೆಯನ್ನು ನಿರ್ವಹಿಸಿದರು. ಕಳ್ಳರೊಡನೆ

---

* ಕೇವಲ ಕಳ್ಳತನಕ್ಕೆ ಮರಣದಂಡನೆಯೇ? ಎಂಬ ಸಂಶಯವುಂಟಾಗಬಹುದು. ಆದರೆ ಮಾಡಿದ ತಪ್ಪಿಗೆ ಶಿಕ್ಷೆಯು ತೀಕ್ಷ್ಣವಾಗಿದ್ದರೆ ದೇಶದಲ್ಲಿ ತಪ್ಪುಮಾಡುವುದೇ ನಿಂತುಹೋಗುವುದೆಂಬ ಒಂದು ಅಭಿಪ್ರಾಯವೂ ಇದೆ. ಆದುದರಿಂದಲೇ ನಮ್ಮ ಧರ್ಮಶಾಸ್ತ್ರಗಳು ಮೋಸದ ವ್ಯಾಪಾರಮಾಡಿದವರನ್ನೂ, ದೇಶದ್ರೋಹಿಗಳನ್ನೂ ಕಠಿನಶಿಕ್ಷೆಗೆ ಗುರಿಪಡಿಸಬೇಕೆಂದು ಹೇಳುವುದಲ್ಲದೇ, ಅವರ ಆಸ್ತಿ-ಪಾಸ್ತಿಗಳೆಲ್ಲವನ್ನೂ ಮುಟ್ಟುಗೋಲು ಹಾಕಬೇಕೆಂದೂ ಹೇಳುತ್ತವೆ. ಆದುದರಿಂದ ಈ ವಿಧವಾದ ಕಠಿನ ಶಿಕ್ಷೆಗಳು ಈಗಿನ ಕಾಲಕ್ಕೆ ಅಮಾನುಷವೆನಿಸಿದರೂ ಹೆಚ್ಚು ಪರಿಣಾಮಕಾರಿಯೆಂದು ಹೇಳಬಹುದಾಗಿದೆ.

ಮಾಂಡವ್ಯನನ್ನೂ ಶೂಲಕ್ಕೇರಿಸಿದರು. ತಮ್ಮ ಕರ್ತವ್ಯವನ್ನು ಮಾಡಿ ರಾಜ ಭಟರು ಹೊರಟುಹೋದರು.

ಆದರೆ ಯೋಗನಿಷ್ಠನಾದ ಮಹರ್ಷಿಯು ಬಹಳ ಕಾಲದವರೆಗೂ ಆಹಾರವಿಲ್ಲದಿದ್ದರೂ ಶೂಲಾರೂಢನಾಗಿಯೇ ಜೀವಂತನಾಗಿ ಉಳಿದಿದ್ದನು. ಯೋಗಬಲದಿಂದ ಪ್ರಾಣಗಳನ್ನು ಉಳಿಸಿಕೊಂಡಿದ್ದುದು ಮಾತ್ರವಲ್ಲದೇ– ಆಶ್ರಮವಾಸಿಗಳಾಗಿದ್ದ ಮಹರ್ಷಿಗಳನ್ನೂ ತಾನಿದ್ದ ಸ್ಥಳಕ್ಕೆ ಸ್ಮರಣಮಾತ್ರ ದಿಂದಲೇ ಆಮಂತ್ರಿಸಿದನು. ಆತನ ತೀವ್ರತಪಸ್ಸಿನ ಸಂತಾಪಕ್ಕೆ ಗುರಿಯಾದ ಮಹರ್ಷಿಗಳೆಲ್ಲರೂ ರಾತ್ರಿಯ ವೇಳೆಯಲ್ಲಿ ಪಕ್ಷಿಗಳ ಸ್ವರೂಪವನ್ನು ಧರಿಸಿ ಬಂದು ಶೂಲಾಧಿರೂಢನಾಗಿದ್ದ, ಯೋಗನಿಷ್ಠನಾದ ಮಾಂಡವ್ಯನ ಸ್ಥಿತಿಯನ್ನು



ನೋಡಿ ಮರುಗಿದರು. ಪಕ್ಷಿಯ ರೂಪಗಳಲಿದ್ದ ಮಹರ್ಷಿಗಳು ತಮ್ಮ- ತಮ್ಮ ಕುಲ-ಗೋತ್ರಗಳನ್ನು ತಿಳಿಸಿದವರಾಗಿ ಮಾಂಡವ್ಯನನ್ನು ಕುರಿತು ಹೇಳಿದರು :

"ಬ್ರಾಹ್ಮಣೋತ್ತಮ! ನಿನ್ನೀ ದುರವಸ್ಥೆಗೆ ಕಾರಣವಾದರೂ ಏನು?

ಯಾವ ಮಹಾಪಾಪದ ಕಾರಣಕ್ಕಾಗಿ ನೀನು ಈ ಶೂಲದ ಯಾತನೆಯನ್ನು ಅನುಭವಿಸುತ್ತಿರುವೆ?"

೧೦೭ನೆಯ ಅಧ್ಯಾಯವು ಮುಗಿಯಿತು.

೧೦೮ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಯಮಧರ್ಮನಿಗೆ ಮಾಂಡವ್ಯನ ಶಾಪ

ವೈಶಂಪಾಯನರು ಹೇಳುತ್ತಾರೆ :

**ತತಃ ಸ ಮುನಿಶಾರ್ದೂಲಸ್ತಾನುವಾಚ ತಪೋಧನಾನ್ ।**
**ದೋಷತಃ ಕಂ ಗಮಿಷ್ಯಾಮಿ ನ ಹಿ ಮೇಽನ್ಯೋಽಪರಾಧ್ಯತಿ ॥೧॥**

ಬಳಿಕ ಮಾಂಡವ್ಯಮಹರ್ಷಿಯು ತಪೋಧನರನ್ನು ಕುರಿತು–"ಮುನಿಸತ್ತಮರೇ! ಇದಕ್ಕೆ ನಾನು ಯಾರನ್ನು ತಾನೇ ನಿಂದಿಸಲಿ? ನನಗೆ ಯಾರೂ ಅಪರಾಧಮಾಡಿರುವುದಿಲ್ಲ"–ಎಂದು ಹೇಳಿದನು.

ಅನುದಿನವೂ ನಗರಪರ್ಯಟನಮಾಡುತ್ತಿದ್ದ ರಾಜಭಟರು ಶೂಲಕ್ಕೇರಿಸಿದ ಮಾಂಡವ್ಯನನ್ನು ನೋಡಿದರು. ಆತನು ಯೋಗಾರೂಢನಾಗಿ ಸಜೀವನಾಗಿಯೇ ಇದ್ದುದನ್ನು ಕಂಡು ರಾಜಭಟರಿಗೆ ಅಚ್ಚರಿಯಾಯಿತು. ಆ ವಿಷಯವನ್ನು ರಾಜನಿಗೂ ನಿವೇದಿಸಿದರು. ರಾಜನೂ ಸಹ ಕೂಡಲೇ ಮಂತ್ರಿ-ಪುರೋಹಿತರನ್ನು ಕರೆಯಿಸಿ, ಮುಂದಿನ ಕರ್ತವ್ಯವೇನೆಂಬುದನ್ನು ವಿಮರ್ಶೆಮಾಡಿ, ಮಿತಪರಿವಾರದೊಡನೆ ಮಹರ್ಷಿಯ ಬಳಿಗೆ ತೆರಳಿದನು. ಬದ್ಧಾಂಜಲಿಯಾಗಿ ನಿಂತು ಮಾಂಡವ್ಯನನ್ನು ನಾನಾವಿಧವಾದ ಪ್ರಿಯೋಕ್ತಿಗಳಿಂದ ಸ್ತುತಿಸಿ ತಿಳಿಯದೇ ಮಾಡಿದ ಅಪರಾಧವನ್ನು ಮನ್ನಿಸಬೇಕೆಂದೂ, ತನ್ನ ಮೇಲೆ ಕೋಪಮಾಡಕೂಡದೆಂದೂ ಅಂಗಲಾಚಿ ಬೇಡಿದನು. 'ನನಗೆ ಬೇರೆಯವರು ಅಪರಾಧಿಗಳಲ್ಲ'–ಎಂದು ಭಾವಿಸಿದ್ದ ಮಹರ್ಷಿಯು ರಾಜನ ವಿಷಯದಲ್ಲಿ ಒಡನೆಯೇ ಪ್ರಸನ್ನಭಾವವನ್ನು ತಾಳಿದನು.

ಶೂಲಕ್ಕೇರಿಸಿದ್ದ ಮಹರ್ಷಿಯನ್ನು–ಮಹರ್ಷಿಯ ದೇಹಕ್ಕೆ ಕುಂದುಂಟಾಗದ ರೀತಿಯಲ್ಲಿ–ಶೂಲದಿಂದ ಬಿಡಿಸಬೇಕೆನ್ನುವ ರಾಜನ

ಪ್ರಯತ್ನಗಳೆಲ್ಲವೂ ವಿಫಲವಾದುವು. ಶೂಲದಿಂದ ಮಹರ್ಷಿಯನ್ನು ಬೇರ್ಪಡಿಸಲು ಸಾಧ್ಯವಾಗಲಿಲ್ಲ. ಮಹರ್ಷಿಯ ಬಿಡುಗಡೆಗೆ ಉಳಿದಿದ್ದ ಒಂದೇ ಮಾರ್ಗವೆಂದರೆ ಶೂಲದ ವಿಚ್ಛೇದ. ಮಹರ್ಷಿಯ ಶರೀರದೊಳಗೆ ಹೊಕ್ಕಿದ್ದಷ್ಟು ಶೂಲದ ಭಾಗವನ್ನು ಬಿಟ್ಟು ಬುಡವನ್ನೇ ಕತ್ತರಿಸಲಾಯಿತು. ಶೂಲವು ತನ್ನ ದೇಹದಲ್ಲಿ ನೆಟ್ಟಿತ್ತಾದರೂ ಮಹರ್ಷಿಯು ಯಾತನೆಯಿಲ್ಲದವನಂತೆಯೇ ಸ್ವೇಚ್ಛೆಯಿಂದ ತಿರುಗಾಡುತ್ತಿದ್ದನು. ಅನಂತರವೂ ಮಹತ್ತರವಾದ ತಪಸ್ಸು ಮಾಡಿ, ಇತರರಿಂದ ಜಯಿಸಲು ಅಸಾಧ್ಯವಾದ ಉತ್ತಮಲೋಕಗಳನ್ನೂ ಜಯಿಸಿದನು. ಶೂಲದ ತುಂಡು ಮಹರ್ಷಿಯ ಶರೀರದಲ್ಲಿ ಉಳಿಯಿತಾದ್ದರಿಂದ ಮುಂದೆ ಮಹರ್ಷಿಯು ಅಣಿಮಾಂಡವ್ಯನೆಂಬ ( ಅಣಿಃ = ಮೊಳೆ, ಶೂಲಾಗ್ರ ) ಅನ್ವರ್ಥನಾಮದಿಂದಲೇ ಪ್ರಸಿದ್ಧಿಹೊಂದಿದನು.

ಅಣಿಮಾಂಡವ್ಯನಿಗೆ–'ನಾನು ಹಿಂದೆ ಮಾಡಿದ ಪಾಪದ ಫಲವಾಗಿಯೇ ಇದು ಸಂಭವಿಸಿದೆ'–ಎಂಬ ನಿಶ್ಚಯಜ್ಞಾನವಿದ್ದಿತಾದರೂ ತಾನು ಮಾಡಿದ ಮಹಾಪರಾಧವೇನೆಂಬುದನ್ನು ಅರಿಯಬೇಕೆಂಬ ಕುತೂಹಲವು ಬಹಳವಾಗಿತ್ತು. ಮಾನವನು, ತಾನು ಮಾಡಿದ ಅಪರಾಧ ಗಳೆಲ್ಲವನ್ನೂ ತಿಳಿಯಬೇಕಾದರೆ–ಯಮಧರ್ಮನಲ್ಲಿಗೇ ಹೋಗಬೇಕು. ಅಲ್ಲಿ ಅವನಿಗೆ ತಿಳಿದು ಮಾಡಿದ ಅಪರಾಧ, ತಿಳಿಯದೇ ಮಾಡಿದ ಅಪರಾಧ, ತಿಳಿದೂ ತಿಳಿಯದವನಂತೆ ಮಾಡಿದ್ದು, ಇಚ್ಛಾಪೂರ್ವಕವಾಗಿಯೇ ಮಾಡಿದ್ದು– ಇವೆಲ್ಲದರ ಅರಿವೂ ಉಂಟಾಗುವುದು. ಅಣಿಮಾಂಡವ್ಯನು ಸಾಮಾನ್ಯ ಮಾನವರಂತೆ ತನ್ನ ಅಪರಾಧವೇನೆಂಬುದನ್ನು ತಿಳಿಯಲು ದೇಹಾವಸಾನದವರೆಗೂ ಕಾಯಬೇಕಾಗಿರಲಿಲ್ಲ. ಪರಮಾತ್ಮತತ್ತ್ವವಿದನಾದ, ವಿಪ್ರಶ್ರೇಷ್ಠನಾದ ಅಣಿಮಾಂಡವ್ಯನು ತಪಃಶಕ್ತಿಯಿಂದ ಸಶರೀರನಾಗಿಯೇ ಯಮಧರ್ಮನ ಅರಮನೆಗೆ ತೆರಳಿದನು. ಸಿಂಹಾಸನಾರೂಢನಾಗಿದ್ದ ಯಮಧರ್ಮನನ್ನು ಆಕ್ಷೇಪಿಸಿದನು :

**ಕಿಂ ನು ತದ್ದುಷ್ಕೃತಂ ಕರ್ಮ ಮಯಾ ಕೃತಮಜಾನತಾ ।**
**ಯಸ್ಯೇಯಂ ಫಲನಿರ್ವೃತ್ತಿರೀದೃಶ್ಯಾಸಾದಿತಾ ಮಯಾ ।**
**ಶೀಘ್ರಮಾಚಕ್ಷ್ವ ಮೇ ತತ್ತ್ವಂ ಪಶ್ಯ ಮೇ ತಪಸೋ ಬಲಮ್ ॥**

"ಧರ್ಮರಾಜನೇ! ನನಗೆ ತಿಳಿಯದೇ ಆದ ಯಾವ ಮಹಾಪಾಪದ

ಫಲವಾಗಿ ನಾನಿಂದು ಈ ಶೂಲದ ಯಾತನೆಯನ್ನು ನಿರಂತರವಾಗಿ ಅನುಭವಿಸಬೇಕಾಗಿದೆ? ಕೂಡಲೇ ಹೇಳು. ನನ್ನ ತಪಃಶಕ್ತಿಯು ಎಷ್ಟಿದೆಯೆಂಬುದನ್ನಾದರೂ ನೋಡು."

ಅದಕ್ಕೆ ಯಮಧರ್ಮನು ಹೇಳಿದನು :

"ಮಹರ್ಷಿಯೇ! ನೀನು ಅಪರಾಧವನ್ನೆಸಗದೇ ಶಿಕ್ಷೆಯನ್ನನುಭವಿಸಲಿಲ್ಲ.

**ಪತಙ್ಗಿಕಾನಾಂ ಪುಚ್ಛೇಷು ತ್ವಯೇಷೀಕಾ ಪ್ರವೇಶಿತಾ ।**
**ಕರ್ಮಣಸ್ತಸ್ಯ ತೇ ಪ್ರಾಪ್ತಂ ಫಲಮೇತತ್ತಪೋಧನ ॥೧೧॥**

**ಸ್ವಲ್ಪಮೇವ ಯಥಾ ದತ್ತಂ ದಾನಂ ಬಹುಗುಣಂ ಭವೇತ್ ।**
**ಅಧರ್ಮ ಏವಂ ವಿಪ್ರರ್ಷೇ ಬಹುದುಃಖಫಲಪ್ರದಃ ॥೧೨॥**



ತಪೋಧನನೇ! ನೀನು ಪತಂಗಿಕೆಗಳ (ಚಿಟ್ಟೆಗಳ) ಪೃಷ್ಠಭಾಗಕ್ಕೆ ಹುಲ್ಲಿನ ಕಡ್ಡಿಯಿಂದ ಚುಚ್ಚಿ ತೊಂದರೆಪಡಿಸಿದುದೇ ಇಂದು ನೀನು ಅನುಭವಿ

ಸುತ್ತಿರುವ ನಿರಂತರವಾದ ಯಾತನೆಗೆ ಕಾರಣವಾಗಿದೆ. ಧರ್ಮರಹಸ್ಯವೇನೆಂದರೆ : ದಾನಮಾಡಿದ ವಸ್ತುವು ಅತ್ಯಲ್ಪವಾದರೂ ಅದರ ಫಲವು ಅನಂತವಾಗುವಂತೆ, ಮಾಡಿದ ಪಾಪವು ಅಲ್ಪವಾದರೂ ಅದರ ಪ್ರತಿಫಲವು ನೂರ್ಮಡಿಯಾಗಿ ಬಹಳ ದುಃಖಕ್ಕೆ ಕಾರಣವಾಗುವುದು."

ಅಣಿಮಾಂಡವ್ಯನಿಗೆ ಯಮಧರ್ಮನ ಉತ್ತರದಿಂದ ಸಮಾಧಾನವಾಗಲಿಲ್ಲ. ಅವನಿಗೆ ಪತಂಗಿಕೆಗಳನ್ನು ತೊಂದರೆಪಡಿಸಿದ್ದ ಸ್ಮರಣೆಯೂ ಇರಲಿಲ್ಲ. ಅವನು ಕೇಳಿದನು :

"ಯಮಧರ್ಮ! ನೀನೀಗ ಹೇಳಿದ ಪಾಪಕಾರ್ಯವನ್ನು ನಾನು ಯಾವಾಗ ಮಾಡಿದೆನೆಂಬುದನ್ನಾದರೂ ನಿಖರವಾಗಿ ಹೇಳುವೆಯಾ?"

"ಮಹರ್ಷೇ! ನೀನು ಬಾಲಕನಾಗಿದ್ದಾಗ ಮಾಡಿದ ಅಪರಾಧವಿದು."

**ಬಾಲೋ ಹಿ ದ್ವಾದಶಾದ್ವರ್ಷಾಜ್ಜನ್ಮತೋ ಯತ್ಕರಿಷ್ಯತಿ ।**
**ನ ಭವಿಷ್ಯತ್ಯಧರ್ಮೋಽತ್ರ ನ ಪ್ರಜ್ಞಾಸ್ಯನ್ತಿ ವೈ ದಿಶಃ ॥೧೪॥**

**ಅಲ್ಪೇಽಪರಾಧೇಽಪಿ ಮಹಾನ್ಮಮ ದಣ್ಡಸ್ತ್ವಯಾ ಕೃತಃ ।**
**ಗರೀಯಾನ್ಬ್ರಾಹ್ಮಣವಧಃ ಸರ್ವಭೂತವಧಾದಪಿ ॥೧೫॥**

**ಶೂದ್ರಯೋನಾವತೋ ಧರ್ಮ ಮಾನುಷಃ ಸಮ್ಭವಿಷ್ಯಸಿ ।**
**ಮರ್ಯಾದಾಂ ಸ್ಥಾಪಯಾಮ್ಯದ್ಯ ಲೋಕೇ**
**ಧರ್ಮಫಲೋದಯಾಮ್ ॥೧೬॥**

**ಆಚತುರ್ದಶಕಾದ್ವರ್ಷಾನ್ನ ಭವಿಷ್ಯತಿ ಪಾತಕಮ್ ।**
**ಪರತಃ ಕುರ್ವತಾಮೇವಂ ದೋಷ ಏವ ಭವಿಷ್ಯತಿ ॥೧೭॥**

"ಯಮರಾಜ! ಮನುಷ್ಯರು ಹುಟ್ಟಿದ ಹನ್ನೆರಡು ವರ್ಷಗಳ ಪರ್ಯಂತವಾಗಿ ಯಾವುದೇ ಕಾರ್ಯಮಾಡಿದರೂ ಅದು ಅಧರ್ಮಕಾರ್ಯವೆನಿಸುವುದಿಲ್ಲ. ಆ ವಯಸ್ಸಿನವರೆಗೆ ಆ ಬಾಲಕರಿಗೆ ದಿಕ್ಕು-ದೆಸೆಗಳೊಂದೂ ತಿಳಿದಿರುವುದಿಲ್ಲ. ( ಕರ್ತವ್ಯಾಕರ್ತವ್ಯಜ್ಞಾನವಿರುವುದಿಲ್ಲ. ) ಮೇಲಾಗಿ ನಾನು ಅನುಭವಿಸುತ್ತಿರುವ ಶಿಕ್ಷೆಯು ತಪ್ಪಿಗೆ ಅನುಗುಣವಾದ ಶಿಕ್ಷೆಯೆಂದು ಹೇಳಲು ಖಂಡಿತವಾಗಿಯೂ ಸಾಧ್ಯವಿಲ್ಲ. ಬಾಲ್ಯದಲ್ಲಿ ತಿಳಿಯದೆ ಮಾಡಿದ ಅಲ್ಪಾಪರಾಧಕ್ಕಾಗಿ ನಿರಂತರಯಾತನೆಯನ್ನು ಅನುಭವಿಸಬೇಕೇ?

ಬ್ರಾಹ್ಮಣವಧೆಯು ಉಳಿದ ಪ್ರಾಣಿಗಳ ವಧೆಗಿಂತಲೂ ಹೆಚ್ಚು ಪಾಪಕರವೆಂಬ ಅಂಶವು ನಿನಗೆ ತಿಳಿಯದೇ? ಆದುದರಿಂದ ವಿವೇಚನೆಯಿಲ್ಲದೇ ಮಾಡಿದ ಕಾರ್ಯಕ್ಕಾಗಿ ನೀನು ಮಾನವನಾಗಿ ಹುಟ್ಟಬೇಕು. ನಾಲ್ಕನೆಯ ವರ್ಣದವಳು (ಶೂದ್ರಸ್ತ್ರೀಯು) ನಿನಗೆ ಜನ್ಮದಾತೆಯಾಗುವಳು. ಇಷ್ಟು ಮಾತ್ರವಲ್ಲ, ಯಮಧರ್ಮ! ಇಂದಿನಿಂದ ನಾನು ನೂತನವಾದ ನಿಯಮವೊಂದನ್ನು



ಮಾಡುವೆನು. ಅದನ್ನು ನೀನು ಮಾನ್ಯಮಾಡಲೇಬೇಕು. ಇನ್ನು ಮುಂದೆ ಹದಿನಾಲ್ಕು ವರ್ಷದೊಳಗಿನ ಬಾಲಕರು ಮಾಡಿದ ಅಪರಾಧಗಳನ್ನು ಅಧರ್ಮವೆಂದು ಪರಿಗಣಿಸಲಾಗದು. ಹದಿನಾಲ್ಕು ವರ್ಷಗಳು ತುಂಬಿದ ನಂತರ ಮಾಡಿದ ಅಪರಾಧವು ಪಾಪವೆನಿಸುವುದು ಮಾತ್ರವಲ್ಲದೇ ಅಂತಹ

ವರು ಶಿಕ್ಷೆಗೂ ಯೋಗ್ಯರಾಗುವರು"–ಎಂದು ಹೇಳಿ ಅಣಿಮಾಂಡವ್ಯನು ಯಮಧರ್ಮನ ಆಸ್ಥಾನದಿಂದ ಹೊರಟುಹೋದನು.

ಯಮಧರ್ಮನು ಮಹರ್ಷಿಯ ಶಾಪದಂತೆ ಭೂಲೋಕದಲ್ಲಿ ವಿದುರನಾಗಿ ಹುಟ್ಟಿದನು. ಯಮಧರ್ಮನ ಅಪರಾವತಾರವಾದ್ದರಿಂದ ಅವನಲ್ಲಿ ಸಕಲವಿದ್ಯೆಗಳೂ ನೆಲೆಸಿದ್ದುವು. ಧರ್ಮಶಾಸ್ತ್ರದಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ಅತ್ಯಂತಕುಶಲನಾಗಿದ್ದನು. ದೀರ್ಘದರ್ಶಿಯಾಗಿದ್ದನು. ಕಾಮ-ಕ್ರೋಧ-ಲೋಭ-ಮೋಹಾದಿ ಅರಿಷಡ್ವರ್ಗಗಳು ಅವನ ಬಳಿ ಸುಳಿಯುತ್ತಲೂ ಇರಲಿಲ್ಲ. ಸರ್ವದಾ ಶಾಂತನಾಗಿದ್ದುಕೊಂಡು ಕುರುವಂಶದ ರಾಜರ ಹಿತಚಿಂತನೆಯಲ್ಲಿಯೇ ಕಾಲಕಳೆಯುತ್ತಿದ್ದನು."

೧೦೮ನೆಯ ಅಧ್ಯಾಯವು ಮುಗಿಯಿತು.

೧೦೯ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರಾದಿಗಳ ಜನನ: ಭೀಷ್ಮನ ಧರ್ಮಶಾಸನದಿಂದ ಕುರುಜಾಂಗಲದ ಸರ್ವತೋಮುಖವಾದ ಅಭಿವೃದ್ಧಿ

ವೈಶಂಪಾಯನರು ಹೇಳುತ್ತಾರೆ :

**ತೇಷು ತ್ರಿಷು ಕುಮಾರೇಷು ಜಾತೇಷು ಕುರುಜಾಙ್ಗಲಮ್ ।**
**ಕುರವೋಽಥ ಕುರುಕ್ಷೇತ್ರಂ ತ್ರಯಮೇತದವರ್ಧತ ॥೧॥**

"ಜನಮೇಜಯ! ಹಾಸ್ತಿನಪುರದ ರಾಜಗೃಹದಲ್ಲಿ ಧೃತರಾಷ್ಟ್ರ-ಪಾಂಡು-ವಿದುರರ ಜನನವಾದೊಡನೆಯೇ ಕುರುವಂಶ-ಕುರುಜಾಂಗಲ-ಕುರುಕ್ಷೇತ್ರಗಳು ಹೆಚ್ಚು ಅಭಿವೃದ್ಧಿಗೆ ಬಂದುವು.

ಭೂಮಿಯಲ್ಲಿ ಆಹಾರಧಾನ್ಯಗಳು ಯಥೇಚ್ಛವಾಗಿ ಬೆಳೆಯುತ್ತಿದ್ದುವು. ಮಳೆಯು ಋತುಧರ್ಮವನ್ನು ಅನುಸರಿಸಿ ತಪ್ಪದೇ ಬರುತ್ತಿತ್ತು. ಮರ-ಗಿಡ-ಬಳ್ಳಿಗಳು ಫಲ-ಪುಷ್ಪಭರಿತವಾಗಿದ್ದುವು. ಪಶು-ಪಕ್ಷಿಗಳೂ ರಾಜಕುಮಾರರ ಜನನದಿಂದುಂಟಾದ ಫಲವನ್ನು ಅನುಭವಿಸದೇ ಇರಲಿಲ್ಲ. ಅವೂ ಸಹ ಹೆಚ್ಚಾದ ಆನಂದವನ್ನು ಅನುಭವಿಸಿದುವು. ಹೂಗಳು ಸುವಾಸನೆಯಿಂದಲೂ, ಹಣ್ಣುಗಳು ಸುಮಧುರರಸದಿಂದಲೂ ಕೂಡಿರುತ್ತಿದ್ದುವು. ಪಟ್ಟಣಗಳೆಲ್ಲವೂ ವ್ಯಾಪಾರಸ್ಥರಿಂದಲೂ, ಕಲೆಗಾರರಿಂದಲೂ ತುಂಬಿದ್ದುವು.

ಜನರೆಲ್ಲರೂ ಧೈರ್ಯಶಾಲಿಗಳಾಗಿಯೂ, ವಿದ್ಯಾವಂತರಾಗಿಯೂ, ನಂಬಿಕೆಗೆ ಪಾತ್ರರಾಗಿಯೂ, ನಿತ್ಯತುಷ್ಟರಾಗಿಯೂ ಇರುತ್ತಿದ್ದರು.

**ನಾಭವನ್ದಸ್ಯವಃ ಕೇಚಿನ್ನಾಧರ್ಮರುಚಯೋ ಜನಾಃ ।**
**ಪ್ರದೇಶೇಷ್ವಪಿ ರಾಷ್ಟ್ರಾಣಾಂ ಕೃತಂ ಯುಗಮವರ್ತತ ॥೫॥**

**ಧರ್ಮಕ್ರಿಯಾ ಯಜ್ಞಶೀಲಾಃ ಸತ್ಯವ್ರತಪರಾಯಣಾಃ ।**
**ಅನ್ಯೋನ್ಯಪ್ರೀತಿಸಂಯುಕ್ತಾ ವ್ಯವರ್ಧನ್ತ ಪ್ರಜಾಸ್ತದಾ ॥೬॥**

**ಮಾನಕ್ರೋಧವಿಹೀನಾಶ್ಚ ನರಾ ಲೋಭವಿವರ್ಜಿತಾಃ ।**
**ಅನ್ಯೋನ್ಯಮಭ್ಯನನ್ದನ್ತ ಧರ್ಮೋತ್ತರಮವರ್ತತ ॥೭॥**

ಕಳ್ಳ-ಕಾಕರ, ಅಧರ್ಮಿಗಳ ಮತ್ತು ಸುಳ್ಳುಹೇಳುವವರ ಸುಳಿವೇ ಇರಲಿಲ್ಲ. ರಾಷ್ಟ್ರದ ಎಲ್ಲ ಭಾಗಗಳಲ್ಲಿಯೂ ಕೃತಯುಗವು ಪುನಃ ಪ್ರಾರಂಭ ವಾಗಿದೆಯೋ ಎಂಬ ಭಾವನೆಯುಂಟಾಯಿತು. ಪ್ರಜೆಗಳು ಯಾವಾಗಲೂ ಧರ್ಮನಿಷ್ಠರಾಗಿಯೂ ತಪೋನಿಷ್ಠರಾಗಿಯೂ, ಸತ್ಯನಿಷ್ಠರಾಗಿಯೂ, ಯಜ್ಞಶೀಲರಾಗಿಯೂ ಇರುತ್ತಿದ್ದರು. ಎಲ್ಲ ವರ್ಣದವರೂ ಪರಸ್ಪರ ಪ್ರೀತಿಯಿಂದಲೂ, ಸೌಹಾರ್ದದಿಂದಲೂ ಇರುತ್ತಿದ್ದರು. ದ್ವೇಷಾಸೂಯೆ ಗಳಿರಲಿಲ್ಲ. ಜನರು ಕಾಮ-ಕ್ರೋಧ-ಲೋಭಾದಿಗಳೆಂದರೇನೆಂಬುದನ್ನೇ ಅರಿಯದವರಾಗಿದ್ದರು. ಇತರರನ್ನು ಸಂತೋಷಗೊಳಿಸಬೇಕೆಂಬುದೇ ಪ್ರಜೆಗಳ ಧ್ಯೇಯವಾಗಿದ್ದಿತು. ಎಲ್ಲರೂ ಧರ್ಮಪ್ರಧಾನರಾಗಿದ್ದರು.

ಜನನಿಬಿಡವಾಗಿದ್ದ ಹಾಸ್ತಿನಪಟ್ಟಣವು ಮಹೋದಧಿಗೆ ಸದೃಶವಾಗಿ ದ್ದಿತು. ಆ ಪಟ್ಟಣದ ದ್ವಾರಗಳೂ, ಗೋಪುರಗಳೂ ಮತ್ತು ತೋರಣಗಳೂ ಮೇಘಮಾಲೆಗಳಂತೆ ಪ್ರಕಾಶಿಸುತ್ತಿದ್ದುವು. ಹಸ್ತಿನಾವತಿಯು ಸುಂದರವಾದ ಮತ್ತು ಗಗನಚುಂಬಿಗಳಾದ ಅನೇಕಸೌಧಗಳಿಂದ ತುಂಬಿ ಇಂದ್ರನ ಅಮರಾವತಿಯನ್ನು ಹೋಲುತ್ತಿತ್ತು. ಪ್ರಜೆಗಳಿಗೆ ಹೆಚ್ಚಿನ ಆನಂದವನ್ನು ಪಡೆಯುವುದರಲ್ಲಿ ಸ್ಪರ್ಧೆಯಿತ್ತು. ದಕ್ಷಿಣಕುರುದೇಶದ ಜನರು ದೇವ-ಮುನಿ-ಸಿದ್ಧ-ಚಾರಣರಿಂದ ಕೂಡಿ ನದೀ-ನದ-ತಟಾಕಗಳಲ್ಲಿ ಮತ್ತು ವನ-ಕಾನನಗಳಲ್ಲಿ ವಿಹರಿಸುತ್ತಿದ್ದರು. ಉತ್ತರಕುರುಗಳೊಡನೆ ( ಸುಖದ ವಿಷಯ ದಲ್ಲಿ ) ಸ್ಪರ್ಧಿಸುವಂತೆ ನಡೆದುಕೊಳ್ಳುತ್ತಿದ್ದರು. ಜನರಿಗೆ ಕಷ್ಟ ಅಥವಾ

ದುಃಖಗಳ ಅನುಭವವೇ ಮರೆತುಹೋಯಿತು. ದೇಶದಲ್ಲಿ ದೀನರಾಗಲೀ, ವಿಧವೆಯರಾಗಲೀ ಇರಲಿಲ್ಲ. ವಾಪೀ-ಕೂಪ-ತಟಾಕಾದಿಗಳು ಸದಾ ತುಂಬಿರುತ್ತಿದ್ದುವು.

ಆರಾಮಪ್ರದೇಶಗಳು ಫಲ-ಪುಷ್ಪಭರಿತವಾದ ಮರ-ಗಿಡ-ಬಳ್ಳಿಗಳಿಂದ ನಿಬಿಡವಾಗಿರುತ್ತಿದ್ದುವು. ಸಭೆಗಳು ಸತ್ಪುರುಷರಿಂದಲೂ, ವಿದ್ವಾಂಸರಿಂದಲೂ ತುಂಬಿರುತ್ತಿದ್ದುವು. ತಪೋನಿಷ್ಠರಾದ ಬ್ರಾಹ್ಮಣರ ಮನೆಗಳಲ್ಲಿ ಸರ್ವದಾ ವೇದಘೋಷಗಳೂ ಹೋಮ-ಹವನಾದಿಗಳೂ ನಡೆಯುತ್ತಿದ್ದುವು. ಒಟ್ಟಿನಲ್ಲಿ ಸಕಲಪ್ರಜೆಗಳೂ ನಿತ್ಯಾನಂದವನ್ನು ಅನುಭವಿಸುತ್ತಿದ್ದರು.

ಭೀಷ್ಮನು ರಾಜಪ್ರತಿನಿಧಿಯಾಗಿದ್ದು ರಾಜ್ಯವನ್ನು ಬಹಳ ವಿಚಕ್ಷಣೆ ಯಿಂದ ಆಳುತ್ತಿದ್ದನು. ರಾಜ್ಯದ ನಾನಾಭಾಗಗಳಲ್ಲಿ ಯಜ್ಞದ ಯೂಪ ಸ್ತಂಭಗಳು ಪ್ರಕಾಶಿಸಿದುವು. ಭೀಷ್ಮನ ರಾಜ್ಯಭಾರಕ್ರಮಕ್ಕೆ ಧರ್ಮವೇ ಮೂಲವಾಗಿತ್ತು. ಇತರ ದೇಶಗಳ ಜನರು ಸಹಸ್ರಸಂಖ್ಯೆಯಲ್ಲಿ ಕುರು ರಾಜ್ಯದ ಸುಖ-ಶಾಂತಿಗಳಿಂದ ಆಕರ್ಷಿತರಾಗಿ ಅಲ್ಲಿಯೇ ಬಂದು ನೆಲೆಸು ತ್ತಿದ್ದರು. ಪ್ರಜೆಗಳು ರಾಜಕುಮಾರರ ಆಟ-ಪಾಟಗಳನ್ನು ಕಂಡು, ರಾಜಕುಮಾರರಿಗೆ ನಡೆಸಿದ ಜಾತಕರ್ಮಾದಿ ಕ್ರಿಯೆಗಳನ್ನು ನೋಡಿ ಆನಂದಿಸಿ, ಮುಂದಿನ ವೈಭವಗಳನ್ನು ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುತ್ತಿ ದ್ದರು. ದೇಶದ ಎಲ್ಲ ಕಡೆಗಳಲ್ಲಿಯೂ ಸುಭಿಕ್ಷವುಂಟಾಗಿ ಪ್ರಜೆಗಳೆಲ್ಲರೂ– 'ದಾನ ಮಾಡಿರಿ! ತಿನ್ನಿರಿ!'–ಎನ್ನುತ್ತಿದ್ದರೇ ಹೊರತು ಹೊಟ್ಟೆಗಿಲ್ಲವೆಂಬ ದೈನ್ಯದ ಧ್ವನಿಯೇ ಕೇಳಿಬರುತ್ತಿರಲಿಲ್ಲ. ಭೀಷ್ಮನು ಮೂವರು ಮಕ್ಕಳನ್ನೂ ತನ್ನ ಮಕ್ಕಳೆಂದೇ ತಿಳಿದು ಪಾಲಿಸಿದನು. ಕುಲಧರ್ಮಗಳಿಗೆ ಅನುಸಾರವಾಗಿ ನಾಮಕರಣಾದಿ ಸಂಸ್ಕಾರಗಳು ಮುಗಿದೊಡನೆಯೇ ಆ ಬಾಲಕರು ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿದರು. ಅವರು ವ್ಯಾಯಾಮದಲ್ಲಿ ಕುಶಲ ರಾದರು. ಧನುರ್ವೇದದಲ್ಲಿಯೂ, ಕುದುರೆಸವಾರಿಯಲ್ಲಿಯೂ, ಕತ್ತಿವರಸೆ ಯಲ್ಲಿಯೂ, ವೇದ-ವೇದಾಂಗಗಳ ತತ್ತ್ವದಲ್ಲಿಯೂ, ಗದಾಯುದ್ಧ ದಲ್ಲಿಯೂ, ಗಜಶಿಕ್ಷೆ-ನೀತಿಶಾಸ್ತ್ರಗಳಲ್ಲಿಯೂ, ಇತಿಹಾಸ-ಪುರಾಣಗಳಲ್ಲಿಯೂ ಪಾರಂಗತ ರಾದರು. ಎಲ್ಲ ವಿದ್ಯೆಗಳಲ್ಲಿಯೂ–'ಇದಮಿತ್ಥಂ'–ಎಂಬ ನಿಶ್ಚಯಜ್ಞಾನವು ಅವರಿಗಿದ್ದಿತು. ಮೂವರು ಮಕ್ಕಳಿಗೂ ಮೇಲೆ ಹೇಳಿದ ವಿದ್ಯೆಗಳಲ್ಲಿ

ಸಂಪೂರ್ಣಪಾಂಡಿತ್ಯವಿದ್ದರೂ ಒಬ್ಬೊಬ್ಬರು ಒಂದೊಂದು ವಿದ್ಯೆಯಲ್ಲಿ ಹೆಚ್ಚಿನ ಪ್ರಾವೀಣ್ಯವನ್ನು ಪಡೆದಿದ್ದರು. ಪಾಂಡುವು ಧನುರ್ವಿದ್ಯೆಯಲ್ಲಿ ಅಪ್ರತಿಮನೆನಿಸಿದನು. ಧೃತರಾಷ್ಟ್ರನು ದೇಹಬಲದಲ್ಲಿ ಅದ್ವಿತೀಯನೆನಿಸಿದನು. ವಿದುರನು ಧರ್ಮನಿಷ್ಠನಾಗಿ, ಆತ್ಮದ್ರಷ್ಟಾರನಾಗಿ, ನೀತಿಶಾಸ್ತ್ರದಲ್ಲಿಯೂ ಅಸಮಾನನೆನಿಸಿದನು. ನಷ್ಟವಾಗಿ ಹೋಗುವುದರಲ್ಲಿದ್ದ ಶಾಂತನುವಿನ ವಂಶವು ಪುನಃ ಉದ್ಧಾರವಾದುದನ್ನು ಕಂಡು ರಾಷ್ಟ್ರ ಮತ್ತು ಪ್ರಾಂತಗಳ ಎಲ್ಲ ಪ್ರಜೆಗಳೂ ಹೀಗೆಂದು ಹೇಳತೊಡಗಿದರು :

**ವೀರಸೂನಾಂ ಕಾಶಿಸುತೇ ದೇಶಾನಾಂ ಕುರುಜಾಙ್ಗಲಮ್ ।**
**ಸರ್ವಧರ್ಮವಿದಾಂ ಭೀಷ್ಮಃ ಪುರಾಣಾಂ ಗಜಸಾಹ್ವಯಮ್ ॥೨೪॥**

"ವೀರಮಾತೆಯರಲ್ಲಿ ಕಾಶೀದೇಶದ ಇಬ್ಬರು ರಾಜಕುಮಾರಿಯರು ಮೊದಲಿಗರು. ಸುಭಿಕ್ಷಯುತವಾದ ದೇಶಗಳಲ್ಲಿ ಕುರುಜಾಂಗಲವು ಮೊದಲನೆಯದು. ಸರ್ವಧರ್ಮಗಳನ್ನೂ ತಿಳಿದವರಲ್ಲಿ ಭೀಷ್ಮನು ಮೊದಲನೆಯವನು. ಸುಂದರನಗರಿಗಳಲ್ಲಿ ಹಾಸ್ತಿನಪುರವು ಮೊದಲನೆಯದು."

ಧೃತರಾಷ್ಟ್ರನು ಕುರುಡನಾದುದರಿಂದಲೂ, ವಿದುರನು ಚತುರ್ಥವರ್ಣ ಸ್ತ್ರೀಯಲ್ಲಿ ಹುಟ್ಟಿದವನಾದುದರಿಂದಲೂ–ಎರಡನೆಯವನಾದ ಪಾಂಡುವೇ ದೇಶಕ್ಕೆ ರಾಜನಾದನು.

ನೀತಿವಂತರಲ್ಲಿ ಶ್ರೇಷ್ಠನೆನಿಸಿದ್ದ ಭೀಷ್ಮನೊಮ್ಮೆ ಧರ್ಮತತ್ತ್ವಜ್ಞನಾದ ವಿದುರನೊಡನೆ ಕಾಲೋಚಿತವಾದ ಮಾತುಗಳನ್ನು ಹೇಳಲು ಉಪಕ್ರಮಿಸಿದನು.

೧೦೯ನೆಯ ಅಧ್ಯಾಯವು ಮುಗಿಯಿತು.

೧೧೦ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರರಾಜನ ವಿವಾಹ

ಭೀಷ್ಮನು ಹೇಳುತ್ತಾನೆ :

**ಗುಣೈಃ ಸಮುದಿತಂ ಸಮ್ಯಗಿದಂ ನಃ ಪ್ರಥಿತಂ ಕುಲಮ್ ।**
**ಅತ್ಯನ್ಯಾನ್ಪೃಥಿವೀಪಾಲಾನ್ಪೃಥಿವ್ಯಾಮಧಿರಾಜ್ಯಭಾಕ್ ॥೧॥**

"ವಿದುರ! ನಮ್ಮ ಭರತವಂಶವು ಶ್ರೇಷ್ಠವಾದ ವಂಶವೆಂದು ಪ್ರಸಿದ್ಧಿ

ಹೊಂದಿರುವುದು. ನಮ್ಮ ವಂಶದ ಪೂರ್ವಜರು ಸದ್ಗುಣಸಂಪನ್ನರಾಗಿದ್ದುದೇ ಇದಕ್ಕೆ ಮುಖ್ಯಕಾರಣ. ಈ ನಮ್ಮ ವಂಶದರಸರು ಪ್ರಪಂಚದ ಎಲ್ಲ ರಾಜರನ್ನೂ ಗೆದ್ದು, ಚಕ್ರವರ್ತಿಗಳೆಂಬ ಕೀರ್ತಿಯನ್ನೂ ಗಳಿಸಿ ಚಕ್ರಾಧಿಪತ್ಯವನ್ನೇ ಸ್ಥಾಪಿಸಿದರು.

ನಮ್ಮ ಕುಲದೀಪಕರಾದ ಅನೇಕಾನೇಕರಾಜರು ಧರ್ಮದಿಂದ ಈ ಪೃಥ್ವಿಯನ್ನು ರಕ್ಷಿಸಿಕೊಂಡು ಬಂದಿರುತ್ತಾರೆ. ಆದುದರಿಂದ ಈ ನಮ್ಮ ಕುಲವಾಗಲೀ ಮತ್ತು ರಾಜ್ಯವಾಗಲೀ ವಿನಾಶಹೊಂದಕೂಡದೆಂದು ಅಭಿಲಾಷಿಸಿ ನಾನೂ, ಸತ್ಯವತಿಯೂ ಮತ್ತು ವ್ಯಾಸರೂ ಸಮಾಲೋಚಿಸಿ ನಿಮ್ಮ ಪ್ರಾದುರ್ಭಾವಕ್ಕೆ ಕಾರಣರಾದೆವು. ಇಂದು ನಮ್ಮ ಭರತಕುಲದ ಪ್ರತಿಷ್ಠೆಯೂ ಮತ್ತು ನಮ್ಮ ರಾಜ್ಯದ ಸಂರಕ್ಷಣೆಯೂ ನಿಮ್ಮನ್ನೇ ಅವಲಂಬಿಸಿವೆ. ನಮ್ಮ ಈ ಭರತವಂಶವು-ಹುಣ್ಣಿಮೆಯ ದಿನಗಳಲ್ಲಿ ಸಮುದ್ರವು ಉಕ್ಕುವಂತೆ–ಅಭಿವೃದ್ಧಿ ಹೊಂದಬೇಕಾಗಿದೆ. ಇದಕ್ಕೆ ನಾನೂ ಮತ್ತು ನೀನೂ ಸಂಪೂರ್ಣವಾಗಿ ಪ್ರಯತ್ನಿಸಬೇಕಾಗಿದೆ.

ವಿದುರ! ನಮ್ಮ ವಂಶಕ್ಕೆ ಸೇರಲು ಯೋಗ್ಯರಾದ ಮೂವರು ಹೆಣ್ಣು ಮಕ್ಕಳಿರುವರೆಂದು ಕೇಳಿರುವೆನು. ಮೊದಲನೆಯವಳು ಯದುವಂಶದ ಶೂರಸೇನನ ಮಗಳು. ಎರಡನೆಯವಳು ಸುಬಲರಾಜನ ಮಗಳು. ಮೂರನೆಯವಳು ಮದ್ರರಾಜಕುಮಾರೀ. ಅವರೆಲ್ಲರೂ ಕುಲೀನೆಯರಾಗಿಯೂ, ರೂಪವತಿಯರಾಗಿಯೂ ಮತ್ತು ಕ್ಷತ್ರಿಯರಾಜರ ಕನ್ಯೆಯರಾಗಿಯೂ, ನಾವು ಸಂಬಂಧ ಬೆಳೆಸಲು ಯೋಗ್ಯರಾಗಿಯೂ ಇರುವುದರಿಂದ ಅವರು ನಮ್ಮ ವಂಶದ ಅಭಿವೃದ್ಧಿಗೆ ಯೋಗ್ಯರಾದ ಕನ್ಯೆಯರಾಗಿರುತ್ತಾರೆಂದು ಭಾವಿಸಿದ್ದೇನೆ. ಇದರಲ್ಲಿ ನಿನ್ನ ಅಭಿಪ್ರಾಯವೇನು?"

**ಭವಾನ್ಪಿತಾ ಭವಾನ್ಮಾತಾ ಭವಾನ್ನಃ ಪರಮೋ ಗುರುಃ ।**
**ತಸ್ಮಾತ್ತ್ವಯಂ ಕುಲಸ್ಯಾಸ್ಯ ವಿಚಾರ್ಯ ಕುರು ಯದ್ಧಿತಮ್ ॥**

"ತಾತ! ನೀನೇ ನಮಗೆ ತಂದೆ, ತಾಯಿ ಮತ್ತು ಆಚಾರ್ಯನಾಗಿಯೂ ಇರುವೆ. ಆದುದರಿಂದ ನಮ್ಮ ಕುಲಕ್ಕೆ ಹಿತವೆಂದು ತೋರಿದುದನ್ನು ನೀನು ನಿಸ್ಸಂಕೋಚವಾಗಿ ಮಾಡಬಹುದು."

ವಿದುರನೊಡನೆ ಸಮಾಲೋಚನೆ ನಡೆಸಿದನಂತರ ಭೀಷ್ಮನು ಮುಂದಿನ ಕಾರ್ಯಕ್ಕೆ ಅನುವಾದನು. ಕನ್ಯಾನ್ವೇಷಣಕ್ಕೆ ತೆರಳಿದ್ದ ಹಲವಾರು ಬ್ರಾಹ್ಮಣರಿಂದ ಸುಬಲರಾಜನ ಮಗಳಾದ ಗಾಂಧಾರಿಯು ಶಿವನನ್ನು ಪೂಜಿಸಿ ನೂರು ಮಕ್ಕಳಾಗುವಂತೆ ವರವನ್ನು ಪಡೆದಿರುವಳೆಂಬ ವಾರ್ತೆಯನ್ನು ಕೇಳಿದನಂತರ ವಂಶಾಭಿವೃದ್ಧಿಯಲ್ಲಿ ಆಸಕ್ತನಾಗಿದ್ದ ಭೀಷ್ಮನು ಗಾಂಧಾರಿಯನ್ನೇ ತಂದು ಧೃತರಾಷ್ಟ್ರನಿಗೆ ವಿವಾಹಮಾಡಬೇಕೆಂದು ನಿಶ್ಚಯಿಸಿದನು. ಕನ್ಯಾವರಣಕ್ಕಾಗಿ ವಾಗ್ಮಿಗಳಾದ ವಿದ್ವಾಂಸರನ್ನು ಸುಬಲರಾಜನ ಬಳಿಗೆ ಕೂಡಲೇ ಕಳುಹಿಸಿದನು.

ಸುಬಲನು ಮೊದಲು ಕುರುಡನಿಗೆ ಕನ್ಯೆಯನ್ನು ಕೊಡುವ ವಿಷಯವಾಗಿ ಹಿಂಜರಿದರೂ ಕುರುವಂಶದ ಖ್ಯಾತಿಯನ್ನೂ, ನಡೆ-ನುಡಿಗಳನ್ನೂ ಪರ್ಯಾಲೋಚಿಸಿ ಕನ್ಯೆಯನ್ನು ಧೃತರಾಷ್ಟ್ರನಿಗೆ ಕೊಡಲೊಪ್ಪಿದನು. ಗಾಂಧಾರಿಗೂ ವಿಷಯವು ತಿಳಿಯಿತು. ತನಗೆ ಗಂಡನಾಗುವವನು ಹುಟ್ಟು ಕುರುಡನಾಗಿದ್ದರೂ ತಂದೆ-ತಾಯಿಗಳು ವಿವಾಹಕ್ಕೆ ಒಪ್ಪಿರುವ ಅಂಶವೂ ತಿಳಿಯಿತು.

ಇದರಿಂದ ಭಾರತಸ್ತ್ರೀರತ್ನಳಾದ ಗಾಂಧಾರಿಯ ಮನಸ್ಸಿನ ಮೇಲೆ ಯಾವುದೇ ವಿಧವಾದ ಕೋಪ-ದುಃಖಾದಿ ದುಷ್ಪರಿಣಾಮಗಳೂ ಉಂಟಾಗ ಲಿಲ್ಲ. ತಂದೆಯು ತನ್ನ ಹಿತಚಿಂತನೆಯಿಂದಲೇ ಈ ವಿವಾಹಕ್ಕೆ ಒಪ್ಪಿರುವ ನೆಂದು ಭಾವಿಸಿದಳು. ತಾನು ಸೇರುವ ಅಂಧಪತಿಗೆ ಗೌರವತೋರಲು ತನ್ನ ಕಣ್ಣುಗಳನ್ನೂ ಬಟ್ಟೆಯಿಂದ ಮುಚ್ಚಿ ಕಾಣದಿರುವಂತೆ ಮಾಡಿಕೊಂಡಳು. ಗಂಡನು ಅನುಭವಿಸದ ದರ್ಶನಸುಖವನ್ನು ತಾನೇಕೆ ಅನುಭವಿಸಬೇಕೆಂಬುದು ಗಾಂಧಾರಿಯ ಭಾವನೆಯಾಗಿತ್ತು.

ಸರ್ವಾಲಂಕಾರಶೋಭಿತೆಯಾದ ಕನ್ಯಾರತ್ನವನ್ನು ಗಾಂಧಾರಿಯ ಅಣ್ಣನಾದ ಶಕುನಿಯು ಮಂಗಳವಾದ್ಯಗಳೊಡನೆ ಹಾಸ್ತಿನಪುರಕ್ಕೆ ಕರೆ ತಂದನು. ಭೀಷ್ಮನು ಪುರೋಹಿತಪುರಸ್ಸರನಾಗಿ ಸಕಲವಿಧವಾದ ಮರ್ಯಾದೆಗಳೊಡನೆ ರಾಜಕನ್ಯೆಯನ್ನು ಸ್ವಾಗತಿಸಿ ಅರಮನೆಗೆ ಕರೆ ದೊಯ್ದನು. ಶುಭಲಗ್ನದಲ್ಲಿ ಧೃತರಾಷ್ಟ್ರ-ಗಾಂಧಾರಿಯರ ವಿವಾಹವು ನೆರವೇ

ರಿತು. ಶಕುನಿಯೂ ಆನಂದಭರಿತನಾಗಿ ಭೀಷ್ಮನ ಅನುಮತಿಯನ್ನು ಪಡೆದು ತನ್ನ ದೇಶಕ್ಕೆ ಹಿಂದಿರುಗಿದನು.

ಗಾಂಧಾರಿಯು ವಿನಯ-ಸೌಜನ್ಯಾದಿಗಳಿಂದ ಹಿರಿಯರ ಮೆಚ್ಚುಗೆಗೆ ಪಾತ್ರಳಾದಳು. ಸರ್ವದಾ ಗಂಡನ ಸೇವೆಯಲ್ಲಿಯೇ ಆಸಕ್ತಳಾಗಿರುತ್ತಿದ್ದಳು. ಪತಿಯ ಹೊರತಾಗಿ ಪರಪುರುಷರ ಹೆಸರನ್ನೂ ಉಚ್ಚರಿಸುತ್ತಿರಲಿಲ್ಲ. ಪತಿಯೇ ಪರದೈವವೆಂದು ತಿಳಿದವಳಾಗಿ ಸದಾ ಪತಿಯ ಸೇವೆಯಲ್ಲಿಯೇ ಕಾಲಕಳೆಯುತ್ತಿದ್ದಳು."

೧೧೦ನೆಯ ಅಧ್ಯಾಯವು ಮುಗಿಯಿತು.

೧೧೧ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದುರ್ವಾಸರಿಂದ ಕುಂತಿಗೆ ಮಂತ್ರೋಪದೇಶ : ಕರ್ಣನ ಜನನ : ಕರ್ಣನಿಂದ ಇಂದ್ರನಿಗೆ ಕವಚ-ಕುಂಡಲಗಳ ಪ್ರದಾನ

ವೈಶಂಪಾಯನರು ಹೇಳುತ್ತಾರೆ :

**ಶೂರೋ ನಾಮ ಯದುಶ್ರೇಷ್ಠೋ ವಸುದೇವಪಿತಾಭವತ್ ।**
**ತಸ್ಯ ಕನ್ಯಾ ಪೃಥಾ ನಾಮ ರೂಪೇಣಾಪ್ರತಿಮಾ ಭುವಿ ॥೧॥**

"ಜನಮೇಜಯ! ಯಾದವರಲ್ಲಿ ಶೂರಸೇನನೆಂಬ ಪ್ರಸಿದ್ಧನಾದ ರಾಜನಿದ್ದನು. ಅವನಿಗೆ ವಸುದೇವನೆಂಬ ಮಗನೂ, ಅಪ್ರತಿಮರೂಪವತಿ ಯಾದ ಪೃಥಾ ಎಂಬ ಮಗಳೂ ಇದ್ದರು.

ಕುಂತಿಭೋಜನು ಶೂರನ ತಂದೆಯ ತಂಗಿಯ (ಸೋದರತ್ತೆಯ) ಮಗ. ಕುಂತಿಭೋಜನಿಗೂ ಶೂರನಿಗೂ ಬಾಂಧವ್ಯವಿದ್ದುದು ಮಾತ್ರವಲ್ಲದೇ ವಿಶೇಷವಾದ ಮೈತ್ರಿಯೂ ಬೆಳೆದಿತ್ತು. ಕುಂತಿಭೋಜನಿಗೆ ಮಕ್ಕಳಿರಲಿಲ್ಲ. ಹಿಂದೊಂದು ಸಮಯದಲ್ಲಿ ಶೂರನು ತನ್ನ ಮೊದಲನೆಯ ಶಿಶುವನ್ನು ಕುಂತಿಭೋಜನಿಗೆ ಕೊಟ್ಟುಬಿಡುವೆನೆಂದೂ ಹೇಳಿದ್ದನು. ಮೊದಲನೆಯ ಶಿಶುವು ಪ್ರತಿಯೊಬ್ಬರಿಗೂ ಹೆಚ್ಚಿನ ಮಮತೆಯದಾದರೂ ಸತ್ಯಸಂಧನಾದ ಶೂರನು ಹುಟ್ಟಿದ ಸುಂದರಸ್ತ್ರೀಶಿಶುವನ್ನು ಕುಂತಿಭೋಜನಿಗೆ ಕೊಟ್ಟುಬಿಟ್ಟನು. ಕುಂತಿಭೋಜನು ಹೆಣ್ಣು ಮಗುವನ್ನು ಆನಂದದಿಂದ ಸ್ವೀಕರಿಸಿ ಆ ಶಿಶುವಿಗೆ 'ಕುಂತೀ' ಎಂದೇ ನಾಮಕರಣ ಮಾಡಿದನು.

ಹೆಣ್ಣುಮಗುವು ಶುಕ್ಲಪಕ್ಷದ ಚಂದ್ರನಂತೆಯೇ ಬೆಳೆಯಿತು. ಸ್ವಲ್ಪ ವಯಸ್ಸಾಗುತ್ತಲೇ ಮಗಳ ಭವಿಷ್ಯವು ಶ್ರೇಯಃ-ಪ್ರೇಯಗಳಿಂದ ಕೂಡಿರ ಬೇಕೆಂಬ ಇಚ್ಛೆಯಿಂದ ಕುಂತಿಭೋಜನು ಮಗಳನ್ನು ದೇವತೆಗಳ ಪೂಜೆ ಯಲ್ಲಿಯೂ, ಅತಿಥಿಸತ್ಕಾರದಲ್ಲಿಯೂ ನಿಯಮಿಸಿದನು.

(ತಪಸ್ವಿಗಳ ಆಶೀರ್ವಾದಮಂತ್ರದಿಂದ ಒಣಮರವೂ ಚಿಗುರುತ್ತಿದ್ದ ಕಾಲವದು). ಒಂದಾನೊಂದು ಸಮಯದಲ್ಲಿ ಬಹಳ ಕೋಪಿಷ್ಠರೆನಿಸಿದ್ದ ದುರ್ವಾಸರು ಕುಮಾರಿಯಾದ ಕುಂತಿಯ ಅತಿಥಿಗಳಾದರು. ಹೊರಗೆ ಕೋಪವನ್ನು ತೋರುತ್ತಿದ್ದರೂ ಧರ್ಮದಲ್ಲಿ ಸಂಪೂರ್ಣವಾದ ನಿಶ್ಚಯ ಜ್ಞಾನವನ್ನು ಹೊಂದಿದ್ದ ದುರ್ವಾಸರನ್ನು ಕುಂತಿಯು ಬಹಳ ಜಾಗರೂಕತೆ ಯಿಂದ ಸತ್ಕರಿಸಿ ಅವರ ಅನುಗ್ರಹಕ್ಕೆ ಪಾತ್ರಳಾದಳು. ಆಗ್ರಹಗೊಳ್ಳದಿದ್ದರೆ ಸಾಕೆಂದಿದ್ದವಳಿಗೆ ಅನುಗ್ರಹವು ಸಿಕ್ಕಿದರೆ ಎಷ್ಟು ಆನಂದವಾಗಿರಬಹುದು! ದುರ್ವಾಸರು ಕುಂತಿಯ ಭವಿಷ್ಯವನ್ನು ತಿಳಿದವರಾಗಿ ಆಪದ್ಧರ್ಮಕ್ಕೆ ಉಪಯುಕ್ತವಾದ, ಅಭಿಚಾರಪ್ರಕ್ರಿಯೆಯಿಂದ ಕೂಡಿದ ( ಪುತ್ರಪ್ರಾಪ್ತಿಯ ) ಮಂತ್ರವನ್ನು ಉಪದೇಶಿಸಿ ಹೇಳಿದರು :

**ಯಂ ಯಂ ದೇವಂ ತ್ವಮೇತೇನ ಮನ್ತ್ರೇಣಾವಾಹಯಿಷ್ಯಸಿ ।**
**ತಸ್ಯ ತಸ್ಯ ಪ್ರಸಾದೇನ ಪುತ್ರಸ್ತವ ಭವಿಷ್ಯತಿ ॥೭॥**

"ಶುಭಾಂಗಿಯೇ! ನೀನು ಯಾವ ಯಾವ ದೇವನನ್ನು ಈ ಮಂತ್ರ ಪುನಶ್ಚರಣೆ ಮಾಡಿ ಕರೆಯುವೆಯೋ ಆಯಾ ದೇವನ ಪ್ರಭಾವದಿಂದ ನಿನಗೆ ಪುತ್ರನು ಜನಿಸುವನು"–ಎಂದು ಹೇಳಿ ಹೊರಟುಹೋದರು.

ಹರೆಯದ ಪ್ರಾಯದವಳಾಗಿದ್ದ ಕುಂತಿಯು ದುರ್ವಾಸರಿಂದ ವರ ವನ್ನು ಪಡೆದು ಹೀಗೆಂದು ಯೋಚಿಸಿದಳು : 'ತನಗೆ ಮಕ್ಕಳಾಗುವುದು! ಮಂತ್ರದಿಂದ ಮಕ್ಕಳಾಗುವುದು ಹೇಗೆ? ಮಹರ್ಷಿಯ ಮಾತು ನಿಶ್ಚಯವೇ? ಖಂಡಿತ ಸುಳ್ಳಾಗಲಾರದು. ಪರೀಕ್ಷಿಸಿಬಿಡಲೇ?'–ಇತ್ಯಾದಿ ಅನೇಕ ಯೋಚನಾ ತರಂಗಗಳು ಕುಂತಿಯ ಮನಸ್ಸಿನಲ್ಲಿ ಉದಯಿಸಿದುವು.

ಅವಳು ಮಹರ್ಷಿಯು ಉಪದೇಶಿಸಿದ ಮಂತ್ರವನ್ನು ಪುನಶ್ಚರಣೆ ಮಾಡಿದಳು. ಸೂರ್ಯದೇವನನ್ನು ಆದರದಿಂದ ಆಹ್ವಾನಿಸಿದಳು.

ಅಭಿಚಾರಸಂಯುಕ್ತವಾದ ಮಹಾಮಂತ್ರದ ಶಕ್ತಿಯು ಅಪ್ರತಿಹತವಾದುದು. ಒಡನೆಯೇ ಮಂತ್ರಬದ್ಧನಾದ ಸೂರ್ಯದೇವನು ಕುಂತಿಯ ಮುಂದೆ ಬಂದು ನಿಂತನು. ಕುಂತಿಯು ಇದುವರೆವಿಗೂ ಸೂರ್ಯನೇ ತನ್ನೆದುರಿನಲ್ಲಿ ಬಂದು ನಿಂತುಬಿಡುವನೆಂದು ಭಾವಿಸಿರಲಿಲ್ಲ. ಸೂರ್ಯನು ಬಂದೊಡನೆಯೇ ಕುಂತಿಯು ಆಶ್ಚರ್ಯಚಕಿತಳಾದಳು. ಸೂರ್ಯನು ತನ್ನ ಸುಡುವ ಶಕ್ತಿಯನ್ನು ತನ್ನಲ್ಲಿಯೇ ಅಡಗಿಸಿಕೊಂಡು ಮಂದಸ್ಮಿತನಾಗಿ ಕುಂತಿಯನ್ನು ಕುರಿತು ಹೇಳಿದನು :

"ಅಸಿತಾಪಾಂಗಿ! ನಾನೇನು ಮಾಡಬೇಕೆಂಬುದನ್ನು ಕೂಡಲೇ ತಿಳಿಸು. ನೀನು ಪುನಶ್ಚರಣೆಮಾಡಿದ ಮಂತ್ರಕ್ಕೆ ಬದ್ಧನಾಗಿ ಬಂದಿರುವೆನು."

ಆ ಸಮಯದಲ್ಲಿ ಬಂದ ಸೂರ್ಯನು ಹೋದರೆ ಸಾಕೆಂಬ ಭಾವನೆಯು ಕುಂತಿಯ ಮನದಲ್ಲಿ ಮೂಡಿತ್ತು. ಸೂರ್ಯನನ್ನು ಕುರಿತು ಹೇಳಿದಳು :

"ಸೂರ್ಯದೇವ! ದೇವತೆಗಳನ್ನು ಆಹ್ವಾನಿಸುವ ಈ ಮಹಾಮಂತ್ರ ವನ್ನು ಬ್ರಾಹ್ಮಣನೊಬ್ಬನು ನನಗೆ ಉಪದೇಶಿಸಿದನು. ಅದರ ಪರೀಕ್ಷೆಯನ್ನು ಮಾಡುವ ಸಲುವಾಗಿ ಕೇವಲ ಚಾಪಲ್ಯದಿಂದ ಆ ಮಹಾಮಂತ್ರವನ್ನು ಪುನಶ್ಚರಣೆಮಾಡಿ ನಿನ್ನನ್ನು ಆಹ್ವಾನಿಸಿದೆನು. ಅದು ಹೊರತಾಗಿ ನಿನ್ನಿಂದ ನನಗೆ ಆಗಬೇಕಾದುದೇನೂ ಇಲ್ಲ."

**ಏತಸ್ಮಿನ್ನಪರಾಧೇ ತ್ವಾಂ ಶಿರಸಾಹಂ ಪ್ರಸಾದಯೇ ।**
**ಯೋಷಿತೋ ಹಿ ಸದಾ ರಕ್ಷ್ಯಾಃ ಸಾಪರಾದ್ಧಾಪಿ ನಿತ್ಯಶಃ ॥೧೨॥**

ನಿನ್ನನ್ನು ವೃಥಾ ಆಹ್ವಾನಿಸಿದ ಅಪರಾಧವನ್ನು ಕ್ಷಮಿಸುವಂತೆ ತಲೆಬಾಗಿ ಬೇಡುವೆನು. ಹೆಂಗಸರ ಅಪರಾಧವು ಎಷ್ಟೇ ಗುರುತರವಾದರೂ ಅವರು ಕ್ಷಮಾರ್ಹರೆಂಬ ವಿಷಯವು ನಿನಗೆ ತಿಳಿದಿರುವುದಲ್ಲವೇ?"

"ಶುಭಾಂಗಿ! ದುರ್ವಾಸರು ನಿನಗೆ ಈ ಮಹಾಮಂತ್ರವನ್ನು ಉಪದೇಶಿಸಿರುವ ವಿಷಯವು ನನಗೂ ತಿಳಿದಿದೆ ಮತ್ತು ಇದರ ಕಾರಣ ವನ್ನೂ ನಾನು ಬಲ್ಲೆನು. ನಿನ್ನ ಭಯವನ್ನು ದೂರಮಾಡಿ ನನ್ನೊಡನೆ ಕ್ಷಣಕಾಲ ರತಿಸುಖವನ್ನನುಭವಿಸು. ನನ್ನ ಆಗಮನವೆಂದಿಗೂ ನಿಷ್ಫಲವಾಗಕೂಡದು. ಹಾಗೆ ವ್ಯರ್ಥವಾಗುವುದಾದರೆ ಅದರಿಂದ ಮಹಾದೋಷವೇ ಉಂಟಾಗುವುದು."

ಸೂರ್ಯನು ಇನ್ನೂ ಅನೇಕವಿಧವಾದ ಪ್ರಿಯೋಕ್ತಿಗಳಿಂದ ಕುಂತಿಯ ಭಯವನ್ನು ಹೋಗಲಾಡಿಸಲು ಪ್ರಯತ್ನಿಸಿದನು. ಆದರೆ ಬಂಧುಗಳ ಭಯದಿಂದಲೂ, ಲಜ್ಜೆಯಿಂದಲೂ ತಾನಿನ್ನೂ ಕನ್ಯಾವಸ್ಥೆಯಲ್ಲಿಯೇ ಇರುವೆನೆಂಬ ವ್ಯಾಜದಿಂದಲೂ ಕುಂತಿಯು ಸೂರ್ಯನ ಮಾತಿಗೆ ಒಡಂಬಡಲಿಲ್ಲ. ಸೂರ್ಯನೂ ಬಿಡಲಿಲ್ಲ. ಪುನಃ ಹೇಳಿದನು:

"ರಾಜಪುತ್ರಿಯೇ! ನನ್ನ ಅನುಗ್ರಹದಿಂದ ನಿನಗೆ ಯಾವ ವಿಧವಾದ ದೋಷವೂ ಅಪವಾದವೂ ಉಂಟಾಗುವುದಿಲ್ಲ."

ಸೂರ್ಯನು ಹೇಳಿದ ಕಡೆಯ ಮಾತಿಗೆ ಕುಂತಿಯು ಒಪ್ಪದಿರಲು ಸಾಧ್ಯವಾಗಲಿಲ್ಲ. ಕುಂತೀ-ಸೂರ್ಯರ ಸಮಾಗಮದ ಫಲವಾಗಿ ಒಡನೆಯೇ ಕರ್ಣಕುಂಡಲಗಳಿಂದಲೂ, ಕವಚದಿಂದಲೂ ಸುಶೋಭಿಸುತ್ತಿದ್ದ ಸರ್ವಾಂಗ ಸುಂದರವಾದ ಶಿಶುವು ಜನಿಸಿತು. ಶಿಶುವು ಹುಟ್ಟಿದನಂತರ ಸೂರ್ಯನು ಕುಂತಿಗೆ ಮೊದಲಿನಂತೆಯೇ ಕನ್ಯಾವಸ್ಥೆಯನ್ನು ಅನುಗ್ರಹಿಸಿ ಅಂತರ್ಹಿತನಾದನು.

ಮುಂದೇನು ಮಾಡಬೇಕೆಂಬುದನ್ನು ಕುಂತಿಯು ದೈನ್ಯದಿಂದ ಚಿಂತಿಸಿದಳು. ಬಂಧುಗಳಿಗೆ ಭಯಪಟ್ಟು ತನ್ನ ಆ ಅಪಚಾರವನ್ನು ಬಚ್ಚಿಟ್ಟಳು.

ಅವಳು ಮಗುವನ್ನು ಸುಭದ್ರವಾದ ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ಬಿಟ್ಟುಬಿಟ್ಟಳು. ಬಹುದಿನಗಳಿಂದಲೂ ಮಕ್ಕಳಿಲ್ಲದೆ ಪರಿತಪಿಸುತ್ತಿದ್ದ ಸೂತನಾಯಕನಿಗೆ ಮರುದಿನವೇ ಆ ಪೆಟ್ಟಿಗೆಯು ಸಿಕ್ಕಿತು. ಸಿಕ್ಕಿದ ಮಗುವನ್ನು ಸೂತಪತ್ನಿಯು ತನ್ನ ಮಗುವೆಂದೇ ಭಾವಿಸಿ ಆದರದಿಂದ ಸಾಕಿದಳು.

**ವಸುನಾ ಸಹ ಜಾತೋಽಯಂ ವಸುಷೇಣೋ ಭವಿಷ್ಯತಿ ॥೨೪॥**

ವಸುವಿನೊಡನೆ ( ಕವಚ-ಕುಂಡಲರೂಪವಾದ ಐಶ್ವರ್ಯದೊಡನೆ ) ಹುಟ್ಟಿದ್ದರಿಂದ ಶಿಶುವಿಗೆ ವಸುಷೇಣನೆಂದೇ ಹೆಸರಿಟ್ಟರು (ವಸು=ಐಶ್ವರ್ಯ)

ವಸುಷೇಣನು ದೊಡ್ಡವನಾಗುತ್ತಾ ಧನುರ್ವಿದ್ಯೆಯಲ್ಲಿ ಪಾರಂಗತನಾದನು. ಸೂರ್ಯನು ತನ್ನ ತಂದೆಯೆಂಬುದನ್ನು ತಿಳಿಯದಿದ್ದರೂ ಸ್ವಾಭಾವಿಕವಾಗಿಯೇ ವಸುಷೇಣನು ಸೂರ್ಯಾರಾಧನೆಯನ್ನು ನಿರಂತರವಾಗಿ ಮಾಡುತ್ತಿದ್ದನು. ಪ್ರಾತಃಕಾಲದಲ್ಲಿ ಸೂರ್ಯನಿಗೆದುರಾಗಿ ಧ್ಯಾನದಲ್ಲಿ ಕುಳಿತ

ನೆಂದರೆ ಸೂರ್ಯನು ತನ್ನ ಬೆನ್ನುಕಡೆ ಬರುವವರೆಗೂ ವಸುಷೇಣನು ಮೇಲೇಳುತ್ತಿರಲಿಲ್ಲ. ಈ ಸಮಯದಲ್ಲಿ ಅವನು ಕೊಡಬಾರದೆಂಬ ದಾನವೇ ಇರಲಿಲ್ಲ. ಬ್ರಾಹ್ಮಣರು ಕೇಳಿದ ದಾನವೆಲ್ಲವನ್ನೂ–ಆ ದಾನವನ್ನು ಕೊಡ ಬಹುದೇ ಅಥವಾ ಕೊಡಬಾರದೇ–ಎಂಬುದನ್ನು ಯೋಚಿಸದೆಯೇ ಕೊಟ್ಟು ಬಿಡುತ್ತಿದ್ದನು. ಅವನ ಸ್ವಭಾವವನ್ನು ತಿಳಿದ ಇಂದ್ರನು ಬ್ರಾಹ್ಮಣವೇಷವನ್ನು ಧರಿಸಿ ಅವನ ಕವಚ-ಕುಂಡಲಗಳನ್ನು ದಾನವಾಗಿ ಕೇಳಿದನು. ಮುಂದೆ ನಡೆಯಲಿರುವ ಯುದ್ಧದಲ್ಲಿ ಮಗನಾದ ಅರ್ಜುನನಿಗೆ ಒಳ್ಳೆಯದನ್ನು ಮಾಡಬೇಕೆಂಬುದೇ ಇಂದ್ರನ ಉದ್ದೇಶವಾಗಿತ್ತು. ಇಂದ್ರನು ಬ್ರಾಹ್ಮಣ ವೇಷದಲ್ಲಿ ಬಂದಿರುವನೆಂಬುದನ್ನು ವಸುಷೇಣನು ಸೂರ್ಯನಿಂದ ತಿಳಿದುಕೊಂಡನಾದರೂ–'ಯಾಚಕನಿಗೆ ಇಲ್ಲವೆನ್ನುವುದಿಲ್ಲ'–ಎಂಬ ಒಂದೇ ಧರ್ಮವನ್ನನುಸರಿಸಿ ತನ್ನ ಶರೀರದೊಡನೆ ಸೇರಿಹೋಗಿದ್ದ ಕವಚವನ್ನು ಕತ್ತಿಯಿಂದ ಕತ್ತರಿಸಿ, ಸುರಿಯುತ್ತಿದ್ದ ರಕ್ತಧಾರೆಯೊಡನೆ ಇಂದ್ರನಿಗೆ ದಾನ ವಾಗಿ ಕೊಟ್ಟನು. ಕುಂಡಲಗಳನ್ನು ಕಿವಿಗಳಿಂದ ಹರಿದುಕೊಟ್ಟನು. ಇಂತಹ ಮಹಾದಾನಮಾಡಿದ ವಸುಷೇಣನಿಗೆ ಅಂದಿನಿಂದ ಕರ್ಣನೆಂದೇ ಹೆಸರಾ ಯಿತು. ಇಂದ್ರನೂ ಸಹ ತಾನು ತೆಗೆದುಕೊಂಡ ದಾನಕ್ಕೆ ಪ್ರತಿಫಲರೂಪವಾಗಿ ಶಕ್ತ್ಯಾಯುಧವನ್ನು ಕೊಟ್ಟು ಆ ಆಯುಧವು ದೇವಾಸುರ-ಮನುಷ್ಯ-ಗಂಧರ್ವ-ನಾಗರಲ್ಲಿ ಯಾರನ್ನಾದರೂ ಒಬ್ಬನನ್ನು ಆಹುತಿಯನ್ನಾಗಿ ತೆಗೆದು ಕೊಳ್ಳುವ ಸಾಮರ್ಥ್ಯದಿಂದ ಕೂಡಿರುವುದೆಂದು ಹೇಳಿ ಹೊರಟುಹೋದನು.

**ಪ್ರಾಙ್ನಾಮ ತಸ್ಯ ಕಥಿತಂ ವಸುಷೇಣ ಇತಿ ಕ್ಷಿತೌ ।**
**ಕರ್ಣೋ ವೈಕರ್ತನಶ್ಚೈವ ಕರ್ಮಣಾ ತೇ ಸೋಽಭವತ್ ॥೩೧॥**

ಕರ್ಣಕುಂಡಲಗಳನ್ನೂ, ಕವಚವನ್ನೂ ಧರಿಸಿ ಹುಟ್ಟಿದ್ದರಿಂದ–ರಾಧೇಯನಿಗೆ ಮೊದಲು ಅವನ ತಂದೆ-ತಾಯಿಗಳು ವಸುಷೇಣನೆಂದು ಹೆಸರಿಟ್ಟಿದ್ದರು. ಕರ್ಣಕುಂಡಲಗಳನ್ನೂ, ಕವಚವನ್ನೂ ಶರೀರದಿಂದಲೇ ಕತ್ತರಿಸಿ ಇಂದ್ರನಿಗೆ ಕೊಟ್ಟಿದ್ದರಿಂದ ಕರ್ಣನೆಂದೂ, ವೈಕರ್ತನನೆಂದೂ ಪ್ರಸಿದ್ಧ ನಾದನು."

೧೧೧ನೆಯ ಅಧ್ಯಾಯವು ಮುಗಿಯಿತು.

೧೧೨ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಕುಂತಿಯ ಸ್ವಯಂವರ

"ಜನಮೇಜಯ! ಯೌವನದ ಹೊಸ್ತಿಲನ್ನು ಮೆಟ್ಟಿದ ಕುಂತಿಭೋಜನ ಪುತ್ರಿಯಾದ ವಿಶಾಲನೇತ್ರೆಯಾದ ಪೃಥೆಯು ಧರ್ಮಪರಾಯಣೆ ಯಾಗಿಯೂ, ಸರ್ವಾಂಗಸುಂದರಿಯಾಗಿಯೂ, ಸಕಲಸದ್ಗುಣಸಂಪನ್ನೆ ಯಾಗಿಯೂ ಇದ್ದಳು. ತೇಜಸ್ವಿನಿಯಾಗಿಯೂ ರೂಪ-ಯೌವನ-ಗುಣ ಶಾಲಿನಿಯಾಗಿಯೂ ಇದ್ದ ಕುಂತಿಯನ್ನು ಮದುವೆಯಾಗಲು ಅನೇಕ ರಾಜರು ಹಾತೊರೆಯುತ್ತಿದ್ದರು.

ಕುಂತಿಭೋಜನು ಮಂತ್ರಿಗಳೊಡನೆ ಸಮಾಲೋಚಿಸಿ, ಸ್ವಯಂವರದ ಮೂಲಕವಾಗಿ ಪೃಥೆಗೆ ವಿವಾಹಮಾಡಲು ನಿಶ್ಚಯಿಸಿ, ಸಕಲದೇಶಗಳ ರಾಜಕುಮಾರರನ್ನೂ ಸ್ವಯಂವರಕ್ಕೆ ಆಹ್ವಾನಿಸಿದನು. ನಿರ್ದಿಷ್ಟವಾಗಿದ್ದ ದಿನದಲ್ಲಿ ಅನೇಕ ರಾಜಕುಮಾರರು ಉಪಸ್ಥಿತರಿದ್ದ ಸ್ವಯಂವರಮಂಟಪಕ್ಕೆ ಪೃಥೆಯು ಸ್ವಯಂವರಮಾಲಿಕೆಯನ್ನು ಹಿಡಿದು ಆಗಮಿಸಿದಳು. ಭರತ ಸತ್ತಮನಾದ, ಸಿಂಹದರ್ಪನಾದ, ವಿಶಾಲವಕ್ಷನಾದ, ವೃಷಭದಂತೆ ವಿಶಾಲ ನೇತ್ರನಾದ, ಮಹಾಬಲನಾದ, ಸೂರ್ಯದೇವನಂತೆ ಇತರ ರಾಜರಲ್ಲಿದ್ದ ತೇಜಸ್ಸನ್ನು ತನ್ನ ದಿವ್ಯಪ್ರಭೆಯಿಂದ ಮಲಿನಗೊಳಿಸುತ್ತಿದ್ದ, ಮತ್ತೊಬ್ಬ ಪುರಂದರನಂತೆಯೇ ರಾಜಸಭೆಯಲ್ಲಿ ವಿರಾಜಮಾನನಾಗಿ ಕುಳಿತಿದ್ದ ಪಾಂಡು ರಾಜನನ್ನು ನೋಡಿದೊಡನೆಯೇ–ಅವನನ್ನೇ ತನ್ನ ಪತಿಯನ್ನಾಗಿ ಪಡೆಯ ಬೇಕೆಂದು–ಕುಂತಿಯ ಮನಸ್ಸಿನಲ್ಲಿ ವ್ಯಾಮೋಹವುಂಟಾಯಿತು. ಕಾಮ ವಿಕಾರದಿಂದ ಶರೀರವು ಪುಳಕಿತವಾಯಿತು. ಮನಸ್ಸು ಮಾಲೆಹಾಕಲು ಕಾತುರತೆಯಿಂದಿದ್ದರೂ ಸಹಜವಾದ ಗಾಂಭೀರ್ಯವನ್ನು ಮೀರಿ ಓಡಿ ಹೋಗುವಂತಿರಲಿಲ್ಲ. ಮನಸ್ಸು ಉದ್ವಿಗ್ನವಾಗಿದ್ದರೂ ನಿಧಾನವಾಗಿಯೇ ಕಾಲಿಡುತ್ತಾ ಪಾಂಡುವಿನ ಸಮೀಪಕ್ಕೆ ಬಂದು ಅವನ ಕಂಬುಕಂಠಕ್ಕೆ ಕುಂತಿಯು ಹಾರಹಾಕಿದಳು.

ಕುಂತಿಯು ಪಾಂಡುವಿನ ಕೊರಳಿಗೆ ಹಾರವನ್ನು ಹಾಕಿದೊಡನೆಯೇ

ಉಳಿದ ರಾಜಕುಮಾರರೆಲ್ಲರೂ ಕುದುರೆ, ರಥ, ಆನೆ ಮೊದಲಾದ ವಾಹನಗಳಲ್ಲಿ ಕುಳಿತು ತಮ್ಮ ತಮ್ಮ ದೇಶಗಳಿಗೆ ಪ್ರಯಾಣಮಾಡಿದರು. ಅನಂತರದಲ್ಲಿ ಕುಂತಿಭೋಜನು ಪಾಂಡುವಿಗೆ ಮಗಳನ್ನು ಕೊಟ್ಟು ಯಥಾವಿಧಿಯಾಗಿ ವಿವಾಹಮಾಡಿದನು. ಶಚೀದೇವಿಯು ಇಂದ್ರನನ್ನು ಸೇರಿದಂತೆ–ಕುಂತಿಯು ಪಾಂಡುವನ್ನು ಸೇರಿದಳು. ಕುಂತಿಭೋಜನು ಮಗಳಿಗೂ ಮತ್ತು ಅಳಿಯನಿಗೂ ಅಮೂಲ್ಯವಾದ ರತ್ನಾಭರಣಗಳನ್ನೂ ಬಗೆ-ಬಗೆಯ ಬಹುಮೂಲ್ಯ



ವಸ್ತುಗಳನ್ನೂ ಪಾರಿತೋಷಿಕವನ್ನಾಗಿ ಕೊಟ್ಟು ಪರಿವಾರದೊಡನೆ ಹಾಸ್ತಿನಪುರಿಗೆ ಕಳುಹಿಸಿಕೊಟ್ಟನು. ನಾನಾವರ್ಣಗಳ ಪತಾಕೆಗಳನ್ನು ಹೊಂದಿದ್ದ ಚತುರಂಗಬಲವೂ ವಧೂ-ವರರ ಹಿಂದೆ ಹೊರಟಿತು. ಹೊಗಳುಭಟರು ಪಾಂಡುವಿನ ಗುಣಗಾನಗಳನ್ನು ಮಾಡುತ್ತಿದ್ದರು. ಋಷಿ-ಮಹರ್ಷಿಗಳೂ

ಮತ್ತು ಬ್ರಾಹ್ಮಣರೂ ಆಶೀರ್ವಚನಮಂತ್ರಗಳನ್ನು ಸುಶ್ರಾವ್ಯವಾಗಿ ಹೇಳುತ್ತಿದ್ದರು. ಚತುರಂಗಬಲದಿಂದಲೂ, ಬ್ರಾಹ್ಮಣಸುವಾಸಿನಿಯ ರಿಂದಲೂ, ಋಷಿ-ಮಹರ್ಷಿಗಳಿಂದಲೂ ಪರಿವೃತನಾಗಿದ್ದ ಪಾಂಡುರಾಜನು ಭಾರ್ಯೆಯಾದ ಕುಂತಿಯೊಡನೆ ಹಾಸ್ತಿನಪುರವನ್ನು ಪ್ರವೇಶಿಸಿದನು. ರಾಜಪರಿವಾರದವರು ಕುಂತಿಯನ್ನು ಆದರದಿಂದ ಬರಮಾಡಿಕೊಂಡು ಪಾಂಡುವಿನ ಅರಮನೆಗೆ ಕರೆದೊಯ್ದರು. ಪಾಂಡುವು ಪತ್ನಿಯೊಡನೆ ಸುಖದಿಂದ ಕಾಲಕಳೆಯುತ್ತಿದ್ದನು."

೧೧೨ನೆಯ ಅಧ್ಯಾಯವು ಮುಗಿಯಿತು.

೧೧೩ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಮಾದ್ರಿಯೊಡನೆ ಪಾಂಡುವಿನ ವಿವಾಹ : ಪಾಂಡುವಿನ ದಿಗ್ವಿಜಯ

"ಜನಮೇಜಯ! ಭೀಷ್ಮನು ಪಾಂಡುವಿಗೆ ಮತ್ತೊಂದು ವಿವಾಹವನ್ನು ಮಾಡಬೇಕೆಂದು ಉದ್ಯುಕ್ತನಾದನು. ಮಾದ್ರಿಯನ್ನು ಕುರುವಂಶಕ್ಕೆ ತರಬೇಕೆನ್ನುವ ಇಚ್ಛೆಯನ್ನು ವಿದುರನೊಡನೆ ಮೊದಲೇ ಭೀಷ್ಮನು ವ್ಯಕ್ತ ಪಡಿಸಿದ್ದನಲ್ಲವೇ? ಅಂತೆಯೇ ಭೀಷ್ಮನು ಚತುರಂಗಬಲಸಮೇತನಾಗಿ ಮಂತ್ರಿ-ಪುರೋಹಿತರೊಡನೆಯೂ, ಬ್ರಾಹ್ಮಣರೊಡನೆಯೂ, ಮಹರ್ಷಿ ಗಳೊಡನೆಯೂ ಮದ್ರದೇಶಕ್ಕೆ ತೆರಳಿದನು.

ಮದ್ರರಾಜನು ಭೀಷ್ಮನ ಆಗಮನವಾರ್ತೆಯನ್ನು ಕೇಳಿದವನಾಗಿ ಯಥಾ ಯೋಗ್ಯವಾದ ಮರ್ಯಾದೆಯೊಡನೆ ಭೀಷ್ಮನನ್ನು ಸ್ವಾಗತಿಸಿದನು. ಭೀಷ್ಮನನ್ನು ಪರಿವಾರದೊಡನೆ ಅರಮನೆಗೆ ಕರೆದೊಯ್ದು ಅರ್ಘ್ಯ-ಪಾದ್ಯ-ಮಧು ಪರ್ಕ-ಫಲಾದಿಗಳನ್ನು ಕೊಟ್ಟು ಸತ್ಕರಿಸಿದನು. ಎಲ್ಲರೂ ಸುಖಾಸನದಲ್ಲಿ ಕುಳಿತನಂತರ ಮದ್ರಾಧಿಪತಿಯು ವಿನೀತನಾಗಿ–'ತಮ್ಮ ಆಗಮನದ ಕಾರಣವೇನೆಂಬುದನ್ನು ಕೇಳಬಹುದೇ?'–ಎಂದು ಪ್ರಶ್ನಿಸಿದನು.

ಕುರುವಂಶಕ್ಕೆ ರತ್ನಪ್ರಾಯನಾಗಿದ್ದ ಭೀಷ್ಮನು ಗಂಭೀರವಾದ ವಾಣಿ ಯಿಂದ ಉತ್ತರಿಸಿದನು : "ಮದ್ರೇಶ್ವರ! ನಾವಿಲ್ಲಿಗೆ ಕನ್ಯಾರ್ಥಿಗಳಾಗಿ ಬಂದಿರು ವೆವು. ನಿನ್ನ ತಂಗಿಯು ಸಕಲಗುಣಗಳಿಂದ ಕೂಡಿದವಳಾಗಿ ವಿವಾಹ ಯೋಗ್ಯ ಳಾಗಿರುವಳೆಂದು ಕೇಳಿರುವೆವು. ಅವಳನ್ನು ಪಾಂಡುವಿಗೆ ವಿವಾಹಮಾಡಿಕೊಡು

ವಂತೆ ಕೇಳಲು ಬಂದಿರುವೆವು. ಶಲ್ಯರಾಜ! ನಮ್ಮಿಬ್ಬರ ವಂಶಗಳೂ ಪರಸ್ಪರ ವಾಗಿ ಸಂಬಂಧವನ್ನು ಬೆಳೆಸಲು ಅನುರೂಪವಾಗಿವೆ. ಆದುದರಿಂದ ಎಲ್ಲವನ್ನೂ ಯೋಚಿಸಿ ನಾವು ಕೃತಕೃತ್ಯರಾಗುವಂತೆ ಮಾಡುವುದು ಸಾಧುವಾಗಿದೆ."

ಶಲ್ಯನು ಕ್ಷಣಕಾಲ ಯೋಚಿಸಿ ಹೇಳಿದನು : "ಭೀಷ್ಮ! ಬಾಂಧವ್ಯಕ್ಕೆ ನಿಮ್ಮ ವಂಶಕ್ಕೆ ಸಮನಾದ ವಂಶವು ಮತ್ತೊಂದಿರುವುದಿಲ್ಲ. ಇದರಲ್ಲಿ ನನಗೆ ಸಂಶಯಲೇಶವಾದರೂ ಇಲ್ಲ. ಆದರೆ....

**ಪೂರ್ವೈಃ ಪ್ರವರ್ತಿತಂ ಕಿಂಚಿತ್ಕುಲೇಽಸ್ಮಿನ್ನೃಪಸತ್ತಮೈಃ ।**
**ಸಾಧು ವಾ ಯದಿ ವಾಸಾಧು ತನ್ನಾತಿಕ್ರಾನ್ತುಮುತ್ಸಹೇ ॥೯॥**

ಹಿರಿಯರು ಮಾಡಿರುವ ಪದ್ಧತಿಯನ್ನು ತಿಳಿಸಲು ಸಂಕೋಚವಿಲ್ಲ. ನಮ್ಮಲ್ಲಿ ಅನೂಚಾನವಾಗಿ ನಡೆದುಬಂದಿರುವ ಸಂಪ್ರದಾಯವೊಂದಿದೆ. ಅದಕ್ಕೆ ಅನುಸಾರವಾಗಿ ನಡೆಯಬೇಕಾಗಿದೆ. ಆ ಪದ್ಧತಿಯು ದೋಷರಹಿತ ವಾಗಿದ್ದರೂ ಅಥವಾ ದೋಷಯುಕ್ತವಾಗಿದ್ದರೂ ಅದನ್ನು ಮೀರಿ ನಡೆಯುವ ಧೈರ್ಯವು ನನಗಿಲ್ಲ. ಅದು ನಿನಗೂ ತಿಳಿದಿದೆಯೆಂಬುದರಲ್ಲಿ ಸಂಶಯವಿಲ್ಲ. ಹೀಗಿರುವಾಗ ನೀನು ಇಂತಹುದನ್ನು ಕೊಡು–ಎಂದು ನನ್ನನ್ನು ಕೇಳುವುದೂ ಯುಕ್ತವಲ್ಲ. ಆದರೂ ಕುಲಧರ್ಮವು ನಮಗೆ ಪರಮಪ್ರಮಾಣವಾಗಿದೆ. ಆದುದರಿಂದ ನಿಃಸಂಶಯವಾಗಿ ಯಾವ ಮಾತನ್ನೂ ಹೇಳಲಾರದವ ನಾಗಿದ್ದೇನೆ.

**ಕುಲಧರ್ಮಃ ಸ ನೋ ವೀರ ಪ್ರಮಾಣಂ ಪರಮಂ ಚ ತತ್ ॥೧೧॥**

ನಮ್ಮಲ್ಲಿ ಯಾವ ಕುಲಧರ್ಮವಿದೆಯೋ, ಕುಲಪದ್ಧತಿಯಿದೆಯೋ ಅದೇ ನಮಗೆ ಪ್ರಮಾಣಭೂತವಾದುದು ಮತ್ತು ಪರಮಶ್ರೇಷ್ಠವಾದುದು."

ಶಲ್ಯನು ಸ್ಪಷ್ಟವಾಗಿ ಏನನ್ನೂ ಹೇಳದಿದ್ದರೂ ಅವನ ಮನಸ್ಸಿನ ಇಂಗಿತವೇನೆಂಬುದನ್ನು ಭೀಷ್ಮನು ಅರಿತು–"ಮದ್ರೇಶ್ವರ! ನೀನು ಹೇಳು ವುದು ಧರ್ಮವಿಹಿತವಾಗಿದೆ. ಇದನ್ನು ಸ್ವಯಂಭುವೂ ಹೇಳಿರುತ್ತಾನೆ. ಹಿಂದಿನವರು ಮಾಡಿಟ್ಟ ಸಂಪ್ರದಾಯವು ಖಂಡಿತವಾಗಿಯೂ ದೋಷ ಯುಕ್ತವೆನಿಸುವುದಿಲ್ಲ. ಇದನ್ನು ಸಾಧುಗಳೂ ಒಪ್ಪುತ್ತಾರೆ"–ಎಂದು ಹೇಳಿ ಹೇರಳವಾದ ಸುವರ್ಣನಾಣ್ಯಗಳನ್ನೂ, ಸಹಸ್ರಸಂಖ್ಯೆಯಲ್ಲಿ ಗಜ-ರಥ

ತುರಗಗಳನ್ನೂ, ನವರತ್ನಗಳನ್ನೂ ಶಲ್ಯನಿಗೆ ಕನ್ಯಾಶುಲ್ಕಕ್ಕಾಗಿ ಸಮರ್ಪಿಸಿದನು. ಅದರಿಂದ ಸಂತುಷ್ಟನಾದ ಶಲ್ಯನು ಸರ್ವಾಭರಣಗಳಿಂದ ಅಲಂಕೃತೆಯಾದ ತಂಗಿಯನ್ನು ಭೀಷ್ಮನಿಗೆ ಒಪ್ಪಿಸಿದನು. ತನ್ನ ಕಾರ್ಯವು ಫಲಿಸಿದುದಕ್ಕಾಗಿ ಭೀಷ್ಮನು ಅಮಿತಾನಂದದಿಂದ ಮಾದ್ರಿಯೊಡನೆ ಹಾಸ್ತಿನಪುರಕ್ಕೆ ಬಂದು ಶುಭಲಗ್ನದಲ್ಲಿ ಸಕಲಸಂಭ್ರಮಗಳಿಂದ ಪಾಂಡು-ಮಾದ್ರಿಯರ ವಿವಾಹವನ್ನು ನೆರವೇರಿಸಿದನು.

ವಿವಾಹವಾದ ಬಳಿಕ ಪಾಂಡುವು ಮಾದ್ರಿಗಾಗಿಯೇ ಪ್ರತ್ಯೇಕವಾದ ಒಂದು ಅರಮನೆಯನ್ನು ಕಟ್ಟಿಸಿಕೊಟ್ಟನು. ಪರಸ್ಪರವಾಗಿ ಅಸೂಯೆಯು ಉಂಟಾಗದ ರೀತಿಯಲ್ಲಿ ಪಾಂಡುವು ಕುಂತೀ-ಮಾದ್ರಿಯರೊಡನೆ ನಡೆದು ಕೊಳ್ಳುತ್ತಾ ಸುಖದಿಂದಲೂ, ಸಂತೋಷದಿಂದಲೂ ಕಾಲಕಳೆಯುತ್ತಿದ್ದನು.

ಪಾಂಡು-ಮಾದ್ರಿಯರ ವಿವಾಹವಾಗಿ ಮೂವತ್ತು ದಿನಗಳು ಕಳೆದ ನಂತರ ಪಾಂಡುವು ವಿಜಯಯಾತ್ರೆಗೆ ಹೊರಟನು. ಭೀಷ್ಮನೇ ಮೊದಲಾದ ವೃದ್ಧರಿಗೂ-ತಾಯಿಗೂ ಪ್ರಣಾಮಮಾಡಿ, ಅಣ್ಣನ ಒಪ್ಪಿಗೆಯನ್ನೂ ಪಡೆದು, ವಿರಹವನ್ನು ಯೋಚಿಸಿ ದುಃಖಿಸುತ್ತಿದ್ದ ರಾಜಕುಮಾರಿಯರಿಗೆ ಸಮಾಧಾನ ವನ್ನು ಹೇಳಿ, ಶುಭಮುಹೂರ್ತದಲ್ಲಿ ಮಂಗಳಾಚರಣೆಯನ್ನು ಮುಗಿಸಿ, ಸಕಲರಿಂದಲೂ ಆಶೀರ್ವಾದಗಳನ್ನು ಪಡೆದವನಾಗಿ, ಚತುರಂಗಬಲಸಮೇತ ನಾಗಿ ದಶಾರ್ಣರೆಂಬ ದುಷ್ಟರ ರಾಜಧಾನಿಯ ಕಡೆಗೆ ಧಾವಿಸಿದನು. ಕೌರವರ ಕೀರ್ತಿಯನ್ನು ವೃದ್ಧಿಪಡಿಸುವ, ಮನುಷ್ಯಶ್ರೇಷ್ಠನಾದ ಪಾಂಡುವು ಮೊದಲು ವೈರಿಗಳಾದ ದಶಾರ್ಣರಾಜರನ್ನು ಯುದ್ಧದಲ್ಲಿ ಗೆದ್ದನು. ಸೋತುಹೋದ ದಶಾರ್ಣರಾಜರು ಪಾಂಡುವಿಗೆ ಕಪ್ಪ-ಕಾಣಿಕೆಗಳನ್ನು ಸಲ್ಲಿಸಿದರು. ಮುಂದೆ ದಶಾರ್ಣರ ರಾಜಧಾನಿಯಲ್ಲಿದ್ದ ಸಾವಿರಾರು ಸೈನಿಕರನ್ನೂ ಜೊತೆಮಾಡಿ ಕೊಂಡು ಮಗಧಾಧಿಪತಿಯಾದ ದೀರ್ಘರಾಜನ ಬಳಿಗೆ ಸಾರಿದನು. ದೀರ್ಘ ರಾಜನು ಬಹಳ ಬಲಿಷ್ಠನಾಗಿ ಅನೇಕ ರಾಜರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡಿದ್ದನು. ಪಾಂಡುವಿಗೂ–ದೀರ್ಘನಿಗೂ ಘೋರಯುದ್ಧವೇ ನಡೆಯಿತು. ಯುದ್ಧದಲ್ಲಿ ದೀರ್ಘನು ಮೃತಿಹೊಂದಿದನು. ಪಾಂಡುವು ಅವನ ಬೊಕ್ಕಸದಲ್ಲಿದ್ದ ಅಗಣಿತವಾದ ಐಶ್ವರ್ಯವನ್ನೂ ತೆಗೆದುಕೊಂಡು ಮುಂದೆ

ವಿದೇಹ, ಕಾಶಿ, ಕುಂಭ, ಪುಂಡ್ರ–ಮುಂತಾದ ದೇಶಗಳನ್ನು ಗೆದ್ದು ಕುರು ವಂಶದ ಕೀರ್ತಿಯನ್ನು ಹೆಚ್ಚಿಸಿದನು.

ಶತ್ರುಗಳ ವಿಧ್ವಂಸಕನಾದ ಪಾಂಡುವು ಬಾಣಗಳನ್ನೇ ಜ್ವಾಲೆಗಳನ್ನಾಗಿ ಮಾಡಿಕೊಂಡು ತನ್ನೆದುರಾಗಿ ಬಂದ ರಾಜರೆಲ್ಲರನ್ನೂ ಯಜ್ಞೇಶ್ವರನೋಪಾದಿಯಲ್ಲಿ ದಹಿಸುತ್ತಿದ್ದನು. ಪಾಂಡುವು ಗೆದ್ದ ರಾಜ್ಯಗಳ ಸೈನಿಕರೂ ಪಾಂಡುವಿನ ಸೈನ್ಯದೊಡನೆ ಸೇರಿಕೊಳ್ಳುತ್ತಿದ್ದರು. ಅದರಿಂದಾಗಿ ಪಾಂಡುವಿನ ದಿಗ್ವಿಜಯವು ಬಹಳ ಸುಲಭವಾಯಿತು. ಅವನಿಂದ ಪರಾಜಿತರಾದ ರಾಜರು ಪೃಥ್ವಿಯಲ್ಲಿ ಪಾಂಡುವಿಗೆ ಸಮಾನರಾದ ಪರಾಕ್ರಮಿಗಳು ಬೇರೊಬ್ಬರಿಲ್ಲವೆಂದೂ–ಇಂದ್ರನು ಸ್ವರ್ಗಾಧಿಪತಿಯಾಗಿರುವಂತೆ–ಪಾಂಡುವು ಭೂಲೋಕದ ಏಕೈಕಚಕ್ರವರ್ತಿಯೆಂದೂ ಭಾವಿಸಿದರು. ಪಾಂಡುವು ಯಾವ ರಾಜ್ಯದ ಮೇಲೆ ದಂಡೆತ್ತಿಹೋದರೂ ಅಲ್ಲಿಯ ರಾಜರು ಅವನ ಪ್ರತಾಪವನ್ನು ದೂತರ ಮೂಲಕ ಮೊದಲೇ ತಿಳಿದಿರುತ್ತಿದ್ದುದರಿಂದ ಕತ್ತಿ-ಗುರಾಣಿಗಳಿಗೆ ಬದಲಾಗಿ ಕಪ್ಪ-ಕಾಣಿಕೆಗಳೊಡನೆ ಪಾಂಡುವನ್ನು ಸ್ವಾಗತಿಸುತ್ತಿದ್ದರು. ಅನೇಕ ರಾಜರು ಪಾಂಡುವಿಗರ್ಪಿಸಿದ ಕಪ್ಪ-ಕಾಣಿಕೆಗಳು ನಾನಾರೀತಿಯಲ್ಲಿದ್ದುವು. ವಜ್ರ-ವೈಡೂರ್ಯಗಳು, ಪಚ್ಚೆ-ಮುತ್ತು-ಹವಳ-ಪುಷ್ಯರಾಗ-ನೀಲಮಣಿಗಳು, ಸುವರ್ಣ ಮತ್ತು ಬೆಳ್ಳಿಯ ನಾಣ್ಯಗಳು, ಉತ್ತಮವಾದ ಹಸುಗಳು, ಸುಂದರವಾದ ಕುದುರೆಗಳು, ರತ್ನಖಚಿತವಾದ ರಥಗಳು, ಮದಗಜಗಳು, ಹೇಸರಗತ್ತೆಗಳು, ಒಂಟೆಗಳು, ಎಮ್ಮೆಗಳು, ಆಡು-ಕುರಿಗಳು, ಸುಂದರವಾದ ರತ್ನಕಂಬಳಿಗಳು, ಉತ್ತಮವಾದ ಉಣ್ಣೆಯಿಂದ ಮಾಡಿದ ಶಾಲುಗಳು–ಇವೆಲ್ಲವನ್ನೂ ತೆಗೆದುಕೊಂಡು ಪಾಂಡುವು ಹಾಸ್ತಿನಪುರದ ಕಡೆಗೆ ಹೊರಟನು. ಪಾಂಡುವು ವಿಜಯಪತಾಕೆಯನ್ನು ಹಾರಿಸಿಕೊಂಡು ಬರುತ್ತಿರುವನೆಂಬ ವಾರ್ತೆಯು ತಿಳಿದೊಡನೆಯೇ ಹಾಸ್ತಿನಪುರದ ಜನಸ್ತೋಮವು ಆನಂದಸಾಗರದಲ್ಲಿ ಮುಳುಗಿಹೋಯಿತು. ಅಳಿದುಹೋಗುವುದರಲ್ಲಿದ್ದ ಶಾಂತನು ಮತ್ತು ಭರತನ ಕೀರ್ತಿಗಾಥೆಯನ್ನು ಪಾಂಡುವು ಪುನರುಜ್ಜೀವನಗೊಳಿಸಿದನೆಂದು ಎಲ್ಲರೂ ಹಿರಿಹಿಗ್ಗಿದರು. ಅರಾಜಕತೆಯಿದ್ದಾಗ ಕಳೆದುಕೊಂಡಿದ್ದ ರಾಜ್ಯಗಳೆಲ್ಲವೂ ಪುನಃ ಸ್ವಾಧೀನಕ್ಕೆ ಬಂದುವು.

ಭೀಷ್ಮನನ್ನು ಮುಂದುಮಾಡಿಕೊಂಡು ಹಾಸ್ತಿನಪುರದ ನಾಗರಿಕ

ರೆಲ್ಲರೂ ಪಾಂಡುವನ್ನು ಸ್ವಾಗತಿಸಲು ಪಟ್ಟಣದ ಹೊರಭಾಗಕ್ಕೆ ಬಂದರು. ಅನತಿದೂರದಲ್ಲಿಯೇ ಪಾಂಡುವಿನ ಪರಿವಾರವು ಕಾಣಿಸಿತು. ಆನೆ-ಕುದುರೆಗಳೂ, ಐಶ್ವರ್ಯವನ್ನು ಹೊತ್ತು ತರುತ್ತಿದ್ದ ಹೇಸರಗತ್ತೆ-ಒಂಟೆ-ಕೋಣಗಳೂ, ಸಾಲು-ಸಾಲಾಗಿ ಬರುತ್ತಿದ್ದು ಅದಕ್ಕೆ ಕೊನೆಯೇ ಇಲ್ಲವೋ ಎಂಬಂತೆ ಸುದೀರ್ಘವಾಗಿತ್ತು. ಭೀಷ್ಮನನ್ನು ನೋಡಿದೊಡನೆಯೇ ಪಾಂಡುವು ರಥದಿಂದಿಳಿದು ಪ್ರಣಾಮಮಾಡಿದನು. ಭೀಷ್ಮನು ಪಾಂಡುವಿನ ಭುಜವನ್ನು ಹಿಡಿದು ಮೇಲೆತ್ತಿ, ಆಲಿಂಗನಮಾಡಿಕೊಂಡು, ಆನಂದಬಾಷ್ಪಗಳನ್ನು ಸುರಿಸಿದನು. ಭೇರೀ-ಮೃದಂಗಾದಿ ಮಂಗಳವಾದ್ಯಗಳೊಡನೆ ಪಾಂಡುವು ಪುರಪ್ರವೇಶಮಾಡಿದನು."

ಗಗ೩ನೆಯ ಅಧ್ಯಾಯವು ಮುಗಿಯಿತು.

ಗಗ೪ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಪತ್ನಿಯರೊಡನೆ ಪಾಂಡುವಿನ ವನವಿಹಾರ : ವಿದುರನ ವಿವಾಹ

"ಜನಮೇಜಯ! ತಾನು ತಂದ ಐಶ್ವರ್ಯವೆಲ್ಲವನ್ನೂ ಪಾಂಡುವು ಮೊದಲು ಧೃತರಾಷ್ಟ್ರನಿಗೊಪ್ಪಿಸಿ, ಅವನ ಆಜ್ಞೆಯಂತೆ ಭೀಷ್ಮನಿಗೂ, ಸತ್ಯವತಿಗೂ, ತನ್ನ ಇಬ್ಬರು ತಾಯಿಯರಿಗೂ ಹಂಚಿಕೊಟ್ಟನು. ಭೀಷ್ಮನ ಅಭಿಪ್ರಾಯದಂತೆ ವಿದುರನಿಗೂ ಒಂದು ಭಾಗವನ್ನು ಕಳುಹಿಸಿಕೊಟ್ಟನು. ಮಂತ್ರಿ-ಸೇನಾಪತಿಗಳಿಗೂ, ಪ್ರಜಾಪ್ರಮುಖರಿಗೂ, ಬಂಧುಗಳಿಗೂ ಯಥೋಚಿತವಾಗಿ ಸನ್ಮಾನಮಾಡಿದನು. ಸತ್ಯವತೀ, ಭೀಷ್ಮ ಮತ್ತು ಅಂಬಿಕೆಯರು ಪಾಂಡುವು ಕೊಟ್ಟ ಪಾರಿತೋಷಿಕಗಳಿಂದ ಆನಂದಭರಿತರಾದರು. ಪುತ್ರನ ಪರಾಕ್ರಮವನ್ನು ನೋಡಿ ಅಂಬಾಲಿಕೆಗಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಶಚೀದೇವಿಯು ಜಯಂತನನ್ನು ಮುದ್ದಿಸುವಂತೆ–ಅಂಬಾಲಿಕೆಯು ಪಾಂಡುವನ್ನು ಆಲಿಂಗಿಸಿ ಮುದ್ದಿಸಿದಳು. ಪಾಂಡುವು ತಂದ ಐಶ್ವರ್ಯದಿಂದ ಧೃತರಾಷ್ಟ್ರನು ನೂರಾರು ಅಶ್ವಮೇಧಯಾಗಗಳಿಗೆ ಸಮನಾದ ಪಂಚಮಹಾಯಜ್ಞಗಳನ್ನು ಮಾಡಿ, ಸಾವಿರಾರು ಬ್ರಾಹ್ಮಣೋತ್ತಮರಿಗೆ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಟ್ಟನು.

ಸ್ವಲ್ಪಕಾಲಾನಂತರ ಆಲಸ್ಯವನ್ನು ಸಂಪೂರ್ಣವಾಗಿ ಜಯಿಸಿದ್ದ

ಪಾಂಡುವು ಕುಂತೀ-ಮಾದ್ರಿಯರೊಡನೆ ವನವಿಹಾರಕ್ಕಾಗಿ ಹೊರಟನು. ಉತ್ತಮವಾದ ಅರಮನೆಯನ್ನೂ, ಹಂಸತೂಲಿಕಾತಲ್ಪವನ್ನೂ ಪರಿತ್ಯಜಿಸಿ ಅರಣ್ಯಕ್ಕೆ ಬಂದ ರಾಜನು ಯಾವಾಗಲೂ ಬೇಟೆಯಾಡುವುದರಲ್ಲಿಯೇ ಆಸಕ್ತಿ ವಹಿಸಿದ್ದನು. ಅವನ ಅರಣ್ಯಪ್ರವಾಸವು ಒಂದೆರಡು ದಿನಗಳಲ್ಲಿ ಮುಗಿಯು ವುದಾಗಿರಲಿಲ್ಲ. ಸುಂದರವಾದ ಹಿಮವತ್ಪರ್ವತದ ದಕ್ಷಿಣಭಾಗದ ತಪ್ಪಲಿನಲ್ಲಿ ಶಾಲವೃಕ್ಷಗಳ ಆಶ್ರಯದಲ್ಲಿ ಮನೋಹರವಾದ ಪರ್ಣಶಾಲೆಯೊಂದನ್ನು ನಿರ್ಮಿಸಿಕೊಂಡು, ಕುಂತೀ-ಮಾದ್ರಿಯರೊಡನೆ ಸ್ವೇಚ್ಛೆಯಿಂದ ವಿಹರಿಸುತ್ತಿದ್ದನು. ಅವನ ಸಂಚಾರವು–ಎರಡು ಹೆಣ್ಣಾನೆಗಳಿಂದೊಡಗೂಡಿದ ಐರಾವತದ ಸ್ವೇಚ್ಛಾವಿಹಾರದ ಸ್ಮರಣೆಯನ್ನುಂಟುಮಾಡುತ್ತಿತ್ತು. ಬಿಲ್ಲು-ಬಾಣ-ಬತ್ತಳಿಕೆಗಳಿಂದಲೂ, ಕತ್ತಿ-ಗುರಾಣಿಗಳಿಂದಲೂ, ಅನೇಕ ದಿವ್ಯಾಯುಧ ಗಳಿಂದಲೂ ಅಲಂಕೃತನಾಗಿದ್ದ, ಭರತಕುಲೋತ್ಪನ್ನನಾದ ಪಾಂಡುವನ್ನು ಅರಣ್ಯವಾಸಿಗಳು ದೇವಪುರುಷನೆಂದೇ ಭಾವಿಸಿದರು. ಧೃತರಾಷ್ಟ್ರನ ಅಪ್ಪಣೆ ಯಂತೆ ಪಾಂಡುವಿದ್ದ ಸ್ಥಳಕ್ಕೆ ಸುಖೋಪಭೋಗವಸ್ತುಗಳು ಯಥೇಚ್ಛವಾಗಿ ಸಾಗಿಬರುತ್ತಿದ್ದುವು. ಅರಣ್ಯದಲ್ಲಿಯೂ ಅವನ ರಾಜಭೋಗಕ್ಕೆ ನ್ಯೂನತೆ ಯಿರದ ರೀತಿಯಲ್ಲಿ ರಾಜಭಟರು ಜಾಗರೂಕತೆಯಿಂದಿರುತ್ತಿದ್ದರು.

ಈ ಮಧ್ಯದಲ್ಲಿ ಭೀಷ್ಮನು–ದೇವಕನೆಂಬ ರಾಜನ ಅರಮನೆಯಲ್ಲಿ ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದ್ದ ಕಡುಚೆಲುವೆಯಾದ ಕನ್ಯೆ ಯೊಬ್ಬಳಿರುವಳೆಂಬುದನ್ನು ತಿಳಿದವನಾಗಿ, ಅವಳನ್ನು ಕರೆತಂದು ವಿದುರನಿಗೆ ಕೊಟ್ಟು ಯಥಾವಿಧಿಯಾಗಿ ವಿವಾಹಮಹೋತ್ಸವವನ್ನು ನೆರವೇರಿಸಿದನು. ಅವಳಲ್ಲಿ ವಿದುರನಿಗೆ ಅವನಂತೆಯೇ ಧಾರ್ಮಿಕರಾದ ಹಲವು ಮಕ್ಕಳು ಹುಟ್ಟಿದರು."

೧೧೩ನೆಯ ಅಧ್ಯಾಯವು ಮುಗಿಯಿತು.

೧೧೪ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದುರ್ಯೋಧನಾದಿಗಳ ಜನನ

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

"ಪಾರಿಕ್ಷಿತ! ಧೃತರಾಷ್ಟ್ರನು ಗಾಂಧಾರಿಯಲ್ಲಿ ನೂರು ಮಕ್ಕಳನ್ನೂ, ವೈಶ್ಯಸ್ತ್ರೀಯಲ್ಲಿ ಒಬ್ಬ ಮಗನನ್ನೂ ಪಡೆದನು. ಪಾಂಡುವು ಕುಂತೀ-

ಮಾದ್ರಿಯರಲ್ಲಿ ಮಹಾರಥರೆನಿಸಿದ ಐವರು ಮಕ್ಕಳನ್ನು ದೇವತೆಗಳ ಅನುಗ್ರಹದಿಂದ ಪಡೆದನು.

ಗಾಂಧಾರಿಗೆ ನೂರು ಮಂದಿ ಮಕ್ಕಳು ಹುಟ್ಟಿದರೆಂದರೆ ಸ್ವಲ್ಪ ಸೋಜಿಗ ವಲ್ಲವೇ? ಸ್ವಾಭಾವಿಕವಾದ ಉತ್ಸುಕತೆಯಿಂದಲೇ ಜನಮೇಜಯನು ಪ್ರಶ್ನಿಸುತ್ತಾನೆ : "ಋಷಿಸತ್ತಮರೇ! ಗಾಂಧಾರಿಯು ನೂರು ಮಕ್ಕಳನ್ನು ಪಡೆದಳೆಂದು ಹೇಳಿದಿರಿ. ಎಷ್ಟು ವರ್ಷಗಳ ಅವಧಿಯಲ್ಲಿ ನೂರು ಮಕ್ಕಳನ್ನು ಪಡೆದಳು? ಆ ನೂರು ಮಕ್ಕಳ ಆಯುಃಪ್ರಮಾಣವಾದರೂ ಎಷ್ಟು? ವೈಶ್ಯ ಸ್ತ್ರೀಯಲ್ಲಿಯೂ ಧೃತರಾಷ್ಟ್ರನಿಗೆ ಮಗನೊಬ್ಬನು ಹುಟ್ಟಿದನೆಂದು ಹೇಳಿದಿರಿ. ಅದಕ್ಕೆ ಕಾರಣವಾದರೂ ಏನು? ಪತಿಯೇ ಪರದೈವವೆಂದು ಭಾವಿಸಿದ್ದ ಗಾಂಧಾರಿಯ ವಿಷಯದಲ್ಲಿ ಧೃತರಾಷ್ಟ್ರನ ವರ್ತನೆಯು ಪ್ರೇಮಪೂರ್ಣ ವಾಗಿಯೇ ಇತ್ತಲ್ಲವೇ? ಸ್ತ್ರೀಸಂಗದಿಂದಲೇ ಮರಣವುಂಟಾಗುವುದೆಂಬ ಋಷಿಯ ಶಾಪಕ್ಕೆ ಗುರಿಯಾಗಿದ್ದ ಪಾಂಡುವಿಗೆ ಮಕ್ಕಳಾದುದು ಹೇಗೆ? ಇವೆಲ್ಲವನ್ನೂ ವಿಶದವಾಗಿಯೇ ಹೇಳಿರಿ. ತಾವು ಕಥೆಗಳನ್ನು ಹೇಳುತ್ತಿ ದ್ದಂತೆಲ್ಲಾ ನನಗೆ ಕೇಳಲು ಉತ್ಸುಕತೆಯೂ ಹೆಚ್ಚುತ್ತಿದೆ."

ವೈಶಂಪಾಯನರು ಮುಗುಳ್ನಗೆಯೊಡನೆ ಮುಂದಿನ ಕಥೆಯನ್ನು ಪ್ರಾರಂಭಿಸಿದರು :

**ಕ್ಷುಚ್ಛ್ರಮಾಭಿಪರಿಮ್ಲಾನಂ ದ್ವೈಪಾಯನಮುಪಸ್ಥಿತಮ್ ।**
**ತೋಷಯಾಮಾಸ ಗಾನ್ಧಾರೀ ವ್ಯಾಸಸ್ತಸ್ಯೈ ವರಂ ದದೌ ।**
**ಸಾ ವವ್ರೇ ಸದೃಶಂ ಭರ್ತುಃ ಪುತ್ರಾಣಾಂ ಶತಮಾತ್ಮನಃ ॥೮॥**

"ಮಹಾರಾಜ! ಒಮ್ಮೆ ಹಸಿವಿನಿಂದಲೂ ದೇಶಪರ್ಯಟನದ ಆಯಾಸದಿಂದಲೂ ಬಳಲಿಬಂದಿದ್ದ ವ್ಯಾಸಮಹರ್ಷಿಗಳನ್ನು ಗಾಂಧಾರಿಯು ಯಥೋಚಿತಸತ್ಕಾರಗಳಿಂದ ಉಪಚರಿಸಿದಳು. ಗಾಂಧಾರಿಯ ಉಪಚಾರ ದಿಂದ ಸುಪ್ರೀತರಾದ ವ್ಯಾಸರು ಬೇಕಾದ ವರವನ್ನು ಕೇಳುವಂತೆ ಗಾಂಧಾರಿಗೆ ಹೇಳಿದರು.

ಮಕ್ಕಳನ್ನು ಪಡೆಯುವ ಆಕಾಂಕ್ಷೆಯಿಂದಿದ್ದ ಗಾಂಧಾರಿಯು ಪತಿಗೆ ಸಮಾನರಾದ ನೂರು ಮಕ್ಕಳನ್ನು ತನಗೆ ಅನುಗ್ರಹಿಸಬೇಕೆಂದು ಕೇಳಿ

ಕೊಂಡಳು. (ವಿವಾಹಕ್ಕೆ ಮೊದಲೇ ಗಾಂಧಾರಿಯು ಈಶ್ವರನನ್ನು ಆರಾಧಿಸಿ ನೂರು ಮಕ್ಕಳಾಗುವಂತೆ ವರವನ್ನು ಪಡೆದಿದ್ದಳೆಂಬುದನ್ನೂ ಇಲ್ಲಿ ಸ್ಮರಿಸಿ ಕೊಳ್ಳಬಹುದಾಗಿದೆ.)



ಸುಪ್ರೀತರಾದ ವ್ಯಾಸಮಹರ್ಷಿಗಳು ಗಾಂಧಾರಿಯ ಪ್ರಾರ್ಥನೆಯನ್ನು ಮನ್ನಿಸಿ ನೂರು ಮಂದಿ ಮಕ್ಕಳ ತಾಯಿಯಾಗುವಂತೆ ಆಶೀರ್ವದಿಸಿದರು. ಮಕ್ಕಳೆಲ್ಲರೂ ಧೃತರಾಷ್ಟ್ರನಿಗೆ ಸಮಾನಬಲವುಳ್ಳವರಾಗಿರುವರೆಂದೂ ಹೇಳಿದರು.

ಹಲವಾರು ದಿನಗಳು ಕಳೆದನಂತರ ಗಾಂಧಾರಿಯು ಧೃತರಾಷ್ಟ್ರನೊಡನೆ ಮಾಡಿದ ಸಮಾಗಮದಿಂದ ಗರ್ಭವತಿಯಾದಳು. ಸಾಮಾನ್ಯಸ್ತ್ರೀಯಂತೆ ಗಾಂಧಾರಿಯು ನವಮಾಸಗಳಲ್ಲಿಯೇ ಮಕ್ಕಳನ್ನು ಹಡೆಯಲಿಲ್ಲ. ಎರಡು

ವರ್ಷಗಳಾದರೂ ಪ್ರಸವಿಸುವ ಚಿಹ್ನೆಯೇ ಕಂಡುಬರಲಿಲ್ಲ. ಆ ಮಧ್ಯದಲ್ಲಿ ಕುಂತಿಯು ಬಾಲಸೂರ್ಯನಂತೆ ತೇಜಸ್ವಿಯಾದ ಗಂಡುಮಗುವನ್ನು ಪಡೆದಳೆಂಬ ವಾರ್ತೆಯನ್ನು ಕೇಳಿದನಂತರ ಗಾಂಧಾರಿಯ ದುಃಖವು ಮತ್ತಷ್ಟು ಹೆಚ್ಚಿತು. ತನ್ನ ಗರ್ಭದಲ್ಲಿದ್ದ ಮಗುವನ್ನು ಇನ್ನೂ ಹೆಚ್ಚು ಕಾಲ ಇಟ್ಟುಕೊಳ್ಳುವುದು ಗಾಂಧಾರಿಗೆ ಸಹ್ಯವಾಗಲಿಲ್ಲ.

ಸ್ತ್ರೀಯರ ಮಾನಸಿಕ ವೈಪರೀತ್ಯಗಳನ್ನು ಹೀಗೆಂದು ನಿರ್ಧರಿಸುವುದು ಅಸಾಧ್ಯವಲ್ಲವೇ? ಪತಿವ್ರತೆಯಾದ, ಪ್ರಾಜ್ಞೆಯಾದ ಗಾಂಧಾರಿಯೂ ಮಾತ್ಸರ್ಯವೆಂಬ ಶತ್ರುವಿನ ವಶಳಾಗಿ ಗರ್ಭವನ್ನೇ ವಿಸರ್ಜಿಸಲು ನಿಶ್ಚಯಿಸಿದಳು. ಧೃತರಾಷ್ಟ್ರನಿಗೂ ತಿಳಿಯದಂತೆ ಅತಿಪ್ರಯಾಸದಿಂದ ಹೊಟ್ಟೆಯನ್ನು ಘಾತಮಾಡಿ ಗರ್ಭಪಾತವನ್ನು ಮಾಡಿಕೊಂಡಳು. ಎರಡು ವರ್ಷಗಳು ಕಳೆದಿದ್ದರೂ ಗರ್ಭವು ಲೋಹದ ಉಂಡೆಯಷ್ಟು ಗಟ್ಟಿಯಾಗಿ ಕೇವಲ ಮಾಂಸದ ಮುದ್ದೆಯಂತಿದ್ದಿತೇ ಹೊರತು ಯಾವ ವಿಧವಾದ ಮಾನವ ಆಕಾರವನ್ನು ಹೊಂದಿರಲಿಲ್ಲ. ಸರ್ವಜ್ಞರಾದ ವ್ಯಾಸಮಹರ್ಷಿಗಳು ಎಲ್ಲವನ್ನೂ ತಮ್ಮ ಯೋಗಶಕ್ತಿಯಿಂದ ತಿಳಿದುಕೊಂಡರು. ಅತಿದುಃಖಿತೆಯಾಗಿದ್ದ ಗಾಂಧಾರಿಯು ಗರ್ಭಪಿಂಡವನ್ನು ತೆಗೆದೆಸೆಯಬೇಕೆಂದಿದ್ದ ವೇಳೆಗೆ ಸರಿಯಾಗಿ ಅವಳ ಸಮೀಪಕ್ಕೆ ಬಂದು, ಮಾಂಸದ ಮುದ್ದೆಯಂತಿದ್ದ ಗರ್ಭವನ್ನು ನೋಡಿ, ಗಾಂಧಾರಿಯನ್ನು ಕುರಿತು ಹೇಳಿದರು : "ಎಂತಹ ಅಪಚಾರ ಮಾಡಿಬಿಟ್ಟೆ? ಸೌಬಲೇ!"

ವ್ಯಾಸರು ಹೀಗೆ ಹೇಳಿದೊಡನೆಯೇ ಗಾಂಧಾರಿಯು ತನ್ನ ಮನಸ್ಸಿನ ಅಸೂಯೆಯನ್ನು ಸ್ವಲ್ಪವೂ ಮರೆಮಾಚಿಕೊಳ್ಳದೇ ವ್ಯಾಸರಿಗೆ ಹೇಳಿದಳು : "ಮತ್ತೇನು ಮಾಡಲಿ? ಮಹರ್ಷಿಗಳೇ! ನನಗಿಂತಲೂ ಮೊದಲು ಕುಂತಿಯು ಸರ್ವಾಂಗಸುಂದರನಾದ, ಸೂರ್ಯನಿಗೆ ಸಮಾನನಾದ ತೇಜಸ್ಸಿನಿಂದ ಕೂಡಿರುವ ಶಿಶುವನ್ನು ಪಡೆದಳೆಂದು ಕೇಳಿದೊಡನೆಯೇ ಬಹಳ ಸಂಕಟದಿಂದ ನಾನು ಗರ್ಭಪಾತ ಮಾಡಿಕೊಂಡೆನು. ಪೂಜ್ಯರೇ! ನೂರು ಮಕ್ಕಳ ತಾಯಿಯಾಗುವಂತೆ ನೀವು ನನಗೆ ಆಶೀರ್ವಾದಮಾಡಿದಿರಿ. ನೂರು ಮಕ್ಕಳಿಗೆ ಬದಲಾಗಿ ಈ ಮಾಂಸದ ಮುದ್ದೆಯು ನನಗೆ ಹುಟ್ಟಿತು."

ಗಾಂಧಾರಿಗೆ ಮುಂದೆ ಮಾತನಾಡಲಾಗಲಿಲ್ಲ. ದುಃಖವು ಹೆಚ್ಚಾ

ಯಿತು. ಮುಖವನ್ನು ಸೀರೆಯ ಸೆರಗಿನಿಂದ ಮುಚ್ಚಿಕೊಂಡು ಬಿಕ್ಕಿ-ಬಿಕ್ಕಿ ಅತ್ತಳು.

"ನೀನು ನೂರು ಮಕ್ಕಳ ತಾಯಿಯಾಗುವುದು ನಿಶ್ಚಯ, ಸೌಬಲೇ! ನನ್ನ ಮಾತೆಂದಿಗೂ ಸುಳ್ಳಾಗಲಾರದು. ಕೇವಲ ಹಾಸ್ಯಕ್ಕಾದರೂ ಈ ಹಿಂದೆ ನಾನು ಸುಳ್ಳಾಡಿದವನಲ್ಲ. ತುಪ್ಪದಿಂದ ತುಂಬಲ್ಪಟ್ಟ ನೂರು ಮಡಕೆಗಳನ್ನು ಒಡನೆಯೇ ತರಹೇಳು. ಅವುಗಳನ್ನು ಭದ್ರವಾಗಿ ಮುಚ್ಚಿ ಜೋಪಾನವಾಗಿ ರಕ್ಷಿಸಬೇಕು. ನೀನು ಒಡನೆಯೇ ಶೀತೋದಕವನ್ನು ತೆಗೆದುಕೊಂಡು ಬಂದು ಈ ಗರ್ಭಪಿಂಡವನ್ನು ಪರಿಷಿಂಚಿಸು"–ಎಂದು ಹೇಳಿ ವ್ಯಾಸರು ಪದ್ಮಾಸನದಲ್ಲಿ ಕುಳಿತರು.

ಶೀತೋದಕದಿಂದ ಪ್ರೋಕ್ಷಿಸಲಾಗಿ ಗರ್ಭಪಿಂಡವು ನೂರು ಚೂರು ಗಳಾಗಿ ಒಡೆಯಿತು. ಒಂದೊಂದು ಚೂರೂ ಹೆಬ್ಬೆಟ್ಟಿನ ಗಿಣ್ಣಿನಷ್ಟು ದಪ್ಪ ವಾಗಿದ್ದಿತು. ಘೃತಕುಂಭಗಳಲ್ಲಿ ಒಂದೊಂದೇ ಚೂರನ್ನಿಡುವಾಗ ನೂರೊಂದು ಘೃತಕುಂಭಗಳು ಬೇಕಾಯಿತು. ಅರ್ಥಾತ್ ನೂರು ವಿಭಾಗವಾಗಿದ್ದ ಆ ಪಿಂಡವು ಘೃತಭಾಂಡಗಳಲ್ಲಿಡುವ ವೇಳೆಗೆ ನೂರೊಂದು ವಿಭಾಗವಾಗಿ ಪರಿಣಮಿಸಿತು. ಮತ್ತೊಂದು ಭಾಂಡವನ್ನು ತರಿಸಿ ನೂರೊಂದನೆಯದನ್ನು ಅದರಲ್ಲಿಟ್ಟರು. ಆ ಘೃತಭಾಂಡಗಳನ್ನು ಗೋಪ್ಯವಾದ ಒಂದು ಸ್ಥಳದಲ್ಲಿಡ ಲಾಯಿತು. ಅವುಗಳ ಸಂರಕ್ಷಣೆಗೂ ಸರಿಯಾದ ವ್ಯವಸ್ಥೆಯನ್ನು ಮಾಡಿದ ನಂತರ ವ್ಯಾಸರು ಗಾಂಧಾರಿಗೆ ಹೇಳಿದರು : "ಗಾಂಧಾರಿ! ಈ ಭಾಂಡಗಳನ್ನು ಜಾಗರೂಕತೆಯಿಂದ ಸಂರಕ್ಷಿಸಬೇಕು. ಎರಡು ವರ್ಷಗಳು ತುಂಬಿದ ನಂತರವೇ ಈ ಭಾಂಡಗಳ ಮುಚ್ಚಳಗಳನ್ನು ತೆಗೆಯಬೇಕು. ಅಲ್ಲಿಯವರೆಗೂ ಇವುಗಳನ್ನು ಮುಟ್ಟಲೂಬಾರದು"–ಎಂದು ಹೇಳಿ ತಪಸ್ಸು ಮಾಡಲು ಹಿಮವತ್ಪರ್ವತಕ್ಕೆ ಹೊರಟುಹೋದರು.

ವ್ಯಾಸರು ಹೇಳಿದಂತೆಯೇ ಎರಡು ವರ್ಷಗಳು ಕಳೆದನಂತರ ಮೊದಲ ನೆಯ ಘೃತಭಾಂಡದಿಂದ ದುರ್ಯೋಧನನ ಜನನವಾಯಿತು. ರಾಜಕುಮಾರ ರಲ್ಲಿ ಯುಧಿಷ್ಠಿರನು ಹಿರಿಯವನಾದನು. ದುರ್ಯೋಧನನು ಎರಡನೆಯವ ನಾದನು. ರಾಜಕುಮಾರನ ಜನ್ಮವಾರ್ತೆಯು ಧೃತರಾಷ್ಟ್ರ-ಭೀಷ್ಮ-ವಿದು ರಾದಿಗಳಿಗೂ ತಿಳಿಯಿತು. ಅದೇ ದಿನ ಭೀಮಸೇನನ ಜನನವೂ ಆಯಿತು.

ಹುಟ್ಟಿದೊಡನೆಯೇ ಮಕ್ಕಳು ಅಳುವರಲ್ಲವೇ? ದುರ್ಯೋಧನನು ಹುಟ್ಟಿದೊಡನೆಯೇ ಕತ್ತೆಯು ಅರಚುವಂತೆ ಅರಚಲು ತೊಡಗಿದನು. ಆ ಧ್ವನಿಯನ್ನು ಕೇಳಿದೊಡನೆಯೇ ಕತ್ತೆಗಳೂ ಕಿರುಚಲು ಪ್ರಾರಂಭಿಸಿದುವು. ನರಿಗಳೂ, ರಣಹದ್ದುಗಳೂ, ಕಾಗೆಗಳು ಪ್ರತಿಧ್ವನಿಗೈದುವು. ಹಲವು ಕಡೆಗಳಲ್ಲಿ ಸುಂಟರಗಾಳಿಯು ಎದ್ದಿತು. ಅನಿರೀಕ್ಷಿತವಾಗಿ ಬೆಂಕಿಯು ನಾಲ್ಕು ದಿಕ್ಕುಗಳಲ್ಲಿಯೂ ಕಾಣಿಸಿಕೊಂಡಿತು.

ಅದನ್ನು ತಿಳಿದ ಧೃತರಾಷ್ಟ್ರನು ಭಯಗೊಂಡವನಾಗಿ ಬ್ರಾಹ್ಮಣರನ್ನೂ, ಭೀಷ್ಮರನ್ನೂ, ವಿದುರನನ್ನೂ, ಶಕುನಶಾಸ್ತ್ರವಿಶಾರದರನ್ನೂ, ಇತರ ಕುರುಪ್ರಮುಖರನ್ನೂ ಕರೆಯಿಸಿ ಸಮಾಲೋಚನೆ ನಡೆಸಿದನು. ಮೊದಲ ನೆಯದಾಗಿ ಆಹ್ವಾನದ ಕಾರಣವನ್ನು ತಿಳಿಸುತ್ತಾ ಹೇಳಿದನು :

**ಯುಧಿಷ್ಠಿರೋ ರಾಜಪುತ್ರೋ ಜ್ಯೇಷ್ಠೋ ನಃ ಕುಲವರ್ಧನಃ ।**
**ಪ್ರಾಪ್ತಃ ಸ್ವಗುಣತೋ ರಾಜ್ಯಂ ನ ತಸ್ಮಿನ್ವಾಚ್ಯಮಸ್ತಿ ನಃ ॥೩೧॥**

**ಅಯಂ ತ್ವನನ್ತರಸ್ತಸ್ಮಾದಪಿ ರಾಜಾ ಭವಿಷ್ಯತಿ ।**
**ಏತದ್ವಿಬ್ರೂತ ಮೇ ತಥ್ಯಂ ಯದತ್ರ ಭವಿತಾ ಧ್ರುವಮ್ ॥೩೨॥**

"ಆದರಣೀಯರೇ! ರಾಜಕುಮಾರರಲ್ಲಿ ಹಿರಿಯನಾದ ಯುಧಿಷ್ಠಿರನು ನಮ್ಮ ವಂಶವರ್ಧಕನೆಂಬುದು ನಿಶ್ಚಯ. ಅವನು ನಮ್ಮ ವಂಶದಲ್ಲಿ ಜ್ಯೇಷ್ಠಪುತ್ರನಾಗಿ ಹುಟ್ಟಿರುವುದರಿಂದಲೂ, ಸೌಶೀಲ್ಯಾದಿ ಸ್ವಗುಣಗಳಿಂದಲೂ ನಮ್ಮ ರಾಜ್ಯಸಿಂಹಾಸನವು ಅವನಿಗೇ ಸೇರಬೇಕು. ಇದರಲ್ಲಿ ನನಗಾವ ಸಂಶಯವೂ ಇರುವುದಿಲ್ಲ. ಆದರೆ ಅವನ ನಂತರ ಹುಟ್ಟಿರುವ ಈ ನನ್ನ ದೊಡ್ಡ ಮಗನೂ ರಾಜನಾಗಲು ಸಾಧ್ಯವಿದೆಯೇ? ನ್ಯಾಯ-ನೀತಿಗಳನ್ನೂ, ವಂಶದ ಪದ್ಧತಿಯನ್ನೂ ಅನುಸರಿಸಿ ಹೇಳಿರಿ."*

---

* ಇಲ್ಲಿ ಧೃತರಾಷ್ಟ್ರನ ಸಂಶಯವಿಷ್ಟೇ : ಕುರುವಂಶಕ್ಕೆ ತಾನು ಹಿರಿಯನು. ಜನ್ಮಾಂಧನಾದ ಕಾರಣದಿಂದ ರಾಜ್ಯಸಿಂಹಾಸನವು ತನಗೆ ಸಿಕ್ಕದೇ ಪಾಂಡುವಿಗೆ ಸಿಕ್ಕಿತು. ಆದರೆ ತಾನು ಜ್ಯೇಷ್ಠನಾದುದರಿಂದ ಸಿಂಹಾಸನದ ಹಕ್ಕು ತನಗೇ ಜನ್ಮಸಿದ್ಧವಾದುದು. ಆದುದರಿಂದ ತನ್ನ ಹಿರಿಯ ಮಗನಾದ ದುರ್ಯೋಧನನಿಗಾದರೂ ಸಿಂಹಾಸನವು ಸಿಕ್ಕಲು ಅವಕಾಶವಿರುವುದೇ?

ಧೃತರಾಷ್ಟ್ರನು ಹೇಳಿದ ಮಾತುಗಳು ಪೂರೈಸುವುದರೊಳಗಾಗಿಯೇ ಹೆಣ್ಣುನರಿಗಳೂ, ಮಾಂಸಭಕ್ಷಕಪ್ರಾಣಿಗಳೂ ಅಪಸ್ವರಗಳಿಂದ ಅರಚ ತೊಡಗಿದವು.

ಆ ದುರ್ನಿಮಿತ್ತಗಳನ್ನು ಕಂಡು ಬ್ರಾಹ್ಮಣರೂ ಮತ್ತು ವಿದುರನೂ ಭ್ರಾಂತರಾಗಿ ಹೇಳಿದರು :

**ಯಥೇಮಾನಿ ನಿಮಿತ್ತಾನಿ ಘೋರಾಣಿ ಮನುಜಾಧಿಪ ।**
**ಉತ್ಥಿತಾನಿ ಸುತೇ ಜಾತೇ ಜ್ಯೇಷ್ಠೇ ತೇ ಪುರುಷರ್ಷಭ ॥೩೫॥**

**ವ್ಯಕ್ತಂ ಕುಲಾನ್ತಕರಣೋ ಭವಿತೈಷ ಸುತಸ್ತವ ।**
**ತಸ್ಯ ಶಾನ್ತಿಃ ಪರಿತ್ಯಾಗೇ ಗುಪ್ತಾವಪನಯೋ ಮಹಾನ್ ॥೩೬॥**

**ಶತಮೇಕೋನಮಪ್ಯಸ್ತು ಪುತ್ರಾಣಾಂ ತೇ ಮಹೀಪತೇ ।**
**ತ್ಯಜೈನಮೇಕಂ ಶಾನ್ತಿಂ ಚೇತ್ಕುಲಸ್ಯೇಚ್ಛಸಿ ಭಾರತ ॥೩೭॥**

**ಏಕೇನ ಕುರು ವೈ ಕ್ಷೇಮಂ ಕುಲಸ್ಯ ಜಗತಸ್ತಥಾ ।**
**ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥೩೮॥**

“ಮಹಾರಾಜ! ನಿನ್ನ ಮಗನು ಹುಟ್ಟಿದಾಗ ಉಂಟಾದ ಭಯಂಕರ ವಾದ ಈ ನಿಮಿತ್ತಗಳಿಂದ ಇವನು ವಂಶವಿನಾಶಕನೆಂಬುದು ಸ್ಪಷ್ಟವಾಗಿ ಕಾಣುತ್ತಿದೆ. ಆದುದರಿಂದ ಇವನನ್ನು ಪರಿತ್ಯಜಿಸುವುದರಿಂದಲೇ ಈ ದುಷ್ಪರಿ ಣಾಮಗಳ ಶಾಂತಿಯಾಗಬೇಕಾಗಿದೆ. ಇವನನ್ನು ಪುತ್ರವಾತ್ಸಲ್ಯದಿಂದ ಹಾಗೆಯೇ ಉಳಿಸಿಕೊಂಡರೆ ಕುಲಕ್ಕೇ ನಾಶಕನಾಗುವನು. ಇವನನ್ನು ಪರಿ ತ್ಯಜಿಸಿದರೂ ನಿನಗೆ ತೊಂಬತ್ತೊಂಬತ್ತು ಮಂದಿ ಮಕ್ಕಳು ಉಳಿಯುವರು. ನೀನು ವಂಶದ ಹಿತವನ್ನೂ ಮತ್ತು ಜಗತ್ತಿನ ಹಿತವನ್ನೂ ಬಯಸುವೆ ಯಾದರೆ ಖಂಡಿತವಾಗಿಯೂ ಈ ಒಂದು ಶಿಶುವನ್ನು ವರ್ಜಿಸಬೇಕು. ಹಿರಿಯರು ಹೇಳುವುದೇನೆಂದರೆ : ವಂಶದ ಹಿತರಕ್ಷಣೆಗಾಗಿ ಒಬ್ಬನನ್ನು ವಿಸರ್ಜಿಸಬಹುದು. ಒಂದು ಗ್ರಾಮದ ಹಿತರಕ್ಷಣೆಗಾಗಿ ಒಂದು ಕುಲವನ್ನಾ ದರೂ ದೂರಮಾಡಬಹುದು. ಒಂದು ದೇಶದ ಹಿತರಕ್ಷಣೆಗಾಗಿ ಒಂದು

ಹಳ್ಳಿಯನ್ನಾದರೂ ಕೈಬಿಡಬಹುದು. ಆತ್ಮೋದ್ಧಾರದ ಕಾರಣಕ್ಕಾಗಿ ಪ್ರಪಂಚವನ್ನೇ ಬಿಡಬಹುದು."

ಬ್ರಾಹ್ಮಣರ ಮತ್ತು ವಿದುರನ ಸಲಹೆಯಂತೆ ಧೃತರಾಷ್ಟ್ರನು ದುರ್ಯೋಧನನನ್ನು ವಿಸರ್ಜಿಸಲಿಲ್ಲ. ಅಂದಿನ ಸಭೆಯನ್ನು ಮಾತ್ರ ವಿಸರ್ಜಿಸಿದನು.

ಜನಮೇಜಯ! ಈ ರೀತಿಯಲ್ಲಿ ಧೃತರಾಷ್ಟ್ರನಿಗೆ ನೂರು ಮಂದಿ ಮಕ್ಕಳು ಹುಟ್ಟಿದರು. ಬಳಿಕ ಒಂದು ತಿಂಗಳಿನಲ್ಲಿ ಅತಿಸುಂದರವಾದ ಒಂದು ಹೆಣ್ಣು ಮಗುವೂ ಜನಿಸಿತು.

ಗಾಂಧಾರಿಯು ಗರ್ಭಿಣಿಯಾಗಿದ್ದ ಕಾಲದಲ್ಲಿ ವೈಶ್ಯಸ್ತ್ರೀಯೊಬ್ಬಳು ಧೃತರಾಷ್ಟ್ರನನ್ನು ಉಪಚರಿಸುತ್ತಿದ್ದಳು. ಅವಳಲ್ಲಿ ಧೃತರಾಷ್ಟ್ರನಿಗೆ ಯುಯುತ್ಸುವೆಂಬ ಮಗನು ಹುಟ್ಟಿದನು. ಕ್ಷತ್ರಿಯಪುರುಷನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಕಾರಣ ಅವನನ್ನು ಕರಣನೆಂದೂ ಕರೆದರು.

ಈ ರೀತಿಯಾಗಿ ಗಾಂಧಾರಿಯಲ್ಲಿ ಧೃತರಾಷ್ಟ್ರನಿಗೆ ನಾಲ್ಕು ವರ್ಷಗಳ ಅಂತರದಲ್ಲಿ ಮಹಾರಥರಾದ ಮತ್ತು ವೀರರಾದ ನೂರು ಗಂಡುಮಕ್ಕಳೂ ದುಃಶಲಾ ಎಂಬ ಕನ್ಯೆಯೂ ಮತ್ತು ವೈಶ್ಯಸ್ತ್ರೀಯಲ್ಲಿ ಮಹಾತೇಜಸ್ವಿಯಾದ ಯುಯುತ್ಸುವೂ ಜನಿಸಿದರು."

(ವ್ಯಾಸರು ಮಾಡಿದ ಘೃತಘಟನಿಕ್ಷೇಪಪ್ರಕ್ರಿಯೆಯಿಂದ ಗರ್ಭಪಿಂಡ ವನ್ನು ಜೀವಂತವಾಗಿ ಉಳಿಸುವ ಮತ್ತು ಅದನ್ನು ವೃದ್ಧಿಪಡಿಸುವ ಒಂದು ವಿಜ್ಞಾನವು ನಮ್ಮ ಪೂರ್ವಜರಿಗೆ ತಿಳಿದಿತ್ತೆಂಬ ವಿಷಯವು ಸ್ಪಷ್ಟವಾಗುವುದು. ಮಾಂತ್ರಿಕವಾದ ಅಭಿಮಂತ್ರಣಾದಿಗಳೂ ಔಷಧ-ಚಿಕಿತ್ಸೆಗಳೊಡನೆ ಸೇರಿರುತ್ತಿದ್ದುವು. ಇಂತಹ ಉತ್ತಮವಿಜ್ಞಾನವು ಇಂದು ಲುಪ್ತಪ್ರಾಯ ವಾಗಿದೆ.)

೧೧೫ನೆಯ ಅಧ್ಯಾಯವು ಮುಗಿಯಿತು.

## ದುಃಶಲೆಯ ಜನ್ಮಕಥೆ

ಜನಮೇಜಯನಿಗೆ ಮತ್ತೊಂದು ಸಂಶಯವು ತಲೆದೋರಿತು. ವ್ಯಾಸರು ಗಾಂಧಾರಿಗೆ ನೂರು ಮಂದಿ ಮಕ್ಕಳನ್ನು ಅನುಗ್ರಹಿಸಿದ್ದರು. ಅಂತೆಯೇ ಗರ್ಭಪಿಂಡವೂ ನೂರು ಚೂರುಗಳಾಗಿ ಒಡೆಯಿತು. ಆದರೆ ಘೃತಭಾಂಡ ಗಳಲ್ಲಿ ಹಾಕಿಡುವ ವೇಳೆಗೆ ಅದು ನೂರೊಂದು ಚೂರುಗಳಾಗಿ ಪರಿವರ್ತಿತ ವಾಯಿತು. ಕಡೆಯಲ್ಲಿ ಹುಟ್ಟಿದವಳು ದುಃಶಲಾ–ಎಂಬ ಹೆಣ್ಣುಮಗಳೆಂದೂ ವೈಶಂಪಾಯನರು ಹೇಳಿದರು. ಆ ಸಂದರ್ಭದಲ್ಲಿ ದುಃಶಲೆಯು ಹೇಗೆ ಹುಟ್ಟಿದಳೆಂಬ ರಹಸ್ಯವನ್ನು ತಿಳಿದುಕೊಳ್ಳಬೇಕೆಂದು ಜನಮೇಜಯನಿಗೆ ಕುತೂಹಲವುಂಟಾಯಿತು. ಅಂತೆಯೇ ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ವ್ಯಾಸಮಹರ್ಷಿಗಳು ಧೃತರಾಷ್ಟ್ರನಿಗೆ ನೂರು ಮಕ್ಕಳನ್ನು ಅನುಗ್ರಹಿಸಿದರೆಂದು ಈ ಹಿಂದೆ ಹೇಳಿದ್ದಿರಿ. ಆದರೆ ಆಗ ತಾವು ಕನ್ಯೆಯ ವಿಷಯವನ್ನೇ ಪ್ರಸ್ತಾಪಿಸಿರಲಿಲ್ಲ. ವೈಶ್ಯಸ್ತ್ರೀಯ ಪುತ್ರನಾದ ಯುಯುತ್ಸುವೂ ಮತ್ತು ದುಃಶಲೆಯೂ ನೂರಕ್ಕಿಂತಲೂ ಅಧಿಕರಾಗಿರುವರು. ವ್ಯಾಸರು ಗಾಂಧಾರಿಗೆ ವರದಾನಮಾಡುವಾಗಲೂ ನೂರು ಮಂದಿ ಮಕ್ಕಳಾಗುವರೆಂದೇ ಹೇಳಿದ್ದರು. ಈಗ ನೀವು ಕನ್ಯೆಯೊಬ್ಬಳೂ ಹುಟ್ಟಿದಳೆಂದು ಹೇಳುತ್ತಿದ್ದೀರಿ. ಇದು ಹೇಗೆ ಸಾಧ್ಯವಾಯಿತು? ವ್ಯಾಸರು ಗರ್ಭಪಿಂಡಕ್ಕೆ ಶೀತೋದಕವನ್ನು ಸಂಪ್ರೋಕ್ಷಿಸಿದಾಗಲೂ ಅದು ನೂರು ವಿಭಾಗಗಳಾಗಿ ಒಡೆಯಿತೆಂದೂ ಹೇಳಿದಿರಿ. ಗರ್ಭಪಾತದ ನಂತರ ಗಾಂಧಾರಿಯು ಪುನಃ ಗರ್ಭಿಣಿಯೂ ಆಗಲಿಲ್ಲ; ಹೆಣ್ಣುಮಗುವನ್ನೂ ಪ್ರಸವಿಸಲಿಲ್ಲ. ಇಂತಹ ಸಂದರ್ಭದಲ್ಲಿ ದುಃಶಲೆಯು ಹೇಗೆ ಹುಟ್ಟಿದಳು? ಈ ವಿಷಯವನ್ನು ಕೇಳಿ ತಿಳಿದುಕೊಳ್ಳಬೇಕೆಂದು ಬಹಳ ಕುತೂಹಲವುಂಟಾಗಿದೆ. ಯಥಾವತ್ತಾಗಿ ನಡೆದುದೆಲ್ಲವನ್ನೂ ಹೇಳಿ ನನ್ನ ಸಂಶಯವನ್ನು ನಿವಾರಣೆ ಮಾಡಿರಿ."

"ಪಾಂಡವೇಯನೇ! ನೀನು ಕೇಳಿದ ಪ್ರಶ್ನೆಯು ಸಾಧುವಾಗಿಯೇ ಇದೆ. ಇದನ್ನು ಯಥಾವತ್ತಾಗಿಯೇ ನಿನಗೆ ತಿಳಿಸುವೆನು. ಕೇಳು :

ನಾನು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಗರ್ಭಪಿಂಡದ ನೂರು

ಚೂರುಗಳನ್ನು ಇಡಲು ಕ್ಷಣಮಾತ್ರದಲ್ಲಿ ಘೃತಪೂರ್ಣವಾದ ನೂರು ಭಾಂಡ ಗಳು ಸಿದ್ಧವಾದುವು. ಗಾಂಧಾರಿಯು ವ್ಯಾಸರ ಮಾತಿನಂತೆ ಗರ್ಭಪಿಂಡದ ಮೇಲೆ ಪರಿಷಿಂಚಿಸಲು ತಂದಿದ್ದ ಶೀತೋದಕವನ್ನು ವ್ಯಾಸರು ಅಭಿಮಂತ್ರಿಸಿ ಪ್ರೋಕ್ಷಿಸಲಾಗಿ, ಒಡನೆಯೇ ಆ ಪಿಂಡವು ಅಂಗುಷ್ಠಮಾತ್ರದ ನೂರು ಭಾಗ ಗಳಾಗಿ ಒಡೆಯಿತು. ಅರಮನೆಯ ಸೇವಕಿಯೊಬ್ಬಳು ಪ್ರತಿಯೊಂದು ಮಡಕೆ ಯಲ್ಲಿಯೂ ಒಂದೊಂದು ಚೂರನ್ನು ಇಡುತ್ತಾ ಬಂದಳು. ಅವೆಲ್ಲವನ್ನೂ ನೋಡುತ್ತಾ ಕುಳಿತಿದ್ದ ಗಾಂಧಾರಿಯ ಮನಸ್ಸಿನಲ್ಲಿ ಮತ್ತೊಂದು ಇಚ್ಛೆಯು ಮೂಡಿತು. ನೂರು ಗಂಡು ಮಕ್ಕಳ ಜೊತೆಯಲ್ಲಿ ಒಂದು ಹೆಣ್ಣು ಮಗು ವನ್ನೂ ಪಡೆಯುವುದರಿಂದುಂಟಾಗುವ ಆನಂದವನ್ನೂ ಸ್ಮರಿಸಿದಳು. ಮನಸ್ಸಿ ನಲ್ಲಿಯೇ ಹೀಗೆಂದು ತರ್ಕಿಸಿದಳು :

"ಮಹರ್ಷಿಗಳ ಮಾತಿನಂತೆ ನನಗೆ ನೂರು ಮಕ್ಕಳಾಗುವುದಂತೂ ನಿಶ್ಚಯ. ಮಹರ್ಷಿಗಳೆಂದೂ ಸುಳ್ಳಾಡುವವರಲ್ಲ. ಆದರೆ ನೂರರ ಮೇಲೂ ಒಂದು ಹೆಣ್ಣುಮಗುವಾದರೆ ನನ್ನ ಆನಂದಕ್ಕೆ ಪಾರವೆಲ್ಲಿಯದು? ನನ್ನ ಪತಿಯೂ ದೌಹಿತ್ರಸಂತಾನದಿಂದ ಉಂಟಾಗಬಹುದಾದ ಆಮುಷ್ಮಿಕಫಲ ಗಳನ್ನೂ ಪಡೆಯಬಹುದಲ್ಲವೇ? ಅದೂ ಅಲ್ಲದೇ :

**ಅಧಿಕಾ ಕಿಲ ನಾರೀಣಾಂ ಪ್ರೀತಿರ್ಜಾಮಾತೃಜಾ ಭವೇತ್ ॥೨॥**

ಹೆಂಗಸರಿಗೆ ಅಳಿಯನಿಂದ ಉಂಟಾಗುವ ಸಂತೋಷವೇ ಹೆಚ್ಚಿನದು. ಆ ಮಮತೆಯ ಅನುಭವವನ್ನೂ ನಾನು ಪಡೆಯಬೇಕಲ್ಲವೇ? ಆದುದರಿಂದ ನೂರು ಮಂದಿ ಗಂಡುಮಕ್ಕಳ ನಂತರ ಒಂದು ಹೆಣ್ಣು ಮಗುವೂ ನನ್ನದಾಗಿ ಬಿಟ್ಟರೆ ಪುತ್ರ-ದೌಹಿತ್ರರಿಂದ ಕೂಡಿರುವವಳಾಗಿ ನಾನು ನಿಶ್ಚಯವಾಗಿಯೂ ಧನ್ಯಳಾಗುವೆನು. ನಾನು ತಪಶ್ಚರಣೆಮಾಡಿರುವುದು ನಿಶ್ಚಯವಾದರೆ, ದೀನ-ದಲಿತರಿಗೆ ದಾನಮಾಡಿರುವುದು ನಿಶ್ಚಯವಾದರೆ, ಬ್ರಾಹ್ಮಣರ ಮೂಲಕ ಅನೇಕಹೋಮ-ಹವನಾದಿಗಳನ್ನು ಮಾಡಿಸಿರುವುದು ನಿಶ್ಚಯ ವಾದರೆ, ನಾನು ನನ್ನ ಹಿರಿಯರನ್ನು ಮರ್ಯಾದೆಯಿಂದ ಕಂಡು ಸತ್ಕರಿಸಿರುವುದು ನಿಶ್ಚಯವಾದರೆ–ಎಲ್ಲ ಫಲಗಳೂ ಸೇರಿ ನನಗೊಂದು ಹೆಣ್ಣುಮಗುವೂ ಜನಿಸಲಿ."

ಗಾಂಧಾರಿಯ ಮನಸ್ಸಿನ ಆಶಯವನ್ನು ತಿಳಿದ ವ್ಯಾಸರು ನಸುನಕ್ಕರು. ಆ ವೇಳೆಗೆ ನೂರು ಭಾಂಡಗಳಲ್ಲಿಯೂ ಗರ್ಭಪಿಂಡದ ಅಂಗುಷ್ಠಮಾತ್ರದ ವಿಭಾಗಗಳನ್ನು ಇಡಲಾಗಿತ್ತು. ವ್ಯಾಸರು ಗಾಂಧಾರಿಗೆ ಹೇಳಿದರು :

"ಗಾಂಧಾರಿ! ನಾನು ಸುಳ್ಳು ಹೇಳಲಿಲ್ಲವೆಂಬ ವಿಷಯವು ನಿನಗೆ ಈಗ ಲಾದರೂ ಅರಿವಾಯಿತೇ? ಈ ನೂರು ಭಾಂಡಗಳಲ್ಲಿ ನಿನಗೆ ನೂರು ಮಕ್ಕಳು ಜನಿಸುವರು. ನಿನ್ನ ಮನದ ಇಚ್ಛೆಯಂತೆ ಈ ಗರ್ಭಪಿಂಡದಲ್ಲಿ ಮತ್ತೊಂದು ಕಡೆಯ ವಿಭಾಗವೂ ಉಳಿದಿದೆ. ಇದರಿಂದ ನಿನಗೆ ಚೆಲುವೆ ಯಾದ ಹೆಣ್ಣು ಮಗುವು ಹುಟ್ಟಿ ದೌಹಿತ್ರಸಂತತಿಯೂ ಬೆಳೆಯುವುದು. ಸೌಬಲೇ! ಈ ಭಾಂಡಗಳ ಮುಚ್ಚಳವನ್ನು ಎರಡು ವರ್ಷಗಳ ನಂತರವೇ ತೆರೆಯಬೇಕು. ಈ ವಿಷಯವೂ ನಿನ್ನ ಸ್ಮರಣೆಯಲ್ಲಿರಲಿ. ಹೀಗೆ ಹೇಳಿ ಘೃತ ಪೂರ್ಣವಾದ ಮತ್ತೊಂದು ಭಾಂಡವನ್ನು ತರಿಸಿ, ಅದರೊಳಗೆ ನೂರೊಂದ ನೆಯ ವಿಭಾಗವನ್ನಿಟ್ಟು ಭಾಂಡಗಳೆಲ್ಲವನ್ನೂ ಅಭಿಮಂತ್ರಣಪೂರ್ವಕವಾಗಿ ಆಚ್ಛಾದಿಸಿ ಸುರಕ್ಷಿತವಾದ ಗುಪ್ತಸ್ಥಳದಲ್ಲಿರಿಸಿದರು. ಜನಮೇಜಯ! ದುಃಶಲೆಯ ಜನ್ಮವೃತ್ತಾಂತವನ್ನು ನಿನಗೆ ತಿಳಿಸಿದೆನು. ಅನಘನೇ! ಮತ್ತೇನನ್ನು ಕೇಳಲು ಬಯಸಿರುವೆ?"

೧೧೬ನೆಯ ಅಧ್ಯಾಯವು ಮುಗಿಯಿತು.

೧೧೭ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಮಕ್ಕಳ ನಾಮಾವಳಿ

ಜನಮೇಜಯನು ಧೃತರಾಷ್ಟ್ರನ ಮಕ್ಕಳ ಹೆಸರುಗಳನ್ನು ಅನುಕ್ರಮವಾಗಿ ಹೇಳುವಂತೆ ವೈಶಂಪಾಯನರನ್ನು ವಿನೀತನಾಗಿ ಕೇಳಿಕೊಂಡನು. ವೈಶಂಪಾಯನರು ವ್ಯಾಸರನ್ನು ಸ್ಮರಣೆಮಾಡಿ ಹೇಳತೊಡಗಿದರು :

"ದುರ್ಯೋಧನ, ಯುಯುತ್ಸು, ದುಶ್ಶಾಸನ, ದುಸ್ಸಹ, ದುಶ್ಶಲ, ಜಲಸಂಧ, ಸಮ, ಸಹ, ವಿಂದ, ಅನುವಿಂದ, ದುರ್ಧರ್ಷ, ಸುಬಾಹು, ದುಷ್ಪ್ರಧರ್ಷಣ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ಕರ್ಣ, ವಿವಿಂಶತಿ, ವಿಕರ್ಣ, ಶಲ, ಸತ್ತ್ವ, ಸುಲೋಚನ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರು, ಚಿತ್ರಶರಾಸನ, ದುರ್ಮದ, ದುರ್ವಿಗಾಹ, ವಿವಿತ್ಸು, ವಿಕಟಾನನ,

ಊರ್ಣನಾಭ, ಸುನಾಭ, ನಂದ, ಉಪನಂದ, ಚಿತ್ರಬಾಣ, ಚಿತ್ರವರ್ಮಾ, ಸುವರ್ಮಾ, ದುರ್ವಿರೋಚನ, ಅಯೋಬಾಹು, ಮಹಾಬಾಹುವಾದ ಚಿತ್ರಾಂಗ, ಚಿತ್ರಕುಂಡ, ಭೀಮವೇಗ, ಭೀಮಬಲ, ಬಲಾಕೀ, ಬಲವರ್ಧನ, ಉಗ್ರಾಯುಧ, ಸುಷೇಣ, ಕುಂಡೋದರ, ಮಹೋದರ, ಚಿತ್ರಾಯುಧ, ನಿಷಂಗೀ, ಪಾಶೀ, ವೃಂದಾರಕ, ದೃಢವರ್ಮಾ, ದೃಢನಕ್ಷತ್ರ, ಸೋಮಕೀರ್ತಿ, ಅನೂದರ, ದೃಢಸಂಧ, ಜರಾಸಂಧ, ಸತ್ಯಸಂಧ, ಸದಃಸುವಾಕ್, ಉಗ್ರಶ್ರವಸ, ಉಗ್ರಸೇನ, ಸೇನಾನೀ ದುಷ್ಪರಾಜಯ, ಅಪರಾಜಿತ, ಪಂಡಿತಕ, ವಿಶಾಲಾಕ್ಷ, ದುರಾಧರ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ, ಆದಿತ್ಯಕೇತು, ಬಹ್ವಾಶೀ, ನಾಗದತ್ತ, ಅಗ್ರಯಾಯೀ, ಕವಚೀ, ಕ್ರಥನ, ದಂಡೀ, ದಂಡಧಾರ, ಧನುರ್ಗ್ರಹ, ಉಗ್ರ, ಭೀಮರಥ, ವೀರಬಾಹು, ಅಲೋಲುಪ, ಅಭಯ, ರೌದ್ರಕರ್ಮಾ, ದೃಢರಥಾಶ್ರಯ, ಅನಾಧೃಷ್ಯ, ಕುಂಡಭೇದಿ, ಚಿತ್ರಕುಂಡಲನಾದ ವಿರಾವೀ, ಪ್ರಮಥ, ಪ್ರಮಾಥೀ, ವೀರ್ಯವಂತನಾದ ದೀರ್ಘರೋಮ, ದೀರ್ಘಬಾಹು, ಮಹಾಬಾಹುವಾದ ವ್ಯೂಢೋರು, ಕನಕಧ್ವಜ, ಕುಂಡಾಶೀ, ವಿರಜಸ–ಈ ನೂರು ಮಂದಿ ಗಂಡುಮಕ್ಕಳೂ, ದುಶ್ಶಲಾ ಎಂಬ ಹೆಣ್ಣುಮಗಳೂ ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ಹುಟ್ಟಿದರು.

ಈ ನಾಮಧೇಯಗಳು ಅವರ ಹುಟ್ಟಿಗೆ ಅನುಕ್ರಮವಾಗಿವೆ. ಧೃತರಾಷ್ಟ್ರನ ಆ ಮಕ್ಕಳೆಲ್ಲರೂ ಅತಿರಥರಾಗಿಯೂ, ಯುದ್ಧವಿಶಾರದರಾಗಿಯೂ, ವೇದ-ವೇದಾಂಗಪಾರಂಗತರಾಗಿಯೂ, ಸರ್ವಾಸ್ತ್ರಕುಶಲರಾಗಿಯೂ ಇದ್ದರು. ಅವರು ಪ್ರಾಪ್ತವಯಸ್ಕರಾದನಂತರ ಧೃತರಾಷ್ಟ್ರನು ಅವರಿಗೆ ಅನುರೂಪರಾದ ಕನ್ಯೆಯರನ್ನು ತಂದು ವಿವಾಹಮಾಡಿದನು. ದುಃಶಲೆಯೂ ಪ್ರೌಢೆಯಾದನಂತರ ಅವಳನ್ನು ಜಯದ್ರಥನಿಗೆ ಕೊಟ್ಟು ವಿಧಿಪೂರ್ವಕವಾಗಿ ವಿವಾಹಮಾಡಿಕೊಟ್ಟನು."*

೧೧೭ನೆಯ ಅಧ್ಯಾಯವು ಮುಗಿಯಿತು.

---

* ಧೃತರಾಷ್ಟ್ರನ ಮಕ್ಕಳ ಹೆಸರುಗಳಲ್ಲಿ ಕೆಲವಕ್ಕೆ ಪಾಠಾಂತರಗಳೂ ಇವೆ. ಆ ವಿಷಯವನ್ನು ಈ ಸಂಪುಟದ ಪರಿಶಿಷ್ಟದಲ್ಲಿ ಕೊಡಲಾಗಿದೆ.

## ಪಾಂಡುವಿನಿಂದ ಮೃಗರೂಪಧರನಾದ ಋಷಿಯ ಸಂಹಾರ ಮತ್ತು ಋಷಿಯ ಶಾಪ

ಜನಮೇಜಯನು ವೈಶಂಪಾಯನರನ್ನು ಕೇಳುತ್ತಾನೆ :

"ಮಹರ್ಷಿಗಳೇ! ಧೃತರಾಷ್ಟ್ರನ ಮಕ್ಕಳ ಈ ಜನ್ಮಕಥೆಯು ಉತ್ತಮೋತ್ತಮವಾದುದು. ಮನುಷ್ಯರಲ್ಲಿ ಇದು ಅಸಾಮಾನ್ಯವಾದುದು. ಈ ವಿಧವಾದ ಉತ್ಪತ್ತಿಯು ಮನುಷ್ಯಜಾತಿಗೇ ಹೊರತಾದುದು. ಇಂತಹ ಅತ್ಯದ್ಭುತವಾದ ಅವರ ಜನ್ಮಚರಿತ್ರೆಯನ್ನು ಬ್ರಹ್ಮವಾದಿಗಳಾದ ನೀವು ನನಗೆ ಹೇಳಿರುವಿರಿ. ಅವರ ನಾಮಧೇಯಗಳನ್ನೂ ಅನುಕ್ರಮವಾಗಿ ಹೇಳಿರುವಿರಿ. ನಿಮ್ಮಿಂದಲೇ ನಾನು ಇವೆಲ್ಲವನ್ನೂ ಯಥಾವತ್ತಾಗಿ ತಿಳಿದುಕೊಂಡೆನು.

ವಿಪ್ರೋತ್ತಮರೇ! ಇದೇ ರೀತಿಯಲ್ಲಿ ಪಾಂಡವರ ಜನ್ಮವೃತ್ತಾಂತವನ್ನೂ ಹೇಳಿರಿ. ಅವರೆಲ್ಲರೂ ಮಹಾತ್ಮರು. ದೇವರಾಜನಿಗೆ ಸಮಾನವಾದ ಪರಾಕ್ರಮವುಳ್ಳವರು. ಅಂಶಾವತರಣಪರ್ವದಲ್ಲಿ ಈ ವಿಷಯವನ್ನು ನೀವು ಸಂಕ್ಷಿಪ್ತವಾಗಿ ಹೇಳಿರುವಿರಿ. ಈಗ ನಾನು ಅದೇ ವಿಷಯವನ್ನು ಆಮೂಲಾಗ್ರವಾಗಿ ಕೇಳಬೇಕೆಂದಿರುವೆನು. ಮಾನವರಿಂದ ಮಾಡಲು ಅಸಾಧ್ಯವೆನಿಸಿದ ಕಾರ್ಯಗಳನ್ನು ಮಾಡುವುದರಲ್ಲಿ ಸಮರ್ಥರಾದ ಮಹಾಮಹಿಮರ ಚರಿತ್ರೆಯನ್ನು ಅವರ ಜನ್ಮಾರಭ್ಯ ಕೇಳಬೇಕೆಂಬ ಕುತೂಹಲದಿಂದಿದ್ದೇನೆ. ವೈಶಂಪಾಯನರೇ! ಎಲ್ಲವನ್ನೂ ವಿಸ್ತಾರವಾಗಿ ಹೇಳುವ ಕೃಪೆಮಾಡಿರಿ."

"ಮಹಾರಾಜ! ಪಾಂಡುವು ಕುಂತೀ-ಮಾದ್ರಿಯರೊಡನೆ ಅರಣ್ಯದಲ್ಲಿಯೇ ಬೇಟೆಯಾಡುತ್ತಾ ಕಾಲಕಳೆಯುತ್ತಿದ್ದನೆಂಬುದನ್ನು ಈ ಹಿಂದೆಯೇ ಹೇಳಿದ್ದೆನಲ್ಲವೇ? ಒಂದು ದಿನ ಪಾಂಡುವು ಧನುರ್ಧಾರಿಯಾಗಿ ಅರಣ್ಯದಲ್ಲಿ ಸಂಚರಿಸುತ್ತಿದ್ದನು. ಸ್ವಲ್ಪದೂರದಲ್ಲಿ ಜಿಂಕೆಗಳ ಒಂದು ಸಮೂಹವು ಕಾಣಿಸಿತು. ಆ ಸಮೂಹದಲ್ಲಿ ಒಂದು ಗಂಡುಜಿಂಕೆಯು ಹೆಣ್ಣುಜಿಂಕೆಯೊಡನೆ ಸೇರಿ ಸುರತಕ್ರಿಯೆಯಲ್ಲಿ ಆಸಕ್ತವಾಗಿತ್ತು. ಸರ್ವದಾ ಬೇಟೆಯಾಡುವುದರಲ್ಲಿಯೇ

ನಿರತನಾಗಿದ್ದ ಪಾಂಡುವು, ಮೃಗಯುಗಳವನ್ನು ಆ ಸಮಯದಲ್ಲಿ ಹೊಡೆಯಬಹುದೇ ಅಥವಾ ಹೊಡೆಯಬಾರದೇ?–ಎಂಬ ವಿವೇಚನೆಯನ್ನೂ ಮಾಡಲಿಲ್ಲ. ಸ್ವರ್ಣಮಯವಾದ ರೆಕ್ಕೆಗಳಿದ್ದ ಐದು ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಹೆದೆಗೇರಿಸಿ ಮೃಗಯುಗಳಕ್ಕೆ ಗುರಿಯಿಟ್ಟು ಹೊಡೆದನು. ಆದರೆ ಅವನ ಲಕ್ಷ್ಯವು ನಿಜವಾದ ಮೃಗಯುಗ್ಮವಾಗಿರಲಿಲ್ಲ. ಮಹಾತಪಸ್ವಿಯಾದ



ಋಷಿಕುಮಾರನೊಬ್ಬನು ಜಿಂಕೆಯ ರೂಪವನ್ನು ತಾಳಿ ಮೃಗೀರೂಪಧಾರಿಣಿಯಾದ ಪತ್ನಿಯೊಡನೆ ಸುರತಕ್ರಿಯೆಯಲ್ಲಿ ಆಸಕ್ತನಾಗಿದ್ದನು. ಪಾಂಡುವಿನ ತೀಕ್ಷ್ಣವಾದ ಬಾಣಗಳು ತಗುಲಿದೊಡನೆಯೇ ಜಿಂಕೆಯು ಮಾನುಷಧ್ವನಿಯಲ್ಲಿ ಆರ್ತನಾದಮಾಡುತ್ತಾ ಕೆಳಗುರುಳಿತು.

ಮಾನುಷಧ್ವನಿಯನ್ನು ಕೇಳಿದೊಡನೆಯೇ ಪಾಂಡುವು ಜಿಂಕೆಯ ಬಳಿಗೆ ಓಡಿದನು. ಜಿಂಕೆಯ ರೂಪದಲ್ಲಿದ್ದ ಋಷಿಕುಮಾರನು ಪಾಂಡುವನ್ನು ನೋಡಿ ಹೇಳತೊಡಗಿದನು :

**ಕಾಮಮನ್ಯುಪರೀತಾ ಹಿ ಬುದ್ಧ್ಯಾ ವಿರಹಿತಾ ಅಪಿ ।**
**ವರ್ಜಯನ್ತಿ ನೃಶಂಸಾನಿ ಪಾಪೇಷ್ವಪಿ ರತಾ ನರಾಃ ॥೯॥**

**ನ ವಿಧಿಂ ಗ್ರಸತೇ ಪ್ರಜ್ಞಾ ಪ್ರಜ್ಞಾಂ ತು ಗ್ರಸತೇ ವಿಧಿಃ ।**
**ವಿಧಿಪರ್ಯಾಗತಾನರ್ಥಾನ್ಪ್ರಾಜ್ಞೋ ನ ಪ್ರತಿಪದ್ಯತೇ ॥೧೦॥**

"ಮಹಾರಾಜ! ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯ ಗಳಿಗೆ ದಾಸರಾಗಿರುವ ಮತ್ತು ಸರ್ವದಾ ಪಾಪಕ್ರಿಯೆಗಳನ್ನೇ ಮಾಡುವ ಮಾನವರೂ ನೀನು ಮಾಡಿದಂತಹ ಕ್ರೂರಕರ್ಮವನ್ನೆಂದಿಗೂ ಮಾಡಲಾರರು. ಆದರೆ ಪ್ರಜ್ಞೆಯು ವಿಧಿಯ (ಪ್ರಾರಬ್ಧದ) ನಿಶ್ಚಯವನ್ನು ಮೀರಲಾರದು. ವಿಧಿಯು (ಪ್ರಾರಬ್ಧವು) ಪ್ರಜ್ಞೆಯನ್ನು ಮೀರುವುದು. ಎಂತಹ ಪ್ರಾಜ್ಞನಾದರೂ ವಿಧಿಯ ನಿಯಮಾನುಸಾರ ಉಂಟಾಗುವ ಅರ್ಥಾನರ್ಥಗಳನ್ನು ತಿಳಿಯಲಾರನು. ಆದರೂ ಧರ್ಮಾತ್ಮರ ಕುಲದಲ್ಲಿ ಹುಟ್ಟಿಯೂ ಕಾಮ-ಲೋಭಗಳಿಗೆ ಅಡಿಯಾಳಾಗಿ ಕರ್ತವ್ಯಾಕರ್ತವ್ಯ ವಿವೇಚನಾಶೂನ್ಯನಾಗಿರುವೆಯಲ್ಲವೇ?"

**ಶತ್ರೂಣಾಂ ಯಾ ವಧೇ ವೃತ್ತಿಃ ಸಾ ಮೃಗಾಣಾಂ ವಧೇ ಸ್ಮೃತಾ ।**
**ರಾಜ್ಞಾಂ ಮೃಗ ನ ಮಾಂ ಮೋಹಾತ್ತ್ವಂ ಗರ್ಹಯಿತುಮರ್ಹಸಿ ॥೧೨॥**
**ಅಚ್ಛದ್ಮನಾ ಮಾಯಯಾ ಚ ಮೃಗಾಣಾಂ ವಧ ಇಷ್ಯತೇ ।**
**ಸ ಏವ ಧರ್ಮೋ ರಾಜ್ಞಾಂ ತು ತದ್ಧಿ ತ್ವಂ ಕಿಂ ನು ಗರ್ಹಸೇ ॥೧೩॥**

"ಜಿಂಕೆಯೇ! ರಾಜರು ಶತ್ರುಗಳನ್ನು ಸಂಹರಿಸುವಂತೆಯೇ ಜಿಂಕೆ ಗಳನ್ನೂ ಬೇಟೆಯಾಡುತ್ತಾರೆ. ಅದು ರಾಜವಂಶದ ಪದ್ಧತಿ. ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನಿಂತು ಮೃಗಗಳನ್ನು ಬೇಟೆಯಾಡಬಹುದು. ಇದು ರಾಜಧರ್ಮ. ಆದುದರಿಂದ ನೀನು ಮೋಹಕ್ಕೆ ವಶನಾಗಿ ನನ್ನನ್ನು ನಿಂದಿಸು ವುದು ಯುಕ್ತವಲ್ಲ.

ಹಿಂದೊಮ್ಮೆ ಮಹರ್ಷಿಗಳಾದ ಅಗಸ್ತ್ಯರು ಮಹಾಸತ್ರವೊಂದನ್ನು

ಆರಂಭಿಸಿದರು. ಆ ಸಮಯದಲ್ಲವರು ಮೃಗಗಳನ್ನು ಬೇಟೆಯಾಡಿ ಅರಣ್ಯದಲ್ಲಿದ್ದ ಮೃಗಗಳೆಲ್ಲವನ್ನೂ ದೇವತೆಗಳಿಗೆ ಅರ್ಪಣಮಾಡಿದರು. ಬೇಟೆಯಾಡುವುದರಲ್ಲಿಯೇ ನಿಮ್ಮೆಲ್ಲರ ವಧೆಯಾಗತಕ್ಕುದೆಂಬುದು ಪ್ರಮಾಣಭೂತವಾದ ಧರ್ಮವಾಗಿದೆ. ಹೀಗಿರುವಾಗ ನನ್ನನ್ನೇಕೆ ನೀನು ನಿಂದಿಸುವೆ? ಅಗಸ್ತ್ಯರ ಅಭಿಚಾರಕ್ರಿಯೆಯಿಂದಾಗಿ (ಪಶುಹಿಂಸನಯಾಗದಿಂದಾಗಿ) ನಿಮ್ಮ ವಧೆಯು ವಿಹಿತವೆಂಬುದು ಸಿದ್ಧವಾಗಿದೆ."

**ನ ರಿಪೂನ್ವೈ ಸಮುದ್ದಿಶ್ಯ ವಿಮುಞ್ಚನ್ತಿ ನರಾಃ ಶರಾನ್ ।**
**ರನ್ಧ್ರ ಏಷಾಂ ವಿಶೇಷೇಣ ವಧಃ ಕಾಲೇ ಪ್ರಶಸ್ಯತೇ ॥೧೬॥**

"ರಾಜನೇ! ಶತ್ರುಗಳ ಮೇಲೆ ಬಾಣಪ್ರಯೋಗಮಾಡಬೇಕಾದ ಸಮಯದಲ್ಲಿಯೂ–ಶತ್ರುವು ಸಂಕಟದಲ್ಲಿದ್ದಾಗ, ಅವನು ಯುದ್ಧಕ್ಕೆ ಸಿದ್ಧನಾಗಿರದಿದ್ದಾಗ–ಖಂಡಿತವಾಗಿಯೂ ಬಾಣಪ್ರಯೋಗಮಾಡುವುದಿಲ್ಲ. ಯುದ್ಧಸಮಯದಲ್ಲಿ ಶತ್ರುವಿನ ಸಂಹಾರವು ಪ್ರಶಸ್ತವಾದುದು. ಶತ್ರುವನ್ನು ಕೊಲ್ಲಬೇಕೆಂಬ ದುರುದ್ದೇಶದಿಂದ ಹಿಂದಿನಿಂದ ಹೋಗಿ ಶತ್ರುವನ್ನು ಯಾವ ಧೀರನೂ ಸಂಹರಿಸುವುದಿಲ್ಲ."

**ಪ್ರಮತ್ತಮಪ್ರಮತ್ತಂ ವಾ ವಿವೃತಂ ಘ್ನನ್ತಿ ಚೌಜಸಾ ।**
**ಉಪಾಯೈರ್ವಿವಿಧೈಸ್ತೀಕ್ಷ್ಣೈಃ ಕಸ್ಮಾನ್ಮೃಗ ವಿಗರ್ಹಸೇ ॥೧೭॥**

"ಮೃಗವೇ! ಶತ್ರುಗಳ ವಿಷಯದಲ್ಲಿ ನೀನು ಹೇಳಿದ ನೀತಿಯು ಅನುಸರಣೀಯವಾದರೂ ಜಿಂಕೆಗಳ ವಿಷಯದಲ್ಲಿ ಹೀಗಿರುವುದಿಲ್ಲ. ಏಕೆಂದರೆ : ಜಿಂಕೆಗಳು ಭಯದಿಂದ ಓಡುತ್ತಿರುವಾಗಲೂ, ಕುಳಿತಿರುವಾಗಲೂ, ಹುಲ್ಲು ಮೇಯುತ್ತಿರುವಾಗಲೂ ಬೇಟೆಯಾಡುವ ಸಂಪ್ರದಾಯವಿದೆ. ಒಂದು ವೇಳೆ ಎಚ್ಚರಿಸಿದರೂ ಅವು ಹೆದರಿ ಓಡುತ್ತಿರುವಾಗಲೇ ಬೇಟೆಯಾಡಬೇಕಲ್ಲವೇ? ಶತ್ರುಗಳಂತೆ ಜಿಂಕೆಗಳು ಯುದ್ಧಸನ್ನದ್ಧವಾಗಿ ನಿಲ್ಲುವುವೆಂದು ನಿರೀಕ್ಷಿಸಲು ಸಾಧ್ಯವಿದೆಯೇ? ಆದುದರಿಂದ ನಾನು ಖಂಡಿತವಾಗಿಯೂ ದೂಷ್ಯನಲ್ಲ."

"ಮಹಾರಾಜ! ನೀನು ಮೃಗಗಳನ್ನು ಬೇಟೆಯಾಡುವುದಕ್ಕೆ ನಾನು ದೂಷಿಸುವುದಿಲ್ಲ ; ಅಥವಾ ನನ್ನನ್ನು ಯಾತನೆಪಡಿಸಿದುದಕ್ಕಾಗಿಯೂ ದೂಷಿ

ಸುತ್ತಿಲ್ಲ. ಆದರೆ ನಾವಿಬ್ಬರೂ ಸುರತಕ್ರಿಯೆಯಿಂದ ವಿರತರಾಗುವವರೆಗಾದರೂ ಕಾದಿದ್ದು ಅನಂತರ ಬಾಣಪ್ರಯೋಗಮಾಡಬಹುದಾಗಿತ್ತಲ್ಲವೇ? ಪ್ರಾಜ್ಞನಾದ ಯಾವ ಮಾನವನು ತಾನೇ ಸುರತಾಸಕ್ತವಾದ ಯುಗ್ಮಕ್ಕೆ ಬಾಣ ಪ್ರಯೋಗ ಮಾಡುವನು? ಸುರತವೆಂಬುದು ಸರ್ವಪ್ರಾಣಿಗಳಿಗೂ ಇಷ್ಟವಾದುದೆಂಬುದನ್ನು ನೀನು ಅರಿಯೆಯಾ? ಕಾಮತೃಪ್ತಿಗಾಗಿ ನನ್ನ ಪ್ರೇಯಸಿಯೊಡನೆ ನಾನು ಸೇರಿದ್ದೆನು. ನಾನು ತೃಪ್ತಿಹೊಂದುವ ಮೊದಲೇ ನಿನ್ನಿಂದ ಘಾಸಿಪಟ್ಟೆನಲ್ಲಾ! ಕುರುವಂಶದಲ್ಲಿ ಹುಟ್ಟಿ ಸುಚರಿತ್ರನೆನಿಸಿದ ನಿನಗೆ ಇಂತಹ ಕ್ರೂರಕರ್ಮವು ಸರ್ವಥಾ ಯೋಗ್ಯವಲ್ಲ. ನಿನ್ನೀ ಕ್ರಿಯೆಯು ಪ್ರಪಂಚದಲ್ಲಿ ಕ್ರೂರವೆಂದೂ, ಹೀನವೆಂದೂ, ಪಾಪಭೂಯಿಷ್ಠವೆಂದೂ, ಅಧರ್ಮಯುಕ್ತವೆಂದೂ, ಸ್ವರ್ಗಪ್ರಾಪ್ತಿಗೆ ಪ್ರತಿಬಂಧಕವೆಂದೂ ಪರಿಗಣಿಸಲ್ಪಡುತ್ತದೆ. ನಿನಗೆ ಸುರತಕ್ರಿಯೆಯ ಆನಂದವೆಷ್ಟೆಂಬುದು ತಿಳಿದಿದೆ. ಸಕಲ ವೇದ-ವೇದಾಂಗ ಪಾರಂಗತನಾಗಿ, ಧರ್ಮಸೂಕ್ಷ್ಮವನ್ನೂ ತಿಳಿದವನಾಗಿರುವೆ. ದೇವಸಂಕಾಶನಾದ ನೀನು ಇಂತಹ ಕುತ್ಸಿತವಾದ ಕಾರ್ಯಮಾಡಿರುವುದು ನಿಶ್ಚಯವಾಗಿಯೂ ನಿಂದ್ಯವೇ ಸರಿ."

ಆ ಮಾತುಗಳಿಗೆ ಪಾಂಡುರಾಜನು ಏನು ತಾನೇ ಹೇಳಿಯಾನು? ನಿರುತ್ತರನಾಗಿ ನಿಂತು ಕೇಳುತ್ತಿದ್ದನು. ಜಿಂಕೆಯು ಮುಂದುವರಿದು ಹೇಳಿತು :

**ತ್ವಯಾ ನೃಶಂಸಕರ್ತಾರಃ ಪಾಪಾಚಾರಾಶ್ಚ ಮಾನವಾಃ ।**
**ನಿಗ್ರಾಹ್ಯಾಃ ಪಾರ್ಥಿವಶ್ರೇಷ್ಠ ತ್ರಿವರ್ಗಪರಿವರ್ಜಿತಾಃ ॥೨೪॥**

"ಪಾಂಡುರಾಜನೇ! ಕ್ರೂರಿಗಳಾಗಿರತಕ್ಕ, ಪಾಪಕರ್ಮವನ್ನೆಸಗುವ, ಧರ್ಮಾರ್ಥ-ಕಾಮಹೀನರಾದ ಮಾನವರನ್ನು ಶಿಕ್ಷಿಸುವುದು ನಿನ್ನ ಕರ್ತವ್ಯ. (ನೀನೇ ಇಂತಹ ಕೆಲಸ ಮಾಡುವುದೇ? )

ನಾನು ನಿನಗಾವ ಅಪರಾಧವನ್ನು ಮಾಡಿದೆನು? ಪಾಪರಹಿತನಾದ, ನಿಷ್ಕಳಂಕನಾದ ನನ್ನನ್ನು ಕೊಂದುಬಿಟ್ಟೆಯಲ್ಲವೇ? ಕಂದ-ಮೂಲ-ಫಲಗಳನ್ನೇ ತಿನ್ನುತ್ತಾ ಯಾರಿಗೂ ಯಾವ ವಿಧವಾದ ಹಿಂಸೆಯನ್ನೂ ಕೊಡದೇ ಜೀವಿಸುವ ಋಷಿಯು ನಾನು. ಸ್ವೇಚ್ಛೆಯಿಂದ ನಾನು ಮೃಗವೇಷವನ್ನು ಧರಿಸಿದ್ದೆನು. ಶಾಂತಿಪ್ರಿಯನಾದ ನಾನು ನನ್ನ ಪಾಡಿಗೆ ಅರಣ್ಯದಲ್ಲಿ ವಾಸ

ಮಾಡಿಕೊಂಡಿದ್ದೆನು. ಇಂತಹ ನನ್ನನ್ನು ನೀನು ಯಾವ ಕಾರಣದಿಂದಾಗಿ ಈ ವಿಧವಾದ ದಾರುಣಹಿಂಸೆಗೆ ಗುರಿಪಡಿಸಿದೆ? ಮಹಾರಾಜ! ನಿಷ್ಕಳಂಕನಾದ, ಪಾಪರಹಿತನಾದ ನನ್ನನ್ನು ಪತ್ನಿಯೊಡನೆ ಸಂತೋಷದಿಂದಿದ್ದ ಕಾಲದಲ್ಲಿ ಕಾರಣವಿಲ್ಲದೇ ಕೊಂದಿರುವೆಯಾದ್ದರಿಂದ ನಿನಗೆ ನಾನು ಶಾಪಕೊಡುವೆನು.

**ದ್ವಯೋರ್ನೃಶಂಸಕರ್ತಾರಮವಶಂ ಕಾಮಮೋಹಿತಮ್ ।**
**ಜೀವಿತಾನ್ತಕರೋ ಭಾವ ಏವಮೇವಾಗಮಿಷ್ಯತಿ ॥೨೭॥**

ನಾವಿಬ್ಬರೂ ಸುರತಕ್ರಿಯೆಯಲ್ಲಿ ಆಸಕ್ತರಾಗಿದ್ದಾಗ ಕಾಮವಶನಾದ, ನಿರ್ದಯನಾದ ನೀನು ನನ್ನನ್ನು ಕೊಂದೆಯಾದಕಾರಣ ನಿನಗೂ ಸಹ ಇಂತಹ ಸಂದರ್ಭದಲ್ಲಿಯೇ ಮೃತ್ಯುವು ಪ್ರಾಪ್ತವಾಗುತ್ತದೆ. ನೀನು ನಿನ್ನ ಪತ್ನಿಯೊಡನೆ ಸುರತಸುಖವನ್ನು ಅಪೇಕ್ಷಿಸಿದೊಡನೆಯೇ ನಿನ್ನನ್ನು ಮೃತ್ಯುವು ಅಪಹರಿಸುತ್ತದೆ.

ನನ್ನನ್ನು ಕಿಂದಮನೆಂದು ಕರೆಯುವರು. ನಾನೊಬ್ಬ ತಪಸ್ವಿಯು. ಮಾನವರ ಮಧ್ಯದಲ್ಲಿ ಸುರತಕಾರ್ಯಮಾಡಲು ನಾಚಿಕೆಪಟ್ಟು ಮೃಗರೂಪ ವನ್ನು ತಾಳಿ ಈ ಹೆಣ್ಣುಜಿಂಕೆಯೊಡನೆ ಸೇರಿದ್ದೆನು. ಜಿಂಕೆಯ ರೂಪದಲ್ಲಿ ನಿರ್ಭಯವಾಗಿ ಈ ಅರಣ್ಯವನ್ನೆಲ್ಲಾ ಸಂಚರಿಸುತ್ತಾ ಕಾಲಕಳೆಯುತ್ತಿದ್ದೆನು. ನಾನು ಬ್ರಾಹ್ಮಣನೆಂಬುದನ್ನು ತಿಳಿಯದೆಯೇ ನೀನು ನನ್ನನ್ನು ಕೊಂದಿರುವೆ ಯಾದ್ದರಿಂದ ಬ್ರಹ್ಮಹತ್ಯಾದೋಷವು ನಿನಗುಂಟಾಗುವುದಿಲ್ಲ. ಆದರೆ ಜಿಂಕೆಯ ರೂಪವನ್ನು ಧರಿಸಿ ಮೈಥುನಕ್ರಿಯೆಯಲ್ಲಿ ಆಸಕ್ತನಾಗಿದ್ದ ನನ್ನನ್ನು ವಿವೇಚನೆಯಿಲ್ಲದೇ ಕೊಂದದ್ದರಿಂದ ನನಗಿಂದು ಉಂಟಾಗಿರುವ ಸಂಕಟವೇ ನಿನಗೂ ಇಂತಹ ಸಮಯದಲ್ಲಿಯೇ ಪ್ರಾಪ್ತವಾಗುವುದು. ಕಾಮಮೋಹಿತ ನಾದ ನೀನು ಪ್ರಿಯೆಯೊಡನೆ ಸಮಾಗಮವನ್ನಪೇಕ್ಷಿಸಿ, ಅವಳ ಜೊತೆಯಲ್ಲಿ ಸೇರಿ ನನ್ನಂತೆಯೇ ಸುರತಸುಖವನ್ನನುಭವಿಸುವ ಸಮಯದಲ್ಲಿಯೇ ನೀನು ಪ್ರೇತಗಳ ಲೋಕಕ್ಕೆ ಹೋಗಬೇಕಾಗುತ್ತದೆ. ಅಂದು ನಿನ್ನನ್ನು ಸೇರುವ ನಿನ್ನ ಪತ್ನಿಯೂ ನಿನ್ನೊಡನೆಯೇ ಯಮಾಲಯವನ್ನು ಸ್ವೇಚ್ಛೆಯಿಂದ ಸೇರುವಳು. ನಾನು ಅತಿಸಂತೋಷದಲ್ಲಿದ್ದಾಗ ನೀನು ನನಗೆ ದುಃಖವನ್ನುಂಟು ಮಾಡಿರುವೆ. ಹಾಗೆಯೇ ನಿನಗೂ ಸ್ತ್ರೀಸುಖವನ್ನು ಅನುಭವಿಸಲು

ಯತ್ನಿಸಿದಾಗ ದಾರುಣವಾದ ಮರಣವು ಸಂಭವಿಸುವುದು.” ಇಷ್ಟು ಹೇಳಿ ಮೃಗರೂಪಧಾರಿಯಾದ ಮುನಿಯು ದುಃಖದಿಂದ ಪೀಡಿತನಾಗಿ ಮರಣ ಹೊಂದಿದನು. ಪಾಂಡುವೂ ಶೋಕಭರಿತನಾಗಿ ತನ್ನಾಶ್ರಮಕ್ಕೆ ಬಂದನು.

೧೧೮ನೆಯ ಅಧ್ಯಾಯವು ಮುಗಿಯಿತು.

೧೧೯ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಪಾಂಡುವಿನ ಅನುತಾಪ : ವಾನಪ್ರಸ್ಥಾಶ್ರಮಸ್ವೀಕಾರ

ಜನಮೇಜಯ! ಪಾಂಡುವು ಸತ್ತುಹೋದ ಮೃಗರೂಪನಾದ ಋಷಿಯನ್ನು ಅಲ್ಲಿಯೇ ಬಿಟ್ಟು ಆಶ್ರಮಕ್ಕೆ ಬಂದು, ಆಪ್ತಬಂಧುವೊಬ್ಬನನ್ನು ಕಳೆದುಕೊಂಡವನಂತೆಯೇ ತನ್ನ ಮಡದಿಯರೊಡನೆ ಶೋಕ-ದುಃಖಗಳಿಂದ ಪ್ರಲಾಪಮಾಡುತ್ತಿದ್ದನು. ಹೀಗೆಯೇ ದುಃಖಿಸುತ್ತಿರುವಾಗ ತನ್ನನ್ನೇ ತಾನು ಬಗೆ-ಬಗೆಯಾಗಿ ಹಳಿದುಕೊಂಡನು :

“ಅಯ್ಯೋ! ದುರಾತ್ಮರು ಸದ್ವಂಶದಲ್ಲಿ ಹುಟ್ಟಿದರೂ ಕಾಮಜಾಲ ದಿಂದ ಮೋಹಿತರಾಗಿ ಸ್ವಕರ್ಮಫಲಗಳಿಂದಲೇ ದುರ್ಗತಿಯನ್ನು ಹೊಂದು ವರು. ನನ್ನ ತಂದೆಯಾದರೋ ಮಹಾತ್ಮನಾದ ಶಾಂತನುವಿನ ಮಗನಾಗಿ ಹುಟ್ಟಿದರೂ ಕಾಮವಶನಾಗಿದ್ದುದರಿಂದ ಕ್ಷಯರೋಗಪೀಡಿತನಾಗಿ ತಾರುಣ್ಯ ದಲ್ಲಿಯೇ ಅಸುವನ್ನು ತೊರೆದನು. ಯದ್ಯಪಿ ನನ್ನ ಜನ್ಮದಾತರು ಮಹರ್ಷಿ ಗಳಾದ ಕೃಷ್ಣದ್ವೈಪಾಯನರೇ ಆದರೂ–ನನ್ನ ತಂದೆಯ ಕ್ಷೇತ್ರದಲ್ಲಿ (ಪತ್ನಿ ಯಲ್ಲಿ) ನಾನು ಹುಟ್ಟಿದೆನಾದ್ದರಿಂದ ಅವನಲ್ಲಿದ್ದ ದುರ್ಗುಣವು ನನಗೆ ಬಂದಿತು. ಕಾಮಮೋಹಿತನಾಗಿ ಬೇಟೆಯಾಡಲು ಜಿಂಕೆಗಳನ್ನು ಹುಡು ಕುತ್ತಾ ಅಲೆಯುತ್ತಿರುವುದೇ ನನ್ನ ದೈನಂದಿನಕ್ರಿಯೆಯಾಯಿತು. ಈ ಕಾರಣದಿಂದಲೇ ದೇವತೆಗಳೂ ನನ್ನನ್ನು ಆಪತ್ಕಾಲದಲ್ಲಿ ಋಷಿಯ ಶಾಪ ದಿಂದ ರಕ್ಷಿಸಲು ಮುಂದೆ ಬರಲಿಲ್ಲ. ಇನ್ನಾದರೂ ನಾನು ಮೋಕ್ಷಮಾರ್ಗ ವನ್ನು ಅನುಸರಿಸುವೆನು. ಪತ್ನೀ-ಪುತ್ರ-ಸುತಾಲಯಾದಿಗಳು ಸಂಸಾರದ ಬಂಧನಗಳು. ಸಂಸಾರಬಂಧನವೆಂಬುದೇ ಬಹಳ ದುಃಖದಾಯಕವಾದುದು. ನನ್ನ ಜನಕರಾದ ವೇದವ್ಯಾಸರು ಅನುಸರಿಸುತ್ತಿರುವ ಸದ್ವೃತ್ತಿಯನ್ನೇ ನಾನೂ

ಅನುಸರಿಸುವೆನು. ಬಹಳ ಶ್ರಮದಿಂದಲಾದರೂ ಪಂಚೇಂದ್ರಿಯಗಳನ್ನೂ ಜಯಿಸಿ, ತಪಶ್ಚರಣೆಯಲ್ಲಿ ನಿರತನಾಗುವೆನು. ಪತ್ನಿಯರನ್ನೂ ಬಂಧುಗಳನ್ನೂ ವಿಸರ್ಜಿಸಿ, ಮುಂಡನಮಾಡಿಸಿಕೊಂಡು, ಏಕಾಕಿಯಾಗಿ ಅರಣ್ಯದಲ್ಲಿದ್ದು ವನಸ್ಪತಿಗಳಿಂದ ಭಿಕ್ಷೆಯೆತ್ತಿ ಜೀವಿಸುವೆನು. ಪ್ರಿಯವಾದ ಮತ್ತು ಅಪ್ರಿಯ ವಾದ ವಸ್ತುಗಳೆಲ್ಲವನ್ನೂ ವರ್ಜಿಸಿ, ಭಸ್ಮವನ್ನು ಧಾರಣೆಮಾಡಿಕೊಂಡು



ಹಾಳುಬಿದ್ದಿರುವ ಮನೆಯಲ್ಲಾಗಲೀ–ಮರದ ನೆರಳಿನಲ್ಲಾಗಲೀ ವಾಸಿಸುವೆನು. ದುಃಖದಲ್ಲಿ ಅಳದೇ ಸುಖದಲ್ಲಿ ಸಂತೋಷಿಸದೇ, ನಿಂದಾ-ಸ್ತುತಿಗಳೆರಡನ್ನೂ ಪರಿಗಣಿಸದೆ ಕಾಲಕಳೆಯುವೆನು. ಯಾರಿಗೂ ನಮಸ್ಕಾರವನ್ನೂ ಮಾಡುವುದಿಲ್ಲ. ಯಾರಿಂದಲೂ ಆಶೀರ್ವಾದಗಳನ್ನೂ ಪಡೆಯುವುದಿಲ್ಲ.

ಸುಖ-ದುಃಖಗಳನ್ನು ಒಂದೇ ಎಂದು ಪರಿಗಣಿಸಿ, ಛತ್ರ-ಪಾದುಕೆಗಳನ್ನೂ ಪರಿತ್ಯಜಿಸುವೆನು. ನಾನು ಯಾರನ್ನೂ ಹಾಸ್ಯಮಾಡುವುದೂ ಇಲ್ಲ ; ಯಾರ ಮೇಲೂ ಕೋಪಿಸಿಕೊಳ್ಳುವುದೂ ಇಲ್ಲ. ಯಾವಾಗಲೂ ಸಂತೋಷದಿಂದಿರುತ್ತಾ ಸಕಲಪ್ರಾಣಿಗಳಿಗೂ ಹಿತವನ್ನೇ ಬಯಸುತ್ತಾ ಕಾಲಕಳೆಯುವೆನು. ಸ್ವೇದಜ, ಉದ್ಭಿಜ್ಜ, ಅಂಡಜ, ಜರಾಯುಜ–ಎಂಬ ನಾಲ್ಕು ವರ್ಗಗಳ ಪ್ರಾಣಿಗಳನ್ನೂ ಮತ್ತು ವನಸ್ಪತಿಗಳನ್ನೂ ಹಿಂಸಿಸದಿರುವುದು ಮಾತ್ರವಲ್ಲದೇ ಅವೆಲ್ಲವನ್ನೂ ನನ್ನ ಮಕ್ಕಳೆಂದೇ ಭಾವಿಸುವೆನು. ದಿನಕ್ಕೊಂದು ಬಾರಿ ಐದು ಅಥವಾ ಹತ್ತು ಮನೆಗಳಲ್ಲಿ ಮಾತ್ರ ಭಿಕ್ಷೆಬೇಡುವೆನು. ನನಗೆ ಭಿಕ್ಷೆಯು ಸಿಗದಿದ್ದರೆ ಅಂದು ಆಹಾರವಿಲ್ಲದೆಯೇ ಇರುವೆನು. ಒಂದೇ ತುತ್ತು ಸಿಕ್ಕಿದರೂ ಅಷ್ಟನ್ನೇ ತಿಂದು ಜೀವಿಸುವೆನೇ ಹೊರತು ಒಮ್ಮೆ ಹೋದ ಮನೆಗೆ ಪುನಃ ಪ್ರವೇಶಿಸುವುದಿಲ್ಲ. ಭಿಕ್ಷೆಯು ಸಿಕ್ಕಲಿ–ಸಿಗದಿರಲಿ ಮಹಾತಪಸ್ವಿಯ ರೀತಿಯಲ್ಲಿ ನಿಶ್ಚಿಂತನಾಗಿರುವೆನು. ಒಬ್ಬನು ನನ್ನ ಒಂದು ತೋಳನ್ನು ಕೊಡಲಿಯಿಂದ ಕಡಿದರೂ, ಮತ್ತೊಬ್ಬನು ನನ್ನ ಎರಡನೆಯ ತೋಳಿಗೆ ಗಂಧವನ್ನು ಲೇಪಿಸಿದರೂ–ಇಬ್ಬರೂ ನನ್ನ ದೃಷ್ಟಿಯಲ್ಲಿ ಸಮಾನರೆನಿಸುವರು. ಕೊಡಲಿಯಿಂದ ತೋಳನ್ನು ಕಡಿದವನಿಗೆ ಕಷ್ಟವನ್ನಾಗಲೀ–ಗಂಧವನ್ನು ಲೇಪಿಸಿದವನಿಗೆ ಸುಖವನ್ನಾಗಲೀ ಅಭಿಲಾಷಿಸೆನು. ಜೀವಿತದಿಂದ ಸಂತೋಷಪಡುವುದೂ ಇಲ್ಲ ; ಮರಣವೆಂಬುದನ್ನು ಯೋಚಿಸಿ ದುಃಖಿಸುವುದೂ ಇಲ್ಲ. ನಾನು ಜೀವಿಸಲೂ ಇಚ್ಛಿಸೆನು ; ಸಾಯಲೂ ಇಚ್ಛಿಸೆನು. ಸ್ವರ್ಗಪ್ರಾಪ್ತಿಗೆ ಉಕ್ತವಾಗಿರುವ ನಿತ್ಯ-ನೈಮಿತ್ತಿಕಾದಿ ಕರ್ಮಗಳನ್ನೂ ತ್ಯಜಿಸುವೆನು. ಸಂನ್ಯಾಸ ವ್ರತದಿಂದಿದ್ದು ಆತ್ಮದ ಪಾಪಗಳನ್ನು ತೊಳೆದು ಆನಂದಮಯವಾದ ಪರಮ ಪದವನ್ನು ಸೇರುವೆನು. ಪಾಪಗಳಿಂದಲೂ, ಪ್ರಾಪಂಚಿಕವ್ಯವಹಾರಗಳಿಂದಲೂ ವಿಮುಕ್ತನಾಗಿ, ಯಾರ ಅಧೀನಕ್ಕೂ ಒಳಪಡದೇ ವಾಯುದೇವನಂತೆ ಸ್ವತಂತ್ರನಾಗಿ ಬಾಳುವೆನು. ನಿರ್ಭಯವಾದ ಈ ಮಾರ್ಗವನ್ನು ಅನುಸರಿಸಿ ಸಿದ್ಧಿಯನ್ನು ಪಡೆದು, ಕಡೆಯಲ್ಲಿ ಪ್ರಾಣತ್ಯಾಗಮಾಡುವೆನು. ಶ್ರುತಿನಿಂದಿತವಾದ, ವೀರ್ಯಶೋಷಕವಾದ ಧರ್ಮವನ್ನು ಪರಿತ್ಯಜಿಸುವೆನು. ಪ್ರಾಪಂಚಿಕ ವ್ಯಸನಗಳಿಂದ ತುಂಬಿದ ಗೃಹಸ್ಥಧರ್ಮವನ್ನು ಮಾತ್ರ ಪುನಃ ಅವಲಂಬಿಸುವುದಿಲ್ಲ.

**ಸತ್ಕೃತೋಽಸತ್ಕೃತೋ ವಾಪಿ ಯೋಽನ್ಯಾಂ ಕೃಪಣಚಕ್ಷುಷಾ ।**
**ಉಪೈತಿ ವೃತ್ತಿಂ ಕಾಮಾತ್ಮಾ ಸ ಶುನಾಂ ವರ್ತತೇ ಪಥಿ ॥೨೭॥**

ಬೇರೆಯವರಿಂದ ಸತ್ಕೃತನಾಗಲೀ, ಅಸತ್ಕೃತನಾಗಲೀ–ಯಾವನು ಹೀನದೃಷ್ಟಿಯಿಂದ ಮತ್ತೊಂದು ರೀತಿಯ (ಸಂನ್ಯಾಸಿಗಳಿಗೆ ಯೋಗ್ಯವಲ್ಲದ) ನಡತೆಯನ್ನು ಅನುಸರಿಸುತ್ತಾನೆಯೋ–ಅಂತಹ ಕಾಮಾತ್ಮನು ನಾಯಿಗೆ ಸಮಾನನೆನಿಸುವನು."

ಹೀಗೆ ಹೇಳುತ್ತಿರುವ ರಾಜನಿಗೆ ದುಃಖಾತಿಶಯದಿಂದ ಉಸಿರಾಡು ವುದು ಕಷ್ಟವಾಯಿತು.

ಪತ್ನಿಯರ ಮುಖಗಳನ್ನು ನೋಡುತ್ತಾ ಪುನಃ ಹೇಳಿದನು :

"ನನ್ನ ತಾಯಿ, ವಿದುರ, ಧೃತರಾಷ್ಟ್ರ, ಸತ್ಯವತೀ, ಭೀಷ್ಮ, ಪುರೋ ಹಿತರು, ನಮ್ಮನ್ನೇ ಆಶ್ರಯಿಸಿರುವ ಭೃತ್ಯರು, ಪ್ರಜೆಗಳು–ಇವರೆಲ್ಲರಿಗೂ 'ಪಾಂಡುವು ಸರ್ವಸಂಗಪರಿತ್ಯಾಗಮಾಡಿ ಸಂನ್ಯಾಸವನ್ನು ಸ್ವೀಕರಿಸಿ ಹೊರಟುಹೋದನು'–ಎಂಬ ವಾರ್ತೆಯು ತಿಳಿಸಲ್ಪಡಲಿ."

ಅದನ್ನು ಕೇಳಿ ಕುಂತೀ-ಮಾದ್ರಿಯರಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ. "ಮಹಾರಾಜ!" ಎಂದರು ; ಮುಂದೆ ಮಾತು ಹೊರಡಲಿಲ್ಲ. ಕೆಲವು ಕ್ಷಣಗಳನಂತರ ಗದ್ಗದಸ್ವರದಿಂದ ಹೇಳಿದರು :

**ಅನ್ಯೇಽಪಿ ಹ್ಯಾಶ್ರಮಾಃ ಸನ್ತಿ ಯೇ ಶಕ್ಯಾ ಭರತರ್ಷಭ ।**
**ಆವಾಭ್ಯಾಂ ಧರ್ಮಪತ್ನೀಭ್ಯಾಂ ಸಹ ತಪ್ತುಂ ತಪೋ ಮಹತ್ ॥೨೮॥**

**ಶರೀರಸ್ಯಾಪಿ ಮೋಕ್ಷಾಯ ಸ್ವರ್ಗ್ಯಂ ಪ್ರಾಪ್ಯ ಮಹಾಫಲಮ್ ।**
**ತ್ವಮೇವ ಭವಿತಾ ಭರ್ತಾ ಸ್ವರ್ಗಸ್ಯಾಪಿ ನ ಸಂಶಯಃ ॥೨೯॥**

**ಪ್ರಣಿಧಾಯೇನ್ದ್ರಿಯಗ್ರಾಮಂ ಭರ್ತೃಲೋಕಪರಾಯಣೇ ।**
**ತ್ಯಕ್ತಕಾಮಸುಖೇ ಹ್ಯಾವಾಂ ತಪ್ಸ್ಯಾವೋ ವಿಪುಲಂ ತಪಃ ॥೩೦॥**
**ಯದಿ ಚಾವಾಂ ಮಹಾಪ್ರಾಜ್ಞ ತ್ಯಕ್ಷ್ಯಸಿ ತ್ವಂ ವಿಶಾಮ್ಪತೇ ।**
**ಅದ್ಯೈವಾವಾಂ ಪ್ರಹಾಸ್ಯಾವೋ ಜೀವಿತಂ ನಾತ್ರ ಸಂಶಯಃ ॥೩೧॥**

"ತಪಶ್ಚರಣೆಯನ್ನು ಮಾಡಲು ಇನ್ನೂ ಅನೇಕಮಾರ್ಗಗಳಿವೆ, ಮಹಾ

ರಾಜ! ಸಂನ್ಯಾಸವನ್ನೇ ಸ್ವೀಕರಿಸಬೇಕಾಗಿಲ್ಲ. ಸಪತ್ನೀಕನಾಗಿದ್ದುಕೊಂಡೇ ಮಹಾತಪಸ್ಸನ್ನು ಮಾಡಿ ಉತ್ತಮಲೋಕಗಳನ್ನು ಪಡೆಯಬಹುದು ಅಥವಾ ತ್ರೈಲೋಕ್ಯಾಧಿಪತ್ಯವನ್ನಾದರೂ ಪಡೆಯಬಹುದು. ನಾವೂ ನಮ್ಮ ಪತಿ ದೇವನ ಜೊತೆಯಲ್ಲೇ ಜಿತೇಂದ್ರಿಯರಾಗಿದ್ದುಕೊಂಡು ಸುಖಲೋಲುಪತೆ ಯನ್ನು ದೂರಮಾಡಿ ತಪಸ್ಸುಮಾಡುವೆವು. ಅದು ಹೊರತಾಗಿ ನೀನೇನಾ ದರೂ ನಮ್ಮನ್ನು ಪರಿತ್ಯಜಿಸಿ ಸಂನ್ಯಾಸವನ್ನು ಸ್ವೀಕರಿಸಿದರೆ ನಾವು ಈ ಕೂಡಲೇ ಪ್ರಾಣತ್ಯಾಗಮಾಡುವೆವು. ಇದು ನಿಶ್ಚಯ."

ಪತ್ನಿಯರ ಮಾತನ್ನು ಕೇಳಿದೊಡನೆಯೇ ಪಾಂಡುವಿನ ಮನಸ್ಸು ಸ್ವಲ್ಪ ಬದಲಾಯಿಸಿತು. "ಧರ್ಮಸಮ್ಮತವಾದ ರೀತಿಯಲ್ಲಿ ನಿಮ್ಮ ನಿಶ್ಚಯ ವಿರುವುದಾದರೆ, ನಿಮ್ಮೊಡನೆಯೇ ತಪಶ್ಚರಣೆಮಾಡಿ, ಅವ್ಯಯವಾದ ಲೋಕ ಗಳನ್ನು ಪಡೆಯುವೆನು. ನಗರದ ಸುಖೋಪಭೋಗಗಳನ್ನು ದೂರಮಾಡಿ, ವಲ್ಕಲಧರನಾಗಿ, ಕಂದ-ಮೂಲಾದಿಗಳನ್ನು ತಿನ್ನುತ್ತಾ, ಬಹಳ ಘೋರವಾದ ತಪಸ್ಸನ್ನು ಮಾಡುವೆನು. ಪ್ರಾತಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಸ್ನಾನಮಾಡಿ ಹೋಮ-ಹವನಾದಿಗಳನ್ನೂ ಮಾಡುವೆನು. ಅಲ್ಪಾಹಾರವನ್ನು ತೆಗೆದುಕೊಳ್ಳುತ್ತಾ ನನ್ನೀ ದೇಹವನ್ನು ಕೃಶಮಾಡುವೆನು. ಜಟಾಧಾರಿಯಾಗಿ ಕೃಷ್ಣಾಜಿನವನ್ನು ಹೊದೆಯುವೆನು. ಶರೀರವನ್ನು ಬಿಸಿಲು-ಮಳೆಗಳಿಗೆ ಮರೆಮಾಡದೇ, ಹಸಿವು-ಬಾಯಾರಿಕೆಗಳನ್ನು ಲಕ್ಷಿಸದೇ, ತೀಕ್ಷ್ಣವಾದ ತಪಶ್ಚರಣೆಗಳಿಂದ ಸವೆಸುವೆನು. ಏಕಾಂತದಲ್ಲಿದ್ದುಕೊಂಡು ಧ್ಯಾನಮಾಡು ವೆನು. ಹಣ್ಣಾಗಲೀ, ಕಾಯಾಗಲೀ, ರುಚಿಯಿರಲಿ, ಇಲ್ಲದಿರಲಿ—ವಿವೇಚನೆ ಮಾಡದೇ ತಿನ್ನುವೆನು. ದೇವ-ಪಿತೃಗಳನ್ನು ಮಂತ್ರಗಳಿಂದಲೂ, ಅಭಿಷೇಕ-ತರ್ಪಣಗಳಿಂದಲೂ, ಕಾಡಿನಲ್ಲಿ ಸಿಕ್ಕುವ ಹಣ್ಣುಗಳಿಂದಲೂ ತೃಪ್ತಿಪಡಿಸು ವೆನು. ಅರಣ್ಯದಲ್ಲಿರುವ ಪ್ರಾಣಿಗಳನ್ನಾಗಲೀ, ಮನುಷ್ಯರನ್ನಾಗಲೀ, ನಗರ ದಲ್ಲಿರುವ ನನ್ನ ಕುಲಬಾಂಧವರನ್ನಾಗಲೀ ನೋಡಲು ಹೋಗುವುದಿಲ್ಲ. ಅವರಿಗೆ ಯಾವ ವಿಧವಾದ ತೊಂದರೆಯನ್ನೂ ಕೊಡುವುದಿಲ್ಲ. ನಿಮ್ಮ ಇಚ್ಛೆ ಯಂತೆಯೇ ನನ್ನ ಜೀವನದ ಅಂತ್ಯದವರೆಗೂ ವಾನಪ್ರಸ್ಥಾಶ್ರಮಯೋಗ್ಯವಾದ ಕರ್ಮಗಳನ್ನೇ ಆಚರಿಸುತ್ತಾ ಕಾಲಕಳೆಯುವೆನು."

ಹೀಗೆ ಪಾಂಡುವು ಕುಂತೀ-ಮಾದ್ರಿಯರಿಗೆ ಹೇಳಿ ಸಂತೈಸಿ, ತನ್ನ

ಶಿರೋಭೂಷಣವನ್ನೂ, ವಕ್ಷಃಸ್ಥಳದ ಭೂಷಣವನ್ನೂ, ಭುಜಕೀರ್ತಿಗಳನ್ನೂ, ಕುಂಡಲಗಳನ್ನೂ ಮತ್ತು ಕುಂತೀ-ಮಾದ್ರಿಯರ ಅಮೋಘವಾದ ರತ್ನಾ ಭರಣಗಳನ್ನೂ ಬ್ರಾಹ್ಮಣರಿಗೆ ದಾನಮಾಡಿ, "ಪಾಂಡುವು ದೇಶ-ಕೋಶಾದಿ



ಗಳನ್ನೂ, ಅರ್ಥ, ಕಾಮ, ಸುಖ, ರತಿ–ಎಲ್ಲವನ್ನೂ ಪರಿತ್ಯಜಿಸಿ, ನಿರಂತ ರಾರಣ್ಯವಾಸಕ್ಕೆ ಪತ್ನಿಯರೊಡನೆ ಹೊರಟುಹೋದನೆಂದು ಹಾಸ್ತಿನಪುರದಲ್ಲಿ ಸಾರಿರಿ"–ಎಂದು ಸೇವಕರಿಗೆ ಹೇಳಿದನು. ಪಾಂಡುವಿನಿಂದ ಹಾಸ್ತಿನಪುರಕ್ಕೆ ಹೋಗಲು ಆಜ್ಞಪ್ತರಾದ ಸೇವಕರೂ ಮತ್ತು ಪರಿಚಾರಕರೂ ಪಾಂಡುರಾಜನ ಅನೇಕವಿಧವಾದ ದೈನ್ಯೋಕ್ತಿಗಳನ್ನು ಕೇಳಿ–"ಅಯ್ಯೋ! ಧೀಮಂತನಾದ

ಪಾಂಡುರಾಜನನ್ನು ಬಿಟ್ಟು ನಾವು ಹೇಗೆತಾನೇ ಹಾಸ್ತಿನಪುರಕ್ಕೆ ಹೋಗೋಣ?"–ಎಂಬುದಾಗಿ ಹೇಳಿಕೊಳ್ಳುತ್ತಾ ಗಟ್ಟಿಯಾಗಿ ಅಳತೊಡಗಿದರು. ಧಾರಾಕಾರವಾದ. ಅತ್ಯುಷ್ಣವಾದ ಕಂಬನಿಗಳನ್ನು ಸುರಿಸಿದರು. ಆದರೂ ಪಾಂಡುವಿನ ಆಜ್ಞೆಯಂತೆ ಅವರು ಹಾಸ್ತಿನಪುರಕ್ಕೆ ಹೋಗಲೇ ಬೇಕಾಯಿತು. ಪಾಂಡುವು ಕೊಟ್ಟಿದ್ದ ಧನ-ಕನಕ-ವಸ್ತುಗಳನ್ನು ಹೊತ್ತುಕೊಂಡು ಭಾರವಾದ ಹೃದಯಗಳಿಂದ ಹಾಸ್ತಿನಪುರಕ್ಕೆ ಬಂದು, ಧೃತರಾಷ್ಟ್ರನಿಗೆ ಸಕಲವನ್ನೂ ವಿವರಿಸಿ ಹೇಳಿ, ಆಭರಣಗಳೆಲ್ಲವನ್ನೂ ಧೃತರಾಷ್ಟ್ರನಿಗೆ ಒಪ್ಪಿಸಿದರು. ಧೃತರಾಷ್ಟ್ರನೂ ಶೋಕಾವಿಷ್ಟನಾದನು. ಅನೇಕ ದಿನಗಳವರೆಗೆ ತಮ್ಮನ ಅಗಲುವಿಕೆಯಿಂದ ಅನ್ನಾಹಾರಗಳನ್ನೂ ತೆಗೆದುಕೊಳ್ಳದೇ ದುಃಖದಿಂದಲೇ ಕಾಲಕಳೆದನು.

ಪಾಂಡುವು ಪರಿವಾರದವರೆಲ್ಲರನ್ನೂ ಕಳುಹಿಸಿದನಂತರ ಇಬ್ಬರು ಪತ್ನಿಯರೊಡನೆ, ಕಂದ-ಮೂಲಾಶನನಾಗಿ, ನಾಗಶತಪರ್ವತವನ್ನು ಸೇರಿದನು. ಅನಂತರ ಚೈತ್ರರಥವೆಂಬ ವನವನ್ನು ಸೇರಿ ಮುಂದೆ ಕಾಲಕೂಟಕ್ಕೆ ನಡೆದುಹೋದನು. ಕಟ್ಟಕಡೆಗೆ ಹಿಮವತ್ಪರ್ವತವನ್ನೂ ದಾಟಿ, ಸಿದ್ಧ-ಚಾರಣರಿಗೆ ಆಶ್ರಯಸ್ಥಾನವಾದ ಗಂಧಮಾದನಪರ್ವತವನ್ನು ಸೇರಿ, ಅಲ್ಲಿ ಅನೇಕಕಾಲ ತಪಶ್ಚರಣೆಯನ್ನು ಮಾಡಿದನು. ಅನಂತರ ಇಂದ್ರದ್ಯುಮ್ನ ಸರೋವರವನ್ನು ಸೇರಿ ಹಂಸಕೂಟವೆಂಬ ಪರ್ವತಶ್ರೇಣಿಯನ್ನು ದಾಟಿ, ಶತಶೃಂಗವೆಂಬ ಪರ್ವತದ ತಪ್ಪಲಿಗೆ ಹೋಗಿ, ಅಲ್ಲಿ ಅತಿಕಠಿನವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು.

೧೧೯ನೆಯ ಅಧ್ಯಾಯವು ಮುಗಿಯಿತು.

೧೨೦ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಪಾಂಡುವಿನ ಪುತ್ರಾಪೇಕ್ಷೆ : ಕುಂತಿಯೊಡನೆ ಸಮಾಲೋಚನೆ

ಪಾಂಡುವು ಸರ್ವದಾ ತಪಶ್ಚರಣೆಯಲ್ಲಿಯೇ ನಿಮಗ್ನನಾಗಿದ್ದನು. ಕೆಲವೇ ದಿನಗಳಲ್ಲಿ ಶತಶೃಂಗಪರ್ವತದಲ್ಲಿದ್ದ ಸಿದ್ಧ-ಚಾರಣರ ಪ್ರೀತಿಗೂ ಪಾತ್ರನಾದನು. ಗುರುಶುಶ್ರೂಷೆಮಾಡುತ್ತಾ, ಅಹಂಕಾರವನ್ನು ಪರಿತ್ಯಜಿಸಿ

ದವನಾಗಿ, ಜಿತೇಂದ್ರಿಯನಾಗಿ, ಆತ್ಮಸಂಯಮದಿಂದ ಸಶರೀರನಾಗಿಯೇ ಸ್ವರ್ಗಕ್ಕೆ ಹೋಗುವ ಶಕ್ತಿಯನ್ನೂ ಗಳಿಸಿದನು. ಆ ಆಶ್ರಮದಲ್ಲಿ ಕೆಲವರು ಋಷಿಗಳು ಪಾಂಡುವನ್ನು ಸಹೋದರನೆಂದೂ, ಕೆಲವರು ಗೆಳೆಯನೆಂದೂ, ವೃದ್ಧರಾದ ಕೆಲವು ಋಷಿಗಳು ಮಗನೆಂದೂ ಭಾವಿಸಿದ್ದರು. ಪಾಂಡುವನ್ನು ಪ್ರೀತಿಸದವರೇ ಆ ಆಶ್ರಮದಲ್ಲಿರಲಿಲ್ಲ. ಪಾಂಡುವು ಕ್ಷತ್ರಿಯನಾಗಿದ್ದರೂ ಅನೇಕ ವರ್ಷಗಳ ಕಾಲ ಆಚರಿಸಿದ ಕಠಿನತಪಸ್ಸಿನಿಂದ ಬ್ರಹ್ಮರ್ಷಿಯಂತೆಯೇ ವಿರಾಜಿಸಿದನು.

ಒಂದು ಅಮಾವಾಸ್ಯೆಯ ದಿನ ಆಶ್ರಮದಲ್ಲಿದ್ದ ಋಷಿ-ಮಹರ್ಷಿಗಳೆಲ್ಲರೂ ಸೇರಿ ಬ್ರಹ್ಮನನ್ನು ನೋಡಲು ನಿಶ್ಚಯಿಸಿ ಪ್ರಯಾಣಸನ್ನದ್ಧರಾದರು. ಉತ್ತರಾಭಿಮುಖವಾಗಿ ಪ್ರಯಾಣಹೊರಟಿದ್ದ ಋಷಿಸ್ತೋಮವನ್ನು ಕಂಡು ಪಾಂಡುವು ನಮಸ್ಕರಿಸಿ– 'ಎಲ್ಲಿಗೆ ಹೊರಟಿರುವಿರಿ?'–ಎಂದು ವಿನೀತನಾಗಿ ಕೇಳಿದನು.

"ಇಂದು ಬ್ರಹ್ಮನ ಆಸ್ಥಾನದಲ್ಲಿ ದೇವತೆಗಳೂ, ಮಹರ್ಷಿಗಳೂ, ಪಿತೃದೇವತೆಗಳೂ ಎಲ್ಲರೂ ಸೇರಿರುವರು. ನಾವೆಲ್ಲರೂ ಬ್ರಹ್ಮನನ್ನು ನೋಡುವ ಆಕಾಂಕ್ಷೆಯಿಂದ ಅಲ್ಲಿಗೆ ಹೊರಟಿರುವೆವು"–ಎಂದು ವೃದ್ಧ ತಪಸ್ವಿಗಳೊಬ್ಬರು ಉತ್ತರವಿತ್ತರು.

ಪಾಂಡುವೂ ಸಹ ಬ್ರಹ್ಮನ ಸಭೆಯನ್ನು ನೋಡಲು ಅಭಿಲಾಷಿಸಿ ಪತ್ನಿಯರೊಡನೆ ಶತಶೃಂಗಪರ್ವತದಿಂದ ಉತ್ತರಾಭಿಮುಖವಾಗಿ ಋಷಿಸ್ತೋಮವನ್ನು ಹಿಂಬಾಲಿಸಿ ಹೊರಟನು. ಪತ್ನಿಯರೊಡನೆ ಬರುತ್ತಿರುವ ಪಾಂಡುವನ್ನು ನೋಡಿ, ಉತ್ತರಾಭಿಮುಖವಾಗಿ ಮೇಲು-ಮೇಲಕ್ಕೆ ಪ್ರಯಾಣಮಾಡುತ್ತಿದ್ದ ಮಹರ್ಷಿಗಳು ಅವನನ್ನು ಕುರಿತು ಹೇಳಿದರು : "ನಮ್ಮೀ ಉತ್ತರದಿಕ್ಕಿನ ಪ್ರಯಾಣದಲ್ಲಿ ಪರ್ವತಾರೋಹಣಮಾಡುವಾಗ ಮಾನವರಿಗೆ ದಾಟಲು ಅಸಾಧ್ಯವಾದ ಅನೇಕ ದುರ್ಗ-ದರಿಗಳನ್ನು ಕಾಣುತ್ತಿದ್ದೇವೆ. ಮತ್ತೊಂದೆಡೆಯಲ್ಲಿ ನೂರಾರು ದೇವಸೌಧಗಳಿಂದ ದೇವಗಾನವನ್ನು ಕೇಳುತ್ತಿದ್ದೇವೆ. ದೇವತೆಗಳ, ಗಂಧರ್ವಾಪ್ಸರೆಯರ ವಿಹಾರಗಳ ಬಯಲು

ಪ್ರದೇಶಗಳನ್ನು ಕಾಣುತ್ತಿದ್ದೇವೆ. ಕುಬೇರನ ಉದ್ಯಾನವನಗಳು ಸಮತಟ್ಟಿನಲ್ಲಿಯೂ ಹಳ್ಳ-ದಿಣ್ಣೆಗಳಲ್ಲಿಯೂ ಪ್ರಸರಿತವಾಗಿವೆ. ಮಹಾನದೀನಿತಂಬಗಳೂ, ಗಹನವಾದ ಪರ್ವತದ ಗಹ್ವರಗಳೂ ಅಲ್ಲಲ್ಲಿ ಕಾಣುತ್ತಿವೆ. ಇನ್ನೂ ಮೇಲೆ ಹೋಗುತ್ತಿದ್ದಂತೆಲ್ಲಾ ಸಂಪೂರ್ಣವಾಗಿ ಮಂಜುಕವಿದಿರುವುದೇ ಹೊರತು ಯಾವ ವಿಧವಾದ ವೃಕ್ಷಗಳೂ ಮೃಗ-ಪಕ್ಷಿಗಳೂ ಇರುವುದಿಲ್ಲ. ದಾಟಲು ಅಸಾಧ್ಯವಾದ ದುರ್ಗಮವಾದ ದರಿಗಳಿವೆ. ಅವುಗಳನ್ನು ಪಕ್ಷಿಗಳು ಕೂಡ ದಾಟಲಾರವು. ಹೀಗಿರುವಾಗ ಮಾನವರಿಗೆ ದಾಟಲು ಹೇಗೆತಾನೇ ಸಾಧ್ಯವಾದೀತು? ಅಲ್ಲಿಗೆ ಪ್ರವೇಶಿಸಲು ವಾಯುವಿಗೆ, ತಪೋನಿಷ್ಠರಾದ ಮಹರ್ಷಿಗಳಿಗೆ ಮತ್ತು ಸಿದ್ಧ-ಚಾರಣರಿಗೆ ಮಾತ್ರವೇ ಸಾಧ್ಯವಿದೆ. ಇಂತಹ ದುರ್ಗಮ ಪ್ರದೇಶವನ್ನು ಕೋಮಲಾಂಗಿಯರಾದ ಈ ರಾಜಕುಮಾರಿಯರು ಹೇಗೆ ದಾಟುವರು? ಯಾತನೆಯೆಂದರೆ ಏನೆಂಬುದನ್ನೇ ತಿಳಿಯದ ಇವರು ಪರ್ವತಾರೋಹಣದಿಂದುಂಟಾಗುವ ಸಂಕಟದಿಂದ ಕೆಳಗೆ ಬೀಳದಿರುವರೇ? ರಾಜಕುಮಾರಿಯರಾದ ಇವರು ಇಂತಹ ದಾರುಣವಾದ ದುಃಖವನ್ನನುಭವಿಸಲು ಅರ್ಹರಾಗುವುದಿಲ್ಲ. ಆದುದರಿಂದ ನೀನು ಪತ್ನೀಸಮೇತನಾಗಿ ನಮ್ಮನ್ನು ಅನುಸರಿಸಿ ಬರಬೇಡ."

ಪಾಂಡುವು ಮಹರ್ಷಿಗಳಿಗೆ ಹೇಳಿದನು :

ಅಪ್ರಜಸ್ಯ ಮಹಾಭಾಗಾ ನ ದ್ವಾರಂ ಪರಿಚಕ್ಷತೇ ।
ಸ್ವರ್ಗೇ ತೇನಾಭಿತಪ್ತೋಽಹಮಪ್ರಜಸ್ತು ಬ್ರವೀಮಿ ವಃ ।
ಪಿತ್ರ್ಯಾದೃಣಾದನಿರ್ಮುಕ್ತಸ್ತೇನ ತಪ್ಯೇ ತಪೋಧನಾಃ ॥೧೬॥

ದೇಹನಾಶೇ ಧ್ರುವೋ ನಾಶಃ ಪಿತೄಣಾಮೇಷ ನಿಶ್ಚಯಃ ।
ಋಣೈಶ್ಚತುರ್ಭಿಃ ಸಂಯುಕ್ತಾ ಜಾಯನ್ತೇ ಮಾನವಾ ಭುವಿ ॥೧೭॥

ಪಿತೃದೇವರ್ಷಿಮನುಜೈರ್ದೇಯಂ ತೇಭ್ಯಶ್ಚ ಧರ್ಮತಃ ।
ಏತಾನಿ ತು ಯಥಾಕಾಲಂ ಯೋ ನ ಬುಧ್ಯತಿ ಮಾನವಃ ॥೧೮॥

ನ ತಸ್ಯ ಲೋಕಾಃ ಸನ್ತೀತಿ ಧರ್ಮವಿದ್ಭಿಃ ಪ್ರತಿಷ್ಠಿತಮ್ ॥೧೯॥

"ಮಹಾಭಾಗರೇ! ತಾವು ಹೇಳುವುದು ನಿಶ್ಚಯ. ಮಕ್ಕಳಿಲ್ಲದವ

ರಿಗೆ ಸ್ವರ್ಗಪ್ರವೇಶವು ಹೇಗೆ ತಾನೇ ಲಭಿಸೀತು? ನಾನು ಅಪುತ್ರವಂತ ನಾಗಿರುವೆನು. ಮಹರ್ಷಿಗಳೇ! ನಾನು ಬಹಳ ದುಃಖದಿಂದ ಹೇಳುವೆನು. ದಯೆಯಿಟ್ಟು ಲಾಲಿಸಿರಿ. ನಾನು ಪಿತೃಋಣವನ್ನು ತೀರಿಸದಿರುವುದೇ ನನ್ನ ಇಂದಿನ ದುಃಖಕ್ಕೆ ಕಾರಣವಾಗಿದೆ. ನಾನು ಅಪುತ್ರವಂತನಾಗಿ ಪ್ರಾಣತ್ಯಾಗ ಮಾಡಿದರೆ ನನ್ನ ಪಿತೃವರ್ಗದವರೆಲ್ಲರೂ ವಿನಾಶಹೊಂದುವರು. ಅವರಿಗೆ ಸದ್ಗತಿಯು ಸಿಕ್ಕಲಾರದು. ಮಾನವನು ನಾಲ್ಕು ಋಣಗಳನ್ನು ಹೊತ್ತು ಹುಟ್ಟುವನು. ಪಿತೃಋಣ, ದೇವಋಣ, ಋಷಿಋಣ ಮತ್ತು ಮಾನವ ಋಣ–ಇವೇ ಆ ನಾಲ್ಕು ಋಣಗಳು. ಇವುಗಳನ್ನು ತೀರಿಸುವುದು ಮಾನವನ ಮುಖ್ಯ ಕರ್ತವ್ಯ. ನಾಲ್ಕು ಋಣಗಳನ್ನು ಸಕಾಲದಲ್ಲಿ ತೀರಿಸದಿದ್ದರೆ ಅವನಿಗೆ ಒಳ್ಳೆಯ ಲೋಕಗಳು ಲಭಿಸುವುದಿಲ್ಲವೆಂದು ಧರ್ಮಜ್ಞರು ಹೇಳುತ್ತಾರೆ.

**ಯಜ್ಞೈಸ್ತು ದೇವಾನ್ಪ್ರೀಣಾತಿ ಸ್ವಾಧ್ಯಾಯತಪಸಾ ಮುನೀನ್ ।**
**ಪುತ್ರೈಃ ಶ್ರಾದ್ಧೈಃ ಪಿತೄಂಶ್ಚಾಪಿ ಆನೃಶಂಸ್ಯೇನ ಮಾನವಾನ್ ।**
**ಋಷಿದೇವಮನುಷ್ಯಾಣಾಂ ಪರಿಮುಕ್ತೋಽಸ್ಮಿ ಧರ್ಮತಃ ॥೨೦॥**

ಯಜ್ಞ-ಯಾಗಾದಿಗಳನ್ನೂ, ಹೋಮ-ಹವನಗಳನ್ನೂ, ಮಾಡಿ ದೇವಋಣವನ್ನು ತೀರಿಸಬೇಕು. ಅಧ್ಯಯನ-ಅಧ್ಯಾಪನಗಳನ್ನೂ, ತಪಸ್ಸನ್ನೂ ಮಾಡಿ ಋಷಿಋಣವನ್ನು ತೀರಿಸಬೇಕು. ಮಕ್ಕಳನ್ನು ಪಡೆದು ಪಿತೃದೇವತೆಗಳಿಗೆ ಶ್ರಾದ್ಧಾದಿಗಳನ್ನು ಮಾಡಿ ಪಿತೃಋಣವನ್ನು ತೀರಿಸಬೇಕು. ಪ್ರಾಣಿಮಾತ್ರಕ್ಕೆ ಸ್ವಲ್ಪವಾದರೂ ತೊಂದರೆಯನ್ನು ಕೊಡದೇ ಭೂತದಯೆಯಿಂದ ಜೀವಿಸುತ್ತಾ ಮಾನವರ ಋಣವನ್ನು ತೀರಿಸಬೇಕು. ನಾನು ಋಷಿ-ದೇವ-ಮನುಷ್ಯರ ಋಣಗಳಿಂದ ಮುಕ್ತನಾಗಿದ್ದೇನೆ. ಆದರೆ ಪಿತೃಋಣದಿಂದ ಮಾತ್ರ ಮುಕ್ತನಾಗಿರುವುದಿಲ್ಲ. ಇದರಿಂದ ನಾನು ಬಹಳ ವಾಗಿ ಪರಿತಪಿಸುತ್ತಿದ್ದೇನೆ. ಮಾನವನು ಪುತ್ರವಂತನಾದರೆ ಪಿತೃಋಣದಿಂದ ಪಾರಾಗುವನು. ಮಕ್ಕಳನ್ನು ಪಡೆದು ಪಿತೃಋಣವನ್ನು ತೀರಿಸುವುದಕ್ಕಾ ಗಿಯೇ ಅನೇಕ ಮಹಾತ್ಮರು ಯತ್ನಿಸುವರು. ನಾನು ತಂದೆಯ ಕ್ಷೇತ್ರ ದಲ್ಲಿ ಮಹರ್ಷಿಯಿಂದ ಹುಟ್ಟಿ ನಮ್ಮ ತಂದೆಯು ಪುತ್ರವಂತನಾದಂತೆ–ನನ್ನ

ಕ್ಷೇತ್ರದಲ್ಲಿ ಮಕ್ಕಳಾಗಿ ನಾನು ಪುತ್ರವಂತನಾಗುವ ಯೋಗವಿದೆಯೇ? ದಯಮಾಡಿ ತಿಳಿಸಿರಿ."

"ನರವ್ಯಾಘ್ರನೇ! ನಿನಗೆ ಖಂಡಿತವಾಗಿಯೂ ಸಂತಾನಪ್ರಾಪ್ತಿಯ ಯೋಗವಿದೆ. ನಿಷ್ಕಳಂಕವಾದ, ಸಕಲಸುಯೋಗಗಳಿಂದ ಕೂಡಿದ, ದೇವ ಸದೃಶವಾದ ಸಂತಾನವು ಲಭಿಸುವುದು. ಇದನ್ನು ನಾವು ಜ್ಞಾನದೃಷ್ಟಿಯಿಂದ ನೋಡಿ ಹೇಳುತ್ತಿದ್ದೇವೆ. ದೈವವು ತೋರಿದ ಮಾರ್ಗದಲ್ಲಿ ಕಾರ್ಯಮಾಡು.

**ಅಕ್ಲಿಷ್ಟಂ ಫಲಮವ್ಯಗ್ರೋ ವಿನ್ದತೇ ಬುದ್ಧಿಮಾನ್ನರಃ ।**
**ತಸ್ಮಿನ್ದೃಷ್ಟೇ ಫಲೇ ರಾಜನ್ಪ್ರಯತ್ನಂ ಕರ್ತುಮರ್ಹಸಿ ।**
**ಅಪತ್ಯಂ ಗುಣಸಮ್ಪನ್ನಂ ಲಬ್ಧ್ವಾ ಪ್ರೀತಿಕರಂ ಹ್ಯಸಿ ॥೨೫॥**

ಬುದ್ಧಿವಂತನಾದ ಮನುಷ್ಯನು ವ್ಯಗ್ರತೆಯನ್ನು ಬಿಟ್ಟು ಕ್ಲೇಶವಿಲ್ಲದೇ ಅಭೀಷ್ಟವಾದ ಫಲವನ್ನು ಹೊಂದಲು ಸಾಧ್ಯವಿದೆ. ಆದುದರಿಂದ ಫಲ ವುಂಟೆಂದು ನಿಶ್ಚಯವಾದ ಮೇಲೆ ನೀನು ಫಲವನ್ನು ಹೊಂದಲು ಕಾರ್ಯ ಮಾಡುವುದು ಯುಕ್ತವಾಗಿದೆ. ನೀನು ನಿಶ್ಚಯವಾಗಿಯೂ ಸಪುತ್ರವಂತ ನಾಗುವುದರಲ್ಲಿ ಸಂಶಯವಿಲ್ಲ." ಹೀಗೆಂದು ಹೇಳಿ ಮಹರ್ಷಿಗಳು ಪತ್ನೀಸಮೇತನಾದ ಪಾಂಡುವನ್ನು ಅಲ್ಲಿಯೇ ಬಿಟ್ಟು ಮುಂದೆ ತೆರಳಿದರು.

ಪಾಂಡುವಿಗೆ ಮಹರ್ಷಿಗಳು ಹೇಳಿದಂತೆ ಸಂತಾನಪ್ರಾಪ್ತಿಯ ಯೋಗ ವಿದೆ. ಆದರೆ ಋಷಿಯ ಶಾಪದ ಕಾರಣದಿಂದ ಪತ್ನಿಯೊಡನೆ ಸಮಾಗಮಕ್ಕೆ ಅವಕಾಶವಿಲ್ಲ. ಮಕ್ಕಳಾಗುವ ರೀತಿಯಾದರೂ ಹೇಗೆ? ಪಾಂಡುವು ಇದನ್ನೇ ಯೋಚಿಸುತ್ತಾ ಕುಳಿತನು. ಕುಂತಿಯನ್ನೂ ಏಕಾಂತದಲ್ಲಿ ಸಮಾಲೋಚನೆಗಾಗಿ ಕರೆದು ಹೇಳಿದನು :

"ರಾಜಕುಮಾರಿಯೇ! ಈ ಆಪತ್ಕಾಲದಲ್ಲಿ ಮಕ್ಕಳನ್ನು ಪಡೆಯಲು ಆಪದ್ಧರ್ಮವಿಹಿತವಾದ ಯಾವುದಾದರೂ ಮಾರ್ಗವನ್ನು ಸಮರ್ಥಿಸಿ ಹೇಳು.

**ಅಪತ್ಯಂ ನಾಮ ಲೋಕೇಷು ಪ್ರತಿಷ್ಠಾ ಧರ್ಮಸಂಹಿತಾ ।**
**ಇತಿ ಕುನ್ತಿ ವಿದುರ್ಧೀರಾಃ ಶಾಶ್ವತಂ ಧರ್ಮವಾದಿನಃ ॥೨೮॥**

**ಇಷ್ಟಂ ದತ್ತಂ ತಪಸ್ತಪ್ತಂ ನಿಯಮಶ್ಚ ಸ್ವನುಷ್ಠಿತಃ ।**
**ಸರ್ವಮೇವಾನಪತ್ಯಸ್ಯ ನ ಪಾವನಮಿಹೋಚ್ಯತೇ ॥೨೯॥**

ಕೀರ್ತಿಗೂ, ಧರ್ಮಕ್ಕೂ ಪುತ್ರನೇ ಮೂಲಕಾರಣನೆಂದು ಧರ್ಮಜ್ಞ ರಾದವರು ಹೇಳುತ್ತಾರೆ. ಯಜ್ಞ-ಯಾಗಾದಿಗಳು, ದಾನ-ಧರ್ಮಗಳು, ವ್ರತ-ನಿಯಮಾದಿಗಳು–ಇವುಗಳಾವುವೂ ಮಕ್ಕಳಿಲ್ಲದವನಿಗೆ ಪಾವಿತ್ರ್ಯ ವನ್ನುಂಟುಮಾಡುವುದಿಲ್ಲವೆಂದು ಹೇಳುತ್ತಾರೆ. ಆದುದರಿಂದ ನಾನು ಎಷ್ಟೇ ಕಠಿನವಾದ ತಪಶ್ಚರಣೆಮಾಡಿದರೂ ಅಪುತ್ರವಂತನಾದುದರಿಂದ ಒಳ್ಳೆಯ ಲೋಕಗಳು ಸಿಕ್ಕಲಾರವೆಂಬುದು ನಿಶ್ಚಯ.

ದೇವಿ! ನಾನು ಜಿತೇಂದ್ರಿಯನಲ್ಲ. ಕ್ರೂರಕರ್ಮಿಯು. ತತ್ಫಲ ವಾಗಿಯೇ ಸುರತಕ್ರಿಯೆಯಲ್ಲಿ ನಿರತವಾಗಿದ್ದ ಜಿಂಕೆಯನ್ನು ಕೊಂದು, ಮೃಗ ರೂಪನಾಗಿದ್ದ ಮಹರ್ಷಿಯ ಶಾಪಕ್ಕೊಳಗಾಗಿ ಪ್ರಜನಶಕ್ತಿಯನ್ನೇ ಕಳೆದು ಕೊಂಡುಬಿಟ್ಟಿರುವೆನು. ಮಕ್ಕಳ ವಿಷಯವಾಗಿ ಶ್ರುತಿ-ಸ್ಮೃತಿಗಳ ಅಭಿಪ್ರಾಯ ವೇನೆಂಬುದನ್ನು ಹೇಳುವೆನು : ಕೇಳು. ಯಾವುದು ಈ ಸಮಯದಲ್ಲಿ ವಿಹಿತ ವೆಂಬುದನ್ನು ನೀನೇ ಪರ್ಯಾಲೋಚಿಸು.

ಇಮೇ ವೈ ಬನ್ಧುದಾಯಾದಾಃ ಷಟ್ಪುತ್ರಾ ಧರ್ಮದರ್ಶನೇ ।
ಷಡೇವಾಬನ್ಧುದಾಯಾದಾಃ ಪುತ್ರಾಸ್ತಾಞ್ಛೃಣು ಮೇ ಪೃಥೇ ॥೩೨॥

ಸ್ವಯಂಜಾತಃ ಪ್ರಣೀತಶ್ಚ ತತ್ಸಮಃ ಪುತ್ರಿಕಾಸುತಃ ।
ಪೌನರ್ಭವಶ್ಚ ಕಾನೀನಃ ಭಗಿನ್ಯಾಂ ಯಶ್ಚ ಜಾಯತೇ ॥೩೩॥

ದತ್ತಃ ಕ್ರೀತಃ ಕೃತ್ರಿಮಶ್ಚ ಉಪಗಚ್ಛೇತ್ಸ್ವಯಂ ಚ ಯಃ ।
ಸಹೋಢೋ ಜ್ಞಾತಿರೇತಾಶ್ಚ ಹೀನಯೋನಿಧೃತಶ್ಚ ಯಃ ॥೩೪॥

ಪೂರ್ವಪೂರ್ವತಮಾಭಾವಂ ಮತ್ವಾ ಲಿಪ್ಸೇತ ವೈ ಸುತಮ್ ।
ಉತ್ತಮಾದವರಾಃ ಪುಂಸಃ ಕಾಂಕ್ಷನ್ತೇ ಪುತ್ರಮಾಪದಿ ॥೩೫॥

ಅಪತ್ಯಂ ಧರ್ಮಫಲದಂ ಶ್ರೇಷ್ಠಂ ವಿನ್ದನ್ತಿ ಮಾನವಾಃ ।
ಆತ್ಮಶುಕ್ರಾದಪಿ ಪೃಥೇ ಮನುಃ ಸ್ವಾಯಮ್ಭುವೋಽಬ್ರವೀತ್ ॥೩೬॥

[ಪಾಠಾಂತರದಲ್ಲಿ ಹೀಗೆ ಹೇಳಿದೆ :

ಸ್ವಯಂ ಜಾತಃ ಪ್ರಣೀತಶ್ಚ ಪರಿಕ್ರೀತಶ್ಚ ಯಃ ಸುತಃ ।
ಪೌನರ್ಭವಶ್ಚ ಕಾನೀನಃ ಸ್ವೈರಿಣ್ಯಾಂ ಯಶ್ಚ ಜಾಯತೇ ॥

**ದತ್ತಃ ಕ್ರೀತಃ ಕೃತ್ರಿಮಶ್ಚ ಉಪಗಚ್ಛೇತ್ಸ್ವಯಂ ಚ ಯಃ ।**
**ಸಹೋಢೋ ಜಾತರೇತಾಶ್ಚ ಹೀನಯೋನಿಧೃತಶ್ಚ ಯಃ ॥ ]**

ಕುಂತಿ! ಮನುಷ್ಯನಿಗೆ ಹನ್ನೆರಡು ರೀತಿಯಲ್ಲಿ ಮಕ್ಕಳಾಗಲು ಸಾಧ್ಯವಿದೆ. ಇದರಲ್ಲಿ ಆರು ರೀತಿಯ ಮಕ್ಕಳನ್ನು ಜ್ಞಾತಿಗಳೆಂದೂ, ಆಸ್ತಿ-ಪಾಸ್ತಿಗಳಿಗೆ ಹಕ್ಕುಳ್ಳವರೆಂದೂ ಹೇಳುತ್ತಾರೆ. ಉಳಿದ ಆರು ರೀತಿಯ ಮಕ್ಕಳನ್ನು ಕೇವಲ ಜ್ಞಾತಿಗಳೆಂದು ಮಾತ್ರ ಪರಿಗಣಿಸುತ್ತಾರೆ. ಇವರಿಗೆ ವಂಶ ಪಾರಂಪರ್ಯವಾದ ಆಸ್ತಿ-ಪಾಸ್ತಿಗಳ ಅಥವಾ ಸ್ಥಾನ-ಮಾನಗಳ ಹಕ್ಕಿರುವುದಿಲ್ಲ. (1) ಶಾಸ್ತ್ರೋಕ್ತವಿಧಿಯಿಂದ ವಿವಾಹಿತಳಾದ ಧರ್ಮಪತ್ನಿಯಲ್ಲಿ ಜನಿಸಿದವನು (ಸ್ವಯಂಜಾತ) (2) ತನ್ನ ಭಾರ್ಯೆಯಲ್ಲಿ ಮಹಾಪುರುಷನೊಬ್ಬನ ಅನುಗ್ರಹದಿಂದ ಮಕ್ಕಳನ್ನು ಪಡೆಯುವುದು (ಪ್ರಣೀತ) (3) ತಪೋನಿಷ್ಠನಿಗೆ ಹೇರಳವಾದ ಹಣವನ್ನು ಕೊಟ್ಟು ಅವನ ಮೂಲಕ ತನ್ನ ಭಾರ್ಯೆಯಲ್ಲಿ ಮಕ್ಕಳನ್ನು ಪಡೆಯುವುದು (ಪರಿಕ್ರೀತ) ಅಥವಾ **(ಪುತ್ರಿಕಾಸುತಃ)** ಎಂಬ ಪಾಠದಂತೆ ಮಗಳ ಮಗ. (ಮಗಳಲ್ಲಿ ಹುಟ್ಟಿದ ಮಗನು ತನ್ನ ಮಗನಾಗಬೇಕು ಎಂದು ಮದುವೆಗೆ ಮೊದಲೇ ಗೊತ್ತು ಮಾಡಿಕೊಂಡು ಅದರಂತೆ ಹುಟ್ಟಿದ ಮಗ) (4) ಎರಡನೆಯ ಬಾರಿ ಮದುವೆಮಾಡಿಕೊಂಡವಳ ಮಗ (ಪೌನರ್ಭವ) (5) ವಿವಾಹವಾಗುವ ಮೊದಲೇ ಸ್ತ್ರೀ-ಪುರುಷರ ಸಮಾಗಮದಿಂದ ಹುಟ್ಟಿದ ಮಗನು ಅವರಿಬ್ಬರ ವಿವಾಹದ ಮೇಲೆಯೂ ಪುತ್ರನೆನಿಸುವನು (ಕಾನೀನ) ಅಥವಾ (**ಭಗಿನ್ಯಾಂ ಯಶ್ಚ ಜಾಯತೇ** ಎಂಬ ಪಾಠದ ಪ್ರಕಾರ ಸಹೋದರಿಯ ಮಗ) (6) ಹೆಂಡತಿಯು ವ್ಯಭಿಚಾರಿಣಿಯಾಗಿದ್ದರೂ ನೀಚರಲ್ಲದವರ ಸಮಾಗಮದಿಂದ ಹುಟ್ಟುವವನು (ಕುಂಡ) (7) ತಂದೆ-ತಾಯಿಗಳಿಂದ ದಾನವಾಗಿ ಕೊಡಲ್ಪಟ್ಟವನು (ದತ್ತ) (8) ಹಣವನ್ನು ಕೊಟ್ಟು ಕ್ರಯಕ್ಕೆ ತೆಗೆದುಕೊಳ್ಳಲ್ಪಟ್ಟವನು (ಕ್ರೀತ) (9) ಕುಲ-ಗೋತ್ರಗಳು ತಿಳಿಯದೇ ಇದ್ದರೂ ಯಾವುದೋ ಕಾರಣದಿಂದ ಸ್ವೀಕರಿಸಿದ ಪುತ್ರ (ಕೃತ್ರಿಮ) (10) ನಾನು ನಿನ್ನ ಮಗನು ಎಂದು ಹೇಳಿಕೊಂಡು ಬಂದವನು (11) ಅನ್ಯಪುರುಷನನ್ನು ಸೇರಿ ಗರ್ಭಧರಿಸಿದ ಸ್ತ್ರೀಯನ್ನು ವಿವಾಹವಾದ ನಂತರ ಹುಟ್ಟುವ ಮಗ

( ಸಹೋಢ ) (12) ನೀಚಜಾತಿಯ ಸ್ತ್ರೀಯಲ್ಲಿ ಹುಟ್ಟಿದವನು ಜ್ಞಾತಿರೇತಸ ಅಥವಾ ಜ್ಞಾತರೇತಸ.*

ಇವುಗಳಲ್ಲಿ ಮೊದಲನೆಯದರಿಂದ ಉತ್ತಮರೀತಿಯಲ್ಲಿ ಮಕ್ಕಳನ್ನು ಪಡೆಯಲು ಸಾಧ್ಯವಾಗದಿದ್ದರೆ ಎರಡನೆಯದನ್ನು ಅನುಸರಿಸಬಹುದು. ಎರಡನೆಯದರಿಂದಲೂ ಆಗದಿದ್ದರೆ ಮೂರನೆಯ ಮಾರ್ಗವನ್ನು ಅನುಸರಿಸ ಬಹುದು. ಯಾವುದಾದರೊಂದು ರೀತಿಯಲ್ಲಿ ವಂಶೋದ್ಧಾರಕ್ಕೆ ಮತ್ತು ಪಿತೃಋಣಪರಿಹಾರಕ್ಕೆ ಮಕ್ಕಳಾಗಲೇಬೇಕು. ಆದುದರಿಂದಲೇ ಮಾನವರು ಆಪತ್ಕಾಲದಲ್ಲಿ ಮಕ್ಕಳನ್ನು ಪಡೆಯಲು ಯಾವುದಾದರೂ ಒಂದು ಮಾರ್ಗ ವನ್ನು ಅನುಸರಿಸುತ್ತಾರೆ.

ಆಪತ್ಕಾಲದಲ್ಲಿ ಸ್ತ್ರೀಯರು ದೇವರನಿಂದಲೂ ( ಗಂಡನ ತಮ್ಮ) ಮಕ್ಕಳನ್ನು ಪಡೆಯುವುದುಂಟು. ತನಗೆ ಮಕ್ಕಳ ಪ್ರಾಪ್ತಿಯಿಲ್ಲದಿದ್ದರೆ ಬೇರೆಯವರಿಂದಲಾದರೂ ತನ್ನ ಧರ್ಮಪತ್ನಿಯಲ್ಲಿ ಮಕ್ಕಳನ್ನು ಪಡೆಯ ಬಹುದೆಂದು ಮನುವು ಹೇಳಿದ್ದಾನೆ. ಏಕೆಂದರೆ : ಪುತ್ರಪ್ರಾಪ್ತಿಯು ಸಕಲ ವಿಧವಾದ ಧರ್ಮಫಲಗಳನ್ನೂ ಕೊಡುವುದು. ನಾನು ಋಷಿಶಾಪಪೀಡಿತ ನಾಗಿ ನನ್ನಿಂದ ನಿನಗೆ ಮಕ್ಕಳಾಗಲು ಅವಕಾಶವಿಲ್ಲದೇ ಇರುವುದರಿಂದ ನನಗೆ ಸಮಾನನಾದ ಅಥವಾ ನನಗಿಂತಲೂ ಉತ್ತಮವಾದ ಪುರುಷನನ್ನು ಸೇರಿ ಮಕ್ಕಳನ್ನು ಪಡೆಯುವುದು ಇಂತಹ ಆಪತ್ಕಾಲದಲ್ಲಿ ಯೋಗ್ಯವೆನಿಸುವುದು."

---

* ಯಾಜ್ಞವಲ್ಕ್ಯರ ಮಿತಾಕ್ಷರಿಯಲ್ಲಿ ಹೀಗೆ ಹೇಳಿದೆ :

**ಔರಸಃ ಕ್ಷೇತ್ರಜಶ್ಚೈವ ದತ್ತಃ ಕೃತ್ರಿಮ ಏವ ಚ ।**
**ಗೂಢೋತ್ಪನ್ನೋಽಪವಿದ್ಧಶ್ಚ ದಾಯಾದಾ-ಬಾಂಧವಾಶ್ಚ ಷಟ್ ॥**

ಔರಸ ( ಸ್ವಯಂಜಾತ ) ; ಕ್ಷೇತ್ರಜ ( ಪ್ರಣೀತ-ಪರಿಕ್ರೀತರು ) ; ದತ್ತ ; ಕೃತ್ರಿಮ ; ಗೂಢೋತ್ಪನ್ನ ( ಕುಂಡ ) ; ಅಪವಿದ್ದ ( ಕೃತ್ರಿಮರೀತಿಯಲ್ಲಿಯೇ ಮತ್ತೊಂದು ಭೇದ ) ; ತಾನಾಗಿಯೇ 'ನಾನು ನಿನ್ನ ಮಗನೆಂದು' ಹೇಳಿಕೊಂಡು ಬರುವವನನ್ನು ಕೃತ್ರಿಮನೆಂದೂ, ತಾನಾಗಿಯೇ ಬರುವವನು ತಂದೆ-ತಾಯಿಗಳಿಂದ ವಿಸರ್ಜಿಸಲ್ಪಟ್ಟು ಬಂದಿದ್ದರೆ ಅಪವಿದ್ಧನೆಂದೂ ಹೇಳುವರು. ಇವರು ಪುತ್ರರೂ, ದಾಯಾದರೂ ಆಗುತ್ತಾರೆ. ಉಳಿದ ಆರು ಮಂದಿಗೆ ಆಸ್ತಿ-ಪಾಸ್ತಿಗಳ ಮತ್ತು ಸ್ಥಾನ-ಗೌರವಗಳ ಹಕ್ಕು-ಬಾಧ್ಯತೆಗಳಿರುವುದಿಲ್ಲ. ಈ ವಿಷಯದಲ್ಲಿ ಮತಭೇದಗಳೂ ಇವೆ.

ಲಜ್ಜೆಯಿಂದ ತಲೆತಗ್ಗಿಸಿ ಕುಳಿತಿದ್ದ ಕುಂತಿಯನ್ನು ಕುರಿತು ಪುನಃ ಪಾಂಡುವು ಹೇಳತೊಡಗಿದನು : "ಶರದಂಡಯಾನಿ ಕಥೆಯನ್ನು ಕೇಳಿರುವೆಯಾ, ಕುಂತಿ! ಪತಿಯ ಆಜ್ಞಾಧಾರಕಳಾಗಿ ಶರದಂಡಯಾನಿಯು ಋತುಸ್ನಾನಮಾಡಿ ಶುಚೀಭೂತೆಯಾಗಿ, ರಾತ್ರಿಯ ಎರಡನೆಯ ಯಾಮದಲ್ಲಿ ನಾಲ್ಕು ಬೀದಿಗಳು ಕೂಡುವ ಜಾಗದಲ್ಲಿ ಕುಳಿತು ನಿರೀಕ್ಷಿಸುತ್ತಿದ್ದಳು. ಹೆಚ್ಚು ಕಾಲದ ನಿರೀಕ್ಷಣೆಯಿಲ್ಲದೇ ಮಹಾತಪಸ್ವಿಯೊಬ್ಬನು ಅಲ್ಲಿಗೆ ಬಂದುದನ್ನು ನೋಡಿ ತನಗೆ ಮಕ್ಕಳಾಗುವಂತೆ ಅನುಗ್ರಹಿಸಬೇಕೆಂದು ವೀರಪತ್ನಿಯು ಪ್ರಾರ್ಥಿಸಿದಳು. ಯಥಾವಿಧಿಯಾಗಿ ಪುಂಸವನಕರ್ಮವನ್ನು ಮಾಡಿದ ಆ ತಪಸ್ವಿಯ ಸಂಯೋಗದಿಂದ ದುರ್ಜಯನೇ ಮೊದಲಾದ ಮಹಾರಥರಾದ ಮೂವರು ಮಕ್ಕಳನ್ನು ಶರದಂಡಯಾನಿಯು ಪಡೆದಳು. ಅದರಂತೆಯೇ ನೀನೂ ಸಹ ನನ್ನ ಸಲಹೆಯಂತೆ ಯೋಗ್ಯಪುರುಷನೊಬ್ಬನನ್ನು ಆಶ್ರಯಿಸಿ ಪುತ್ರವಂತಳಾಗು."

೧೨೦ನೆಯ ಅಧ್ಯಾಯವು ಮುಗಿಯಿತು.

೧೨೧ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ವ್ಯುಷಿತಾಶ್ವನ ವೃತ್ತಾಂತಕಥನ

ಜನಮೇಜಯ! ಪಾಂಡುವು ಕುಂತಿಗೆ ಏಕಾಂತದಲ್ಲಿ ಹೀಗೆ ಹೇಳಲಾಗಿ, ಸಾಧ್ವಿಯಾದ ಕುಂತಿಯು ವೀರನಾದ, ಕುರುಶ್ರೇಷ್ಠನಾದ, ಭೂಪಾಲಕನಾದ ಪತಿಯನ್ನು ಕುರಿತು ಕರುಣಾಜನಕವಾದ ಈ ಮಾತುಗಳನ್ನಾಡಿದಳು :

"ಧರ್ಮಜ್ಞನೇ! ಧರ್ಮಪತ್ನಿಯಾದ, ರಾಜೀವಲೋಚನನಾದ ನಿನ್ನಲ್ಲಿಯೇ ಸರ್ವದಾ ಅನುರಕ್ತಳಾಗಿರುವ ನನ್ನ ವಿಷಯದಲ್ಲಿ ಈ ರೀತಿ ಹೇಳುವುದು ಸರ್ವಥಾ ಉಚಿತವಲ್ಲ. ಮಹಾಬಾಹುವೇ! ವೀರನೇ! ನೀನೇ ನನ್ನಲ್ಲಿ ಧರ್ಮಸಮ್ಮತವಾದ ರೀತಿಯಿಂದ ವೀರ್ಯವಂತರಾದ ಮಕ್ಕಳನ್ನು ಪಡೆಯುವವನಾಗು. ಪುತ್ರರನ್ನು ಪಡೆಯುವ ಸಲುವಾಗಿ ನೀನು

ನನ್ನೊಡನೆ ಸಮಾಗಮವನ್ನು ಮಾಡು. ಋಷಿಶಾಪದ ಪ್ರಭಾವದಿಂದ ಸ್ತ್ರೀಸಮಾಗಮದಿಂದಲೇ ನೀನು ಸ್ವರ್ಗಕ್ಕೆ ಹೋಗುವುದಾದರೆ ನಾನೂ ನಿನ್ನನ್ನೇ ಅನುಸರಿಸಿಬರುವೆನು. ಅದು ಹೊರತಾಗಿ :

**ನ ಹ್ಯಹಂ ಮನಸಾಪ್ಯನ್ಯಂ ಗಚ್ಛೇಯಂ ತ್ವದೃತೇ ನರಮ್ ।**
**ತ್ವತ್ತಃ ಪ್ರತಿವಿಶಿಷ್ಟಶ್ಚ ಕೋಽನ್ಯೋಽಸ್ತಿ ಭುವಿ ಮಾನವಃ ॥೫॥**

ನಿನ್ನನ್ನು ಬಿಟ್ಟು ಪರಪುರುಷನನ್ನು ನಾನು ಮನಸ್ಸಿನಲ್ಲಿಯೂ ನೆನೆಯುವುದಿಲ್ಲ. ಈ ಪೃಥ್ವಿಯಲ್ಲಿ ನಿನ್ನನ್ನು ಮೀರಿಸಿದವನಾಗಲೀ, ನಿನಗೆ ಸಮಾನನಾದವನಾಗಲೀ ಆಗಿರುವ ಬೇರೊಬ್ಬ ಮಾನವನು ಖಂಡಿತ ವಾಗಿಯೂ ಇರುವುದಿಲ್ಲ. ಧರ್ಮಾತ್ಮನೇ! ವಿಶಾಲಾಕ್ಷನೇ! ನಾನು ಈ ಹಿಂದೆ ಕೇಳಿದ ಪೌರಾಣಿಕವಾದ ಕಥೆಯೊಂದನ್ನು ಹೇಳುವೆನು, ಕೇಳು :

ಪೂರುವಂಶವರ್ಧಕನಾದ, ಪರಮಧರ್ಮಿಷ್ಠನಾದ, ವ್ಯುಷಿತಾಶ್ವನೆಂಬ ಪ್ರಸಿದ್ಧನಾದ ರಾಜನೊಬ್ಬನಿದ್ದನು. ಧರ್ಮಾತ್ಮನಾದ, ಮಹಾಭುಜನಾದ ವ್ಯುಷಿತಾಶ್ವನೊಮ್ಮೆ ಯಾಗವೊಂದನ್ನು ಮಾಡುತ್ತಿದ್ದಾಗ–ಇಂದ್ರಪ್ರಮುಖ ರಾದ ದೇವತೆಗಳು ಋಷಿ-ಮಹರ್ಷಿಗಳೊಡನೆ ವ್ಯುಷಿತಾಶ್ವನ ಯಾಗಮಂಟ ಪಕ್ಕೆ ಆಗಮಿಸಿದರು. ಯಜ್ಞದಲ್ಲಿ ಅರ್ಪಿಸಿದ ಸೋಮರಸವನ್ನು ಕುಡಿದು ಇಂದ್ರನು ಪ್ರಮತ್ತನಾಗಿ ಹೋದನು. ವಿಪುಲವಾದ ದಕ್ಷಿಣೆಗಳಿಂದ ಬ್ರಾಹ್ಮಣರು ಸಂತುಷ್ಟರಾದರು. ರಾಜರ್ಷಿಯಾದ, ಮಹಾತ್ಮನಾದ ವ್ಯುಷಿತಾಶ್ವನ ಯಜ್ಞದಲ್ಲಿ ದೇವತೆಗಳೂ ಮತ್ತು ಬ್ರಹ್ಮರ್ಷಿಗಳೂ ಯಜ್ಞದ ಎಲ್ಲ ಕೆಲಸಗಳನ್ನೂ ತಾವೇ ಮಾಡಲು ಉಪಕ್ರಮಿಸಿದರು. ಅದರಿಂದಾಗಿ ವ್ಯುಷಿತಾಶ್ವನು ಮಾನವರಲ್ಲೆಲ್ಲಾ ಶ್ರೇಷ್ಠನೆನಿಸಿದನು.

ಶಿಶಿರರ್ತುವು ಮುಗಿದು ವಸಂತರ್ತುವು ಪ್ರಾರಂಭವಾದೊಡನೆಯೇ ಸೂರ್ಯನು ಜಾಜ್ವಲ್ಯಮಾನನಾಗಿ ಹೊರಬರುವಂತೆ–ಹತ್ತು ಆನೆಗಳ ಬಲದಿಂದ ಕೂಡಿದ್ದ ವ್ಯುಷಿತಾಶ್ವನು ತಾನು ಆರಂಭಿಸಿದ್ದ ಅಶ್ವಮೇಧ ಯಾಗದ ಸಮಯದಲ್ಲಿ ಪೂರ್ವ-ಪಶ್ಚಿಮ-ಉತ್ತರ-ದಕ್ಷಿಣದಿಕ್ಕುಗಳಲ್ಲಿದ್ದ ರಾಜರೆಲ್ಲರನ್ನೂ ಗೆದ್ದು ಭೂಮಂಡಲದಲ್ಲಿ ವಿರಾಜಿಸಿದನು.

ಪುರಾಣವನ್ನು ತಿಳಿದವರು ವ್ಯುಷಿತಾಶ್ವನ ವಿಷಯವಾಗಿ ಈ ಗಾಥೆಯನ್ನು ಗಾಯನ ಮಾಡುತ್ತಾರೆ :

**ವ್ಯುಷಿತಾಶ್ವೇ ಯಶೋವೃದ್ಧೇ ಮನುಷ್ಯೇನ್ದ್ರೇ ಕುರೂತ್ತಮ ।**
**ವ್ಯುಷಿತಾಶ್ವಃ ಸಮುದ್ರಾನ್ತಾಂ ವಿಜಿತ್ಯೇಮಾಂ ವಸುಂಧರಾಮ್ ॥೧೪॥**

**ಅಪಾಲಯತ್ಸರ್ವವರ್ಣಾನ್ಪಿತಾ ಪುತ್ರಾನಿವೌರಸಾನ್ ।**
**ಯಜಮಾನೋ ಮಹಾಯಜ್ಞೈರ್ಬ್ರಾಹ್ಮಣೇಭ್ಯೋ ಧನಂ ದದೌ ॥೧೫॥**

"ಯಶೋವೃದ್ಧನಾದ ( ಯಶೋವಂತನಾದ ) ವ್ಯುಷಿತಾಶ್ವನು ರಾಜನಾಗಿರಲಾಗಿ, ಸಮುದ್ರಾಂತವಾದ ಭೂಮಿಯನ್ನು ಸ್ವಭುಜಬಲ-ಪರಾಕ್ರಮಗಳಿಂದ ಜಯಿಸಿ, ಎಲ್ಲ ವರ್ಣದವರನ್ನೂ–ತಂದೆಯಾದವನು ತನ್ನ ಔರಸ ಪುತ್ರರನ್ನು ಸಾಕುವಂತೆ–ಹೆಚ್ಚು ಅಕ್ಕರೆಯಿಂದ ಪರಿಪಾಲಿಸುತ್ತಿದ್ದನು. ಅನೇಕ ಯಜ್ಞ-ಯಾಗಾದಿಗಳನ್ನು ಮಾಡುತ್ತಾ, ಬ್ರಾಹ್ಮಣರಿಗೆ ಯಥೇಚ್ಛವಾಗಿ ಧನವನ್ನು ದಕ್ಷಿಣಾರೂಪವಾಗಿ ಕೊಟ್ಟನು." ತಾನು ಗೆದ್ದಿದ್ದ ರಾಜ್ಯಗಳಿಂದ ಅನಂತವಾದ–ಅನರ್ಘವಾದ ರತ್ನಗಳನ್ನು ತಂದು, ಅನೇಕ ಮಹಾಯಾಗಗಳನ್ನು ಮಾಡಿದನು. ಅಗ್ನಿಷ್ಟೋಮ-ಅತ್ಯಗ್ನಿಷ್ಟೋಮಗಳೇ ಮೊದಲಾದ ಏಳು ಬಗೆಯ ಸೋಮಯಾಗಸಂಸ್ಥೆಗಳನ್ನೂ ಮಾಡಿದನು.

ಅವನಿಗೆ ಕಕ್ಷೀವಂತನ ಮಗಳಾದ ಭದ್ರೆಯೆಂಬ ಕಡುಚೆಲುವೆಯಾದ ಹೆಂಡತಿಯಿದ್ದಳು. ಪತಿ-ಪತ್ನಿಯರಿಬ್ಬರೂ ಪರಸ್ಪರವಾಗಿ ಬಹಳ ವ್ಯಾಮೋಹವುಳ್ಳವರಾಗಿದ್ದರು. ವ್ಯುಷಿತಾಶ್ವನು ಪತ್ನಿಯನ್ನು ಕ್ಷಣಮಾತ್ರವೂ ಅಗಲುತ್ತಿರಲಿಲ್ಲ. ಅತಿಯಾದ ಕಾಮೋಪಭೋಗದಿಂದಾಗಿ ರಾಜನು ಯಕ್ಷ್ಮ ರೋಗಕ್ಕೆ ಗುರಿಯಾದನು. ಸೂರ್ಯನು ಅಸ್ತಂಗತನಾಗುವಂತೆ ಕೆಲವೇ ದಿನಗಳಲ್ಲಿ ಪ್ರಿಯತಮೆಯನ್ನಗಲಿ ಪರಲೋಕವನ್ನೈದಿದನು.

ಭದ್ರೆಯ ದುಃಖಕ್ಕೆ ಪಾರವುಂಟೇ? ಪತಿಯನ್ನಗಲಿದ ದುರ್ಭಾಗ್ಯಳಾದ ಭದ್ರೆಗೆ ಸಮಾಧಾನ ತಂದುಕೊಳ್ಳಲು ಮಕ್ಕಳೂ ಇರಲಿಲ್ಲ. ಅವಳ ರೋದನವು ಹೃದಯಭೇದಿಯಾಗಿದ್ದಿತು. ಕಪೋಲಗಳ ಮೇಲೆ ಕಣ್ಣೀರು ಧಾರಾಕಾರವಾಗಿ ಹರಿದು ಬರುತ್ತಿದ್ದಿತು. ಬಿಕ್ಕಿ-ಬಿಕ್ಕಿ ಅಳುತ್ತಾ ಭದ್ರೆಯು ಏನು ಹೇಳಿದಳೆಂಬುದನ್ನು ಕೇಳು :

“ಮಹಾರಾಜ! ಮಹಾರಾಜ! ಒಮ್ಮೆ ನನ್ನ ಸಮೀಪಕ್ಕೆ ಬರಲಾರೆಯಾ? ಅಯ್ಯೋ!

**ನಾರೀ ಪರಮಧರ್ಮಜ್ಞ ಸರ್ವಾ ಭರ್ತೃವಿನಾಕೃತಾ ।**
**ಪತಿಂ ವಿನಾ ಜೀವತಿ ಯಾ ನ ಸಾ ಜೀವತಿ ದುಃಖಿತಾ ॥೨೧॥**

**ಪತಿಂ ವಿನಾ ಮೃತಂ ಶ್ರೇಯೋ ನಾರ್ಯಾಃ ಕ್ಷತ್ರಿಯಪುಙ್ಗವ ।**
**ತ್ವದ್ಗತಿಂ ಗನ್ತುಮಿಚ್ಛಾಮಿ ಪ್ರಸೀದಸ್ವ ನಯಸ್ವ ಮಾಮ್ ॥೨೨॥**

ಪರಮಧರ್ಮಜ್ಞನೇ! ಗಂಡನಿಲ್ಲದ ಮೇಲೆ ಹೆಂಗಸು ಬದುಕಿದ್ದೂ ಫಲವೇನು? ಯಾವ ಸುಖಕ್ಕಾಗಿ ಜೀವಿಸಿರಬೇಕು? ಗಂಡನಿಲ್ಲದ ಹೆಂಗಸಿನ ಜೀವನವು ಜೀವನವೇ ಅಲ್ಲ. ದುಃಖದ ಕಡಲಿನಲ್ಲಿ ಬಿದ್ದು ದಾರುಣವಾದ ಯಾತನೆಗಳನ್ನು ಅನುಭವಿಸುವ ಅವಳ ಜೀವನವು ಮೃತಸಮಾನವೇ. ಗಂಡ ನಿಲ್ಲದ ಹೆಂಗಸಿಗೆ ಸಾವೇ ಸೌಖ್ಯತಮ. ಪ್ರಾಣಕಾಂತ! ಆದುದರಿಂದ, ನಾನೂ ನಿನ್ನ ಹಾದಿಯನ್ನೇ ಹಿಡಿಯುವೆನು. ನಿನ್ನನ್ನೇ ಅನುಸರಿಸಿಬರುವೆನು. ನನ್ನ ರೋದನವನ್ನು ಕೇಳಿಯೂ ನಿಷ್ಕರುಣೆಯಿಂದ ನೀನು ನನ್ನ ಬಳಿಗೆ ಬಾರದಿದ್ದರೆ ನಾನಾದರೂ ನಿನ್ನ ಬಳಿಗೆ ಬರುವೆನು. ಪತಿದೇವನೇ! ನಾನು ನಿನ್ನನ್ನಗಲಿ ಈ ಪ್ರಪಂಚದಲ್ಲಿ ಕ್ಷಣಮಾತ್ರವೂ ಇರಲಾರೆನು. ಮಹಾರಾಜ! ಕರುಣೆಯಿಂದ ನನ್ನನ್ನು ನಿನ್ನಲ್ಲಿಗೆ ಬರಮಾಡಿಕೋ. ನಾಥನೇ! ನೀನು ಹೋಗುತ್ತಿರುವ ಮಾರ್ಗವು ದುರ್ಗಮವಾದರೂ ನಾನು ಅನುಸರಿಸಿಬರುವೆನು. ನಿನ್ನ ನೆರಳಿನಂತೆಯೇ ನಿನ್ನನ್ನು ಅನುಸರಿಸುವೆನು. ನೀನು ಹೇಳಿದಂತೆಯೇ ಕೇಳುವೆನು. ರಾಜೇಂದ್ರ! ನಿನ್ನನ್ನಗಲಿರುವ ನನ್ನನ್ನು ಇಂದಿನಿಂದ ಹೃದಯಶೋಷಕವಾದ ಕಷ್ಟಗಳೂ, ಮಾನಸಿಕಚಿಂತೆಗಳೂ ಆವರಿಸುತ್ತವೆ. ನಿಶ್ಚಯವಾಗಿಯೂ ನಾನು ಮಹಾಪಾಪಿಷ್ಠಳು. ಕಳೆದ ಜನ್ಮದಲ್ಲಿ ನಾನು ಪರಸ್ಪರಪ್ರೇಮಿಗಳಾಗಿದ್ದ ಸತಿ-ಪತಿಗಳನ್ನು ಅಗಲಿಸಿದ್ದಿರಬೇಕು. ಆದುದ ರಿಂದಲೇ ನಾನಿಂದು ವಿರಹವೇದನೆಯನ್ನು ಅನುಭವಿಸಬೇಕಾಗಿದೆ.

**ವಿಪ್ರಯುಕ್ತಾ ತು ಯಾ ಪತ್ಯಾ ಮುಹೂರ್ತಮಪಿ ಜೀವತಿ ।**
**ದುಃಖಂ ಜೀವತಿ ಸಾ ಪಾಪಾ ನರಕಸ್ಥೇವ ಪಾರ್ಥಿವ ॥೨೮॥**

ಪತಿಯನ್ನಗಲಿ ಮುಹೂರ್ತಕಾಲ ಜೀವಿಸಿರುವುದೂ ದುಃಖಜೀವನವೇ ಸರಿ. ಪಾಪಿಷ್ಠೆಯಾದವಳು ನರಕದಲ್ಲಿ ಬಿದ್ದು ದಾರುಣವಾದ ಯಾತನೆಗಳನ್ನನುಭವಿಸುವಂತೆ–ಪತಿಯಿಂದ ವಿಹೀನಳಾದವಳು ಬಹುದುಃಖಕರವಾದ ಜೀವನವನ್ನು ನಡೆಸಬೇಕಾಗುವುದು. ಹಿಂದಿನ ಜನ್ಮದಲ್ಲಿ ನಾನು ಪರಸ್ಪರ ಅನುರಾಗದಿಂದ ಕೂಡಿದ ಸತಿ-ಪತಿಯರನ್ನು ಅಗಲಿಸಿರುವುದು ನಿಶ್ಚಯವೆಂದೇ ತೋರುತ್ತದೆ. ಪೂರ್ವಜನ್ಮದಲ್ಲಿ ಸಂಚಿತವಾಗಿದ್ದ ಪಾಪದ ಕಾರಣದಿಂದಲೇ ನಾನು ಈ ಜನ್ಮದಲ್ಲಿ ವಿರಹವೇದನೆಯನ್ನು ಅನುಭವಿಸುತ್ತಿರುವೆನು.

ಮಹಾರಾಜ! ನಿನ್ನನ್ನಗಲಿ ನಾನು ಖಂಡಿತವಾಗಿಯೂ ಜೀವಿಸಲಾರೆನು. ಅನ್ನಾಹಾರಾದಿಗಳನ್ನು ತೊರೆದು, ನಿನ್ನನ್ನೇ ಧ್ಯಾನಮಾಡುತ್ತಾ ಕುಶಾಸ್ತರಣದಲ್ಲಿ ಮಲಗುವೆನು. ನಿನ್ನ ಸುಂದರವಾದ ಮುಖವನ್ನು ತೋರು. ನಿನಗಾಗಿಯೇ ದೀನಳಾಗಿ ವಿಲಪಿಸುತ್ತಿರುವ, ದಾರುಣವಾದ ದುಃಖದಲ್ಲಿ ಮುಳುಗಿರುವ ನನಗೆ ಮುಂದೇನು ಮಾಡಬೇಕೆಂಬ ನಿರ್ದೇಶನವನ್ನು ಕೊಡು.”

ಹೀಗೆ ವಿಲಪಿಸುತ್ತಾ ಭದ್ರೆಯು ಅನ್ನಾಹಾರಗಳನ್ನು ತೊರೆದವಳಾಗಿ ಕುಶಾಸನದಲ್ಲಿ ಕುಳಿತು, ಅನವರತವೂ ಪತಿಗಾಗಿ ರೋದನಮಾಡುತ್ತಿದ್ದಳು. ಅಲ್ಲಿ ಬಿದ್ದಿದ್ದ ಶವವನ್ನೇ ಬಾರಿ-ಬಾರಿಗೂ ಆಲಿಂಗನಮಾಡಿಕೊಂಡು ಮುದ್ದಾಡುತ್ತಿದ್ದಳು.

ಸತ್ತವರು ಬದುಕಿ ಬರುವರೆಂಬುದು ಅಸಂಭವ. ಆದರೆ ವ್ಯುಷಿತಾಶ್ವನಿಗೆ ತಾನು ಯಜ್ಞ-ಯಾಗಾದಿಗಳಿಂದ ಗಳಿಸಿದ್ದ ಫಲವು ಅಪಾರವಾಗಿತ್ತು. ಭದ್ರೆಯ ರೋದನವನ್ನು ಕಂಡು ಮರುಗಿರಬಹುದು. ನಾಲಗೆಯ ಸಹಕಾರವಿಲ್ಲದೆಯೇ, ತುಟಿಗಳ ಪರಿಭ್ರಮಣವಿಲ್ಲದೆಯೇ ವ್ಯುಷಿತಾಶ್ವನ ಹೃದಯಾಂತರಾಳದಿಂದ ಸ್ಪಷ್ಟವಾದ ನುಡಿಗಳು ಹೊರಹೊರಟುವು–“ಭದ್ರೇ! ದುಃಖಿಸಬೇಡ! ಮೇಲೇಳು! ನಾನು ಕೊಡುವ ವರವನ್ನು ಸ್ವೀಕರಿಸು. ಚಾರುಹಾಸಿನಿಯೇ! ಋತುಸ್ನಾನಮಾಡಿದ ಎಂಟನೆಯ ದಿವಸ ಅಥವಾ ಹದಿನಾಲ್ಕನೆಯ ದಿವಸ ನನ್ನ ಹಾಸಿಗೆಯಲ್ಲಿರು. ಆ ದಿನಗಳಲ್ಲಿ ನಾನಾಗಿಯೇ ಬಂದು ನಿನ್ನಲ್ಲಿ ಪುತ್ರರನ್ನು ಪಡೆಯುವೆನು.”

ಭದ್ರೆಯು ಸಂತೋಷಚಿತ್ತಳಾಗಿ ವ್ಯುಷಿತಾಶ್ವನ ಅಂತರ್ವಾಣಿಯು ಹೇಳಿದಂತೆಯೇ ಮಾಡಿದಳು. ಭದ್ರೆಯು ವ್ಯುಷಿತಾಶ್ವನ ಶವಸಂಗಮದಿಂದ ಮಹಾಪರಾಕ್ರಮಿಗಳಾದ ಮೂವರು ಶಾಲ್ವಪ್ರಮುಖರನ್ನೂ, ನಾಲ್ವರು ಮದ್ರಪ್ರಮುಖರನ್ನೂ ಪಡೆದು ಸುಖಿಯಾಗಿದ್ದಳು.*

ಭರತಕುಲ ಶಿರೋಮಣಿಯೇ! ತಪಸ್ಸು ಮತ್ತು ಯೋಗಬಲಗಳಿಂದ ಸಂಪನ್ನನಾಗಿರುವ ನೀನೂ ಕೂಡ ಹೀಗೆಯೇ ಮಾನಸಿಕ ಸಂಕಲ್ಪದಿಂದಲೇ ನನ್ನ ಗರ್ಭದಲ್ಲಿ ಪುತ್ರರನ್ನು ಪಡೆಯಲು ಸಮರ್ಥನಾಗಿರುವೆ."

೧೨೧ನೆಯ ಅಧ್ಯಾಯವು ಮುಗಿಯಿತು.

೧೨೨ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಪಾಂಡು-ಕುಂತಿಯರ ಧರ್ಮಜಿಜ್ಞಾಸೆ

ಕುಂತಿಯು ಹೇಳಿದ ಕಥೆಯನ್ನು ಕೇಳಿ ಧರ್ಮಾತ್ಮನಾದ ಪಾಂಡುವು ಕ್ಷಣಕಾಲ ಚಿಂತಿಸಿ ಪತ್ನಿಗೆ ಧರ್ಮವಿಹಿತವಾದ ಈ ಮಾತುಗಳನ್ನು ಹೇಳತೊಡಗಿದನು.

"ಭೋಜಪುತ್ರಿ! ನೀನು ಹೇಳಿದುದೆಲ್ಲವೂ ನಿಶ್ಚಯ. ವ್ಯುಷಿತಾಶ್ವನು ನೀನು ಹೇಳಿದಂತೆಯೇ ಮಾಡಿದನು. ಅವನು ದೇವಸಮನೆಂಬುದೂ ನಿಜ. ಇವೆಲ್ಲವನ್ನೂ ನಾನೂ ಕೇಳಿರುವೆನು. ಇದರಲ್ಲಿ ಸಂಶಯಪಡುವ ಕಾರಣವಿಲ್ಲ. ಆದರೆ ಪೂರ್ವಾಚಾರವು ಹೇಗಿತ್ತೆಂಬುದನ್ನು ತಿಳಿಸುವೆನು, ಕೇಳು. ಪೂರ್ವಾಚಾರಗಳು ಆಧಾರವಿಲ್ಲದೇ ಮಾಡಿದ ಅಂಧಾನುಕರಣವಲ್ಲ. ಧರ್ಮಸೂಕ್ಷ್ಮ

* ಹೆಣದಿಂದ ಮಕ್ಕಳನ್ನು ಪಡೆಯುವುದು ಅನೇಕರಿಗೆ ಅಸಹಜವೆನಿಸಬಹುದು. ಆದರೆ ನಮ್ಮ ಕಾಲದಲ್ಲಿಯೇ ನಡೆಯುತ್ತಿರುವ ಅನೇಕ ವಾಮಾಚಾರಕ್ರಿಯೆಗಳನ್ನು ವಿವೇಚಿಸಿದರೆ ಕುಂತಿಯು ಹೇಳಿದ ಕಥೆಯನ್ನು ಅಸಹಜವೆಂದು ಅಲ್ಲಗಳೆಯಲು ಸಾಧ್ಯವಾಗಲಾರದು. ವಾಮಾಚಾರಕ್ರಿಯೆಯಲ್ಲಿ ಹೂಳಿದ ಹೆಣವನ್ನು ಮೇಲೆ ತೆಗೆದು ಅದಕ್ಕೆ ಮಂತ್ರಪೂರ್ವಕವಾಗಿ ಆಹಾರವನ್ನು ತಿನ್ನಿಸುವ ಪ್ರಕರಣವೂ ಉಂಟು. ಆದರೆ ವಾಮಾಚಾರಪ್ರಕ್ರಿಯೆಯನ್ನು ಈ ಕಥೆಯೊಡನೆ ಹೋಲಿಸುವ ಉದ್ದೇಶವಿಲ್ಲ. ಹಾಗೆ ಮಾಡಿದರೆ ಅದು ಮಹಾಪಚಾರವೇ ಆದೀತು. ಹೆಣಕ್ಕೆ ಚಲನವುಂಟೆಂಬುದಕ್ಕೆ

ವನ್ನು ಸಂಪೂರ್ಣವಾಗಿ ತಿಳಿದ ಮಹರ್ಷಿಗಳಿಂದ ಸೂಚಿತವಾದ ಮಾರ್ಗಗಳು. ಇದನ್ನು ಶಿಷ್ಟಾಚಾರವೆಂದೂ ಹೇಳುವರು. ಹಿಂದಿನ ಕಾಲದಲ್ಲಿ ಸ್ತ್ರೀಯರಿಗೆ ಹೆಚ್ಚಿನ ಸ್ವಾತಂತ್ರ್ಯವಿತ್ತು. ಸಂಸಾರವು ಬಂಧನವೆಂದಾಗಲೀ–ಪತಿಯ ಆಜ್ಞೆಯಂತೆಯೇ ನಡೆಯಬೇಕೆಂಬ ನಿಯಮವಾಗಲೀ ಇರಲಿಲ್ಲ. ತಮ್ಮ ಇಚ್ಛೆಬಂದಂತೆ ಇಚ್ಛೆಬಂದಲ್ಲಿಗೆ ಹೋಗಿ ಸ್ವೇಚ್ಛೆಯಿಂದಿರಲು ಅವಕಾಶವಿತ್ತು. ಆ ರೀತಿಯಲ್ಲಿದ್ದರೂ ಅವರು ಪತಿವ್ರತೆಯರೆಂದೇ ಪರಿಗಣಿಸಲ್ಪಡುತ್ತಿದ್ದರು. ಅವರ ರೀತಿ-ನೀತಿಗಳನ್ನು ಪಾಪವೆಂದು ಪರಿಗಣಿಸುತ್ತಿರಲಿಲ್ಲ. ಅದು ಅಂದಿನ ಧಾರ್ಮಿಕ ನಿಯಮವಾಗಿತ್ತು. ಇಂದೂ ಸಹ ಮಾನವೇತರ ಪ್ರಾಣಿಗಳೆಲ್ಲವೂ ಈ ಮಾರ್ಗವನ್ನೇ ಅನುಸರಿಸುತ್ತಿವೆಯಲ್ಲವೇ? ಈ ವಿಧವಾದ ವರ್ತನೆಯಿಂದ ಅವುಗಳಲ್ಲಿ ಪರಸ್ಪರಮಾತ್ಸರ್ಯವೇನಾದರೂ ಉಂಟಾಗಿದೆಯೇ? ಈ ವಿಧವಾದ ಸ್ತ್ರೀಸ್ವಾತಂತ್ರ್ಯಕ್ಕೆ ಧರ್ಮಜ್ಞರಾದ ಮಹರ್ಷಿಗಳೂ ಪುರಸ್ಕಾರವನ್ನಿತ್ತಿದ್ದರು. ಉತ್ತರಕುರುಗಳಲ್ಲಿ ಈ ಸಂಪ್ರದಾಯವು ಇಂದಿಗೂ ಪುರಸ್ಕೃತವಾಗಿದೆ. ಸ್ತ್ರೀಯರಿಗೆ ಸ್ವಾತಂತ್ರ್ಯವನ್ನಿತ್ತು ಅನುಗ್ರಹಿಸಿರುವ ಆಚರಣೆಯೇ ಸನಾತನಧರ್ಮವೆಂದು ಪರಿಗಣಿತವಾಗಿದೆ.

ಪತಿಯೊಬ್ಬನಲ್ಲಿಯೇ ಸ್ತ್ರೀಯು ಅನುರಕ್ತಳಾಗಿರಬೇಕೆಂಬ ಶಿಷ್ಟಾಚಾರವು ಇತ್ತೀಚೆಗೆ ಬಂದಿತು. ಈ ವಿಧವಾದ ಮಾರ್ಪಾಡಿಗೆ ಕಾರಣನಾದವನ ಕಥೆಯನ್ನು ಹೇಳುವೆನು ಕೇಳು : ಉದ್ದಾಲಕನೆಂಬ ಮಹಾತಪಸ್ವಿಯಾದ ಮಹರ್ಷಿಯೊಬ್ಬನಿದ್ದನು. ಅವನಿಗೆ ಶ್ವೇತಕೇತುವೆಂಬ ತಪೋನಿಷ್ಠನಾದ ಮಗನಿದ್ದನು. ಇಂದಿನ ಪದ್ಧತಿಯು ಅವನ ಕೋಪದ ಕಾರಣದಿಂದ

---

ನಿದರ್ಶನವಾಗಿ ಸೂಚಿಸಬಹುದಷ್ಟೆ. ವ್ಯುಷಿತಾಶ್ವನು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಮಹತ್ತರವಾದ ಫಲಗಳನ್ನು ಗಳಿಸಿದ್ದನು. ಆ ಅಮೋಘಫಲಗಳನ್ನು ಅಸಂಘಟಿತವಾದ ಈ ರೀತಿಯಲ್ಲಿ ವಿನಿಯೋಗಿಸಿ ಮಕ್ಕಳನ್ನು ಪಡೆದನೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಅಥವಾ ಸುಳ್ಳೆಂದು ನಿರಾಕರಿಸುವ ಕಾರಣವೂ ಇಲ್ಲ. ಕೇವಲ ನಲವತ್ತೆಂಟು ದಿನಗಳ ಕಾಲ ಅಭಿಚಾರಿಕಮಂತ್ರಗಳನ್ನು ಜಪಿಸಿ ಹೆಣದೊಡನೆ ಸೆಣೆಸುವ ಶಕ್ತಿಯನ್ನು ಪಡೆಯಬಹುದಾದರೆ–ಜೀವಿತಕಾಲದ ಪೂರ್ತಿಯಾಗಿ ಇಂದ್ರನನ್ನೇ ಪ್ರತ್ಯಕ್ಷವಾಗಿ ಕರೆದು ನೂರಾರು ಸೋಮಯಾಗಗಳನ್ನು ಮಾಡಿದ ಮಹಾಪುರುಷನ ಶಕ್ತಿಯು ಅಗಣಿತ ಮತ್ತು ಅಚಿಂತ್ಯವೆಂಬುದನ್ನು ಮಂತ್ರಶಾಸ್ತ್ರಪರಿಜ್ಞಾನವುಳ್ಳ ಮತ್ತು ಮಂತ್ರಶಾಸ್ತ್ರದಲ್ಲಿ ನಂಬಿಕೆಯುಳ್ಳವರೆಲ್ಲರೂ ಒಪ್ಪಿಕೊಳ್ಳಲೇಬೇಕಾಗುವುದು.

ಬಂದದ್ದಾಗಿದೆ. ಒಂದು ದಿನ ಮನೆಯಲ್ಲಿ ಶ್ವೇತಕೇತುವು ತನ್ನ ತಂದೆಯಾದ ಉದ್ದಾಲಕನ ಶುಶ್ರೂಷೆಮಾಡುತ್ತಾ ಕುಳಿತಿದ್ದಾಗ–ಬ್ರಾಹ್ಮಣನೊಬ್ಬನು ಮನೆಯೊಳಗೆ ಬಂದು ಉದ್ದಾಲಕನ ಎದುರಿನಲ್ಲಿಯೇ ಅವನ ಪತ್ನಿಯ ಕೈಹಿಡಿದು–"ನಾವಿಲ್ಲಿಂದ ಹೊರಟುಹೋಗೋಣ ; ಬಾ"–ಎಂದು ಹೇಳುತ್ತಾ ಸೆಳೆದುಕೊಂಡು ಹೊರಟುಹೋದನು. ಬ್ರಾಹ್ಮಣನ ಕೃತ್ಯದ ಕಾರಣದಿಂದ ಉದ್ದಾಲಕನ ಮುಖದಲ್ಲಿ ಕೋಪಲೇಶವೂ ಕಾಣದಿದ್ದರೂ ಮಗನಾದ ಶ್ವೇತಕೇತುವಿಗೆ ಕೋಪವನ್ನು ತಡೆಯಲು ಸಾಧ್ಯವಾಗಲೇ ಇಲ್ಲ. ಮಗನು ಕುಪಿತನಾದುದನ್ನು ಕಂಡು ಉದ್ದಾಲಕನು ಮಗನನ್ನು ಸಮಾಧಾನಪಡಿಸುತ್ತಾ ಹೇಳಿದನು :

**ಮಾ ತಾತ ಕೋಪಂ ಕಾರ್ಷೀಸ್ತ್ವಮೇಷ ಧರ್ಮಃ ಸನಾತನಃ ।**
**ಅನಾವೃತಾ ಹಿ ಸರ್ವೇಷಾಂ ವರ್ಣಾನಾಮಙ್ಗನಾ ಭುವಿ ।**
**ಯಥಾ ಗಾವಸ್ಥಿತಾಸ್ತಾತ ಸ್ವೇ ಸ್ವೇ ವರ್ಣೇ ತಥಾ ಪ್ರಜಾಃ ॥೧೪॥**

"ಶ್ವೇತಕೇತುವೇ! ಕೋಪವೇಕೆ? ಇದು ಸನಾತನಧರ್ಮ. ಶಿಷ್ಟಾಚಾರವೇ ಹೀಗಿರುವಾಗ ಕೋಪಿಸುವುದೇಕೆ? ಪ್ರಪಂಚದಲ್ಲಿ ಸ್ತ್ರೀಯರು ಯಾವ ನಿಬಂಧನೆಗಳಿಗೂ ಒಳಪಡುವುದಿಲ್ಲ. ಅವರು ಸರ್ವಸ್ವತಂತ್ರರು. ಪಶುಗಳು ಹೇಗೆ ವರ್ತಿಸುತ್ತಿವೆಯೆಂಬುದನ್ನು ಕಾಣೆಯಾ? ಅದರಂತೆಯೇ ಮನುಷ್ಯರಲ್ಲೂ ಸಕಲವರ್ಣದವರೂ ವರ್ತಿಸುತ್ತಾರೆ. ಅದಕ್ಕಾಗಿ ಕೋಪಿಸಬೇಡ, ಮಗು!"–ಎಂದು ಹೇಳಿದನು.

ಶ್ವೇತಕೇತುವಿಗೆ ತಂದೆಯ ಮಾತುಗಳು ಸಮಾಧಾನವನ್ನುಂಟುಮಾಡಲಿಲ್ಲ. ಶಿಷ್ಟಾಚಾರವನ್ನು ಮಾರ್ಪಾಡುಮಾಡಬೇಕೆಂದು ನಿಶ್ಚಯಿಸಿ ಹೇಳಿದನು:

**ವ್ಯುಚ್ಚರನ್ತ್ಯಾಃ ಪತಿಂ ನಾರ್ಯಾ ಅದ್ಯ ಪ್ರಭೃತಿ ಪಾತಕಮ್ ।**
**ಭ್ರೂಣಹತ್ಯಾಕೃತಂ ಪಾಪಂ ಭವಿಷ್ಯತ್ಯಸುಖಾವಹಮ್ ॥೧೭॥**

**ಭಾರ್ಯಾಂ ತಥಾ ವ್ಯುಚ್ಚರತಃ ಕೌಮಾರೀಂ ಬ್ರಹ್ಮಚಾರಿಣೀಮ್ ।**
**ಪತಿವ್ರತಾಮೇತದೇವ ಭವಿತಾ ಪಾತಕಂ ಭುವಿ ॥೧೮॥**

**ಪತ್ಯಾ ನಿಯುಕ್ತಾ ಯಾ ಚೈವ ಪತ್ನ್ಯಪತ್ಯಾರ್ಥಮೇವ ಚ ।**
**ನ ಕರಿಷ್ಯತಿ ತಸ್ಯಾಶ್ಚ ಭವಿಷ್ಯತ್ಯೇತದೇವ ಹಿ ॥೧೯॥**

ಸ್ತ್ರೀಯರು ಪತಿಯ ಆಜ್ಞೆಗೆ ಒಳಪಟ್ಟಿರದಿದ್ದರೆ ದುಃಖದಾಯಕವಾದ ಭ್ರೂಣಹತ್ಯಾಪಾಪವುಂಟಾಗುವುದೆಂದು ಸಾರಿದನು. ಅವನು ಮಾಡಿದ ಈ ನಿಯಮವು ಹೆಂಗಸಿಗೆ ಮಾತ್ರವೇ ಅನ್ವಯಿಸುವುದಾಗಿರಲಿಲ್ಲ. ವಿವಾಹ ವಾದಂದಿನಿಂದ ಪತಿಯೇ ಸರ್ವಸ್ವವೆಂದು ಭಾವಿಸಿರುವ ಸ್ತ್ರೀಯನ್ನು ನಿರ್ಲಕ್ಷಿಸಿ ವರ್ತಿಸಿದಲ್ಲಿ ಪುರುಷನಿಗೂ ಭ್ರೂಣಹತ್ಯಾಪಾಪವೇ ಉಂಟಾಗುವುದೆಂದು ಕಟ್ಟಳೆಮಾಡಿದನು. ಪುತ್ರಾರ್ಥಿಯಾದ ಪತಿಯ ಆಜ್ಞೆಯನ್ನು ಪರಿಪಾಲಿಸದ ಸ್ತ್ರೀಗೂ ಸಹ ಇದೇ ವಿಧವಾದ ಪಾಪವುಂಟೆಂದೂ ಶ್ವೇತಕೇತುವು ಹೇಳಿರುವನು.

ಇಂದಿನ ಸತಿ-ಪತಿಗಳ ಧರ್ಮವು ಶ್ವೇತಕೇತುವಿನ ಕಾಲದಿಂದ ನಡೆದು ಬಂದಿದೆ. ಸೌದಾಸನ ಪತ್ನಿಯಾದ ಮದಯಂತಿಯೂ ಪತಿಯ ಆಜ್ಞೆಯಂತೆ ವಸಿಷ್ಠರಲ್ಲಿಗೆ ಹೋಗಿ ಅಶ್ವಕನೆಂಬ ಪುತ್ರನನ್ನು ಪಡೆದಳಲ್ಲವೇ? ಪತಿಯನ್ನು ಪುತ್ರವಂತನನ್ನಾಗಿ ಮಾಡಬೇಕೆಂಬ ಸದಿಚ್ಛೆಯಿಂದ ಮದಯಂತಿಯು ಹೀಗೆ ಮಾಡಿದಳು. ಬೇರೆಯವರ ಉದಾಹರಣೆಯೇಕೆ? ರಾಜಕುಮಾರಿ! ನಾವು ಹೇಗೆ ಜನ್ಮತಾಳಿದೆವು? ಮಹರ್ಷಿಗಳಾದ ಕೃಷ್ಣದ್ವೈಪಾಯನರ ದಿವ್ಯಾನು ಗ್ರಹದಿಂದಲೇ ಅಲ್ಲವೇ ನಾವುಗಳು ಹುಟ್ಟಿದುದು? ಇವೆಲ್ಲವನ್ನೂ ಪರ್ಯಾ ಲೋಚಿಸಿ ಧರ್ಮಕ್ಕೆ ವಿರೋಧವಲ್ಲದ ನನ್ನ ಆಜ್ಞೆಯಂತೆ ನಡೆಯುವುದು ಯುಕ್ತವಾಗಿದೆ.”

(ಒಬ್ಬನೇ ಒಬ್ಬ ಮಹರ್ಷಿ ಶ್ವೇತಕೇತುವು ಪ್ರಾಚೀನವೆನಿಸಿದ ಸ್ತ್ರೀ ಸ್ವಾತಂತ್ರ್ಯಸಂಪ್ರದಾಯಕ್ಕೆ ತಿದ್ದುಪಡಿ ಮಾಡಿ ಸ್ತ್ರೀಸ್ವಾತಂತ್ರ್ಯವನ್ನು ಮೊಟಕುಮಾಡಿದನು. ಆದರೆ ಇದರೊಡನೆ ಪುರುಷರ ಸ್ವಾತಂತ್ರ್ಯವೂ ಹೋಯಿತೆಂದರೆ ತಪ್ಪಾಗಲಾರದು. ಸಂಸಾರಬಂಧವೆಂದರೆ ಸತಿ-ಪತಿಗಳಿಬ್ಬ ರಿಗೂ ಸೇರಿದ್ದಲ್ಲವೇ? ಮನುಷ್ಯರನ್ನುಳಿದು ಇತರ ಪ್ರಾಣಿಗಳಲ್ಲಿ ಇಂದೂ ಸ್ತ್ರೀಸ್ವಾತಂತ್ರ್ಯವಿರುವುದಾದರೂ ಕಾಮ-ಕ್ರೋಧ-ಲೋಭ-ಮೋಹಾದಿಗಳ ಆಕ್ರಮಣವು ಮಾನವರ ಮೇಲೆ ಹೆಚ್ಚಿದಂತೆಲ್ಲಾ ಸ್ತ್ರೀಸ್ವಾತಂತ್ರ್ಯವು ಹೆಚ್ಚಿನ

ಅವ್ಯವಸ್ಥೆಯನ್ನೇ ಉಂಟುಮಾಡುವುದೆಂದು ಸಿದ್ಧಾಂತಮಾಡಿ ಶ್ವೇತಕೇತುವು ಮಾನವಜೀವನದಲ್ಲಿ ಮಾರ್ಪಾಡುಮಾಡಿದನು."*

ಪಾಂಡುವು ಪುನಃ ಹೇಳತೊಡಗಿದನು :

**ಋತಾವೃತೌ ರಾಜಪುತ್ರಿ ಸ್ತ್ರಿಯಾ ಭರ್ತಾ ಯತವ್ರತೇ ।**
**ನಾತಿವರ್ತವ್ಯ ಇತ್ಯೇವಂ ಧರ್ಮಂ ಧರ್ಮವಿದೋ ವಿದುಃ ॥೨೫॥**

**ಶೇಷೇಷ್ವನ್ಯೇಷು ಕಾಲೇಷು ಸ್ವಾತಂತ್ರ್ಯಂ ಸ್ತ್ರೀ ಕಿಲಾರ್ಹತಿ ।**
**ಧರ್ಮಮೇವಂ ಜನಾಃ ಸನ್ತಃ ಪುರಾಣಂ ಪರಿಚಕ್ಷತೇ ॥೨೬॥**

**ಭರ್ತಾ ಭಾರ್ಯಾಂ ರಾಜಪುತ್ರಿ ಧರ್ಮ್ಯಂ ವಾಧರ್ಮ್ಯಮೇವ ವಾ ।**
**ಯದ್ಬ್ರೂಯಾತ್ತತ್ತಥಾ ಕಾರ್ಯಮಿತಿ ಧರ್ಮವಿದೋ ವಿದುಃ ॥೨೭॥**

"ಪ್ರಾಚೀನಕಾಲದಲ್ಲಿ ಸ್ತ್ರೀಗೆ ಹೆಚ್ಚಿನ ಸ್ವಾತಂತ್ರ್ಯವಿದ್ದು ಸ್ವೇಚ್ಛೆಯಿಂದ ವರ್ತಿಸಲು ಅವಕಾಶವಿದ್ದರೂ ಋತುಸ್ನಾತೆಯಾದ ಕಾಲದಲ್ಲಿ ಪತಿಯೊಡನೆಯೇ ಇರಬೇಕೆನ್ನುವ ನಿಯಮವಿತ್ತು. ಕಾರ್ಯವು ಸತ್ಕಾರ್ಯವಾಗಲೀ, ದುಷ್ಕಾರ್ಯವಾಗಲೀ–ಪತಿಯ ಆಜ್ಞೆಯನ್ನು ಮೀರಲೇಬಾರದೆಂದು ಧರ್ಮವಿದರು ಹೇಳುತ್ತಾರೆ. ಮೇಲಾಗಿ ಮಕ್ಕಳಾಗುವ ಶಕ್ತಿಯನ್ನು ಕಳೆದುಕೊಂಡಿರುವ ನಾನು ಮಕ್ಕಳಾಗಬೇಕೆಂಬ ಅಭಿಲಾಷೆಯಲ್ಲಿರುವಾಗ ನನ್ನ ಇಚ್ಛೆಗೆ ವಿರುದ್ಧವಾಗಿ ನಡೆಯುವುದು ಸರ್ವಥಾ ಯುಕ್ತವಲ್ಲ. ಕುಂತಿ! ಹಸ್ತದ್ವಯಗಳ ರಕ್ತವರ್ಣದ ಕೈಗಳ ಕೆಂಪಾದ ಬೆರಳುಗಳನ್ನು ಜೋಡಿಸಿ ಕಮಲದ ಮೊಗ್ಗಿನ ಆಕಾರದಲ್ಲಿ ಸಂಪುಟವನ್ನು ಮಾಡಿ ತಲೆಯ ಮೇಲಿಟ್ಟು ಕೇಳುವೆನು. (ಕೈಜೋಡಿಸಿ ಕೇಳಿಕೊಳ್ಳುತ್ತೇನೆ.) ನನ್ನ ಮಾತನ್ನು

---

* ಶಾಸನಗಳನ್ನು ಮಾರ್ಪಾಡುಮಾಡಲು ಸರ್ವಜ್ಞರಾದ ಮಹರ್ಷಿಗಳಿಗೆ ಸಾಧ್ಯವಿತ್ತೇ ಹೊರತು ರಾಜ-ಮಹಾರಾಜರು ಶಾಸನಗಳನ್ನು ಮಾರ್ಪಾಡುಮಾಡುವಂತಿರಲಿಲ್ಲ. ಭಾರತೀಯರಿಗೆ ಸಂಬಂಧಿಸಿದ ಶಾಸನಗಳೆಲ್ಲವೂ ಕಾಲಜ್ಞಾನವನ್ನು ತಿಳಿದಿದ್ದ ಮಹರ್ಷಿಗಳಿಂದಲೇ ಪ್ರಣೀತವಾಗುತ್ತಿತ್ತು. ಒಬ್ಬರ ಸ್ವಾರ್ಥಕ್ಕಾಗಿ ಶಾಸನಗಳನ್ನು ಮಾಡಿಕೊಳ್ಳುತ್ತಿರಲಿಲ್ಲ. ಇಲ್ಲಿ ಪಾಂಡುವು ತನ್ನ ವಾದಕ್ಕೆ ಪುಷ್ಟಿಕೊಡುವುದಕ್ಕಾಗಿ ಸ್ತ್ರೀಸ್ವಾತಂತ್ರ್ಯದ ಬಗೆಗೆ ಸ್ವಲ್ಪ ಉತ್ಪ್ರೇಕ್ಷಿಸಿರಲೂ ಸಾಧ್ಯ.

ನಿರ್ಲಕ್ಷಿಸದೇ ಮಹಾತಪಸ್ವಿಯಾದ ಬ್ರಾಹ್ಮಣನೊಬ್ಬನನ್ನು ಆಶ್ರಯಿಸಿ, ಸಕಲ ಸದ್ಗುಣಗಳಿಂದಲೂ ಪರಿಪೂರ್ಣರಾದ ಮಕ್ಕಳನ್ನು ಪಡೆಯುವುದು ಸಾಧು ವಾಗಿದೆ. ನಿನ್ನ ಈ ಪ್ರಯತ್ನದಿಂದ ನಾನೂ ಪುತ್ರವಂತರಿಗೆ ಸಿಕ್ಕುವ ಉತ್ತಮಲೋಕಗಳನ್ನು ಪಡೆಯುವೆನು."

ಪತಿಯ ಮಾತುಗಳನ್ನು ಕೇಳಿ ಕುಂತಿಯ ಮನಸ್ಸು ಕರಗಿತು. ಗಂಡನು ದೈನ್ಯದಿಂದ ಪ್ರಾರ್ಥಿಸಿದರೆ ಒಲಿಯದ ಹೆಂಡತಿ ಯಾರು? ಅಲ್ಲದೇ ಕುಂತಿಗೆ ಮಕ್ಕಳನ್ನು ಪಡೆಯಲು ಪರಪುರುಷನನ್ನು ಸೇರಬೇಕಾದ ಸಂಭ ವವೂ ಇರಲಿಲ್ಲ. ಹಿಂದಿನದನ್ನು ಸ್ಮರಿಸಿ ದೈವೀಸಂಘಟನೆಯ ವೈಚಿತ್ರ್ಯ ವನ್ನು ಮನದಲ್ಲಿಯೇ ಶ್ಲಾಘಿಸಿ, ಪತಿಗೆ ಹಿತವನ್ನುಂಟುಮಾಡುವುದರಲ್ಲಿಯೇ ಆಸಕ್ತಳಾದ ವರಾರೋಹೆಯಾದ ಕುಂತಿಯು ಪರಪುರಂಜಯನಾದ ಪಾಂಡು ವಿಗೆ ಹೇಳಿದಳು :

"ಮಹಾರಾಜ! ನನ್ನದೇ ಒಂದು ಇತಿಹಾಸವಿದೆ. ನಾನು ಕನ್ಯೆಯಾಗಿ ದ್ದಾಗ ನಮ್ಮ ತಂದೆಯವರು ಅತಿಥಿಸತ್ಕಾರವನ್ನು ಮಾಡುವ ಕಾರ್ಯವನ್ನು ನನಗೆ ವಹಿಸಿಕೊಟ್ಟಿದ್ದರು. ಅರಮನೆಗೆ ಬರುತ್ತಿದ್ದ ಬ್ರಾಹ್ಮಣರಿಗೂ, ಮಹರ್ಷಿಗಳಿಗೂ, ತಪಸ್ವಿಗಳಿಗೂ ನಾನು ಯಥೋಚಿತವಾಗಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸುತ್ತಿದ್ದೆನು. ಹೀಗೆಯೇ ಇರುತ್ತಿರಲಾಗಿ ಒಂದು ಸಮಯದಲ್ಲಿ ಕಠೋರವ್ರತನಿಷ್ಠನಾದ, ಧರ್ಮರಹಸ್ಯವನ್ನು ನಿಷ್ಕೃಷ್ಟವಾಗಿ ತಿಳಿದುಕೊಂಡಿದ್ದ ದುರ್ವಾಸನೆಂದು ಪ್ರಖ್ಯಾತನಾದ ಬ್ರಾಹ್ಮಣನನ್ನು ನಾನು ಬಹಳ ಪ್ರಯಾಸದಿಂದ ಉಪಚರಿಸಿದೆನು. ತೀಕ್ಷ್ಣಹೃದಯನಾದ ಅವನನ್ನು ಬಹಳ ಪ್ರಯತ್ನದಿಂದ ಸಂತಸಗೊಳಿಸಿದೆನು.

ನನ್ನ ಸತ್ಕಾರದಿಂದ ಸುಪ್ರೀತನಾದ ದುರ್ವಾಸಮಹರ್ಷಿಯು ಪ್ರಯೋಗವಿಧಿಸಹಿತವಾದ ಒಂದು ಮಹಾಮಂತ್ರವನ್ನು ಉಪದೇಶಿಸಿ ಹೀಗೆ ಹೇಳಿದನು :

**ಯಂ ಯಂ ದೇವಂ ತ್ವಮೇತೇನ ಮನ್ತ್ರೇಣಾವಾಹಯಿಷ್ಯಸಿ ।**
**ಅಕಾಮೋ ವಾ ಸಕಾಮೋ ವಾ ವಶಂ ತೇ ಸಮುಪೈಷ್ಯತಿ ।**
**ತಸ್ಯ ತಸ್ಯ ಪ್ರಸಾದಾತ್ತೇ ರಾಜ್ಞಿ ಪುತ್ರೋ ಭವಿಷ್ಯತಿ ॥೩೪॥**

"ರಾಜಪುತ್ರಿ! ಈ ಮಂತ್ರವನ್ನು ಪುನಶ್ಚರಣೆಮಾಡಿ, ನೀನು ಯಾವ

ಯಾವ ದೇವತೆಯನ್ನು ಆಹ್ವಾನಿಸುವೆಯೋ ಆ ದೇವತೆಯು–ಅವನಿಗೆ ನಿನ್ನ ಬಳಿಗೆ ಬರುವ ಇಚ್ಛೆಯಿರಲಿ, ಇಲ್ಲದಿರಲಿ ನಿನ್ನ ವಶನಾಗುವನು. ಅವರ ಪ್ರಸಾದದಿಂದ ನಿನಗೆ ಆಯಾ ದೇವತೆಗಳಿಗೆ ಅನುರೂಪರಾದ ಮಕ್ಕಳು ಹುಟ್ಟುವರು.”

ಭಾರತ! ನಾನು ನನ್ನ ತಂದೆಯ ಮನೆಯಲ್ಲಿದ್ದಾಗ ಮಹರ್ಷಿಯು ಹೀಗೆ ಹೇಳಿದ್ದನು.

ಬ್ರಾಹ್ಮಣನ ಮಾತು ಎಂದಿಗೂ ಸುಳ್ಳಾಗದು. ಅವನಿತ್ತ ವರದ ಫಲ ವನ್ನು ಪಡೆಯುವ ಕಾಲವೂ ಈಗ ಸನ್ನಿಹಿತವಾಗಿದೆ. ನೀನು ಅನುಜ್ಞೆಯನ್ನು ಕೊಡುವುದಾದರೆ ಮಹಾಮಂತ್ರವನ್ನು ಪುನಶ್ಚರಣೆಮಾಡಿ ಆ ಮಂತ್ರದ ಮೂಲಕವಾಗಿ ದೇವನೊಬ್ಬನನ್ನು ಆಹ್ವಾನಿಸುವೆನು. ಆ ದೇವತೆಯ ಅನು ಗ್ರಹದಿಂದ ನಮ್ಮಿಬ್ಬರಿಗೂ ಹಿತಕರವಾದ ಸಂತಾನವುಂಟಾಗಲಿ. ಸತ್ಯಸಂಧ ರಲ್ಲಿ ಶ್ರೇಷ್ಠನಾದವನೇ! ನಾನು ಮಹಾಮಂತ್ರವನ್ನು ಪುನಶ್ಚರಣೆಮಾಡು ವಾಗ ಯಾವ ದೇವತೆಯನ್ನು ಆಹ್ವಾನಿಸಬೇಕೆಂಬುದನ್ನೂ ನೀನೇ ಹೇಳ ಬೇಕು. ಈ ಕಾರ್ಯವನ್ನು ನಾನು ನಿನ್ನ ಸಂತೋಷಾರ್ಥವಾಗಿ ಮಾಡು ತ್ತೇನೆ. ನಿನ್ನ ಆಜ್ಞೆಯ ಪ್ರತೀಕ್ಷೆಯಲ್ಲಿದ್ದೇನೆ.”

ಪುತ್ರರನ್ನು ಯಾವುದಾದರೂ ರೀತಿಯಲ್ಲಿ ಪಡೆದುಕೊಳ್ಳುವಂತೆ ಕೈಜೋಡಿಸಿ ಬೇಡಿಕೊಂಡವನು ಅನುಜ್ಞೆಯನ್ನು ನೀಡದಿರುವನೇ? ಪಾಂಡುವು ಅವಸರದಿಂದಲೇ ಹೇಳಿದನು :

**ಅದ್ಯೈವ ತ್ವಂ ವರಾರೋಹೇ ಪ್ರಯತಸ್ವ ಯಥಾವಿಧಿ ।**
**ಧರ್ಮಮಾವಾಹಯ ಶುಭೇ ಸ ಹಿ ಲೋಕೇಷು ಪುಣ್ಯಭಾಕ್ ॥**

“ವರಾರೋಹೆಯೇ! ಪುತ್ರರನ್ನು ಪಡೆಯಲು ಈ ಕೂಡಲೇ ಯಥಾ ವಿಧಿಯಾಗಿ ಪ್ರಯತ್ನಿಸು. ಸಾಕ್ಷಾತ್ ಯಮಧರ್ಮನನ್ನೇ ಮಂತ್ರಪೂರ್ವಕ ವಾಗಿ ಆಹ್ವಾನಿಸು. ಸಕಲಲೋಕಗಳಲ್ಲಿಯೂ ಅವನೇ ಮಹಾಧರ್ಮಿಷ್ಠನೆನಿ ಸಿದ್ದಾನೆ.*

---

* ಪಾಂಡುವು ಹೀಗೆ ಯೋಚಿಸಿರಬಹುದೆಂದು ಭಾವಿಸಬಹುದಾಗಿದೆ : ತನ್ನ ಪತ್ನಿಗೆ ಇತರರ ಮೂಲಕವಾಗಿ ಮಕ್ಕಳನ್ನು ಪಡೆಯಲು ನಿರ್ದೇಶಿಸುವುದು ಧರ್ಮವೋ

**ಅಧರ್ಮೇಣ ನ ನೋ ಧರ್ಮಃ ಸಂಯುಜ್ಯತಿ ಕಥಂಚನ ।**
**ಲೋಕಶ್ಚಾಯಂ ವರಾರೋಹೇ ಧರ್ಮೋಽಯಮಿತಿ ಮನ್ಯತೇ ॥೪೦॥**

**ಧಾರ್ಮಿಕಶ್ಚ ಕುರೂಣಾಂ ಸ ಭವಿಷ್ಯತಿ ನ ಸಂಶಯಃ ।**
**ಧರ್ಮೇಣ ಚಾಪಿ ದತ್ತಸ್ಯ ನಾಧರ್ಮೇ ರಂಸ್ಯತೇ ಮನಃ ॥೪೧॥**

**ತಸ್ಮಾದ್ಧರ್ಮಂ ಪುರಸ್ಕೃತ್ಯ ನಿಯತಾ ತ್ವಂ ಶುಚಿಸ್ಮಿತೇ ।**
**ಉಪಚಾರಾಭಿಚಾರಾಭ್ಯಾಂ ಧರ್ಮಮಾವಾಹಯಸ್ವ ವೈ ॥೪೨॥**

ನಮ್ಮ ವಂಶದ ಕ್ಷತ್ರಿಯರ ಧರ್ಮವು ಯಾವುದೇ ಕಾರಣದಿಂದಲೂ ಅಧರ್ಮದೊಡನೆ ಸೇರುವುದಿಲ್ಲ. (ಆದುದರಿಂದ ಹುಟ್ಟಿದ ಮಗನು ಧರ್ಮಿಷ್ಠ ನಾಗಬೇಕು. ಹಾಗೆ ಆಗಬೇಕಾದರೆ ಪುತ್ರಪ್ರಾಪ್ತಿಗಾಗಿ ಯಮಧರ್ಮನ ಅನು ಗ್ರಹವನ್ನೇ ಪಡೆಯಬೇಕು.) ನಾನು ಅನುಸರಿಸುವ ಈ ಮಾರ್ಗವನ್ನು ಧರ್ಮ ಮಾರ್ಗವೆಂದೇ ಲೋಕವು ತಿಳಿದುಕೊಳ್ಳುತ್ತದೆ. ಧರ್ಮನಿಂದ ಹುಟ್ಟುವ ಮಗನ ವಿಷಯವಾಗಿ ಹೇಳುವುದಾದರೆ ಕುರುವಂಶದಲ್ಲಿಯೇ ಅವನು ಪರಮಧಾರ್ಮಿಕನೆನಿಸಿಕೊಳ್ಳುತ್ತಾನೆ. ಧರ್ಮದೇವನಿಂದಲೇ ಜನ್ಮವನ್ನು ಪಡೆ ಯುವ ಆ ಪುತ್ರನ ಮನಸ್ಸು ಅಧರ್ಮದಲ್ಲೆಂದಿಗೂ ಪ್ರವರ್ತಿಸುವುದಿಲ್ಲ. ಆದುದರಿಂದ ನೀನು ಧರ್ಮೈಕದೃಷ್ಟಿಯುಳ್ಳವಳಾಗಿ, ನಿಯತಾತ್ಮಳಾಗಿ, ಪೂಜೆ ಮತ್ತು ಪ್ರಯೋಗವಿಧಿಗಳಿಂದ ಧರ್ಮದೇವನನ್ನೇ ಆಹ್ವಾನಿಸು."

ಜನಮೇಜಯ! ಪತಿಯು ಹೀಗೆ ಹೇಳಿದೊಡನೆಯೇ ಕುಂತಿಯು ಪಾಂಡುವಿಗೆ ಅಭಿವಾದನಮಾಡಿ ಅನುಜ್ಞೆಯನ್ನು ಪಡೆದು ಪ್ರದಕ್ಷಿಣೆ ಮಾಡಿದಳು.

ಗ೨೨ನೆಯ ಅಧ್ಯಾಯವು ಮುಗಿಯಿತು.

---

ಅಧರ್ಮವೋ ಖಚಿತವಾಗಿ ತಿಳಿಯದು. ಪತ್ನಿಯನ್ನು ಒಪ್ಪಿಸಲು ಪಾಂಡುವು ಅನೇಕ ವಾದ ಇತಿಹಾಸಗಳನ್ನು ಉದಾಹರಿಸಿದ್ದರೂ ತಾನು ಹೇಳುತ್ತಿರುವುದು ಧರ್ಮ ಸಮ್ಮತವಾಗಿರುವುದೇ ಎಂಬ ಸಂಶಯವೂ ಅವನ ಮನಸ್ಸಿಗೆ ಬಂದಿರಬಹುದು. ಇಂತಹ ಸಂದರ್ಭದಲ್ಲಿ ಧರ್ಮದೇವತೆಯನ್ನೇ ಆಹ್ವಾನಿಸಿಬಿಟ್ಟರೆ ಒಂದು ವೇಳೆ ತನ್ನ ನಿರ್ದೇಶವು ಅಧರ್ಮವಾಗಿದ್ದರೂ ಧರ್ಮದೇವನ ಸಾಹಚರ್ಯದಿಂದ ಧರ್ಮವಾ

೧೨೩ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಯುಧಿಷ್ಠಿರ, ಭೀಮ ಮತ್ತು ಅರ್ಜುನರ ಜನನ

"ಜನಮೇಜಯ! ಗಾಂಧಾರಿಯು ಗರ್ಭವನ್ನು ಧರಿಸಿ ಒಂದು ವರ್ಷ ಕಳೆದಿತ್ತು. ಆ ಸಮಯದಲ್ಲಿ ಕಾಡಿನಲ್ಲಿದ್ದ ಕುಂತೀದೇವಿಯು ಗರ್ಭಪ್ರಾಪ್ತಿಗಾಗಿ ಅಚ್ಯುತನಾದ ಯಮಧರ್ಮನನ್ನು ಮಂತ್ರಪೂರ್ವಕವಾಗಿ ಆಹ್ವಾನಿಸಿದಳು.

ಕುಂತಿಯು ಸುಖಾಸನದಲ್ಲಿ ಕುಳಿತು ಧರ್ಮದೇವನನ್ನು ಪೂಜಿಸಿ, ಯಥಾವಿಧಿಯಾಗಿ ಬಲಿಪ್ರದಾನಮಾಡಿ, ಹಿಂದೆ ದುರ್ವಾಸರಿಂದ ಅನುಗೃಹಿತ ವಾಗಿದ್ದ ಮಹಾಮಂತ್ರವನ್ನು ವಿಧಿವತ್ತಾಗಿ ಜಪಿಸಿದಳು. ಮಂತ್ರದಿಂದ ಆಕರ್ಷಿತನಾದ ದೇವದೇವನಾದ ಧರ್ಮನು ಸೂರ್ಯನಂತೆ ಪ್ರಕಾಶಮಾನ ವಾದ ವಿಮಾನದಲ್ಲಿ ಕುಳಿತು ಕುಂತಿಯು ಜಪಮಾಡುತ್ತಾ ಕುಳಿತಿದ್ದ ಸ್ಥಳಕ್ಕೆ ಆಗಮಿಸಿದನು. ಮಂದಹಾಸವನ್ನು ಬೀರುತ್ತಾ ಧರ್ಮದೇವನು ಕುಂತಿಯನ್ನು ಪ್ರಶ್ನಿಸಿದನು :

**"ಕುನ್ತಿ ಕಿಂ ತೇ ದದಾಮ್ಯಹಮ್"**

"ಕುಂತಿ! ನಾನು ನಿನಗೇನನ್ನು ಕೊಡಲಿ?"

ಕುಂತಿಯೂ ಸಹ ಮಂದಸ್ಮಿತೆಯಾಗಿ ಈ ವರವನ್ನೇ ಕೇಳಿದಳು :

**"ಪುತ್ರಂ ದೇಹಿ"** – "ದೇವದೇವನೇ! ನನಗೆ ಮಗನನ್ನು ದಯಪಾಲಿಸು."

ಯೋಗಮೂರ್ತಿಧರನಾದ ಧರ್ಮನೊಡನೆ ಸಮಾಗಮವನ್ನು ಪಡೆದು ವರಾರೋಹೆಯಾದ ಕುಂತಿಯು ಸರ್ವಪ್ರಾಣಿಗಳಿಗೂ ಹಿತಕರನಾದ ಸುಪುತ್ರನನ್ನು ಪಡೆದಳು.

**ಐನ್ದ್ರೇ ಚನ್ದ್ರಸಮಾಯುಕ್ತೇ ಮುಹೂರ್ತೇಽಭಿಜಿತೇಽಷ್ಟಮೇ ।**
**ದಿವಾಮಧ್ಯಗತೇ ಸೂರ್ಯೇ ತಿಥೌ ಪೂರ್ಣೇಽತಿಪೂಜಿತೇ ॥೬॥**

---

ಗಿಯೇ ಪರಿಣಮಿಸುವುದು. ಪಾಂಡುವು ಧರ್ಮದೇವನನ್ನು ಆಹ್ವಾನಿಸುವಂತೆ ಹೇಳಿದುದರ ಕಾರಣವನ್ನೂ ನಿರೂಪಿಸುತ್ತಾನೆ. ಆ ಮಾತುಗಳೂ ಇದೇ ಅಭಿಪ್ರಾಯದಿಂದಲೇ ಕೂಡಿದುವುಗಳಾಗಿವೆ.

**ಸಮೃದ್ಧಯಶಸಂ ಕುನ್ತೀ ಸುಷಾವ ಪ್ರವರಂ ಸುತಮ್ ॥೭॥**

ಆಶ್ವಯುಜ ಶುದ್ಧ ಪಂಚಮಿಯ ಶುಭದಿನದಂದು ಸೂರ್ಯನು ತುಲಾರಾಶಿಯಲ್ಲಿದ್ದಾಗ ಮಧ್ಯಾಹ್ನಕಾಲದ ಅಭಿಜಿನ್ಮುಹೂರ್ತದ ಜ್ಯೇಷ್ಠಾ ನಕ್ಷತ್ರದಲ್ಲಿ ಬಹುಯಶೋವಂತನಾಗುವ ಪುತ್ರಶ್ರೇಷ್ಠನನ್ನು ಕುಂತಿಯು ಪ್ರಸವಿಸಿದಳು.

ಆ ಮಗುವು ಹುಟ್ಟಿದೊಡನೆಯೇ ಅಶರೀರವಾಣಿಯು ಹೀಗೆ ಹೇಳಿತು :

**ಏಷ ಧರ್ಮಭೃತಾಂ ಶ್ರೇಷ್ಠೋ ಭವಿಷ್ಯತಿ ನರೋತ್ತಮಃ ।**
**ವಿಕ್ರಾನ್ತಃ ಸತ್ಯವಾಕ್ಚೈವ ರಾಜಾ ಪೃಥ್ವ್ಯಾಂ ಭವಿಷ್ಯತಿ ॥೮॥**

**ಯುಧಿಷ್ಠಿರ ಇತಿ ಖ್ಯಾತಃ ಪಾಣ್ಡೋಃ ಪ್ರಥಮಜಃ ಸುತಃ ।**
**ಭವಿತಾ ಪ್ರಥಿತೋ ರಾಜಾ ತ್ರಿಷು ಲೋಕೇಷು ವಿಶ್ರುತಃ ।**
**ಯಶಸಾ ತೇಜಸಾ ಚೈವ ವೃತ್ತೇನ ಚ ಸಮನ್ವಿತಃ ॥೯॥**

"ಶ್ರೇಷ್ಠನಾದ ಈ ಶಿಶುವು ಮುಂದೆ ಧರ್ಮಾತ್ಮರಲ್ಲಿ ಶ್ರೇಷ್ಠನಾದ ರಾಜನಾಗುತ್ತಾನೆ. ಬಹಳ ಪರಾಕ್ರಮಿಯೂ ಸತ್ಯಸಂಧನೂ ಆದ ರಾಜನೆಂದು ಪ್ರಸಿದ್ಧನಾಗುತ್ತಾನೆ. ಪಾಂಡುವಿನ ಮೊದಲನೆಯ ಈ ಮಗನು ಯುಧಿಷ್ಠಿರ ನೆಂಬ ಹೆಸರಿನಿಂದ ಬಹುವಿಖ್ಯಾತನಾದ ರಾಜನಾಗುತ್ತಾನೆ. ಯಶಸ್ಸು, ತೇಜಸ್ಸು ಮತ್ತು ಸದಾಚಾರಗಳಿಂದ ಕೂಡಿರುವ ಇವನು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗುತ್ತಾನೆ."

ಬಹುಧಾರ್ಮಿಕನಾದ ಮಗನನ್ನು ಪಡೆದನಂತರದಲ್ಲಿ ಪಾಂಡುವು ಪುನಃ ಕುಂತಿಗೆ ಹೇಳಿದನು :

**ಪ್ರಾಹುಃ ಕ್ಷತ್ರಂ ಬಲಜ್ಯೇಷ್ಠಂ ಬಲಜ್ಯೇಷ್ಠಂ ಸುತಂ ವೃಣು ॥೧೦॥**

"ಪ್ರಿಯಳೇ! ಕ್ಷತ್ರಿಯನು ಯಾವಾಗಲೂ ಬಲದಲ್ಲಿ ಉತ್ತಮನಾಗಿರ ಬೇಕೆಂದು ಹಿರಿಯರು ಹೇಳುತ್ತಾರೆ. (ಕ್ಷತ್ರಿಯರಿಗೆ ಬಲದಿಂದಲೇ ಜ್ಯೇಷ್ಠತೆ–ಹಿರಿಮೆ). ಈಗ ನಮಗೆ ಧರ್ಮಶ್ರೇಷ್ಠನಾದ ಮಗನು ಹುಟ್ಟಿರು ವನು. ಮುಂದೆ ನೀನು ಬಲಜ್ಯೇಷ್ಠನಾದ ಒಬ್ಬ ಮಗನನ್ನು ಮಂತ್ರದ ಸಾಮರ್ಥ್ಯದಿಂದ ಪಡೆಯುವವಳಾಗು.

**(ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಶ್ಶ್ರೇಷ್ಠೋ ದಿವಾಕರಃ ।**
**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ಬಲಶ್ರೇಷ್ಠಸ್ತು ಮಾರುತಃ ॥**

**ಮಾರುತಂ ಮರುತಾಂ ಶ್ರೇಷ್ಠಂ ಸರ್ವಪ್ರಾಣಿಭಿರೀಡಿತಮ್ ।**
**ಆವಾಹಯ ತ್ವಂ ನಿಯಮಾತ್ಪುತ್ರಾರ್ಥಂ ವರವರ್ಣಿನಿ ॥**

**ಸ ನೋ ಯಂ ದಾಸ್ಯತಿ ಸುತಂ ಸ ಪ್ರಾಣಬಲವಾನ್ನೃಷು ।)**

ಯಜ್ಞಗಳಲ್ಲಿ ಅಶ್ವಮೇಧಯಜ್ಞವೇ ಶ್ರೇಷ್ಠವಾದುದು. ಬೆಳಕು ಕೊಡುವವರಲ್ಲಿ ಸೂರ್ಯನು ಶ್ರೇಷ್ಠನು. ಮನುಷ್ಯರಲ್ಲಿ ಬ್ರಾಹ್ಮಣನು ಶ್ರೇಷ್ಠನು. ಇದೇ ರೀತಿಯಲ್ಲಿ ವಾಯುದೇವನು ಬಲಿಷ್ಠರಲ್ಲಿ ಶ್ರೇಷ್ಠನೆಂದು ಹೇಳುತ್ತಾರೆ. ಪ್ರಪಂಚದಲ್ಲಿ ಸಕಲಪ್ರಾಣಿಗಳಿಂದಲೂ ಸಂಸ್ತುತನಾದ, ಸಪ್ತಮರುತ್ತುಗಳಲ್ಲಿ ಶ್ರೇಷ್ಠನಾದ ವಾಯುದೇವನನ್ನು–ಶ್ರೇಷ್ಠಬಲನಾದ ಮತ್ತೊಬ್ಬ ಮಗನನ್ನು ಪಡೆಯಲೋಸುಗ–ನಿಯಮಪೂರ್ವಕವಾಗಿ ಮಹಾಮಂತ್ರದಿಂದ ಆಹ್ವಾನಿಸು. ಅವನು ಅನುಗ್ರಹಿಸುವ ಮಗನು ಮಾನವಕೋಟಿಯಲ್ಲಿಯೇ ಮಹಾಬಲಿಷ್ಠನೆನಿಸುತ್ತಾನೆ.”*

ಪಾಂಡುವು ಬಲಜ್ಯೇಷ್ಠನಾದ ಪುತ್ರನನ್ನು ಪಡೆಯುವಂತೆ ನಿರ್ದೇಶಿಸಿದ ನಂತರ ಕುಂತಿಯು ಹಾಗೆಯೇ ಆಗಲೆಂದು ಹೇಳಿ ಸುಖಾಸನದಲ್ಲಿ ಕುಳಿತು, ಮಹಾಮಂತ್ರವನ್ನು ಜಪಿಸಿ ಬಲಶ್ರೇಷ್ಠನಾದ ಮಾರುತನನ್ನೇ ಆಹ್ವಾನಿಸಿದಳು. ಒಡನೆಯೇ ಮಹಾಬಲನಾದ ವಾಯುದೇವನು ಮೃಗವಾಹನಾರೂಢನಾಗಿ ಕುಂತಿಯ ಬಳಿಗೆ ಬಂದು ಪ್ರಶ್ನಿಸಿದನು :

“ಕುಂತಿ! ನಾನು ನಿನಗೇನನ್ನು ಕೊಡಲಿ? ನಿನ್ನ ಮನಸ್ಸಿನಲ್ಲಿರುವ ಆಶಯವನ್ನು ಸ್ಪಷ್ಟವಾಗಿ ಹೇಳು.”

ಯಾರೇ ಆಗಲಿ, ತಮಗೇನು ಬೇಕೆಂಬುದನ್ನು ಮನಸ್ಸಿನಲ್ಲಿ ಮಾಡಿಕೊಂಡುಬಿಡಬಹುದು. ಬಾಯಿಬಿಟ್ಟು ಕೇಳಲು ಸ್ವಲ್ಪ ಸಂಕೋಚವಾಗುವುದು ಸ್ವಾಭಾವಿಕ. ಎಷ್ಟೋ ಜನಕ್ಕೆ ಬಾಯಿಬಿಟ್ಟು ಕೇಳಲು ಸಾಧ್ಯವಾಗುವುದೇ ಇಲ್ಲ. ಕುಂತಿಯು ಸಹ ವಾಯುವಿನ ಪ್ರಶ್ನೆಯನ್ನು ಕೇಳಿ ಸ್ವಲ್ಪ

---

* ಇದು ಅಧಿಕಪಾಠವೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ನಾಚಿದಳು. ಆದರೂ ಮನಸ್ಸಿನಲ್ಲಿರುವುದನ್ನು ಹೇಳಬೇಕೆಂದೇ ವಾಯು ದೇವನು ಕೇಳಿದುದರಿಂದ ನಸುನಕ್ಕು ಹೇಳಿದಳು :

"ಬಲವಂತನಾದ, ಮಹಾಕಾಯನಾದ, ಪ್ರಪಂಚದಲ್ಲಿರುವ ಬಲಿಷ್ಠ ರೆಲ್ಲರ ದರ್ಪವನ್ನೂ ಬಗ್ಗುಬಡಿಯಲು ಸಮರ್ಥನಾದ ಮಗನೊಬ್ಬನನ್ನು ದಯಪಾಲಿಸು."

ವಾಯುದೇವನು ಹಾಗೆಯೇ ಆಗಲೆಂದು ಹೇಳಿ ಕುಂತಿಯನ್ನು ಬಿಗಿದಪ್ಪಿದನು.

ವಾಯುವಿನ ಅನುಗ್ರಹದಿಂದ ಭಯಂಕರಪರಾಕ್ರಮಿಯಾದ, ಮಹಾ ಬಾಹುವಾದ ಭೀಮನೆಂಬ ಹೆಸರಿನ ಮಗನು–ಶ್ರಾವಣ ಕೃಷ್ಣ ತ್ರಯೋದಶೀ ಶುಭದಿವಸ ಮಘಾನಕ್ಷತ್ರದಲ್ಲಿ ಹುಟ್ಟಿದನು. ಅವನು ಹುಟ್ಟಿದಾಗಲೂ– 'ಪ್ರಪಂಚದಲ್ಲಿರುವ ಬಲಿಷ್ಠರೆಲ್ಲರಿಗೂ ಶ್ರೇಷ್ಠನಾದವನು ಹುಟ್ಟಿರುವನು'– ಎಂದು ಅಶರೀರವಾಣಿಯಾಯಿತು.

ಅಶರೀರವಾಣಿಗೆ ಸಾಕ್ಷಿಯೋ ಎಂಬಂತೆ ಹುಟ್ಟಿದೊಡನೆಯೇ ಒಂದು ವೈಚಿತ್ರ್ಯವೂ ನಡೆಯಿತು.

ಕುಂತಿಯು ಹುಟ್ಟಿದ ಶಿಶುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಕುಳಿತಿದ್ದಳು. ಆ ವೇಳೆಗೆ ಸರಿಯಾಗಿ ಹುಲಿಯೊಂದು ಕುಂತಿಯು ಕುಳಿತಿ ದ್ದೆಡೆಗೆ ಗರ್ಜನೆಮಾಡುತ್ತಾ ಓಡಿಬಂದಿತು. ಹುಲಿಯ ಭಯದಿಂದ ಮಗುವು ತೊಡೆಯ ಮೇಲೆ ಮಲಗಿದೆಯೆಂಬುದನ್ನೂ ವಿವೇಚಿಸದೇ ಕುಂತಿಯು ಮೇಲೆದ್ದಳು. ತೊಡೆಯ ಮೇಲಿದ್ದ ಶಿಶುವು ಕೆಳಕ್ಕೆ ಬಿದ್ದಿತು. ಒಡನೆಯೇ ಘೋರವಾದ ಶಬ್ದವುಂಟಾಯಿತು. ಹುಲಿಯು ಭಯಪಟ್ಟು ಬೇರೆಯ ಕಡೆಗೆ ಓಡಿಹೋಯಿತು. ಮಗುವಿಗೆ ಏನಾಯಿತೋ ಎಂಬ ಗಾಬರಿಯಿಂದ ಪಾಂಡುವು ಋಷಿಗಳೊಡನೆ ಮಗುವಿದ್ದೆಡೆಗೆ ಧಾವಿಸಿದನು. ಆದರೆ ಅಲ್ಲವರು ಕಂಡಿದ್ದೇನು? ಶರೀರವೆಲ್ಲವೂ ಜಜ್ಜಿಹೋಗಿ ಜ್ಞಾನಹೀನವಾಗಿ ಬಿದ್ದಿರುವ ಮಗುವನ್ನಲ್ಲ. ಕಿಲ-ಕಿಲ ನಗುತ್ತಿದ್ದ ಮಗುವನ್ನು ಕಂಡರು. ಮಗುವಿನ ಕೆಳ ಗಿದ್ದ ದೊಡ್ಡದಾದ ಬಂಡೆಯು ನುಚ್ಚುನೂರಾಗಿತ್ತು. ಪಾಂಡುವು ವಿಸ್ಮಯ ಗೊಂಡನು. ಅಲ್ಲಿ ನೆರೆದಿದ್ದವರೆಲ್ಲರೂ ಕಣ್ಣೊರೆಸಿಕೊಂಡು ಪುನಃ ನೋಡಿದರು.

ತಾವು ಕಿಲ-ಕಿಲನೆ ನಗುತ್ತಿರುವ ಮಗುವನ್ನೇ ನೋಡುತ್ತಿರುವೆವೆಂದು ಮನ ವರಿಕೆಯಾಯಿತು. ಆನಂದಬಾಷ್ಪಗಳನ್ನು ಸುರಿಸುತ್ತಾ ವೀರಮಾತೆಯಾದ ಕುಂತಿಯು ಮಗನನ್ನು ಎತ್ತಿ ಮುದ್ದಾಡಿದಳು. ಕೆಳಕ್ಕೆ ಬಿದ್ದುದರ ಗುರುತಾಗಿ



ಮಗುವಿನ ಮಹಾಕಾಯದಲ್ಲಿ ಒಂದು ಗೆರೆಯೂ ಕಾಣಲಿಲ್ಲ. ಅಂತಹ ಮಹಾಪರಾಕ್ರಮಿಯನ್ನು ಮಗನನ್ನಾಗಿ ಪಡೆದ ಜನಕ-ಜನನಿಯರ ಆನಂದಕ್ಕೆ ಪಾರವೆಲ್ಲಿಯದು?

ಭೀಮನು ಹುಟ್ಟಿದ ದಿನವೇ ಹಾಸ್ತಿನಪುರದಲ್ಲಿ ದುರ್ಯೋಧನನ ಜನನವೂ ಆಯಿತು.

ಇಬ್ಬರು ಮಕ್ಕಳನ್ನು ಪಡೆದ ಮೇಲೆಯೂ ಪಾಂಡುವಿಗೆ ತೃಪ್ತಿಯಾಗಲಿಲ್ಲ. ಮತ್ತೊಬ್ಬ ಮಗನನ್ನು ಪಡೆಯಬೇಕೆನ್ನುವ ಆಶೆಯು ಮೂಡಿತು. ತಾನು ಪಡೆದಿರುವ ಮಕ್ಕಳಲ್ಲಿ ಒಬ್ಬನು ಪರಮಧಾರ್ಮಿಕನು, ಮತ್ತೊಬ್ಬ ಅತ್ಯಂತ ಬಲಿಷ್ಠನು. ಮುಂದೆ ಪರಮಧಾರ್ಮಿಕನೂ, ಅತ್ಯಂತಬಲಿಷ್ಠನೂ ಆಗುವ ಒಬ್ಬ ಮಗನನ್ನು ಪಡೆದರೆ ತಾನು ಧನ್ಯನಾಗುವುದಾಗಿ ಭಾವಿಸಿರಬಹುದು. ಪರಮಧಾರ್ಮಿಕನೂ, ಮಹಾಪರಾಕ್ರಮಿಯೂ ಆದ ಮಗನನ್ನು ಹೇಗೆ ಪಡೆಯುವುದು? ಪಾಂಡುವು ಯೋಚಿಸತೊಡಗಿದನು :

**ದೈವೇ ಪುರುಷಕಾರೇ ಚ ಲೋಕೋಽಯಂ ಸಮ್ಪ್ರತಿಷ್ಠಿತಃ ।**
**ತತ್ರ ದೈವಂ ತು ವಿಧಿನಾ ಕಾಲಯುಕ್ತೇನ ಲಭ್ಯತೇ ॥೨೧॥**

'ಪ್ರಪಂಚದಲ್ಲಿ ಪ್ರತಿಯೊಂದು ಕಾರ್ಯವೂ ಪುರುಷಪ್ರಯತ್ನ ಮತ್ತು ವಿಧಿ–ಇವೆರಡನ್ನೂ ಅವಲಂಬಿಸಿರುತ್ತದೆ. ಸಮಯದಲ್ಲಿ ಪ್ರಯತ್ನಮಾಡದಿದ್ದರೆ ವಿಧಿಯೇನು ಮಾಡೀತು? ಸಕಾಲದಲ್ಲಿ ಪುರುಷಪ್ರಯತ್ನವನ್ನು ಮಾಡುವುದರಿಂದ ಮಾತ್ರವೇ ದೈವಾಯತ್ತವಾದ ಫಲವು ಪ್ರಾಪ್ತವಾಗುತ್ತದೆ. ದೇವಾಧಿಪತಿಯಾದ ಇಂದ್ರನು ಅಪ್ರಮೇಯನೆಂದೂ, ಬಲವಂತನೆಂದೂ, ವೀರ್ಯವಂತನೆಂದೂ, ಮಹಾತೇಜಸ್ವಿಯೆಂದೂ ಕೇಳಿರುವೆನು. ಅವನನ್ನು ತಪಸ್ಸಿನಿಂದ ಒಲಿಸಿಕೊಂಡು ಧಾರ್ಮಿಕನಾಗಿಯೂ ಮಹಾಪರಾಕ್ರಮಿಯಾಗಿಯೂ ಇರುವ ಪುತ್ರನನ್ನು ಪಡೆಯುವೆನು.

ನನ್ನ ತಪಸ್ಸಿನಿಂದ ಸುಪ್ರೀತನಾಗಿ ಇಂದ್ರನು ಅನುಗ್ರಹಿಸುವ ಪುತ್ರನು ಬಹಳ ವೀರ್ಯವಂತನಾಗಿರುತ್ತಾನೆ. ಅತಿಮಾನುಷರನ್ನೂ (ದೇವ-ದಾನವರನ್ನೂ), ಮನುಷ್ಯರನ್ನೂ ಅವನು ಯುದ್ಧದಲ್ಲಿ ಪರಾಜಯಗೊಳಿಸಲು ಸಮರ್ಥನಾಗುತ್ತಾನೆ. ಆದುದರಿಂದ ಮನೋವಾಕ್ಕರ್ಮಗಳಿಂದ ಶಚೀಪತಿಯಾದ, ವಜ್ರಪಾಣಿಯಾದ ಇಂದ್ರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡುವೆನು.'

ಪಾಂಡುವು ಹೀಗೆ ನಿಶ್ಚಯಿಸಿ, ಋಷಿ-ಮಹರ್ಷಿಗಳೊಡನೆ ತಪಸ್ಸಿನ

ವಿಧಿ-ನಿಯಮಗಳನ್ನು ಸಮಾಲೋಚಿಸಿ, ಕುಂತಿಗೂ ಒಂದು ವರ್ಷಕಾಲ ವ್ರತನಿಷ್ಠಳಾಗಿರುವಂತೆ ಹೇಳಿ, ತಾನೂ ಸೂರ್ಯೋದಯದಿಂದ ಸೂರ್ಯಾಸ್ತಪರ್ಯಂತವೂ ಒಂದೇ ಕಾಲಿನಲ್ಲಿ ನಿಂತು ಸಮಾಧಿಯೋಗ ದಿಂದ ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು.*

ಪಾಂಡುವು ಅನೇಕಕಾಲದವರೆಗೆ ಇಂದ್ರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನಂತರ ಇಂದ್ರನು ಪ್ರತ್ಯಕ್ಷನಾಗಿ ಬಂದು ಪಾಂಡುವನ್ನು ಕುರಿತು ಹೇಳಿದನು :

**ಪುತ್ರಂ ತವ ಪ್ರದಾಸ್ಯಾಮಿ ತ್ರಿಷು ಲೋಕೇಷು ವಿಶ್ರುತಮ್ ।**
**ಬ್ರಾಹ್ಮಣಾನಾಂ ಗವಾಂ ಚೈವ ಸುಹೃದಾಂ ಚಾರ್ಥಸಾಧಕಮ್ ॥೨೮॥**

**ದುರ್ಹೃದಾಂ ಶೋಕಜನನಂ ಸರ್ವಬಾನ್ಧವನನ್ದನಮ್ ।**
**ಸುತಂ ತೇಽಗ್ರ್ಯಂ ಪ್ರದಾಸ್ಯಾಮಿ ಸರ್ವಾಮಿತ್ರವಿನಾಶನಮ್ ॥೨೯॥**

"ಪಾಂಡುರಾಜ! ನಿನಗೆ ಮಗನನ್ನು ದಯಪಾಲಿಸುವೆನು. ಮೂರು ಲೋಕಗಳಲ್ಲಿಯೂ ವಿಖ್ಯಾತನಾಗುವ ಪುತ್ರನನ್ನೇ ಅನುಗ್ರಹಿಸುವೆನು. ಗೋ-ಬ್ರಾಹ್ಮಣರ ಮತ್ತು ಸುಹೃದರ ಹಿತಚಿಂತನೆಯಲ್ಲಿಯೇ ಸರ್ವದಾ ನಿರತನಾಗಿರುವ ಸುಪುತ್ರನನ್ನು ದಯಪಾಲಿಸುವೆನು. ನನ್ನ ಅನುಗ್ರಹ ದಿಂದ ಹುಟ್ಟುವ ಆ ಮಗನು ದುಷ್ಟರಿಗೆ ಮತ್ತು ಶತ್ರುಗಳಿಗೆ ಶೋಕ

---

* ಪಾಂಡುವಿನ ತಪಸ್ಸಿಗೆ ಮತ್ತೊಂದು ಕಾರಣವನ್ನೂ ಹೇಳಬಹುದಾಗಿದೆ. ಪಾಂಡುವು ತಪಃಶಕ್ತಿಯಿಂದ ಇಂದ್ರನನ್ನು ಒಲಿಸಿಕೊಳ್ಳದೆಯೇ ಕುಂತಿಯ ಮಹಾಮಂತ್ರದ ಶಕ್ತಿಯಿಂದಲೇ ಇಂದ್ರನನ್ನು ಆಕರ್ಷಿಸಿ ಮಗನನ್ನು ಪಡೆಯಬಹುದಾಗಿತ್ತು. ಆದರೆ ಮಂತ್ರದಿಂದ ಆಕರ್ಷಿತರಾದ ದೇವತೆಗಳು ಇಚ್ಛೆಯಿದ್ದರೂ ಇಚ್ಛೆಯಿಲ್ಲದಿದ್ದರೂ ಕುಂತಿಯ ಮಾತನ್ನು ನಡೆಸಿಕೊಡಲೇಬೇಕು. ಇದು ಮಂತ್ರದ ಶಕ್ತಿ. ಇಚ್ಛೆಯಿರಲಿ ; ಇಲ್ಲದಿರಲಿ–ಅವರ ಸಮಾಗಮದಿಂದ ಶ್ರೇಷ್ಠರಾದ ಮಕ್ಕಳು ಹುಟ್ಟುವುದರಲ್ಲಿ ಸಂಶಯವಿಲ್ಲವಾದರೂ ಅವರು ಸುಪ್ರೀತರಾಗಿ ಅನುಗ್ರಹಮಾಡುವುದರಿಂದ ಸರ್ವಲಕ್ಷಣಸಂಪನ್ನರಾದ, ಪರಿಪೂರ್ಣರಾದ, ಯಾವುದರಲ್ಲಿಯೂ ನ್ಯೂನತೆಯಿಲ್ಲದ ಮಕ್ಕಳನ್ನು ಪಡೆಯಬಹುದೆಂಬ ಭಾವನೆಯು ಪಾಂಡುವಿಗುಂಟಾಗಿರಬಹುದು. ಆ ಉದ್ದೇಶದಿಂದಲೇ ಹಿಂದೆ ಮಕ್ಕಳನ್ನು ಪಡೆಯುವಾಗ ಕುಂತಿಗೆ ಹೇಳಿದಂತೆ ಹೇಳದೇ ತಾನೂ ಇಂದ್ರನ ಸುಪ್ರೀತಿಗಾಗಿ ತಪಸ್ಸನ್ನು ಮಾಡಿದನೆಂದು ಭಾವಿಸಬಹುದು.

ಜನಕನಾಗುತ್ತಾನೆ. ಸತ್ಕರ್ಮಗಳಿಂದ ಬಂಧುಗಳಿಗೆ ಆನಂದವನ್ನುಂಟು ಮಾಡುತ್ತಾನೆ. ಸರ್ವಶತ್ರುಗಳನ್ನೂ ವಿನಾಶಮಾಡುವಂತಹ ಸರ್ವಶ್ರೇಷ್ಠ ನಾದ ಪುತ್ರನನ್ನು ಅನುಗ್ರಹಿಸುತ್ತೇನೆ."

ಅಮೃತಧಾರೆಗೆ ಸಮಾನವಾದ ಹಿತವಾಕ್ಯಗಳನ್ನು ಕೇಳಿ ಪಾಂಡುವು ಪದ್ಮಾಸನದಿಂದ ಮೇಲೆದ್ದು ದೇವರಾಜನಿಗೆ ನಮಸ್ಕರಿಸಿದನು. ಪಾಂಡುವಿನ ಕಣ್ಣಳಿಂದ ಆನಂದಬಾಷ್ಪಗಳು ಸುರಿಯುತ್ತಿದ್ದಂತೆಯೇ ದೇವೇಂದ್ರನೂ ಅದೃಶ್ಯನಾದನು.

ಆನಂದತುಂದಿಲನಾದ ಪಾಂಡುವು ಕುಂತಿಯ ಬಳಿಗೆ ಹೋಗಿ "ರಾಜಕುಮಾರಿ! ನಿನ್ನ ವ್ರತವು ಫಲಿಸಿತು. ಇಂದ್ರನು ಸುಪ್ರೀತನಾದನು. ನನ್ನ ಇಚ್ಛೆಯಂತೆಯೇ ಅತಿಮಾನುಷಶಕ್ತಿಯಿಂದ ಕೂಡಿದ, ಯಶೋವಂತ ನಾದ ಪುತ್ರನೊಬ್ಬನನ್ನು ಅನುಗ್ರಹಿಸಲು ಇಂದ್ರನು ಒಪ್ಪಿರುವನು. ಇಂದ್ರನ ಅನುಗ್ರಹದಿಂದ ನೀನು ಪಡೆಯುವ ಮಗನು ಶತ್ರುವಿನಾಶಕನಾಗುವ ನೆಂದೂ, ಸೂರ್ಯನಿಗೆ ಸಮನಾದ ತೇಜಸ್ಸಿನಿಂದ ಕೂಡಿರುವನೆಂದೂ, ನೀತಿವಂತನಾಗಿರುವನೆಂದೂ, ಸುಂದರಪುರುಷನಾಗಿರುವನೆಂದೂ ಇಂದ್ರನೇ ಹೇಳಿರುವನು. ಕುಂತಿ! ಈ ಕೂಡಲೇ ನೀನು ಮಹರ್ಷಿಯಿಂದ ಉಪದೇಶಿಸ ಲ್ಪಟ್ಟಿರುವ ಮಹಾಮಂತ್ರವನ್ನು ಪುನಶ್ಚರಣೆಮಾಡಿ ಇಂದ್ರನನ್ನು ಆಮಂತ್ರಿಸು"–ಎಂದು ಹೇಳಿದೊಡನೆಯೇ, ಕುಂತಿಯೂ ಆನಂದಪರವಶ ಳಾಗಿ ಪದ್ಮಾಸನದಲ್ಲಿ ಕುಳಿತು, ಶುದ್ಧಚಿತ್ತಳಾಗಿ ಮಹಾಮಂತ್ರವನ್ನು ಪುನಶ್ಚರಣೆಮಾಡಿ ಇಂದ್ರನನ್ನು ಆಮಂತ್ರಿಸಿದಳು.

ಪಾಂಡುವಿಗಿತ್ತಿದ್ದ ವಚನದಂತೆ ಇಂದ್ರನು ಮಂದಸ್ಮಿತನಾಗಿ ಬಂದು ಕುಂತಿಯೊಡನೆ ಸೇರಿದನು. ಒಡನೆಯೇ ಮಹಾಪುರುಷನಾದ ಅರ್ಜುನನ ಜನನವಾಯಿತು.

**ಉತ್ತರಾಭ್ಯಾಂ ತು ಪೂರ್ವಾಭ್ಯಾಂ ಫಲ್ಗುನೀಭ್ಯಾಂ ತತೋ ದಿವಾ ।**
**ಜಾತಸ್ತು ಫಾಲ್ಗುನೇ ಮಾಸಿ ತೇನಾಸೌ ಫಾಲ್ಗುನಃ ಸ್ಮೃತಃ ॥೩೫॥**

ಫಾಲ್ಗುನಮಾಸದಲ್ಲಿ ಪೂರ್ವಫಲ್ಗುನೀನಕ್ಷತ್ರವು ಮುಗಿಯಲಿದ್ದಾಗ ಮತ್ತು ಉತ್ತರಫಲ್ಗುನೀನಕ್ಷತ್ರವು ಪ್ರಾರಂಭವಾಗುವುದರಲ್ಲಿದ್ದಾಗ (ಸಂಧಿ

ಸಮಯದಲ್ಲಿ) ಅರ್ಜುನನು ಹುಟ್ಟಿದನು. ಫಾಲ್ಗುನಮಾಸದಲ್ಲಿ ಮತ್ತು ಫಲ್ಗುನೀನಕ್ಷತ್ರದಲ್ಲಿ ಅರ್ಜುನನು ಹುಟ್ಟಿದನಾದ್ದರಿಂದ ಅವನಿಗೆ ಫಾಲ್ಗುನನೆಂದೇ ಹೆಸರಾಯಿತು.



ಆ ಶಿಶುವು ಹುಟ್ಟಿದಾಗಲೂ ಅಶರೀರವಾಣಿಯಾಯಿತು. ಅಶರೀರವಾಣಿಯ ಧ್ವನಿಯು ಗುಡುಗಿನ ಶಬ್ದದಂತೆ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದಿತು. ಕುಂತಿಯನ್ನು ಕುರಿತು ಹೇಳುತ್ತಿದ್ದ ಆ ಅಶರೀರವಾಣಿಯನ್ನು ಆಶ್ರಮವಾಸಿಗಳು ಮಾತ್ರವಲ್ಲದೇ ಸುತ್ತಲೂ ಇದ್ದ ಸಕಲಪ್ರಾಣಿಗಳೂ ಸ್ಪಷ್ಟವಾಗಿ ಕೇಳಿದುವು.

“ಕುಂತೀದೇವಿ! ಈ ಪುತ್ರರತ್ನವನ್ನು ಪಡೆದ ನೀನು ನಿಶ್ಚಯವಾಗಿಯೂ ಧನ್ಯಳು. ಇವನು ಕಾರ್ತವೀರ್ಯಾರ್ಜುನನಿಗೆ ಸಮಾನನೆನಿಸು

ತ್ತಾನೆ. ಶಿವನಿಗೆ ಸಮಾನವಾದ ಪರಾಕ್ರಮವನ್ನು ಹೊಂದುವನು. ಇಂದ್ರ ನಂತೆ ಅಜೇಯನೆನಿಸುವನು. ವಾಮನನಾದ ವಿಷ್ಣುವು ಅದಿತಿಯ ಆನಂದವನ್ನು ಹೆಚ್ಚಿಸಿದಂತೆ–ವಿಷ್ಣುತುಲ್ಯನಾದ ಇವನು ನಿನ್ನ ಆನಂದವನ್ನು ಹೆಚ್ಚಿಸುವನು. ಮದ್ರರನ್ನೂ, ಕುರುಗಳನ್ನೂ, ಚೇದಿರಾಜರನ್ನೂ, ಸೋಮಕ-ಕಾಶಿ-ಕರೂಷರಾಜರನ್ನೂ ಗೆದ್ದು ಕುರುವಂಶದ ಕೀರ್ತಿಯನ್ನು ಹೆಚ್ಚಿಸುವನು. ಅಗ್ನಿಯು ಈ ನಿನ್ನ ಮಗನ ಭುಜಬಲದಿಂದ ಖಾಂಡವವನ ವನ್ನು ದಹಿಸಿ, ಸರ್ವಪ್ರಾಣಿಗಳ ಮೇದಸ್ಸನ್ನೂ ಭುಂಜಿಸಿ ತೃಪ್ತಿಹೊಂದುವನು. ಪ್ರಪಂಚದ ರಾಜರೆಲ್ಲರನ್ನೂ ಗೆದ್ದು, ತನ್ನ ಸಹೋದರರೊಡನೆ ಮೂರು ಮಹಾಯಾಗಗಳನ್ನು ಮಾಡುವನು. ವೀರರಲ್ಲಿ ಇವನು ಪರಶುರಾಮನಿಗೆ ಸಮಾನನಾಗಿಯೂ, ಪರಾಕ್ರಮದಲ್ಲಿ ಸಾಕ್ಷಾತ್ ಮಹಾವಿಷ್ಣುವಿಗೆ ಸಮಾನನಾಗಿಯೂ ಇರುವನು. ಪ್ರಪಂಚದಲ್ಲಿರುವ ವೀರರೆಲ್ಲರಿಗೂ ಶ್ರೇಷ್ಠ ನೆನಿಸುವನು. ಮಹಾದೇವನೊಡನೆ ಯುದ್ಧದಲ್ಲಿ ಅಪ್ರತಿಮಪರಾಕ್ರಮವನ್ನು ತೋರಿ, ಅವನ ಮೆಚ್ಚುಗೆಗೆ ಪಾತ್ರನಾಗಿ, ಪಾಶುಪತವೆಂಬ ಮಹಾಸ್ತ್ರವನ್ನೂ ಪಡೆಯುವನು. ಇಂದ್ರನ ಆಜ್ಞೆಯಂತೆ ದೇವತೆಗಳ ಶತ್ರುಗಳಾದ ನಿವಾತ ಕವಚರೆಂಬ ರಾಕ್ಷಸರನ್ನು ಧ್ವಂಸಮಾಡಿ ಅದರಿಂದ ಸುಪ್ರೀತನಾಗುವ ಇಂದ್ರನಿಂದ ಸಕಲ ದಿವ್ಯಾಸ್ತ್ರಗಳನ್ನೂ ಪಡೆಯುವನು. ನಷ್ಟವಾಗಿ ಹೋಗ ಲಿರುವ ಕುರುವಂಶದ ಕೀರ್ತಿಯನ್ನು ಉಳಿಸುವವನೇ ಇವನು, ಕುಂತಿ!"

ಅಶರೀರವಾಣಿಯನ್ನು ಕುಂತಿಯು ಮಾತ್ರವಲ್ಲದೇ ಆ ವನದಲ್ಲಿ ವಾಸ ವಾಗಿದ್ದ ಸಕಲರೂ ಕೇಳಿದರು. ಆ ಮಾತುಗಳನ್ನು ಕೇಳಿ ಎಲ್ಲರಿಗೂ ಅತ್ಯಂತಸಂತೋಷವುಂಟಾಯಿತು.

ದೇವತೆಗಳೊಡನೆ ರಥದಲ್ಲಿ ಕುಳಿತಿದ್ದ ಇಂದ್ರನೂ ಆ ಮಾತುಗಳನ್ನು ಕೇಳಿ ಪುಳಕಿತನಾದನು. ಅಗೋಚರವಾದ ಭೇರಿ-ತಾಳ-ಮೃದಂಗಾದಿಗಳು ಮಂಗಳಧ್ವನಿಗೈದುವು. ನಾಲ್ಕು ದಿಕ್ಕುಗಳಲ್ಲಿಯೂ ಹೂವಿನ ಮಳೆಯು ಸುರಿ ಯಿತು. ಯಕ್ಷ-ಕಿನ್ನರ-ಕಿಂಪುರುಷ-ದೇವ-ದಾನವರೇ ಆದಿಯಾಗಿ ಸಕಲ ಭುವನದವರೂ ಪೃಥಾಸುತನಿಗೆ ಮಂಗಳಾಶಾಸನಮಾಡಲು ಧಾವಿಸಿಬಂದರು. ದೇವತೆಗಳು, ಕಾದ್ರವೇಯರು, ವೈನತೇಯರು, ಗಂಧರ್ವಾಪ್ಸರೆಯರು, ಪ್ರಜಾಪತಿಗಳು, ಸಪ್ತರ್ಷಿಗಳು–ಇವರೆಲ್ಲರೂ ಬಂದು ಪಾರ್ಥನಿಗೆ ಮಂಗಳಾ

ಶಾಸನಮಾಡಿದರು. ಲಕ್ಷೋಪಲಕ್ಷಸಂಖ್ಯೆಯಲ್ಲಿ ನೆರೆದಿದ್ದವರೆಲ್ಲರ ನಾಮ ಧೇಯಗಳನ್ನು ಹೇಳಲು ಸಾಧ್ಯವಾಗದಿದ್ದರೂ ಪ್ರಮುಖರ ಹೆಸರುಗಳನ್ನು ಹೇಳುವೆನು ಕೇಳು, ಜನಮೇಜಯ!"

ತನ್ನ ಪ್ರಪಿತಾಮಹನ ಕಥೆಯನ್ನು ಕೇಳುತ್ತಿದ್ದ ರಾಜನ ಕಣ್ಣುಗಳಲ್ಲಿ ಆನಂದಬಾಷ್ಪಗಳು ಸುರಿಯುತ್ತಿದ್ದುವು.

ವೈಶಂಪಾಯನರು ನಾಮಧೇಯಗಳನ್ನು ಹೇಳಲು ಉಪಕ್ರಮಿಸಿದರು : "ಭರದ್ವಾಜ, ಕಶ್ಯಪ, ಗೌತಮ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ, ಅತ್ರಿ–ಈ ಸಪ್ತರ್ಷಿಗಳೂ ಪಾರ್ಥನ ದರ್ಶನಕ್ಕಾಗಿ ಆ ವನದ ಬಳಿಗೆ ಬಂದರು. ಮರೀಚಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು–ಮೊದಲಾದ ಮಹರ್ಷಿ ಗಳೂ, ದಕ್ಷಪ್ರಜಾಪತಿಯೂ, ಗಂಧರ್ವರೂ, ಅಪ್ಸರಸರೂ ಬಂದರು. ಭೀಮಸೇನ, ಉಗ್ರಸೇನ, ಊರ್ಣಾಯು, ಅನಘ, ಗೋಪತಿ, ಧೃತರಾಷ್ಟ್ರ, ಸೂರ್ಯವರ್ಚಸ, ಯುಗಪ, ತೃಣಪ, ಕಾರ್ಷ್ಣಿ, ನಂದಿ, ಚಿತ್ರರಥ, ಶಾಲಿ ಶಿರ, ಪರ್ಜನ್ಯ, ಕಲಿ, ನಾರದ, ಬೃಹತ್ವಾ, ಋತ್ವಾ, ಬೃಹಕ, ಕರಾಲ, ಬ್ರಹ್ಮಚಾರೀ, ಬಹುಗುಣ, ಸುವರ್ಣ, ವಿಶ್ವಾವಸು, ಭುಮನ್ಯು, ಸುಚಂದ್ರ, ಶರು, ಗಾಯನಪಟುಗಳಾದ ಹಾಹಾ, ಹೂಹೂ–ಮುಂತಾದ ಗಂಧರ್ವ ಪ್ರಮುಖರೂ ಅಲ್ಲಿಗೆ ಬಂದರು. ಅನೂಚಾನಾ, ಅನವದ್ಯಾ, ಗುಣಮುಖ್ಯಾ, ಗುಣಾವರಾ, ಅದ್ರಿಕಾ, ಸೋಮಾ, ಮಿತ್ರಕೇಶೀ, ಅಲಂಬುಷಾ, ಮರೀಚಿ, ಶುಚಿಕಾ, ವಿದ್ಯುತ್ಪರ್ಣಾ, ತಿಲೋತ್ತಮಾ, ಅಂಬಿಕಾ, ಲಕ್ಷಣಾ, ಕ್ಷೇಮಾ, ದೇವೀ, ರಂಭಾ, ಮನೋರಮಾ, ಅಸಿತಾ, ಸುಬಾಹು, ಸುಪ್ರಿಯಾ, ಸುವಪು, ಪುಂಡರೀಕಾ, ಸುಗಂಧಾ, ಸುರಸಾ, ಪ್ರಮಾಥಿನೀ, ಕಾಮ್ಯಾ, ಶಾರದ್ವತೀ, ಮೇನಕಾ, ಸಹಜನ್ಯಾ, ಕರ್ಣಿಕಾ, ಪುಂಜಿಕಸ್ಥಲಾ, ಋತುಸ್ಥಲಾ, ಘೃತಾಚೀ, ವಿಶ್ವಾಚೀ, ಪೂರ್ವಚಿತ್ತಿ, ಉಮ್ಲೋಚಾ, ಪ್ರಮ್ಲೋಚಾ, ಉರ್ವಶೀ ಮುಂತಾದ ಅಪ್ಸರೆಯರು ಗುಂಪು-ಗುಂಪಾಗಿ ಅಲ್ಲಿಗೆ ಬಂದು ಆನಂದಪರವಶರಾಗಿ–ಕೆಲವರು ಗಾಯನಮಾಡುತ್ತಲೂ, ಕೆಲವರು ಗಾಯ ನಕ್ಕೆ ತಕ್ಕುದಾದ ಅಭಿನಯವನ್ನು ಮಾಡುತ್ತಲೂ, ಕೆಲವರು ನೃತ್ಯಮಾಡು ತ್ತಲೂ ತಮಗಾದ ಆನಂದವನ್ನು ವ್ಯಕ್ತಪಡಿಸುತ್ತಿದ್ದರು. ಧಾತಾ, ಅರ್ಯಮಾ, ಮಿತ್ರ, ವರುಣ, ಅಂಶ, ಭಗ, ಇಂದ್ರ, ವಿವಸ್ವಾನ್, ಪೂಷಾ,

ತ್ವಷ್ಟಾ, ಸವಿತಾ, ಪರ್ಜನ್ಯ, ವಿಷ್ಣು–ಎಂಬ ಹೆಸರುಳ್ಳ ಆದಿತ್ಯರೂ ಅಲ್ಲಿಗೆ ಬಂದರು.* ಮೃಗವ್ಯಾಧ, ಸರ್ಪ, ನಿರ್‌ಋತಿ, ಅಜೈಕಪಾದ, ಅಹಿರ್ಬುಧ್ನ್ಯ, ಪಿನಾಕೀ, ದಹನ, ಈಶ್ವರ, ಕಪಾಲೀ, ಸ್ಥಾಣು, ಭಗರೆಂಬ ಏಕಾದಶರುದ್ರರೂ ಪಾಂಡುಪುತ್ರನನ್ನು ನೋಡಲು ಬಂದರು. ಅಶ್ವಿನೀದೇವತೆಗಳೂ, ಅಷ್ಟ ವಸುಗಳೂ, ಸಪ್ತಮರುತ್ತುಗಳೂ, ವಿಶ್ವದೇವತೆಗಳೂ, ಸಾಧ್ಯರೂ ಅಲ್ಲಿಗೆ ಬಂದರು. ಕರ್ಕೋಟ, ವಾಸುಕಿ, ಕಶ್ಯಪ, ಕುಂಡ, ತಕ್ಷಕನೇ ಮೊದಲಾದ ಸರ್ಪಶ್ರೇಷ್ಠರೂ, ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ಅಸಿತಧ್ವಜ, ಅರುಣ, ಆರುಣಿ–ಮುಂತಾದ ವೈನತೇಯರೂ ಬಂದು ಪೃಥೆಯ ಆನಂದಕಂದನನ್ನು ಸಂದರ್ಶಿಸಿದರು.

ಆದರೆ ವನದಲ್ಲಿದ್ದವರೆಲ್ಲರಿಗೂ ಗಗನದಲ್ಲಿ ನೆರೆದಿದ್ದ ದೇವತಾಸ್ತೋಮ ವನ್ನು ನೋಡಲು ಸಾಧ್ಯವಾಗಲಿಲ್ಲ. ಜ್ಞಾನಿಗಳಾದ ಮಹರ್ಷಿಗಳು– ಇಂದ್ರನೇ ಮೊದಲಾದ ಸಕಲದೇವತಾಸ್ತೋಮವನ್ನೂ, ಪಾಂಡುಪುತ್ರನ ದರ್ಶನಕ್ಕೆ ಬಂದಿದ್ದವರೆಲ್ಲರನ್ನೂ ಕಂಡು ಆಶ್ಚರ್ಯಭರಿತರಾದರು. ತಾವು ಸಹ ಒಡನೆಯೇ ಶಿಶುವಿನ ಬಳಿಗೆ ಹೋಗಿ ಮಂಗಳಾಶಾಸನವನ್ನು ಮಾಡಿದರು.''

ವೈಶಂಪಾಯನರು ಹೇಳುತ್ತಿದ್ದಂತೆಲ್ಲಾ ಜನಮೇಜಯನ ಹೃದಯವು ಆನಂದದಿಂದ ಉಬ್ಬಿಹೋಯಿತು. ಮುತ್ತಜ್ಜನ ಜನನವು ತನ್ನೆದುರಿನಲ್ಲಿಯೇ ಆಗಿರುವುದೋ ಎಂಬ ಭ್ರಾಂತಿಯೂ, ಅದರಿಂದುಂಟಾಗುವ ಆನಂದವೂ ಜನಮೇಜಯನಿಗೆ ಉಂಟಾಯಿತು.

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳಿದರು :

``ಆಸೆಗೆ ಮಿತಿಯೆಲ್ಲಿಯದು? ಮಹಾತೇಜಸ್ವಿಯಾದ ಅರ್ಜುನನನ್ನು ಪಡೆದ ಮೇಲೂ ಪಾಂಡುವಿಗೆ ಇನ್ನೂ ಹೆಚ್ಚು ಮಕ್ಕಳನ್ನು ಪಡೆಯಬೇಕೆನ್ನುವ ಆಸೆಯು ತಪ್ಪಲಿಲ್ಲ. ಅಥವಾ ಹೆಚ್ಚು ಮಕ್ಕಳನ್ನು ಕ್ಷತ್ರಿಯರು ಪಡೆಯುವುದ ರಿಂದ ದೇಶವು ಸುಭದ್ರವಾಗಿರುವುದೆಂದೂ ಪಾಂಡುವು ಭಾವಿಸಿದ್ದಿರಬಹುದು. ಪಾಂಡುವು ಕುಂತಿಯ ಬಳಿಗೆ ಹೋಗಿ ಪುನಃ ಕೇಳಿದನು : ``ಕುಂತೀ!

* ಇಲ್ಲಿ ದ್ವಾದಶಾದಿತ್ಯರಿಗೆ ಬದಲಾಗಿ 13 ಆದಿತ್ಯರ ಹೆಸರುಗಳಿವೆ. ಹನ್ನೆರಡು ತಿಂಗಳುಗಳಿಗೆ 12 ಮತ್ತು ಅಧಿಕಮಾಸಕ್ಕೆ ಒಂದು ಹೀಗೆ ಭಾವಿಸಬಹುದಾಗಿದೆ.

ಮತ್ತೊಬ್ಬ ದೇವನನ್ನು ಆಮಂತ್ರಿಸಿ ಇನ್ನೊಬ್ಬ ಪುತ್ರನನ್ನು ಪಡೆಯಲಾರೆಯಾ?"

**ನಾತಶ್ಚತುರ್ಥಂ ಪ್ರಸವಮಾಪತ್ಸ್ವಪಿ ವದನ್ತ್ಯುತ I**
**ಅತಃ ಪರಂ ಸ್ವೈರಿಣೀ ಸ್ಯಾದ್ಬನ್ಧಕೀ ಪಞ್ಚಮೇ ಭವೇತ್ II೭೭II**

"ಆರ್ಯಪುತ್ರನೇ! ಆಪತ್ಕಾಲದಲ್ಲಿಯೂ (ನಿಯೋಗದ ಮೂಲಕ) ನಾಲ್ಕನೆಯ ಪ್ರಸವವನ್ನು ಜ್ಞಾನಿಗಳು ಒಪ್ಪುವುದಿಲ್ಲ. ನಾಲ್ಕು ಮಂದಿ ಪುರುಷರ ಸಮಾಗಮಮಾಡುವವಳು ಸ್ವೈರಿಣೀ ಎನಿಸುವಳು ; ಐದು ಮಂದಿಯೊಡನೆ ಸೇರುವವಳು ಕುಲಟೆಯೇ (ವೇಶ್ಯೆಯೇ) ಆಗುವಳು. ನೀನು ಧರ್ಮಸೂಕ್ಷ್ಮವನ್ನು ತಿಳಿದಿದ್ದರೂ ಮಕ್ಕಳಾಗಬೇಕೆನ್ನುವ ವ್ಯಾಮೋಹದಿಂದ ಧರ್ಮಕ್ಕೆ ವಿರುದ್ಧವಾದ ಮಾತುಗಳನ್ನು ಹೇಳುವೆಯೇಕೆ?"*

"ನಿನ್ನ ಮಾತು ಧರ್ಮಶಾಸ್ತ್ರಕ್ಕೆ ಅನುಗುಣವಾಗಿಯೇ ಇದೆ"–ಎಂದು ಪಾಂಡುವೂ ಸಮ್ಮತಿಸಿದನು.

೧೨೩ನೆಯ ಅಧ್ಯಾಯವು ಮುಗಿಯಿತು.

೧೨೪ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ನಕುಲ-ಸಹದೇವರ ಜನನ : ಪಾಂಡುಪುತ್ರರಿಗೆ ನಾಮಕರಣಾದಿ ಸಂಸ್ಕಾರ

ಜನಮೇಜಯ! ಪಾಂಡುವಿನ ಮಕ್ಕಳಾದ ಯುಧಿಷ್ಠಿರ-ಭೀಮಾರ್ಜುನರು ಹುಟ್ಟುವ ವೇಳೆಗೆ ಧೃತರಾಷ್ಟ್ರನಿಗೆ ನೂರೊಂದು ಜನ ಮಕ್ಕಳೂ ಹುಟ್ಟಿದ್ದರು.

ಮಾದ್ರಿಯು ಒಮ್ಮೆ ಏಕಾಂತದಲ್ಲಿ ಗಂಡನನ್ನು ಸಂಧಿಸಿ ಹೇಳತೊಡಗಿದಳು : "ಮಹಾರಾಜ! ನಾನು ನಿನ್ನೊಡನೆ ಈ ರೀತಿಯಲ್ಲಿ ಅರಣ್ಯವಾಸ ಮಾಡಬೇಕಾದ ಕಾರಣಕ್ಕಾಗಿಯೂ ಚಿಂತಿಸುವುದಿಲ್ಲ. ಶಾಪದ ಕಾರಣದಿಂದ ಸಂತಾನೋತ್ಪಾದನಾಶಕ್ತಿಯು ನಿನ್ನಲ್ಲಿಲ್ಲದಿರುವುದಕ್ಕೂ ನಾನು ದುಃಖಿಸುವು

* ಈ ಶ್ಲೋಕದ ವಿಷಯದಲ್ಲಿರುವ ಅಭಿಪ್ರಾಯಭೇದಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ದಿಲ್ಲ. ಯದ್ಯಪಿ ನಾನು ಕುಂತಿಗಿಂತಲೂ ಉತ್ತಮಕುಲದಲ್ಲಿ ಹುಟ್ಟಿರುವವಳಾದರೂ ಅವಳಿಗೆ ಅಧೀನಳಾಗಿರುವುದಕ್ಕೂ–ಗಾಂಧಾರಿಗೆ ನೂರು ಮಕ್ಕಳಾಗಿರುವುದಕ್ಕೂ ನನಗೆ ಮಾತ್ಸರ್ಯವಿಲ್ಲ. ಆದರೆ :



**ಇದಂ ತು ಮೇ ಮಹದ್ದುಃಖಂ ತುಲ್ಯತಾಯಾಮಪುತ್ರತಾ ।**
**ದಿಷ್ಟ್ಯಾತ್ವಿದಾನೀಂ ಭರ್ತುರ್ಮೇ ಕುನ್ಯಾಮಪ್ಯಸ್ತಿ ಸಂತತಿಃ ॥೪॥**

ನನಗೆ ಸಮಾನಸ್ಥಾನದಲ್ಲಿರುವವಳು ಪುತ್ರವತಿಯಾಗಿರುವಾಗ ನಾನು ಮಾತ್ರ ಅಪುತ್ರವತಿಯಾಗಿಯೇ ಇರುವುದು ನನ್ನ ಇಂದಿನ ಮಹಾದುಃಖಕ್ಕೆ ಕಾರಣವಾಗಿದೆ. ಅದೃಷ್ಟವಶದಿಂದ ನನ್ನ ಪತಿಗೆ ಕುಂತಿಯಲ್ಲಿ ಸಂತಾನ ಪ್ರಾಪ್ತಿಯಾಯಿತು. ಅವಳಿಗೆ ಸಮಾನಳೆನಿಸಿದ ನಾನು ಮಾತ್ರ ಅಪುತ್ರವತಿ

ಯಾಗಿಯೇ ಉಳಿದೆನು. ಈ ದುಃಖವನ್ನು ಮಾತ್ರ ನನ್ನಿಂದ ಸಹಿಸಲು ಶಕ್ಯವಿಲ್ಲ; ಮಹಾರಾಜ!

ಕುಂತಿಯು ಮಹಾಮಂತ್ರದ ಪುನಶ್ಚರಣೆಯಿಂದಾಗಿ ಮಕ್ಕಳನ್ನು ಪಡೆದಳೆಂದು ನೀನು ಹೇಳಬಹುದು. ಅದೇ ಮಹಾಮಂತ್ರದಿಂದಲೇ ನನಗೂ ಸಂತಾನಪ್ರಾಪ್ತಿಯಾಗುವಂತೆ ಕುಂತಿಭೋಜನ ಮಗಳು ಅನುಗ್ರಹಿಸಿದರೆ ನಾನೂ 'ಪುತ್ರವತೀ' ಎನಿಸಿಕೊಳ್ಳುವೆನು. ಬಹುಪುತ್ರಲಾಭದಿಂದ ನಿನಗೂ ಹಿತವುಂಟಾಗುವುದು.

ಆದರೆ ಅವಳು ನನ್ನ ಸವತಿಯಾಗಿರುವುದರಿಂದ–'ನನಗೂ ಪುತ್ರಪ್ರಾಪಕವಾದ ಮಹಾಮಂತ್ರವನ್ನು ಉಪದೇಶಿಸಿ ಅನುಗ್ರಹಿಸು'–ಎಂದು ನಾನೇ ಕುಂತಿಯನ್ನು ಕೇಳಲು ಸ್ವಾಭಿಮಾನವು ಅಡ್ಡಬರುವುದು. ನಿನಗೇನಾದರೂ ನನ್ನ ವಿಷಯದಲ್ಲಿ ಪ್ರಸನ್ನತೆಯಿದ್ದರೆ ಅವಳನ್ನು ಒಪ್ಪಿಸಿ ನನ್ನ ಇಚ್ಛೆಯನ್ನು ಈಡೇರಿಸು."

ಪಾಂಡುವು ಮಾದ್ರಿಯ ಇಂಗಿತವನ್ನರಿತವನಾಗಿ ನಸುನಕ್ಕು–"ಮದ್ರಕುಮಾರಿ! ಈ ವಿಷಯವು ನನ್ನ ಮನಸ್ಸಿನಲ್ಲಿಯೂ ಪದೇ-ಪದೇ ತರ್ಕಿತವಾಗುತ್ತಿತ್ತು. ಆದರೆ ನಿನ್ನ ಆಂತರ್ಯವೇನೆಂಬುದನ್ನು ನಾನು ಅರಿಯದೇ ಇದುವರೆಗೆ ಹೇಳಲು ಹಿಂಜರಿದೆನು. ಈಗ ನಿನ್ನ ಮನೋಭಿಲಾಷೆಯು ತಿಳಿಯಿತು. ನಿನ್ನ ಅಭಿಲಾಷೆಯನ್ನು ಪೂರ್ಣಮಾಡಲು ಸಂಪೂರ್ಣವಾಗಿ ಪ್ರಯತ್ನಿಸುವೆನು. ಕುಂತಿಯು ನನ್ನ ಮಾತನ್ನು ತಿರಸ್ಕಾರಮಾಡುವುದಿಲ್ಲವೆಂಬ ಭರವಸೆಯೂ ನನಗಿದೆ. ನೀನಿನ್ನು ಚಿಂತಿಸಬೇಡ"–ಎಂದು ಹೇಳಿ, ಕುಂತಿಯ ಬಳಿಗೆ ಹೋಗಿ ಏಕಾಂತದಲ್ಲಿ ಹೇಳಿದನು :

"ರಾಜಕುಮಾರಿ! ನಮ್ಮ ವಂಶದ ಅಭಿವೃದ್ಧಿಗಾಗಿಯೂ, ಪ್ರಪಂಚದ ಉದ್ಧಾರಕ್ಕಾಗಿಯೂ, ನಮಗೂ ಮತ್ತು ನಮ್ಮ ಪೂರ್ವಜರಿಗೂ ಪಿಂಡೋದಕ ಕ್ರಿಯೆಗಳು ಎಂದೆಂದಿಗೂ ತಪ್ಪದಿರುವಂತಾಗಲೂ–ಇನ್ನೂ ಹೆಚ್ಚಿನ ಸಂತಾನವನ್ನು ಪಡೆಯುವುದು ಯುಕ್ತವಾಗಿದೆಯಲ್ಲವೇ?"*

---

* ಮೂವರೇ ಮಕ್ಕಳಿದ್ದು, ಅವರಿಗೆ ಮಕ್ಕಳಾಗದಿದ್ದರೆ ಅಥವಾ ಅವರ ಮಕ್ಕಳಿಗೆ ಮಕ್ಕಳಾಗದಿದ್ದರೆ ವಂಶಾವಳಿಯೇ ನಿಂತುಹೋಗಿ ಪಿತೃದೇವತೆಗಳಿಗೂ ಪಿಂಡೋದಕ

ಪಾಂಡುವು ಮುಂದುವರಿದು ಹೇಳಿದನು : "ದೇವಿ! ನನ್ನ ಸಂತೋಷ ಕ್ಕಾಗಿ ಮತ್ತು ಯಶಸ್ಸಿನ ಸಂಪಾದನೆಗಾಗಿ–ನಿನಗೆ ದುಸ್ಸಾಧ್ಯವೆನಿಸಿ ದರೂ–ನಾನು ಹೇಳಿದಂತೆ ಮಾಡುವುದು ಯುಕ್ತವಾಗಿದೆ. ಪ್ರಪಂಚದಲ್ಲಿ ಯಶಸ್ಸಿಗಾಗಿಯೇ ಸಕಲರೂ ಕಾರ್ಯಮಾಡುವರು.

**ಪ್ರಾಪ್ಯಾಧಿಪತ್ಯಮಿನ್ದ್ರೇಣ ಯಜ್ಞೈರಿಷ್ಟಂ ಯಶೋಽರ್ಥಿನಾ ।**
**ತಥಾ ಮನ್ತ್ರವಿದೋ ವಿಪ್ರಾಸ್ತಪಸ್ತಪ್ತ್ವಾ ಸುದುಷ್ಕರಮ್ ।**
**ಗುರೂನಭ್ಯುಪಗಚ್ಛನ್ತಿ ಯಶಸೋಽರ್ಥಾಯ ಭಾಮಿನಿ ॥೧೨॥**

**ತಥಾ ರಾಜರ್ಷಯಃ ಸರ್ವೇ ಬ್ರಾಹ್ಮಣಾಶ್ಚ ತಪೋಧನಾಃ ।**
**ಚಕ್ರುರುಚ್ಚಾವಚಂ ಕರ್ಮ ಯಶಸೋಽರ್ಥಾಯ ದುಷ್ಕರಮ್ ॥೧೩॥**

ಭಾಮಿನಿ! ಇಂದ್ರನು ತ್ರಿಲೋಕಾಧಿಪತಿಯಾಗಿದ್ದರೂ ಯಶಸ್ಸಿ ಗಾಗಿಯೇ ಯಜ್ಞ-ಯಾಗಾದಿಗಳನ್ನು ಮಾಡುತ್ತಲೇ ಇರುತ್ತಾನೆ. ಬ್ರಾಹ್ಮ ಣರು ವೇದ-ವೇದಾಂಗಪಾರಂಗತರಾಗಿದ್ದರೂ, ತಪಸ್ವಿಗಳಾಗಿದ್ದರೂ ಹೆಚ್ಚಿನ ಯಶಸ್ಸನ್ನು ಗಳಿಸಲು ತಮ್ಮ ಆಚಾರ್ಯರ ಸಮೀಪಕ್ಕೆ ವಿಷಯಗ್ರಹಣಕ್ಕಾಗಿ ಹೋಗುತ್ತಲೇ ಇರುತ್ತಾರೆ. ರಾಜರ್ಷಿಗಳೂ, ಬ್ರಾಹ್ಮಣರೂ ಘೋರವಾದ ತಪಸ್ಸನ್ನು ಮಾಡಿ ಅನೇಕವಿಧವಾದ ಅಘಟಿತಘಟನಾಶಕ್ತಿಗಳನ್ನು ಸಂಪಾದಿಸಿದ್ದರೂ ಯಶಸ್ಕಾಮರಾಗಿ ಬಗೆ-ಬಗೆಯ ಕೆಲಸಗಳನ್ನು ಮಾಡು ತ್ತಲೇ ಇರುತ್ತಾರೆ. ಆದುದರಿಂದ ನಾನು ಯಶಸ್ಸಿಗಾಗಿ ಹೆಚ್ಚಿನ ಸಂತಾನ ವನ್ನು ಪಡೆಯುವುದು ಅಯುಕ್ತವೆನಿಸಲಾರದು. ಮೇಲಾಗಿ ಇಂದು ಮಾದ್ರಿಯು 'ಅಪುತ್ರವತೀ' ಎನಿಸಿರುವಳು. ನೀನು ಮಂತ್ರೋಪದೇಶ ವೆಂಬ ದೋಣಿಯಿಂದ ಅವಳನ್ನೂ ಬಂಜೆತನದಿಂದ ದಾಟಿಸಿ ಪುತ್ರವತಿ ಯನ್ನಾಗಿಮಾಡಿ, ಶಾಶ್ವತವಾದ ಕೀರ್ತಿಯನ್ನು ಗಳಿಸು. ಇದರಿಂದ ನನ್ನ ಅಪೇಕ್ಷೆಯೂ ಫಲಿಸಿದಂತಾಗುವುದು."

ಜನಮೇಜಯ! ಪಾಂಡುವಿನ ಮಾತಿಗೆ ಕುಂತಿಯು ಒಡನೆಯೇ

---

ಕ್ರಿಯೆಗಳು ನಿಂತುಹೋಗಬಹುದೆಂಬ ಅಭಿಪ್ರಾಯವು ಪಾಂಡುವಿಗಿದ್ದಿರಬಹುದು. ಕೌರವ-ಪಾಂಡವರ ಮಕ್ಕಳಲ್ಲಿ ಅರ್ಜುನನ ಮಗನೊಬ್ಬನು ಮಾತ್ರ ಕುರುವಂಶದ ಕುರುಹಾಗಿ ಉಳಿಯುವನೆಂಬುದನ್ನು ಮುಂದೆ ತಿಳಿಯುವೆವು.

ಒಪ್ಪಿದಳು. ಪರಿಶುದ್ಧಳಾಗಿದ್ದ ಮಾದ್ರಿಯನ್ನು ಕರೆದು, ಪದ್ಮಾಸನದಲ್ಲಿ ಕುಳ್ಳಿರಿಸಿ ಮಹಾಮಂತ್ರವನ್ನು ತಾನು ಪುನಶ್ಚರಣೆಮಾಡಿ, ಅದರ ಶಕ್ತಿಯನ್ನು ಮಾದ್ರಿಗೆ ಧಾರೆಯೆರೆದು ಹೇಳಿದಳು : "ತಂಗಿ! ಈ ಕೂಡಲೇ ಯಾವನಾದರೊಬ್ಬ ದೇವನನ್ನು ಸ್ಮರಿಸು. ಅವನು ಒಡನೆಯೇ ನಿನ್ನ ಬಳಿಗೆ ಬಂದು ತನಗೆ ಅನುರೂಪನಾದ ಪುತ್ರನನ್ನು ಅನುಗ್ರಹಿಸುವನು"–ಎಂದು ಹೇಳಿ ಹೊರಟುಹೋದಳು. ಮಾದ್ರಿಯು ಕ್ಷಣಕಾಲ ಯೋಚಿಸಿ ದಿವ್ಯಸುಂದರಮೂರ್ತಿಗಳಾದ ಅಶ್ವಿನೀದೇವತೆಗಳನ್ನು ಸ್ಮರಿಸಿದಳು.*

ಮಾದ್ರಿಯ ಆಮಂತ್ರಣವನ್ನು ಅಂಗೀಕರಿಸಿ ಇಬ್ಬರು ದೇವತೆಗಳೂ ಅವಳ ಸಮೀಪಕ್ಕೆ ಬಂದು ಪುತ್ರರನ್ನು ಅನುಗ್ರಹಿಸಿದರು. ಇಬ್ಬರ ಅನುಗ್ರಹ ದಿಂದ ಇಬ್ಬರು ಮಕ್ಕಳನ್ನು ಪಡೆಯಬೇಕಲ್ಲವೇ? ಅಂತೆಯೇ ಮಾದ್ರಿಯು ಅಶ್ವಿನೀದೇವತೆಗಳ ಅನುಗ್ರಹದಿಂದ ಅವಳಿ-ಜವಳಿ ಮಕ್ಕಳನ್ನು ಒಡನೆಯೇ ಪಡೆದಳು. ಅವರಿಬ್ಬರಿಗೂ ನಕುಲ-ಸಹದೇವರೆಂದು ಹೆಸರಾಯಿತು. ಅಶ್ವಿನೀ ದೇವತೆಗಳಂತೆಯೇ ನಕುಲ-ಸಹದೇವರು ಅಸಾಧಾರಣರೂಪಸಂಪನ್ನರಾಗಿ ದ್ದರು. ಅವರ ಜನನವಾದೊಡನೆಯೇ ಅಶರೀರವಾಣಿಯು "ಇವರಿಬ್ಬರೂ ರೂಪದಲ್ಲಿಯೂ, ಪರಾಕ್ರಮದಲ್ಲಿಯೂ, ಗುಣದಲ್ಲಿಯೂ, ಅಶ್ವಿನೀದೇವತೆ ಗಳನ್ನೂ ಮೀರಿಸುತ್ತಾರೆ"–ಎಂದು ಹೇಳಿತು. ನಿಶ್ಚಯವಾಗಿಯೂ ಅವರ ಅಸಾಧಾರಣವಾದ ರೂಪರಾಶಿಯಿಂದ ಆ ವನವೇ ವಿರಾಜಿಸಿತು.

ಪಾಂಡುಪುತ್ರರೆಲ್ಲರಿಗೂ ಜಾತಕರ್ಮ-ನಾಮಕರಣಾದಿಗಳು ಯಥಾ ವಿಧಿಯಾಗಿ ಮಾಡಲ್ಪಟ್ಟುವು. ಋಷಿಗಳು ಗುಂಪಾಗಿ ಬಂದು ಸ್ವಸ್ತಿವಾಚನ ವನ್ನು ಮಾಡಿದರು. ಕುಂತಿಯ ಮಕ್ಕಳಿಗೆ ಅನುಕ್ರಮವಾಗಿ ಯುಧಿಷ್ಠಿರ,

---

* ಅಶ್ವಿನೀದೇವತೆಗಳಿಗೆ ಯಮಳರೆಂದೂ ಹೆಸರು. ಎಂದರೆ ಅವಳಿ-ಜವಳಿಗಳು. ಸ್ವಾಭಾವಿಕವಾಗಿ ಅವಳಿ-ಜವಳಿ ಮಕ್ಕಳು ಜನಿಸಿದರೆ ರೂಪದಲ್ಲಿ ಏಕತೆಯಿರುವುದೇ ಹೊರತು ಮನಸ್ಸಿನಲ್ಲಿ ಏಕತೆಯಿರದು. ಆದರೆ ಅಶ್ವಿನೀದೇವತೆಗಳು ಮಾತ್ರ ಎಲ್ಲದರಲ್ಲೂ ಏಕತೆಯಿರುವ ದೇವತೆಗಳು. ಒಬ್ಬರನ್ನು ಬಿಟ್ಟು ಮತ್ತೊಬ್ಬರ ಸಂಚಾರವೇ ಇಲ್ಲ. ಒಬ್ಬರನ್ನು ಬಿಟ್ಟು ಮತ್ತೊಬ್ಬರನ್ನು ಕರೆಯುವಂತೆಯೂ ಇಲ್ಲ. ಅಶ್ವಿನೀದೇವತಾತ್ಮಕಮಂತ್ರಗಳೂ ದ್ವಿವಚನದಲ್ಲಿಯೇ ಇದ್ದು, ಇಬ್ಬರು ದೇವತೆಗಳನ್ನೂ ಸೇರಿಸಿಯೇ ಆಮಂತ್ರಿಸುವ ಮಂತ್ರಗಳೇ ಆಗಿವೆ.

ಭೀಮ, ಅರ್ಜುನ–ಎಂಬ ಹೆಸರಿಟ್ಟರು. ಮಾದ್ರಿಯ ಮಕ್ಕಳನ್ನು ನಕುಲ-ಸಹದೇವರೆಂದು ಕರೆದರು. ಐದು ಜನರೂ ಒಂದೊಂದು ವರ್ಷದ ಅಂತರದಲ್ಲಿ ಹುಟ್ಟಿದ್ದರೂ ಎಲ್ಲರೂ ಐದು ವರ್ಷಗಳ ಬಾಲಕರಂತೆಯೇ ವಿರಾಜಿಸಿದರು. ಅವರು ಮಹಾಸತ್ತ್ವರಾಗಿಯೂ, ಮಹಾವೀರ್ಯರಾಗಿಯೂ, ಮಹಾಬಲರಾಗಿಯೂ, ಮಹಾಪರಾಕ್ರಮಿಗಳಾಗಿಯೂ ಇದ್ದರು. ದೇವರೂಪಿಗಳಾದ, ಅಮಿತೌಜಸ್ಕರಾದ ಮಕ್ಕಳನ್ನು ನೋಡಿ ಪಾಂಡುವು ಅಮಿತಾನಂದವನ್ನು ಪಡೆದನು. ಶತಶೃಂಗದಲ್ಲಿ ವಾಸಿಸುತ್ತಿದ್ದ ಮಹರ್ಷಿಗಳಿಗೂ, ಋಷಿಪತ್ನಿಯರಿಗೂ ಐದು ಮಕ್ಕಳೂ ಅಚ್ಚು-ಮೆಚ್ಚಾಗಿದ್ದರು.

ಕೆಲವು ದಿನಗಳು ಕಳೆದನಂತರ ಪುನಃ ಪಾಂಡುವು ಕುಂತಿಯ ಬಳಿಗೆ ಹೋಗಿ ಏಕಾಂತದಲ್ಲಿ ಕೇಳಿದನು : "ಮಾದ್ರಿಗೆ ಮತ್ತೊಂದು ಸಂತಾನವಾಗಲು..."

'ಅವಕಾಶವಿಲ್ಲ.' ಒಡನೆಯೇ ಕುಂತಿಯಿಂದ ಉತ್ತರ ಬಂದಿತು.

ಪಾಂಡುವು ಅಧೀರಮುಖಮುದ್ರೆಯಿಂದ ಕುಂತಿಯ ಮುಂದಿನ ಮಾತುಗಳನ್ನು ನಿರೀಕ್ಷಿಸುತ್ತಾ ಸ್ತಬ್ಧನಾಗಿ ಕುಳಿತನು. ಕುಂತಿಯು ಮುಂದೆ ಹೇಳತೊಡಗಿದಳು :

**ಉಕ್ತಾ ಸಕೃದ್ದ್ವನ್ದ್ವಮೇಷಾ ಲೇಭೇ ತೇನಾಸ್ಮಿ ವಞ್ಚಿತಾ ।**
**ಬಿಭೇಮ್ಯಸ್ಯಾಃ ಪರಿಭವಾತ್ಕುಸ್ತ್ರೀಣಾಂ ಗತಿರೀದೃಶೀ ।**
**ನಾಜ್ಞಾಸಿಷಮಹಂ ಮೂಢಾ ದ್ವನ್ದ್ವಾಹ್ವಾನೇ ಫಲದ್ವಯಮ್ ॥೨೭॥**

**ತಸ್ಮಾನ್ನಾಹಂ ನಿಯೋಕ್ತವ್ಯಾ ತ್ವಯೈಷೋಽಸ್ತು ವರೋ ಮಮ ॥೨೮॥**

"ಒಬ್ಬ ಮಗನನ್ನು ಪಡೆಯಲು ಒಂದು ಬಾರಿ ದೇವಾತಾಹ್ವಾನಶಕ್ತಿಯನ್ನು ಕೊಟ್ಟಿದ್ದರಿಂದ ಮಾದ್ರಿಯು ಇಬ್ಬರು ಮಕ್ಕಳನ್ನು ಚಾತುರ್ಯದಿಂದ ಪಡೆದಳು. ನಿಶ್ಚಯವಾಗಿಯೂ ಇದರಿಂದವಳು ನನಗೆ ಮೋಸಮಾಡಿದಂತಾಗಲಿಲ್ಲವೇ? ನಾನು ಪುನಃ ದೇವತೆಗಳನ್ನು ಆಮಂತ್ರಿಸುವ ಶಕ್ತಿಯನ್ನು ಮಾದ್ರಿಗೆ ಕೊಟ್ಟುಬಿಟ್ಟರೆ ಅವಳು ಚತುರತೆಯಿಂದ ಮತ್ತಿಬ್ಬರು ಮಕ್ಕಳನ್ನು ಪಡೆದು ನನ್ನನ್ನೂ ಮೀರಿಸಬಹುದು. ಕುಸ್ತ್ರೀಯರ (ಕೆಟ್ಟಹೆಂಗಸರ) ರೀತಿಗಳೇ ಹೀಗೆ. ನಿಶ್ಚಯವಾಗಿಯೂ ನಾನು ಮಂದಬುದ್ಧಿಯವಳೇ ಸರಿ.

ಏಕೆಂದರೆ : ಇಷ್ಟರವರೆಗೆ ಒಂದೇ ಮಂತ್ರದಿಂದ ಇಬ್ಬರು ದೇವತೆಗಳನ್ನು ಆಹ್ವಾನಿಸಿ ಇಬ್ಬರು ಮಕ್ಕಳನ್ನು ಪಡೆಯಬಹುದೆಂಬ ಅರಿವೇ ನನಗೆ ಉಂಟಾಗಿರಲಿಲ್ಲ. ಆದುದರಿಂದ ದಯೆಯಿಟ್ಟು ಪುನಃ ಮಾದ್ರಿಯ ವಿಷಯ ವಾಗಿ ಏನೊಂದು ಆಜ್ಞೆಯನ್ನೂ ಮಾಡದಿರು. ಈ ವರವನ್ನು ನಾನು ನಿನ್ನಿಂದ ಪ್ರಾರ್ಥಿಸುವೆನು.”

ಪಾಂಡುವು ನಿರುತ್ತರನಾಗಿ ಹಿಂದಿರುಗಿದನು.

ಜನಮೇಜಯ! ಈ ರೀತಿಯಾಗಿ ಪಾಂಡುವಿಗೆ ಐವರು ಪುತ್ರರು ದೇವತೆಗಳ ಅನುಗ್ರಹದಿಂದ ಜನಿಸಿದರು. ಆ ಐವರು ಮಕ್ಕಳೂ ಸರ್ವಲಕ್ಷಣ ಸಂಪನ್ನರಾಗಿಯೂ, ಚಂದ್ರನಂತೆ ಪ್ರಿಯದರ್ಶನರಾಗಿಯೂ, ಸಿಂಹದಂತೆ ದರ್ಪವುಳ್ಳವರಾಗಿಯೂ, ದೊಡ್ಡ-ದೊಡ್ಡ ಧನುಸ್ಸುಗಳನ್ನು ಧರಿಸಿದವ ರಾಗಿಯೂ, ಸಿಂಹದಂತೆ ಗಮನವುಳ್ಳವರಾಗಿಯೂ, ಸಿಂಹದ ಕುತ್ತಿಗೆಗೆ ಸದೃಶವಾದ ಕುತ್ತಿಗೆಗಳುಳ್ಳವರಾಗಿಯೂ, ದೇವತೆಗಳಂತೆ ಪರಾಕ್ರಮವುಳ್ಳವ ರಾಗಿಯೂ ಇದ್ದರು. ಮನುಷ್ಯೇಂದ್ರರಾದ ಪಾಂಡುಕುಮಾರರು ದಿನ- ದಿನಕ್ಕೂ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದುತ್ತಿದ್ದರು. ಪುಣ್ಯತಮವಾದ ಹಿಮವತ್ಪರ್ವತದ ತಪ್ಪಲಿನಲ್ಲಿದ್ದ ಆಶ್ರಮದಲ್ಲಿ ಅಭಿವೃದ್ಧಿ ಹೊಂದುತ್ತಿದ್ದ ಪಾಂಡವರೈವರೂ, ತಮ್ಮ ಅಸಾಧಾರಣವಾದ ಕ್ರೀಡಾ ವಿನೋದಗಳಿಂದಲೂ, ಧನುರ್ವಿದ್ಯೆಯಿಂದಲೂ ಅಲ್ಲಿದ್ದ ತಪಸ್ವೀಜನರಿಗೆ ಅಚ್ಚರಿಯನ್ನುಂಟು ಮಾಡುತ್ತಿದ್ದರು. ಇತ್ತ ಐವರು ಪಾಂಡುಪುತ್ರರೂ–ಅತ್ತ ಹಸ್ತಿನಾಪಟ್ಟಣದಲ್ಲಿ ಧೃತರಾಷ್ಟ್ರನ ನೂರು ಮಕ್ಕಳೂ–ಸರೋವರದಲ್ಲಿನ ಕಮಲಗಳಂತೆ ದಿನೇ-ದಿನೇ ಅಭಿವೃದ್ಧಿಯನ್ನು ಹೊಂದುತ್ತಿದ್ದರು”–ಎಂದು ಹೇಳಿ ವೈಶಂಪಾಯನರು ಅಂದಿನ ಪ್ರವಚನವನ್ನು ಮುಗಿಸಿದರು.

೧೨೪ನೆಯ ಅಧ್ಯಾಯವು ಮುಗಿಯಿತು.

## ಪಾಂಡುವಿನ ಮರಣ : ಮಾದ್ರಿಯ ಸಹಗಮನ

ವೈಶಂಪಾಯನರು ಮರುದಿನ ಪ್ರಣವೋಚ್ಚಾರಣಪೂರ್ವಕವಾಗಿ ಕಥೆಯನ್ನು ಮುಂದುವರಿಸಿ ಹೇಳತೊಡಗಿದರು :

"ಜನಮೇಜಯ! ಪಾಂಡುವು ತನ್ನ ಐವರು ಮಕ್ಕಳ ಭುಜಬಲ-ಪರಾಕ್ರಮಗಳನ್ನೂ, ಧನುರ್ವಿದ್ಯೆಯಲ್ಲಿ ಅವರಿಗಿದ್ದ ಚಾತುರ್ಯವನ್ನೂ ಕಂಡು ನಶಿಸಿಹೋಗುತ್ತಿದ್ದ ತನ್ನ ಪರಾಕ್ರಮದ ಪುನರುದಯವಾಯಿತೆಂಬ ಸಂತಸದಿಂದಿದ್ದನು.

ದಿನಗಳು ಕಳೆದುವು. ಮಾಸಗಳು ಉರುಳಿದುವು. ಕಳೆದುಹೋದ ಋತುಗಳು ಪುನಃ ಪುನಃ ಬಂದುವು. ವಸಂತನು ಪುನರಾಗಮಿಸಿದನು. ವನದಲ್ಲಿ ಮರ-ಗಿಡ-ಬಳ್ಳಿಗಳೆಲ್ಲವೂ ಫಲ-ಪುಷ್ಪಗಳ ಭಾರದಿಂದ ಬಾಗಿಕೊಂಡಿದ್ದುವು. ವಸಂತಕಾಲವೆಂದರೆ ಸಕಲಪ್ರಾಣಿಗಳಿಗೂ ಮನಮೋಹಕವಾದ ಕಾಲ. ಮನ್ಮಥನು ಸ್ವೇಚ್ಛೆಯಿಂದ ವಿಜೃಂಭಿಸುವ ಕಾಲ. ಅಂತಹ ಕಾಲದಲ್ಲಿ ಪಾಂಡುವು ಮಾದ್ರಿಯೊಡನೆ ಸ್ವೇಚ್ಛೆಯಿಂದ ವನವಿಹಾರಮಾಡುತ್ತಿದ್ದನು. ಪಲಾಶ, ತಿಲಕ, ಚೂತ, ಚಂಪಕ, ಪಾರಿಭದ್ರಕ–ಮುಂತಾದ ಅನೇಕವೃಕ್ಷಗಳಿಂದ ವನವು ನಿಬಿಡವಾಗಿದ್ದಿತು. ತಾಮರಸಪುಷ್ಪಗಳಿಂದ ದಟ್ಟವಾದ ಸರೋವರಗಳು ಕಂಗೊಳಿಸುತ್ತಿದ್ದುವು. ಯದ್ಯಪಿ ಅಂತಹ ಅನೇಕಮಧುಮಾಸಗಳನ್ನು ಪಾಂಡುವು ಆ ವನದಲ್ಲಿ ಕಳೆದಿದ್ದರೂ–ಆ ವರ್ಷದ ಮಧುಮಾಸವು ಪಾಂಡುವಿನ ಕಣ್ಣಿಗೆ ಹೆಚ್ಚು ಆಕರ್ಷಣೀಯವಾಗಿತ್ತು. ಪಾಂಡುವಿನ ಮನಸ್ಸು ಬಹಳ ಉಲ್ಲಾಸಗೊಂಡಿತ್ತು. ಅನೇಕವರ್ಷಗಳಿಂದ ಯಾವುದೋ ಯೋಚನೆಯ ಕಾರಣದಿಂದ ಕುಂದಿದ್ದ ಮುಖಾರವಿಂದವು ಅಂದು ವಿಕಸಿತವಾಯಿತು. ವನಕುಸುಮಗಳ ಸುಗಂಧವನ್ನು ಹೊತ್ತ ಮಂದಮಾರುತ, ಕೋಗಿಲೆಯ ಇಂಪಾದ ಧ್ವನಿ–ಇವೇ ಮುಂತಾದ ಮಧುಮಾಸದ ರಮ್ಯತೆಯು ಪಾಂಡುವಿನ ಮನಸ್ಸನ್ನು ಮತ್ತಷ್ಟು ಪ್ರಫುಲ್ಲಗೊಳಿಸಿತು. ಮಾದ್ರಿಯು ಶುಭ್ರವಸ್ತ್ರವನ್ನು ಧರಿಸಿ, ಪಾಂಡುವನ್ನು ಅನುಸರಿಸಿ

ಹೋಗುತ್ತಿದ್ದಳು. ವಿಹಾರವೂ ಏಕಾಂತವಾಗಿತ್ತು. ಆ ಸಮಯದಲ್ಲಿ ಮಧುಮಾಸದ ಒಡೆಯನಾದ ಮನ್ಮಥನು ತನ್ನ ಋತುವಿನ ಸೊಬಗನ್ನು ಪಾಂಡುವೂ ಅನುಭವಿಸುತ್ತಿರುವನೆಂಬ ಮಾತ್ಸರ್ಯದಿಂದಲೋ ಎಂಬಂತೆ ಪಂಚಕುಸುಮಬಾಣಗಳನ್ನೂ ಏಕಕಾಲದಲ್ಲಿ ಪಾಂಡುವಿನ ಮೇಲೆ ಪ್ರಯೋಗಿಸಿದನು. ಬಾಣದ ತೀಕ್ಷ್ಣತೆಯು ಅತ್ಯುಗ್ರವಾಗಿತ್ತು. ಅದರಿಂದಾಗಿ ಪಾಂಡುವಿಗೆ ಹಿಂದಿನ ಶಾಪವೃತ್ತಾಂತದ ವಿಸ್ಮರಣೆಯಾಯಿತು. ಅನುಸರಿಸಿ ಬರುತ್ತಿದ್ದ ಮಾದ್ರಿಯ ಕೈಹಿಡಿದನು. ಮಾದ್ರಿಯ ಎದೆಯು ನಡುಗಿತು. ಮೊದಲನೆಯ ಬಾರಿ ಬಹಳ ಕಷ್ಟಪಟ್ಟು ಕೈಯನ್ನು ಬಿಡಿಸಿಕೊಂಡಳು. ಆದರೆ ಪಾಂಡುವು ಮನ್ಮಥನ ಅನವರತವಾದ ಬಾಣಪ್ರಯೋಗಗಳನ್ನು ತಪ್ಪಿಸಿ ಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಮಾದ್ರಿಯ ಪ್ರಯತ್ನವೆಲ್ಲವೂ ನಿಷ್ಫಲವಾಯಿತು. ಋಷಿಯ ಶಾಪದ ವಿಸ್ಮರಣೆಯಾಯಿತು. ಮಾದ್ರಿಯು ಸ್ಮರಣೆಗೆ ತಂದರೂ ವಿಧಿಯ ವಿಲಾಸದಂತೆ ಪಾಂಡುವು ನಿರ್ಲಕ್ಷ್ಯಮಾಡಿದನು. ಮನ್ಮಥನ ಬಾಣಗಳಿಗೆ ಆಹುತಿಯಾಗಲು ಇಚ್ಛಿಸಿರುವನೋ ಎಂಬಂತೆ–ಬಲಾತ್ಕಾರವಾಗಿ ಮಾದ್ರಿಯನ್ನು ಆಲಿಂಗಿಸಿದನು. ಪಾಂಡುವಿನ ವಿಷಯದಲ್ಲಿ ಮಾತ್ರ ಮನ್ಮಥನ ಪಂಚಬಾಣಗಳು ಪಂಚತ್ವವನ್ನೇ ಸಾಧಿಸಿದುವು. (ಪಾಂಡುವಿನ ಮರಣಕ್ಕೇ ಕಾರಣವಾದುವು.)

ಸುರತಸುಖಕ್ಕಾಗಿ ಆಲಿಂಗಿಸಿದೊಡನೆಯೇ ಚೇತನಾರಹಿತನಾಗಿ ಬಿದ್ದ ಪತಿಯನ್ನು ಕಂಡು ಭೀತಳಾಗಿ ಮಾದ್ರಿಯು ಗಟ್ಟಿಯಾಗಿ ಅಳಲು ಮೊದ ಲಿಟ್ಟಳು. ಅವಳ ರೋದನವು ಕುಂತಿಯ ಕಿವಿಗಳಿಗೆ ಬಿದ್ದೊಡನೆಯೇ ಅವಳು ಭೀತಳಾಗಿ ಐವರು ಕುಮಾರರೊಡನೆ ರೋದನವು ಕೇಳಿಬರುತ್ತಿದ್ದ ಕಡೆಗೆ ಓಡಿಬಂದಳು.

ಕುಂತಿಯು ಸಮೀಪಿಸುತ್ತಿರುವುದನ್ನು ತಿಳಿದು ಮಾದ್ರಿಯು–"ಅಕ್ಕಾ! ನೀನೊಬ್ಬಳೇ ಬಾ. ಮಕ್ಕಳು ಅಲ್ಲಿಯೇ ಇರಲಿ"–ಎಂದು ದೀನಳಾಗಿ ನುಡಿದಳು. ಮಕ್ಕಳೈವರನ್ನೂ ಅಲ್ಲಿಯೇ ನಿಲ್ಲುವಂತೆ ಹೇಳಿ–"ಅಯ್ಯೋ! ದುರ್ವಿಧಿಯೇ!"–ಎಂದು ಕೂಗಿಕೊಳ್ಳುತ್ತಾ ಕುಂತಿಯು ಪಾಂಡುವಿನ ಸಮೀಪಕ್ಕೆ ಓಡಿಬಂದಳು. ಗತಪ್ರಾಣನಾಗಿ ಕೆಳಗೆ ಬಿದ್ದಿದ್ದ ಪಾಂಡುವನ್ನೂ, ದುಃಖದಿಂದ ನೆಲದ ಮೇಲೆ ಹೊರಳಾಡುತ್ತಿದ್ದ ಮಾದ್ರಿಯನ್ನೂ ನೋಡಿ

ಕುಂತಿಯ ತಲೆಯು ಭ್ರಮಣಗೊಂಡಿತು. 'ಅಯ್ಯೋ!'–ಎನ್ನುತ್ತಾ ಪಾಂಡುವಿನ ಮೇಲೆ ಬಿದ್ದು ಗಟ್ಟಿಯಾಗಿ ಅತ್ತಳು.

"ತಂಗಿ! ಜಿತೇಂದ್ರಿಯನಾಗಿದ್ದ ರಾಜನನ್ನು ನಾನು ಸದಾಕಾಲವೂ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದೆನು. ಮನ್ಮಥನ ಬಾಣಕ್ಕೆ ಗುರಿಯಾದ ಇವನು ಋಷಿಯ ಶಾಪವನ್ನೂ ಮರೆತು ನಿನ್ನ ಬಳಿಗೆ ಹೇಗೆ ಬಂದನು? ಮಾದ್ರಿ! ಈ ಮಹಾನುಭಾವನನ್ನು ನೀನು ರಕ್ಷಿಸಬಹುದಾಗಿತ್ತಲ್ಲವೇ? ಏಕಾಂತಸ್ಥಳಕ್ಕೆ ಅವನನ್ನು ನೀನೇಕೆ ಆಕರ್ಷಿಸಿದೆ? ಆದರೆ ನಿಶ್ಚಯವಾಗಿಯೂ ನೀನು ಅದೃಷ್ಟವಂತೆಯೇ ಸರಿ. ಏಕೆಂದರೆ : ಸಾಯುವ ಕಡೆಗಾಲದಲ್ಲಿ ಕಾಮೇಚ್ಛೆಯಿಂದ ಪ್ರಫುಲ್ಲವಾದ ಪತಿಯ ಮುಖಾರವಿಂದವನ್ನು ನೋಡುವ ಭಾಗ್ಯವು ನಿನಗೆ ಲಭಿಸಿತಲ್ಲವೇ?"

"ಅಕ್ಕಾ! ನನ್ನನ್ನು ಇಂತಹ ತೀಕ್ಷ್ಣವಾದ ನುಡಿಗಳಿಂದ ನೋಯಿಸಬೇಡ. ನಾನು ರಾಜನನ್ನು ಬಹಳವಾಗಿ ತಡೆದೆನು. ಅತ್ತು ಅಂಗಲಾಚಿ 'ಬೇಡ-ಬೇಡ' ಎಂದೆನು. ಆದರೆ ರಾಜನು ಋಷಿಯ ಶಾಪವನ್ನು ನಿಜಮಾಡಲು ಇಚ್ಛಿಸಿದ್ದಿರಬಹುದು. ಅವನಿಗೆ ತನ್ನ ಕಾಮೇಚ್ಛೆಯನ್ನು ತಡೆಯಲು ಸಾಧ್ಯವಾಗಲಿಲ್ಲ."

ಕುಂತಿಯು ಆ ವಿಷಯವಾಗಿ ಮುಂದೇನೂ ಮಾತನಾಡಲಿಲ್ಲ. ಮಾದ್ರಿಯು ಹೇಳಿದುದು ನಿಜವೆಂದು ಭಾವಿಸಿರಬಹುದು. ಉಕ್ಕಿಬರುತ್ತಿದ್ದ ಕಣ್ಣೀರನ್ನು ಒರೆಸಿಕೊಂಡು ಪುನಃ ಹೇಳಿದಳು :

"ಮಾದ್ರಿ! ನಾನು ನಿನಗಿಂತಲೂ ಹಿರಿಯಳು. ಪಾಂಡುವಿನ ಹಿರಿಯ ಹೆಂಡತಿ. ಆದುದರಿಂದ ಪತಿಯೊಡನೆ ಸಹಗಮನದ ಫಲವು ನನಗೇ ಸಿಕ್ಕಬೇಕು. ಈ ವಿಷಯದಲ್ಲಿಯಾದರೂ ನನ್ನನ್ನು ತಡೆಯಬೇಡ. ನಾನು ಪತಿಯೊಡನೆ ಪರಲೋಕಕ್ಕೆ ಹೋಗಿಯೇ ತೀರುತ್ತೇನೆ. ಮೇಲೇಳು, ಮಾದ್ರಿ! ಪತಿಯ ಶರೀರವನ್ನು ಬಿಡು. ಈ ಐವರು ಮಕ್ಕಳನ್ನೂ ಕಾಪಾಡಿಕೊಂಡಿರು. ಸುಶೋಭಿತರಾದ ಪುತ್ರರನ್ನು ಪಡೆದು ಲೌಕಿಕವಾದ ಮನೋರಥವನ್ನು ಪೂರ್ಣಮಾಡಿಕೊಂಡಿರುತ್ತೇನೆ. ಈಗ ನಾನು ಪತಿಯೊಡನೆ ಸಹಗಮನ ಮಾಡಿ ವೀರಪತ್ನೀತ್ವವನ್ನೂ ಸಾಧಿಸುತ್ತೇನೆ."

"ಅಕ್ಕಾ! ನಾನೇ ಪತಿಯನ್ನು ಹಿಂಬಾಲಿಸಿ ಹೋಗುತ್ತೇನೆ. ಪತಿಯು ತನ್ನ ಕಾಮನೆಯು ಪೂರ್ಣವಾಗದೇ ಅಸುವನ್ನು ತೊರೆದಂತೆ ನಾನೂ ನನ್ನ ಕಾಮನೆಯನ್ನು ಪೂರ್ಣಮಾಡಿಕೊಂಡಿರುವುದಿಲ್ಲ. ನಾನು ಈಗಲೂ ಕೂಡ ಪತಿಯ ಆಲಿಂಗನದಲ್ಲಿಯೇ ಇದ್ದೇನೆ. ಅಸುವು ಹೋದರೂ ಶರೀರವನ್ನು ನಾನು ಬಿಟ್ಟಿಲ್ಲ ; ಬಿಡುವುದೂ ಇಲ್ಲ. ಆದುದರಿಂದ ನಾನೇ ಪತಿಯೊಡನೆ ಚಿತೆಯನ್ನೇರುವೆನು. ಮೇಲಾಗಿ ನಮ್ಮ ಪತಿಯು ತನ್ನ ಇಚ್ಛೆಯಲ್ಲಿ ತೃಪ್ತಿ ಹೊಂದದೇ ಅಸುವನ್ನು ನೀಗಿರುವನಲ್ಲವೇ? ಪರಲೋಕಕ್ಕಾದರೂ ಹೋಗಿ ಅವನ ಇಚ್ಛೆಯನ್ನು ಪೂರ್ಣಮಾಡುವೆನಕ್ಕಾ! ಈ ನನ್ನ ಪ್ರಾರ್ಥನೆಯನ್ನು ದಯೆಯಿಟ್ಟು ನಡೆಸಿಕೊಡು. ಮತ್ತೊಂದು ವಿಷಯವನ್ನೂ ಸ್ಪಷ್ಟವಾಗಿ ಹೇಳುವೆನು :

**ನ ಚಾಪ್ಯಹಂ ವರ್ತಯನ್ತೀ ನಿರ್ವಿಶೇಷಂ ಸುತೇಷು ತೇ ।**
**ವೃತ್ತಿಮಾರ್ಯೇ ಚರಿಷ್ಯಾಮಿ ಸ್ಪೃಶೇದೇನಸ್ತಥಾ ಚ ಮಾಮ್ ॥೨೭॥**

ನಾನು ಬದುಕಿ ನೀನು ಪತಿಯೊಡನೆ ಸಹಗಮನಮಾಡುವುದಾದರೆ– ನಿನ್ನ ಮಕ್ಕಳನ್ನು ನನ್ನ ಮಕ್ಕಳೆಂದೇ ಭಾವಿಸಿ ಅವರನ್ನು ಕಾಪಾಡಲು ನನ್ನಿಂದ ಖಂಡಿತವಾಗಿಯೂ ಸಾಧ್ಯವಾಗಲಾರದು. ಮಕ್ಕಳಲ್ಲಿ ಪಕ್ಷಪಾತ ಮಾಡುವುದರಿಂದ ನನಗೆ ಪಾಪವೂ ಸಂಘಟಿಸಬಹುದು. ಆದರೆ ನೀನು ಮಾತ್ರ ನನ್ನ ಮಕ್ಕಳನ್ನು ನಿನ್ನ ಮಕ್ಕಳಿಗಿಂತಲೂ ಹೆಚ್ಚಾಗಿ ಭಾವಿಸಿ ಕಾಪಾಡುವೆಯೆಂಬ ಭರವಸೆಯು ನನಗಿದೆ. ನನ್ನನ್ನು ಕಾಮಿಸಿಯೇ ಪತಿಯು ಪ್ರೇತಲೋಕಕ್ಕೆ ಹೋಗಿರುವನು. ಆದುದರಿಂದ ನಾನೇ ಪತಿಯೊಡನೆ ಸಹಗಮನಮಾಡುವೆನು. ನನ್ನ ಪ್ರಾರ್ಥನೆಯನ್ನು ದಯೆಯಿಟ್ಟು ತಿರಸ್ಕರಿಸಬೇಡಕ್ಕಾ!"

ಮಾದ್ರಿಯು ದೈನ್ಯದಿಂದ ಬಿಕ್ಕಿ-ಬಿಕ್ಕಿ ಅತ್ತಳು. ಕುಂತಿಗೆ ಮಾದ್ರಿಯ ಮಾತು ನಿಜವೆನ್ನಿಸಿತು. ಕುಂತಿಯ ಮತ್ತು ಐವರು ಮಕ್ಕಳ ದಾರುಣ ರೋದನದೊಡನೆ, ಸುತ್ತಲೂ ನೆರೆದಿದ್ದ ಮಹರ್ಷಿಗಳ ಮತ್ತು ಋಷಿಪತ್ನಿಯರ ಕಂಬನಿಗಳೊಡನೆ ಮಾದ್ರಿಯು ಧಗ-ಧಗನೆ ಉರಿಯುತ್ತಿದ್ದ ಪತಿಯ ಚಿತೆಯನ್ನು ಏರಿ ಶರೀರವನ್ನು ತೊರೆದಳು."

ಕರುಣಾಜನಕವಾದ ಆ ಕಥೆಯನ್ನು ಕೇಳುತ್ತಿದ್ದಂತೆ ಜನಮೇಜಯನ

ಕಣ್ಣುಗಳಲ್ಲಿಯೂ ನೀರೂರಿತು. ವೈಶಂಪಾಯನರು ಕಥೆಯನ್ನು ಮುಂದು ವರಿಸಿದರು.

೧೨೫ನೆಯ ಅಧ್ಯಾಯವು ಮುಗಿಯಿತು.

೧೨೬ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಋಷಿಗಳು ಕುಂತಿಯನ್ನೂ-ಪಾಂಡುಪುತ್ರರನ್ನೂ ಹಾಸ್ತಿನಪುರಕ್ಕೆ ಕರೆತಂದು ಭೀಷ್ಮಾದಿಗಳ ಬಳಿ ಬಿಟ್ಟುದು

ಜನಮೇಜಯ! ಪಾಂಡುವಿನ ಮರಣಾನಂತರ ದೇವಸದೃಶರಾದ ಮಹರ್ಷಿಗಳೆಲ್ಲರೂ ಒಂದೆಡೆಯಲ್ಲಿ ಸೇರಿ ಸಮಾಲೋಚನೆಯನ್ನು ಮಾಡ ತೊಡಗಿದರು : "ಧರ್ಮಾತ್ಮನಾದ ಪಾಂಡುವು ರಾಜ್ಯ-ಕೋಶಾದಿಗಳನ್ನು ಪರಿತ್ಯಜಿಸಿ, ತಪಶ್ಚರಣೆಗಾಗಿ ಈ ಕಾಡಿಗೆ ಬಂದನು. ಇಲ್ಲಿಗೆ ಬಂದಾಗಿನಿಂದ ಅನವರತವೂ ತಪಸ್ಸಿನಲ್ಲಿಯೇ ಕಾಲವನ್ನು ಕಳೆಯುತ್ತಿದ್ದನು. ಹುಟ್ಟಿದ ಚಿಕ್ಕ ಮಕ್ಕಳನ್ನೂ, ಪತ್ನಿಯನ್ನೂ ನಮ್ಮಲ್ಲಿ ನಿಕ್ಷೇಪರೂಪದಲ್ಲಿರಿಸಿ ಸ್ವರ್ಗಕ್ಕೆ ಹೊರಟುಹೋದನು. ಈ ಸಮಯದಲ್ಲಿ ನಾವೆಲ್ಲರೂ ಅವನ ಈ ಮಕ್ಕಳನ್ನೂ, ಅವನ ಪತ್ನಿಯಾದ ಕುಂತಿಯನ್ನೂ ಮತ್ತು ಪಾಂಡು-ಮಾದ್ರಿಯರ ಅಸ್ಥಿಗಳನ್ನೂ ತೆಗೆದುಕೊಂಡು ಇವರ ರಾಷ್ಟ್ರವಾದ (ಕುರುದೇಶದ) ಹಾಸ್ತಿನಪಟ್ಟಣಕ್ಕೆ ಹೋಗೋಣ. ಇದೇ ಈಗ ನಾವು ಅನುಸರಿಸಬೇಕಾಗಿರುವ ಧರ್ಮಮಾರ್ಗವಾಗಿದೆ."

ಜನಮೇಜಯ! ದೇವಕಲ್ಪರಾದ ಋಷಿ-ಮಹರ್ಷಿಗಳು ಪರಸ್ಪರವಾಗಿ ಸಮಾಲೋಚಿಸಿ ನಿರ್ಧರಿಸಿದ ಬಳಿಕ, ದಯಾರ್ದ್ರಹೃದಯರಾದ, ದೇವ ಸಮಾನರಾದ ಆ ಮಹರ್ಷಿಗಳು ಪಾಂಡುವಿನ ಐವರು ಮಕ್ಕಳನ್ನೂ ಮತ್ತು ಕುಂತಿಯನ್ನೂ ಭೀಷ್ಮ-ಧೃತರಾಷ್ಟ್ರರ ಆಶ್ರಯದಲ್ಲಿ ಬಿಡಲು ನಿಶ್ಚಯಿಸಿದವ ರಾಗಿ, ಮಕ್ಕಳಿಂದೊಡಗೂಡಿದ ಕುಂತಿಯೊಡನೆ ಪಾಂಡು-ಮಾದ್ರಿಯರ ಅಸ್ಥಿ ಗಳನ್ನೂ ತೆಗೆಸಿಕೊಂಡು ಹಾಸ್ತಿನಪುರದೆಡೆಗೆ ಪ್ರಯಾಣಹೊರಟರು. ಕುಂತಿಗೆ ವಿಹಾರಾರ್ಥವಾಗಿ ಪಾಂಡುವಿನೊಡನೆ ವನದಲ್ಲಿ ತಿರುಗಾಡುವ ರೂಢಿಯಿತ್ತೇ ಹೊರತು–ಹಲವು ಗಾವುದಗಳಷ್ಟು ದೂರ ನಡೆಯುವ ಅಭ್ಯಾಸವಿರಲಿಲ್ಲ. ಆದರೂ ತನ್ನ ಮಕ್ಕಳ ಮುಂದಿನ ಸುಖವನ್ನು ಮನಸ್ಸಿನಲ್ಲಿ ನೆನೆಯುತ್ತಾ, ಹಾಸ್ತಿನಪುರದ ದಾರಿಯು ಬಹಳ ದೂರವಾಗಿದ್ದರೂ, ಕಮಲದಂತೆ ಕೋಮಲ

ವಾಗಿದ್ದ ಕಾಲುಗಳಿಗೆ ಕಲ್ಲು-ಮುಳ್ಳುಗಳ ಹೊಡೆತದಿಂದ ಬಹಳ ಯಾತನೆ ಯಾಗುತ್ತಿದ್ದರೂ ಲೆಕ್ಕಿಸದೇ ನಡೆದೇ ಬರುತ್ತಿದ್ದಳು. ಯಶಸ್ವಿನಿಯಾದ ಕುಂತಿದೇವಿಯು ಮಕ್ಕಳೊಡನೆಯೂ, ತಾಪಸರೊಡನೆಯೂ ಬಹುಶೀಘ್ರ ವಾಗಿಯೇ ಕುರುಜಾಂಗಲಕ್ಕೆ ಬಂದು, ವರ್ಧಮಾನವೆಂಬ ಹಾಸ್ತಿನಪಟ್ಟಣದ ಮಹಾದ್ವಾರವನ್ನೂ ಸಮೀಪಿಸಿದಳು. ಕುಂತೀಸಮೇತರಾಗಿ ಮಹಾದ್ವಾರಕ್ಕೆ ಬಂದ ಮಹರ್ಷಿಗಳು ತಮ್ಮ ಆಗಮನದ ವಿಷಯವನ್ನು ರಾಜನಿಗೆ ತಿಳಿಸು ವಂತೆ ದ್ವಾರಪಾಲಕರೊಡನೆ ಹೇಳಿಕಳುಹಿಸಿದರು.

ಸಾವಿರಾರು ಸಂಖ್ಯೆಯಲ್ಲಿ ಸಿದ್ಧ-ಚಾರಣಸಮೇತರಾಗಿ ಮಹರ್ಷಿಗಳು ಬಂದಿರುವರೆಂಬ ವಾರ್ತೆಯು ಧೃತರಾಷ್ಟ್ರನಿಗೂ ಮತ್ತು ರಾಜಪರಿವಾರದವ ರಿಗೂ ತಿಳಿಯಿತು. ಹಾಸ್ತಿನಪುರದ ನಾಗರಿಕರೂ ಆ ವಾರ್ತೆಯನ್ನು ಕೇಳಿ ಆಶ್ಚರ್ಯಭರಿತರಾದರು. ಸೂರ್ಯೋದಯವಾಗುತ್ತಲೇ ಪೌರರು ನೂತನ ವಸ್ತ್ರಗಳನ್ನು ಧರಿಸಿದವರಾಗಿ ಸುತ-ಸತಿಯರಿಂದೊಡಗೂಡಿ ಮಹಾದ್ವಾರದ ಕಡೆಗೆ ಗುಂಪು-ಗುಂಪಾಗಿ ಬಂದು ಸೇರತೊಡಗಿದರು.

ನಾನಾವಿಧವಾದ ಯಾನಗಳಲ್ಲಿ ಕುಳಿತು ಕ್ಷತ್ರಿಯರೂ, ಕ್ಷತ್ರಿಯ ಸ್ತ್ರೀಯರೂ ಮತ್ತು ಬ್ರಾಹ್ಮಣರೂ, ಬ್ರಾಹ್ಮಣಸ್ತ್ರೀಯರೂ ತಂಡ-ತಂಡವಾಗಿ ಪಟ್ಟಣದ್ವಾರಕ್ಕೆ ಸಿದ್ಧ-ಚಾರಣರನ್ನು ನೋಡಲು ಆಗಮಿಸಿದರು. ಅದೇ ರೀತಿಯಲ್ಲಿ ಅಪಾರಸಂಖ್ಯೆಯಲ್ಲಿ ವೈಶ್ಯ-ಶೂದ್ರರೂ ಮಹಾದ್ವಾರದ ಬಳಿಗೆ ಆಗಮಿಸಿದರು. ( ಋಷಿಗಳ ಸಾನ್ನಿಧ್ಯದಿಂದ ) ಆ ಸಮಯದಲ್ಲಿ ಯಾರೂ ಅಸೂಯಾಪರರಾಗಿರಲಿಲ್ಲ. ಎಲ್ಲರ ಬುದ್ಧಿಯೂ ಧರ್ಮದಲ್ಲಿಯೇ ಲೀನವಾಗಿದ್ದಿತು.

ಇತ್ತಲಾಗಿ ಧೃತರಾಷ್ಟ್ರ, ಭೀಷ್ಮ, ಸೋಮದತ್ತ, ಬಾಹ್ಲಿಕ, ವಿದುರನೇ ಮುಂತಾದ ಕೌರವಪ್ರಮುಖರೂ–ಸತ್ಯವತೀ, ಅಂಬಾಲಿಕೆ, ಅಂಬಿಕೆ, ಗಾಂಧಾ ರಿಯೇ ಮೊದಲಾದ ರಾಣಿವಾಸದವರೂ–ದುರ್ಯೋಧನಾದಿ ನೂರು ಮಂದಿ ಧೃತರಾಷ್ಟ್ರನ ಮಕ್ಕಳೂ ಮಹರ್ಷಿಗಳ ದರ್ಶನಾಕಾಂಕ್ಷಿಗಳಾಗಿ, ಪುರೋಹಿತ ಪುರಃಸರರಾಗಿ ರತ್ನಖಚಿತವಾದ ರಥಗಳಲ್ಲಿ ಕುಳಿತು ಮಹಾದ್ವಾರದ ಬಳಿಗೆ ಬಿಜಯಮಾಡಿದರು. ರಾಜಪರಿವಾರದವರೆಲ್ಲರೂ ರಥದಿಂದಿಳಿದು ಪುರೋ ಹಿತಪುರಃಸರರಾಗಿ ಮಹರ್ಷಿಗಳ ಬಳಿಗೆ ಹೋಗಿ, ತಲೆಬಾಗಿ ನಮಸ್ಕರಿಸಿ,

ತಾತ್ಕಾಲಿಕವಾಗಿ ಏರ್ಪಡಿಸಿದ್ದ ಆಸನಗಳಲ್ಲಿ ಕುಳಿತರು. ನಾಗರಿಕರೂ ರಾಜ ಪರಿವಾರದವರನ್ನೇ ಅನುಸರಿಸಿ, ಮಹರ್ಷಿಗಳಿಗೆ ನಮಸ್ಕರಿಸಿ ನಿಂತಿದ್ದಲ್ಲಿಯೇ ಕುಳಿತು, ಮುಂದೇನಾಗುವುದೆಂಬುದನ್ನು ಕೌತುಕದಿಂದ ವೀಕ್ಷಿಸುತ್ತಿದ್ದರು. ಜನಸಮೂಹವೆಲ್ಲವೂ ಸ್ವಲ್ಪವಾದರೂ ಶಬ್ದಮಾಡದೇ ಕುಳಿತುಕೊಂಡ ನಂತರ, ಸರ್ವಜ್ಞನಾದ ಭೀಷ್ಮನು ಮೇಲೆದ್ದು ಆಗಮಿಸಿದ ಮಹರ್ಷಿ ಸಮೂಹಕ್ಕೆ ಅರ್ಘ್ಯ-ಪಾದ್ಯಾದಿಗಳನ್ನು ಸಲ್ಲಿಸಿ, ಸಾಂಪ್ರದಾಯಿಕವಾಗಿ ದೇಶ-ಕೋಶಾದಿಗಳೆಲ್ಲವನ್ನೂ ಮಹರ್ಷಿಗಳಿಗೆ ಅರ್ಪಣೆಮಾಡಿದನು.

ವಯೋವೃದ್ಧರಾದ, ಜ್ಞಾನವೃದ್ಧರಾದ, ಕೃಷ್ಣಾಜಿನವನ್ನು ಧರಿಸಿ ಜಟಾಧಾರಿಗಳಾಗಿದ್ದ ಮಹರ್ಷಿಗಳೊಬ್ಬರು ಮೇಲೆದ್ದು, ಸಕಲಮಹರ್ಷಿ ಗಳಿಂದಲೂ ಒಪ್ಪಿಗೆಯನ್ನು ಪಡೆದವರಾಗಿ ಹೀಗೆಂದು ಹೇಳತೊಡಗಿದರು :

“ಇಲ್ಲಿ ನೆರೆದಿರುವ ಸಕಲರೂ ನನ್ನ ಮಾತನ್ನು ಲಾಲಿಸಿರಿ. ಸಾರ್ವ ಭೌಮನಾಗಿದ್ದ ಪಾಂಡುಮಹಾರಾಜನು ರಾಜ್ಯ-ಕೋಶಾದಿಗಳನ್ನೂ, ಪ್ರಾಪಂಚಿಕಸುಖವನ್ನೂ ತೊರೆದವನಾಗಿ ಶತಶೃಂಗಪರ್ವತಕ್ಕೆ ಬಂದು ನೆಲೆ ಸಿದ ವಿಷಯವು ತಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಪಾಂಡುವು ಶತ ಶೃಂಗಪರ್ವತದಲ್ಲಿ ಬ್ರಹ್ಮಚರ್ಯಜೀವನವನ್ನು ನಡೆಸುತ್ತಿದ್ದರೂ ದೈವಾನು ಗ್ರಹದಿಂದ ಅವನಿಗೆ ಐವರು ಮಕ್ಕಳು ಜನಿಸಿದರು. ಸಾಕ್ಷಾತ್ ಯಮ ಧರ್ಮನ ಅನುಗ್ರಹದಿಂದ ಪಾಂಡುವಿಗೆ ಈ ಯುಧಿಷ್ಠಿರನು ಹುಟ್ಟಿದನು. ಅಂತೆಯೇ ಮಹಾತ್ಮನಾದ ಪಾಂಡುರಾಜನಿಗೆ ವಾಯುದೇವನು ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮನೆಂಬ ಹೆಸರಿನ ಈ ಪುತ್ರನನ್ನು ಅನುಗ್ರಹಿಸಿದನು. ಪುರುಹೂತನ ಅನುಗ್ರಹದಿಂದ ಕುಂತಿಯಲ್ಲಿಯೇ ಈ ಧನಂಜಯನೂ ಜನಿಸಿದನು. ಇವನು ಮುಂದೆ ಎಲ್ಲ ಧನುರ್ಧಾರಿಗಳನ್ನೂ ಮೀರಿಸಿ (ಯುದ್ಧ ದಲ್ಲಿ ಪರಾಜಯಗೊಳಿಸಿ) ಕೀರ್ತಿಮಂತನಾಗುತ್ತಾನೆ. ಪುರುಷೋತ್ತಮರಾದ ಮಹಾಧನುರ್ಧಾರಿಗಳಾದ ಈ ಇಬ್ಬರೂ ಮಾದ್ರಿಯ ಮಕ್ಕಳು. ಇವರು ಅಶ್ವಿನೀದೇವತೆಗಳ ಅನುಗ್ರಹದಿಂದ ಹುಟ್ಟಿದವರು. ಅಶ್ವಿನೀದೇವತೆ ಗಳಂತೆಯೇ ಸ್ಫುರದ್ರೂಪಿಗಳಾಗಿರುವುದನ್ನು ತಾವೂ ಕಾಣಬಹುದಾಗಿದೆ. ಧರ್ಮಿಷ್ಠನಾಗಿ ವನವಾಸಮಾಡುತ್ತಿದ್ದ, ಯಶೋವಂತನಾದ ಪಾಂಡುವಿನಿಂದ ಅಳಿದುಹೋಗುವುದರಲ್ಲಿದ್ದ ಪ್ರಪಿತಾಮಹವಂಶವು ಪುನರುದ್ಧಾರವಾಯಿತು.

ಈ ಮಕ್ಕಳ ಹುಟ್ಟು, ಬೆಳವಣಿಗೆ, ಇವರು ಮಾಡಿರುವ ವೇದ-ವೇದಾಂಗಗಳ ಮತ್ತು ಧನುರ್ವಿದ್ಯೆಯ ಅಧ್ಯಯನ–ಇವುಗಳನ್ನು ತಿಳಿದು ನೀವು ನಿಶ್ಚಯವಾಗಿಯೂ ಸಂತೋಷಿಸುವಿರಿ. ಧರ್ಮಾತ್ಮನಾಗಿದ್ದ, ಸತ್ಯಸಂಧನಾಗಿದ್ದ ಪಾಂಡುವು, ನಯನಾನಂದಕಂದರಾದ ಈ ಬಾಲಕರನ್ನು ತೊರೆದು, ವಿಧಿನಿಯಮದಂತೆ ಇಂದಿಗೆ ಹದಿನೇಳು ದಿನಗಳ ಹಿಂದೆ ಪರಲೋಕವನ್ನೈದಿದನು. ಚಿತೆಯಲ್ಲಿ ಮಲಗಿ ಗಂಡನು ವೈಶ್ವಾನರನಿಗೆ ಆಹುತಿಯಾದನೆಂದು ತಿಳಿದೊಡನೆಯೇ ಮಾದ್ರಿಯು ತನ್ನ ಜೀವನದ ವ್ಯಾಮೋಹವನ್ನು ಸಂಪೂರ್ಣವಾಗಿ ತೊರೆದು, ಧಗ-ಧಗನೆ ಉರಿಯುತ್ತಿದ್ದ ಅದೇ ವೈಶ್ವಾನರಾಗ್ನಿಯಲ್ಲಿ ಪ್ರವೇಶಿಸಿಬಿಟ್ಟಳು. ಅವರ ಅಸ್ಥಿಗಳನ್ನು ನಾವೀಗ ತಂದಿರುವೆವು. ಮುಂದೆ ಮಾಡಬೇಕಾದ ಕಾರ್ಯಗಳೆಲ್ಲವನ್ನೂ ನೀವು ಸಾಂಗವಾಗಿ ನೆರವೇರಿಸಿರಿ. ಇದೇ ಅವರ ಅಸ್ಥಿಗಳು. ಈ ಐವರೇ ಪಾಂಡುವಿನ ವರಪುತ್ರರು.

ತಾಯಿಯೊಡನೆ ಬಂದಿರುವ ಈ ಐವರು ಮಕ್ಕಳನ್ನೂ ರಾಜರಿಗೆ ಉಚಿತವಾದ ಮರ್ಯಾದೆಗಳೊಡನೆ ಕರೆದುಕೊಳ್ಳಿರಿ. ಇನ್ನು ಮುಂದೆ ಪಾಂಡು-ಮಾದ್ರಿಯರಿಗೆ ಮಾಡಬೇಕಾಗಿರುವ ಉತ್ತರಕ್ರಿಯೆಗಳನ್ನು ಯಥಾ ವಿಧಿಯಾಗಿಮಾಡಿ, ಅವರಿಬ್ಬರೂ ಪಿತೃದೇವತೆಗಳ ಸ್ಥಾನಕ್ಕೆ ಸೇರುವಂತೆ ಮಾಡುವುದು ನಿಮ್ಮ ಮುಖ್ಯಕರ್ತವ್ಯವಾಗಿದೆ."

ಜನಮೇಜಯ! ಕುರುಶ್ರೇಷ್ಠರಿಗೆ ಹೀಗೆ ಹೇಳಿ, ಅವರೆಲ್ಲರೂ ನೋಡುತ್ತಿದ್ದಂತೆಯೇ, ಎಲ್ಲ ಸಿದ್ಧರೂ, ಚಾರಣರೂ ಮತ್ತು ಮಹರ್ಷಿಗಳೂ ಗುಹ್ಯಕರೊಡನೆ ಅದೃಶ್ಯರಾದರು.

ಸ್ವಲ್ಪಹೊತ್ತಿಗೆ ಮುಂಚೆ ಆ ಪ್ರದೇಶವು ಸಿದ್ಧ-ಚಾರಣರಿಂದ ಕೂಡಿದ್ದು ಗಂಧರ್ವನಗರಕ್ಕೆ ಸಮಾನವಾಗಿತ್ತು. ಕ್ಷಣಮಾತ್ರದಲ್ಲಿ ಅವರೆಲ್ಲರೂ ಅದೃಶ್ಯರಾಗಿ ಹೋದರು. ಋಷಿಗಳನ್ನೂ, ಸಿದ್ಧ-ಚಾರಣರನ್ನೂ ನೋಡಿದ ಹಾಸ್ತಿನಪುರದ ಪ್ರಜೆಗಳು ಆಶ್ಚರ್ಯಭರಿತರಾದರು.

೧೨೬ನೆಯ ಅಧ್ಯಾಯವು ಮುಗಿಯಿತು.

## ಪಾಂಡು-ಮಾದ್ರಿಯರ ಅಂತ್ಯಕ್ರಿಯೆಗಳು

ಜನಮೇಜಯ! ಧೃತರಾಷ್ಟ್ರನು ಅತಿದುಃಖಿತನಾಗಿ ಪಕ್ಕದಲ್ಲಿಯೇ ಕುಳಿತಿದ್ದ ವಿದುರನಿಗೆ ಹೇಳಿದನು : "ವಿದುರ! ಪಾಂಡು-ಮಾದ್ರಿಯರ ಉತ್ತರಕ್ರಿಯೆಗಳನ್ನು ರಾಜಯೋಗ್ಯವಾದ ರೀತಿಯಲ್ಲಿ ನೆರವೇರಿಸಬೇಕು.

ಪಾಂಡು-ಮಾದ್ರಿಯರಿಗೆ ಸದ್ಗತಿಯುಂಟಾಗಲು ಗೋದಾನ-ಭೂದಾನ-ವಸ್ತ್ರದಾನ-ಹಿರಣ್ಯದಾನಗಳನ್ನು ಯಥೇಚ್ಛವಾಗಿ ಕೊಡುವಂತೆ ಆಜ್ಞಾಪಿಸು. ಯಾರು-ಯಾರು ಎಷ್ಟೆಷ್ಟು ಅಪೇಕ್ಷಿಸಿದರೂ ಕೊಟ್ಟುಬಿಡುವಂತೆ ಹೇಳು. ಕುಂತಿಯೂ ಸಹ ತನ್ನ ಇಚ್ಛೆಯಿದ್ದಂತೆ ಮಾದ್ರಿಯ ಉತ್ತರ ಕ್ರಿಯೆಯನ್ನು ನೆರವೇರಿಸಲಿ. ಮಾದ್ರಿಯ ಅಸ್ಥಿಯು ಸೂರ್ಯ-ವಾಯು ಗಳಿಗೂ ಗೋಚರವಾಗದ ರೀತಿಯಲ್ಲಿ ಆಚ್ಛಾದಿಸಲ್ಪಡಲಿ. ಶೂರನಾದ ಮತ್ತು ಧರ್ಮಾತ್ಮನಾದ ಪಾಂಡುವಿನ ವಿಷಯದಲ್ಲಿ ದುಃಖಿಸಿ ಪ್ರಯೋಜನವಿಲ್ಲ. ಅವನು ನಿಶ್ಚಯವಾಗಿಯೂ ಪ್ರಶಂಸಾರ್ಹನೇ ಆಗಿದ್ದಾನೆ. ಏಕೆಂದರೆ: ತನಗೆ ಅನುರೂಪರಾದ ದೇವಸಮಾನರಾದ ಐವರು ಮಕ್ಕಳನ್ನು ತನ್ನ ಕುರುಹಾಗಿ ಬಿಟ್ಟು ಹೋಗಿರುವನು."

ವಿದುರನು ಹಾಗೆಯೇ ಆಗಲೆಂದು ಹೇಳಿ ಕಣ್ಣೀರೊರೆಸಿಕೊಳ್ಳುತ್ತಾ ಹೊರಟುಹೋದನು. ಪಾಂಡು-ಮಾದ್ರಿಯರ ಉತ್ತರಕ್ರಿಯೆಗಳಿಗೆ ವಿದುರನು ಭೀಷ್ಮನ ಅನುಮತಿಯನ್ನು ಪಡೆದು ಉತ್ತಮವಾದ ಸ್ಥಳವನ್ನು ಆರಿಸಿದನು.

ರಾಜಪುರೋಹಿತರು ಆಜ್ಯ-ಗಂಧಪುರಸ್ಕೃತನಾದ ಯಜ್ಞೇಶ್ವರನನ್ನು ತೆಗೆದುಕೊಂಡು ಪಾಂಡುವಿನ ದಹನಸಂಸ್ಕಾರಕ್ಕಾಗಿ ಪಟ್ಟಣದಿಂದ ಹೊರಕ್ಕೆ ಶೀಘ್ರವಾಗಿ ಹೊರಟರು.

ಜ್ಞಾತಿ-ಬಾಂಧವರೆಲ್ಲರೂ ಸೇರಿ ಪಾಂಡು-ಮಾದ್ರಿಯರ ಅಸ್ಥಿಗಳಿಗೆ ಉತ್ತಮವಾದ ಸುಗಂಧದ್ರವ್ಯಗಳನ್ನು ಲೇಪಿಸಿ, ನೂತನವಸ್ತ್ರಗಳನ್ನು ಹೊದ್ದಿಸಿ, ಪುಷ್ಪಮಾಲೆಗಳಿಂದ ಸಿಂಗರಿಸಿದರು. ಹೂವಿನ ಗುಚ್ಛಗಳಿಂದಲೂ,

ತೋರಣಗಳಿಂದಲೂ ಅಲಂಕೃತವಾಗಿದ್ದ ಶಿಬಿಕೆಯಲ್ಲಿ ಪಾಂಡು-ಮಾದ್ರಿಯರ ಅಸ್ಥಿಗಳನ್ನಿಟ್ಟರು. ಛತ್ರ-ಚಾಮರಗಳೊಡನೆಯೂ, ನಾನಾವಿಧವಾದ ವಾದ್ಯ ಗಳೊಡನೆಯೂ ವಾಹಕರಿಂದ ಹೊರಲ್ಪಟ್ಟಿದ್ದ ಶಿಬಿಕೆಯು ಗಂಗಾತೀರಕ್ಕೆ ಹೊರಟಿತು. ಶಿಬಿಕೆಯ ಮುಂದುಗಡೆಯಲ್ಲಿ ಪುರೋಹಿತರು ಶುದ್ಧವಸ್ತ್ರ ಗಳನ್ನು ಧರಿಸಿ, ಮಂತ್ರಗಳನ್ನು ಪಠಿಸುತ್ತಾ, ಯಜ್ಞೇಶ್ವರನಿಗೆ ಆಜ್ಯಾಹುತಿ ಗಳನ್ನು ಮಾಡುತ್ತಾ ಹೋಗುತ್ತಿದ್ದರು. ಶಿಬಿಕೆಯ ಹಿಂಬದಿಯಲ್ಲಿ ರಾಜ ಪರಿವಾರದವರೂ, ಅವರನ್ನನುಸರಿಸಿ ಸಕಲಜನಸ್ತೋಮವೂ ಹೊರಟಿತು. ಒಬ್ಬೊಬ್ಬರೂ ಒಂದೊಂದು ವಿಧವಾಗಿ ರಾಜನ ಗುಣಗಾನಗಳನ್ನು ಮಾಡುತ್ತಾ ಕಂಬನಿಸುರಿಸುತ್ತಿದ್ದರು.

ರಾಜನ ಅಂತ್ಯಸಂಸ್ಕಾರವಾಗುತ್ತಿದ್ದ ಸಮಯದಲ್ಲಿ ನೂರಾರು ಜನರು ಅಲ್ಲಿ ನೆರೆದಿದ್ದ ಯಾಚಕರೆಲ್ಲರಿಗೂ ಸುವರ್ಣದ ನಾಣ್ಯಗಳನ್ನೂ, ರತ್ನ ಗಳನ್ನೂ ಹಂಚುತ್ತಿದ್ದರು. ಅನರ್ಘವಾದ ಅನೇಕವಸ್ತ್ರಗಳನ್ನೂ, ಶ್ವೇತಛತ್ರ ಗಳನ್ನೂ, ಚಾಮರಗಳನ್ನೂ ಪಾಂಡುವಿಗೆ ದಾರಿಯುದ್ದಕ್ಕೂ ಅರ್ಪಿಸು ತ್ತಿದ್ದರು. ಪುರೋಹಿತರು ಬಿಳಿಯ ವಸ್ತ್ರಗಳನ್ನುಟ್ಟು ಶಿಬಿಕೆಯ ಮುಂಭಾಗದಲ್ಲಿ ಸುಂದರವಾದ ಪಾತ್ರೆಯಲ್ಲಿದ್ದ ಯಜ್ಞೇಶ್ವರನಿಗೆ ಘೃತಸೇಚನೆ ಮಾಡುತ್ತಿದ್ದರು.

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಸಾವಿರಾರು ಸಂಖ್ಯೆಯಲ್ಲಿ ಶಿಬಿಕೆಯನ್ನು ಹಿಂಬಾಲಿಸಿ ಬರುತ್ತಿದ್ದರು. ಎಲ್ಲರ ಕಣ್ಣು ಗಳಲ್ಲಿಯೂ ಕಂಬನಿಯು ಧಾರಾಕಾರವಾಗಿ ಪ್ರವಹಿಸುತ್ತಿತ್ತು.

**ಅಯಮಸ್ಮಾನಪಾಹಾಯ ದುಃಖೇ ಚಾಧಾಯ ಶಾಶ್ವತೇ ।**
**ಕೃತ್ವಾ ಚಾಸ್ಮಾನನಾಥಾಂಶ್ಚ ಕ್ವ ಯಾಸ್ಯತಿ ನರಾಧಿಪಃ ॥೧೫॥**

"ಅಯ್ಯೋ! ಈ ಪಾಂಡುವು ನಮ್ಮನ್ನು ಶಾಶ್ವತವಾದ ದುಃಖಸಾಗರ ದಲ್ಲಿ ಮುಳುಗಿಸಿ ನಮ್ಮನ್ನು ಅನಾಥರನ್ನಾಗಿ ಮಾಡಿ ಎಲ್ಲಿಗೆ ಹೋಗುತ್ತಿ ದ್ದಾನೆ?"–ಇವೇ ಮುಂತಾಗಿ ಹೇಳಿಕೊಂಡು ಪ್ರಜೆಗಳು ದುಃಖಿಸುತ್ತಿದ್ದರು.

ಯುಧಿಷ್ಠಿರಾದಿ ಐದು ಮಂದಿ ಪಾಂಡವರೂ, ಭೀಷ್ಮ-ವಿದುರರೂ

ಬಹುವಾಗಿ ದುಃಖಿಸುತ್ತಾ ಶಿಬಿಕೆಯನ್ನನುಸರಿಸಿ ಹೋಗುತ್ತಿದ್ದರು. ಗಂಗಾತೀರದಲ್ಲಿದ್ದ ವನಪ್ರದೇಶದ ಸಮತಟ್ಟಾದ ನೆಲದಲ್ಲಿ ಸತ್ಯವಾದಿಯಾದ, ನರಸಿಂಹನಾದ, ಪರಾಕ್ರಮಿಯಾದ, ಪಾಂಡುವಿನ ಮತ್ತು ಮಾದ್ರಿಯ ಅಸ್ಥಿಗಳಿದ್ದ ಶಿಬಿಕೆಯನ್ನಿಡಲಾಯಿತು.

ಪುರೋಹಿತರು ಸ್ವರ್ಣಕುಂಭಗಳಲ್ಲಿ ಗಂಗಾಜಲವನ್ನು ತಂದು ಪಾಂಡು-ಮಾದ್ರಿಯರ ಅಸ್ಥಿಗಳನ್ನು ಮಂತ್ರಪೂರ್ವಕವಾಗಿ ಅಭಿಷೇಚಿಸಿದರು. ಉತ್ತಮವಾದ ಸುಗಂಧದ್ರವ್ಯಗಳನ್ನು ಪುನಃ ಲೇಪಿಸಿದರು. ಅನಂತರ ಉತ್ತಮವಾದ ದೇಶೀಯವಸ್ತ್ರಗಳಿಂದ ಅಸ್ಥಿಗಳನ್ನು ಆಚ್ಛಾದಿಸಿದರು. ವಸ್ತ್ರಾಚ್ಛಾದಿತನಾಗಿದ್ದ ಪಾಂಡುರಾಜನು ಬದುಕಿರುವಂತೆಯೇ ಶೋಭಿಸುತ್ತಿದ್ದನು.

ಪುರೋಹಿತರ ನಿರ್ದೇಶನದಂತೆ ಮಂತ್ರಕ್ರಿಯೆಗಳೆಲ್ಲವೂ ನಡೆದ ನಂತರ ಅಸ್ಥಿಗಳನ್ನು ಚಿತೆಯ ಮೇಲಿಟ್ಟು ತುಪ್ಪದಿಂದ ಅಭಿಷೇಕಮಾಡಿದರು. ಚಂದನ, ಅಗುರು ಮುಂತಾದ ಅನೇಕಸುಗಂಧದ್ರವ್ಯಗಳಿಂದ ಅಸ್ಥಿಗಳನ್ನು ಮುಚ್ಚಿದರು. ಪಾಂಡುಸುತರು ಯಥಾವಿಧಿಯಾಗಿ ಚಿತೆಗೆ ಅಗ್ನಿಸ್ಪರ್ಶ ಮಾಡಿದರು. ಧಗ-ಧಗನೆ ಉರಿಯುತ್ತಿದ್ದ ಚಿತೆಯನ್ನು ನೋಡಿ ಪಾಂಡುವಿನ ತಾಯಿಯಾದ ಅಂಬಾಲಿಕೆಯು–'ಅಯ್ಯೋ! ಮಗನೇ!' ಎನ್ನುತ್ತಾ ಜ್ಞಾನಶೂನ್ಯಳಾಗಿ ಕೆಳಗೆ ಬಿದ್ದಳು. ಕೌಸಲ್ಯೆಯು ಕೆಳಗೆ ಬಿದ್ದುದನ್ನು ನೋಡಿ ಸುತ್ತಲೂ ನೆರೆದಿದ್ದ, ರಾಜಭಕ್ತಿಯಿಂದ ಕೂಡಿದ್ದ ಪ್ರಜೆಗಳು ಬಹಳ ದುಃಖತಪ್ತರಾಗಿ ಅಳತೊಡಗಿದರು. ಎಲ್ಲೆಲ್ಲಿಯೂ ಆರ್ತನಾದವು ಪ್ರತಿಧ್ವನಿತವಾಯಿತು. ಕುಂತಿಯ ಗೋಳಾಟವನ್ನು ಕೇಳಿ ಸುತ್ತಮುತ್ತಲಿದ್ದ ಪಶು-ಪ್ರಾಣಿಗಳೂ ಕಣ್ಣೀರು ಕರೆದುವು. ಎಲ್ಲರನ್ನೂ ಸಂತೈಸಲು ಸಮರ್ಥರಾದ ಮತ್ತು ಪ್ರಾಜ್ಞರಾದ ಭೀಷ್ಮ-ವಿದುರರಿಗೂ ದುಃಖವನ್ನು ತಡೆಯಲಾಗಲಿಲ್ಲ. ಕೌರವಮುಖ್ಯರೂ ದುಃಖಿಸಿದರು.

ಅಳುತ್ತಳುತ್ತಲೇ ಭೀಷ್ಮ-ವಿದುರ-ಧೃತರಾಷ್ಟ್ರರೂ, ಪಾಂಡುಸುತರೂ ಮತ್ತು ರಾಜಮಹಿಷಿಯರೂ ಪಾಂಡು-ಮಾದ್ರಿಯರಿಗೆ ಯಥಾವಿಧಿಯಾಗಿ ಜಲತರ್ಪಣಮಾಡಿದರು. ಅವೆಲ್ಲವೂ ಮುಗಿದನಂತರ ಪುರಪ್ರಮುಖರೆಲ್ಲರೂ ಪಾಂಡುಕುವರರ ಸಮೀಪಕ್ಕೆ ಬಂದು ಅವರನ್ನು ಸಮಾಧಾನಪಡಿಸುತ್ತಿದ್ದರು.

ದುಃಖಿತರಾದ ಪಾಂಡವರೂ ಮತ್ತು ಬಂಧು-ದಾಯಾದರೂ ಹನ್ನೆರಡು ದಿನಗಳವರೆಗೆ ನೆಲದ ಮೇಲೆಯೇ ಮಲಗುತ್ತಿದ್ದರು. ಅನೇಕಪೌರರೂ ಅವರನ್ನೇ ಅನುಸರಿಸಿ ತಮ್ಮ ಸುಖೋಪಭೋಗಗಳನ್ನು ಹನ್ನೆರಡು ದಿನಗಳ ಕಾಲ ಪರಿತ್ಯಜಿಸಿ, ಪಾಂಡುರಾಜನಿಗೆ ಅಂತ್ಯಗೌರವವನ್ನು ಸಲ್ಲಿಸಿದರು. ಹನ್ನೆರಡು ದಿನಗಳ ಪರ್ಯಂತವೂ ರಾಜ್ಯದ ಆದ್ಯಂತವಾಗಿ ಶೋಕದಿನವು ಆಚರಿಸಲ್ಪಟ್ಟಿತು. ನಗರದಲ್ಲಿ ಹುಡುಗರು ಮೊದಲ್ಗೊಂಡು ಎಲ್ಲರೂ ಪಾಂಡವರೊಡನೆ ಹನ್ನೆರಡು ದಿವಸಗಳ ಕಾಲ ಅವರ ದುಃಖದಲ್ಲಿ ಸಹಭಾಗಿಗಳಾಗಿದ್ದರು."

೧೨೭ನೆಯ ಅಧ್ಯಾಯವು ಮುಗಿಯಿತು.

೧೨೮ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಅಂಬಿಕೆ-ಅಂಬಾಲಿಕೆ-ಸತ್ಯವತಿಯರ ವನಪ್ರವೇಶ ಮತ್ತು ಅವಸಾನ : ಕೌರವ-ಪಾಂಡವರ ಬಾಲಕ್ರೀಡೆಗಳು : ದುರ್ಯೋಧನನ ಮಾತ್ಸರ್ಯ : ಭೀಮನಿಗೆ ವಿಷಪ್ರಾಶನ

ಜನಮೇಜಯ! ಹನ್ನೆರಡು ದಿನಗಳ ಕರ್ಮಾನಂತರ–ಭೀಷ್ಮನೂ ಮತ್ತು ಕುಂತಿಯೂ ಬಂಧು-ಮಿತ್ರರಿಂದೊಡಗೂಡಿ ರಾಜನಿಗೆ ಶ್ರಾದ್ಧಮಾಡಿ, ಪಿಂಡಪ್ರದಾನಮಾಡಿದರು. ಅಂದಿನ ದಿನ ಪೌರರಿಗೂ, ಸಾವಿರಾರು ಬ್ರಾಹ್ಮಣರಿಗೂ ಮೃಷ್ಟಾನ್ನಭೋಜನವನ್ನು ಮಾಡಿಸಿ, ಯಥೇಚ್ಛವಾಗಿ ಭೂದಾನ, ಗ್ರಾಮದಾನ, ರತ್ನದಾನಗಳನ್ನು ಬ್ರಾಹ್ಮಣರಿಗೆ ಕೊಟ್ಟರು. ಷೋಡಶ ದಾನಗಳನ್ನೂ ಮಾಡಿ ಉತ್ತರಕ್ರಿಯೆಯನ್ನು ಮುಗಿಸಿದನಂತರ ಪಾಂಡವರು ಪರಿಶುದ್ಧರಾಗಿ ಪೌರರೊಡನೆ ನಗರಪ್ರವೇಶಮಾಡಿದರು.

ಹಾಸ್ತಿನಪುರದ ಪ್ರಜೆಗಳು ಭರತರ್ಷಭನಾದ ಪಾಂಡುವನ್ನು ನೆನೆ-ನೆನೆದು ತಮ್ಮ ಆಪ್ತಬಂಧುವೊಬ್ಬನನ್ನು ಕಳೆದುಕೊಂಡಂತೆಯೇ ಬಹುವಾಗಿ ದುಃಖಿಸುತ್ತಿದ್ದರು. ಪಾಂಡು-ಮಾದ್ರಿಯರ ಶ್ರಾದ್ಧಗಳು ಮುಗಿದನಂತರ ಬಹುದುಃಖಿತರಾಗಿದ್ದ ಹಾಸ್ತಿನಪುರದ ಪ್ರಜೆಗಳನ್ನೂ ಮತ್ತು ಕುರುಕುಲದವರನ್ನೂ ನೋಡಿ, ಪೌತ್ರನ ಮರಣದಿಂದ ಬಹುದುಃಖಿತಳಾಗಿದ್ದ, ಶೋಕಾರ್ತಳಾಗಿದ್ದ, ಮುಂದೇನು ಮಾಡಬೇಕೆಂಬುದನ್ನೂ ತಿಳಿಯದೇ ಸಮ್ಮೂಢಳಾಗಿದ್ದ ತಾಯಿಯನ್ನು ಕುರಿತು ವ್ಯಾಸರು ಹೇಳಿದರು :

**ಅತಿಕ್ರಾನ್ತಸುಖಾಃ ಕಾಲಾಃ ಪರ್ಯುಪಸ್ಥಿತದಾರುಣಾಃ ।**
**ಶ್ವಃ ಶ್ವಃ ಪಾಪಿಷ್ಠದಿವಸಾಃ ಪೃಥಿವೀ ಗತಯೌವನಾ ॥೬॥**

"ಅಮ್ಮ! ಸುಖಮಯದಿನಗಳೆಲ್ಲವೂ ಕಳೆದುಹೋದುವು. ಭಯಂಕರಸಮಯವು ಉಪಸ್ಥಿತವಾಗುತ್ತಲಿದೆ. ನಾಳೆ (ಮುಂದೆ) ಬರುವ ದಿನಗಳು ಪಾಪಿಷ್ಠದಿನಗಳಾಗಿರುತ್ತವೆ. ಭೂಮಾತೆಯ ಯೌವನವು ಕಳೆದು ಹೋಯಿತು.

**ಬಹುಮಾಯಾಸಮಾಕೀರ್ಣೋ ನಾನಾದೋಷಸಮಾಕುಲಃ ।**
**ಲುಪ್ತಧರ್ಮಕ್ರಿಯಾಚಾರೋ ಘೋರಃ ಕಾಲೋ ಭವಿಷ್ಯತಿ ॥೭॥**

ವಂಚನೆಯೆಂಬುದು ಪ್ರಪಂಚದ ಎಲ್ಲೆಡೆಗಳಲ್ಲಿಯೂ ವ್ಯಾಪಿಸುತ್ತದೆ. ಪ್ರಪಂಚದ ಜನರು ನಾನಾವಿಧವಾದ ದೋಷಗಳಿಂದ ಸಮಾಕುಲರಾಗುತ್ತಾರೆ. ಸದಾಚಾರ-ಸದ್ಧರ್ಮಗಳೆಲ್ಲವೂ ಲುಪ್ತವಾಗಿ ಹೋಗುತ್ತವೆ. ಈ ಕಾರಣಗಳಿಂದಾಗಿ ಮುಂದೆ ಬರುವ ಕಾಲವು ಅತಿಘೋರವಾಗಿರುತ್ತದೆ. ದುರ್ಯೋಧನಾದಿಗಳು ಮಾಡುವ ಅನ್ಯಾಯದಿಂದ ಪೃಥ್ವಿಯ ಎಲ್ಲ ರಾಜರೂ ವಿನಾಶಹೊಂದುತ್ತಾರೆ. ಆದುದರಿಂದ ನೀನೀಗಲೇ ಕಾಡಿಗೆ ಹೋಗಿ, ಮನಸ್ಸನ್ನು ಧ್ಯಾನಯೋಗದಲ್ಲಿ ಯೋಜಿಸಿ, ಕಾಲಕಳೆಯುವುದು ಯುಕ್ತವಾಗಿದೆ. ನೀನು ನಿನ್ನ ಕಣ್ಣುಗಳಿಂದಲೇ ಈ ವಂಶದ ಘೋರವಿನಾಶವನ್ನು ನೋಡಬೇಡಮ್ಮಾ!"

ವ್ಯಾಸರ ಆ ಮಾತುಗಳಿಗೆ ಸತ್ಯವತಿಯು ಹಾಗೆಯೇ ಆಗಲೆಂದು ಹೇಳಿ, ಅಂತಃಪುರವನ್ನು ಹೊಕ್ಕು, ಸೊಸೆಯಾದ ಅಂಬಿಕೆಗೆ ಹೇಳಿದಳು :

"ಅಂಬಿಕೆ! ನಿನ್ನ ಮೊಮ್ಮಕ್ಕಳ ದುಷ್ಕಾರ್ಯದ ಫಲದಿಂದಾಗಿ ನಮ್ಮ ವಂಶವೇ ವಿನಾಶಹೊಂದುವುದೆಂಬ ವಾರ್ತೆಯನ್ನು ಕೇಳಿದೆನು. ಆದುದರಿಂದ ಅಂತಹ ಘೋರದುಃಖವನ್ನು ನೋಡಲು ಇಚ್ಛಿಸದೆ, ಈಗ ತಾನೇ ಪುತ್ರಶೋಕದಿಂದ ಬಹುದುಃಖಿತೆಯಾಗಿರುವ ಕೌಸಲ್ಯೆ (ಅಂಬಾಲಿಕೆ) ಯೊಡನೆ ಕಾಡಿಗೆ ಹೋಗಿ ನನ್ನ ಕಾಲವನ್ನು ವ್ರತ-ನಿಯಮಾದಿಗಳಿಂದ ಕಳೆಯಲು ನಿಶ್ಚಯಿಸಿರುವೆನು. ಅನುಮತಿಯನ್ನು ಕೊಡುವೆಯಾ?"

ಅದಕ್ಕುತ್ತರವಾಗಿ ಅಂಬಿಕೆಯು ಹೇಳಿದಳು :

"ತಾಯೇ! ಅಂತಹ ಘೋರದುಃಖವನ್ನು ನೆನೆದರೆ ಈಗಲೇ ಸಂಕಟ

ವಾಗುವುದು. ನಾನಾದರೂ ಅದನ್ನು ಕಣ್ಣಿನಿಂದ ನೋಡಲು ಸಾಧ್ಯವೇ? ಆದುದರಿಂದ ನಾನೂ ನಿಮ್ಮನ್ನೇ ಅನುಸರಿಸಿ ಬರುವೆನಮ್ಮಾ."

ಸತ್ಯವತಿಯು ಅಂಬಿಕೆಯ ಮಾತಿಗೆ ಒಪ್ಪಿ, ಭೀಷ್ಮನ ಅಪ್ಪಣೆಯನ್ನೂ ಪಡೆದವಳಾಗಿ, ಇಬ್ಬರು ಸೊಸೆಯರೊಡನೆ ವನವಾಸಕ್ಕೆ ಹೊರಟಳು. ಅಲ್ಲಿ ಮೂವರೂ ಅನೇಕವರ್ಷಗಳ ಕಾಲ ವ್ಯಾಸರ ನಿರ್ದೇಶನದಂತೆ ವ್ರತ-ನಿಯಮ ಗಳನ್ನು ಆಚರಿಸುತ್ತಾ ಧ್ಯಾನಾಸಕ್ತರಾಗಿದ್ದು ಪರಲೋಕವನ್ನೈದಿದರು.

ಮಹಾರಾಜ! ಪಾಂಡುಪುತ್ರರಿಗೆ ಉಪನಯನಾದಿ ವೇದೋಕ್ತ ಸಂಸ್ಕಾರಗಳಾದುವು. ಯುಧಿಷ್ಠಿರಾದಿಗಳು ತಂದೆಯಾದ ಪಾಂಡುವಿನ ಅರ ಮನೆಯಲ್ಲಿಯೇ ಇದ್ದುಕೊಂಡು ರಾಜಯೋಗ್ಯವಾದ ಸುಖಭೋಗಗಳನ್ನು ಅನುಭವಿಸುತ್ತಾ ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿದ್ದರು.

ಧೃತರಾಷ್ಟ್ರನ ನೂರು ಮಕ್ಕಳೂ, ಪಾಂಡುವಿನ ಐವರು ಮಕ್ಕಳೂ ಯಾವಾಗಲೂ ಕ್ರೀಡಾವಿನೋದಗಳಲ್ಲಿ ಒಟ್ಟಾಗಿ ಸೇರಿ ಆನಂದಪಡುತ್ತಿದ್ದರು. ಆದರೆ ಪ್ರತಿಯೊಂದು ಆಟದಲ್ಲಿಯೂ ಧೃತರಾಷ್ಟ್ರನ ಮಕ್ಕಳಿಗೆ ಪರಾ ಜಯವೂ–ಪಾಂಡುವಿನ ಮಕ್ಕಳಿಗೆ ಜಯವೂ ಉಂಟಾಗುತ್ತಿತ್ತು. ಓಟದಲ್ಲಿ, ಗುರಿಯಿಟ್ಟು ಲಕ್ಷ್ಯವನ್ನು ಹೊಡೆಯುವುದರಲ್ಲಿ, ಧೂಳಿನ ಆಟದಲ್ಲಿ, ತಿನ್ನು ವುದರಲ್ಲಿಯೂ ಕೂಡ ಪಾಂಡುವಿನ ಎರಡನೆಯ ಮಗನಾದ ಭೀಮನು ಉಳಿ ದವರನ್ನು ಮೀರಿಸಿಬಿಡುತ್ತಿದ್ದನು. ಸಂತೋಷದಿಂದ ಆಡುತ್ತಿದ್ದ ಹುಡುಗರ ಜುಟ್ಟುಹಿಡಿದು ದರ-ದರನೆ ಎಳೆದುತಂದು ಯುಧಿಷ್ಠಿರನೆಡೆಗೆ ಬಿಡುತ್ತಿದ್ದನು. ಅವರನ್ನು ಬಿಡಿಸಿಕೊಳ್ಳಲು ದುರ್ಯೋಧನಾದಿ ಹತ್ತಾರು ಬಾಲಕರು ಬಂದರೂ ತಾನೊಬ್ಬನೇ ಮುಂದೆ ನಿಂತು ಅವರನ್ನು ಮುಂದೆಸಾಗಲು ಬಿಡದೇ ಅಪ್ಪಳಿಸಿ ಬಿಡುತ್ತಿದ್ದನು. ಜಗಳಕ್ಕೆ ಬಂದ ಕೌರವರನ್ನು ಹೊಡೆದು, ಜುಟ್ಟು ಹಿಡಿದು, ಅವರು ಕೂಗಿಕೊಳ್ಳುತ್ತಿದ್ದರೂ ನೆಲದಲ್ಲಿ ಎಳೆದುಕೊಂಡೇ ಹೋಗುತ್ತಿದ್ದನು. ಅದರಿಂದ ಅವರ ಕೈಕಾಲುಗಳು ತರೆದು ಹೋಗುತ್ತಿದ್ದುವು. ಈಜಾಡುತ್ತಿರು ವಾಗ ಭೀಮನು ಹತ್ತಾರು ಕೌರವರನ್ನು ಹಿಡಿದು ಮುಳುಗಿಸಿ ಅವರು ಸಾಯುವಂತಾದಾಗ ಬಿಟ್ಟುಬಿಡುತ್ತಿದ್ದನು. ದುರ್ಯೋಧನನಂತಹ ಮಾನ ಧನರಾದ ಬಾಲಕರು ಎಷ್ಟೇ ಪೆಟ್ಟುಬಿದ್ದರೂ ರೋಷಾನ್ವಿತರಾಗಿ ಪುನಃ-ಪುನಃ

ಭೀಮನ ಮೇಲೆ ಬಂದು ಬೀಳುತ್ತಿದ್ದರು. ಮೇಲೆ ಬಿದ್ದವರು ಹತ್ತಾರು ಸಂಖ್ಯೆಯಲ್ಲಿದ್ದರೂ ಭೀಮನು ಒಡನೆಯೇ ಒದರಿ, ಮೇಲೆ ಕುಪ್ಪಳಿಸಿ, ಕೆಳಗಿದ್ದವರ ಮೇಲೆ ಬಿದ್ದು, ಅವರೆಲ್ಲರನ್ನೂ ತನ್ನ ಬಾಹುಪಾಶದಿಂದ ಬಿಗಿದಪ್ಪಿ ಹತ್ತಿರದಲ್ಲಿದ್ದ ನದಿಯಲ್ಲಿ ಮುಳುಗಿಸಿ, ಪಕ-ಪಕನೆ ನಗುತ್ತಾ ಮೇಲೆ ಬರುತ್ತಿದ್ದನು. ಅವನ ದೌಷ್ಟ್ಯವನ್ನು ಕಂಡು ದುರ್ಬಲರಾದ ಅನೇಕ ಬಾಲಕರು ಓಡಿಬಿಡುತ್ತಿದ್ದರು.

ಭೀಮನ ಸುಳಿವು ಕಾಣುವವರೆಗೂ ಹುಡುಗರ ಚೇಷ್ಟೆಗಳಿಗೆ ಮಿತಿಯೇ ಇರುತ್ತಿರಲಿಲ್ಲ. ಭೀಮನಿಲ್ಲವೆಂಬ ಭಾವನೆಯಿಂದ ಬಾಲಕರೆಲ್ಲರೂ ಮರವನ್ನು ಹತ್ತಿ ಹಣ್ಣುಗಳನ್ನು ಕೀಳುತ್ತಾ ತಿನ್ನುತ್ತಾ ಇರುವಾಗ, ಭೀಮನು ತನ್ನ ತಂದೆಯಂತೆಯೇ (ವಾಯುವಿನಂತೆ) ಯಾರಿಗೂ ಕಾಣದಂತಿದ್ದು, ಎಲ್ಲಿಂದಲೋ ಬಂದು ಮರದ ಬುಡವನ್ನು ಕಾಲಿನಿಂದ ಒದೆದು ಅಲ್ಲಾಡಿಸಿಬಿಡುತ್ತಿದ್ದನು. ಹಣ್ಣುಗಳ ಜೊತೆಗೆ ಹಣ್ಣುಗಳನ್ನು ತಿನ್ನುತ್ತಿದ್ದ ಬಾಲಕರೂ ತೊಪ-ತೊಪನೆ ಕೆಳಗೆ ಬೀಳುತ್ತಿದ್ದರು. ಬಿದ್ದ ಬಾಲಕರು ಅಲ್ಲಿ ಕ್ಷಣಕಾಲವೂ ನಿಲ್ಲದೇ ಭೀಮನ ಭಯದಿಂದ ತಮಗೆ ಏಟುಬಿದ್ದಿರುವುದನ್ನೂ ನೋಡಿಕೊಳ್ಳಲಾಗದೇ ಕುಂಟಿಕೊಂಡೇ ಓಡುತ್ತಿದ್ದರು. ಕುಂಟುತ್ತಾ ಓಡುವವನು ಮುಂದೆ ಹೋಗಲಾರದೇ ಹಿಂದಿರುಗಿ ನೋಡಿದನೆಂದರೆ ಭೀಮನೊಮ್ಮೆ ಗಟ್ಟಿಯಾಗಿ ಗರ್ಜಿಸುತ್ತಿದ್ದನು.

ಕುಸ್ತಿಯಲ್ಲಾಗಲೀ, ಓಟದಲ್ಲಾಗಲೀ, ಚಾತುರ್ಯದಲ್ಲಾಗಲೀ ಭೀಮನನ್ನು ಮೀರಿಸಲು ಧೃತರಾಷ್ಟ್ರನ ಕುಮಾರರಿಗೆ ಸಾಧ್ಯವಾಗುತ್ತಿರಲಿಲ್ಲ. ಭೀಮನೊಡನೆ ಸ್ಪರ್ಧೆಗೆ ನಿಂತ ದುರ್ಯೋಧನಾದಿಗಳು ಭೀಮನ ಶ್ರೇಷ್ಠತೆಯನ್ನು ಮಾತ್ರವೇ ಪ್ರತಿಪಾದಿಸುತ್ತಿದ್ದರು.

ನಿಶ್ಚಯವಾಗಿಯೂ ಆ ಬಾಲಕರೆಲ್ಲರೂ ಭೀಮನಿಗೆ ತೃಣಪ್ರಾಯರಾಗಿದ್ದರು. ಭೀಮನಿಗೆ ಬಾಲಕರನ್ನು ಪೀಡಿಸಿ, ತನ್ನ ಶಕ್ತಿಯು ಎಷ್ಟೆಂಬುದನ್ನು ತೋರಿಸಿಕೊಡಬೇಕೆಂಬ ಬಾಲ್ಯಚಾಪಲ್ಯವಿತ್ತೇ ಹೊರತು, ಯಾವ ವಿಧವಾದ ಮಾತ್ಸರ್ಯದಿಂದಲೂ ಅವನು ಆ ಬಾಲಕರನ್ನು ಪೀಡಿಸುತ್ತಿರಲಿಲ್ಲ. ಭೀಮನ ಮನದಲ್ಲಿ ಯಾವ ವಿಧವಾದ ಮಾತ್ಸರ್ಯವೂ ಯಾರ

ಮೇಲೆಯೂ ಇರಲಿಲ್ಲವೆಂಬುದು ನಿಶ್ಚಯ. ಆದರೆ ಅವನ ಸಾಹಸಕಾರ್ಯವು ಇತರರ ಮನದಲ್ಲಿ ಮಾತ್ಸರ್ಯವನ್ನು ಹುಟ್ಟಿಸಿತು.*

ನೂರೈದು ಮಂದಿ ಬಾಲಕರ ಮಧ್ಯದಲ್ಲಿ ದುರ್ಯೋಧನನಿಗೆ ಮಾತ್ರ ಅಸೂಯಾಭೂತವು ಹೆಚ್ಚಾಗಿ ಹಿಡಿಯಿತು. ದುರ್ಯೋಧನನು ಅಷ್ಟು ಧರ್ಮಿಷ್ಠನಾಗಿರಲಿಲ್ಲ. ಸ್ವಾರ್ಥಿಯಾಗಿದ್ದನು. ಎಲ್ಲರಲ್ಲಿಯೂ ದೋಷವನ್ನೇ ಕಾಣುತ್ತಿದ್ದನು. ಅವನಿಗೆ ದುರಭಿಮಾನವೂ ಇತ್ತು. ಮೇಲಾಗಿ ಐಶ್ವರ್ಯ ಲೋಭಿಯಾಗಿದ್ದನು. ಈ ಕಾರಣಗಳಿಂದ ಅವನ ಬುದ್ಧಿಯು ಪಾಪಪೂರ್ಣ ವಿಚಾರಗಳಿಂದಲೇ ತುಂಬಿಹೋಗಿತ್ತು. ದುರ್ಯೋಧನನ ಮನಸ್ಸಿನಲ್ಲಿ ಪಾಪ ವಿಚಾರದ ಸರಣಿಯು ಹೀಗೆ ಮೂಡಿತು :

"ಕುಂತೀಪುತ್ರನಾದ, ವೃಕೋದರನಾದ, ಪಾಂಡವಮಧ್ಯಮನಾದ ಈ ಭೀಮಸೇನನು ಬಲಿಷ್ಠರಲ್ಲಿ ಶ್ರೇಷ್ಠನೆನಿಸಿದ್ದಾನೆ. ಮಹಾಪರಾಕ್ರಮೀ ; ಬಲಿಷ್ಠ; ಮಹಾಶೌರ್ಯಯುಕ್ತನಾಗಿದ್ದಾನೆ. ನಾವು ನೂರು ಮಂದಿಗಳಿದ್ದರೂ ನಮ್ಮೊಡನೆ ಏಕಾಕಿಯಾಗಿ ಬಂದು ಸ್ಪರ್ಧಿಸುತ್ತಾನೆ ಮತ್ತು ಸ್ಪರ್ಧೆಯಲ್ಲಿಯೂ ಗೆಲ್ಲುತ್ತಾನೆ. ಆದುದರಿಂದ ಇವನನ್ನು ಮೋಸದಿಂದಲೇ ವಿನಾಶ ಮಾಡಬೇಕಾಗಿದೆ. ನಮ್ಮ ಪಟ್ಟಣದ ಉದ್ಯಾನವನದಲ್ಲಿ ಇವನು ಮಲಗಿರುವಾಗ ಇವನ ಕೈ-ಕಾಲುಗಳನ್ನು ಕಟ್ಟಿ ಗಂಗೆಗೆ ಹಾಕಿಬಿಡೋಣ. ಇವನೊಬ್ಬನು ಹೋದನೆಂದರೆ ನನಗೆ ರಾಜ್ಯವಾಳಲು ಹೆಚ್ಚು ತೊಂದರೆಯಾಗುವುದಿಲ್ಲ. ಅವನ ತಮ್ಮನಾದ ಅರ್ಜುನನನ್ನೂ ಅಣ್ಣನಾದ ಯುಧಿಷ್ಠಿರನನ್ನೂ ಹಿಡಿದು ಬಂಧನದಲ್ಲಿಟ್ಟಾದರೂ ನಾನು ರಾಜ್ಯವಾಳುತ್ತೇನೆ."

ಭೀಮನ ಸಮಾನತೆಯನ್ನಾದರೂ ಪಡೆಯಲು ಪ್ರಯತ್ನಿಸುವ ಬದಲು,

* ಒಡನಾಡಿಗಳಲ್ಲಿ ಅಥವಾ ಸಹೋದರರಲ್ಲಿ–ವಿದ್ಯೆಯಲ್ಲಾಗಲೀ, ಕೀರ್ತಿಯಲ್ಲಾಗಲೀ, ಪರಾಕ್ರಮದಲ್ಲಾಗಲೀ ಯಾರಾದರೂ ಹಿಂದುಳಿದರೆ ಮುಂದುವರಿದವರನ್ನು ನೋಡಿ ಅಸೂಯೆಪಡುವುದು ಸಹಜ. ತಾನೂ ಮುಂದುವರಿದವನ ಸಮಾನತೆಯನ್ನು ಹೊಂದಲು ನಿಶ್ಚಯಿಸುವುದೂ ಮತ್ತು ಪ್ರಯತ್ನಿಸುವುದೂ ಧೀಮಂತನ ಗುಣ. ದುರ್ಜನನಾದವನು ಅಸೂಯೆಯೆಂಬ ಭೂತಕ್ಕೆ ತನ್ನ ಹೃದಯದಲ್ಲಿ ಅವಕಾಶವನ್ನು ಕಲ್ಪಿಸಿಕೊಟ್ಟು ತನಗಿಂತಲೂ ಮುಂದುವರಿದವನನ್ನು ನಾಶಪಡಿಸಲು ಯೋಚಿಸುತ್ತಾನೆ.

ಭೀಮನನ್ನು ಉಪಾಯಾಂತರದಿಂದ ಕೊಲ್ಲಬೇಕೆಂದೇ ದುರ್ಮತಿಯಾದ ದುರ್ಯೋಧನನು ನಿಶ್ಚಯಿಸಿದನು.

ಪಾಪಿಷ್ಠನಾದ ದುರ್ಯೋಧನನು ಹೀಗೆ ನಿಶ್ಚಯಿಸಿ, ಮಹಾತ್ಮನಾದ ಭೀಮಸೇನನಿಗೆ ಅನಿಷ್ಟವನ್ನುಂಟುಮಾಡಲು ಕಾಲನಿರೀಕ್ಷಣೆಯನ್ನು ಮಾಡುತ್ತಲೇ ಇದ್ದನು. ಜಲವಿಹಾರಾರ್ಥವಾಗಿ ಗಂಗಾನದಿಯ ತೀರದಲ್ಲಿ ಚಿತ್ರ-ವಿಚಿತ್ರವಾಗಿದ್ದ ಮತ್ತು ದೊಡ್ಡದಾಗಿದ್ದ ಹತ್ತಿ ಮತ್ತು ಉಣ್ಣೆಬಟ್ಟೆಗಳ ಹಲವಾರು ಗುಡಾರಗಳನ್ನು ನಿರ್ಮಿಸಿದನು. ಆ ಗುಡಾರಗಳಲ್ಲಿ ಎಲ್ಲ ವಿಧವಾದ ಸುಖೋಪಭೋಗವಸ್ತುಗಳೂ, ಆಟ-ಪಾಟಗಳ ವಸ್ತುಗಳೂ ತುಂಬಿದ್ದುವು. ಎಲ್ಲ ಡೇರಾಗಳ ಮೇಲೆಯೂ ಪತಾಕೆಗಳನ್ನು ಹಾರಿಬಿಡಲಾಗಿತ್ತು. ಈ ವಿಧವಾಗಿ ಅನೇಕಾನೇಕ ತಾತ್ಕಾಲಿಕಕ್ರೀಡಾಗೃಹಗಳನ್ನು ದುರ್ಯೋಧನನು ನಿರ್ಮಿಸಿದನು. ಪ್ರಮಾಣಕೋಟಿತೀರ್ಥಕ್ಕೆ ಅನತಿದೂರದ ಪ್ರದೇಶವೊಂದರಲ್ಲಿ ದುರ್ಯೋಧನನು ಆ ಕ್ರೀಡಾಗೃಹಗಳನ್ನು ನಿರ್ಮಿಸಿದ್ದನು. ಆ ಪ್ರದೇಶಕ್ಕೆ ಉದಕಕ್ರೀಡನವೆಂದೇ ಹೆಸರಿಟ್ಟನು. ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಗಳನ್ನು ಕುಶಲರಾದ ಅಡುಗೆಯವರಿಂದ ಸಿದ್ಧಪಡಿಸಿದನು. ಎಲ್ಲ ಕಾರ್ಯಗಳೂ ಸುವ್ಯವಸ್ಥಿತವಾಗಿ ಮುಗಿದಿರುವುದೆಂದು ರಾಜಭಟರು ದುರ್ಯೋಧನನಿಗೆ ಸೂಚನೆಕೊಟ್ಟನಂತರ, ದುರ್ಮತಿಯಾದ ದುರ್ಯೋಧನನು ಪಾಂಡವರ ಬಳಿ ಹೋಗಿ ಹೇಳಿದನು :

"ಉದ್ಯಾನವನಗಳಿಂದ ಸುಶೋಭಿತವಾಗಿರುವ ಗಂಗಾತೀರಕ್ಕಿಂದು ನಮ್ಮ ಅನುಜರೊಡನೆಯೂ, ಮಿತ್ರರೊಡನೆಯೂ ಹೋಗಿ ಜಲಕ್ರೀಡೆಯನ್ನಾಡೋಣ."

ಹಾಗೆಯೇ ಆಗಲೆಂದು ಯುಧಿಷ್ಠಿರನು ಪ್ರತ್ಯುತ್ತರವನ್ನಿತ್ತನು. ನಗರಾಕಾರದ ರಥಗಳ ಮೇಲೆಯೂ, ಸ್ವದೇಶಜನ್ಯಗಳಾದ ಉತ್ತಮೋತ್ತಮವಾದ ಆನೆಗಳ ಮೇಲೆಯೂ ಕುಳಿತು ಶೂರರಾದ ಕೌರವರು ಪಾಂಡವರೊಡನೆ ಉದಕಕ್ರೀಡನಕ್ಕೆ ಹೊರಟು, ಉದ್ಯಾನವನವನ್ನು ಸಮೀಪಿಸುತ್ತಲೇ ತಮ್ಮ ಜೊತೆಯಲ್ಲಿ ಬಂದಿದ್ದ ನಾಗರಿಕರನ್ನು ಪಟ್ಟಣಕ್ಕೆ ಹಿಂದಿರುಗುವಂತೆ ಹೇಳಿ, ಸಿಂಹಗಳು ಗುಹೆಗಳನ್ನು ಪ್ರವೇಶಿಸುವಂತೆ–ಉದ್ಯಾನವನದ ಸೊಬಗನ್ನು ವೀಕ್ಷಿಸುತ್ತಾ ಉದಕಕ್ರೀಡನವನ್ನು ಪ್ರವೇಶಿಸಿದರು.

ತಾತ್ಕಾಲಿಕ ವಸತಿಗೃಹಗಳ ಗೋಡೆಗಳೆಲ್ಲವೂ ಚಿತ್ರಕಲೆಗಳಿಂದ ತುಂಬಿ ಹೋಗಿದ್ದುವು. ವಸತಿಗೃಹಗಳ ನಡುಭಾಗದಲ್ಲಿ ಕೃತಕವಾದ ಜಲಯಂತ್ರ (ಚಿಲುಮೆ )ಗಳಿದ್ದುವು. ನಾಲ್ಕು ಕಡೆಗಳಲ್ಲಿಯೂ ಸಣ್ಣ-ಸಣ್ಣ ಸರೋವರ ಗಳನ್ನೂ ಕಾಲುವೆಗಳನ್ನೂ ನಿರ್ಮಿಸಿದ್ದರು. ಸರೋವರಗಳ ದಂಡೆಗಳಲ್ಲಿ ಪುಷ್ಪಭರಿತವಾದ ಲತಾಗುಲ್ಮಗಳನ್ನೂ ನಿರ್ಮಿಸಿದ್ದರು. ಪುಷ್ಪಗಳ ಸಂಪರ್ಕ ದಿಂದ ಸುಗಂಧಿತವಾದ ವಾಯುವಿನ ಸೇವನೆಯು ರಾಜಕುಮಾರರಿಗೆ ಹೆಚ್ಚು ಉಲ್ಲಾಸವನ್ನುಂಟುಮಾಡಿತು. ನಯನಮನೋಹರವಾದ ವಿಚಿತ್ರಚಿತ್ರ ಗಳೆಲ್ಲವನ್ನೂ ಸ್ವಲ್ಪಕಾಲ ನೋಡಿದನಂತರ ರಾಜಕುಮಾರರು ಉಪಾಹಾರ ಕ್ಕಾಗಿ ಭೋಜನಶಾಲೆಗೆ ತೆರಳಿದರು. ನಾನಾಭಕ್ಷ್ಯಗಳಿಂದ ಕೂಡಿದ್ದ ಭೋಜನ ಶಾಲೆಯಲ್ಲಿ ರಾಜಕುಮಾರರು ಸ್ವೇಚ್ಛೆಯಿಂದ ತಮಗೆ ಬೇಕಾದ ಭಕ್ಷ್ಯಗಳನ್ನು ತಿನ್ನುತ್ತಾ, ಇತರರಿಗೂ ತಿನ್ನಿಸುತ್ತಾ ನಲಿದಾಡುತ್ತಿದ್ದರು.

ದುರ್ಯೋಧನನಿಗೆ ತನ್ನ ಯೋಜನೆಯನ್ನು ಪೂರ್ಣಮಾಡಲು ಸದವಕಾಶವು ಸಿಕ್ಕಿತೆನ್ನಿಸಿತು. ಭೀಮನೊಡನೆ ಸೇರಿ ಸರಸ-ಸಲ್ಲಾಪವಾಡಲು ಮೊದಲಿಟ್ಟನು. ಎಂದೂ ಇಲ್ಲದ ಪ್ರೇಮವನ್ನು ತೋರುತ್ತಾ ಭೀಮನನ್ನು ಬಿಗಿದಪ್ಪಿ ಭುಜಗಳನ್ನು ತಟ್ಟಿದನು. ಅವರಿಬ್ಬರೂ ಒಬ್ಬರ ಹೆಗಲ ಮೇಲೊಬ್ಬರು ಕೈಹಾಕಿಕೊಂಡೇ ಭಕ್ಷ್ಯಗಳನ್ನು ತಿನ್ನಲು-ತಿನ್ನಿಸಲು ಮೊದಲಿಟ್ಟರು. ದುರ್ಯೋಧನನ ನಿರ್ದೇಶನದಂತೆ ವಿಷಮಿಶ್ರವಾದ ಭಕ್ಷ್ಯದ ತಟ್ಟೆಯು ಮೊದಲೇ ಇಡಲ್ಪಟ್ಟಿದ್ದು, ದುರ್ಯೋಧನನಿಗೆ ಅದರ ಸ್ಥಾನ- ಸ್ವರೂಪಗಳನ್ನು ತಿಳಿಸಲಾಗಿತ್ತು. ದುರ್ಯೋಧನನು ವಿಷಮಿಶ್ರವಾದ ಭಕ್ಷ್ಯಗಳನ್ನು ಭೀಮನ ಬಾಯಲ್ಲಿಡುತ್ತಿದ್ದನು. ಅದಕ್ಕೆ ಪ್ರತಿಯಾಗಿ ಭೀಮನೂ ಬೇರೊಂದು ತಟ್ಟೆಯಲ್ಲಿದ್ದ ಸುಮಧುರವಾದ ಭಕ್ಷ್ಯಗಳನ್ನು ದುರ್ಯೋಧನನಿಗೆ ತಿನ್ನಿಸುತ್ತಿದ್ದನು.

ದುರ್ಯೋಧನನ ದುಷ್ಟಯೋಜನೆಯಂತೆ ವಿಷಮಿಶ್ರವಾದ ಭಕ್ಷ್ಯ ಗಳೆಲ್ಲವನ್ನೂ ಭೀಮನಿಗೆ ತಿನ್ನಿಸಲಾಯಿತು. ತನ್ನ ಯೋಜನೆಯು ಫಲಿತ ವಾಯಿತೆಂದು ಹಿರಿಹಿಗ್ಗಿದ ದುರ್ಯೋಧನನು ಭೀಮನನ್ನು ಬಿಟ್ಟು ಹೊರಟು ಹೋದನು.

ಉಪಾಹಾರವಾದನಂತರ ರಾಜಕುಮಾರರೆಲ್ಲರೂ ಜಲಕ್ರೀಡೆಗಾಗಿ

ಹೊರಟುಹೋದರು. ಕೆಲವರು ನದಿಯ ದಡದ ಮೇಲಿಂದ ನೀರಿನೊಳಗೆ ಧುಮ್ಮಿಕ್ಕಿದರು. ಮತ್ತೆ ಕೆಲವರು ಮೀನಿನಂತೆ ಮುಳುಗಿಕೊಂಡೇ ಈಜು ತ್ತಿದ್ದರು. ಕೆಲವು ನಿಷ್ಣಾತರು ನೀರಿನ ಮೇಲೆ ಕೈ-ಕಾಲುಗಳ ಚಲನೆಯನ್ನೇ ಮಾಡದೇ ತೇಲುತ್ತಿದ್ದರು. ಕೆಲವು ಭೀರುಗಳು ನದಿಯ ನಡುಭಾಗಕ್ಕೆ ಹೋಗಲು ಹೆದರಿ ದಡದಲ್ಲಿಯೇ ಮುಳುಗುತ್ತಿದ್ದರು. ಅಂತಹವರ ಕಾಲು



ಗಳನ್ನು ಕೆಲವರು ನೀರಿನೊಳಗೇ ಈಜುತ್ತಾ ಬಂದು ಹಿಡಿದೆಳೆಯುತ್ತಿದ್ದರು. ಆಗಿನ ಅವರ ಪರದಾಟ ಅಸದಳವಾದುದು. ಒಂದೆರಡು ಬಾರಿ ನೀರು ಕುಡಿದ ನಂತರ ಅವರ ಸಂಕಟವನ್ನು ನೋಡಲಾರದೇ ಮೇಲೆ ಬಿಡುತ್ತಿದ್ದರು. ಈ ನಡುವೆ ಭೀಮನು ನದಿಯ ದಡದಿಂದ ಹಾರುವನೆಂದು ತಿಳಿದರೆ ಸುತ್ತ ಮುತ್ತಲೂ ಒಬ್ಬನೂ ಉಳಿಯುತ್ತಿರಲಿಲ್ಲ. ಭೀಮನು ನದಿಯೊಳಗೆ ಹಾರಿ

ಬಿದ್ದನೆಂದರೆ ನದಿಯ ನೀರು ದಂಡೆಯ ಮೇಲೆ ಉಕ್ಕಿ ಹರಿಯುತ್ತಿತ್ತು. ಇನ್ನೂ ಅನೇಕರೀತಿಗಳಲ್ಲಿ ರಾಜಕುಮಾರರು ಜಲಕ್ರೀಡೆಗಳನ್ನಾಡಿ, ಸೋತು-ಸೊಪ್ಪಾಗಿ, ವಿಶ್ರಾಂತಿಪಡೆಯಲು ಉದಕಕ್ರೀಡನವನ್ನು ಸೇರಿದರು.

ಭೀಮನಿಗೆ ದುರ್ಯೋಧನನು ತಿನ್ನಿಸಿದ ವಿಷವು ಪರಿಣಾಮ ವನ್ನುಂಟುಮಾಡಲು ಮೊದಲಿಟ್ಟಿತು. ನೀರಿನಿಂದ ಮೇಲೆದ್ದ ಭೀಮನಿಗೆ ಉದಕಕ್ರೀಡನಕ್ಕೆ ಹೋಗಲೂ ಕೂಡ ಸಾಧ್ಯವಾಗದೇ ನದಿಯ ದಡದಲ್ಲಿಯೇ ಉರುಳಿದನು. ತಂಗಾಳಿಯು ಬೀಸಿದಂತೆಲ್ಲಾ ವಿಷವು ಭೀಮನ ದೇಹವನ್ನು ಸಂಪೂರ್ಣವಾಗಿ ವ್ಯಾಪಿಸಿ, ಅವನನ್ನು ಪ್ರಜ್ಞಾಹೀನನನ್ನಾಗಿ ಮಾಡಿತು.

ರಾಜಕುಮಾರರೆಲ್ಲರೂ ಕ್ರೀಡೆಗಳಲ್ಲಿ ಸುಯೋಜಿತರಾಗಿದ್ದರೂ ದುರ್ಯೋಧನನು ಮಾತ್ರ ಭೀಮನ ಚಲನ-ವಲನಗಳಲ್ಲಿಯೇ ತೀವ್ರಾಸಕ್ತಿಯುಳ್ಳವನಾಗಿದ್ದನು.

ತಾವು ಕೈಗೊಂಡ ಕೆಲಸದ ಫಲಾಫಲಗಳನ್ನು ತಿಳಿಯುವ ಆಸಕ್ತಿ ಎಲ್ಲರಿಗೂ ಇರುವುದಲ್ಲವೇ?

ನದಿಯ ದಂಡೆಯ ಮೇಲೆ ಪ್ರಜ್ಞಾಹೀನನಾಗಿ ಭೀಮನು ಬಿದ್ದಿರುವ ನೆಂಬುದನ್ನು ತಿಳಿದ ದುರ್ಯೋಧನನು ಒಡನೆಯೇ ಅವನ ಬಳಿಗೆ ಹೋಗಿ ನೋಡಿದನು. ಅವನ ಯೋಜನೆಯು ಸಂಪೂರ್ಣವಾಗಿ ಫಲಿಸಿತ್ತು. ಆದರೂ ದುರ್ಯೋಧನನ ಮನದಲ್ಲಿ ನಾನಾವಿಧವಾದ ಯೋಚನೆಗಳು ಅಂಕುರಿಸಿದುವು.

"ಇವನನ್ನು ಹೀಗೆಯೇ ಬಿಟ್ಟರೆ ತಂದೆಯೂ, ಭೀಷ್ಮನೂ, ವಿದುರನೂ ಏನೆಂದು ಯೋಚಿಸಿಯಾರು? ಇವನ ಮರಣಕ್ಕೆ ಕಾರಣನು ನಾನೇ ಇರ ಬಹುದೆಂದು ಸಂದೇಹಿಸಬಹುದಲ್ಲವೇ? ಆದುದರಿಂದ ಇವನ ಸುಳಿವೇ ಇಲ್ಲದಂತೆ ಮಾಡಿಬಿಟ್ಟರೆ...."

ಒಡನೆಯೇ ದುರ್ಯೋಧನನು ಹತ್ತಿರದಲ್ಲಿದ್ದ ಬಳ್ಳಿಗಳಿಂದಲೇ ಭೀಮನ ಕೈ-ಕಾಲುಗಳನ್ನು ಬಿಗಿದು, ಪ್ರಯಾಸದಿಂದ ಹೊತ್ತುತಂದು ನದಿ ಯಲ್ಲಿ ಹಾಕಿಬಿಟ್ಟನು.

ದುರ್ಯೋಧನನು ನದಿಯಲ್ಲಿ ಭೀಮನ ಶರೀರವನ್ನು ಹಾಕಿ, ನಿಶ್ಚಿಂತ

ನಾಗಿ ಅರಮನೆಗೆ ತೆರಳಿದನು. ದುರ್ಯೋಧನನ ದುಷ್ಟಯೋಜನೆಯು ಸಾಂಗವಾಗಿ ನೆರವೇರಿದಂತಾಯಿತು.

ಸ್ಥೂಲವಾಗಿದ್ದ ಭೀಮನ ಶರೀರವು ನದಿಯಲ್ಲಿ ಮುಳುಗಿ ನಾಗಲೋಕಕ್ಕೆ ಹೋಯಿತು. ಅಲಿದ್ದ ಮಹಾಸರ್ಪಗಳು ಸ್ಥೂಲಶರೀರವೊಂದು ತಮ್ಮ ನಡುವೆ ಬಿದ್ದೊಡನೆಯೇ ಕೋಪಗೊಂಡು ಶರೀರದ ನಾನಾಭಾಗಗಳನ್ನು ಕಚ್ಚಿದುವು. ಅದರ ಪರಿಣಾಮವೇನು?

**ತತೋಽಸ್ಯ ದಶ್ಯಮಾನಸ್ಯ ತದ್ವಿಷಂ ಕಾಲಕೂಟಕಮ್ ।**
**ಹತಂ ಸರ್ಪವಿಷೇಣೈವ ಸ್ಥಾವರಂ ಜಙ್ಗಮೇನ ತು ॥೫೭॥**

ಸರ್ಪಗಳ ದಂಶನದಿಂದ ಭೀಮನ ಶರೀರದಲ್ಲಿ ವ್ಯಾಪ್ತವಾದ ವಿಷವು ಹಿಂದೆಯೇ ಭೀಮನ ಶರೀರದಲ್ಲಿ ವ್ಯಾಪ್ತವಾಗಿದ್ದ ಕಾಲಕೂಟವಿಷವನ್ನು ವಿನಾಶಗೊಳಿಸಿತು. ಸ್ಥಾವರವಿಷವನ್ನು (ರಾಸಾಯನಿಕ ಪದಾರ್ಥಗಳಿಂದ ಸಿದ್ಧಪಡಿಸಿದ ವಿಷವನ್ನು) ಜಂಗಮವಿಷವು (ಪ್ರಾಣಿಗಳಲ್ಲಿನ ವಿಷವು) ವಿನಾಶಗೊಳಿಸಿತು.

ಸರ್ಪಗಳು ವಿಶಾಲವಕ್ಷನಾದ ಭೀಮಸೇನನ ಮರ್ಮಸ್ಥಾನಗಳನ್ನು ಕಚ್ಚಿದರೂ ಕಠಿನವಾದ ಅವನ ಚರ್ಮವನ್ನು ಭೇದಿಸಲು ಕೂಡ ಸಮರ್ಥವಾಗಲಿಲ್ಲ.

ಸರ್ಪವಿಷವ್ಯಾಪನೆಯಿಂದ ಕಾಲಕೂಟವಿಷದ ನಿವಾರಣೆಯಾದೊಡನೆಯೇ ವೃಕೋದರನು ಸಚೇತನನಾಗಿ, ತನ್ನ ಬಂಧನವನ್ನು ಬಿಡಿಸಿಕೊಳ್ಳಲು ಒಮ್ಮೆ ಬಲವಾಗಿ ಮೈ ಒದರಿ ಹೊರಳಿದನು. ಕ್ಷಣಮಾತ್ರದಲ್ಲಿ ಬಂಧನವು ಬಿಚ್ಚಿಹೋಯಿತು. ಅಲ್ಲಿದ್ದ ಸರ್ಪಗಳನ್ನೆಲ್ಲಾ ನೆಲಕ್ಕೆ ಅಪ್ಪಳಿಸಿದನು. ಅನೇಕಸರ್ಪಗಳು ಸತ್ತುಹೋದುವು. ಅಳಿದುಳಿದ ಸರ್ಪಗಳು ಓಡಿಹೋಗಿ ತಮ್ಮ ರಾಜನಾದ, ಇಂದ್ರಸಮಾನನಾದ ವಾಸುಕಿಗೆ ಆ ವೃತ್ತಾಂತವನ್ನು ತಿಳಿಸಿದುವು.

"ಮಹಾರಾಜ! ಒಬ್ಬ ಮಾನವನು ಲತೆಗಳಿಂದ ಬಂಧಿತನಾಗಿ ನಮ್ಮ ನಡುವೆ ಬಿದ್ದನು. ಪ್ರಾಯಶಃ ಅವನು ವಿಷಪಾನ ಮಾಡಿದ್ದಿರಬಹುದು.

ಏಕೆಂದರೆ : ಅವನು ನಿಶ್ಚೇಷ್ಟನಾಗಿ ಬಿದ್ದಿದ್ದನು. ನಾವು ಕಚ್ಚಿದೊಡನೆಯೇ ಸಚೇತನನಾಗಿ, ಬಂಧನವನ್ನು ಬಿಡಿಸಿಕೊಂಡು ನಮ್ಮನ್ನು ಅಪ್ಪಳಿಸಲು ಪ್ರಾರಂಭಿಸಿದನು. ಸರ್ಪರಾಜ! ದಯೆಯಿಟ್ಟು ಅವನಾರಿರಬಹುದೆಂಬು ದನ್ನು ತಿಳಿಯುವುದು ಯುಕ್ತವಾಗಿದೆ.

ಸರ್ಪಗಳ ಪ್ರಾರ್ಥನೆಯಂತೆ ವಾಸುಕಿಯು ಸಪರಿವಾರನಾಗಿ ಭೀಮ ನಿದ್ದೆಡೆಗೆ ಬಂದನು. ವಾಸುಕಿಯ ಪರಿವಾರದಲ್ಲಿದ್ದ ಆರ್ಯಕನೆಂಬ ಸರ್ಪ ರಾಜನು ಭೀಮನನ್ನು ಕಂಡಕೂಡಲೇ ಆದರದಿಂದ ಮುಂದೆ ಹೋಗಿ ವೃಕೋದರನನ್ನು ಬಾಚಿ ತಬ್ಬಿಕೊಂಡನು. ಆರ್ಯಕನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದುವು. ಆರ್ಯಕನು ಕುಂತಿಯ ತಂದೆಯ ಮುತ್ತಾತನೆಂಬುದು ವಿಚಾರಿಸಿದನಂತರ ವಾಸುಕಿಗೂ ತಿಳಿಯಿತು. ಸಂಬಂಧಾನುಸಂಬಂಧದಿಂದ ವೃಕೋದರನೂ ವಾಸುಕಿಯ ಬಂಧುವೇ ಆದನಲ್ಲವೇ? ವೃಕೋದರನನ್ನು ವಾಸುಕಿಯು ಆದರಿಸಿದನು. ವೃಕೋದರ ನಿಗೆ ಹೆಚ್ಚಿನ ಪ್ರಿಯವನ್ನುಂಟುಮಾಡಲು ಯಥೇಚ್ಛವಾದ ಧನ-ಕನಕ ವಸ್ತು ಗಳನ್ನು ಕೊಡಬಹುದಲ್ಲವೇ?—ಎಂದು ಆರ್ಯಕನೊಡನೆ ವಾಸುಕಿಯು ಸಮಾಲೋಚಿಸಿದನು.

ವಾಸುಕಿಯ ಮನದ ಇಂಗಿತವನ್ನರಿತ ಆರ್ಯಕನು ತನ್ನ ಬಂಧುವಿಗೆ ಶಾಶ್ವತವಾಗಿ ಉಳಿಯುವ ಉಪಕಾರವನ್ನೇ ಮಾಡಬೇಕೆಂದು ನಿಶ್ಚಯಿಸಿ ವಾಸುಕಿಗೆ ಹೇಳಿದನು :

"ಮಹಾರಾಜ! ನೀನು ನನ್ನ ದೌಹಿತ್ರನ ( ಮೊಮ್ಮಗನ ) ವಿಷಯ ದಲ್ಲಿ ಸುಪ್ರೀತನಾಗಿರುವೆಯಾದರೆ ರತ್ನಹಾರಗಳನ್ನಾಗಲೀ, ಧನಸಂಪತ್ತ ನ್ನಾಗಲೀ ಕೊಡಬೇಕಾದ ಕಾರಣವಿಲ್ಲ. ಅವನಿಗೆ ಅದರಿಂದ ಹೆಚ್ಚು ಪ್ರಯೋಜನವೂ ಆಗಲಾರದು."

"ಮತ್ತೇನು ಕೊಡಬೇಕೆನ್ನುವ ಅಭಿಲಾಷೆಯು ನಿನಗಿರುವುದು ಆರ್ಯಕ?"

**ರಸಂ ಪಿಬೇತ್ಕುಮಾರೋಽಯಂ ತ್ವಯಿ ಪ್ರೀತೇ ಮಹಾಬಲಃ ।**
**ಬಲಂ ನಾಗಸಹಸ್ರಸ್ಯ ಯಸ್ಮಿನ್ಕುಣ್ಡೇ ಪ್ರತಿಷ್ಠಿತಮ್ ॥೬೮॥**

"ಒಂದು ಸಾವಿರ ಆನೆಗಳ ಬಲವನ್ನು ಕೊಡುವ ಅಮೃತವು ತುಂಬಿರುವ ಅತ್ಯಮೋಘವಾದ ರಸಕುಂಡಗಳು ನಿನ್ನಲ್ಲಿವೆಯಲ್ಲವೇ? ಅವನ್ನು ಕುಡಿಯಲು ಭೀಮನಿಗೆ ಅನುಮತಿಯನ್ನು ಕೊಡು, ಮಹಾರಾಜ! ಅವನಿಗೆ ಎಷ್ಟು ರಸಕುಂಡಗಳನ್ನು ಕುಡಿಯಲು ಸಾಧ್ಯವಾಗುವುದೋ ಅಷ್ಟನ್ನೂ ದಯಪಾಲಿಸು."

"ನಿನ್ನ ದೌಹಿತ್ರನು ಮಹಾಪರಾಕ್ರಮಿಯಾಗಬೇಕೆಂದು ಅಪೇಕ್ಷಿಸುವೆಯಾ? ನಿನ್ನ ಇಚ್ಛೆಯಿದ್ದಂತಾಗಲಿ"–ಎಂದು ನಸುನಗುತ್ತಾ ವಾಸುಕಿಯು ರಸಕುಂಡಗಳಲ್ಲಿದ್ದ ಅಮೃತವನ್ನು ಯಥಾಶಕ್ತಿ ಕುಡಿಯಲು ಭೀಮನಿಗೆ ಅನುಮತಿಯನ್ನಿತ್ತನು.

ಕೂಡಲೇ ಅಲ್ಲಿದ್ದ ಸರ್ಪಗಳು ಅಮೃತಪ್ರಾಶನಕ್ಕೆ ಉಕ್ತವಾದ ಸ್ವಸ್ತಿವಾಚನಮಾಡಿದುವು. ವೃಕೋದರನೂ ಪರಿಶುದ್ಧನಾಗಿ ಬಂದು ಪೂರ್ವಾಭಿಮುಖವಾಗಿ ಕುಳಿತನು. ರಸಕುಂಡಗಳು ತೆರಲ್ಪಟ್ಟುವು. ಒಂದೇ ಉಸುರಿಗೆ ಅಮೃತಪೂರ್ಣವಾಗಿದ್ದ ಒಂದು ರಸಕುಂಡವನ್ನು ವೃಕೋದರನು ಮುಗಿಸಿಬಿಟ್ಟನು. ಒಂದಾದ ಮೇಲೊಂದರಂತೆ ಎಂಟು ರಸಕುಂಡಗಳನ್ನು ಮುಗಿಸಿದನು.

ಬಹಳ ಹಸಿವಾದಾಗಲೂ, ಪೂರ್ಣವಾಗಿ ಭೋಜನಮಾಡಿದ ಮೇಲೆಯೂ ಶರೀರವು ವಿಶ್ರಾಂತಿಯನ್ನು ಬಯಸುವುದು ಸಹಜ. ಎಂಟು ರಸಕುಂಡಗಳನ್ನು ಮುಗಿಸಿದ ವೃಕೋದರನಿಗೂ ವಿಶ್ರಾಂತಿಯು ಬೇಕಾಗಿತ್ತು. ಸರ್ಪಗಳು ಮೊದಲೇ ವೃಕೋದರನು ಮಲಗಲು ಹಂಸತೂಲಿಕೆಯನ್ನು ಸಿದ್ಧಪಡಿಸಿದ್ದುವು. ವೃಕೋದರನು ಅಲ್ಲಿ ಹೋಗಿ ಮಲಗಿದನು."

೧೨೮ನೆಯ ಅಧ್ಯಾಯವು ಮುಗಿಯಿತು.

## ಭೀಮನ ಅದರ್ಶನದಿಂದ ಕುಂತಿಯ ವ್ಯಾಕುಲತೆ : ನಾಗಲೋಕದಿಂದ ಭೀಮನ ಪ್ರತ್ಯಾಗಮನ : ದುರ್ಯೋಧನನ ದೌಷ್ಟ್ಯ

ಜನಮೇಜಯ! ಈ ಮಧ್ಯದಲ್ಲಿ ವೃಕೋದರನ ಹೊರತಾಗಿ ಉಳಿದ ರಾಜಕುಮಾರರೆಲ್ಲರೂ ಉದಕಕ್ರೀಡನದಿಂದ ಆನೆ, ಕುದುರೆ, ರಥ ಇವೇ ಮೊದಲಾದ ನಾನಾವಾಹನಗಳಲ್ಲಿ ಕುಳಿತು ವೃಕೋದರನಿಲ್ಲದ ವಿಷಯವಾಗಿ ಮಾತನಾಡಿಕೊಳ್ಳುತ್ತಾ ಮೊದಲೇ ಹೊರಟುಹೋಗಿರಬಹುದೆಂಬ ಶಂಕೆ ಯಿಂದ ಅರಮನೆಗೆ ತೆರಳಿದರು. ದುರ್ಯೋಧನನು ಮಾತ್ರ ವೃಕೋದರನ ಅವಸ್ಥೆಯು ಮುಗಿದುಹೋಯಿತೆಂಬ ಸಂತೋಷದಿಂದ ತನ್ನ ಸಹೋದರ ರೊಡನೆ ಕೇಕೆಹಾಕಿಕೊಂಡು ನಗುತ್ತಾ ನಗರವನ್ನು ಪ್ರವೇಶಿಸಿದನು. ಪಾಂಡವ ರಲ್ಲಿ ಹಿರಿಯನಾದ ಯುಧಿಷ್ಠಿರನು ಪರಮಧಾರ್ಮಿಕನಾಗಿದ್ದನು. ಅವನ ಮನಸ್ಸಿನಲ್ಲಿ ಇತರರ ವಿಷಯವಾಗಿ ಸ್ವಲ್ಪವಾದರೂ ಪಾಪಬುದ್ಧಿಯಿರಲಿಲ್ಲ. ಇತರರನ್ನೂ ತನ್ನಂತೆಯೇ ಧರ್ಮಮನೋಭಾವವುಳ್ಳವರೆಂದೇ ಭಾವಿಸಿದ್ದನು.

ಯುಧಿಷ್ಠಿರನು ವೃಕೋದರನನ್ನು ಕಾಣದೇ ವ್ಯಾಕುಲಗೊಂಡವನಾಗಿ ನಗರವನ್ನು ಪ್ರವೇಶಿಸಿದೊಡನೆಯೇ ತಾಯಿಯಿದ್ದ ಅಂತಃಪುರಕ್ಕೆ ಓಡಿ ಹೋಗಿ ನಮಸ್ಕರಿಸಿ–'ಅಮ್ಮಾ! ಭೀಮನು ಬಂದನೇ?'–ಎಂದು ಆತುರ ದಿಂದ ಕೇಳಿದನು.

"ಭೀಮನು ಇಲ್ಲಿಯೂ ಇಲ್ಲವಲ್ಲಾ! ಮತ್ತೆಲ್ಲಿಗೆ ಹೋಗಿರಬಹುದು? ನಾವು ಅವನನ್ನು ವನದ ಎಲ್ಲ ಕಡೆಗಳಲ್ಲಿಯೂ ಹುಡುಕಿದೆವು. ಅಲ್ಲೆಲ್ಲಿಯೂ ಕಾಣಲಿಲ್ಲ. ಕಡೆಗೆ ನಮಗಿಂತಲೂ ಮುಂಚಿತವಾಗಿಯೇ ಇಲ್ಲಿಗೆ ಬಂದಿರ ಬಹುದೆಂದು ಭಾವಿಸಿದ್ದೆವು. ಈಗ ಇಲ್ಲಿಯೂ ಇಲ್ಲ. ಇಲ್ಲಿಗೆ ಬಂದು ಪುನಃ ಮತ್ತೆಲ್ಲಿಗಾದರೂ ಹೋಗಿರುವನೇನಮ್ಮಾ? ನೀನು ಎಲ್ಲಿಗಾದರೂ ಅವನನ್ನು ಕಳುಹಿಸಿರುವೆಯಾ? ಬೇಗ ಹೇಳಮ್ಮಾ. ಏಕೆಂದರೆ : ಭೀಮನ ವಿಷಯದಲ್ಲಿ ನನಗೆ ಯಾವಾಗಲೂ ಭಯವಿದ್ದೇ ಇರುವುದು. ಅವನು ನದಿಯ ದಂಡೆಯಲ್ಲಿ ಮಲಗಿದ್ದುದನ್ನು ಕಂಡಿದ್ದೆನು. ನಿಶ್ಚಯವಾಗಿಯೂ ಅವನನ್ನು

ಯಾರೋ ದುರಾತ್ಮರು ಕೊಲ್ಲದೇ ಬಿಟ್ಟಿಲ್ಲವೆಂದು ನಾನು ಭಾವಿಸುವೆನು. ಅಯ್ಯೋ!"

ಯುಧಿಷ್ಠಿರನ ಕಣ್ಣುಗಳಿಂದ ಕಂಬನಿಯು ಧಾರಾಕಾರವಾಗಿ ಹರಿಯ ತೊಡಗಿತು. ಯುಧಿಷ್ಠಿರನ ಮಾತುಗಳನ್ನು ಕೇಳಿ ಕುಂತಿಯ ಎದೆಯೊಡೆದು ಹೋಯಿತು. ಅವಳೂ ಕಂಬನಿದುಂಬಿದವಳಾಗಿ ಯುಧಿಷ್ಠಿರನನ್ನು ಕುರಿತು ಹೇಳಿದಳು : "ಮಗು! ಭೀಮನನ್ನು ನಾನು ನೋಡಲೇ ಇಲ್ಲ. ಅವನು ನನ್ನಲ್ಲಿಗೆ ಬರಲೂ ಇಲ್ಲ. ಒಡನೆಯೇ ನೀವು ನಾಲ್ವರೂ ಹೋಗಿ ಅವನನ್ನು ಹುಡುಕಿರಿ." ಹೀಗೆ ಕುಂತಿಯು ಮಕ್ಕಳಿಗೆ ಹೇಳಿ, ಕೂಡಲೇ ವಿದುರನನ್ನು ಕರೆಯಿಸಿ ಹೇಳಿದಳು :

"ಕ್ಷತ್ತನೇ! ಭೀಮಸೇನನು ಕಾಣಿಸುತ್ತಿಲ್ಲ. ಅವನು ಎಲ್ಲಿ ಹೋದ ನೆಂಬುದೇ ತಿಳಿಯದು. ಉದಕಕ್ರೀಡನದಿಂದ ಭೀಮನ ಹೊರತಾಗಿ ಉಳಿದವ ರೆಲ್ಲರೂ ಬಂದಿರುವರು. ದುರ್ಯೋಧನನಿಗೆ ಭೀಮನ ವಿಷಯದಲ್ಲಿ ಮತ್ಸರ ವಿದೆಯೆಂಬುದನ್ನು ನಾನು ಬಲ್ಲೆನು.

**ನ ಚ ಪ್ರೀಣಯತೇ ಚಕ್ಷುಃ ಸದಾ ದುರ್ಯೋಧನಸ್ಯ ಸಃ ।**
**ಕ್ರೂರೋಽಸೌ ದುರ್ಮತಿಃ ಕ್ಷುದ್ರೋ ರಾಜ್ಯಲುಬ್ಧೋಽನಪತ್ರಪಃ ॥೧೫॥**

ಭೀಮಸೇನನು ದುರ್ಯೋಧನನ ಕಣ್ಣುಗಳಿಗೆ ಯಾವಾಗಲೂ ಆನಂದವನ್ನುಂಟುಮಾಡುವವನಾಗಿಲ್ಲ. ದುರ್ಯೋಧನನು ಕ್ರೂರಿಯೂ, ದುರ್ಮತಿಯೂ, ಕ್ಷುದ್ರನೂ, ರಾಜ್ಯಲೋಭಿಯೂ, ನಾಚಿಕೆಗೆಟ್ಟವನೂ ಆಗಿರುವನು. ಅವನು ಮಾತ್ಸರ್ಯದಿಂದುಂಟಾದ ಕೋಪದಿಂದ ನನ್ನ ಪ್ರೇಮಪುತ್ಥಳಿಯನ್ನು ಕೊಂದುಬಿಟ್ಟಿರುವನೇನೋ–ಎಂಬ ಭಯವುಂಟಾ ಗಿದೆ. ವಿದುರ! ನಿಶ್ಚಯವಾಗಿಯೂ ಇದನ್ನು ನೆನೆದೊಡನೆಯೇ ನನ್ನ ಹೃದಯವು ಬೆಂದು ಹೋಗುವುದು.

"ರಾಜಕುಮಾರಿ! ಹಾಗೆಂದೂ ಹೇಳಬೇಡ. ನಿನ್ನ ಉಳಿದ ಮಕ್ಕಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡಿರು. ನೀನು ದುರ್ಯೋಧನನನ್ನು ನಿಂದಿಸುತ್ತಿರುವೆಯೆಂಬುದು ಅವನಿಗೇನಾದರೂ ತಿಳಿದುಬಿಟ್ಟರೆ ಉಳಿದ ಮಕ್ಕಳನ್ನೂ ಕೊಲ್ಲಲು ಅವನು ಸನ್ನಾಹಮಾಡುವನು. ಮೇಲಾಗಿ :

**ದೀರ್ಘಾಯುಷಸ್ತವ ಸುತಾ ಯಥೋವಾಚ ಮಹಾಮುನಿಃ ।**
**ಆಗಮಿಷ್ಯತಿ ತೇ ಪುತ್ರಃ ಪ್ರೀತಿಂ ಚೋತ್ಪಾದಯಿಷ್ಯತಿ ॥೧೮॥**

ನಿನ್ನ ಮಕ್ಕಳೆಲ್ಲರೂ ದೀರ್ಘಾಯುಷ್ಮಂತರಾಗಿ ಇರುವರೆಂದು ವ್ಯಾಸ ಮಹರ್ಷಿಗಳೇ ಹೇಳಿರುವರಲ್ಲವೇ? ಮಹರ್ಷಿಗಳ ಮಾತು ಎಂದಿಗೂ ಸುಳ್ಳಾಗಲಾರದು. ಭೀಮನು ಜೀವಂತನಾಗಿ ಬಂದೇ ಬರುವನು. ನಿನಗೆ ಅಮಿತವಾದ ಸಂತೋಷವನ್ನೂ ಉಂಟುಮಾಡುವನು. ಚಿಂತಿಸಬೇಡ"– ಎಂದು ಧರ್ಮಾತ್ಮನಾದ ವಿದುರನು ಕುಂತಿಗೆ ಸಮಾಧಾನವನ್ನು ಹೇಳಿ ತನ್ನ ಅರಮನೆಗೆ ಹೋದನು.

ಆ ಮಾತನ್ನು ಕೇಳಿದನಂತರವೂ ಕುಂತಿಗೆ ಏನು ಮಾಡಬೇಕೆಂಬುದೇ ತಿಳಿಯದಾಯಿತು.

ತನ್ನ ಉಳಿದ ನಾಲ್ವರು ಮಕ್ಕಳೊಡನೆ ಅರಮನೆಯಲ್ಲಿದ್ದ ಕುಂತಿಯು ಸದಾಕಾಲದಲ್ಲಿಯೂ ಭೀಮನನ್ನೇ ಚಿಂತಿಸುತ್ತಿದ್ದಳು.

ಇತ್ತಲಾಗಿ ವೃಕೋದರನು ಏಳು ದಿನಗಳ ಕಾಲ ಅವಿಚ್ಛಿನ್ನವಾಗಿ ಹಂಸತೂಲಿಕೆಯ ಮೇಲೆ ಮಲಗಿ ಗಾಢವಾದ ನಿದ್ರಾಸುಖವನ್ನನುಭವಿಸಿ, ಎಂಟನೆಯ ದಿನ ಮೇಲೆದ್ದನು. ಮೇಲೆದ್ದೊಡನೆಯೇ ಅಮೃತಪ್ರಾಪ್ತಿಯಿಂದ ಅನಿರ್ವಾಚ್ಯವಾದ ಶಕ್ತಿಯು ತನಗುಂಟಾಗಿದೆಯೆಂಬ ಅರಿವು ಅವನಿಗುಂಟಾಯಿತು. ಅವನು ಜಾಗ್ರತನಾದುದನ್ನು ನೋಡಿ ಸರ್ಪಗಳೆಲ್ಲವೂ ಅವನ ಸಮೀಪಕ್ಕೆ ಬಂದು ಪ್ರಿಯೋಕ್ತಿಗಳನ್ನಾಡಲು ಪ್ರಾರಂಭಿಸಿದುವು :

**ಯತ್ತೇ ಪ್ರೀತೋ ಮಹಾಬಾಹೋ ರಸೋಽಯಂ ವೀರ್ಯಸಂಭೃತಃ ।**
**ತಸ್ಮಾನ್ನಾಗಾಯುತಬಲೋ ರಣೇಽಧೃಷ್ಯೋ ಭವಿಷ್ಯಸಿ ॥೨೨॥**

"ಮಹಾನುಭಾವನಾದ ವೃಕೋದರನೇ! ರಸಕುಂಡಗಳಲ್ಲಿದ್ದ ಅಮೃತ ಪಾನದಿಂದ ಈಗ ನೀನು ಹತ್ತು ಸಾವಿರ ಆನೆಗಳ ಬಲವುಳ್ಳವನಾಗಿರುವೆ. ಪ್ರಪಂಚದಲ್ಲಿ ಯಾರೊಬ್ಬರೂ ಇನ್ನು ಮುಂದೆ ನಿನ್ನನ್ನು ಸಮರದಲ್ಲಿ

ಗೆಲ್ಲಲಾರರು. ಕುರುಕುಲೋತ್ತಮನೇ! ನೀನು ಈ ಕೂಡಲೇ ಸಮೀಪದಲ್ಲಿ ರುವ ಪರಮಪವಿತ್ರವಾದ ಸರೋವರದಲ್ಲಿ ಮಿಂದು ನಿನ್ನ ಗೃಹಕ್ಕೆ ಹಿಂದಿರುಗು. ನಿನ್ನ ಸಹೋದರರರೂ ಮತ್ತು ತಾಯಿಯೂ ನಿನ್ನನ್ನು ಕಾಣದೇ ಪರಿತಪಿಸುತ್ತಿದ್ದಾರೆ."

ವೃಕೋದರನು ಹಾಗೆಯೇ ಆಗಲೆಂದು ಹೇಳಿ ಪವಿತ್ರ ಸರೋವರದಲ್ಲಿ ಮಿಂದು ಶುಭ್ರವಾದ ಶ್ವೇತವಸ್ತ್ರಗಳನ್ನುಟ್ಟು, ಅದೇ ಬಣ್ಣದ ಪುಷ್ಪಮಾಲೆ ಯನ್ನೂ ಧರಿಸಿದವನಾಗಿ, ಸರ್ಪಗಳು ಪ್ರೇಮಪೂರ್ವಕವಾಗಿ ಕೊಟ್ಟ ವಿಷ ನಾಶಕವಾದ, ಸುಗಂಧಿತವಾದ, ಔಷಧಯುಕ್ತವಾದ ಪಾಯಸವನ್ನು ಕುಡಿದು, ಸರ್ಪಶ್ರೇಷ್ಠರ ಆಶೀರ್ವಾದಗಳನ್ನೂ ಪಡೆದವನಾಗಿ, ಪಾತಾಳ ಲೋಕದಿಂದ ಭೂಲೋಕಕ್ಕೆ ಬರಲು ಮೇಲೆದ್ದನು. ಸರ್ಪಗಳು ದಿವ್ಯಾಭರಣ ಗಳಿಂದ ಅಲಂಕೃತನಾಗಿದ್ದ ಭೀಮನನ್ನು ನೀರಿನಿಂದ ಮೇಲೆತ್ತಿ, ಹಿಂದೆ ಅವನು ಮಲಗಿದ್ದ ನದಿಯ ದಂಡೆಯ ಮೇಲಕ್ಕೆ ಕರೆತಂದುಬಿಟ್ಟುವು. ವೃಕೋದರನು ನೋಡುತ್ತಿದ್ದಂತೆಯೇ ಸರ್ಪಗಳು ಅದೃಶ್ಯವಾದುವು.

ವಾಯುಸುತನು ಒಡನೆಯೇ ಮೇಲೆದ್ದು ಅತ್ಯಂತರಭಸದಿಂದ ಹಾಸ್ತಿನಪುರದ ಅರಮನೆಗೆ ಓಡಿದನು. ದಾರಿಯಲ್ಲಿ ಜನರು–"ಭೀಮ! ವೃಕೋದರ!" ಎಂ ದು ಕರೆಯುತ್ತಿದ್ದ ಶಬ್ದಗಳಾವುವೂ ಅವನ ಕಿವಿಗೆ ಬೀಳು ತ್ತಲೇ ಇರಲಿಲ್ಲ. 'ತಾಯಿಯನ್ನು ಯಾವಾಗ ಕಾಣುವೆನು? ಯುಧಿಷ್ಠಿರನನ್ನು ಯಾವಾಗ ಅಪ್ಪಿಕೊಳ್ಳುವೆನು?'–ಎಂಬುದೇ ಅವನ ಚಿಂತೆಯಾಗಿತ್ತು.

ತಾಯಿಯ ಬಳಿಗೆ ಅವನು ಓಡಿಬರುತ್ತಿರುವುದನ್ನು ಕಂಡು ಅಲ್ಲಲ್ಲಿ ನಿಂತಿದ್ದ ಅರ್ಜುನ-ನಕುಲ-ಸಹದೇವರೂ ತಾಯಿಯಿದ್ದೆಡೆಗೆ ಓಡಿದರು. ವೃಕೋದರನು ತಾಯಿಯಿದ್ದ ಅಂತಃಪುರವನ್ನು ಪ್ರವೇಶಿಸಿ 'ಅಮ್ಮಾ!' ಎಂದನು. ಕುಂತಿಯು 'ಭೀಮಾ!' ಎಂದು ಹೇಳುತ್ತಾ ಓಡಿಬಂದು ಪ್ರಿಯಸುತನನ್ನು ಬಾಚಿ ತಬ್ಬಿದಳು. ಎಲ್ಲರ ಕಣ್ಣುಗಳಿಂದಲೂ ಆನಂದ ಬಾಷ್ಪಗಳು ಮಿತಿಯಿಲ್ಲದೇ ಸುರಿದವು. ವೃಕೋದರನು ತಾಯಿಯ ಕಾಲು ಮುಟ್ಟಿ ನಮಸ್ಕರಿಸಿದ ಬಳಿಕ ಯುಧಿಷ್ಠಿರನ ಕಡೆಗೆ ತಿರುಗಿ 'ಅಣ್ಣಾ!' ಎನ್ನುತ್ತಾ ಅಭಿವಾದನಮಾಡಿದನು. ಯುಧಿಷ್ಠಿರನು ವೃಕೋದರನ ನೆತ್ತಿ

ಯನ್ನು ಆಘ್ರಾಣಿಸುತ್ತಾ– "ನಮ್ಮಣ್ಣಗಲಿ ಎಲ್ಲಿಗೆ ಹೋಗಿಬಿಟ್ಟಿದ್ದೆಯಪ್ಪಾ?"–ಎಂದು ತಲೆಯನ್ನು ಸವರಿದನು. ಅರ್ಜುನ-ನಕುಲ-ಸಹದೇವರೂ ಅಣ್ಣನಾದ ವೃಕೋದರನಿಗೆ ಅಭಿವಾದನಮಾಡಿ ಹತ್ತಿರದಲ್ಲೇ ನಿಂತರು. ಅಂದು ಅವರಿಗಾದ ಆನಂದವನ್ನು ವರ್ಣಿಸಲು ಹೇಗೆತಾನೇ ಸಾಧ್ಯವಾದೀತು? ಎಲ್ಲರೂ ಆನಂದಭರಿತರಾಗಿ ವೃಕೋದರನನ್ನು ಮಧ್ಯದಲ್ಲಿ ಕುಳ್ಳಿರಿಸಿಕೊಂಡು ನಡೆದ ವೃತ್ತಾಂತಗಳನ್ನೆಲ್ಲಾ ಕೇಳಿದರು. ದುರ್ಯೋಧನನ ದುಷ್ಟಯೋಜನೆ ; ಅದರಿಂದ ನಾಗಲೋಕದಲ್ಲುಂಟಾದ ಪ್ರತಿಕ್ರಿಯೆ ; ಆರ್ಯಕನ ಬಂಧುಪ್ರೇಮ ; ಅಮೃತಪೂರ್ಣವಾಗಿದ್ದ ಎಂಟು ರಸಕುಂಡಗಳ ಪಾನ ಮತ್ತು ಅದರ ಪರಿಣಾಮ–ಎಲ್ಲವನ್ನೂ ವೃಕೋದರನು ವಿಶದವಾಗಿ ವಿವರಿಸಿದನು. ಅವೆಲ್ಲವನ್ನೂ ಕೇಳಿದನಂತರ ಯುಧಿಷ್ಠಿರನು ವೃಕೋದರನಿಗೆ–"ನೀನು ಈ ವಿಷಯವನ್ನು ಮತ್ತೆಲ್ಲಿಯೂ ಹೇಳಬೇಡ, ಭೀಮ! ಇದು ಎಂದೆಂದಿಗೂ ಗೋಪ್ಯವಾಗಿಯೇ ಇರಲಿ. ಇಂದಿನಿಂದ ನಾವೆಲ್ಲರೂ ಪರಸ್ಪರ ರಕ್ಷಣೆಯಲ್ಲಿ ನಿರತರಾಗಿರೋಣ"–ಎಂದು ಹೇಳಿದನು. ಅಂದು ಮೊದಲ್ಗೊಂಡು ಎಲ್ಲರೂ ಬಹಳ ಎಚ್ಚರಿಕೆಯಿಂದಿರುತ್ತಿದ್ದರು.

ದುರ್ಯೋಧನನು ಭೀಮಸೇನನ ಪ್ರಿಯಸಾರಥಿಯನ್ನು ಕೊಂದನು. ಧರ್ಮಾತ್ಮನಾದ ವಿದುರನ ಸಲಹೆಯಂತೆ ಆಗಲೂ ಪಾಂಡವರು ವಿಷಯವನ್ನು ಯಾರಿಗೂ ತಿಳಿಸದೇ ಮೌನವಾಗಿದ್ದರು.

ವೃಕೋದರನನ್ನು ನೋಡಿ ಕುಂತೀ-ಯುಧಿಷ್ಠಿರಾದಿಗಳಿಗೆ ಎಷ್ಟು ಸಂತೋಷವಾಯಿತೋ–ಅದಕ್ಕಿಂತಲೂ ಇಮ್ಮಡಿಯಾದ ದುಃಖವೂ ಬದುಕಿ ಬಂದ ವೃಕೋದರನನ್ನು ನೋಡಿದಾಗ ದುರ್ಯೋಧನನಿಗುಂಟಾಯಿತು.*

ಹಲವು ದಿನಗಳನಂತರ ದುರ್ಯೋಧನನು ಪುನಃ ವೃಕೋದರನ

---

* ಇದೊಂದು ನಿದರ್ಶನದಿಂದ ದುರ್ಯೋಧನನು ಮನುಷ್ಯಸಂಕಲ್ಪಕ್ಕಿಂತಲೂ ದೈವಸಂಕಲ್ಪವೇ ಹೆಚ್ಚಿನದೆಂಬುದನ್ನು ತಿಳಿಯಬಹುದಾಗಿತ್ತು. ಆದರೆ ಸಾಮಾನ್ಯವಾಗಿ ದುರಭಿಮಾನಿಗಳಿಗೆ ಈ ವಿಧವಾದ ತಿಳಿವಳಿಕೆಯುಂಟಾಗಲಾರದು. ತಾವು ಮಾಡಿದ ದುಷ್ಕಾರ್ಯಕ್ಕೆ ಯೋಚಿಸಿದ್ದ ಫಲವು ಲಭಿಸದಿದ್ದರೆ ಹೆಚ್ಚಿನ ಮಾತ್ಸರ್ಯವನ್ನು ತಾಳಿ, ಮತ್ತೊಂದು ವಿಧವಾದ ದುಷ್ಟಯೋಜನೆಯನ್ನು ಸಿದ್ಧಗೊಳಿಸುವರು.

ಆಹಾರದಲ್ಲಿ ಬಹಳ ತೀಕ್ಷ್ಣವಾದ ಕಾಲಕೂಟವಿಷವನ್ನು ಬೆರೆಸಿದನು. ಧೃತರಾಷ್ಟ್ರನಿಗೆ ವೈಶಸ್ತ್ರೀಯಲ್ಲಿ ಹುಟ್ಟಿದ್ದ ಯುಯುತ್ಸುವಿನಿಂದ ಆ ವಿಷಯವು ಪಾಂಡವರಿಗೆ ಮೊದಲೇ ಗೊತ್ತಿದ್ದರೂ ಭೀಮನು ನಿರ್ಭೀತನಾಗಿ ವಿಷಪೂರಿತವಾದ ಭಕ್ಷ್ಯವನ್ನು ತಿಂದು ಜೀರ್ಣಿಸಿಕೊಂಡನು. ಬಹುತೀಕ್ಷ್ಣವಾದ ಕಾಲಕೂಟವಿಷವೂ ವೃಕೋದರನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ.

ಆದರೂ ದುರ್ಯೋಧನನು ತನ್ನ ದುಷ್ಟಯೋಜನೆಯನ್ನು ಕೈಬಿಡಲಿಲ್ಲ. ಶಕುನಿ, ದುಃಶಾಸನ, ಕರ್ಣ–ಮುಂತಾದವರೊಡನೆ ಸಮಾಲೋಚಿಸಿ, ಪಾಂಡವರ ಸಂಹಾರಕ್ಕಾಗಿ ನಾನಾಯೋಜನೆಗಳನ್ನು ಸಿದ್ಧಗೊಳಿಸುತ್ತಲೇ ಇದ್ದನು. ಆ ದುಷ್ಟಯೋಜನೆಗಳೆಲ್ಲವೂ ಪಾಂಡವರಿಗೆ ಮೊದಲೇ ಗೊತ್ತಿರುತ್ತಿದ್ದರೂ ವಿದುರನ ಅಭಿಮತದಂತೆ ದುರ್ಯೋಧನನ ದುಷ್ಕ್ರಿಯೆಗಳಿಂದ ಉಂಟಾಗುತ್ತಿದ್ದ ಕೋಪವನ್ನು ಹೃದಯದಲ್ಲಿಯೇ ಅಡಗಿಸಿಕೊಳ್ಳುತ್ತಿದ್ದರು.

ಧೃತರಾಷ್ಟ್ರನಿಗೂ ತನ್ನ ಮಕ್ಕಳು ದುಷ್ಕಾರ್ಯಗಳಲ್ಲಿಯೇ ನಿರತರಾಗಿರುವರೆಂಬ ವಿಷಯವು ಗೊತ್ತಾಯಿತು. ಅವರನ್ನು ಸ್ವೇಚ್ಛೆಯಿಂದಿರಲು ಬಿಡಬಾರದೆಂದು ನಿಶ್ಚಯಿಸಿ, ತನ್ನ ಮಕ್ಕಳನ್ನೂ ಪಾಂಡವರನ್ನೂ ಗೌತಮರ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿಕೊಟ್ಟನು. ಶರಸ್ತಂಬದ ಮಧ್ಯದಲ್ಲಿ ಹುಟ್ಟಿದ ಗೌತಮರು ವೇದ-ವೇದಾಂಗಪಾರಂಗತರಾಗಿದ್ದರಲ್ಲದೇ–ಧನುರ್ವಿದ್ಯೆಯಲ್ಲಿಯೂ ನಿಷ್ಣಾತರಾಗಿದ್ದರು. ಅವರನ್ನು ಕೃಪರೆಂದೂ ಕರೆಯುತ್ತಿದ್ದರು. ಆಚಾರ್ಯರಾದ ಕೃಪರ ಸನ್ನಿಧಾನದಲ್ಲಿ ರಾಜಕುಮಾರರ ಧನುರ್ವಿದ್ಯಾಭ್ಯಾಸವು ಪ್ರಾರಂಭವಾಯಿತು."

೧೨೯ನೆಯ ಅಧ್ಯಾಯವು ಮುಗಿಯಿತು.

## ಕೃಪ-ದ್ರೋಣ ಮತ್ತು ಅಶ್ವತ್ಥಾಮರ ಜನ್ಮವೃತ್ತಾಂತ : ಪರಶುರಾಮರಿಂದ ದ್ರೋಣರಿಗೆ ಶಸ್ತ್ರಾಸ್ತ್ರಗಳ ಪ್ರದಾನ

ವೈಶಂಪಾಯನರು ಹೇಳುತ್ತಿದ್ದ ಮಹಾಭಾರತಾಖ್ಯಾನದಲ್ಲಿ ಕೃಪರ ಪಾತ್ರವು ಬಂದೊಡನೆಯೇ ಜನಮೇಜಯನು ಕುತೂಹಲಾವಿಷ್ಟನಾಗಿ–

**ಕೃಪಸ್ಯಾಪಿ ಮಮ ಬ್ರಹ್ಮನ್ಸಮ್ಭವಂ ವಕ್ತುಮರ್ಹಸಿ ।**
**ಶರಸ್ತಮ್ಬಾತ್ಕಥಂ ಜಜ್ಞೇ ಕಥಂ ವಾಸ್ತ್ರಾಣ್ಯವಾಪ್ತವಾನ್ ॥೧॥**

"ಪೂಜ್ಯರೇ! ಕೃಪರಾರು? ಶರಸ್ತಂಬದಲ್ಲಿ ಹೇಗೆ ಹುಟ್ಟಿದರು? ಬ್ರಾಹ್ಮಣರಾದ ಅವರು ಧನುರ್ವಿದ್ಯಾಪಾರಂಗತರಾದುದು ಹೇಗೆ?– ಇವೆಲ್ಲ ವನ್ನೂ ವಿವರವಾಗಿ ಹೇಳಬೇಕು"–ಎಂದು ವೈಶಂಪಾಯನರನ್ನು ಪ್ರಾರ್ಥಿಸಿ ದನು. ವೈಶಂಪಾಯನರು ಮಂದಸ್ಮಿತರಾಗಿ ಆಚಾರ್ಯಕೃಪರ ಜನ್ಮ ವೃತ್ತಾಂತವನ್ನು ಹೇಳಲು ಪ್ರಾರಂಭಿಸಿದರು :

**ಮಹರ್ಷೇರ್ಗೌತಮಸ್ಯಾಸೀಚ್ಛರದ್ವಾನ್ನಾಮ ಗೌತಮಃ ।**
**ಪುತ್ರಃ ಕಿಲ ಮಹಾರಾಜ ಜಾತಃ ಸಹ ಶರೈರ್ವಿಭೋ ॥೨॥**

"ಜನಮೇಜಯ! ಮಹರ್ಷಿಗಳಾದ ಗೌತಮರಿಗೆ ಶರದ್ವಂತನೆಂಬ ಮಗನಿದ್ದನು. ಶರದ್ವಂತನೆಂಬುದು ಅನ್ವರ್ಥನಾಮ. ಹುಟ್ಟುವಾಗಲೇ ಧನುರ್ಬಾಣಗಳ ಸಮೇತನಾಗಿ ಹುಟ್ಟಿದುದರಿಂದ 'ಶರದ್ವಂತ' ಎಂದು ಗೌತಮರು ಹೆಸರಿಟ್ಟರು. ಶರದ್ವಂತನು ಜನ್ಮತಃ ಬ್ರಾಹ್ಮಣನಾದರೂ ವೇದಾಧ್ಯಯನದಲ್ಲಿ ಅಷ್ಟು ಆಸಕ್ತಿಯುಳ್ಳವನಾಗಿರಲಿಲ್ಲ. ಸರ್ವದಾ ಧನು ರ್ವಿದ್ಯೆಯಲ್ಲಿಯೇ ಆಸಕ್ತಿಯನ್ನು ವಹಿಸುತ್ತಿದ್ದನು. ಬ್ರಹ್ಮಚಾರಿಗಳು ತಮ್ಮ ಬ್ರಹ್ಮಚರ್ಯಾಶ್ರಮದಲ್ಲಿ ಹೇಗೆ ವೇದ-ವೇದಾಂಗಪಾರಂಗತರಾಗುವರೋ ಹಾಗೆಯೇ ಶರದ್ವಂತನು ಬ್ರಹ್ಮಚರ್ಯದಲ್ಲಿದ್ದುಕೊಂಡು ಕಠೋರವಾದ ತಪಸ್ಸನ್ನು ಮಾಡುತ್ತಾ ಅಮೋಘವಾದ ಅಸಂಖ್ಯಾತವಾದ ಶಸ್ತ್ರಗಳನ್ನು ಪಡೆದನು. (ಗೌತಮಗೋತ್ರದಲ್ಲಿ ಹುಟ್ಟಿದನಾದುದರಿಂದ ಶರದ್ವಂತನನ್ನು ಗೌತಮನೆಂದೂ ಕರೆಯುತ್ತಿದ್ದರು. ಕೃಪರನ್ನೂ ಗೌತಮರೆಂದು ಕರೆಯಲು ಇದೇ ಕಾರಣ.)

ಶರದ್ವಂತನ ಧನುರ್ವೇದಪಾಂಡಿತ್ಯ ಮತ್ತು ಅವನು ಮಾಡುತ್ತಿದ್ದ ಮಹಾತಪಸ್ಸು–ಈ ಎರಡರಿಂದ ಇಂದ್ರನೂ ಸಂತಪ್ತನಾದನು. ಒಡನೆಯೇ ಇಂದ್ರನು 'ಜಾನಪದೀ' ಎಂಬ ದೇವಕನ್ಯೆಯನ್ನು ಕರೆದು ಶರದ್ವಂತನ ತಪಸ್ಸಿಗೆ ವಿಘ್ನವನ್ನುಂಟುಮಾಡುವಂತೆ ಹೇಳಿಕಳುಹಿಸಿದನು.

ಜಾನಪದಿಯು ರಮಣೀಯವಾಗಿದ್ದ ಶರದ್ವಂತನ ಆಶ್ರಮಕ್ಕೆ ಹೋಗಿ, ಹಾವ-ಭಾವ-ವಿಲಾಸಗಳಿಂದ ಧನುರ್ಬಾಣಧರನಾಗಿದ್ದ ಶರದ್ವಂತನನ್ನು ಮೋಹಗೊಳಿಸಲು ಪ್ರಾರಂಭಿಸಿದಳು. ಎಂದೂ ಕಾಣದಿದ್ದ ಅನಿರ್ವಚನೀಯ ವಾದ ಸೌಂದರ್ಯರಾಶಿಯೇ ತನ್ನೆದುರಿನಲ್ಲಿ ನಿಂತಿರುವುದನ್ನು ಕಂಡು ಶರದ್ವಂತನ ಕಣ್ಣುಗಳು ಪ್ರಫುಲ್ಲವಾದುವು. ಹುಟ್ಟುವಾಗಲೇ ಜೊತೆ ಯಲ್ಲಿಯೇ ಬಂದಿದ್ದ ಧನುರ್ಬಾಣಗಳೂ ಕೈಗಳಿಂದ ಜಾರಿದುವು. ಶರದ್ವಂತನ ಶರೀರಾದ್ಯಂತವಾಗಿ ನಡುಕವುಂಟಾಯಿತು.

ಆದರೆ ಶರದ್ವಂತನು ಮಹಾಜ್ಞಾನಿಯಾಗಿದ್ದುದರಿಂದಲೂ, ಮಹಾ ತಪಸ್ವಿಯಾಗಿದ್ದುದರಿಂದಲೂ ಕಡಿವಾಣವಿಲ್ಲದೆಯೇ ಸ್ವೇಚ್ಛೆಯಿಂದ ಜಾನಪದಿಯ ಸೌಂದರ್ಯರಾಶಿಯ ಮೇಲೆ ಜಾರಿದ್ದ ಮನಸ್ಸೆಂಬ ಕುದುರೆ ಯನ್ನು ಬಹಳ ಪ್ರಯಾಸದಿಂದ ಹಿಂದಕ್ಕೆ ಸೆಳೆದುಕೊಂಡನು. ಆದರೆ ನಿಮಿಷಾರ್ಧದ ಮನೋವಿಕಲ್ಪವು ಮಹಾನುಭಾವನೊಬ್ಬನ ಜನ್ಮಕ್ಕೆ ಕಾರಣವಾಯಿತು. ಅಸ್ಖಲಿತಬ್ರಹ್ಮಚರ್ಯೆಯಿಂದಲೂ, ತಪಸ್ಸಿನಿಂದಲೂ ಊರ್ಧ್ವಮುಖವಾಗಿ ಮಾಡಲ್ಪಟ್ಟಿದ್ದ ಮಹರ್ಷಿಯ ರೇತಸ್ಸು ಅಂದಿನ ನಿಮಿಷಾರ್ಧದ ಮನೋವಿಕಾರದಿಂದ ಅಧೋಮುಖವಾಗಿ, ಕೆಳಗಿದ್ದ ಶರಸ್ತಂಬದ ಮೇಲೆ ಶರದ್ವಂತನಿಗೆ ತಿಳಿಯದಂತೆಯೇ ಬಿದ್ದುಹೋಯಿತು. ಕೂಡಲೇ ಶರದ್ವಂತನು ಧನುರ್ಬಾಣಗಳನ್ನೂ, ಕೃಷ್ಣಾಜಿನವನ್ನೂ, ಆಶ್ರಮ ವನ್ನೂ, ಅಪ್ಸರೆಯನ್ನೂ ಬಿಟ್ಟು ಭಯದಿಂದ ಓಡಿಬಿಟ್ಟನು. ಶರಸ್ತಂಬದ ಮೇಲೆ ಬಿದ್ದಿದ್ದ ಮಹರ್ಷಿಯ ರೇತಸ್ಸು ಎರಡು ಭಾಗಗಳಾಗಿ ಹೆಣ್ಣು ಮತ್ತು ಗಂಡುಮಕ್ಕಳ ಜನ್ಮಕ್ಕೆ ಕಾರಣವಾಯಿತು.

ಶಾಂತನುಚಕ್ರವರ್ತಿಯು ಅರಣ್ಯಕ್ಕೆ ಬೇಟೆಯಾಡಲು ಬಂದಿದ್ದಾಗ ಅವನ ಸೈನಿಕನೊಬ್ಬನು ಪಾಲಕರಿಲ್ಲದೇ ಅಳುತ್ತಿದ್ದ ಮಕ್ಕಳನ್ನು ಕಂಡನು.

ಮಕ್ಕಳ ಸಮೀಪದಲ್ಲಿದ್ದ ಧನುರ್ಬಾಣಗಳನ್ನೂ, ಕೃಷ್ಣಾಜಿನವನ್ನೂ ಕಂಡು ಈ ಮಕ್ಕಳು ಧನುರ್ವಿದ್ಯೆಯಲ್ಲಿ ನಿಷ್ಣಾತನಾದ ಬ್ರಾಹ್ಮಣೋತ್ತಮನ ಮಕ್ಕಳಾಗಿರಬಹುದೆಂದು ಊಹಿಸಿ, ಅಲ್ಲಿದ್ದ ಧನುರ್ಬಾಣಗಳೊಡನೆ ಮಕ್ಕಳನ್ನೂ ಎತ್ತಿಕೊಂಡು ಬಂದು ಶಾಂತನುವಿಗೆ ಒಪ್ಪಿಸಿದನು. ದಯಾರ್ದ್ರ ಹೃದಯನಾದ ಶಾಂತನುವು ಮಕ್ಕಳನ್ನು ಕಂಡು ಕೃಪಾನ್ವಿತವಾಗಿ ಆ ಶಿಶು ಯುಗ್ಮವನ್ನು ತನ್ನ ಮಕ್ಕಳೆಂದೇ ಭಾವಿಸಿ ಅರಮನೆಗೆ ಕರೆದೊಯ್ದನು. ಶರದ್ವಂತನ ಆ ಅವಳಿಮಕ್ಕಳಿಗೆ ಶಾಂತನುವು ಯಥೋಚಿತವಾಗಿ ಜಾತಕರ್ಮ-ನಾಮಕರಣಾದಿ ಸಂಸ್ಕಾರಗಳನ್ನು ಮಾಡಿದನು.

**ಕೃಪಯಾ ಯನ್ಮಯಾ ಬಾಲಾವಿಮೌ ಸಂವರ್ಧಿತಾವಿತಿ ।**
**ತಸ್ಮಾತ್ತಯೋರ್ನಾಮ ಚಕ್ರೇ ತದೇವ ಸ ಮಹೀಪತಿಃ ॥೧೯॥**

'ಕೇವಲ ಕೃಪೆಯಿಂದಾಗಿ ಈ ಇಬ್ಬರು ಬಾಲಕರು ನನ್ನಿಂದ ಸಂವರ್ಧಿತ ರಾಗಿರುತ್ತಾರೆ'–ಹೀಗೆಂದು ಭಾವಿಸಿದ ಮಹೀಪತಿಯಾದ ಶಾಂತನುವು ಆ ಬಾಲಕ-ಬಾಲಕಿಯರಿಗೆ 'ಕೃಪ' ಮತ್ತು 'ಕೃಪೀ' ಎಂದೇ ನಾಮಕರಣ ಮಾಡಿದನು.

ಅಪ್ಸರೆಯ ಭಯದಿಂದ ಓಡಿಹೋಗಿ, ಬೇರೊಂದು ಆಶ್ರಮದಲ್ಲಿ ಧನುರ್ವಿದ್ಯೆಯನ್ನು ಅಭ್ಯಸಿಸುತ್ತಿದ್ದ ಶರದ್ವಂತನು ಒಮ್ಮೆ ಯೋಗದೃಷ್ಟಿ ಯಲ್ಲಿದ್ದಾಗ ತನ್ನ ಮಕ್ಕಳನ್ನು ಶಾಂತನುವು ಸಂರಕ್ಷಿಸುತ್ತಿದ್ದಾನೆಂಬುದನ್ನು ತಿಳಿದುಕೊಂಡನು. ಒಡನೆಯೇ ತಪಸ್ವಿಯಾದ ಶರದ್ವಂತನು ರಹಸ್ಯದಲ್ಲಿ ಮಗನ ಬಳಿಗೆ ಬಂದು, ಅವನಿಗೆ ಗೋತ್ರ-ಸೂತ್ರಾದಿಗಳೆಲ್ಲವನ್ನೂ ವಿವರ ವಾಗಿ ತಿಳಿಸಿದನು.* ಧನುರ್ವೇದದ ನಾಲ್ಕು ವಿಧಾನಗಳನ್ನೂ ನಾನಾವಿಧವಾದ ಶಸ್ತ್ರಗಳ ರಹಸ್ಯಗಳನ್ನೂ ಮಗನಿಗೆ ಉಪದೇಶಿಸಿ ತನ್ನ ಆಶ್ರಮಕ್ಕೆ ತೆರಳಿದನು.

---

* ಧನುರ್ವಿದ್ಯೆಯಲ್ಲಿ–ಮುಕ್ತ, ಅಮುಕ್ತ, ಮುಕ್ತಾಮುಕ್ತ, ಮಂತ್ರಮುಕ್ತಗಳೆಂಬ ನಾಲ್ಕು ಭೇದಗಳಿವೆ. ಮುಕ್ತವೆಂದರೆ–ಬಾಣಪ್ರಯೋಗ ; ಅಮುಕ್ತವೆಂದರೆ–ಖಡ್ಗಪ್ರಯೋಗ ; ಮುಕ್ತಾಮುಕ್ತವೆಂದರೆ–ಉಪಸಂಹಾರಮಾಡಲು ಶಕ್ಯವಾಗುವ ಅಸ್ತ್ರಪ್ರಯೋಗ ; ಮಂತ್ರಮುಕ್ತವೆಂದರೆ–ಉಪಸಂಹಾರಮಾಡಲು ಶಕ್ಯವಾಗದಿರುವ ಮಂತ್ರಪೂರ್ವಕವಾದ ಅಸ್ತ್ರಪ್ರಯೋಗ.

ತಂದೆಯ ಉಪದೇಶದಿಂದ ಅತ್ಯಲ್ಪಕಾಲದಲ್ಲಿಯೇ ಧನುರ್ವಿದ್ಯೆಯಲ್ಲಿ ಕೃಪರು ಪರಮಾಚಾರ್ಯರಾದರು. ಅನಂತರದಲ್ಲಿ ಧೃತರಾಷ್ಟ್ರನ ಮಕ್ಕಳೂ, ಪಾಂಡುವಿನ ಮಕ್ಕಳೂ, ಯಾದವರೂ, ವೃಷ್ಣಿವಂಶದ ರಾಜಕುಮಾರರೂ ಮತ್ತು ಇನ್ನೂ ಅನೇಕರಾಜಕುಮಾರರೂ ಕೃಪರಿಂದ ಧನುರ್ವಿದ್ಯೆಯನ್ನು ಕಲಿತರು.

ಆಚಾರ್ಯಕೃಪರ ಸಮೀಪದಲ್ಲಿ ರಾಜಕುಮಾರರ ಧನುರ್ವಿದ್ಯಾಭ್ಯಾಸವು ಮುಗಿಯಿತು. ಭೀಷ್ಮನಿಗೆ ಮಾತ್ರ ರಾಜಕುಮಾರರು ಕೃಪರಿಂದ ಕಲಿತ ಧನುರ್ವಿದ್ಯೆಯು ಸಾಕೆನ್ನಿಸಲಿಲ್ಲ. ಇನ್ನೂ ಹೆಚ್ಚಿನ ವಿದ್ಯೆಯು ಅಗತ್ಯವೆಂದು ಭಾವಿಸಿ, ಪೃಥ್ವಿಯಲ್ಲಿಯೇ ಧನುರ್ವಿದ್ಯೆಯಲ್ಲಿ ಹೆಚ್ಚು ಪ್ರಾವೀಣ್ಯ ಪಡೆದಿರುವವರೊಬ್ಬರನ್ನು ಕರೆತರಲು ನಿಶ್ಚಯಿಸಿದನು. ಅಲ್ಪಬುದ್ಧಿಯುಳ್ಳವನಾಗಲೀ, ಧನುರ್ವಿದ್ಯೆಯಲ್ಲಿ ಸಂಪೂರ್ಣವಾದ ಪ್ರಾವೀಣ್ಯವನ್ನು ಹೊಂದದವನಾಗಲೀ, ಸಕಲವಿಧವಾದ ಶಸ್ತ್ರಾಸ್ತ್ರಗಳ ರಹಸ್ಯಗಳನ್ನು ತಿಳಿಯದವನಾಗಲೀ, ದೇವತೆಗಳಿಗೆ ಸಮಾನವಾದ ಬಲವನ್ನು ಹೊಂದದವನಾಗಲೀ– ಕುರುರಾಜಕುಮಾರರಿಗೆ ಧನುರ್ವಿದ್ಯೆಯನ್ನು ಕಲಿಸಲು ಅಸಮರ್ಥನೆಂದೇ ಭಾವಿಸಿ, ಎಲ್ಲದರಲ್ಲಿಯೂ ಅಪ್ರತಿಮರೆನಿಸಿದ್ದ ದ್ರೋಣರನ್ನು ಕರೆತಂದು ಮಹಾಬಲರಾದ ಕುರುವಂಶದ ರಾಜಕುಮಾರರಿಗೆ ಆಚಾರ್ಯರಾಗಿರುವಂತೆ ಪ್ರಾರ್ಥಿಸಿದನು. ಧನುರ್ವಿದ್ಯಾಪ್ರವೀಣರೆಂದು ಪ್ರಸಿದ್ಧಿಹೊಂದಿದ್ದ ದ್ರೋಣರೂ ಭೀಷ್ಮನು ತಮಗಿತ್ತ ಸಮ್ಮಾನದಿಂದ ಸುಪ್ರೀತರಾಗಿ, ಕುರುವಂಶದ ರಾಜಕುಮಾರನನ್ನು ಶಿಷ್ಯರನ್ನಾಗಿ ಸ್ವೀಕರಿಸಿದರು. ಕೆಲವೇ ದಿನಗಳಲ್ಲಿ ದ್ರೋಣರು ರಾಜಕುಮಾರರನ್ನು, ಧನುರ್ವಿದ್ಯೆಯಲ್ಲಿ ನಿಷ್ಣಾತರನ್ನಾಗಿ ಮಾಡಿದರು.

ಜನಮೇಜಯನು ಪ್ರಶ್ನಿಸುತ್ತಾನೆ :

**ಕಥಂ ಸಮಭವದ್ದ್ರೋಣಃ ಕಥಂ ಚಾಸ್ತ್ರಾಣ್ಯವಾಪ್ತವಾನ್ ।**
**ಕಥಂ ಚಾಗಾತ್ಕುರೂನ್ಬ್ರಹ್ಮನ್ಕಸ್ಯ ಪುತ್ರಃ ಸ ವೀರ್ಯವಾನ್ ॥೩೧॥**

**ಕಥಂ ಚಾಸ್ಯ ಸುತೋ ಜಾತಃ ಸೋಽಶ್ವತ್ಥಾಮಾಸ್ತ್ರವಿತ್ತಮಃ ।**
**ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಪ್ರಕೀರ್ತಯ ॥೩೨॥**

“ವೈಶಂಪಾಯನರೇ! ದ್ರೋಣರು ಹೇಗೆ ಹುಟ್ಟಿದರು? ಅವರು ಅಸ್ತ್ರಗಳನ್ನು ಹೇಗೆ ಪಡೆದುಕೊಂಡರು? ಕುರುಗಳ ರಾಜ್ಯಕ್ಕೆ ಹೇಗೆ ಬಂದರು? ವೀರ್ಯವಂತರಾದ ಅವರು ಯಾರ ಮಕ್ಕಳು? ಅವರಿಗೆ ಅಸ್ತ್ರಗಳನ್ನು ತಿಳಿದವರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಹೇಗೆ ಹುಟ್ಟಿದನು? ಈ ಎಲ್ಲ ವಿಷಯಗಳನ್ನೂ ನಾನು ಕೇಳಲು ಇಚ್ಛಿಸಿದ್ದೇನೆ. ವಿಸ್ತಾರವಾಗಿಯೇ ಹೇಳಿರಿ.”

ವೈಶಂಪಾಯನರು ದ್ರೋಣರ ಜನ್ಮವೃತ್ತಾಂತವನ್ನು ಹೇಳತೊಡಗಿದರು :

“ಪಾರಿಕ್ಷಿತ! ಭರದ್ವಾಜನೆಂಬ ಮಹರ್ಷಿಯು ಗಂಗಾತೀರದಲ್ಲಿ ಬಹಳ ಕಠೋರವಾದ ವ್ರತ-ನಿಯಮಾದಿಗಳನ್ನು ಆಚರಿಸುತ್ತಾ ಇರುತ್ತಿದ್ದನು. ಆತನು ಅಗ್ನಿಷ್ಟೋಮವೆಂಬ ಒಂದು ಮಹಾಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ, ಒಂದು ದಿನ ಅನೇಕಮಹರ್ಷಿಗಳಿಂದ ಕೂಡಿದವನಾಗಿ ಸ್ನಾನ ಮಾಡಲು ಗಂಗಾನದಿಗೆ ತೆರಳಿದನು. ಆ ವೇಳೆಗೆ ಸರಿಯಾಗಿ ರೂಪ-ಯೌವನಸಂಪನ್ನೆಯಾದ ‘ಘೃತಾಚೀ’ ಎಂಬ ಅಪ್ಸರೆಯು ನದಿಯಲ್ಲಿ ಮಿಂದು ಮೇಲೆ ಬರುತ್ತಿದ್ದುದನ್ನು ನೋಡಿದನು. ಒದ್ದೆಯಾಗಿ ಅಸ್ತವ್ಯಸ್ತವಾಗಿದ್ದ ವಸ್ತ್ರವನ್ನು ಬಿಚ್ಚಿ ಬೇರೆಯ ವಸ್ತ್ರವನ್ನು ಧರಿಸುವಾಗ ಅದು ಜಾರಿಬಿದ್ದಿತು. ಹೀಗೆ ವಿವಸ್ತ್ರಳಾದ ವರಾಂಗನೆಯನ್ನು ನೋಡಿದೊಡನೆಯೇ ಭರದ್ವಾಜನ ಮನಸ್ಸು ವಿಕಲ್ಪವಾಯಿತು.

( ಮಹಾನುಭಾವರ ಒಂದೇ ಒಂದು ಕ್ಷಣದ ಮಾನಸಿಕಪರಿವರ್ತನೆಯು ಮಹಾಪುರುಷನ ಉದಯಕ್ಕೂ ಕಾರಣವಾಗಬಹುದು. ಸರ್ವದಾ ತಪೋನಿಯಮಗಳಲ್ಲಿಯೇ ಆಸಕ್ತನಾಗಿದ್ದ ಭರದ್ವಾಜನಂತಹ ಮಹರ್ಷಿಯ ಮನೋವಿಕಲ್ಪವೂ ದೈವವು ಉದ್ದೇಶಿಸಿದ ಮಹಾತ್ಮನೊಬ್ಬನ ಉತ್ಪತ್ತಿಗೆ ಕಾರಣವಾಯಿತೇ ಹೊರತು ವ್ಯರ್ಥವಾಗಲಿಲ್ಲ. )

ಎರಡು ಕ್ಷಣಗಳ ಮಾನಸಿಕಪರಿಭ್ರಮಣದಿಂದ ಚ್ಯುತವಾದ, ಅಗ್ನಿರೂಪವಾದ ಭರದ್ವಾಜನ ದಿವ್ಯತೇಜಸ್ಸನ್ನು ಯಥೋಕ್ತವಾಗಿ ಸಂಸ್ಕರಿಸಿ, ದ್ರೋಣದಲ್ಲಿಡಲಾಯಿತು. (ದ್ರೋಣ=ಮರದಪಾತ್ರೆ) ಕೆಲವು ದಿನಗಳಲ್ಲಿಯೇ ಆ ದ್ರೋಣದಿಂದ ತೇಜಃಪುಂಜಪೂರ್ಣವಾದ ಶಿಶುವು ಆವಿರ್ಭೂತವಾಯಿತು.

ದ್ರೋಣದಲ್ಲಿ ಹುಟ್ಟಿದ ಶಿಶುವಿಗೆ ಭರದ್ವಾಜನು ದ್ರೋಣನೆಂದೇ ನಾಮ ಕರಣಮಾಡಿದನು.

ದ್ರೋಣನು ಮಹರ್ಷಿಯ ಆಶ್ರಮದಲ್ಲಿ ಶುಕ್ಲಪಕ್ಷದ ಚಂದ್ರನಂತೆ ಬೆಳೆದನು. ಸಕಲವಾದ ವೇದ-ವೇದಾಂಗಗಳಲ್ಲಿಯೂ ಪಾರಂಗತನಾದನು. ಧನುರ್ವಿದ್ಯೆಯಲ್ಲಿಯೂ ಪಾರಂಗತನೆನಿಸಿದ್ದ ಭರದ್ವಾಜನು ಆ ಮೊದಲೇ ತನ್ನಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಬಂದಿದ್ದ ಅಗ್ನಿಜನ್ಮನಾದ ಅಗ್ನಿವೇಶನೆಂಬ ಮಹರ್ಷಿಗೆ ಆಗ್ನೇಯವೆಂಬ ಅಸ್ತ್ರದ ರಹಸ್ಯವನ್ನು ಉಪದೇಶಿಸಿದ್ದನು. ಭರದ್ವಾಜನ ನಿರ್ದೇಶನದಂತೆ ಅಗ್ನಿವೇಶನು ದ್ರೋಣನಿಗೆ ಆಗ್ನೇಯಾಸ್ತ್ರದ ರಹಸ್ಯವನ್ನು ಉಪದೇಶಿಸಿದುದಲ್ಲದೇ ಇನ್ನೂ ಅನೇಕ ಶಸ್ತ್ರಾಸ್ತ್ರಗಳನ್ನೂ, ಅವುಗಳ ರಹಸ್ಯಗಳನ್ನೂ ಹೇಳಿಕೊಟ್ಟು ದ್ರೋಣನನ್ನು ಧನುರ್ವಿದ್ಯಾ ಪಾರಂಗತನನ್ನಾಗಿ ಮಾಡಿದನು.

ಭರದ್ವಾಜನಿಗೆ ಪೃಷತನೆಂಬ ರಾಜನು ಆಪ್ತಮಿತ್ರನಾಗಿದ್ದನು. ಪೃಷತನಿಗೆ ದ್ರುಪದನೆಂಬ ಮಗನಿದ್ದನು. ಪೃಷತನು ದ್ರುಪದನನ್ನು ವಿದ್ಯಾಭ್ಯಾಸಕ್ಕಾಗಿ ತನ್ನ ಮಿತ್ರನಾದ ಭರದ್ವಾಜನಲ್ಲಿಗೆ ಕಳುಹಿಸಿಕೊಟ್ಟನು. ಒಬ್ಬರೇ ಗುರುಗಳಲ್ಲಿ ವ್ಯಾಸಂಗಮಾಡುತ್ತಿದ್ದ ಕಾರಣದಿಂದ ದ್ರೋಣ-ದ್ರುಪದರಲ್ಲಿ ಮೈತ್ರಿಯು ಬೆಳೆಯಿತು. ಜೊತೆಯಲ್ಲಿಯೇ ಆಡುತ್ತಿದ್ದರು. ಒಬ್ಬರನ್ನು ಮತ್ತೊಬ್ಬರು ಅಗಲುತ್ತಿರಲಿಲ್ಲ. ತಮ್ಮ ಮುಂದಿನ ಭವಿಷ್ಯದ ವಿಷಯವಾಗಿ ಇಬ್ಬರು ಗೆಳೆಯರೂ ಅನೇಕ ಗಾಳಿಗೋಪುರಗಳನ್ನು ಕಟ್ಟಿಕೊಂಡಿದ್ದರು.

ಪೃಷತನು ದಿವಂಗತನಾದನಂತರ ದ್ರುಪದನು ಉತ್ತರಪಾಂಚಾಲ ದೇಶಕ್ಕೆ ಅಧಿಪತಿಯಾದನು. ಇತ್ತ ಭರದ್ವಾಜನೂ ಪಾರ್ಥಿವಶರೀರವನ್ನು ತೊರೆದನು. ದ್ರೋಣನು ತಂದೆಯ ಆಶ್ರಮದಲ್ಲಿಯೇ ಇದ್ದುಕೊಂಡು ತಪಶ್ಚರಣೆಯನ್ನು ಮಾಡುತ್ತಿದ್ದನು. ವೇದ-ವೇದಾಂಗಪಾರಂಗತನಾಗಿ ತಪಶ್ಚರಣೆಯಿಂದ ಸಕಲಪಾಪಗಳನ್ನೂ ಕಳೆದುಕೊಂಡಿದ್ದ ದ್ರೋಣನು ತಂದೆಯು ಗತಿಸಿದಾಗ ಅವನಿತ್ತ ನಿರ್ದೇಶನದಂತೆ ಪುತ್ರಕಾಮನಾಗಿ ಗೌತಮಪುತ್ರಿಯಾದ ಕೃಪಿಯನ್ನು ವಿವಾಹವಾದನು. ಸಾಧ್ವಿಯಾದ ಕೃಪಿಯು ಅಗ್ನಿಹೋತ್ರಕಾಲದಲ್ಲಿಯೂ, ಧರ್ಮಾನುಷ್ಠಾನದಲ್ಲಿಯೂ ಮತ್ತು

ಸಂಯಮದಿಂದಿರಬೇಕಾಗಿದ್ದ ಕಾಲಗಳಲ್ಲಿಯೂ ಯಥೋಚಿತವಾಗಿ ಪತಿಗೆ ಸಹಕಾರನೀಡುತ್ತಾ ವ್ರತ-ನಿಯಮಗಳಿಂದಿರುತ್ತಾ ಕೆಲವು ಕಾಲಾನಂತರದಲ್ಲಿ ತೇಜಃಪುಂಜಯುಕ್ತರಾದ ಮಗನನ್ನು ಹಡೆದಳು. ಮಗುವು ಹುಟ್ಟಿದೊಡನೆಯೇ ದೇವಾಶ್ವವಾದ ಉಚ್ಚೈಃಶ್ರವಸ್ಸಿನಂತೆ ಧ್ವನಿಮಾಡಿತು. ಆ ಸಮಯದಲ್ಲಿ ಅಶರೀರವಾಣಿಯು ಹೀಗೆಂದು ಹೇಳಿತು :

"ಹುಟ್ಟಿದೊಡನೆಯೇ ಈ ಮಗುವಿನ ಧ್ವನಿಯು–ಕುದುರೆಯ ಕೆನೆತದಂತೆ–ದಿಗಂತಗಳಲ್ಲಿಯೂ ಮೊಳಗಿದುದರಿಂದ ಇವನು ಅಶ್ವತ್ಥಾಮನೆಂದೇ ಪ್ರಸಿದ್ಧಿಹೊಂದುವನು." ಅಶರೀರವಾಣಿಯು ಹೇಳಿದುದನ್ನು ಕೇಳಿದ ದ್ರೋಣನು ಆ ಶಿಶುವಿಗೆ ಅಶ್ವತ್ಥಾಮನೆಂದೇ ನಾಮಕರಣವನ್ನು ಮಾಡಿದನು. ಮಗನು ಅಭಿವೃದ್ಧಿಹೊಂದುತ್ತಿದ್ದಂತೆ ಅವನ ತೇಜಸ್ಸನ್ನೂ, ವಿದ್ಯೆಯಲ್ಲಿ ಅವನಿಗಿದ್ದ ಆಸಕ್ತಿಯನ್ನೂ ಗಮನಿಸಿ ದ್ರೋಣನು ಸುಪ್ರೀತನಾದನು. ದ್ರೋಣನ ಶಾಂತಮಯವಾದ ಸಂಸಾರವು ಭರದ್ವಾಜನ ಆಶ್ರಮದಲ್ಲಿಯೇ ಅನೇಕವರ್ಷಗಳವರೆಗೆ ಸಾಗಿತ್ತು. ದ್ರೋಣನು ತನ್ನ ಕಾಲವನ್ನೆಲ್ಲಾ ಧನುರ್ವಿದ್ಯೆಯ ಅಧ್ಯಯನ-ಅಧ್ಯಾಪನಗಳಲ್ಲಿಯೇ ಕಳೆಯುತ್ತಿದ್ದನು.

ಶತ್ರುಧ್ವಂಸಕನಾದ, ಸರ್ವಜ್ಞನಾದ, ಸಕಲಶಾಸ್ತ್ರಗಳನ್ನೂ ತಿಳಿದಿರುವ, ಧನುರ್ವಿದ್ಯೆಯಲ್ಲಿ ಪಾರಂಗತನಾದ, ಜಮದಗ್ನಿಯ ಮಗನಾದ ಭಗವಾನ್ ಪರಶುರಾಮನು ತನ್ನ ಸಕಲೈಶ್ವರ್ಯಗಳನ್ನೂ, ಸಮುದ್ರಾಂತವಾದ ಭೂಮಿಯನ್ನೂ ಬ್ರಾಹ್ಮಣರಿಗೆ ದಾನಮಾಡಿಬಿಡುವನೆಂಬ ವಾರ್ತೆಯು ಎಲ್ಲೆಲ್ಲಿಯೂ ಹರಡಿತು.*

ಭಗವಾನ್ ಪರಶುರಾಮನು ತನ್ನ ಸಕಲೈಶ್ವರ್ಯಗಳನ್ನೂ ಕೊಡುವು

---

* ದಾನ-ಪ್ರತಿಗ್ರಹ ಎಂಬ ಎರಡು ವಿಷಯಗಳು ಬಹಳ ಮಹತ್ವಪೂರಿತವಾದುವುಗಳು. ಇಂದು ಅನೇಕವಿಧವಾದ ದಾನಗಳು ಹುಟ್ಟಿ, ದಾನ ಮತ್ತು ಪ್ರತಿಗ್ರಹಶಬ್ದಗಳ ಅರ್ಥವೇ ವಿಕಲ್ಪವಾಗಿ ಹೋಗಿದೆ. ಮಾನವನು ತನ್ನ ಅನೇಕವಿಧವಾದ ಪಾಪಗಳ ನಿವಾರಣೆಗಾಗಿ ಅಥವಾ ಹೆಚ್ಚಿನ ಫಲಪ್ರಾಪ್ತಿಗಾಗಿ ದಾನಮಾಡುವ ಕರ್ತವ್ಯವಿದೆ. ಎಂದರೆ ತಾನು ಮಾಡಿದ ಪಾಪಗಳನ್ನು ಒಂದು ವಸ್ತುವಿನ ಮೂಲಕ ಇತರರಿಗೆ ಧಾರೆಯೆರೆಯುವುದೂ ದಾನದ ಒಂದು ಧ್ಯೇಯ. ಆದುದರಿಂದ ದಾನಕೊಡಬೇಕಾದರೂ ಪಾತ್ರವರಿತು ಕೊಡಬೇಕು. ಅನರ್ಹನಾದವನಿಗೆ ದಾನಕೊಡುವುದರಿಂದ ವಸ್ತು

ದಾಗಿ ಹೇಳಿರುವನೆಂಬುದನ್ನು ಕೇಳಿ ಕಶ್ಯಪನು ಪರಶುರಾಮನಲ್ಲಿಗೆ ಹೋಗಿ ಆ ಮಹಾದಾನವನ್ನು ಸ್ವೀಕರಿಸಿದನು. ಭರದ್ವಾಜನ ಪುತ್ರನಾದ ದ್ರೋಣನೂ ಅತ್ಯಂತ ತಪೋನಿಷ್ಠನಾದುದರಿಂದ ಪರಶುರಾಮನಲ್ಲಿಗೆ ಹೋಗಿ ಅವನು ಕೊಡಲಿದ್ದ ದಾನವನ್ನು ಪ್ರತಿಗ್ರಹಮಾಡಲು ನಿಶ್ಚಯಿಸಿದನು. ದ್ರೋಣನು ಪರಶುರಾಮನಲ್ಲಿದ್ದ ಧನುರ್ವೇದದ ಪ್ರಾವೀಣ್ಯವನ್ನೂ ಮತ್ತು ಅವನಲ್ಲಿರುವ ಮಹತ್ತರವಾದ ದಿವ್ಯಾಸ್ತ್ರಗಳ ವಿಷಯವನ್ನೂ ಕೇಳಿದ್ದನು. ಅವನು ಕೊಡಲಿರುವ ಐಶ್ವರ್ಯದೊಡನೆ ಧನುರ್ವಿದ್ಯಾದಾನವನ್ನೂ ಪಡೆಯಬೇಕೆಂಬ ಅಭಿಲಾಷೆಯು ದ್ರೋಣನ ಮನಸ್ಸಿನಲ್ಲಿ ಮೂಡಿತು. ಭಗವಾನ್ ಪರಶುರಾಮನು ನೀತಿಶಾಸ್ತ್ರದಲ್ಲಿಯೂ ಪ್ರವೀಣನಾಗಿದ್ದುದರಿಂದ ನೀತಿಶಾಸ್ತ್ರವನ್ನೂ ಅವನಿಂದ ತಿಳಿದುಕೊಳ್ಳಬೇಕೆಂಬ ಅಭಿಲಾಷೆಯೂ ದ್ರೋಣನಿಗಿದ್ದಿತು. ಪರಶುರಾಮನಲ್ಲಿಗೆ ಹೋಗಲು ನಿಶ್ಚಯಿಸಿದ ದ್ರೋಣನು ಶಿಷ್ಯರೊಡನೆ ಮಹೇಂದ್ರಪರ್ವತಕ್ಕೆ ಹೋದನು.

ಮಹೇಂದ್ರಪರ್ವತವನ್ನು ತಲುಪಿದನಂತರ ಭಾರದ್ವಾಜನು ಮಹಾ ತಪಸ್ವಿಯಾದ, ಶಮ-ದಮಾದಿಗುಣೋಪೇತನಾದ, ಶತ್ರುಧ್ವಂಸಕನಾದ, ಭೃಗುನಂದನನಾದ ಭಗವಾನ್ ಪರಶುರಾಮನನ್ನು ಸಂದರ್ಶಿಸಿದನು. ಶಿಷ್ಯ ರಿಂದ ಪರಿವೃತನಾದ ದ್ರೋಣನು ಪರಶುರಾಮನ ಸಮೀಪಕ್ಕೆ ಹೋಗಿ ತಾನು

---

ಗಳ ರೂಪವಾಗಿ ದತ್ತಮಾಡುವ ಪಾಪವು- ದಾನಮಾಡಿದವನನ್ನೇ ಪುನಃ ಬಂದು ಸೇರು ತ್ತದೆ. ಪಾತ್ರೆಯಲ್ಲಿ ನೀರಿಲ್ಲದಿದ್ದರೆ ನೀರನ್ನು ಸುರಿದು ಪಾತ್ರೆಯನ್ನು ತುಂಬಲು ಸಾಧ್ಯವೇ ಹೊರತು ತುಂಬಿದ ಪಾತ್ರೆಗೆ ಪುನಃ ನೀರು ತುಂಬಲು ಸಾಧ್ಯವಾದೀತೇ? ಆದರೆ ದಾನ ತೆಗೆದುಕೊಳ್ಳುವವರೆಲ್ಲಾ ಪಾಪಿಗಳಾಗುವುದಿಲ್ಲ. ಜಪ-ತಪ-ನಿಯಮಾದಿ ವ್ರತಗಳಿಂದ ಎಂತಹ ಪಾಪವನ್ನಾದರೂ ಕಳೆದುಕೊಳ್ಳಬಹುದು. ಆದುದರಿಂದಲೇ ಶ್ರುತಿ-ಸ್ಮೃತಿಗಳು ದಾನಕೊಡಬೇಕಾದರೆ ಶ್ರೋತ್ರಿಯನನ್ನು ಹುಡುಕಿ ದಾನಕೊಡಬೇಕೆಂದು ಸಾರುತ್ತವೆ. ಶ್ರೋತ್ರಿಯನಾದವನು ದಾನ ಮತ್ತು ತನ್ಮೂಲಕ ಬರುವ ಪಾಪಗಳ ಸ್ವರೂಪಗಳನ್ನು ತಿಳಿದವನಾಗಿರುವುದರಿಂದ ದಾನತೆಗೆದುಕೊಳ್ಳಲು ನಿರಾಕರಿಸುತ್ತಾನೆ. ದಾನತೆಗೆದು ಕೊಂಡರೆ ಅರಗಿಸಿಕೊಳ್ಳುವುದು ಹೇಗಪ್ಪಾ? ಎಂದು ಹಿರಿಯರಾಡುವ ನುಡಿಯನ್ನೂ ನಾವು ಕೇಳಿದ್ದೇವೆ. ಇಲ್ಲಿ ಅರಗಿಸಿಕೊಳ್ಳಬೇಕಾದುದು ದಾನರೂಪವಾಗಿ ಬರುವ ಹತ್ತಾರು ರೂಪಾಯಿಗಳನ್ನಲ್ಲ ; ವಸ್ತುಗತವಾಗಿ ಬರುವ ದಾನಿಯ ಪಾಪವನ್ನು. ಇದನ್ನುಜಪ-ಕರ್ಮಾನುಷ್ಠಾನಗಳಿಂದ ಭಸ್ಮಮಾಡಬೇಕು.

ಅಂಗೀರಸಕುಲೋತ್ಪನ್ನನೆಂಬುದನ್ನೂ, ತನ್ನ ನಾಮಧೇಯವು ದ್ರೋಣ ನೆಂಬುದನ್ನೂ– **'ಅಙ್ಗಿರಸಗೋತ್ರಃ ದ್ರೋಣೋಽಹಮಭಿವಾದಯೇ'**– ಎಂದು ತಿಳಿಯಪಡಿಸಿ, ಮಹಾತ್ಮನಾದ ಪರಶುರಾಮನ ಚರಣಕಮಲಗಳನ್ನು ಸ್ಪರ್ಶಿಸಿದನು. ಸರ್ವಸ್ವವನ್ನೂ ದಾನಮಾಡಿ ಕಮಂಡಲು-ಕೃಷ್ಣಾಜಿನಗಳನ್ನು ಹಿಡಿದು ಅರಣ್ಯವಾಸಕ್ಕೆ ಹೊರಡಲು ಸಿದ್ಧನಾಗಿದ್ದ ಮಹಾತ್ಮನಾದ ಜಾಮದಗ್ನ್ಯನನ್ನು ಕುರಿತು ದ್ರೋಣನು ಹೇಳಿದನು :

**ಭರದ್ವಾಜಾತ್ಸಮುತ್ಪನ್ನಂ ತಥಾ ತ್ವಂ ಮಾಮಯೋನಿಜಮ್ ।**
**ಆಗತಂ ವಿತ್ತಕಾಮಂ ಮಾಂ ವಿದ್ಧಿ ದ್ರೋಣಂ ದ್ವಿಜರ್ಷಭ ॥೫೭॥**

"ಬ್ರಾಹ್ಮಣೋತ್ತಮನೇ! ನಾನು ಭರದ್ವಾಜನ ಮಗನು. ಅಯೋನಿಜನು. ನನ್ನನ್ನು ದ್ರೋಣನೆಂದು ಕರೆಯುವರು. ಧನಕಾಮನಾದ ನಾನು ನೀನು ಕೊಡಲಿರುವ ದಾನವನ್ನು ಪ್ರತಿಗ್ರಹಮಾಡುವ ಇಚ್ಛೆಯಿಂದ ಇಲ್ಲಿಗೆ ಬಂದಿರುವೆನು."

ಸರ್ವಕ್ಷತ್ರಿಯಮರ್ದನನಾದ, ಮಹಾತ್ಮನಾದ ಪರಶುರಾಮನು ದ್ರೋಣನಿಗೆ ಹೇಳಿದನು :

**ಸ್ವಾಗತಂ ತೇ ದ್ವಿಜಶ್ರೇಷ್ಠ ಯದಿಚ್ಛಸಿ ವದಸ್ವ ಮೇ ॥೫೯॥**

"ದ್ವಿಜಶ್ರೇಷ್ಠನೇ! ನಿನಗೆ ಸ್ವಾಗತವಿದೆ. ನಿನ್ನ ಇಚ್ಛೆಯು ಏನಿದೆ ಎಂಬುದನ್ನಾದರೂ ತಿಳಿಸು."

ಪರಶುರಾಮನು ಹೀಗೆ ಹೇಳಲಾಗಿ, ದ್ರೋಣನು ಶತ್ರುಗಳನ್ನು ಪ್ರಹರಿಸುವವರಲ್ಲಿ ಶ್ರೇಷ್ಠನೆಂದು ಪ್ರಸಿದ್ಧನಾದ, ವಿಧ-ವಿಧವಾದ ಐಶ್ವರ್ಯ ಗಳನ್ನು ಸತ್ಪಾತ್ರರಲ್ಲಿ ದಾನಮಾಡಿ ಕಾಡಿಗೆ ಹೊರಡಲು ಸಿದ್ಧನಾಗಿದ್ದ, ಪೂಜ್ಯನಾದ ಪರಶುರಾಮನನ್ನು ಕುರಿತು ಹೇಳಿದನು :

**ಅಹಂ ಧನಮನನ್ತಂ ಹಿ ಪ್ರಾರ್ಥಯೇ ವಿಪುಲವ್ರತ ॥೬೦॥**

"ಮಹಾವ್ರತಗಳನ್ನು ಪಾಲನೆಮಾಡುವ ಮಹರ್ಷಿಯೇ! ನಾನು ನಿನ್ನಲ್ಲಿರುವ ವಿಪುಲವಾದ ಧನವನ್ನು ಪ್ರಾರ್ಥಿಸುವೆನು."

"ದ್ರೋಣ! ಕಾಲವು ಮಿಂಚಿಹೋಯಿತು. ನನ್ನಲ್ಲಿದ್ದ ಅಪಾರ

ವಾದ ಸ್ವರ್ಣ-ವಜ್ರ-ವೈಡೂರ್ಯಾದಿಗಳೆಲ್ಲವನ್ನೂ ನಾನು ಬ್ರಾಹ್ಮಣರಿಗೆ ದಾನಮಾಡಿಬಿಟ್ಟೆನು. ಅಂತೆಯೇ ಅನೇಕಾನೇಕ ನಗರಗಳಿಂದಲೂ, ಪಟ್ಟಣ ಗಳಿಂದಲೂ, ಅಗ್ರಹಾರ-ಗ್ರಾಮಗಳಿಂದಲೂ ಯುಕ್ತವಾದ ಸಮುದ್ರಾಂತ ವಾದ ಭೂಮಿಯನ್ನೇ ಕಶ್ಯಪನಿಗೆ ದಾನವಾಗಿ ಕೊಟ್ಟುಬಿಟ್ಟೆನು.

ಆದರೆ ಯಾಚಕನಾಗಿ ಬಂದಿರುವ ನಿನಗೆ ನನ್ನಲ್ಲಿ ಏನೂ ಇಲ್ಲವೆಂದು ಹೇಳುವ ಇಚ್ಛೆಯಿಲ್ಲ. ನನ್ನಲ್ಲಿ ಇನ್ನೂ ಎರಡು ವಸ್ತುಗಳು–ಯಾರಿಂದಲೂ ಅಯಾಚಿತವಾಗಿ ಹಾಗೆಯೇ ಉಳಿದಿವೆ.

**ಶರೀರಮಾತ್ರಮೇವಾದ್ಯ ಮಮೇದಮವಶೇಷಿತಮ್ ।**
**ಅಸ್ತ್ರಾಣಿ ಚ ಮಹಾರ್ಹಾಣಿ ಶಸ್ತ್ರಾಣಿ ವಿವಿಧಾನಿ ಚ ॥೬೩॥**

**ಅಸ್ತ್ರಾಣಿ ವಾ ಶರೀರಂ ವಾ ವರಯೈತನ್ಮಯೋದ್ಯತಮ್ ।**
**ವೃಣೀಷ್ವ ಕಿಂ ಪ್ರಯಚ್ಛಾಮಿ ತುಭ್ಯಂ ದ್ರೋಣ ವದಾಶು ತತ್ ॥೬೪॥**

ಶರೀರವೊಂದು ಅನಪೇಕ್ಷಿತವಾಗಿ ಅವಶೇಷವಾಗಿ ಉಳಿದಿದೆ. ಶ್ರೇಷ್ಠ ವಾದ ಅಸ್ತ್ರಗಳೂ ಮತ್ತು ನಾನಾವಿಧವಾದ ಶಸ್ತ್ರಗಳೂ ಉಳಿದಿವೆ. ನೀನು ನನ್ನಲ್ಲಿರುವ ಶಸ್ತ್ರಾಸ್ತ್ರಗಳನ್ನು ಬೇಕಾದರೂ ಪಡೆದುಕೊಳ್ಳಬಹುದು ; ಅಥವಾ ಈ ಶರೀರವನ್ನೇ ಬೇಕಾದರೂ ಪ್ರತಿಗ್ರಹಿಸಬಹುದು. ನಿನಗೆ ಈ ಎರಡರಲ್ಲಿ ಯಾವುದು ಬೇಕೆಂಬುದನ್ನು ಶೀಘ್ರವಾಗಿ ಹೇಳು, ದ್ರೋಣ!"

ಭಾರ್ಗವರಾಮನ ಮಾತುಗಳನ್ನು ಕೇಳಿ ದ್ರೋಣನು ಮನದಲ್ಲಿಯೇ ಆ ಮಹಾತ್ಮನ ಉದಾರತೆಯನ್ನು ಶ್ಲಾಘಿಸುತ್ತಾ ಹೇಳಿದನು :

**ಅಸ್ತ್ರಾಣಿ ಮೇ ಸಮಗ್ರಾಣಿ ಸಸಂಹಾರಾಣಿ ಭಾರ್ಗವ ।**
**ಸಪ್ರಯೋಗರಹಸ್ಯಾನಿ ದಾತುಮರ್ಹಸ್ಯಶೇಷತಃ ॥೬೫॥**

"ಪೂಜ್ಯನೇ! ರಹಸ್ಯಯುಕ್ತವಾದ, ಪ್ರಯೋಗ ಮತ್ತು ಸಂಹಾರವಿಧಿ ಸಹಿತವಾದ, ಸಮಗ್ರವಾದ ಮಹಾಸ್ತ್ರಗಳನ್ನೂ ಮತ್ತು ನಿನ್ನಲ್ಲಿರುವ ಅನೇಕ ವಿಧವಾದ ಶಸ್ತ್ರಗಳನ್ನೂ ಸಂಪೂರ್ಣವಾಗಿ ಅನುಗ್ರಹಿಸುವ ಕೃಪೆಮಾಡು."

ಭಾರ್ಗವರಾಮನು ಅಲ್ಲಿಯೇ ಕುಳಿತು ಆಚಮನಮಾಡಿ ಸಂಕಲ್ಪ

ಪೂರ್ವಕವಾಗಿ ತನ್ನಲ್ಲಿದ್ದ ಸಮಸ್ತವಾದ ಶಸ್ತ್ರಾಸ್ತ್ರಗಳ ರಹಸ್ಯಗಳನ್ನೂ, ಪ್ರಯೋಗ ಮತ್ತು ಉಪಸಂಹಾರಗಳ ವಿಧಾನಗಳನ್ನೂ, ಮಹಾಸ್ತ್ರಗಳನ್ನು ಪ್ರಯೋಗಿಸುವಾಗ ಅನುಸರಿಸಬೇಕಾಗಿರುವ ನಿಯಮಗಳನ್ನೂ ದ್ರೋಣನಿಗೆ ಉಪದೇಶಿಸಿ ಧಾರೆಯೆರೆದುಕೊಟ್ಟನು. ಅರ್ಥಾತ್ ಸಮಗ್ರವಾದ



ಧನುರ್ವೇದವನ್ನೇ ದ್ರೋಣನಿಗೆ ಪರಶುರಾಮನು ದಾನವಾಗಿ ಕೊಟ್ಟನು. ಶಸ್ತ್ರಾಸ್ತ್ರಗಳ ಅಧಿದೇವತೆಗಳೆಲ್ಲರೂ ದ್ರೋಣನನ್ನು ಸೇರಿದರು.

ಮಹಾತಪಸ್ವಿಯಾದ, ದ್ವಿಜಶ್ರೇಷ್ಠವಾದ ದ್ರೋಣನು ಭಗವಂತನಾದ ಪರಶುರಾಮನು ದಾನವಾಗಿ ಕೊಟ್ಟ ಶಸ್ತ್ರಾಸ್ತ್ರಗಳೆಲ್ಲವನ್ನೂ ಧಾರಣೆಮಾಡಿ

ಕೊಂಡು, ಕೃತಾರ್ಥನಾಗಿ ಮತ್ತು ಕೃತಾಸ್ತ್ರನಾಗಿ ತನ್ನ ಪ್ರೀತಿಯ ಗೆಳೆಯನಾದ ದ್ರುಪದನ ಪಟ್ಟಣಕ್ಕೆ ಪ್ರಯಾಣಮಾಡಿದನು.

೧೩೦ನೆಯ ಅಧ್ಯಾಯವು ಮುಗಿಯಿತು.

೧೩೧ನೆಯ ಅಧ್ಯಾಯ ಸಂಭವಪರ್ವ (ಮುಂದುವರೆದಿದೆ.)

## ದ್ರುಪದನಿಂದ ದ್ರೋಣರ ತಿರಸ್ಕಾರ : ಹಾಸ್ತಿನಪುರಕ್ಕೆ ದ್ರೋಣರ ಆಗಮನ

ವೈಶಂಪಾಯನರು ಹೇಳುತ್ತಾರೆ :

**ತತೋ ದ್ರುಪದಮಾಸಾದ್ಯ ಭಾರದ್ವಾಜಃ ಪ್ರತಾಪವಾನ್ ।**
**ಅಬ್ರವೀತ್ಪಾರ್ಥಿವಂ ರಾಜನ್ಸಖಾಯಂ ವಿದ್ಧಿ ಮಾಮಿಹ ॥೧॥**

ಜನಮೇಜಯ! ಪ್ರತಾಪವಂತರಾದ ಭಾರದ್ವಾಜರು ತಮ್ಮ ಸಖನಾದ ದ್ರುಪದರಾಜನ ಸಮೀಪಕ್ಕೆ ಬಂದು ಹೇಳಿದರು :

"ಮಹಾರಾಜ! ಇಲ್ಲಿಗೆ ಬಂದಿರುವ ನನ್ನನ್ನು ನಿನ್ನ ಸಖನಾದ ದ್ರೋಣನೆಂದು ತಿಳಿ."

ಆದರೆ ಆ ಸಮಯದಲ್ಲಿ ದ್ರುಪದನಿಗೆ ದ್ರೋಣರೊಡನೆ ಬಾಲ್ಯದಲ್ಲಿ ಮಾಡಿದ್ದ ಗೆಳೆತನದ ಸವಿನೆನಪು ಅಲ್ಪ-ಸ್ವಲ್ಪ ಉಳಿದಿತ್ತಾದರೂ, ದಟ್ಟದರಿದ್ರನಾದ ಬ್ರಾಹ್ಮಣನೊಬ್ಬನು ತನ್ನ ಬಳಿಗೆ ಬಂದು ಮಿತ್ರನೆಂದು ಹೇಳಿಕೊಳ್ಳುತ್ತಿರುವುದು ಸಿಂಹಾಸನಾರೂಢನಾಗಿದ್ದ ದ್ರುಪದನಿಗೆ ಸಹ್ಯವಾಗಲಿಲ್ಲ. ಪದೇ ಪದೇ 'ಮಿತ್ರ' ಎಂದು ಸಂಬೋಧಿಸುತ್ತಿರುವುದನ್ನು ಕೇಳಿ ಕಿಡಿ-ಕಿಡಿಯಾದನು. ಅವನ ಹುಬ್ಬುಗಳು ಗಂಟಿಕ್ಕಿದುವು. ಕಣ್ಣುಗಳು ಕಾಷಾಯದಂತೆ ಕೆಂಪಾದುವು. ಐಶ್ವರ್ಯಮದದಿಂದ ದರ್ಪಿತನಾಗಿದ್ದ ದ್ರುಪದನು ದ್ರೋಣರನ್ನು ಕುರಿತು ಹೇಳಿದನು :

**ಅಕೃತೇಯಂ ತವ ಪ್ರಜ್ಞಾ ಬ್ರಹ್ಮನ್ನಾತಿಸಮಞ್ಜಸಾ ।**
**ಯನ್ಮಾಂ ಬ್ರವೀಷಿ ಪ್ರಸಭಂ ಸಖಾ ತೇಽಹಮಿತಿ ದ್ವಿಜ ॥೨॥**

"ಬ್ರಾಹ್ಮಣ! ನಿನ್ನ ಬುದ್ಧಿಯು ಸಂಸ್ಕಾರಶೂನ್ಯವಾಗಿರುವಂತೆಯೇ

ಕಾಣುತ್ತಿದೆ. ನಿನಗೆ ಯಾವ ಸ್ಥಳದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದರ ವಿವೇಚನೆಯೇ ಸ್ವಲ್ಪವಾದರೂ ಇಲ್ಲವಾಗಿದೆ. ನನ್ನನ್ನು ಬಾರಿ-ಬಾರಿಗೂ 'ಮಿತ್ರ', 'ಮಿತ್ರ' ಎಂದು ಹೇಳುತ್ತಿರುವುದೇ ನಿನ್ನ ಬುದ್ಧಿಯು ಸರಿಯಾಗಿಲ್ಲವೆಂಬುದಕ್ಕೆ ಸಾಕ್ಷಿಯಾಗಿದೆ.



**ನ ಹಿ ರಾಜ್ಞಾಮುದೀರ್ಣಾನಾಮೇವಮ್ಭೂತೈರ್ನರೈಃ ಕ್ವಚಿತ್ ।**
**ಸಖ್ಯಂ ಭವತಿ ಮನ್ದಾತ್ಮನ್ಶ್ರಿಯಾ ಹೀನೈರ್ಧನಚ್ಯುತೈಃ ॥೫॥**

ಮಂದಬುದ್ಧಿಯವನೇ! ಅದೃಷ್ಟಹೀನರಾದ ಮತ್ತು ದಟ್ಟದರಿದ್ರರಾದ ನಿನ್ನಂತಹವರೊಡನೆ ಸುಪ್ರಸಿದ್ಧರಾದ ಮಹಾರಾಜರು ಖಂಡಿತವಾಗಿಯೂ ಸ್ನೇಹಮಾಡುವುದಿಲ್ಲ. ಅದೃಷ್ಟಹೀನರೂ, ಧನಹೀನರೂ ಆದ

ಬಡವರ ಮತ್ತು ಶ್ರೀಮಂತರೂ, ಸಂಪತ್ಸಮೃದ್ಧರೂ, ಸಾರ್ವಭೌಮರೂ ಆದ ರಾಜರ ನಡುವೆ ಮೈತ್ರಿಯು ಖಂಡಿತವಾಗಿಯೂ ಇರುವುದಿಲ್ಲ. ಬಾಲ್ಯದಲ್ಲಿ ಕಾಲಕರ್ಮಸಂಯೋಗದಿಂದ ನನಗೂ-ನಿನಗೂ ಸ್ನೇಹವಿದ್ದಿರಬಹುದು. ಆದರೆ ಆ ಸ್ನೇಹವೇ ಇಂದಿಗೂ ಉಳಿದಿರುವುದೆಂದು ಭಾವಿಸಿರುವೆಯಾ?

**ಸೌಹೃದಾನ್ಯಪಿ ಜೀರ್ಯನ್ತೇ ಕಾಲೇನ ಪರಿಜೀರ್ಯತಃ ।**
**ಸೌಹೃದಂ ಮೇ ತ್ವಯಾ ಹ್ಯಾಸೀತ್ಪೂರ್ವಂ ಸಾಮರ್ಥ್ಯಬನ್ಧನಮ್ ॥೬॥**

ಕ್ಷಣ-ಕ್ಷಣಕ್ಕೂ ಸವೆದುಹೋಗುತ್ತಿರುವ ಕಾಲದಿಂದ ಜೀರ್ಣನಾಗುವ ಮಾನವನ ಸೌಹಾರ್ದವೂ ಜೀರ್ಣವಾಗಿ ಹೋಗುತ್ತಿರುತ್ತದೆ. ಹಿಂದೆ ನನಗೂ ಮತ್ತು ನಿನಗೂ ಸ್ನೇಹವಿದ್ದುದು ನಿಜ. ಆದರೆ ಅದು ತತ್ಕಾಲಕ್ಕೆ ಮಾತ್ರವೇ ಉಚಿತವಾಗಿದ್ದಿತು. ವಿದ್ಯಾಭ್ಯಾಸದ ಕಾರಣದಿಂದಾಗಿ ನಾವಿಬ್ಬರೂ ಮಿತ್ರತ್ವವೆಂಬ ಬಂಧನದಿಂದ ಬಂಧಿತರಾಗಿದ್ದೆವು. ಮೇಲಾಗಿ ಆ ಸಮಯ ದಲ್ಲಿ ನನ್ನ ಮತ್ತು ನಿನ್ನ ಅಂತಸ್ತು ಒಂದೇ ಆಗಿತ್ತೆಂದೇ ಹೇಳಬಹುದು. ಆದರೆ ಈಗ ನಿನಗೂ-ನನಗೂ ಅಜಗಜಾಂತರ ವ್ಯತ್ಯಾಸವಿದೆ. ಈಗ ನಾನು ನಿನ್ನ ಮಿತ್ರನು ಹೇಗೆತಾನೇ ಆದೇನು?

**ನ ಸಖ್ಯಮಜರಂ ಲೋಕೇ ಹೃದಿ ತಿಷ್ಠತಿ ಕಸ್ಯಚಿತ್ ।**
**ಕಾಲೋ ಹ್ಯೇನಂ ವಿಹರತಿ ಕ್ರೋಧೋ ವೈನಂ ಹರತ್ಯುತ ॥೭॥**

ಲೋಕದಲ್ಲಿ ಮಿತ್ರತ್ವವು ಅವಿನಾಶಿಯಾಗಿ ಯಾವನ ಹೃದಯದಲ್ಲಿಯೂ ಯಾವ ಕಾರಣದಿಂದಲೂ ಉಳಿಯುವುದಿಲ್ಲ. ಮಿತ್ರತ್ವವು ಜೀರ್ಣವಾಗುವು ದಕ್ಕೆ ಎರಡು ಕಾರಣಗಳಿವೆ. ಮೊದಲನೆಯದು : ಬಹುಕಾಲದವರೆಗೆ ಪರಸ್ಪರ ಸಂಬಂಧವಿಲ್ಲದಿರುವುದು. ಎರಡನೆಯದು : ಸ್ನೇಹಿತರಲ್ಲಿ ಒಬ್ಬನು ಮತ್ತೊಬ್ಬನ ಮೇಲೆ ಯಾವ ಕಾರಣದಿಂದಲಾದರೂ ಕೋಪಗೊಳ್ಳುವುದು– ಈ ಎರಡು ಕಾರಣಗಳು ಮಿತ್ರತ್ವವನ್ನು ನಾಶಗೊಳಿಸುತ್ತವೆ.

ಬ್ರಾಹ್ಮಣೋತ್ತಮನೇ! ಯಾವುದೋ ಕಾಲದ ಹಳೆಯ ಸ್ನೇಹವನ್ನು ಮನಸ್ಸಿನಲ್ಲಿ ನೆನೆಯಲು ಹೋಗಬೇಡ. ಆ ವಿಧವಾದ ಭಾವನೆಯೇನಾದರೂ ನಿನ್ನ ಮನಸ್ಸಿನಲ್ಲಿದ್ದರೆ ಈ ಕೂಡಲೇ ಅದನ್ನು ತೊಡೆದುಹಾಕು. ಅದನ್ನೇ ಅವಲಂಬಿಸಿ ಕುಳಿತುಕೊಳ್ಳಬೇಡ. ಹಿಂದೆ ನನಗೂ ಮತ್ತು ನಿನಗೂ

ಅಧ್ಯಯನಮಾಡುವಾಗ ಮತ್ತು ಆಟ-ಪಾಟಗಳನ್ನಾಡುವಾಗ ಮಿತ್ರತ್ವವಿದ್ದಿತು. ಅದು ಕೇವಲ ಪ್ರಯೋಜನನಿಮಿತ್ತವಾದ ಸ್ನೇಹದ ಬಂಧನ.

**ನ ದರಿದ್ರೋ ವಸುಮತೋ ನಾವಿದ್ವಾನ್ವಿದುಷಃ ಸಖಾ ।**
**ನ ಶೂರಸ್ಯ ಸಖಾ ಕ್ಲೀಬಃ ಸಖಿಪೂರ್ವಂ ಕಿಮಿಷ್ಯತೇ ॥೯॥**

ದರಿದ್ರನಾದವನು ಐಶ್ವರ್ಯವಂತನಾದವನಿಗೆ ಮಿತ್ರನಾಗಲಾರನು. ವಿದ್ವಾಂಸನು ಅವಿದ್ಯಾವಂತನಿಗೆ ಮಿತ್ರನಾಗಲಾರನು. ಹಾಗೆಯೇ ನಪುಂಸಕನು (ಹೇಡಿಯು) ಶೂರನಿಗೆ ಗೆಳೆಯನಾಗಲಾರನು. ಹೀಗಿರುವಾಗ ಹಿಂದಿನ ಕಾಲದ ಮೈತ್ರಿಯನ್ನು ಕಟ್ಟಿಕೊಂಡೇನು ಮಾಡುವೆ?

**ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಶ್ರುತಮ್ ।**
**ತಯೋರ್ವಿವಾಹಃ ಸಖ್ಯಂ ಚ ನ ತು ಪುಷ್ಟವಿಪುಷ್ಟಯೋಃ ॥೧೦॥**

ಯಾವ ಇಬ್ಬರಲ್ಲಿ ಸಮಾನವಾದ ಐಶ್ವರ್ಯವಿರುವುದೋ, ಯಾವ ಇಬ್ಬರಲ್ಲಿ ಸಮಾನವಾದ ವಿದ್ಯೆಯಿರುವುದೋ–ಅವರಿಬ್ಬರಲ್ಲಿಯೇ ವಿವಾಹ ಸಂಬಂಧವೂ ನಡೆಯುವುದು; ಮೈತ್ರಿಯೂ ಏರ್ಪಡುವುದು. ಅದು ಹೊರತಾಗಿ ಪುಷ್ಟನಾದವನ (ಸಿರಿವಂತನ) ಮತ್ತು ದರಿದ್ರನ ಮಧ್ಯೆ ಮೈತ್ರಿಯು ಖಂಡಿತವಾಗಿಯೂ ಇರುವುದಿಲ್ಲ. ದರಿದ್ರ-ಧನಿಕರ ನಡುವೆ ವಿವಾಹಸಂಬಂಧವೂ ಏರ್ಪಡುವುದಿಲ್ಲ. ಇಷ್ಟು ಮಾತ್ರವಲ್ಲ; ಮತ್ತೂ ಹೇಳುವೆನು, ಕೇಳು :

**ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ ।**
**ನಾರಾಜಾ ಪಾರ್ಥಿವಸ್ಯಾಪಿ ಸಖಿಪೂರ್ವಂ ಕಿಮಿಷ್ಯತೇ ॥೧೧॥**

ಶ್ರೋತ್ರಿಯನಿಗೆ ಶ್ರೋತ್ರಿಯನಲ್ಲದವನು ಮಿತ್ರನಾಗಲಾರನು. ಅತಿರಥ-ಮಹಾರಥನಿಗೆ ಸಾಮಾನ್ಯಪದಾತಿಸೈನಿಕನು ಮಿತ್ರನಾಗಲಾರನು. ಅದರಂತೆ ರಾಜನಾದವನಿಗೆ ಸಾಮಾನ್ಯ ಪ್ರಜೆಯು (ರಾಜನಲ್ಲದವನು) ಸ್ನೇಹಿತನಾಗಲಾರನು. ಆದುದರಿಂದ ನೀನು ನನ್ನೊಡನೆ ಮೈತ್ರಿಯನ್ನು ಮುಂದುವರಿಸುವ ಚಾಪಲ್ಯವನ್ನೇಕೆ ಹೊಂದಿರುವೆ?"

ದ್ರುಪದನು ಹೀಗೆ ಹೇಳಿದೊಡನೆಯೇ ಪ್ರತಾಪಶಾಲಿಗಳಾದ ದ್ರೋಣರು ಬಹಳ ರೋಷಾವಿಷ್ಟರಾಗಿ, ಮುಹೂರ್ತಕಾಲ ಮುಂದಿನ

ಕರ್ತವ್ಯವನ್ನು ಕುರಿತು ಚಿಂತಿಸಿದರು. ದ್ರುಪದನಿಗೆ ಬುದ್ಧಿಕಲಿಸಲು ಅದು ಸಮಯವಾಗಿರಲಿಲ್ಲ. ಆದರೆ ಪಾಂಚಾಲನಿಗೆ ಬುದ್ಧಿಕಲಿಸಬೇಕೆಂದು ದ್ರೋಣರು ನಿಶ್ಚಯಿಸಿಬಿಟ್ಟರು. ಮುಂದೇನು ಮಾಡಬೇಕೆಂಬುದನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತಾ ಕುರುಮುಖ್ಯರ ರಾಜಧಾನಿಯಾದ ಹಾಸ್ತಿನ ಪತ್ತನಾಭಿಮುಖವಾಗಿ ಪ್ರಯಾಣಮಾಡಿದರು.*

ಹಸ್ತಿನಾಪುರಕ್ಕೆ ಬಂದನಂತರ ದ್ವಿಜಶ್ರೇಷ್ಠರಾದ ದ್ರೋಣರು ತಮ್ಮ ಭಾವಮೈದುನರಾದ ಕೃಪರ ಮನೆಯಲ್ಲಿ ಮಗನೊಡನೆ ಅನೇಕ ದಿನಗಳವರೆಗೆ ಅಜ್ಞಾತವಾಸದಲ್ಲಿಯೇ ಕಳೆದರು. ದ್ರೋಣರ ಮಗನಾದ ಅಶ್ವತ್ಥಾಮನು ಮಾತ್ರ ಕೃಪರಿಲ್ಲದಿದ್ದ ವೇಳೆಯಲ್ಲಿ ರಾಜಕುಮಾರರಿಗೆ ಧನುರ್ವಿದ್ಯೆಯ ಅಭ್ಯಾಸವನ್ನು ಮಾಡಿಸುತ್ತಿದ್ದನು. ಆದರೆ ಅಶ್ವತ್ಥಾಮನು ಯಾರೆಂಬ ವಿಷಯವು ಮಾತ್ರ ಯಾರಿಗೂ ತಿಳಿದಿರಲಿಲ್ಲ.

ದ್ರೋಣರು ತಾವಾರೆಂಬ ವಿಷಯವನ್ನು ಹೊರಪಡಿಸುವ ಕಾಲವು ಸನ್ನಿಹಿತವಾಯಿತು. ಒಂದು ದಿವಸ ರಾಜಕುಮಾರರೆಲ್ಲರೂ ಸೇರಿ ಚಿಣ್ಣಿ ಕೋಲಾಟವಾಡಲು ಪಟ್ಟಣದ ಹೊರಗಡೆ ಒಂದು ಮೈದಾನದಲ್ಲಿ ಸೇರಿದ್ದರು. ಸ್ವೇಚ್ಛೆಯಿಂದ ಚಿಣ್ಣಿಯಾಡುತ್ತಿದ್ದಾಗ ಒಬ್ಬ ರಾಜಕುಮಾರನು ರಭಸದಿಂದ ಹೊಡೆದ ಚಿಣ್ಣಿಯು ಮೈದಾನದ ಪಕ್ಕದಲ್ಲಿದ್ದ ಹಾಳುಬಾವಿಯಲ್ಲಿ ಬಿದ್ದಿತು. ರಾಜಕುಮಾರರೆಲ್ಲರೂ ಸೇರಿ ಚಿಣ್ಣಿಯನ್ನು ಬಾವಿಯಿಂದ ತೆಗೆಯಲು ಬಹುವಾಗಿ ಪ್ರಯತ್ನಿಸಿದರು. ಆದರೆ ಪ್ರಯೋಜನವಾಗಲಿಲ್ಲ. ಚಿಣ್ಣಿಯನ್ನು ತೆಗೆದುಬಿಡುವೆವೆಂದು ಗೆಳೆಯರೊಡನೆ ಪೌರುಷವನ್ನು ಕೊಚ್ಚಿ ತೆಗೆಯಲು ಸಾಧ್ಯವಾಗದೇ ಹಿಂದಿರುಗಿದ ರಾಜಕುಮಾರರು ಒಬ್ಬರ ಮುಖವನ್ನು

---

* ದ್ರುಪದನ ಮಾತುಗಳಿಂದ ದ್ರೋಣರು ಕುಪಿತರಾದುದು ಸ್ವಾಭಾವಿಕವೇ ಆಗಿದೆ. ಆದರೆ ದ್ರುಪದನಾಡಿದ ಮಾತುಗಳು ಎಲ್ಲ ಕಾಲಕ್ಕೂ ಸತ್ಯವಾದುವುಗಳೇ. ಬಡತನ-ಸಿರಿತನಗಳನ್ನು ಗಣನೆಗೆ ತಂದುಕೊಳ್ಳದೇ ಬಾಲ್ಯದ ಮೈತ್ರಿಯನ್ನೇ ಆಜೀವಪರ್ಯಂತ ವಾಗಿ ಬೆಳೆಸಿಕೊಂಡು ಬರುವವರು ಅತಿವಿರಳ. ಎಲ್ಲರ ಅನುಭವವೂ ಇದೇ ಆಗಿರುವುದು. ಕೃಷ್ಣ-ಕುಚೇಲರ ಸ್ನೇಹದ ಸಾಮ್ಯವನ್ನು ನಾವೀಗ ಯೋಚಿಸಲೂ ಸಾಧ್ಯವಾಗುವುದಿಲ್ಲ.

ಮತ್ತೊಬ್ಬರು ನೋಡುತ್ತಾ ನಿಂತಿದ್ದರು. ಬಾವಿಯು ಬಹಳ ಶಿಥಿಲವಾಗಿದ್ದುದರಿಂದಲೂ ಆಳವಾಗಿದ್ದುದರಿಂದಲೂ ಕಲ್ಲಿನ ಕಟ್ಟಡವೆಲ್ಲವೂ ಕುಸಿದು ಹೋಗಿ ಒಳಗಿಳಿಯಲು ಯಾರಿಗೂ ಸಾಧ್ಯವಾಗಲಿಲ್ಲ. ಆ ಸಮಯಕ್ಕೆ ಸರಿಯಾಗಿ ಅಗ್ನಿಹೋತ್ರಿಯಾದ, ಕಪ್ಪಾಗಿಯೂ ಬಹಳ ಕೃಶನಾಗಿಯೂ ವ್ಯಾಕುಲನಾಗಿಯೂ ಇದ್ದ, ಮಧ್ಯಪ್ರಾಯವನ್ನು ಮೀರಿದ್ದ, ಕಾರ್ಯಾರ್ಥಿಯಾದ ಬ್ರಾಹ್ಮಣನೊಬ್ಬನು, ತನ್ನ ನಿತ್ಯ-ನೈಮಿತ್ತಿಕಕರ್ಮಗಳನ್ನು ಮುಗಿಸಿಕೊಂಡು ರಾಜಕುಮಾರರಿದ್ದೆಡೆಗೆ ಬಂದು ನಿಂತನು.

ನಿರುತ್ಸಾಹರಾಗಿದ್ದ ರಾಜಕುಮಾರರು ಅಪರಿಚಿತನಾಗಿದ್ದ ಬ್ರಾಹ್ಮಣನಾರೆಂಬುದನ್ನು ತಿಳಿಯುವ ಇಚ್ಛೆಯಿಂದ ಅವನನ್ನು ಬಳಸಿ ನಿಂತರು. ಬ್ರಾಹ್ಮಣನು ರಾಜಕುಮಾರರ ಆಕಾಂಕ್ಷೆಯನ್ನು ತಿಳಿದವನಾಗಿ ಮಂದಹಾಸದಿಂದ ಹೇಳಿದನು :

**ಅಹೋ ವೋ ಧಿಗ್ಬಲಂ ಕ್ಷಾತ್ರಂ ಧಿಗೇತಾಂ ವಃ ಕೃತಾಸ್ತ್ರತಾಮ್ ।**
**ಭರತಸ್ಯಾನ್ವಯೇ ಜಾತಾ ಯೇ ವೀಟಾಂ ನಾಧಿಗಚ್ಛತ ॥೨೩॥**

“ಅಹೋ! ನಿಮ್ಮ ಕ್ಷಾತ್ರಬಲಕ್ಕೆ ಧಿಕ್ಕಾರ! ನಿಮ್ಮ ಅಸ್ತ್ರವಿದ್ಯಾನೈಪುಣ್ಯಕ್ಕೂ ಧಿಕ್ಕಾರವಿರಲಿ. ಏಕೆಂದರೆ : ನೀವು ಭರತನ ವಂಶದಲ್ಲಿ ಹುಟ್ಟಿಯೂ ಬಾವಿಯಲ್ಲಿ ಬಿದ್ದಿರುವ ಚಿಣ್ಣೆಯನ್ನು ಬಾಣಪ್ರಯೋಗದಿಂದ ಮೇಲಕ್ಕೆ ಸೆಳೆದುಕೊಳ್ಳುವ ಸಾಮರ್ಥ್ಯವನ್ನೂ ಪಡೆದಿಲ್ಲವೆಂದರೆ–ಇದು ನಾಚಿಕೆಪಡಬೇಕಾದ ಅಂಶವಲ್ಲವೇ?

**ವೀಟಾಂ ಚ ಮುದ್ರಿಕಾಂ ಚೈವ ಹ್ಯಹಮೇತದಪಿ ದ್ವಯಮ್ ।**
**ಉದ್ಧರೇಯಮಿಷೀಕಾಭಿರ್ಭೋಜನಂ ಮೇ ಪ್ರದೀಯತಾಮ್ ॥೨೪॥**

ಬಾವಿಯೊಳಗೆ ಬಿದ್ದಿರುವ ಚಿಣ್ಣೆಯನ್ನು ದರ್ಭೆಯಿಂದಲೇ ಹೊರಕ್ಕೆ ತೆಗೆಯುವೆನು. ಚಿಣ್ಣೆಯನ್ನು ಮಾತ್ರವೇ ಅಲ್ಲ ; ಅದಕ್ಕಿಂತಲೂ ಸಣ್ಣದಾದ ಈ ಅಂಗುಲೀಯಕವನ್ನೂ (ಉಂಗುರವನ್ನೂ) ನಿಮ್ಮೆದುರಿನಲ್ಲಿಯೇ ಬಾವಿಯೊಳಗೆ ಹಾಕಿ ಮೇಲೆ ತೆಗೆಯುವೆನು. ನೀವು ನನಗೆ ಭೋಜನವನ್ನು ಮಾಡಿಸಿರಿ. (ನನ್ನ ಜೀವಿಕೆಗೆ ವ್ಯವಸ್ಥೆಮಾಡಿರಿ)”–ಹೀಗೆ ಹೇಳಿ ದ್ರೋಣರು ತಮ್ಮ ಬೆರಳಲ್ಲಿದ್ದ ಅಂಗುಲೀಯಕವನ್ನೂ ಬಾವಿಯೊಳಗೆ ಹಾಕಿಬಿಟ್ಟರು.

ದ್ರೋಣರ ಮಾತನ್ನು ಕೇಳಿದೊಡನೆಯೇ ಯುಧಿಷ್ಠಿರನು ಮುಂದೆ ಬಂದು–"ಬ್ರಾಹ್ಮಣೋತ್ತಮರೇ! ನೀವು ಹೇಳುತ್ತಿರುವುದನ್ನು ಕೃತಿಯಲ್ಲಿ ತೋರಿಸಿದರೆ ನೀವು ಕೇಳಿದಂತೆ ಕೆಲವು ದಿವಸಗಳ ಭೋಜನವನ್ನಲ್ಲ. ಕೃಪರ ಅನುಮತಿಯನ್ನು ಪಡೆದು, ನಿಮ್ಮ ಆಜೀವಪರ್ಯಂತವಾಗಿ ನಿಮಗೆ ಬೇಕಾದುದೆಲ್ಲವನ್ನೂ ಒದಗಿಸಿಕೊಡುವೆವು."

ದ್ರೋಣರು ಯುಧಿಷ್ಠಿರನ ಮಾತನ್ನು ಕೇಳಿ ನಸುನಕ್ಕು ತಮ್ಮಲ್ಲಿಯೇ ಇದ್ದ ಒಂದು ಹಿಡಿ ದರ್ಭೆಯನ್ನೇ ಹೊರಕ್ಕೆ ತೆಗೆದು ಹೇಳಿದರು :

**ಏಷಾ ಮುಷ್ಟಿರಿಷೀಕಾಣಾಂ ಮಯಾಸ್ತ್ರೇಣಾಭಿಮನ್ತ್ರಿತಾ ।**
**ಅಸ್ಯಾ ವೀರ್ಯಂ ನಿರೀಕ್ಷಧ್ವಂ ಯದನ್ಯಸ್ಯ ನ ವಿದ್ಯತೇ ॥೨೮॥**

**ಭೇತ್ಸ್ಯಾಮೀಷೀಕಯಾ ವೀಟಾಂ ತಾಮಿಷೀಕಾಂ ತಥಾನ್ಯಯಾ ।**
**ತಾಮನ್ಯಯಾ ಸಮಾಯೋಗೇ ವೀಟಾಯಾ ಗ್ರಹಣಂ ಮಮ ॥೨೯॥**

"ರಾಜಕುಮಾರರೇ! ಈ ಒಂದು ಹಿಡಿ ದರ್ಭೆಗಳನ್ನು ನನ್ನಲ್ಲಿರುವ ಮಂತ್ರಪ್ರಭಾವದಿಂದ ಮಹಾಸ್ತ್ರಗಳನ್ನಾಗಿ ಪರಿವರ್ತಿಸುವೆನು. ಇದರ ಪ್ರಭಾವವನ್ನಾದರೂ ನೋಡಿರಿ. ಇತರ ಅಸ್ತ್ರಗಳಿಗಿಂತಲೂ ಹೆಚ್ಚಿನ ಶಕ್ತಿಯನ್ನು ಈ ಕುಶಾಸ್ತ್ರಗಳು ಹೊಂದುವುವು. ಮೊದಲನೆಯ ಕುಶವನ್ನು ಅಸ್ತ್ರವನ್ನಾಗಿ ಪರಿವರ್ತಿಸಿ ಚಿಣ್ಣಿಗೆ ಗುರಿಯಿಟ್ಟು ಹೊಡೆಯುವೆನು. ಅನಂತರ ಎರಡನೆಯ ಕುಶಾಸ್ತ್ರವನ್ನು ಮೊದಲನೆಯ ಕುಶಾಸ್ತ್ರದೊಡನೆ ಯೋಜಿಸುವೆನು. ಹೀಗೆಯೇ ನೂರಾರು ಕುಶಾಸ್ತ್ರಗಳನ್ನು ಒಂದಕ್ಕೊಂದನ್ನು ಸೇರಿಸಿ ಸರಪಳಿಯನ್ನು ಮಾಡಿ ಚಿಣ್ಣಿಯನ್ನು ಮೇಲೆ ತೆಗೆಯುವೆನು."

ರಾಜಕುಮಾರರೆಲ್ಲರೂ ಭ್ರಾಂತರಾಗಿ ನಿಂತರು. ದ್ರೋಣರು ಒಂದು ದರ್ಭೆಯನ್ನು ಮಂತ್ರಪುನಶ್ಚರಣೆಮಾಡಿ ಮಹಾಸ್ತ್ರವನ್ನಾಗಿ ಪರಿವರ್ತಿಸಿ, ಧನುಸ್ಸಿಗೆ ಹೆದೆಯೇರಿಸಿ ಬಾವಿಯಲ್ಲಿದ್ದ ಚಿಣ್ಣಿಗೆ ಗುರಿಯಿಟ್ಟು ಹೊಡೆದರು. ಕುಶಾಸ್ತ್ರವು 'ಸೊಯ್' ಎಂದು ಶಬ್ದಮಾಡುತ್ತಾ ಚಿಣ್ಣಿಗೆ ಚುಚ್ಚಿಕೊಂಡಿತು. ಎರಡನೆಯ ಕುಶಾಸ್ತ್ರವನ್ನು ಪ್ರಯೋಗಿಸಿದರು. ಅದು ಮೊದಲು ಪ್ರಯೋಗಿಸಿದ್ದ ಕುಶಾಸ್ತ್ರದ ಹಿಂಬದಿಯಲ್ಲಿ ಅಂಟಿಕೊಂಡಿತು. ತೃತೀಯ, ಚತುರ್ಥ, ಪಂಚಮ.... ಕುಶಾಸ್ತ್ರಪ್ರಯೋಗಗಳನ್ನೂ ದ್ರೋಣರು

ಮಾಡಿದರು. ಕಡೆಯ ಕುಶಾಸ್ತ್ರವು ಬಾವಿಯ ಮೇಲ್ಭಾಗದಲ್ಲಿಯೇ ತನ್ನ ಹಿಂದಿನ ಕುಶಾಸ್ತ್ರದೊಡನೆ ಸೇರಿಕೊಂಡು ನಿಂತಿತು. ಬಾವಿಯಿಂದ ಬಿಂದಿಗೆಯನ್ನು ಎಳೆಯುವ ರೀತಿಯಲ್ಲಿ ಕುಶಾಸ್ತ್ರಗಳ ಸರಪಳಿಯಿಂದ ಚಿಣ್ಣೆಯನ್ನು ಮೇಲೆಳೆದು ದ್ರೋಣರು ರಾಜಕುಮಾರರಿಗೆ ಕೊಟ್ಟರು.

ಎಂದೂ—ಎಲ್ಲೂ ಕಂಡು-ಕೇಳದ ಧನುರ್ವಿದ್ಯಾಚಾತುರ್ಯವನ್ನು ರಾಜಕುಮಾರರು ಅಂದು ನೋಡಿದರು. ತಾವು ಕನಸುಕಾಣುತ್ತಿಲ್ಲವೆಂಬ ಭ್ರಾಂತಿಯನ್ನು ನಿವಾರಿಸಿಕೊಳ್ಳಲು ಕಣ್ಣುಗಳನ್ನುಜ್ಜಿ ಅರಳಿಸಿ ನೋಡಿದರು. ದ್ರೋಣರು ಮಂದಹಾಸದಿಂದ ರಾಜಕುಮಾರರ ಮುಖಲಕ್ಷಣಗಳೆಲ್ಲವನ್ನೂ ವೀಕ್ಷಿಸುತ್ತಾ ನಿಂತಿದ್ದರು. ರಾಜಕುಮಾರರಿಗೆ ದ್ರೋಣರ ಅಂಗುಲೀಯಕದ ಸ್ಮರಣೆಯು ಒಡನೆಯೇ ಬಂದು— "ಬ್ರಾಹ್ಮಣೋತ್ತಮರೇ! ನಿಮ್ಮ ಅಂಗುಲೀಯಕವನ್ನೂ ಬಾವಿಯಿಂದ ತೆಗೆಯಿರಿ"—ಎಂದರು.

ಉಂಗುರವನ್ನು ತೆಗೆಯಲು ದ್ರೋಣರು ಕುಶಾಸ್ತ್ರವನ್ನು ಪ್ರಯೋಗಿಸ ಲಿಲ್ಲ. ಧನುಸ್ಸಿಗೆ ಹೆದೆಯೇರಿಸಿ ಶರವನ್ನು ಯೋಜಿಸಿದ ಕಾರ್ಯವನ್ನು ರಾಜಕುಮಾರರೆಲ್ಲರೂ ನೋಡಿದರು. ಮುಂದೆ 'ಸೊಯ್' ಎಂಬ ಶರಶಬ್ದವು ಮಾತ್ರ ಕೇಳಿಸಿತು. ಉಂಗುರವು ದ್ರೋಣರ ಕೈಯ್ಯಲಿತ್ತು.

ರಾಜಕುಮಾರರಿಗೆ ಅದು ಅತ್ಯದ್ಭುತಸಾಧನೆಯ ಅಸ್ತ್ರಪ್ರಯೋಗ ವೆನ್ನಿಸಿತು. ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆಯಬಹುದು. ಆದರೆ ಲಕ್ಷ್ಯವನ್ನೇ ಬಾಣಪ್ರಯೋಗದಿಂದ ಹತ್ತಿರಕ್ಕೆ ಸೆಳೆದು ತರುವುದೆಂದರೆ ಸಾಮಾನ್ಯ ವಿದ್ಯೆಯೂ ಇಲ್ಲ ; ಸಾಮಾನ್ಯಸಾಧನೆಯೂ ಅಲ್ಲ.*

---

* ಇದು ಆತ್ಮಶಕ್ತಿಯಿಂದ ಸಾಧಿಸಬಹುದಾದ ವಿಜ್ಞಾನದ ಮಹತ್ತ್ವ. ಧನುರ್ಬಾಣಗಳು ಹೇಗಿರಬೇಕು? ಯಾವ ಯಾವ ಲೋಹಗಳನ್ನು ಉಪಯೋಗಿಸಬೇಕು? ಎಂಬ ನಿಯಮವಿದ್ದರೂ—ಧನುರ್ವಿದ್ಯೆಯ ಹಿನ್ನೆಲೆಯಲ್ಲಿ ಆತ್ಮಶಕ್ತಿಯೂ ಅಡಗಿರುತ್ತಿತ್ತು. ಕೇವಲ ಒಬ್ಬ ಮಾನವನು ತನ್ನ ಮಂತ್ರಬಲದಿಂದ ಆರ್ಜಿಸಿದ ಮಹಾಶಕ್ತಿಯಿಂದ ಕುಶವನ್ನು ಬ್ರಹ್ಮಾಸ್ತ್ರವನ್ನಾಗಿ ಪರಿವರ್ತಿಸಿ ಜಗತ್ತನ್ನೇ ನಡುಗಿಸುವ ಸಾಮರ್ಥ್ಯವುಳ್ಳವನಾಗಿರುತ್ತಿದ್ದನು. ಅಂತಹ ಅಮೋಘವಾದ ಮತ್ತು ಆರ್ಷೇಯವಾದ ಅದ್ಭುತ ವಿದ್ಯೆಯೂ ಇಂದು ಲುಪ್ತವಾಗಿ ಹೋಗಿದೆ.

ದ್ರೋಣರು ಉಂಗುರವನ್ನು ತಮ್ಮನ್ನು ಸುತ್ತುವರಿದು ನಿಂತಿದ್ದ, ಆಶ್ಚರ್ಯಚಕಿತರಾದ ರಾಜಕುಮಾರರೆಲ್ಲರಿಗೂ ನೋಡಲು ಕೊಟ್ಟರು. ಅವರೆಲ್ಲರೂ ದ್ರೋಣರ ಬಾಣಪ್ರಯೋಗಚಾತುರ್ಯಕ್ಕೆ ತಲೆದೂಗಿದರು.

**ಅಭಿವಾದಯಾಮಹೇ ಬ್ರಹ್ಮನ್ನೈತದನ್ಯೇಷು ವಿದ್ಯತೇ ।**
**ಕೋऽಸಿ ಕಸ್ಯಾಸಿ ಜಾನೀಮೋ ವಯಂ ಕಿಂ ಕರವಾಮಹೇ ॥೩೪॥**

"ಬ್ರಾಹ್ಮಣೋತ್ತಮರೇ! ನಿಮಗೆ ನಾವು ಅಭಿವಾದನಮಾಡುತ್ತೇವೆ. ನಿಮ್ಮ ಹೊರತಾಗಿ ಮತ್ತಾರಿಂದಲೂ ಈ ವಿಧವಾದ ಬಾಣಪ್ರಯೋಗವು ಸಾಧ್ಯವೇ ಇಲ್ಲ. ನಿಮ್ಮ ಕುಲ-ಗೋತ್ರಗಳನ್ನು ತಿಳಿಯಲು ಬಹಳ ಉತ್ಸುಕ ರಾಗಿದ್ದೇವೆ ಮತ್ತು ನೀವಿಚ್ಛಿಸಿದರೆ ನಿಮ್ಮ ಸೇವೆಯನ್ನು ಮಾಡಲೂ ಸಿದ್ಧರಿದ್ದೇವೆ. ನಾವು ನಿಮಗಾಗಿ ಈಗ ಯಾವ ಕಾರ್ಯವನ್ನು ಮಾಡಬೇಕು? ದಯಮಾಡಿ ಹೇಳಿರಿ"–ಎಂದು ವಿನಯಪೂರ್ವಕವಾಗಿ ಹೇಳಿದ ರಾಜಕುಮಾರರಿಗೆ ಉತ್ತರವಾಗಿ ದ್ರೋಣರು ಹೇಳಿದರು :

**ಆಚಕ್ಷಧ್ವಂ ಚ ಭೀಷ್ಮಾಯ ರೂಪೇಣ ಚ ಗುಣೈಶ್ಚ ಮಾಮ್ ।**
**ಸ ಏವ ಸುಮಹಾತೇಜಾಃ ಸಾಮ್ಪ್ರತಂ ಪ್ರತಿಪತ್ಸ್ಯತೇ ॥೩೫॥**

"ನೀವು ಈಗಲೇ ಹೋಗಿ ನನ್ನ ರೂಪ-ಗುಣಗಳನ್ನು ಭೀಷ್ಮನಿಗೆ ವಿಶದವಾಗಿ ಹೇಳಿರಿ. ಆ ಮಹಾನುಭಾವನೇ ನಾನಾರೆಂಬುದನ್ನು ಕೂಡಲೇ ತಿಳಿಯುವನು."

ರಾಜಕುಮಾರರೆಲ್ಲರೂ ದ್ರೋಣರನ್ನು ಹೆಚ್ಚು ಒತ್ತಾಯಮಾಡದೇ ಅವರ ಮಾತಿಗೆ ಮಾನ್ಯತೆಯಿತ್ತು, ಅವರಿಗೆ ನಮಸ್ಕರಿಸಿ, ಪಿತಾಮಹನಾದ ಭೀಷ್ಮನಲ್ಲಿಗೆ ತೆರಳಿ, ಆಟದ ಮೈದಾನದಲ್ಲಿ ನಡೆದುದೆಲ್ಲವನ್ನೂ ವಿಶದವಾಗಿ ಹೇಳಿದರು.

ವಿಷಯಗಳೆಲ್ಲವನ್ನೂ ವಿಶದವಾಗಿ ಕೇಳಿದನಂತರ ಭೀಷ್ಮನು ಅಂತಹ ಅದ್ಭುತಬಾಣಪ್ರಯೋಗಚಾತುರ್ಯವು ದ್ರೋಣರಿಗಲ್ಲದೇ ಮತ್ತಾರಿಗೂ ಇರಲು ಸಾಧ್ಯವಿಲ್ಲವೆಂದು ನಿಶ್ಚಯಿಸಿ, ರಾಜಕುಮಾರರಿಗೆ ಯೋಗ್ಯರಾದ ಗುರುಗಳು ಸಿಕ್ಕಿದರೆಂಬ ಸಂತೋಷದಿಂದ ತಾನಾಗಿಯೇ ಕೃಪರ ಮನೆಗೆ ತೆರಳಿ, ಸಕಲಮರ್ಯಾದೆಗಳೊಡನೆ ದ್ರೋಣರನ್ನು ಅರಮನೆಗೆ ಕರೆತಂದನು.

ಪರಸ್ಪರ ಕುಶಲಪ್ರಶ್ನೆಗಳಾದುವು. ಮಾತಿನ ಮಧ್ಯದಲ್ಲಿ ಭೀಷ್ಮನು ಕೇಳಿದನು : "ಬ್ರಾಹ್ಮಣೋತ್ತಮರೇ! ನೀವು ಹಾಸ್ತಿನಪುರಕ್ಕೆ ಬಂದ ಕಾರಣವನ್ನು ಕೇಳಬಹುದೇ?"

ದ್ರೋಣರು ನಡೆದುದೆಲ್ಲವನ್ನೂ ಯಥಾವತ್ತಾಗಿ ಭೀಷ್ಮನಿಗೆ ಹೇಳ ತೊಡಗಿದರು.

ಭೀಷ್ಮನ ಮಾತಿಗೆ ಪುರಸ್ಕಾರವನ್ನಿತ್ತು ದ್ರೋಣರು ತಮ್ಮ ಆತ್ಮಕಥೆ ಯನ್ನು ಪ್ರಾರಂಭಿಸಿದರು :

"ನಾನು ಬ್ರಹ್ಮಚರ್ಯಾಶ್ರಮದಲ್ಲಿದ್ದಾಗ ಧನುರ್ವಿದ್ಯಾಭ್ಯಾಸ ಕ್ಕಾಗಿಯೂ ಮತ್ತು ಉತ್ತಮವಾದ ದಿವ್ಯಾಸ್ತ್ರಗಳನ್ನು ಪಡೆಯುವುದ ಕ್ಕಾಗಿಯೂ ಅಗ್ನಿವೇಶರಲ್ಲಿ ಶಿಷ್ಯನಾಗಿದ್ದೆನು. ಗುರುಶುಶ್ರೂಷೆಮಾಡುತ್ತಾ ಕೌಪೀನ-ಜಟಾಧಾರಿಯಾಗಿ, ಬ್ರಹ್ಮಚರ್ಯಾಶ್ರಮೋಕ್ತವಾದ ವ್ರತ-ನಿಯಮಾದಿಗಳನ್ನು ಪರಿಪಾಲಿಸುತ್ತಾ, ಅನೇಕ ವರ್ಷಗಳ ಕಾಲ ನಾನು ಅವರಲ್ಲಿಯೇ ಇದ್ದೆನು. ಅದೇ ಸಮಯದಲ್ಲಿಯೇ ಪಾಂಚಾಲರಾಜಕುಮಾರ ನಾದ ದ್ರುಪದನೂ ಧನುರ್ವಿದ್ಯಾಭ್ಯಾಸಕ್ಕಾಗಿ ಅಗ್ನಿವೇಶರಲ್ಲಿಗೆ ಬಂದನು. ಕಾಲಕ್ರಮದಲ್ಲಿ ನಮ್ಮಿಬ್ಬರಲ್ಲಿಯೂ ಮೈತ್ರಿಯು ಬೆಳೆಯಿತು. ನಾನೂ ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದೆನು. ಓದುವಾಗಲೂ, ಆಡುವಾಗಲೂ ಒಬ್ಬರು ಮತ್ತೊಬ್ಬರನ್ನು ಬಿಟ್ಟು ಅಗಲುತ್ತಿರಲಿಲ್ಲ. ದ್ರುಪದನೂ ಸಹ ನನ್ನ ಇಚ್ಛೆಗೆ ವಿರೋಧವಾಗಿ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಯಾವಾಗಲೂ ನನಗೆ ಪ್ರಿಯವಾಗುವಂತೆಯೇ ಮಾತನಾಡುತ್ತಿದ್ದನು.

**ಅಹಂ ಪ್ರಿಯತಮಃ ಪುತ್ರಃ ಪಿತುರ್ದ್ರೋಣ ಮಹಾತ್ಮನಃ ।**
**ಅಭಿಷೇಕ್ಷ್ಯತಿ ಮಾಂ ರಾಜ್ಯೇ ಸ ಪಾಞ್ಚಾಲೋ ಯದಾ ತದಾ ।**

**ತ್ವದ್ಭೋಗ್ಯಂ ಭವಿತಾ ತಾತ ಸಖೇ ಸತ್ಯೇನ ತೇ ಶಪೇ ।**
**ಮಮ ಭೋಗಾಶ್ಚ ವಿತ್ತಂ ಚ ತ್ವದಧೀನಂ ಸುಖಾನಿ ಚ ॥೪೬॥**

"ದ್ರೋಣ! ನಾನು ನನ್ನ ತಂದೆಗೆ ಪ್ರೀತಿಪಾತ್ರನಾದ ಮಗ. ಆದುದರಿಂದ ಅವನು ನನ್ನನ್ನೇ ಸಿಂಹಾಸನಕ್ಕೆ ಅಧಿಪತಿಯನ್ನಾಗಿ ಮಾಡು

ವುದೂ ನಿಶ್ಚಯ. ನಾನು ಸಿಂಹಾಸನವನ್ನೇರಿದೊಡನೆಯೇ ಪಾಂಚಾಲದೇಶ ವನ್ನೇ ನಿನಗೆ ಅರ್ಪಿಸಿಬಿಡುವೆನು. ಇದು ನನ್ನ ಪ್ರಮಾಣವಚನವೆಂದು ತಿಳಿ. ನನ್ನ ಭೋಗೈಶ್ವರ್ಯಗಳೂ, ರಾಜ್ಯ-ಕೋಶಾದಿಗಳೂ, ಸಮಸ್ತ ಸುಖಗಳೂ ನಿನ್ನನ್ನೇ ಅವಲಂಬಿಸಿ ಇರುವುವು. ಇದು ನನ್ನ ಜೀವನದ ಆಸೆ"–ಇವೇ ದ್ರುಪದನು ಹೇಳುತ್ತಿದ್ದ ಸವಿಮಾತುಗಳು.

ಅವನು ಅಸ್ತ್ರವಿದ್ಯಾಭ್ಯಾಸವನ್ನು ಪೂರ್ಣಮಾಡಿ ಪಾಂಚಾಲದೇಶಕ್ಕೆ ತೆರಳುವಾಗಲೂ–'ನೀನು ಪಾಂಚಾಲದೇಶಕ್ಕೆ ಬರಲೇಬೇಕು'–ಎನ್ನುವ ಕಡೆಯ ನುಡಿಯೊಡನೆ ನನ್ನಿಂದ ಬೀಳ್ಕೊಂಡನು. ದ್ರುಪದನು ಹೇಳಿದ್ದ ಮಾತುಗಳನ್ನು ನಾನು ಯಾವಾಗಲೂ ಸ್ಮರಿಸುತ್ತಲೇ ಇದ್ದೆನು.

ಕೆಲವು ದಿವಸಗಳು ಕಳೆದನಂತರ ನಮ್ಮ ತಂದೆಯವರ ಅಪ್ಪಣೆಯಂತೆ ನಾನು ಪುತ್ರಕಾಮನಾಗಿ ತಲೆಯಲ್ಲಿ ಹೆಚ್ಚು ಕೂದಲಿಲ್ಲದ ಕೃಪಿಯನ್ನು ಮದುವೆಯಾದೆನು. ಕೃಪಿಯು ಗೃಹಕೃತ್ಯಗಳಲ್ಲಿ ನಿಪುಣೆಯಾಗಿದ್ದುದು ಮಾತ್ರವಲ್ಲದೇ–ವ್ರತನಿಷ್ಠಳೂ, ಮಹಾಪ್ರಾಜ್ಞಳೂ, ಅಗ್ನಿಹೋತ್ರ, ಯಾಗ, ಶಮ-ದಮಗಳ ಪಾಲನೆ–ಇವುಗಳಲ್ಲಿ ಸದಾ ನಿರತಳೂ ಆಗಿದ್ದಳು. ಕೆಲವು ಕಾಲಾನಂತರ ನನ್ನಿಂದ ಸೂರ್ಯನಿಗೆ ಸಮಾನನಾದ ಅಶ್ವತ್ಥಾಮನೆಂಬ ಪುತ್ರನನ್ನೂ ಪಡೆದಳು. ನಮ್ಮ ತಂದೆಯವರು ನನ್ನನ್ನು ಪಡೆದು ಸಂತುಷ್ಟರಾದಂತೆ–ತೇಜಸ್ವಿಯಾದ ಅಶ್ವತ್ಥಾಮನನ್ನು ಪಡೆದು ನಾನೂ ಸಂತುಷ್ಟನಾದೆನು.

ಒಮ್ಮೆ ಪುತ್ರನಾದ ಅಶ್ವತ್ಥಾಮನು ನಮ್ಮ ಪಕ್ಕದ ಆಶ್ರಮದಲ್ಲಿ ಧನವಂತರಾದ ಬಾಲಕರು ಹಾಲು ಕುಡಿಯುತ್ತಿರುವುದನ್ನು ಕಂಡು, ತನಗೂ ಹಾಲುಬೇಕೆಂದು ಅಳಲು ಮೊದಲಿಟ್ಟನು. ಅದರಿಂದ ನನಗೂ ಬಹಳ ದಿಗ್ಭ್ರಾಂತಿಯಾಯಿತು. ಆದರೆ ಆ ದೇಶದಲ್ಲಿ ಅನೇಕ ಬಾರಿ ಸುತ್ತಾಡಿದರೂ ನನಗೆ ಯೋಗ್ಯನೆನಿಸಿದ ದಾನಿಯಾಗಲೀ, ಶುಭಲಕ್ಷಣಯುಕ್ತವಾದ ಹಾಲು ಕರೆಯುವ ಹಸುವಾಗಲೀ ಎಲ್ಲಿಯೂ ಸಿಕ್ಕಲಿಲ್ಲ. ವಿಫಲನಾಗಿಯೇ ಆಶ್ರಮಕ್ಕೆ ಬರಬೇಕಾಯಿತು.

ಆಶ್ರಮಕ್ಕೆ ಹಿಂದಿರುಗಿದ ವೇಳೆಯಲ್ಲಿ ಅಶ್ವತ್ಥಾಮನು ಇರಲಿಲ್ಲ.

ಪಕ್ಕದ ಆಶ್ರಮದಲ್ಲಿದ್ದ ಬಾಲಕರೊಡನೆ ಸೇರಿ ಆಡುತ್ತಿದ್ದುದು ಕಾಣಿಸಿತು. ಅವನನ್ನು ಕರೆತರಲು ಹೋದೆನು. ಮಕ್ಕಳೆಲ್ಲರೂ ನಗುತ್ತಾ ಕೇಕೆಹಾಕಿಕೊಂಡು ಕುಣಿಯುತ್ತಿದ್ದರು. ವಿಷಯವೇನೆಂಬುದನ್ನು ತಿಳಿಯುವ ಕುತೂಹಲದಿಂದ ಪಕ್ಕದಲ್ಲಿದ್ದ ಪೊದೆಯ ಮರೆಯಲ್ಲಿ ಕುಳಿತು ಎಲ್ಲವನ್ನೂ ನೋಡುತ್ತಿದ್ದೆನು. 'ಎಷ್ಟು ಬೇಕಾದರೂ ಕುಡಿ'–ಎಂದು ಹೇಳುತ್ತಾ ಬಾಲನೊಬ್ಬನು ಅಶ್ವತ್ಥಾಮನಿಟ್ಟುಕೊಂಡಿದ್ದ ಪಾತ್ರೆಗೆ ಅಕ್ಕಿಯ ಹಿಟ್ಟನ್ನು ಹಾಕಿ ಕದರಿದ ಬಿಳುಪಾದ ನೀರನ್ನು ಸುರಿದನು. ಅದನ್ನು ಗಟ-ಗಟನೆ ಕುಡಿಯುತ್ತಾ ಅಶ್ವತ್ಥಾಮನು–'ಇಂದು ಹಾಲು ಕುಡಿದೆನು. ಈಗ ತಂದೆಯು ಬಂದೊಡನೆಯೇ ಹೇಳಿಬಿಡುವೆನು'–ಎಂದು ಹಾಡಿಕೊಂಡು ಕುಣಿಯಲು ಮೊದಲಿಟ್ಟನು. ಹೀಗೆ ಜೊತೆಗಾರರ ಹಾಸ್ಯಕ್ಕೆ ಗುರಿಯಾದ ಮಗನನ್ನು ನೋಡಿ ನನ್ನ ಮನಸ್ಸಿಗೆ ಬಹಳ ನೋವಾಯಿತು.

**ದ್ರೋಣಂ ಧಿಗಸ್ತ್ವಧನಿನಂ ಯೋ ಧನಂ ನಾಧಿಗಚ್ಛತಿ ॥೫೬॥**

'ಐಶ್ವರ್ಯವನ್ನು ಸಂಪಾದಿಸದಿರುವ ಧನಹೀನನಾದ ದ್ರೋಣನಿಗೆ ಧಿಕ್ಕಾರವಿರಲಿ'–ಎಂದು ನನ್ನನ್ನೇ ಹಳಿದುಕೊಂಡೆನು.

ಆ ಬಾಲಕರು ನನ್ನ ಪುತ್ರನಿಗೆ ಹಾಲೆಂದು ಹೇಳಿ ಅಕ್ಕಿಯ ಹಿಟ್ಟಿನ ನೀರನ್ನು ಕುಡಿಸಿದ ಮಾತ್ರದಿಂದಲೇ ಸುಮ್ಮನಾಗಲಿಲ್ಲ. ನನ್ನ ಪುತ್ರನನ್ನು ಪರಿಹಾಸ್ಯಮಾಡಿ, ನನ್ನನ್ನೂ ತೆಗಳಿದರು.

**ಪಿಷ್ಟೋದಕಂ ಸುತೋ ಯಸ್ಯ ಪೀತ್ವಾ ಕ್ಷೀರಸ್ಯ ತೃಷ್ಣಯಾ ।**
**ನೃತ್ಯತಿ ಸ್ಮ ಮುದಾವಿಷ್ಟಃ ಕ್ಷೀರಂ ಪೀತಂ ಮಯಾಪ್ಯುತ ॥೫೭॥**

'ದ್ರೋಣರ ಮಗನಾದ ಅಶ್ವತ್ಥಾಮನು ಹಾಲನ್ನು ಕುಡಿಯಲು ಆಸೆಪಟ್ಟು, ಹಿಟ್ಟು ಕಲೆಸಿ ಬೆಳ್ಳಗಿರುವ ನೀರನ್ನೇ ಕುಡಿದು ಸಂತೋಷಭರಿತನಾಗಿ 'ನಾನಿಂದು ಹಾಲನ್ನು ಕುಡಿದುಬಿಟ್ಟೆನು'–ಎಂದು ಹೇಳಿಕೊಂಡು ಕುಣಿದಾಡುತ್ತಿದ್ದಾನೆ'–ಎಂದು ಅವರು ಹೇಳಿಕೊಂಡು ಗಹಗಹಿಸಿ ನಗುತ್ತಿದ್ದರು. ಹೀಗೆಲ್ಲಾ ಹೀಯಾಳಿಸಿ ಮಾತನಾಡುತ್ತಿದ್ದ ಅವರ ಮಾತುಗಳನ್ನು ಕೇಳಿ ನನ್ನ ಮನಸ್ಸು ಅತ್ಯಂತವಾಗಿ ಪ್ರಕ್ಷುಬ್ಧವಾಯಿತು. ಬಾಲಕರು ಹೇಳುತ್ತಿದ್ದುದೆಲ್ಲವೂ ನಿಜವೆನಿಸಿತು. ಪೊದೆಯ ಮರೆಯಿಂದ ಹೊರಗೆ ಬಂದು

ಯಾರೊಡನೆಯೂ ಏನನ್ನೂ ಹೇಳದೇ ಅಶ್ವತ್ಥಾಮನ ಕೈಹಿಡಿದು ಆಶ್ರಮಕ್ಕೆ ಹೊರಟುಹೋದೆನು.

ನಿಜ! ಧನಾರ್ಜನೆಯನ್ನು ಮಾಡಬೇಕು. ಹೇಗೆ ಮಾಡುವುದು? ನಾನು ಯಾವ ದೇಶದಲ್ಲಿಯಾದರೂ ಧನುರ್ವಿದ್ಯೆಗೆ ಆಚಾರ್ಯನಾಗಲು ಒಪ್ಪಿದರೆ ಯಥೇಚ್ಛವಾಗಿ ಹಣವು ಸಿಕ್ಕುವುದು. ಆದರೆ ಒಬ್ಬ ರಾಜನ ಆಶ್ರಯ ದಲ್ಲಿರಬೇಕಾಗುವುದು. ಪರಾಶ್ರಯದಿಂದ ಧನಗಳಿಸುವುದು ಮಾತ್ರ ಈ ದ್ರೋಣನಿಂದ ಸಾಧ್ಯವೇ ಇಲ್ಲ. ನನ್ನನ್ನು ದರಿದ್ರನೆಂದು ಎಲ್ಲರೂ ಧಿಕ್ಕರಿಸಲಿ. ನಾನು ಆಜೀವಪರ್ಯಂತವಾಗಿ ದರಿದ್ರನಾಗಿಯೇ ಇದ್ದರೂ ಚಿಂತೆಯಿಲ್ಲ. ಒಬ್ಬನಿಗೆ ಅಡಿಯಾಳಾಗಿದ್ದು ಮಾತ್ರ ಐಶ್ವರ್ಯವನ್ನು ಸಂಪಾದಿಸಲಾರೆನು.

**ಪರೋಪಸೇವಾಂ ಪಾಪಿಷ್ಠಾಂ ನ ಕುರ್ಯಾಂ ಧನೇಪ್ಸಯಾ ॥**

ಹಣಕ್ಕಾಗಿ ಪಾಪಭೂಯಿಷ್ಠವಾದ ಪರೋಪಸೇವೆಯನ್ನು ಎಂದಿಗೂ ಮಾಡಲಾರೆನು.

ಆದರೆ ಬೇರಾವ ಮಾರ್ಗವಿದೆ?

ಪಾಂಚಾಲನ ಹಿಂದಿನ ಮಾತುಗಳೆಲ್ಲವೂ ನನ್ನ ಕಿವಿಯಲ್ಲಿ ಪ್ರತಿಧ್ವನಿತ ವಾದುವು. ಅಂದಿನ ಮೈತ್ರಿಯ ಚಿತ್ರಗಳೂ ಕಣ್ಮುಂದೆ ಸುಳಿದುವು. ಒಡನೆಯೇ ಪತ್ನೀ-ಪುತ್ರಸಮೇತನಾಗಿ ಪಾಂಚಾಲದೇಶಕ್ಕೆ ಪ್ರಯಾಣಮಾಡಿದೆನು. ಹಾದಿಯಲ್ಲಿ ನಡೆದುಹೋಗುತ್ತಿರುವಾಗಲೇ ದ್ರುಪದನು ಪಾಂಚಾಲ ರಾಜನಾಗಿರುವನೆಂಬ ಸುವಾರ್ತೆಯೂ ತಿಳಿಯಿತು. ನನ್ನ ಅದೃಷ್ಟಕ್ಕೆ ಪಾರವೇ ಇಲ್ಲವೆಂದು ಭಾವಿಸಿದೆನು.

ಹತ್ತಾರು ಯೋಜನಗಳನ್ನು ನಡೆದರೂ ಆಯಾಸದ ಅರಿವು ನನ ಗುಂಟಾಗಲಿಲ್ಲ. ಆನಂದಾಧಿಕ್ಯದಿಂದ ಅರಮನೆಯನ್ನು ಸೇರಿ, ರತ್ನಸಿಂಹಾಸನ ದಲ್ಲಿ ಕುಳಿತಿದ್ದ ನೆಚ್ಚಿನ ಗೆಳೆಯನನ್ನು–"ನರಶ್ರೇಷ್ಠನೇ! ನನ್ನನ್ನು ನಿನ್ನ ಮಿತ್ರನೆಂದು ತಿಳಿ"–ಎಂದು ಹೇಳುತ್ತಾ ಮಿತ್ರಭಾವದಿಂದಲೇ ದ್ರುಪದನ ಬಳಿಗೆ ಹೋದೆನು.

ಆದರೆ ಆ ದುರಭಿಮಾನಿಯು ತುಂಬಿದ ಮಹಾಸಭೆಯಲ್ಲಿ ಅಗಾಧ ಪ್ರೇಮದಿಂದ ನಾನು 'ಮಿತ್ರ' ಎಂದು ಕರೆದುದನ್ನೂ ಅಪಮಾನವಾಯಿ

ತೆಂದೇ ಭಾವಿಸಿದನು. ಅವನು ನನ್ನನ್ನು ನೀಚಪುರುಷನಿಗೆ ಸಮಾನನೆಂದೇ ಭಾವಿಸಿ ಗಹಗಹಿಸಿ ನಗುತ್ತಾ ಹೇಳಿದನು :

**ಅಕೃತೇಯಂ ತವ ಪ್ರಜ್ಞಾ ಬ್ರಹ್ಮನ್ನಾತಿಸಮಞ್ಜಸಾ ॥೬೪॥**

**ಯದಾತ್ಥ ಮಾಂ ತ್ವಂ ಪ್ರಸಭಂ ಸಖಾ ತೇಽಹಮಿತಿ ದ್ವಿಜ ।**
**ಸಂಗತಾನೀಹ ಜೀರ್ಯನ್ತಿ ಕಾಲೇನ ಪರಿಜೀರ್ಯತಃ ॥೬೫॥**

**ಸೌಹೃದಂ ಮೇ ತ್ವಯಾ ಹ್ಯಾಸೀತ್ಪೂರ್ವಂ ಸಾಮರ್ಥ್ಯಬನ್ಧನಮ್ ।**
**ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ ॥೬೬॥**

**ಸಾಮ್ಯಾದ್ಧಿ ಸಖ್ಯಂ ಭವತಿ ವೈಷಮ್ಯಾನ್ನೋಪಪದ್ಯತೇ ।**
**ನ ಸಖ್ಯಮಜರಂ ಲೋಕೇ ವಿದ್ಯತೇ ಜಾತು ಕಸ್ಯಚಿತ್ ॥೬೭॥**

"ಬ್ರಾಹ್ಮಣ! ನಿನ್ನ ಬುದ್ಧಿಯು ಹೆಚ್ಚು ಅಸಂಗತವೂ ಅಶುದ್ಧವೂ ಆಗಿದೆ. ಚಾಪಲ್ಯದಿಂದ ನೀನು ನನ್ನನ್ನು ಕುರಿತು 'ನಾನು ನಿನ್ನ ಸಖನು'– ಎಂದು ಹೇಳಿದೆಯಲ್ಲವೇ? ಮನುಷ್ಯನು ಜೀರ್ಣನಾಗಿ (ವೃದ್ಧನಾಗಿ) ಹೋಗುವಂತೆ ಕಾಲಕ್ರಮದಲ್ಲಿ ಮೈತ್ರಿಯೂ ಜೀರ್ಣವಾಗಿ ಹೋಗುತ್ತದೆ. ಹಿಂದೆ ಗುರುಕುಲದಲ್ಲಿದ್ದಾಗ ಇದ್ದ ಮೈತ್ರಿಯು ಈಗಿಲ್ಲ. ಈಗ ನಮ್ಮಿಬ್ಬರಿಗೂ ಅಜ-ಗಜಾಂತರ ವ್ಯತ್ಯಾಸವಿದೆ. ಅದನ್ನು ನೀನೇ ಮನಗಾಣಬಹುದಾಗಿದೆ.

ಶ್ರೋತ್ರಿಯನಿಗೂ ಅಶ್ರೋತ್ರಿಯನಿಗೂ, ಮಹಾರಥನಿಗೂ ಕಾಲಾಳಿಗೂ ಮಿತ್ರತ್ವವಿರಲಾರದು. ಐಶ್ವರ್ಯ, ವಿದ್ಯೆ, ಸ್ಥಾನ-ಮಾನಗಳು–ಈ ಎಲ್ಲದರಲ್ಲಿಯೂ ಸಾಮ್ಯವಿದ್ದರೆ ಮಾತ್ರವೇ ಪರಸ್ಪರಮೈತ್ರಿಯು ಬೆಳೆಯುತ್ತದೆ. ಅಸಮಾನತೆಯಿದ್ದರೆ ಮಿತ್ರತ್ವವು ಉಂಟಾಗುವುದಿಲ್ಲ. ಮೇಲಾಗಿ ಮಿತ್ರತ್ವವು ಯಾವನ ಹೃದಯದಲ್ಲಿಯೂ, ಯಾವೊಬ್ಬನ ಮೇಲೆಯೂ ಶಾಶ್ವತವಾಗಿ ಉಳಿಯಲಾರದು.

**ಕಾಲೋ ವೈನಂ ವಿಹರತಿ ಕ್ರೋಧೋ ವೈನಂ ಹರತ್ಯುತ ।**
**ಮೈವಂ ಜೀರ್ಣಮುಪಾಸ್ಸ್ವ ತ್ವಂ ಸಖ್ಯಂ ಭವತ್ವಪಾಕೃಧಿ ॥೬೮॥**

ಕಾಲ ಮತ್ತು ಕ್ರೋಧಗಳು ಮಿತ್ರತ್ವವನ್ನು ನಾಶಮಾಡುವುವು.

ಆದುದರಿಂದ ಕಳೆದುಹೋದ ಮಿತ್ರತ್ವದಲ್ಲಿ ಭರವಸೆಯನ್ನಿಡಬೇಡ. 'ನಾವಿಬ್ಬರೂ ಮಿತ್ರರಾಗಿದ್ದೆವು' ಎಂಬ ಭಾವನೆಯನ್ನು ನಿನ್ನ ಹೃದಯದಿಂದ ದೂರೀಕರಿಸು.

**ಆಸೀತ್ಸಖ್ಯಂ ದ್ವಿಜಶ್ರೇಷ್ಠ ತ್ವಯಾ ಮೇಽರ್ಥನಿಬನ್ಧನಮ್ ।**

ಗುರುಕುಲದಲ್ಲಿದ್ದಾಗ ಪರಸ್ಪರ ಪ್ರಯೋಜನವನ್ನು ಅವಲಂಬಿಸಿ ನಿನ್ನೊಡನೆ ಮೈತ್ರಿಯಿದ್ದಿತು. (ಆಟವಾಡಲು, ಪಾಠ ಓದಲು, ಶಸ್ತ್ರಾಭ್ಯಾಸ ಮಾಡಲು ನಿನ್ನ ಜೊತೆಯು ನನಗೂ ನನ್ನ ಜೊತೆಯು ನಿನಗೂ ಬೇಕಾಗಿದ್ದಿತು.)

**ನ ಹ್ಯನಾಢ್ಯಃ ಸಖಾಢ್ಯಸ್ಯ ನಾವಿದ್ವಾನ್ವಿದುಷಃ ಸಖಾ ।**
**ನ ಶೂರಸ್ಯ ಸಖಾ ಕ್ಲೀಬಃ ಸಖಿಪೂರ್ವಂ ಕಿಮಿಷ್ಯತೇ ॥೬೯॥**

ಆಢ್ಯನಲ್ಲದವನು ಧನಿಕನಿಗೆ ಸ್ನೇಹಿತನಾಗುವುದಿಲ್ಲ. ವಿದ್ವಾಂಸನಿಗೂ, ದಡ್ಡನಿಗೂ, ಶೂರನಿಗೂ-ಹೇಡಿಗೂ ಮೈತ್ರಿಯಿರುವುದಿಲ್ಲ. ಹೀಗಿರುವಾಗ ಹಿಂದಿನ ಮೈತ್ರಿಯ ಮೇಲೆ ಭರವಸೆಯನ್ನೇಕಿಡುವೆ?

**ನ ಹಿ ರಾಜ್ಞಾಮುದೀರ್ಣಾನಾಮೇವಮ್ಭೂತೈರ್ನರೈಃ ಕ್ವಚಿತ್ ।**
**ಸಖ್ಯಂ ಭವತಿ ಮನ್ದಾತ್ಮನ್ ಶ್ರಿಯಾಹೀನೈರ್ಧನಚ್ಯುತೈಃ ॥೭೦॥**

ಮಂದಬುದ್ಧಿಯವನೇ! ಶ್ರೇಷ್ಠರಾದ ರಾಜರು ನಿನ್ನಂತಹ ನಿರ್ಧನರೊಡನೆ, ಶ್ರೀಯಿಂದ ವಿಹೀನರಾಗಿರುವವರೊಡನೆ ಖಂಡಿತವಾಗಿಯೂ ಮೈತ್ರಿಯನ್ನು ಬೆಳೆಸುವುದಿಲ್ಲ. ನಾನು ಹಿಂದೆ ಹೇಳಿದಂತೆ ಅಶ್ರೋತ್ರಿಯನು ಶ್ರೋತ್ರಿಯನ, ರಥಿಕನು ರಥಿಕನಲ್ಲದವನ, ರಾಜನು ರಾಜನಲ್ಲದವನ ಸ್ನೇಹವನ್ನೆಂದಿಗೂ ಮಾಡುವುದಿಲ್ಲ. ರಾಜ್ಯದ ಸಲುವಾಗಿ ನಿನ್ನೊಡನೆ ನಾನು ಮಾಡಿದ ಪ್ರತಿಜ್ಞೆಯ ಸ್ಮರಣೆಯು ನನಗಿರುವುದಿಲ್ಲ"–ಎಂದು ದ್ರುಪದನು ಸ್ಪಷ್ಟವಾಗಿ ಹೇಳಿಬಿಟ್ಟನು.

"ರಾಜ್ಯವನ್ನು ಕೊಡದಿದ್ದರೂ, ಮೈತ್ರಿಯಿಂದಿರದಿದ್ದರೂ ಚಿಂತೆಯಿಲ್ಲ. ನಿಮ್ಮಂತಹ ಧನುರ್ವೇದಪಾರಂಗತರನ್ನು ತನ್ನ ದೇಶದಲ್ಲಿರುವಂತೆಯಾದರೂ ಪ್ರಾರ್ಥಿಸಿಕೊಳ್ಳಲಿಲ್ಲವೇ?"–ಎಂಬ ಭೀಷ್ಮನ ಮಾತಿಗೆ ದ್ರೋಣರು–

“ಒಂದು ರಾತ್ರಿ ತಂಗಲು ಜಾಗವನ್ನೂ, ಒಂದು ಹೊತ್ತಿನ ಊಟವನ್ನೂ ಕೊಡಲು ದ್ರುಪದಮಹಾರಾಜನು ಉದಾರತೆಯಿಂದ ಒಪ್ಪಿದನು.

ಆ ಮಾತನ್ನು ಕೇಳಿದೊಡನೆಯೇ ಅಲ್ಲಿ ಅರ್ಧಕ್ಷಣವೂ ನಿಲ್ಲದೇ ಪತ್ನಿಯೊಡನೆಯೂ ಮಗನೊಡನೆಯೂ ಅಲ್ಲಿಂದ ಹೊರಟುಬಿಟ್ಟೆನು. ಶೀಘ್ರವೇ ನೆರವೇರಿಸಲಿರುವ ( ಅವನಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಯೇ ತೀರುವೆನೆಂಬ ) ಆ ಪ್ರತಿಜ್ಞೆಯನ್ನು ನೆನೆಯುತ್ತಾ, ಕುಶಲರಾದ ವಿದ್ಯಾರ್ಥಿಗಳನ್ನು ಅರಸುತ್ತಾ ಹಾಸ್ತಿನಪುರಕ್ಕೆ ಬಂದೆನು. ರಾಜಕುಮಾರರಿಗೆ ಧನುರ್ವಿದ್ಯೆಯನ್ನು ಅಭ್ಯಾಸಮಾಡಿಸಲು ನೀನು ಧನುರ್ವಿದ್ಯಾಪ್ರವೀಣರನ್ನು ಹುಡುಕುತ್ತಿರುವೆಯೆಂಬ ವಿಷಯವನ್ನೂ ತಿಳಿದೆನು. ಈಗ ನಾನೇನು ಮಾಡಬೇಕಾಗಿದೆ?–ಎಂಬುದನ್ನು ಒಡನೆಯೇ ಹೇಳು, ಭೀಷ್ಮ!”

“ಆಚಾರ್ಯರೇ! ಇನ್ನು ಮುಂದೆ ಕುರುರಾಜರು ನಿಮ್ಮ ಅಧೀನರಾಗಿರುವರು. ಧನುಸ್ಸನ್ನು ಹೊರತೆಗೆದು, ಹೆದೆಯೇರಿಸಿ, ಆ ಮಹಾವಿದ್ಯೆಯನ್ನು ಕುರುರಾಜಕುಮಾರರಿಗೆ ಬೋಧಿಸಿರಿ. ಕುರುರಾಜ್ಯದಲ್ಲಿರುವ ಸಕಲೈಶ್ವರ್ಯವೂ ನಿಮ್ಮದು. ನಿಮ್ಮನ್ನು ಸಕಲರೂ ಪೂಜಿಸುವರು. ನಿಮ್ಮ ಹೃದಯದಲ್ಲಿರುವ ಇಚ್ಛೆಯೂ ಒಡನೆಯೇ ಪೂರ್ಣವಾಗುವುದು. ನೀವು ನಮಗೆ ಸಿಕ್ಕಿರುವುದು ನಿಶ್ಚಯವಾಗಿಯೂ ಮಹಾಪುಣ್ಯವೇ ಸರಿ. ನೀವು ನನ್ನ ವಿಷಯದಲ್ಲಿಟ್ಟಿರುವ ಅಭಿಮಾನಕ್ಕೆ ನಾನು ಚಿರಋಣಿಯಾಗಿರುವೆನು. ಇಂದು ನಿಮ್ಮನ್ನು ಪಡೆದ ನಾನು ನಿಶ್ಚಯವಾಗಿಯೂ ಧನ್ಯನು. ನಾನು ಮಾತ್ರವಲ್ಲ; ಕುರುವಂಶವೂ, ಕುರುದೇಶವೂ ಧನ್ಯವಾಯಿತು.” ಹೀಗೆಂದು ಹೇಳಿ ಭೀಷ್ಮನು ದ್ರೋಣರನ್ನು ಸಂತೈಸಿದನು.

ನೂರಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.

## ದ್ರೋಣರಲ್ಲಿ ರಾಜಕುಮಾರರ ವಿದ್ಯಾಭ್ಯಾಸ: ಏಕಲವ್ಯನ ಗುರುಭಕ್ತಿ: ಶಿಷ್ಯರ ಪರೀಕ್ಷೆ

ವೈಶಂಪಾಯನರು ಹೇಳುತ್ತಾರೆ :

**ತತಃ ಸಮ್ಪೂಜಿತೋ ದ್ರೋಣೋ ಭೀಷ್ಮೇಣ ದ್ವಿಪದಾಂ ವರಃ ।**
**ವಿಶಶ್ರಾಮ ಮಹಾತೇಜಾಃ ಪೂಜಿತಃ ಕುರುವೇಶ್ಮನಿ ॥೧॥**



ಜನಮೇಜಯ! ಭೀಷ್ಮನು ಪುರುಷಶ್ರೇಷ್ಠರಾದ ದ್ರೋಣರನ್ನು ಯಥಾ ಯೋಗ್ಯವಾಗಿ ಸತ್ಕರಿಸಿದನಂತರದಲ್ಲಿ ದ್ರೋಣರು ಸ್ವಲ್ಪಕಾಲ ಕೌರವರ ಅರಮನೆಯಲ್ಲಿಯೇ ವಿಶ್ರಾಂತಿಯನ್ನು ಪಡೆದರು. ಅನಂತರದಲ್ಲಿ ಸಕಲ

ಸಂಭಾರಗಳಿಂದಲೂ ತುಂಬಿದ್ದ ಸೌಧವೊಂದನ್ನು ದ್ರೋಣರಿಗೆ ಬಿಟ್ಟುಕೊಡ ಲಾಯಿತು. ಮಹಾಧನುಷ್ಮಂತನಾದ ಭೀಷ್ಮನು ರಾಜಕುಮಾರರಿಂದ ಕೂಡಿ ದವನಾಗಿ ಒಂದು ಶುಭಮುಹೂರ್ತದಲ್ಲಿ ದ್ರೋಣರಲ್ಲಿಗೆ ಬಂದು– 'ಇವರೆಲ್ಲರನ್ನೂ ಶಿಷ್ಯರನ್ನಾಗಿ ಪರಿಗ್ರಹಿಸಿರಿ' – ಎಂದು ವಿನಯಪೂರ್ವಕವಾಗಿ ಕೇಳಿಕೊಂಡನು. ಗುರುದಕ್ಷಿಣಾರೂಪವಾಗಿ ದ್ರೋಣರಿಗೆ ಯಥೇಚ್ಛವಾಗಿ ದ್ರವ್ಯವೂ ಕೊಡಲ್ಪಟ್ಟಿತು. ದ್ರೋಣರು ಸುಪ್ರೀತರಾಗಿ 'ತಥಾಸ್ತು' ಎಂದು ಹೇಳಿ, ಕೌರವ-ಪಾಂಡವರನ್ನು ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿದರು. ಶುಭ ಮುಹೂರ್ತದಲ್ಲಿ ಪಾಠ-ಪ್ರವಚನಗಳೂ ಪ್ರಾರಂಭವಾದುವು.

ಒಂದಾನೊಂದು ದಿನ ಯಥಾವಿಧಿಯಾಗಿ ಶಿಷ್ಯರೆಲ್ಲರೂ ಗುರುಗಳ ಮನೆಗೆ ಬಂದು, ಆಚಾರ್ಯರಿಗೆ ಅಭಿವಾದನಮಾಡಿ ಕುಳಿತರು. ಏಕಾಕಿ ಗಳಾಗಿ ಕುಳಿತಿದ್ದ ದ್ರೋಣರು ಏನನ್ನೋ ಯೋಚಿಸುತ್ತಿರುವ ಮುಖಭಾವ ದಿಂದ ಕೂಡಿದ್ದರು. ಅಭಿವಾದನಮಾಡಿ ಕುಳಿತಿದ್ದ ಶಿಷ್ಯರನ್ನು ಕುರಿತು ದ್ರೋಣರು ಹೇಳಿದರು :

**ಕಾರ್ಯಂ ಮೇ ಕಾಂಕ್ಷಿತಂ ಕಿಂಚಿದ್ಧೃದಿ ಸಂಪರಿವರ್ತತೇ ।**
**ಕೃತಾಸ್ತ್ರೈಸ್ತತ್ಪ್ರದೇಯಂ ಮೇ ತದೇತದ್ವದತಾನಘಾಃ ॥೬॥**

"ರಾಜಕುಮಾರರೇ! ನನ್ನ ಮನಸ್ಸಿನಲ್ಲಿ ಒಂದು ಪ್ರಬಲವಾದ ಆಕಾಂಕ್ಷೆಯಿದೆ. ಅದನ್ನು ಪೂರ್ಣಮಾಡಲು ಧನುರ್ವಿದ್ಯೆಯನ್ನು ನನ್ನಿಂದ ಕಲಿತು ನೈಪುಣ್ಯವನ್ನು ಪಡೆಯುವ ನಿಮ್ಮಿಂದ ಮಾತ್ರವೇ ಸಾಧ್ಯವಾಗುವುದು. ಆದುದರಿಂದ ಧನುರ್ವಿದ್ಯಾಭ್ಯಾಸದಲ್ಲಿ ನೈಪುಣ್ಯವು ಬಂದೊಡನೆಯೇ ನನ್ನ ಮನಸ್ಸಿನ ಆಕಾಂಕ್ಷೆಯನ್ನು ನೆರವೇರಿಸಿಕೊಡುವೆವೆಂದು ನೀವೀಗಲೇ ಮಾತು ಕೊಡಬೇಕು."

ದ್ರೋಣರ ಮಾತುಗಳನ್ನು ಕೇಳಿ ಕೌರವರಾಜಕುಮಾರರೆಲ್ಲರೂ ಮೌನವಾಗಿಯೇ ಕುಳಿತಿದ್ದರು.

ರಾಜಕುಮಾರರ ಸಮೂಹದಿಂದ ಅರ್ಜುನನು ಮಾತ್ರವೇ ಮೇಲೆದ್ದು ಆಚಾರ್ಯರಿಗೆ ನಮಸ್ಕರಿಸಿ–"ಆಚಾರ್ಯರ ಮನಸ್ಸಿನ ಆಕಾಂಕ್ಷೆಯು ಎಷ್ಟೇ

ದುಸ್ಸಾಧ್ಯವಾಗಿದ್ದರೂ ನಾನದನ್ನು ಪೂರ್ಣಮಾಡುವೆನು. ಇದು ನನ್ನ ಪ್ರತಿಜ್ಞೆ ಮತ್ತು ಪ್ರಮಾಣವಚನ"–ಎಂದು ಅಸ್ಖಲಿತವಾಣಿಯಿಂದ ನುಡಿದನು.

ದ್ರೋಣರಿಗೆ ಮಹಾನಂದವಾಯಿತು. ಅರ್ಜುನನನ್ನು ಬಾಚಿ ತಬ್ಬಿ, ನಡುನೆತ್ತಿಯನ್ನು ಆಘ್ರಾಣಿಸಿ, ಆನಂದಬಾಷ್ಪಗಳಿಂದ ಅಭಿಷೇಚಿಸಿದರು. ಆದರೆ ತಮ್ಮ ಮನಸ್ಸಿನ ಆಕಾಂಕ್ಷೆಯು ಏನೆಂಬುದನ್ನು ಹೇಳಲಿಲ್ಲ ; ಅರ್ಜುನನು ಕೇಳಲೂ ಇಲ್ಲ.

ದ್ರೋಣರು ಪಾಂಡವ-ಕೌರವರಾಜಕುಮಾರರಿಗೆ ಅನೇಕವಿಧವಾದ ದಿವ್ಯಾಸ್ತ್ರಗಳನ್ನೂ ಮಾನವಾಸ್ತ್ರಗಳನ್ನೂ ಉಪದೇಶಿಸಿದರು. ಅವರ ಧನುರ್ವಿದ್ಯಾಕೌಶಲದ ಕೀರ್ತಿಯು ದೇಶ-ವಿದೇಶಗಳಲ್ಲಿಯೂ ವ್ಯಾಪಿಸಿತು. ಆ ಸಮಯದಲ್ಲಿ ಇತರ ದೇಶಗಳ ರಾಜಪುತ್ರರೂ ಅಸ್ತ್ರವಿದ್ಯಾಭ್ಯಾಸಕ್ಕಾಗಿ ದ್ವಿಜಶ್ರೇಷ್ಠರಾದ ದ್ರೋಣರ ಬಳಿಗೆ ಆಗಮಿಸಿದರು. ಅಂಧಕ-ವೃಷ್ಣಿವಂಶಗಳ ಮತ್ತು ನಾನಾದೇಶಗಳ ರಾಜಕುಮಾರರೂ ವಿದ್ಯಾಭ್ಯಾಸಕ್ಕಾಗಿ ದ್ರೋಣರಲ್ಲಿಗೇ ಬಂದರು. ರಾಧೇಯನೂ ಬಂದನು. ಕರ್ಣನು ಬಂದು ಸೇರಿದ ದಿನದಿಂದ ರಾಜಕುಮಾರರಲ್ಲಿ ಪರಸ್ಪರ ದ್ವೇಷಾಸೂಯೆಗಳು ಇನ್ನೂ ಹೆಚ್ಚಲು ಕಾರಣವಾಯಿತು. ಕರ್ಣನು ಬರುವವರೆಗೆ ಅರ್ಜುನನಿಗೆ ಸಮನಾಗಿ ನಿಲ್ಲುವವನೇ ಯಾರೂ ಇರಲಿಲ್ಲ. ಕರ್ಣನೊಬ್ಬನು ಮಾತ್ರ ಅರ್ಜುನನೊಡನೆ ಅನೇಕ ಶಸ್ತ್ರಾಸ್ತ್ರವಿದ್ಯೆಗಳಲ್ಲಿ ಸ್ಪರ್ಧಿಸುತ್ತಿದ್ದನು. ಕರ್ಣನು ದುರ್ಯೋಧನನೊಡನೆ ಸೇರಿಕೊಂಡು ಪಾಂಡವರನ್ನು ಸಮಯ ಸಿಕ್ಕಿದಾಗಲೆಲ್ಲಾ ಅಪಮಾನಗೊಳಿಸುತ್ತಿದ್ದನು. ಅದರಿಂದ ದುರ್ಯೋಧನನಿಗೆ ಹೆಚ್ಚಾದ ಆನಂದವುಂಟಾಗುತ್ತಿತ್ತು. ಅರ್ಜುನನು ಯಾವಾಗಲೂ ಗುರುಗಳ ಸೇವೆಯಲ್ಲಿಯೇ ನಿರತನಾಗಿರುತ್ತಿದ್ದು, ಅವರ ಉಪದೇಶವನ್ನು ಸಂಪೂರ್ಣವಾಗಿ ಗ್ರಹಿಸಿ, ತನ್ನ ಜೊತೆಯವರೆಲ್ಲರನ್ನೂ ಮೀರಿಸಿಬಿಡುತ್ತಿದ್ದನು. ರಾಜಕುಮಾರರೆಲ್ಲರಿಗೂ ದ್ರೋಣರು ಒಂದೇ ಸಮನಾಗಿ ಧನುರ್ವಿದ್ಯೆಯನ್ನು ಉಪದೇಶಿಸುತ್ತಿದ್ದರೂ ಅರ್ಜುನನ ಬಾಣಪ್ರಯೋಗದ ಕೈಚಳಕವೂ, ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆಯುವ ನೈಪುಣ್ಯವೂ ಮತ್ತಾರಿಗೂ ಇರಲಿಲ್ಲ. ಇಂದ್ರಪುತ್ರನಿಗೆ

ಸಮಾನನಾದವನು ತಮ್ಮ ಶಿಷ್ಯವೃಂದದಲ್ಲಿ ಬೇರೊಬ್ಬನಿಲ್ಲವೆಂದು ದ್ರೋಣರೂ ನಿಶ್ಚಯಿಸಿದರು.

ದ್ರೋಣರು ರಾಜಧಾನಿಯಲ್ಲೇ ಇದ್ದುದರಿಂದ ಶಿಷ್ಯರು ಗುರುಗಳಿಗೆ ಸೌದೆ, ಸಮಿತ್ತು, ಭಿಕ್ಷಾನ್ನ–ಮುಂತಾದುವುಗಳನ್ನು ತರಬೇಕಾದ ಆವಶ್ಯಕತೆಯಿರಲಿಲ್ಲ. ಆದರೂ ಪ್ರತಿಯೊಬ್ಬ ರಾಜಕುಮಾರನೂ ನದಿಯಿಂದ ಒಂದೊಂದು ಕಮಂಡಲುವಿನಲ್ಲಿ ನೀರನ್ನು ತರಬೇಕೆಂದು ದ್ರೋಣರ ಆಜ್ಞೆಯಾಗಿತ್ತು. ಅಶ್ವತ್ಥಾಮನೇ ಆದಿಯಾಗಿ ರಾಜಕುಮಾರರೆಲ್ಲರೂ ನದಿಗೆ ಒಟ್ಟಿಗೆ ನೀರುತರಲು ಹೋಗುತ್ತಿದ್ದರು. ಆದರೆ ಇತರರ ಕಮಂಡಲುಗಳು ತುಂಬುವುದರೊಳಗಾಗಿಯೇ ಅಶ್ವತ್ಥಾಮನು ಜಲಪಾತ್ರೆಯೊಡನೆ ಗುರುಗಳ ಸಮೀಪದಲ್ಲಿರುತ್ತಿದ್ದನು. ಅದರ ಕಾರಣವನ್ನು ಯಾವ ರಾಜಕುಮಾರನೂ ಗಮನಿಸಲೂ ಇಲ್ಲ ; ಅದರ ವಿಷಯವಾಗಿ ಆಲೋಚಿಸಲೂ ಇಲ್ಲ. ಅರ್ಜುನನೊಬ್ಬನಿಗೆ ಮಾತ್ರ ಅದರ ಅರಿವುಂಟಾಯಿತು. ಗುರುಗಳು ಅಶ್ವತ್ಥಾಮನಿಗೆ ಬೇಗ ನೀರು ತುಂಬುವ ಬಾಯಗಲದ ಪಾತ್ರೆಯನ್ನಿತ್ತು ಉಳಿದ ರಾಜಕುಮಾರರಿಗೆ ಸಾವಕಾಶವಾಗಿ ತುಂಬುವ ಕಿರಿದಾದ ಬಾಯುಳ್ಳ ಕಮಂಡಲುಗಳನ್ನು ಕೊಟ್ಟಿದ್ದರು. ಅವೆರಡರ ಪೂರಣದ ಅಂತರವು ಎರಡೇ ಕ್ಷಣಗಳಾದರೂ ಆ ಅಂತರದಲ್ಲಿಯೇ ದ್ರೋಣರು ಮಗನಿಗೆ ಅನೇಕ ಶಸ್ತ್ರಾಸ್ತ್ರಗಳ ರಹಸ್ಯವನ್ನು ಬೋಧಿಸುತ್ತಿದ್ದರು.

ಅರ್ಜುನನು ದ್ರೋಣರ ಇಂಗಿತವನ್ನರಿತು ಮಾತ್ಸರ್ಯಪಡಲಿಲ್ಲ. ತಾನೂ ಸಹ ಅಶ್ವತ್ಥಾಮನೊಡನೆಯೇ ಹೋಗಬೇಕೆಂದು ನಿಶ್ಚಯಿಸಿದನು.

ಅರ್ಜುನನು ನದಿಯ ದಂಡೆಯ ಮೇಲೆ ಕುಳಿತು ಕ್ಷಣಕಾಲ ಯೋಚಿಸಿದನು. ಕೂಡಲೇ ಮನಸ್ಸಿಗೇನೋ ಹೊಳೆಯಿತು. ಆನಂದದಿಂದ ಹೊರಟು ಹೋದನು. ಮರುದಿನ ಎಲ್ಲರೊಡನೆ ಅರ್ಜುನನೂ ನೀರು ತರಲು ಹೊರಟನು. ಎಲ್ಲರೂ ಮುಂದೆ ಹೋದರೂ ಅರ್ಜುನನು ಹಿಂದೆಯೇ ನಿಂತನು. ಕಮಂಡಲುವನ್ನು ಕೆಳಗಿಟ್ಟು ವರುಣಮಂತ್ರವನ್ನು ಪುನಶ್ಚರಣೆಮಾಡಿ ಅಸ್ತ್ರವನ್ನು ಪ್ರಯೋಗಿಸಿದನು. ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಕಮಂಡಲುವು ತುಂಬಿತು. ಅಶ್ವತ್ಥಾಮನೊಡನೆ ಅರ್ಜುನನೂ ತುಂಬಿದ ಕಮಂಡಲು

ವಿನೊಡನೆ ದ್ರೋಣರ ಸಮೀಪಕ್ಕೆ ಬೇಗನೇ ಬಂದನು. ಆ ಕಾರಣದಿಂದ ಪುತ್ರನಿಗೆ ಪ್ರತ್ಯೇಕವಾಗಿ ಧನುರ್ವಿದ್ಯೆಯನ್ನು ಹೇಳಿಕೊಡಲು ಸಾಧ್ಯವಾಗದೇ ಇದ್ದುದರಿಂದ–ದ್ರೋಣಪುತ್ರನಾದ ಅಶ್ವತ್ಥಾಮನಿಗಿಂತಲೂ ಧನುರ್ವಿದ್ಯೆಯ ಉತ್ಕರ್ಷದಲ್ಲಿ ಅರ್ಜುನನು ಪ್ರತ್ಯೇಕವಾಗಿ ಉಳಿಯಲಿಲ್ಲ. ಅವನಿಗೆ ಸರಿ ಸಮಾನನಾಗಿಯೇ ಮುಂದುವರಿದನು. ಅಸ್ತ್ರವಿದ್ಯೆಯಲ್ಲಿ ಶ್ರೇಷ್ಠನಾದ ಅರ್ಜುನನು ಗುರುಗಳ ಸೇವೆಯನ್ನು ಪ್ರಯತ್ನಪೂರ್ವಕವಾಗಿ ವಿಶೇಷ ರೀತಿಯಲ್ಲಿಯೇ ಮಾಡುತ್ತಿದ್ದನು. ಅಸ್ತ್ರಗಳ ಅಭ್ಯಾಸದಲ್ಲಿಯೂ ಅವನಿಗೆ ಹೆಚ್ಚಿನ ಆಸಕ್ತಿಯಿದ್ದಿತು. ಆ ಎಲ್ಲ ಗುಣಗಳಿಂದ ಅರ್ಜುನನು ದ್ರೋಣರಿಗೆ ಅತ್ಯಂತಪ್ರಿಯಶಿಷ್ಯನಾದನು. ದ್ರೋಣರೂ ಅರ್ಜುನನ ಮಂತ್ರಶಕ್ತಿಯ ಸಾಧನೆಯನ್ನೂ, ತೀಕ್ಷ್ಣಬುದ್ಧಿಯನ್ನೂ ಮನಸ್ಸಿನಲ್ಲಿಯೇ ಪ್ರಶಂಸಿಸಿದರು. ಅಂದಿನಿಂದ ಮಗನಿಗೆ ಉಪದೇಶಿಸುತ್ತಿದ್ದ ಅಮೋಘವಾದ ಮಹಾಸ್ತ್ರಗಳನ್ನು ಅರ್ಜುನನಿಗೂ ಉಪದೇಶಿಸತೊಡಗಿದರು.

ಅರ್ಜುನನ ಗುರುಭಕ್ತಿಯೂ, ಧನುರ್ವಿದ್ಯಾಭ್ಯಾಸದ ಆಸಕ್ತಿಯೂ ಅಪಾರವಾಗಿತ್ತು. ಅವನು ಮಾಡುತ್ತಿದ್ದ ಅನವರತವಾದ ಸಾಧನೆಯನ್ನು ಕಂಡು ದ್ರೋಣರ ಮನಸ್ಸಿಗೇನೋ ಹೊಳೆಯಿತು. ಅಡಿಗೆಯವನ ಬಳಿಗೆ ಹೋಗಿ ಹೇಳಿದರು :

**ಅನ್ಧಕಾರೇಽರ್ಜುನಾಯಾನ್ನಂ ನ ದೇಯಂ ತೇ ಕದಾಚನ ।**
**ನ ಚಾಖ್ಯೇಯಮಿದಂ ಚಾಪಿ ಮದ್ವಾಕ್ಯಂ ವಿಜಯೇ ತ್ವಯಾ ॥೨೨॥**

"ಅರ್ಜುನನಿಗೆ ಎಂದೂ ಯಾವಾಗಲೂ ಕತ್ತಲೆಯಲ್ಲಿ ಮಾತ್ರ ಆಹಾರ ವನ್ನು ಬಡಿಸಬಾರದು. ನಾನು ಹೀಗೆ ಹೇಳಿರುವುದನ್ನು ಅರ್ಜುನನಿಗೆ ತಿಳಿಸ ಬಾರದು."

ಅಡಿಗೆಯವನು ಅವರ ಆಜ್ಞೆಯನ್ನು ಯಥಾರೀತಿಯಾಗಿ ಪಾಲಿಸು ತ್ತಿದ್ದನು. ಆದರೆ ಆಕಸ್ಮಿಕವಾಗಿ ಒಂದು ದಿವಸ ಊಟಮಾಡುವಾಗ ಗಾಳಿ ಯಿಂದ ದೀಪವಾರಿಹೋಯಿತು.

**ಭುಙ್ಕ್ತ ಏವ ತು ಕೌನ್ತೇಯೋ ನಾಸ್ಯಾದನ್ಯತ್ರ ವರ್ತತೇ ।**
**ಹಸ್ತಸ್ತೇಜಸ್ವಿನಸ್ತಸ್ಯ ಅನುಗ್ರಹಣಕಾರಣಾತ್ ॥೨೪॥**

**ತದಭ್ಯಾಸಕೃತಂ ಮತ್ವಾ ರಾತ್ರಾವಪಿ ಸ ಪಾಣ್ಡವಃ ।**
**ಯೋಗ್ಯಾಂ ಚಕ್ರೇ ಮಹಾಬಾಹುರ್ಧನುಷಾ ಪಾಣ್ಡುನನ್ದನಃ ॥೨೫॥**

ನಿತ್ಯದಂತೆಯೇ ಅರ್ಜುನನು ಊಟಮಾಡಿ ಮೇಲೆದ್ದನು. ಅಂದು ದೀಪವಾರಿಹೋದುದನ್ನೇ ಕ್ಷಣಕಾಲ ಯೋಚಿಸಿದನು. ದೀಪವಾರಿಹೋದರೂ ಕೈಯ್ಯಿನ ತುತ್ತು ಬಾಯಿಗೆ ಹೋಯಿತೇ ಹೊರತು ಮತ್ತೆಲ್ಲಿಗೂ ಹೋಗಲಿಲ್ಲ. ಇದು ಕೇವಲ ಅಭ್ಯಾಸಬಲವೆನ್ನಿಸಿತು ಅರ್ಜುನನಿಗೆ. ಧನುರ್ವಿದ್ಯಾ ಭ್ಯಾಸವನ್ನೂ ಹೀಗೆಯೇ ಅಭ್ಯಾಸಬಲದಿಂದ ರಾತ್ರಿಯಲ್ಲಿಯೂ ಮಾಡ ಬಾರದೇಕೆ?

ರಾತ್ರಿಯಲ್ಲಿಯೂ ಅರ್ಜುನನ ಧನುರ್ವಿದ್ಯಾಸಾಧನೆಯು ಪ್ರಾರಂಭ ವಾಯಿತು. ಕಾಳರಾತ್ರಿಯಲ್ಲಿಯೂ ಗುರಿಯಿಟ್ಟು ಹೊಡೆಯುವುದರಲ್ಲಿ ನಿಸ್ಸೀಮನಾದನು. ದ್ರೋಣರು ನಡುರಾತ್ರಿಯಲ್ಲಿ ಅರ್ಜುನನ ಧನುಷ್ಟೇಂಕಾರವನ್ನು ಕೇಳಿ ಆನಂದಭರಿತರಾಗಿ, ಅರ್ಜುನನ ಸಮೀಪಕ್ಕೆ ಬಂದು ಬಾಚಿ ತಬ್ಬಿಕೊಂಡು ಹೇಳಿದರು :

**ಪ್ರಯತಿಷ್ಯೇ ತಥಾ ಕರ್ತುಂ ಯಥಾ ನಾನ್ಯೋ ಧನುರ್ಧರಃ ।**
**ತ್ವತ್ಸಮೋ ಭವಿತಾ ಲೋಕೇ ಸತ್ಯಮೇತದ್ಬ್ರವೀಮಿ ತೇ ॥೨೭॥**

"ಮಗು! ನಿನ್ನನ್ನು ನಾನು ಈ ಲೋಕದಲ್ಲಿಯೇ ಧನುರ್ವಿದ್ಯೆಯಲ್ಲಿ ಅದ್ವಿತೀಯನನ್ನಾಗಿ ಮಾಡಲು ಪ್ರಯತ್ನಿಸುವೆನು. ಇದು ಸತ್ಯ."

ಅಂದು ಮೊದಲಾಗಿ ದ್ರೋಣರು ಅರ್ಜುನನನ್ನು ಗಜ-ರಥಾಶ್ವಸಮರ ಗಳಲ್ಲಿಯೂ, ಭೂಯುದ್ಧದಲ್ಲಿಯೂ ನಿಷ್ಣಾತನನ್ನಾಗಿ ಮಾಡಿದರು. ಕೌರವ ರನ್ನು ಗದೆ, ಭರ್ಜಿ, ಈಟಿ-ಮೊದಲಾದುವುಗಳಿಂದ ಮಾಡುವ ದ್ವಂದ್ವ ಯುದ್ಧಗಳಲ್ಲಿ ನಿಷ್ಣಾತರನ್ನಾಗಿ ಮಾಡಿದರು. ಒಂದೇ ಕಾಲದಲ್ಲಿ ಸಾವಿರಾರು ಮಂದಿ ಆಕ್ರಮಣಮಾಡಿದರೂ ಎದುರಿಸಿ ಎಲ್ಲರ ಮೇಲೆಯೂ ಏಕಕಾಲದಲ್ಲಿ ಬಾಣಪ್ರಯೋಗವನ್ನು ಮಾಡುವ ಕುಶಲತೆಯನ್ನೂ ಉಪದೇಶಿಸಿದರು.

ದ್ರೋಣಶಿಷ್ಯರ ಧನುರ್ವಿದ್ಯಾಕೌಶಲವು ಹೆಚ್ಚುತ್ತಿದ್ದಂತೆ ದೇಶದ ನಾನಾಭಾಗಗಳಿಂದ ರಾಜಕುಮಾರರು ದ್ರೋಣರನ್ನು ಆಚಾರ್ಯರನ್ನಾಗಿ ಸ್ವೀಕರಿಸುವ ಆಶಯದಿಂದ ನೂರಾರು ಸಂಖ್ಯೆಯಲ್ಲಿ ಪ್ರತಿದಿನವೂ ಹಾಸ್ತಿನ

ಪುರಕ್ಕೆ ಬರುತ್ತಿದ್ದರು. ಅವರಲ್ಲಿ ನಿಷಾದರಾಜನಾದ ಹಿರಣ್ಯಧನುಷನ ಮಗನಾದ ಏಕಲವ್ಯನೂ ಒಬ್ಬನು. ಆದರೆ ಅವನು ನಿಷಾದನ ಕುಮಾರ. ಪಾಠಶಾಲೆಯು ಕ್ಷತ್ರಿಯರಾಜಕುಮಾರರಿಗೆ ಮಾತ್ರ ನಿಯತವಾಗಿದ್ದಿತು. ಆದ್ದರಿಂದ ದ್ರೋಣರು ನಿಷಾದ ರಾಜಕುಮಾರನನ್ನು ಶಿಷ್ಯನನ್ನಾಗಿ ಪರಿಗ್ರಹಿಸಲು ಇಚ್ಛಿಸಲಿಲ್ಲ.

ಏಕಲವ್ಯನು ನಿರುಪಾಯನಾಗಿ ಹಿಂದಿರುಗಬೇಕಾಯಿತು. ಅವನು ದ್ರೋಣರ ಪಾದಾರವಿಂದಗಳಿಗೆ ನಮಸ್ಕರಿಸಿ ಕಾಡಿಗೆ ಹೊರಟುಹೋದನು.

ಅಲ್ಲಿ ಅವನು ಮಣ್ಣಿನಲ್ಲಿಯೇ ದ್ರೋಣರ ವಿಗ್ರಹವನ್ನು ಮಾಡಿದನು. ಅದನ್ನು ಉಚ್ಚಾಸನದಲ್ಲಿ ಪ್ರತಿಷ್ಠಿಸಿದನು. ಕಾಡಿನಲ್ಲಿಯೇ ಸಿಕ್ಕುವ ಪುಷ್ಪಾದಿಗಳಿಂದ ಗುರುಗಳನ್ನು ಅಲಂಕರಿಸಿ, ಹಣ್ಣುಗಳನ್ನು ನಿವೇದನಮಾಡಿ, ಸಾಷ್ಟಾಂಗವೆರಗಿ, ಧನುರ್ವಿದ್ಯಾಭ್ಯಾಸಕ್ಕೆ ಮೊದಲಿಟ್ಟನು.

ಮಣ್ಣಿನ ಮೂರ್ತಿಯನ್ನೇ ಗುರುಗಳೆಂದು ನಂಬಿ, ಭಯ-ಭಕ್ತಿಗಳಿಂದ ಆರಾಧಿಸಿ, ಧನುರ್ವಿದ್ಯೆಯನ್ನು ಅಭ್ಯಾಸಮಾಡುತ್ತಿದ್ದ ಏಕಲವ್ಯನಿಗೆ ಬಾಣಗಳ ವಿಮೋಕ್ಷಣ-ಆದಾನ-ಸಂಧಾನಗಳಲ್ಲಿ ಪರಿಪೂರ್ಣತೆಯೇ ಉಂಟಾಯಿತು.

ಒಂದು ದಿನ ಕುರುವಂಶದ ರಾಜಕುಮಾರರೆಲರೂ ದ್ರೋಣರ ಅಪ್ಪಣೆ ಯನ್ನು ಪಡೆದು ಕಾಡಿಗೆ ತೆರಳಿದರು. ಅವರ ಜೊತೆಯಲ್ಲಿ ಸೇವಕನೊಬ್ಬನು ಬೇಟೆಗೆ ಬೇಕಾದ ಉಪಕರಣಗಳೊಡನೆ ಒಂದು ನಾಯಿಯನ್ನೂ ಕರೆದು ಕೊಂಡು ಬಂದಿದ್ದನು. ರಾಜಕುಮಾರರು ಕಾಡಿನಲ್ಲಿದ್ದ ನಾನಾಮೃಗಗಳನ್ನು ಬೇಟೆಯಾಡಲು ತೊಡಗಿದರು. ಸೇವಕನು ಕರೆತಂದಿದ್ದ ನಾಯಿಯೂ ಜಿಂಕೆಯೇ ಮೊದಲಾದ ಪ್ರಾಣಿಗಳನ್ನು ಹುಡುಕುತ್ತಾ ಅತ್ತಲಿತ್ತ ಓಡಾಡಿ, ಕಡೆಗೆ ಧನುರ್ವಿದ್ಯೆಯನ್ನು ಅಭ್ಯಸಿಸುತ್ತಿದ್ದ ಏಕಲವ್ಯನನ್ನು ಕಂಡಿತು.

ಕಪ್ಪುಬಣ್ಣದವನಾಗಿದ್ದ, ಜಟಾಧಾರಿಯಾಗಿದ್ದ, ಧೂಳಿನಿಂದ ಮುಚ್ಚಿದ ಅಂಗವುಳ್ಳವನಾಗಿದ್ದ, ಕೃಷ್ಣಾಜಿನವನ್ನುಟ್ಟಿದ್ದ ಏಕಲವ್ಯನನ್ನು ನೋಡಿ ದೊಡನೆಯೇ ಆ ನಾಯಿಯು ಬೊಗಳತೊಡಗಿತು. ಏಕಲವ್ಯನು ನಸುನಗುತ್ತಾ ಅದು ಬಾಯಿ ಮುಚ್ಚುವುದರೊಳಗಾಗಿ ( ನಿಮಿಷಮಾತ್ರ

ದಲ್ಲಿ) ತನ್ನ ಕೈಚಳಕದಿಂದ ಏಳು ಬಾಣಗಳನ್ನು ನಾಯಿಯ ಬಾಯೊಳಕ್ಕೆ ಪ್ರಯೋಗಿಸಿ ಶಬ್ದವಡಗಿಸಿದನು. ಏಕಲವ್ಯನ ಶರಪ್ರಯೋಗದ ವೈಖರಿಯೆಷ್ಟಿತ್ತೆಂದರೆ : ಅವನು ಏಳು ಬಾಣಗಳೂ ನಾಯಿಯು ಬೊಗಳದಿರಲು ಕಾರಣವಾದುವೇ ಹೊರತು ನಾಯಿಗೆ ಯಾವ ವಿಧವಾದ ಪ್ರಾಣಾಪಾಯವೂ ಉಂಟಾಗಲಿಲ್ಲ. ನಾಯಿಯು ಶರಸಮೇತವಾಗಿಯೇ ಪಾಂಡವರಾಜಕುಮಾರರ ಬಳಿಗೆ ಓಡಿಬಂದಿತು. ಶರಪೂರ್ಣವಾದ ಬಾಯಿಂದ ಕೂಡಿದ್ದ ನಾಯಿಯನ್ನು ನೋಡಿ ಪಾಂಡವವೀರರು ಬಹಳವಾಗಿ ವಿಸ್ಮಯಗೊಂಡರು.



ರಾಜಕುಮಾರರೆಲ್ಲರೂ ಸುತ್ತುವರಿದು ನಾಯಿಯನ್ನು ವೀಕ್ಷಿಸಿದರು. ಶರಪ್ರಯೋಗದ ಚಾತುರ್ಯವೂ, ಶಬ್ದವೇಧಿತ್ವವೂ ಅವರಿಗೆ ಅತಿಮಾನುಷವಾಗಿ ಕಂಡಿತು. ತಮಗಾರಿಗೂ ಅಂತಹ ಶರಪ್ರಯೋಗಚಾತುರ್ಯವು

ತಿಳಿಯದೇ ಇದ್ದುದರಿಂದ ಎಲ್ಲರೂ ಲಜ್ಜಾನ್ವಿತರಾಗಿ ನಾಯಿಯ ಕಡೆಗೇ ನೋಡತೊಡಗಿದರು ಮತ್ತು ಹಾಗೆ ಬಾಣಪ್ರಯೋಗಮಾಡಿದ ಮಹಾ ವೀರನನ್ನು ಪ್ರಶಂಸಿಸಿದರು. ಅಂತಹ ಮಹಾನುಭಾವನಾರೆಂಬುದನ್ನು ನೋಡುವ ಕುತೂಹಲದಿಂದ ಕಾಡೆಲ್ಲವನ್ನೂ ಶೋಧಿಸತೊಡಗಿ, ಕಡೆಗೆ ಅನವರತವಾಗಿ ಬಾಣಪ್ರಯೋಗಮಾಡುತ್ತಿದ್ದ ಏಕಲವ್ಯನಿದ್ದೆಡೆಗೆ ಬಂದರು.

ಲಕ್ಷ್ಯದ ಕಡೆಗೇ ಗುರಿಯಿಟ್ಟು ಶರಪ್ರಯೋಗವನ್ನು ಮಾಡುತ್ತಿದ್ದವನ ಗಮನವನ್ನು ತಮ್ಮ ಕಡೆಗೆ ಸೆಳೆಯಲು ರಾಜಕುಮಾರರಿಗೆ ಸ್ವಲ್ಪ ಕಷ್ಟವೇ ಆಯಿತು. ಕೆಲವು ನಿಮಿಷಗಳು ಕಳೆದನಂತರ ಏಕಲವ್ಯನನ್ನು ರಾಜಕುಮಾರರು ಕೇಳಿದರು : 'ನೀನಾರು? ನಿನ್ನ ತಂದೆಯ ಹೆಸರೇನು?'

ಏಕಲವ್ಯನು ಶರವನ್ನು ಧನುಸ್ಸಿಗೆ ಏರಿಸಿಯೇ ರಾಜಕುಮಾರರ ಕಡೆಗೆ ತಿರುಗಿ ಹೇಳಿದನು :

**ನಿಷಾದಾಧಿಪತೇರ್ವೀರಾ ಹಿರಣ್ಯಧನುಷಃ ಸುತಮ್ ।**
**ದ್ರೋಣಶಿಷ್ಯಂ ಚ ಮಾಂ ವಿದ್ಧಿ ಧನುರ್ವೇದಕೃತಶ್ರಮಮ್ ॥೪೫॥**

"ವೀರಾಧಿವೀರರೇ! ನಿಷಾದರಾಜನಾದ ಹಿರಣ್ಯಧನುಷನ ಮಗನು ನಾನು. ನನ್ನನ್ನು ಏಕಲವ್ಯನೆಂದು ಕರೆಯುವರು. ಮಿಗಿಲಾಗಿ ಧನುರ್ವಿದ್ಯೆಗೆ ಆಚಾರ್ಯರೆನಿಸಿದ ಮಹಾಪುರುಷರಾದ ದ್ರೋಣರ ಶಿಷ್ಯನು ನಾನೆಂದು ತಿಳಿಯಿರಿ. ಅವರ ಪಾದಾರವಿಂದಗಳ ಆಶ್ರಯದಲ್ಲಿ ಧನುರ್ವಿದ್ಯೆಯನ್ನು ಅಭ್ಯಸಿಸುತ್ತಿರುವೆನು"–ಎಂದು ಹೇಳಿ ತನ್ನ ಅಭ್ಯಾಸವನ್ನು ಮುಂದು ವರಿಸಿದನು.

ರಾಜಕುಮಾರರೆಲ್ಲರೂ ವಿಸ್ಮಿತರಾಗಿ ಹಸ್ತಿನಾವತಿಗೆ ಹಿಂದಿರುಗಿ, ತಾವು ನೋಡಿದ ಏಕಲವ್ಯನ ಶರಪ್ರಯೋಗದ ಕೈಚಳಕವನ್ನು ಆಚಾರ್ಯ ದ್ರೋಣರಿಗೆ ವಿವರಿಸಿ ಹೇಳಿದರು.

ಈ ಪ್ರಸಂಗದಿಂದ ಅರ್ಜುನನಿಗೆ ಮಾತ್ರ ಮನಸ್ಸಿನಲ್ಲಿ ಹೆಚ್ಚಿನ ಆತಂಕವುಂಟಾಯಿತು. ಅವನು ಏಕಾಂತದಲ್ಲಿ ಗುರುಗಳನ್ನು ಸಂಧಿಸಿ, ಪ್ರೇಮಪೂರ್ವಕವಾಗಿ ಹೇಳಿದನು :

**ತದಾಹಂ ಪರಿರಭ್ಯೈಕಃ ಪ್ರೀತಿಪೂರ್ವಮಿದಂ ವಚಃ ।**
**ಭವತೋಕ್ತೋ ನ ಮೇ ಶಿಷ್ಯಸ್ತ್ವದ್ವಿಶಿಷ್ಟೋ ಭವಿಷ್ಯತಿ ॥೪೮॥**

**ಅಥ ಕಸ್ಮಾನ್ಮದ್ವಿಶಿಷ್ಟೋ ಲೋಕಾದಪಿ ಚ ವೀರ್ಯವಾನ್ ।**
**ಅನ್ಯೋಽಸ್ತಿ ಭವತಃ ಶಿಷ್ಯೋ ನಿಷಾದಾಧಿಪತೇಃ ಸುತಃ ॥೪೯॥**

"ಗುರುದೇವ! ಹಿಂದೊಂದು ದಿನ ತಾವು ನನ್ನೊಬ್ಬನನ್ನೇ ಕರೆದು ಗಾಢವಾಗಿ ಆಲಿಂಗಿಸಿಕೊಂಡು ಪ್ರೇಮಪೂರ್ವಕವಾಗಿ ನನ್ನನ್ನು ಧನುರ್ವಿದ್ಯೆಯಲ್ಲಿ ಅದ್ವಿತೀಯನನ್ನಾಗಿ ಮಾಡುವೆನೆಂದು ಹೇಳಿದ್ದಿರಲ್ಲವೇ? ನಿಮ್ಮ ಮಾತು ನಿಶ್ಚಯವೇ ಆಗಿದ್ದರೆ ನಿಷಾದಪುತ್ರನಾದ ಮತ್ತು ತಮ್ಮ ಶಿಷ್ಯನಾದ ಏಕಲವ್ಯನು ಅಸ್ತ್ರವಿದ್ಯೆಯಲ್ಲಿ ನನಗಿಂತಲೂ ವಿಶಿಷ್ಟನೂ ಲೋಕಕ್ಕೇ ಅದ್ವಿತೀಯನೂ ಹೇಗಾಗುತ್ತಿದ್ದನು?"

ದ್ರೋಣರು ಕ್ಷಣಕಾಲ ಯೋಚಿಸಿದರು. ಕೊನೆಗೆ ಅವರು ಅರ್ಜುನನನ್ನು ಕರೆದುಕೊಂಡು ನಿಷಾದಕುಮಾರನ ಬಳಿಗೆ ಹೋದರು.

ಅಲ್ಲಿ ದ್ರೋಣರು ಏಕಲವ್ಯನನ್ನು ಕಂಡರು. ಶರೀರದ ಮೇಲೆ ಧೂಳು ಮುಚ್ಚಿತ್ತು. ತಲೆಯು ಜಡೆಗಟ್ಟಿತ್ತು. ಚಿಂದಿಬಟ್ಟೆಯನ್ನು ಉಟ್ಟಿದ್ದನು. ಆದರೆ ಏಕಲವ್ಯನಿಗೆ ಇದಾವುದರ ಮೇಲೆಯೂ ಪರಿಜ್ಞಾನವೇ ಇಲ್ಲ. ಧನುಸ್ಸು-ಶರ ಇವೆರಡೇ ಅವನ ನೆಚ್ಚಿನ ವಸ್ತುಗಳು. ಅನವರತವಾಗಿ ಶರಪ್ರಯೋಗವನ್ನು ಮಾಡುತ್ತಿದ್ದನು. ಸರಪಣಿಯಂತೆ ಶರಗಳು ಒಂದರ ಹಿಂದೊಂದು ಅಂಟಿಕೊಂಡೇ ಹೋಗುತ್ತಿದ್ದುವು. ಬತ್ತಳಿಕೆಗೆ ಕೈಹಾಕುವುದು ; ಶರವನ್ನು ತೆಗೆದು ಧನುಸ್ಸಿಗೆ ಜೋಡಿಸುವುದು ; ಧನುಸ್ಸನ್ನು ಸೆಳೆದು ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆಯುವುದು–ಇವುಗಳಲ್ಲಿ ಯಾವ ಕ್ರಿಯೆಯೂ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ನದಿಯ ಪ್ರವಾಹದಂತೆ 'ಸೊಯ್' ಎಂಬ ಶಬ್ದದೊಡನೆ ಶರಗಳ ಪ್ರವಾಹವು ಮಾತ್ರ ಇತರರಿಗೆ ಗೋಚರವಾಗುತ್ತಿತ್ತು. ಏಕಲವ್ಯನ ಅಂತಹ ಅದ್ಭುತಶಕ್ತಿಯನ್ನೂ, ಸಾಧನೆಯನ್ನೂ ದ್ರೋಣರು ಕಂಡರು.

ಆಚಾರ್ಯದ್ರೋಣರು ಹತ್ತಿರ ಬಂದುದನ್ನು ಕಂಡೊಡನೆಯೇ ಏಕಲವ್ಯನು ಅವರ ಬಳಿಗೆ ಹೋಗಿ ತಲೆಬಾಗಿ ನಮಸ್ಕಾರಮಾಡಿದನು.

ಅವರಿಗೆ ವಿಧಿಪೂರ್ವಕವಾಗಿ ಪೂಜೆಮಾಡಿ ತಾನು ಅವರ ಶಿಷ್ಯನೆಂದು ಅರಿಕೆಮಾಡಿಕೊಂಡು ಬದ್ಧಾಂಜಲಿಯಾಗಿ ಅವರ ಮುಂದೆ ನಿಂತುಕೊಂಡನು.



ದ್ರೋಣರು ಹೇಳಿದರು :

**ಯದಿ ಶಿಷ್ಯೋಽಸಿ ಮೇ ವೀರ ವೇತನಂ ದೀಯತಾಂ ಮಮ ||೫೪||**

"ವೀರ ಏಕಲವ್ಯ! ನೀನು ನನಗೆ ಶಿಷ್ಯನೇ ಆಗಿದ್ದರೆ ನನಗೆ ಗುರು ದಕ್ಷಿಣೆಯನ್ನು ಕೊಡು."

ಗುರುಗಳು ಹೇಳಿದ ಮಾತನ್ನು ಕೇಳಿ ಏಕಲವ್ಯನು ಪರಮಪ್ರೀತನಾಗಿ ಹೇಳಿದನು :

**ಕಿಂ ಪ್ರಯಚ್ಛಾಮಿ ಭಗವನ್ನಾಜ್ಞಾಪಯತು ಮಾಂ ಗುರುಃ ।**
**ನ ಹಿ ಕಿಂಚಿದದೇಯಂ ಮೇ ಗುರವೇ ಬ್ರಹ್ಮವಿತ್ತಮ ॥೫೫॥**

"ಪೂಜ್ಯರೇ! ಬ್ರಹ್ಮವಿದರಲ್ಲಿ ಶ್ರೇಷ್ಠರಾದವರೇ! ಏನು ಕೊಡಲಿ? ಅಪ್ಪಣೆಯಾಗಬೇಕು. ಗುರುಗಳಾದ, ಶ್ರೇಷ್ಠರಾದ ತಮಗೆ ಕೊಡಬಾರದ್ದು ಯಾವುದೂ ಇಲ್ಲ."

"ಹಾಗಾದರೆ ನಿನ್ನ ಬಲಗೈಯಿನ ಹೆಬ್ಬೆರಳನ್ನು ಗುರುದಕ್ಷಿಣೆಯನ್ನಾಗಿ ಕೊಡು."

ಏಕಲವ್ಯನು ದ್ರೋಣರ ಅತಿದಾರುಣವಾದ ಆ ಮಾತನ್ನು ಕೇಳಿಯೂ ಧೃತಿಗೆಡಲಿಲ್ಲ. ಸರ್ವದಾ ಸತ್ಯದಲ್ಲಿಯೇ ನಿಷ್ಠನಾಗಿದ್ದ ಅವನು ತಾನು ಮಾಡಿದ ಪ್ರತಿಜ್ಞೆಯನ್ನು ರಕ್ಷಿಸಿಕೊಳ್ಳುತ್ತಾ ಉದಾರವಾದ ಮನಸ್ಸಿನಿಂದ ಮತ್ತು ನಗುಮುಖದಿಂದ ಕೂಡಿದವನಾಗಿ ಸೊಂಟದಲ್ಲಿದ್ದ ಕತ್ತಿಯನ್ನು ತೆಗೆದು ಹೆಬ್ಬೆರಳನ್ನು ಕತ್ತರಿಸಿ ಗುರುಗಳ ಕೈಯಲ್ಲಿಟ್ಟನು.

ಮುಂದೆ ಏಕಲವ್ಯನು ಹೆಬ್ಬೆಟ್ಟಿಲ್ಲದೆಯೇ ಧನುರ್ವಿದ್ಯೆಯನ್ನು ಅಭ್ಯಾಸ ಮಾಡುತ್ತಿದ್ದನು. ಆದರೆ ಹಿಂದಿದ್ದ ಕೈಚಳಕವು ಮಾತ್ರ ಇರಲಿಲ್ಲ. ಅರ್ಜುನನಿಗಾದರೋ ತನ್ನನ್ನು ಮೀರಿಸುವವರಿರುವರೆಂಬ ಆತಂಕವು ದೂರವಾಯಿತು. ಅದರಿಂದ ಅವನೂ ಸುಪ್ರೀತನಾದನು. ಅರ್ಜುನನನ್ನು ಪರಾಭವಗೊಳಿಸುವವರು ಪ್ರಪಂಚದಲ್ಲಿ ಬೇರೊಬ್ಬರಿಲ್ಲವೆಂಬ ದ್ರೋಣರ ಮಾತೂ ಸತ್ಯವಾಗಿ ಪರಿಣಮಿಸಿತು.

ದ್ರೋಣರ ಇಬ್ಬರು ಶಿಷ್ಯರಾದ ಭೀಮ-ದುರ್ಯೋಧನರು ಗದಾಯುದ್ಧದಲ್ಲಿ ನಿಷ್ಣಾತರಾದರು. ಅವರಿಬ್ಬರೂ ಪರಸ್ಪರ ಮಾತ್ಸರ್ಯವುಳ್ಳವರೂ ಆಗಿದ್ದರು. ಅಶ್ವತ್ಥಾಮನು ಅಸ್ತ್ರವಿದ್ಯೆಯ ರಹಸ್ಯಗಳಲ್ಲಿಯೂ, ನಕುಲ-ಸಹ

---

* ಈ ಪ್ರಸಂಗವು ನಡೆಯದಿದ್ದರೆ ಏಕಲವ್ಯನು ಅಪ್ರತಿಮಪರಾಕ್ರಮಿಯೆನಿಸಿದ್ದರೂ ಕೀರ್ತಿಮಂತನಾಗಿ ನಮ್ಮೆಲ್ಲರ ಮನಸ್ಸಿನಲ್ಲಿಯೂ ಅಚ್ಚಳಿಯದೇ ಇರುತ್ತಿದ್ದನೆಂದು ಹೇಳಲು ಸಾಧ್ಯವಿರಲಿಲ್ಲ. ಬಲಗೈಯಿನ ಹೆಬ್ಬೆರಳನ್ನು ಕಳೆದುಕೊಂಡು ಮುಂದೆ ಧನುರ್ವಿದ್ಯೆಯಲ್ಲಿ ಹೆಚ್ಚಿನ ಕೌಶಲವನ್ನು ಪಡೆಯಲು ಏಕಲವ್ಯನಿಗೆ ಸಾಧ್ಯವಾಗದಿದ್ದರೂ–ಅವನ ಗುರುಭಕ್ತಿಯ ಆದರ್ಶವು ಎಲ್ಲ ಕಾಲದ–ಎಲ್ಲ ಜನತೆಯ ಪ್ರಶಂಸೆಗೂ ಕಾರಣವಾಯಿತು.

ದೇವರು ಖಡ್ಗವಿದ್ಯೆಯಲ್ಲಿಯೂ ನಿಷ್ಣಾತರಾದರು. ಯುಧಿಷ್ಠಿರನು ರಥಿಗಳಲ್ಲಿ ಶ್ರೇಷ್ಠನೆನಿಸಿದನು. ಸಾಗರಾಂತವಾದ ಭೂಮಂಡಲದಲ್ಲಿ ಅವನು ರಥಗಳ ಸಮೂಹದ ಒಡೆಯರಿಗೂ ಒಡೆಯನೆಂಬ ಕೀರ್ತಿಯನ್ನು ಗಳಿಸಿದನು.

**ಬುದ್ಧಿಯೋಗಬಲೋತ್ಸಾಹೈಃ ಸರ್ವಾಸ್ತ್ರೇಷು ಚ ನಿಷ್ಠಿತಃ ।**
**ಅಸ್ತ್ರೇ ಗುರ್ವನುರಾಗೇ ಚ ವಿಶಿಷ್ಟೋಽಭವದರ್ಜುನಃ ॥೬೪॥**

ಬುದ್ಧಿ, ಮನಸ್ಸಿನ ಏಕಾಗ್ರತೆ, ಬಲ, ಉತ್ಸಾಹ–ಇವೆಲ್ಲವೂ ಇದ್ದ ಕಾರಣದಿಂದ ಅರ್ಜುನನು ಸಮಸ್ತವಾದ ಅಸ್ತ್ರವಿದ್ಯೆಗಳಲ್ಲೂ ಪ್ರವೀಣ ನಾದನು. ಅಸ್ತ್ರಗಳ ಅಭ್ಯಾಸ, ಗುರುಗಳ ಅನುರಾಗಸಂಪಾದನೆಗಳಲ್ಲಿ ಅರ್ಜುನನು ಉಳಿದವರಿಗಿಂತಲೂ ಮಿಗಿಲಾಗಿದ್ದನು. ದ್ರೋಣರು ಉಳಿದ ಶಿಷ್ಯರಂತೆಯೇ ಅರ್ಜುನನಿಗೂ ಅಭ್ಯಾಸಮಾಡಿಸುತ್ತಿದ್ದರೂ ತನ್ನ ನಿರಂತರ ವಾದ ಅಸ್ತ್ರ-ಶಸ್ತ್ರಗಳ ಅಭ್ಯಾಸದಿಂದ ಅರ್ಜುನನು ಅತಿರಥನಾದನು.

ಅವನ ಕೀರ್ತಿಯು ಸಮುದ್ರಾಂತವಾಗಿ ಹರಡಿತು. ವಿದ್ಯೆಯನ್ನು ಕಲಿಯುವುದರಲ್ಲಿ ಅವನಿಗಿದ್ದ ಆಸಕ್ತಿಯೂ ಮತ್ತು ಗುರುಭಕ್ತಿಯೂ ಮತ್ತಾರಿಗೂ ಇರಲಿಲ್ಲ. ದ್ರೋಣರ ಶಿಷ್ಯಕೋಟಿಯಲ್ಲಿ ಅರ್ಜುನನೊಬ್ಬನೇ ಅತಿರಥ ನೆನಿಸಿದನು.*

ದೇಹಬಲದಲ್ಲಿ ಅಧಿಕನಾದ ಭೀಮನನ್ನೂ ಧನುರ್ವಿದ್ಯೆಯಲ್ಲಿ ಅದ್ವಿತೀಯನಾದ ಅರ್ಜುನನನ್ನೂ ನೋಡಿ ದುರ್ಯೋಧನಾದಿಗಳ ಈರ್ಷ್ಯೆಯು ದಿನ-ದಿನಕ್ಕೂ ಹೆಚ್ಚುತ್ತಿದ್ದಿತು.

ಪುರುಷಶ್ರೇಷ್ಠರಾದ ದ್ರೋಣರು ಸಮಸ್ತವಾದ ಅಸ್ತ್ರವಿದ್ಯೆಗಳಲ್ಲಿಯೂ ಸುಶಿಕ್ಷಿತರಾಗಿದ್ದ ಕುರು-ಪಾಂಡವರಾಜಕುಮಾರರೆಲ್ಲರನ್ನೂ ಒಂದೆಡೆಯಲ್ಲಿ ಸೇರಿಸಿ ಒಬ್ಬೊಬ್ಬರ ಅಸ್ತ್ರಪ್ರಹಾರಕೌಶಲವನ್ನು ಪರೀಕ್ಷಿಸಲು ಇಚ್ಛಿಸಿ ಶಿಲ್ಪಿಗಳಿಂದ ತಯಾರಿಸಲ್ಪಟ್ಟಿದ್ದ ಭಾಸಪಕ್ಷಿಯೊಂದನ್ನು ರಾಜಕುಮಾರರಿಗೆ ತಿಳಿಯದಂತೆ ಮರದ ಮೇಲಿಟ್ಟು, ಅದನ್ನೇ ಲಕ್ಷ್ಯವನ್ನಾಗಿ ಮಾಡಿ ರಾಜಕುಮಾರರಿಗೆ ಹೇಳಿದರು :

---

* ಅರುವತ್ತು ಸಾವಿರ ಶತ್ರುಗಳೊಡನೆ ಒಂದೇ ಕಾಲದಲ್ಲಿ ಹೋರಾಡುವ ಸಾಮರ್ಥ್ಯ ವುಳ್ಳವನನ್ನು ಅತಿರಥನೆಂದು ಕರೆಯುವರು.

**ಶೀಘ್ರಂ ಭವನ್ತಃ ಸರ್ವೇಽಪಿ ಧನುಷ್ಯಾದಾಯ ಸರ್ವಶಃ ।**
**ಭಾಸಮೇತಂ ಸಮುದ್ದಿಶ್ಯ ತಿಷ್ಠಧ್ವಂ ಸಂಧಿತೇಷವಃ ॥೬೯॥**

"ರಾಜಕುಮಾರರೇ! ನೀವೆಲ್ಲರೂ ವೃಕ್ಷದ ಮೇಲೆ ಲಕ್ಷ್ಯರೂಪದಲ್ಲಿರುವ ಭಾಸಪಕ್ಷಿಯನ್ನು ಪ್ರಹರಿಸಲು ಧನುಸ್ಸಿಗೆ ಬಾಣವನ್ನು ಹೂಡಿ ನಿಲ್ಲಿರಿ.

**ಮದ್ವಾಕ್ಯಸಮಕಾಲಂ ತು ಶಿರೋಽಸ್ಯ ವಿನಿಪಾತ್ಯತಾಮ್ ।**
**ಏಕೈಕಶೋ ನಿಯೋಕ್ಷ್ಯಾಮಿ ತಥಾ ಕುರುತ ಪುತ್ರಕಾಃ ॥೭೦॥**

ಮಕ್ಕಳಿರಾ! ನಾನೀಗ ಒಬ್ಬೊಬ್ಬರನ್ನೂ ಕರೆದು ಮರದ ಮೇಲಿರುವ ಪಕ್ಷಿಗೆ ಗುರಿಯಿಟ್ಟು ಹೊಡೆಯುವಂತೆ ಹೇಳುವೆನು. ನಾನು 'ಹೊಡೆಯಬಹುದು' ಎಂದು ಹೇಳಿದೊಡನೆಯೇ ನೀವು ಬಾಣಪ್ರಯೋಗಮಾಡಿ ಅಲ್ಲಿರುವ ಪಕ್ಷಿಯ ತಲೆಯನ್ನು ಕತ್ತರಿಸಬೇಕು."

ಅನೇಕ ವರ್ಷಗಳ ಕಾಲ ಧನುರ್ವಿದ್ಯೆಯನ್ನು ಅಭ್ಯಾಸಮಾಡಿದ ರಾಜಕುಮಾರರಿಗೆ ದ್ರೋಣರ ಪರೀಕ್ಷೆಯು ಹೆಚ್ಚು ಕಠಿನವೆಂದು ತೋರಲಿಲ್ಲ.

ಎಲ್ಲರೂ ಗುರುಗಳ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಂತಿದ್ದರು. ದ್ರೋಣರು ಮೊತ್ತಮೊದಲು ಎಲ್ಲರಿಗಿಂತಲೂ ಹಿರಿಯವನಾದ ಯುಧಿಷ್ಠಿರನನ್ನೇ ಕರೆದು ಹೇಳಿದರು :

"ಯುಧಿಷ್ಠಿರ! ಆ ಮರದ ಮೇಲೆ ಕಾಣುತ್ತಿರುವ ಪಕ್ಷಿಯ ಕುತ್ತಿಗೆಗೆ ಗುರಿಯಿಡು. ನಾನು 'ಹೊಡೆ' ಎಂದು ಹೇಳಿದ ಕೂಡಲೇ ಬಾಣವನ್ನು ಬಿಡಬೇಕು."

ಯುಧಿಷ್ಠಿರನು ಬಿಲ್ಲಿಗೆ ಹೆದೆಯೇರಿಸಿ ಬಾಣವನ್ನು ಯೋಜಿಸಿ ಪಕ್ಷಿಯ ಕಡೆಗೆ ಗುರಿಯಿಟ್ಟು ನಿಂತನು.

ದ್ರೋಣರು ಕೇಳಿದರು : "ಯುಧಿಷ್ಠಿರ! ಮರದ ಮೇಲಿರುವ ಪಕ್ಷಿಯನ್ನು ಕಾಣುತ್ತಿರುವೆಯಲ್ಲವೇ?"

" ನಿಜ! ಮರದ ಮೇಲಿರುವ ಪಕ್ಷಿಗೆ ಗುರಿಯಿಟ್ಟಿದ್ದೇನೆ, ಗುರುದೇವ!"

“ಮತ್ತೇನನ್ನು ನೋಡುತ್ತಿರುವೆ? ನನ್ನನ್ನೂ ನೋಡುತ್ತಿರುವೆಯಾ?”

“ತಮ್ಮನ್ನೂ ನೋಡುತ್ತಿದ್ದೇನೆ, ಗುರುದೇವ!”

“ನಿನ್ನ ತಮ್ಮಂದಿರೂ ಕಾಣುತ್ತಿರುವರೇ?”

“ಇಲ್ಲಿಯೇ ನಿಂತಿರುವವರನ್ನು ಕಾಣದಿರುವುದೆಂತು? ಗುರುದೇವ! ಅವರನ್ನೂ ನೋಡುತ್ತಿದ್ದೇನೆ.”

ಯುಧಿಷ್ಠಿರನ ಪರೀಕ್ಷೆಯು ಮುಗಿಯಿತು. ದ್ರೋಣರು ಯುಧಿಷ್ಠಿರನಿತ್ತ ಉತ್ತರಕ್ಕೆ ಬಹಳ ಬೇಸತ್ತವರಾಗಿ ‘ಹೊಡೆ’ ಎಂದೆನ್ನದೆಯೇ “ಪಕ್ಕಕ್ಕೆ ನಿಲ್ಲು, ಯುಧಿಷ್ಠಿರ! ನಿನ್ನಿಂದ ಪಕ್ಷಿಯನ್ನು ಹೊಡೆಯಲು ಸಾಧ್ಯ ವಾಗಲಾರದು”–ಎಂದರು.

ಅನಂತರ ಮಹಾಯಶೋವಂತರಾದ ದ್ರೋಣರು ಅರ್ಜುನನೊಬ್ಬ ನನ್ನು ಬಿಟ್ಟು ದುರ್ಯೋಧನನೇ ಮೊದಲಾದ ಧೃತರಾಷ್ಟ್ರನ ಮಕ್ಕಳನ್ನೂ (ಭೀಮಾದಿಗಳನ್ನೂ ಇತರ ದೇಶದ ರಾಜಕುಮಾರರನ್ನೂ) ಅನುಕ್ರಮವಾಗಿ ಯುಧಿಷ್ಠಿರನನ್ನು ಪ್ರಶ್ನಿಸಿದ ರೀತಿಯಲ್ಲಿಯೇ ಪ್ರಶ್ನಿಸಿ ಅವರೆಲ್ಲರಿಂದಲೂ ಯುಧಿಷ್ಠಿರನ ಉತ್ತರವೇ ಬರಲು ಬಹಳ ಬೇಸತ್ತವರಾಗಿ, ಯಾರಿಗೂ ಲಕ್ಷ್ಯವನ್ನು ಭೇದಿಸಲು ಅನುಜ್ಞೆಯನ್ನು ಕೊಡದೇ–‘ನೀವು ಲಕ್ಷ್ಯವನ್ನು ಹೊಡೆಯಲಾರಿರಿ. ಹೊರಟುಹೋಗಿರಿ’–ಎಂದು ಮೂದಲಿಸಿ ಪಕ್ಕಕ್ಕೆ ನಿಲ್ಲುವಂತೆ ಹೇಳಿದರು.

೧೩೨ನೆಯ ಅಧ್ಯಾಯವು ಮುಗಿಯಿತು.

## ಅರ್ಜುನನಿಂದ ಲಕ್ಷ್ಯಭೇದ: ದ್ರೋಣರಿಂದ ಮಹಾಸ್ತ್ರವಾದ ಬ್ರಹ್ಮಶಿರದ ಬಹುಮಾನ

ವೈಶಂಪಾಯನರು ಹೇಳುತ್ತಾರೆ :

**ತತೋ ಧನಂಜಯಂ ದ್ರೋಣಃ ಸ್ಮಯಮಾನೋಽಭ್ಯಭಾಷತ ।**
**ತ್ವಯೇದಾನೀಂ ಪ್ರಹರ್ತವ್ಯಮೇತಲ್ಲಕ್ಷ್ಯಂ ವಿಲೋಕ್ಯತಾಮ್ ॥೧॥**

ಜನಮೇಜಯ! ಲಕ್ಷ್ಯವನ್ನು ಭೇದಿಸಲು ಉಳಿದ ರಾಜಕುಮಾರ ರೆಲ್ಲರೂ ಅನರ್ಹರಾಗಲು ದ್ರೋಣರು ಅರ್ಜುನನನ್ನು ನೋಡಿ ಮುಗುಳ್ನಗೆ ಯನ್ನು ಬೀರುತ್ತಾ ಹೇಳಿದರು : " ಅರ್ಜುನ! ಧನುಸ್ಸನ್ನು ಮಂಡಲಾಕಾರ ವನ್ನಾಗಿ ಮಾಡಿ ಮುಹೂರ್ತಕಾಲ ನಿಲ್ಲು. ಈಗ ನೀನು ಈ ಲಕ್ಷ್ಯವನ್ನು ಭೇದಿಸಬೇಕಾಗಿದೆ. ಲಕ್ಷ್ಯವನ್ನು ಚೆನ್ನಾಗಿ ನೋಡು. ನಾನು ಆಜ್ಞೆಮಾಡು ತ್ತಿದ್ದಂತೆಯೇ ನೀನು ಬಾಣವನ್ನು ಬಿಡಬೇಕು."

ಗುರುಗಳ ಆಜ್ಞೆಯಂತೆಯೇ ಅರ್ಜುನನು ಮರದ ಮೇಲಿದ್ದ ಪಕ್ಷಿಗೆ ಗುರಿಯಿಟ್ಟು, ದ್ರೋಣರ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಂತನು. ದ್ರೋಣರು ಯಥಾಪೂರ್ವಕವಾಗಿ ಅರ್ಜುನನನ್ನೂ ಪ್ರಶ್ನೆಗಳನ್ನು ಕೇಳಲು ಪ್ರಾರಂಭಿ ಸಿದರು.

**ಪಶ್ಯಸ್ಯೇನಂ ಸ್ಥಿತಂ ಭಾಸಂ ದ್ರುಮಂ ಮಾಮಪಿ ಚಾರ್ಜುನ ॥೪॥**

"ಅರ್ಜುನ! ಪಕ್ಷಿಯನ್ನೂ, ಪಕ್ಷಿಯು ಕುಳಿತಿರುವ ಮರವನ್ನೂ ಮತ್ತು ನನ್ನನ್ನೂ ಕಾಣುತ್ತಿರುವೆಯಾ?"

"ಇಲ್ಲ, ಗುರುದೇವ! ತಮ್ಮನ್ನೂ ಕಾಣುತ್ತಿಲ್ಲ ; ವೃಕ್ಷವನ್ನೂ ಕಾಣುತ್ತಿಲ್ಲ. ತಾವು ಗುರಿಯಿಡಬೇಕೆಂದು ಹೇಳಿದ್ದ ಪಕ್ಷಿಯನ್ನು ಮಾತ್ರವೇ ಕಾಣುತ್ತಿರುವೆನು."

ದ್ರೋಣರಿಗೆ ಅರ್ಜುನನ ಉತ್ತರವನ್ನು ಕೇಳಿ ಬಹಳ ಸಂತೋಷ ವಾಯಿತು. ಪಾಂಡವರಲ್ಲಿ ಮಹಾರಥನೆನಿಸಿದ ಅರ್ಜುನನನ್ನು ಕುರಿತು ಅದಮ್ಯರಾದ ದ್ರೋಣರು ಹೇಳಿದರು :

"ನಾನು 'ಲಕ್ಷ್ಯಕ್ಕೆ ಹೊಡೆ' ಎಂದು ಹೇಳಿದನಂತರವೇ ನೀನು ಬಾಣವನ್ನು ಬಿಡಬೇಕು. ಪಕ್ಷಿಯನ್ನು ಮಾತ್ರವೇ ಕಾಣುತ್ತಿರುವೆಯಾದರೆ ಆ ಪಕ್ಷಿಯು ಹೇಗಿರುವುದೆಂಬುದನ್ನು ವರ್ಣಿಸಿ ಹೇಳು, ಅರ್ಜುನ!"



"ಗುರುದೇವ! ನನಗೆ ಪಕ್ಷಿಯ ತಲೆಯು ಮಾತ್ರ ಕಾಣುತ್ತಿದೆಯೇ ಹೊರತು ಅದರ ಅಂಗಾಂಗಗಳೊಂದೂ ಕಾಣುತ್ತಿಲ್ಲ."

ಶಿಷ್ಯನಿಂದ ಆ ಉತ್ತರವನ್ನು ಕೇಳಿದ ಮೇಲಂತೂ ದ್ರೋಣರ ಆನಂದಕ್ಕೆ ಪಾರವೇ ಇಲ್ಲವಾಯಿತು. ಒಡನೆಯೇ ' ಹೊಡೆ ' ಎಂದೂ ಆಜ್ಞೆಯನ್ನಿತ್ತರು.

'ಮುಞ್ಚಸ್ವ'–ಎಂದು ಹೇಳಿ ಮುಗಿಸುವುದರೊಳಗಾಗಿಯೇ ಕೃತಕ ಪಕ್ಷಿಯ ತಲೆಯು ನೆಲಕ್ಕೆ ಬಿದ್ದಿತು. ದ್ರೋಣರು ಅರ್ಜುನನನ್ನು ಬಾಚಿ ತಬ್ಬಿ ಆನಂದಬಾಷ್ಪಗಳನ್ನು ಸುರಿಸಿದರು. ಮುಂದೆ ಅರ್ಜುನನೊಡನೆ ಮಾಡಲಿರುವ ಯುದ್ಧದಲ್ಲಿ ದ್ರುಪದನು ಬಂಧು-ಮಿತ್ರಸಹಿತನಾಗಿ ಪರಾಜಯವನ್ನು ಹೊಂದಿದನೆಂದೇ ಭಾವಿಸಿದರು.

ಕೆಲವು ದಿನಗಳು ಕಳೆದುವು. ಎಂದಿನಂತೆ ದ್ರೋಣಾಚಾರ್ಯರು ಶಿಷ್ಯ ಸಮೇತರಾಗಿ ಸ್ನಾನಮಾಡಲು ಗಂಗಾನದಿಗೆ ತೆರಳಿದರು. ದ್ರೋಣರು ಸ್ನಾನ ಮಾಡಲು ಗಂಗಾನದಿಯಲ್ಲಿ ಇಳಿದೊಡನೆಯೇ ಅಲ್ಲಿಯೇ ಇದ್ದ ಮೊಸಳೆ ಯೊಂದು ದುರದೃಷ್ಟವಶದಿಂದ ಅವರ ಮೊಣಕಾಲನ್ನು ಹಿಡಿದುಕೊಂಡಿತು. ದ್ರೋಣರಿಗೆ ಮೊಸಳೆಯಿಂದ ಬಿಡಿಸಿಕೊಳ್ಳುವ ಸಾಮರ್ಥ್ಯವಿದ್ದರೂ ಶಿಷ್ಯರ ಜಾಗರೂಕತೆಯು ಹೇಗಿದೆಯೆಂಬುದನ್ನು ಪರೀಕ್ಷಿಸುವ ಸಲುವಾಗಿ– "ಮೊಸಳೆಯು ನನ್ನನ್ನು ನುಂಗುತ್ತಿದೆ. ಕೂಡಲೇ ಇದನ್ನು ಕೊಂದು ನನ್ನನ್ನು ರಕ್ಷಿಸಿರಿ!"–ಎಂದು ಗಟ್ಟಿಯಾಗಿ ಕೂಗಿದರು. ಆ ಮಾತುಗಳು ಗುರುಗಳ ಬಾಯಿಂದ ಹೊರಡುತ್ತಿದ್ದಂತೆಯೇ ಅರ್ಜುನನ ಬಾಣಗಳು ಬತ್ತಳಿಕೆಯಿಂದ ಹೊರಕ್ಕೆ ಬಂದು ಧನುಸ್ಸನ್ನು ಏರಿ ನಿಂತುವು. ಅವನು ಐದು ಬಾಣಗಳಿಂದ ನೀರಿನಲ್ಲಿದ್ದ ಮೊಸಳೆಯನ್ನು ಪ್ರಹರಿಸಿದನು. ಉಳಿದ ಶಿಷ್ಯರೆಲ್ಲರೂ ಅರ್ಜುನನ ಶಸ್ತ್ರಪ್ರಹರಣವನ್ನು ನೋಡುತ್ತಾ ನಿಂತಿದ್ದರೇ ಹೊರತು ಗುರುಗಳ ರಕ್ಷಣೆಮಾಡುವುದು ಹೇಗೆಂಬುದನ್ನು ಯಾರೂ ಒಡನೆಯೇ ಯೋಚಿಸಿ ಕಾರ್ಯಮಾಡಲಿಲ್ಲ. ಅರ್ಜುನನು ದ್ರೋಣರ ಶಿಷ್ಯರಲ್ಲೆಲ್ಲಾ ಶ್ರೇಷ್ಠನೆನಿಸಿದನು. ಪಾರ್ಥನ ಬಾಣಗಳಿಂದ ಪ್ರಹೃತವಾದ ಮೊಸಳೆಯು ಖಂಡ-ಖಂಡವಾಗಿ ತುಂಡರಿಸಲ್ಪಟ್ಟು ಮಹಾತ್ಮರಾದ ದ್ರೋಣರ ಮೊಣ ಕಾಲನ್ನು ಬಿಟ್ಟು ಸತ್ತುಹೋಯಿತು. ದ್ರೋಣರು ಮೊಸಳೆಯಿಂದ ಬಿಡ ಲ್ಪಟ್ಟವರಾಗಿ ಗಂಗೆಯಿಂದ ಮೇಲೆ ಬಂದು ಮಹಾರಥನಾದ ಅರ್ಜುನನನ್ನು ಕುರಿತು ಹೇಳಿದರು :

"ಮಹಾಬಾಹುವೇ! ಅರ್ಜುನ! ನಿನ್ನ ಕಾರ್ಯದಿಂದ ಸುಪ್ರೀತ

ನಾಗಿರುವೆನು. ಇದಕ್ಕೆ ಬಹುಮಾನವಾಗಿ ಮಹಾಸ್ತ್ರವಾದ ಬ್ರಹ್ಮಶಿರವೆಂಬ ಅಸ್ತ್ರವನ್ನು ಪ್ರಯೋಗ ಮತ್ತು ನಿವರ್ತನಗಳ ರಹಸ್ಯಪೂರ್ವಕವಾಗಿ ನಿನಗೆ ಉಪದೇಶಿಸುವೆನು.

**ನ ಚ ತೇ ಮಾನುಷೇಷ್ವೇತತ್ಪ್ರಯೋಕ್ತವ್ಯಂ ಕಥಂಚನ ।**
**ಜಗದ್ವಿನಿರ್ದಹೇದೇತದಲ್ಪತೇಜಸಿ ಪಾತಿತಮ್ ॥೧೯॥**
**ಅಸಾಮಾನ್ಯಮಿದಂ ತಾತ ಲೋಕೇಷ್ವಸ್ತ್ರಂ ನಿಗದ್ಯತೇ ।**
**ತದ್ಧಾರಯೇಥಾಃ ಪ್ರಯತಃ ಶೃಣು ಚೇದಂ ವಚೋ ಮಮ ॥೨೦॥**

**ಬಾಧೇತಾಮಾನುಷಃ ಶತ್ರುರ್ಯದಿ ತ್ವಾಂ ವೀರ ಕಶ್ಚನ ।**
**ತದ್ವಧಾಯ ಪ್ರಯುಞ್ಜೀಥಾಸ್ತದಸ್ತ್ರಮಿದಮಾಹವೇ ॥೨೧॥**

ಮಗು! ಇದನ್ನು ನೀನು ಮಾನವರ ಮೇಲೆ ಪ್ರಯೋಗಿಸಲೇಬಾರದು. ಸಾಧಾರಣಬಲವುಳ್ಳವರ ಮೇಲೆ ಇದನ್ನು ಪ್ರಯೋಗಿಸಿದರೆ ಈ ಅಸ್ತ್ರವು ಪ್ರಪಂಚವನ್ನೇ ದಹಿಸಿಬಿಡುವುದು. ಇದಕ್ಕೆ ಸಮಾನವಾದ ಅಸ್ತ್ರವು ಮೂರು ಲೋಕಗಳಲ್ಲಿಯೂ ಬೇರೊಂದು ಇರುವುದಿಲ್ಲ. ಆದುದರಿಂದ ಈ ಮಹಾಸ್ತ್ರ ವನ್ನು ಬಹಳ ಜಾಗರೂಕತೆಯಿಂದ ಇಟ್ಟುಕೊಂಡಿದ್ದು ನಾನು ಹೇಳುವ ರೀತಿ ಯಲ್ಲಿ ನಡೆದುಕೊ. ಮಾನವನಲ್ಲದ, ಅತಿಪರಾಕ್ರಮಿಯಾದ ಶತ್ರುವೇನಾ ದರೂ ನಿನ್ನೊಡನೆ ಯುದ್ಧಕ್ಕೆ ಬಂದರೆ–ಅಂತಹ ಸಮಯದಲ್ಲಿ ಅವನ ಸಂಹಾರಕ್ಕಾಗಿ ಈ ಅಸ್ತ್ರವನ್ನು ಉಪಯೋಗಿಸು."

ಅರ್ಜುನನು ಹಾಗೆಯೇ ಆಗಲೆಂದು ದ್ರೋಣರಿಗೆ ಭಾಷೆಯನ್ನಿತ್ತು, ಎರಡು ಕೈಗಳನ್ನೂ ಜೋಡಿಸಿ ಸಂಪುಟಮಾಡಿ, ಮಹಾಸ್ತ್ರವನ್ನು ಭಕ್ತಿಯಿಂದ ಸ್ವೀಕರಿಸಿದನು.

ಮಹಾಸ್ತ್ರವನ್ನು ಸ್ವೀಕರಿಸಿದ ಅರ್ಜುನನಿಗೆ ದ್ರೋಣರು– "ಧನುರ್ವಿದ್ಯೆ ಯಲ್ಲಿ ನಿನಗೆ ಸಮಾನನಾದ ಮಾನವನು ಈ ಲೋಕದಲ್ಲಿ ಬೇರೊಬ್ಬನಿಲ್ಲ. ನೀನು ಮತ್ತೊಬ್ಬನನ್ನು ಪರಾಜಯಗೊಳಿಸುವೆಯೇ ಹೊರತು ನಿನ್ನನ್ನು ಪರಾಜಯಗೊಳಿಸಲು ಬೇರೊಬ್ಬನಿಂದ ಸಾಧ್ಯವೇ ಇಲ್ಲ"–ಎಂದು ಹೇಳಿ ಆಶೀರ್ವದಿಸಿದರು.

ನೂರಮೂವತ್ತಮೂರನೆಯ ಅಧ್ಯಾಯವು ಮುಗಿಯಿತು.

# ರಂಗಭೂಮಿಯಲ್ಲಿ ರಾಜಕುಮಾರರಿಂದ ದಿವ್ಯಾಸ್ತ್ರಗಳ ಕೌಶಲಪ್ರದರ್ಶನ

ಜನಮೇಜಯ! ಪಾಂಡವ-ಕೌರವರಿಗೆ ಧನುರ್ವಿದ್ಯೆಯ ಉಪದೇಶವು ಪೂರ್ಣವಾದನಂತರ ದ್ರೋಣರು-ಕೃಪ, ಸೋಮದತ್ತ, ಬಾಹ್ಲಿಕ, ವಿದುರ, ವ್ಯಾಸ, ಭೀಷ್ಮ–ಇವರಿಂದ ಪರಿವೃತನಾಗಿದ್ದ ಧೃತರಾಷ್ಟ್ರನನ್ನು ಸಂಧಿಸಿ ಹೇಳಿದರು :

"ಮಹಾರಾಜ! ನಿನ್ನ ಮಕ್ಕಳೆಲ್ಲರಿಗೂ ಧನುರ್ವಿದ್ಯಾಭ್ಯಾಸವು ಪೂರ್ಣವಾಗಿ ಮುಗಿದಿರುವುದು. ನಿನ್ನ ಅನುಜ್ಞೆಯಿಂದ ಅವರೆಲ್ಲರೂ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಬಹುದಲ್ಲವೇ?"

ಧೃತರಾಷ್ಟ್ರನು ಸಂತುಷ್ಟನಾಗಿ–"ಬ್ರಾಹ್ಮಣೋತ್ತಮರೇ! ನೀವು ನಿಶ್ಚಯವಾಗಿಯೂ ಮಹಾಕಾರ್ಯವೊಂದನ್ನು ಮಾಡಿ ಮುಗಿಸಿರುವಿರಿ. ನನ್ನ ಮಕ್ಕಳ ಪಾಂಡಿತ್ಯಪ್ರದರ್ಶನವು ಯಾವ ಸ್ಥಳದಲ್ಲಿ, ಯಾವ ಕಾಲದಲ್ಲಿ, ಯಾವ ರೀತಿಯಲ್ಲಾಗಬೇಕೆಂಬುದನ್ನೂ ತಾವೇ ಆಜ್ಞಾಪಿಸಿರಿ. ನಿಶ್ಚಯ ವಾಗಿಯೂ ಇಂತಹ ಸಮಯಗಳಲ್ಲಿ–ನನ್ನ ಮಕ್ಕಳ ಪಾಂಡಿತ್ಯವನ್ನು ನೋಡಿ ನಲಿಯಲು ಇತರರಂತೆ ನನಗೂ ಕಣ್ಣಿರಬೇಕಾಗಿತ್ತು ಎಂದು ಬಯಸು ತ್ತೇನೆ"–ಎಂದು ಹೇಳಿ ವಿದುರನನ್ನು ಕುರಿತು ಹೇಳಿದನು :

"ವಿದುರ! ದ್ರೋಣರು ಹೇಳುವ ರೀತಿಯಲ್ಲಿ ಸಕಲವನ್ನೂ ಸಿದ್ಧ ಪಡಿಸು. ಇಂತಹ ಪ್ರಿಯವಾದ ಕಾರ್ಯವು ಮತ್ತೊಂದು ಇರಲಾರದು."

ವಿದುರನು ಒಡನೆಯೇ ಮೇಲೆದ್ದು ಹಾಗೆಯೇ ಆಗಲೆಂದು ರಾಜ ನೊಡನೆ ಹೇಳಿ ಹೊರಟುಹೋದನು. ವಿದುರನು ಕಳುಹಿಸಿಕೊಟ್ಟ ರಾಜಭಟ ರೊಡನೆ ದ್ರೋಣರು ಸಮನಾದ (ಹಳ್ಳ-ತಿಟ್ಟುಗಳಿಲ್ಲದ ) ಪ್ರದೇಶವೊಂದನ್ನು ಆರಿಸಿ, ತಮಗೆಷ್ಟು ಸ್ಥಳಾವಕಾಶವು ಬೇಕೆಂಬುದನ್ನು ರಾಜಭಟರಿಂದ ಅಳೆಸಿ ಗುರುತಿಸಿದರು. ಆ ಪ್ರದೇಶವು ಮರ-ಗಿಡ-ಬಳ್ಳಿಗಳಿಂದ ರಹಿತವಾಗಿದ್ದಿತು. ಅದರ ಉತ್ತರದಿಕ್ಕಿನಲ್ಲಿ ಪ್ರವಾಹವು ಹರಿಯುತ್ತಿದ್ದಿತು. ದ್ರೋಣರು ಶುಭ

ಮುಹೂರ್ತದಲ್ಲಿ ಅನೇಕವೀರರ ಡಿಂಡೀರವಗಳೊಡನೆ ದೇವತೆಗಳಿಗೆ ಬಲಿ ನೀಡಿ ಭೂಮಿಯನ್ನು ಪರಿಶುದ್ಧಿಗೊಳಿಸಿದರು. ಪುಣ್ಯಾಹಕರ್ಮವಾದನಂತರ ರಾಜಶಿಲ್ಪಿಗಳು ಶಾಸ್ತ್ರವಿಹಿತವಾದ ರೀತಿಯಲ್ಲಿ ಸುಂದರವಾದ ರಂಗ ಮಂಟಪವನ್ನು ನಿರ್ಮಿಸಿದರು. ರಂಗಮಂಟಪದ ಒಂದು ಭಾಗದಲ್ಲಿ ಸಕಲಾ ಯುಧಗಳನ್ನೂ ಇಡಲಾಗಿತ್ತು. ಸ್ತ್ರೀಯರಿಗೆ ಪ್ರತ್ಯೇಕವಾದ ಸ್ಥಳವನ್ನು ಏರ್ಪ ಡಿಸಲಾಗಿತ್ತು. ದೇಶದ ಪ್ರಜೆಗಳು ತಮ್ಮ ಗೌರವವನ್ನು ರಾಜಕುಮಾರರಿಗೆ ತೋರಲು ತಮ್ಮ ತಮ್ಮ ನಾಮಾಂಕಿತಗಳಲ್ಲಿ ಕುಳಿತುಕೊಳ್ಳಲು ಯೋಗ್ಯ ವಾದ ಮಂಚಗಳನ್ನು ಹಾಕಿಸಿದರು. ಹೆಚ್ಚು ಧನಿಕರಾದವರು ರಂಗಭೂಮಿಯ ಸುತ್ತಲೂ ಎತ್ತರವಾದ ವೇದಿಕೆಗಳನ್ನೂ ಶಿಬಿರಗಳನ್ನೂ ನಿರ್ಮಿಸಿದರು.

ಪ್ರದರ್ಶನದ ದಿನವೂ ಬಂದಿತು. ಧೃತರಾಷ್ಟ್ರನು ಕೃಪ-ಭೀಷ್ಮ ರಿಂದೊಡಗೂಡಿ ದೇವಮಂಟಪಕ್ಕೆ ಸಮಾನವಾದ, ಸ್ವರ್ಣ ಮತ್ತು ನವರತ್ನ ಗಳಿಂದ ಅಲಂಕೃತವಾಗಿದ್ದ ರಂಗಮಂಟಪಕ್ಕೆ ಬಂದನು. ಗಾಂಧಾರಿಯೂ ಕುಂತೀ, ಸಖಿಯರು ಮತ್ತು ದಾಸಿಯರಿಂದೊಡಗೂಡಿ ಆಗಮಿಸಿದಳು. ದೇವಸ್ತ್ರೀಯರು ಮೇರುಪರ್ವತವನ್ನು ಹತ್ತುವಂತೆ–ಎಲ್ಲರೂ ರತ್ನಮಯ ವಾದ ಮಂಚಗಳನ್ನು ಹತ್ತಿ ಕುಳಿತರು. ಬ್ರಾಹ್ಮಣರೇ ಆದಿಯಾಗಿ ನಾಲ್ಕು ವರ್ಣಗಳ ಪ್ರಜೆಗಳೂ ಬೇಗನೇ ಬಂದು ಮುಂದು-ಮುಂದಿನ ಪ್ರದೇಶಗಳನ್ನು ಆಕ್ರಮಿಸಿ ಕುಳಿತರು. ನಿಮಿಷಮಾತ್ರದಲ್ಲಿ ರಂಗಮಂಟಪವು ತುಂಬಿಹೋಗಿ ಅಲ್ಲಿನ ಜನಸ್ತೋಮವು ಸಮುದ್ರದಂತೆ ಕಾಣುತ್ತಿದ್ದಿತು. ಭೇರೀ-ಢಕ್ಕೆ-ಮೃದಂಗಗಳ ಧ್ವನಿಗಳಿಂದಲೂ ಮತ್ತು ಜನರ ಮಾತಿನ ಶಬ್ದಗಳಿಂದಲೂ ಕೂಡಿದ್ದ ಅಂದಿನ ಸಭೆಯ ಸನ್ನಿವೇಶವೂ ಭೋರ್ಗರೆಯುತ್ತಿರುವ ಸಮುದ್ರದ ನೆನಪನ್ನು ತರುವುದಾಗಿದ್ದಿತು.

ಕಟ್ಟಕಡೆಗೆ ದ್ರೋಣರು ಶ್ವೇತವಸ್ತ್ರವನ್ನು ಧರಿಸಿ, ಶುಭ್ರವಾದ ಯಜ್ಞೋಪವೀತವುಳ್ಳವರಾಗಿ, ಶ್ವೇತಮಾಲೆಯಿಂದ ಅಲಂಕೃತರಾಗಿ, ಗಂಧಾನುಲೇಪನವನ್ನು ಮಾಡಿಕೊಂಡು ಪುತ್ರಸಮೇತರಾಗಿ ರಂಗಮಂಟಪ ವನ್ನು ಪ್ರವೇಶಿಸಿದರು. ಅವರ ಕೇಶ-ಶ್ಮಶ್ರುಗಳು ಸ್ವಾಭಾವಿಕವಾಗಿಯೇ ಬೆಳ್ಳಗಾಗಿದ್ದುವು. ದ್ರೋಣರು–ಚಂದ್ರನು ಅಂಗಾರಕನ ಸಮೇತನಾಗಿ

ನಿರ್ಮಲಾಕಾಶವನ್ನು ಪ್ರವೇಶಿಸುವಂತೆ–ಅಶ್ವತ್ಥಾಮನೊಡನೆ ರಂಗಮಂಟಪ ವನ್ನು ಪ್ರವೇಶಿಸಿದರು.

ದ್ರೋಣರು ಒಳಗೆ ಬಂದೊಡನೆಯೇ ರಂಗಮಂಟಪದ ಮಧ್ಯಕ್ಕೆ ಹೋಗಿ, ನಾಲ್ಕಾರು ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಹೇಳಿಸಿ ಪುಣ್ಯಾಹ ಕರ್ಮವನ್ನು ನೆರವೇರಿಸಿದರು. ಮಂಗಳವಾದ್ಯಗಳು ಮಧುರಸ್ವರಗಳನ್ನು ಮಾಡಿದುವು. ಆ ಕಾರ್ಯವು ಮುಗಿದೊಡನೆಯೇ ರಾಜಭಟರು ಪ್ರದರ್ಶನಕ್ಕೆ ಬೇಕಾದ ಕತ್ತಿ, ಗುರಾಣಿ, ಗದೆ, ಧನುಸ್ಸು, ಬಾಣ–ಮುಂತಾದುವುಗಳನ್ನು ತಂದಿಟ್ಟರು. ಸಮುದ್ರದಂತೆ ಭೋರ್ಗರೆಯುತ್ತಿದ್ದ ಜನಸ್ತೋಮದ ಧ್ವನಿಯು ಇದ್ದಕ್ಕಿದ್ದಂತೆಯೇ ಶಾಂತವಾಯಿತು. ಎಲ್ಲರೂ ಉತ್ತೇಜಿತರಾಗಿ ಪ್ರದರ್ಶನವನ್ನು ನೋಡುವುದರಲ್ಲಿ ಕಾತರರಾಗಿ ಕುಳಿತರು.

ಯುಧಿಷ್ಠಿರನೇ ಮೊದಲಾದ ಸಕಲರಾಜಕುಮಾರರೂ ಅಂಗುಲಿತ್ರಾಣ ಗಳನ್ನೂ–ಬತ್ತಳಿಕೆಗಳನ್ನೂ ಧರಿಸಿದವರಾಗಿ, ಸೊಂಟಕ್ಕೆ ಬಿಗಿಯಾದ ವಸ್ತ್ರವನ್ನು ಕಟ್ಟಿಕೊಂಡು, ದಿವ್ಯಾಯುಧಪಾಣಿಗಳಾಗಿ, ಧನುಸ್ಸಿನೊಡನೆ ರಂಗಮಂಟಪಕ್ಕೆ ಬಂದು ತಮ್ಮ-ತಮ್ಮ ಕೌಶಲವನ್ನು ತೋರಲು ಪ್ರಾರಂಭಿಸಿದರು. ಲಕ್ಷ್ಯಕ್ಕೆ ಗುರಿಯಿಟ್ಟು ಬಾಣಪ್ರಯೋಗವು ಪ್ರಾರಂಭವಾದೊಡನೆಯೇ ಅನೇಕ ವೀಕ್ಷಕರು–ಬಾಣಗಳು ತಮ್ಮ ಮೇಲೆ ಬೀಳುವುದೆಂದು ಹೆದರಿ ತಲೆಯನ್ನು ನೆಲಕ್ಕೆ ತಗ್ಗಿಸಿ ಕುಳಿತರು. ಅವರು ಪಡುತ್ತಿದ್ದ ಕಷ್ಟವನ್ನು ನೋಡಲು ಸಾಧ್ಯವಾಗುತ್ತಿರಲಿಲ್ಲ. ಬಾಣ ಬಿಡುವುದನ್ನು ನೋಡಬೇಕೆಂಬ ಆಸೆಯಿಂದ ತಲೆಯನ್ನೊಮ್ಮೆ ಮೇಲಕ್ಕೆತ್ತುತ್ತಿದ್ದರು. ಬಾಣವನ್ನು ಬಿಟ್ಟ ನಂತರ 'ಸೊಯ್' ಎಂಬ ಶಬ್ದವನ್ನು ಕೇಳಿದೊಡನೆಯೇ ತಲೆಯನ್ನು ಬಗ್ಗಿಸಿಬಿಡುತ್ತಿದ್ದರು. ಮತ್ತೆ ಕೆಲವರು ಧೈರ್ಯದಿಂದ ತಲೆಯೆತ್ತಿ ನೋಡುತ್ತಿದ್ದರು. ರಾಜಕುಮಾರರು ಅಶ್ವವನ್ನೇರಿ ಚಿತ್ರ-ವಿಚಿತ್ರವಾಗಿ ನಡೆಸುತ್ತಾ ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆಯುತ್ತಿದ್ದರು. ಅವೆಲ್ಲವನ್ನೂ ನೋಡುತ್ತಿದ್ದ ಪ್ರೇಕ್ಷಕರು ತಾವು ಗಂಧರ್ವಲೋಕವನ್ನು ನೋಡುತ್ತಿರಬಹುದೆಂದು ಭ್ರಾಂತಿಯನ್ನು ತಾಳಿದರು. ರಾಜಕುಮಾರರು ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆದೊಡನೆಯೇ ಪ್ರೇಕ್ಷಕರು–'ಸಾಧು ಸಾಧು'–ಎಂದು ಕೂಗುತ್ತಿದ್ದರು.

ಬಾಣಪ್ರಯೋಗಗಳಲ್ಲಿ, ರಥವನ್ನು ನಡೆಸುವುದರಲ್ಲಿ, ಗಜಾರೋಹಣ-

ಅಶ್ವಾರೋಹಣಗಳಲ್ಲಿ, ಬಾಹುಯುದ್ಧಗಳಲ್ಲಿ ನಾನಾವಿಧವಾದ ನೈಪುಣ್ಯ ವನ್ನು ತೋರಿದನಂತರ ರಾಜಕುಮಾರರು ಕತ್ತಿ-ಗುರಾಣಿಗಳನ್ನು ಪ್ರದರ್ಶ ನಾರ್ಥವಾಗಿ ತೆಗೆದುಕೊಂಡರು.

ಖಡ್ಗವನ್ನು ತಿರುಗಿಸುವ ಚಾಕಚಕ್ಯತೆ ; ಖಡ್ಗವನ್ನು ತಿರುಗಿಸುತ್ತಾ ಒಂದೇ ವೇಳೆಯಲ್ಲಿ ನಾಲ್ವರನ್ನು ನಿರೋಧಿಸುವುದು ; ಬಾಣ, ಗದೆ, ಈಟಿ ಮುಂತಾದುವುಗಳ ಪ್ರಯೋಗಗಳನ್ನೂ ಖಡ್ಗವನ್ನು ತಿರುಗಿಸುವ ಕೈಚಳಕ ದಿಂದಲೇ ನಿರೋಧಿಸುವುದು ; ಆಪತ್ಕಾಲದಲ್ಲಿಯೂ ಹಿಡಿದಿರುವ ಬಿಗು ಮಾನ–ಇತ್ಯಾದಿಗಳನ್ನು ನೋಡಿ ಪ್ರೇಕ್ಷಕರು ಆಶ್ಚರ್ಯಭರಿತರಾದರು.

ಅದಾದನಂತರ ದ್ವಂದ್ವಯುದ್ಧಪ್ರದರ್ಶನವು ಪ್ರಾರಂಭವಾಯಿತು. ಭೀಮ-ದುರ್ಯೋಧನರು ತಮ್ಮ ತಮ್ಮ ಗದೆಗಳನ್ನು ಹೆಗಲಿಗೇರಿಸಿಕೊಂಡು– ಶಿಖರಗಳುಳ್ಳ ಎರಡು ಪರ್ವತಗಳು ಎದುರು-ಬದುರಾಗಿ ಬಂದು ನಿಲ್ಲು ವಂತೆ–ಮಂಟಪದ ಮಧ್ಯಕ್ಕೆ ಬಂದು ನಿಂತರು. ಇಬ್ಬರೂ ಸೊಂಟಪಟ್ಟಿ ಗಳನ್ನು ಕಟ್ಟಿದ್ದರು. ಪೌರುಷಪ್ರದರ್ಶನಕ್ಕಾಗಿಯೇ ಅವರಲ್ಲಿಗೆ ಬಂದಿದ್ದರು. ಒಂದು ಹೆಣ್ಣಾನೆಯ ಸಲುವಾಗಿ ಎರಡು ಮದಗಜಗಳು ಸೆಣೆಸಾಡಲು ನಿಂತಿರುವಂತೆ ಭೀಮ-ದುರ್ಯೋಧನರು ಗದೆಯನ್ನೆತ್ತಿ ನಿಂತಿದ್ದರು.

ಅವರಿಬ್ಬರ ಮನಸ್ಸಿನಲ್ಲಿಯೂ ಪ್ರದರ್ಶನದ ಇಚ್ಛೆಯು ಮಾತ್ರವೇ ಇರದೇ–ಒಬ್ಬರು ಮತ್ತೊಬ್ಬರನ್ನು ಪರಾಜಯಗೊಳಿಸಬೇಕೆನ್ನುವ ಉತ್ಸಾ ಹವೂ ತುಂಬಿದ್ದಿತು. ಭೀಮ-ದುರ್ಯೋಧನರು ಮದಗಜಗಳಂತೆ ಗರ್ಜನೆ ಮಾಡುತ್ತಾ ಗದಾಯುದ್ಧಪ್ರದರ್ಶನವನ್ನು ಪ್ರಾರಂಭಿಸಿದರು. ಮದಿಸಿದ ಗಜಗಳೋಪಾದಿಯಲ್ಲಿ ಭೀಮ-ದುರ್ಯೋಧನರು ವರಸೆ-ವರಸೆಯಾಗಿ ಎಡಕ್ಕೂ, ಬಲಕ್ಕೂ, ಮಂಡಲಾಕಾರವಾಗಿಯೂ ಸುತ್ತುತ್ತಿದ್ದರು. ಅವರ ಭ್ರಮಣರೀತಿಯನ್ನೂ, ಕೈಚಳಕದ ಸಾಮರ್ಥ್ಯವನ್ನೂ ವಿದುರನು ಧೃತರಾಷ್ಟ್ರನಿಗೂ, ಕುಂತಿಯು ಗಾಂಧಾರಿಗೂ ವಿಶದವಾಗಿ ಹೇಳುತ್ತಿದ್ದರು.

೧೩೪ನೆಯ ಅಧ್ಯಾಯವು ಮುಗಿಯಿತು.

# ಭೀಮ-ದುರ್ಯೋಧನರ ಮತ್ತು ಅರ್ಜುನನ ಪ್ರಾವೀಣ್ಯ ಪ್ರದರ್ಶನ

ಪಾರಿಕ್ಷಿತ! ಶಾಸ್ತ್ರೋಕ್ತರೀತಿಯಲ್ಲಿ ವಾಮಭ್ರಮಣ, ದಕ್ಷಿಣಭ್ರಮಣ, ಚಕ್ರಭ್ರಮಣ, ಊರ್ಧ್ವಭ್ರಮಣ–ಮುಂತಾದ ಕ್ರಿಯೆಗಳೆಲ್ಲವೂ ಮುಗಿದು ಭೀಮ-ದುರ್ಯೋಧನರ ಗದಾಯುದ್ಧಪ್ರದರ್ಶನವು ಬಿರುಸಾಗಿ ಮುಂದುವರಿಯುತ್ತಿತ್ತು. ಕ್ಷಣಮಾತ್ರದಲ್ಲಿ ಏನಾಗುವುದೆಂಬುದನ್ನು ಊಹಿಸಲೂ ಸಾಧ್ಯವಾಗದೇ ಪ್ರೇಕ್ಷಕರಲ್ಲಿ ಕೆಲವರು–'ಭಲಾ! ದುರ್ಯೋಧನನು ಗೆದ್ದನು'–ಎಂದೂ ಮತ್ತೆ ಕೆಲವರು–'ಭಲಾ! ಭೀಮನು ಗೆದ್ದನು'– ಎಂದೂ ಕೂಗಲು ಪ್ರಾರಂಭಿಸಿದರು. ಯದ್ಯಪಿ ಪ್ರದರ್ಶನಕಾರರಲ್ಲಿ ಪರಸ್ಪರ ಸೋಲು-ಗೆಲುವುಗಳು ಆಗದಿದ್ದರೂ ಪ್ರೇಕ್ಷಕರಲ್ಲಿ ಸೋಲು-ಗೆಲುವುಗಳ ವಾಗ್ವಾದವು ಹೆಚ್ಚಾಯಿತು. ಅದನ್ನು ಕಂಡ ದ್ರೋಣರು ತಮ್ಮ ಪುತ್ರನನ್ನು ಕರೆದು-ಕೂಡಲೇ ಹೋಗಿ ಭೀಮ-ದುರ್ಯೋಧನರ ಯುದ್ಧವನ್ನು ನಿಲ್ಲಿಸಬೇಕೆಂದೂ, ಇಲ್ಲದಿದ್ದರೆ ಪ್ರಜೆಗಳಲ್ಲಿ ವಾಗ್ವಾದವು ಪ್ರಾರಂಭವಾಗಿ ಘರ್ಷಣೆಗೆ ಅವಕಾಶವಾಗಬಹುದೆಂದೂ ಮತ್ತು ಭೀಮ-ದುರ್ಯೋಧನರ ಗದಾಯುದ್ಧ ಪ್ರದರ್ಶನವು ನಿಶ್ಚಯವಾದ ಯುದ್ಧವಾಗಿಯೇ ಪರಿಣಮಿಸಿಬಿಡಬಹುದೆಂದೂ–ಹೇಳಿಕಳುಹಿಸಿದರು.

ಅವರು ಹೇಳಿದಂತೆಯೇ ಅಶ್ವತ್ಥಾಮನು–ಪ್ರಳಯಕಾಲದಲ್ಲಿ ಹುಟ್ಟುವ ಗಾಳಿಯಿಂದ ಅಲ್ಲೋಲ-ಕಲ್ಲೋಲವಾಗುವ ಎರಡು ಸಮುದ್ರಗಳಂತೆ ಕಾಣುತ್ತಿದ್ದ ಭೀಮ-ದುರ್ಯೋಧನರ ಬಳಿಗೆ ಹೋಗಿ, ಇಬ್ಬರನ್ನೂ ಸಮಾಧಾನಪಡಿಸಿ, ಪ್ರೇಕ್ಷಕರ ಹಸ್ತತಾಡನಪೂರ್ವಕವಾದ ಪ್ರಶಂಸೆಗಳೊಡನೆ ಪ್ರದರ್ಶನದ ಸ್ಥಳದಿಂದ ಹಿಂದಕ್ಕೆ ಕರೆತಂದನು.

ಆಚಾರ್ಯರಾದ ದ್ರೋಣರು ಪ್ರದರ್ಶನಸಮಯದಲ್ಲಿ ಮಾಡುತ್ತಿದ್ದ ವಾದ್ಯಘೋಷವನ್ನು ನಿಲ್ಲಿಸುವಂತೆ ಹೇಳಿ, ಉಚ್ಚಸ್ವರದಿಂದ ಸಭಾಸದರನ್ನು ಕುರಿತು–" ಸಭಿಕರೇ! ಪಾರ್ಥನು ಬರುವುದನ್ನೀಗ ನಿರೀಕ್ಷಿಸಿರಿ. ಇವನು ನನಗೆ ಮಗನಿಗಿಂತಲೂ ಪ್ರಿಯನಾಗಿರುವನು. ಇಂದ್ರನ ಮಗನಾದ

ಅರ್ಜುನನು ಇಂದ್ರನ ತಮ್ಮನಾದ ವಿಷ್ಣುವಿಗೆ ಸಮಾನನಾದವನು. ಧನುರ್ವಿದ್ಯೆಯಲ್ಲಿ ಪಾರಂಗತನಾಗಿರುವನು"–ಎಂದರು. ಆಚಾರ್ಯರ ಮಾತಿನಂತೆ ಅರ್ಜುನನು ಸ್ವಸ್ತ್ಯಯನವನ್ನು ಮಾಡಿಸಿಕೊಂಡು, ಅಂಗುಲಿರಕ್ಷೆಯನ್ನು ಧರಿಸಿದವನಾಗಿ, ಬಾಣ-ಬತ್ತಳಿಕೆಗಳಿಂದೊಡಗೂಡಿ, ಸ್ವರ್ಣಮಯವಾದ ಕವಚವನ್ನು ಧರಿಸಿ–ಮುಳುಗುತ್ತಿರುವ ಸೂರ್ಯನ ಕಿರಣಗಳಿಂದಲೂ, ಕಾಮನಬಿಲ್ಲಿನಿಂದಲೂ ಮತ್ತು ಮಿಂಚಿನಿಂದಲೂ ಕೂಡಿದ ಮೋಡದಂತೆ ಶೋಭಿಸುತ್ತಾ–ರಂಗಕ್ಕೆ ಪ್ರವೇಶಿಸಿದನು. ಪ್ರೇಕ್ಷಕರೆಲ್ಲರೂ ಸ್ತಬ್ಧರಾಗಿ ಕುಳಿತರು.

ಧನುರ್ಧಾರಿಯಾಗಿ ಬಂದ ಅರ್ಜುನನನ್ನು ನೋಡಿದೊಡನೆಯೇ ಜನಸ್ತೋಮವು ಆನಂದದಲ್ಲಿ ಮುಳುಗಿತು. ವಾದ್ಯಗಳು ಯಥಾಪೂರ್ವವಾಗಿ ಘೋಷಣೆಮಾಡಲು ಪ್ರಾರಂಭಿಸಿದುವು.

'ಓಹೋ! ಇವನು ಪಾಂಡವರಲ್ಲಿ ಮೂರನೆಯವನಪ್ಪಾ!'

'ಇವನು ಇಂದ್ರನ ಅನುಗ್ರಹದಿಂದ ಹುಟ್ಟಿದವನಂತೆ!'

'ಕುರುವಂಶಕ್ಕೆ ರಕ್ಷಕನೆಂದು ಅಶರೀರವಾಣಿಯೇ ಹೇಳಿದೆಯಂತೆ!'

'ಇವನು ಧನುರ್ವಿದ್ಯೆಯಲ್ಲಿ ಅಪ್ರತಿಮನೆಂದು ಆಚಾರ್ಯ ದ್ರೋಣರೇ ಹೇಳಿಬಿಟ್ಟರಲ್ಲ!'

'ಇವನು ಪರಾಕ್ರಮಿಯಾಗಿರುವಂತೆಯೇ ಧರ್ಮಾತ್ಮನೂ ಆಗಿರುವನಂತೆ!'

'ಇವನು ಸುಶೀಲನಾಗಿರುವುದು ಮಾತ್ರವಲ್ಲದೇ ಜ್ಞಾನನಿಧಿಯೆಂದೂ ಹೇಳುವರು.'

ಹೀಗೆ ನಾನಾರೀತಿಯಾಗಿ ಪ್ರಜೆಗಳೆಲ್ಲರೂ ಅರ್ಜುನನ ವಿಷಯವಾಗಿ ತಮಗೆ ತಿಳಿದಿದ್ದ ಅಂಶಗಳನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು.

ತನ್ನ ಪುತ್ರನ ವಿಷಯವಾಗಿ ಜನರಾಡಿಕೊಳ್ಳುತ್ತಿದ್ದ ಮಾತುಗಳನ್ನು ಕೇಳಿ ಕುಂತಿಯ ಕಣ್ಣುಗಳಿಂದ ಆನಂದಬಾಷ್ಪಗಳು ಸುರಿದುದು ಮಾತ್ರವಲ್ಲದೇ ಆನಂದದಿಂದ ಎದೆಯುಬ್ಬಿ ಸ್ತನ್ಯವು ಹೊರಸೂಸಿ, ಆನಂದಬಾಷ್ಪಗಳೊಡನೆ ಬೆರೆತು ಹೃದಯವನ್ನೆಲ್ಲಾ ತೋಯಿಸಿತು.

ಧೃತರಾಷ್ಟ್ರನಿಗೆ ಕೇವಲ ' ಗಲ-ಗಲಾ ' ಶಬ್ದಗಳು ಕೇಳುತ್ತಿದ್ದುವೇ

ಹೊರತು ಜನಗಳ ಮಾತು ಸ್ಪಷ್ಟವಾಗಿ ಕೇಳುತ್ತಿರಲಿಲ್ಲ. ರಾಜನು ವಿದುರನನ್ನು ಕುರಿತು–"ಏಕಿಷ್ಟೊಂದು ಕೋಲಾಹಲ? ಕ್ಷುಭಿತವಾದ ಸಮುದ್ರದ ಶಬ್ದಕ್ಕೆ ಸಮಾನವಾದ ಶಬ್ದವಿಲ್ಲಿ ಕೇಳಿಬರುತ್ತಿದೆ. ಇದ್ದಕ್ಕಿದ್ದಂತೆಯೇ ಉದ್ಭೂತವಾದ ಈ ಮಹಾನಿನಾದವು ಆಕಾಶವನ್ನೇ ಸೀಳಿಬಿಡುವಂತೆ ಕಾಣುತ್ತಿದೆ. ಕಾರಣವೇನು? ತಮ್ಮ!" ಎಂದು ಕೇಳಿದನು.

"ಪಾಂಡುವಿನ ಮಗನಾದ ಅರ್ಜುನನು ದಿವ್ಯವಾದ ಕವಚವನ್ನು ಧರಿಸಿ ರಂಗಮಂಟಪಕ್ಕೆ ಬಂದಿರುವನು. ಆದುದರಿಂದ ಜನರೆಲ್ಲರೂ ಅವನ ವಿಷಯವಾಗಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದಾರೆ"–ಎಂದು ವಿದುರನು ಹೇಳಿದನು.

''ವಿದುರ! ನಿಶ್ಚಯವಾಗಿಯೂ ಕುಂತಿಯೆಂಬ ಅರಣಿಯಿಂದ ಸಮುದ್ಭೂತರಾದ ಪಾಂಡವರೆಂಬ ತ್ರೇತಾಗ್ನಿಗಳಿಂದ ನಾನು ಧನ್ಯನೂ, ಅನುಗೃಹೀತನೂ, ರಕ್ಷಿತನೂ ಆಗಿರುವೆನಲ್ಲವೇ?"

ವಿದುರನು– "ಅಹುದು, ಮಹಾರಾ ಜ!"–ಎಂದನು.

ಪಾರ್ಥನು ಧನುರ್ವಿದ್ಯೆಯ ಪ್ರದರ್ಶನವನ್ನು ಪ್ರಾರಂಭಿಸಿದೊಡನೆಯೇ ಕೋಲಾಹಲದ ಶಬ್ದವಡಗಿತು. ಪಾರ್ಥನು ಹಿಂದೆ ರಾಜಕುಮಾರರು ತೋರಿದ ಕೌಶಲ್ಯಕ್ಕಿಂತಲೂ ಹೆಚ್ಚಿನ ಧನುರ್ವಿದ್ಯಾಕೌಶಲವನ್ನು ತೋರುವನೆಂಬುದು ಪ್ರೇಕ್ಷಕರ ನಿರೀಕ್ಷೆಯಾಗಿತ್ತು.

ಪಾರ್ಥನು ಮೊದಲು ಬಾಣಬಿಡುವ ಕೈಚಳಕವನ್ನು ಸಭ್ಯರಿಗೆ ತೋರಿದನಂತರ ಮಂತ್ರಾಸ್ತ್ರಗಳ ಪ್ರದರ್ಶನವನ್ನು ಪ್ರಾರಂಭಿಸಿದನು.

**ಆಗ್ನೇಯೇನಾಸೃಜದ್ವಹ್ನಿಂ ವಾರುಣೇನಾಸೃಜತ್ಪಯಃ ।**
**ವಾಯವ್ಯೇನಾಸೃಜದ್ವಾಯುಂ ಪಾರ್ಜನ್ಯೇನಾಸೃಜದ್ಘನಾನ್ ॥೧೯॥**

**ಭೌಮೇನ ಪ್ರಾವಿಶದ್ಭೂಮಿಂ ಪಾರ್ವತೇನಾಸೃಜದ್ಗಿರೀನ್ ।**
**ಅನ್ತರ್ಧಾನೇನ ಚಾಸ್ತ್ರೇಣ ಪುನರನ್ತರ್ಹಿತೋಽಭವತ್ ॥೨೦॥**

**ಕ್ಷಣಾತ್ಪ್ರಾಂಶುಃ ಕ್ಷಣಾದ್ಧ್ರಸ್ವಃ ಕ್ಷಣಾಚ್ಚ ರಥಧೂರ್ಗತಃ ।**
**ಕ್ಷಣೇನ ರಥಮಧ್ಯಸ್ಥಃ ಕ್ಷಣೇನಾವತರನ್ಮಹೀಮ್ ॥೨೧॥**

ಆಗ್ನೇಯಾಸ್ತ್ರದಿಂದ ಅಗ್ನಿಯನ್ನೂ, ವಾರುಣಾಸ್ತ್ರದಿಂದ ನೀರನ್ನೂ,

ವಾಯವ್ಯಾಸ್ತ್ರದಿಂದ ಗಾಳಿಯನ್ನೂ, ಪಾರ್ಜನ್ಯಾಸ್ತ್ರದಿಂದ ಮೋಡಗಳನ್ನೂ ಸೃಷ್ಟಿಸಿದನು. ಭೌಮಾಸ್ತ್ರದಿಂದ ಭೂಮಿಯನ್ನು ಪ್ರವೇಶಿಸಿದನು. ಪಾರ್ವತಾಸ್ತ್ರದಿಂದ ಬೆಟ್ಟಗಳನ್ನು ಸೃಷ್ಟಿಮಾಡಿದನು. ಅಂತರ್ಧಾನಾಸ್ತ್ರದಿಂದ ಕಣ್ಣಿಗೆ ಕಾಣದಂತಾದನು. ಆಚಾರ್ಯಪ್ರಿಯನಾದ ಅರ್ಜುನನು ಒಮ್ಮೆ ಪ್ರೇಕ್ಷಕರಿಗೆ ಉದ್ದವಾಗಿಯೂ, ಮತ್ತೊಮ್ಮೆ ಕುಳ್ಳಾಗಿಯೂ, ಒಮ್ಮೆ ರಥದಲ್ಲಿ ಸಾರಥಿಯಾಗಿಯೂ, ಮರುಕ್ಷಣದಲ್ಲಿಯೇ ರಥದೊಳಗೆ ಕುಳಿತು ಬಾಣಪ್ರಯೋಗಮಾಡುತ್ತಿರುವಂತೆಯೂ ಕಾಣುತ್ತಿದ್ದನು. ರಥವು ವೇಗವಾಗಿ ಹೋಗುತ್ತಿದ್ದಂತೆಯೇ ನೆಲದ ಮೇಲೆಯೂ ಕಾಣಿಸಿಕೊಳ್ಳುತ್ತಿದ್ದನು.

ದ್ರೋಣರಿಗೆ ಪರಮಪ್ರಿಯನಾದ ಅರ್ಜುನನು ಬಹುಸೂಕ್ಷ್ಮವಾದ ವಸ್ತುಗಳನ್ನೂ ಭೇದಿಸಿದನು. ಲಕ್ಷ್ಯಕ್ಕೆ ಸ್ವಲ್ಪವಾದರೂ ಅಪಾಯವಾಗದಂತೆ ಬಾಣಪ್ರಯೋಗಮಾಡಿದನು. ಬಹಳ ದೊಡ್ಡದಾದ ಮತ್ತು ಭಾರವಾದ ವಸ್ತುಗಳನ್ನೂ ಭೇದಿಸುತ್ತಾ ಅಭ್ಯಾಸಬಲದಿಂದ ಅನೇಕಲಕ್ಷ್ಯಗಳನ್ನು ಚಿತ್ರ-ವಿಚಿತ್ರ ರೀತಿಯಲ್ಲಿ ಹೊಡೆಯುತ್ತಿದ್ದನು. ಸುತ್ತುತ್ತಿರುವ ಲೋಹದ ಹಂದಿಯ ಬಾಯೊಳಕ್ಕೆ ಐದು ಬಾಣಗಳನ್ನು ಒಂದೇ ಬಾಣದಂತೆ ಪ್ರಯೋಗಿಸಿದನು. ಹಗ್ಗಕ್ಕೆ ಬಿಗಿದು ಅತ್ತಲಿತ್ತ ಚಲಿಸುವಂತೆ ಮಾಡಿದ್ದ ಹಸುವಿನ ಕೊಂಬಿನ ಪೊಟರೆಯೊಳಕ್ಕೆ ಇಪ್ಪತ್ತೊಂದು ಬಾಣಗಳನ್ನು ಒಂದೇ ಸಲ ಪ್ರಯೋಗಿಸಿದನು. ಹೀಗೆ ಅರ್ಜುನನು ತನ್ನ ಕೌಶಲವನ್ನು ಕತ್ತಿವರಸೆ, ಗದಾಪ್ರಯೋಗ–ಮುಂತಾದುವುಗಳಲ್ಲಿಯೂ ತೋರಿಸಿ ಜನರಿಗೆ ಅಮಿತಾನಂದವನ್ನುಂಟುಮಾಡಿದನು.

ಪ್ರದರ್ಶನವೆಲ್ಲವೂ ಮುಗಿದು, ಜನರ ಉದ್ವೇಗವು ಕಮ್ಮಿಯಾಗಿ, ಮಂಗಳವಾದ್ಯಗಳ ಧ್ವನಿಗಳೂ ನಿಂತು, ಎಲ್ಲರೂ ತಮ್ಮ ತಮ್ಮ ನಿವಾಸಗಳಿಗೆ ಹೊರಡಬೇಕೆಂದಿರುವುದರೊಳಗಾಗಿ–ರಂಗಮಂಟಪದ ಮಹಾದ್ವಾರದ ಕಡೆಯಿಂದ ಗಟ್ಟಿಯಾಗಿ ಭುಜಗಳನ್ನು ಆಸ್ಫಾಲಿಸಿದ ಶಬ್ದವು ಕೇಳಿಬಂದಿತು. ಸಿಡಿಲಿನಂತಿದ್ದ ಆ ಶಬ್ದವು ವೀರನೊಬ್ಬನ ಮಾಹಾತ್ಮ್ಯ-ಪರಾಕ್ರಮಗಳ ಸೂಚಕವಾಗಿದ್ದಿತು.

ಮಹಾದ್ವಾರದ ಕಡೆಯಿಂದ ಬಂದ ಮಹಾಘೋಷವನ್ನು ಕೇಳಿ, ಸಭಿಕರೆಲ್ಲರೂ–ಪರ್ವತಗಳೇನಾದರೂ ಸೀಳಿಹೋಗುತ್ತಿವೆಯೋ ಅಥವಾ

ಭೂಕಂಪವೇನಾದರೂ ಆಗುತ್ತಿದೆಯೋ ಅಥವಾ ನಾಲ್ಕು ದಿಕ್ಕುಗಳಿಂದಲೂ ಏಕಕಾಲದಲ್ಲಿ ಸಿಡಿಲು-ಗುಡುಗುಗಳು ಹೊರಬರುತ್ತಿವೆಯೋ–ಎಂದು ನಾನಾ ರೀತಿಯಲ್ಲಿ ಯೋಚಿಸುತ್ತಾ, ಭ್ರಾಂತರಾಗಿ ಮಹಾದ್ವಾರದ ಕಡೆಗೆ ತಿರುಗಿದರು. ಐದು ಹಸ್ತನಕ್ಷತ್ರಸಮೂಹದಿಂದೊಡಗೂಡಿದ ಚಂದ್ರನಂತೆ–ಪಂಚಪಾಂಡವರ ಮಧ್ಯದಲ್ಲಿದ್ದ ದ್ರೋಣರೂ, ದಾನವರ ಮೇಲೆ ಯುದ್ಧಕ್ಕೆ ಹೊರಡುವ ಇಂದ್ರನೋಪಾದಿಯಲ್ಲಿ–ನೂರು ಮಂದಿ ತಮ್ಮಂದಿರು ಮತ್ತು ಗುರುಪುತ್ರನಾದ ಅಶ್ವತ್ಥಾಮನಿಂದೊಡಗೂಡಿದ ದುರ್ಯೋಧನನೂ ಚಕಿತ ರಾಗಿ ಬಾಗಿಲಕಡೆಗೆ ತಿರುಗಿದರು.

೧೩೫ನೆಯ ಅಧ್ಯಾಯವು ಮುಗಿಯಿತು.

೧೩೬ನೆಯ ಅಧ್ಯಾಯ ಸಂಭವಪರ್ವ (ಮುಂದುವರೆದಿದೆ.)

## ರಂಗಸ್ಥಳಕ್ಕೆ ಕರ್ಣನ ಪ್ರವೇಶ : ದುರ್ಯೋಧನನಿಂದ ಅಂಗರಾಜ್ಯಾಭಿಷೇಕ

ಜನಮೇಜಯ! ಹುಟ್ಟಿನಿಂದಲೇ ಇದ್ದ ವಜ್ರಕವಚದಿಂದಲೂ ಮತ್ತು ಕರ್ಣಕುಂಡಲಗಳಿಂದಲೂ ಪ್ರಕಾಶಿಸುತ್ತಾ–ನಡೆಯುವ ಪರ್ವತಶಿಖರದಂತೆ ಗಂಭೀರವಾಗಿ ಬರುತ್ತಿದ್ದ ಕರ್ಣನಿಗೆ ಸಭಿಕರು ಹಿಂದೆ ಸರಿದು ರಂಗಮಂಟಪಕ್ಕೆ ಧಾವಿಸಲು ದಾರಿಮಾಡಿಕೊಟ್ಟರು. ಕರ್ಣನು ಸಭಿಕರಿಗೆ ಹೊಸಬನಾಗಿ ಕಂಡರೂ ಕುಂತಿಯ ಮೊದಲನೆಯ ಮಗನೇ ಆಗಿದ್ದನು. ಅವಳು ಕನ್ಯೆಯಾಗಿದ್ದಾಗಲೇ ಸೂರ್ಯನ ವರಪ್ರಸಾದದಿಂದ ಹುಟ್ಟಿದವನು. ಬಲದಲ್ಲಿ ಸಿಂಹದಂತೆಯೂ, ವೀರ್ಯದಲ್ಲಿ ವೃಷಭದಂತೆಯೂ, ಪರಾಕ್ರಮದಲ್ಲಿ ಗಜೇಂದ್ರನಂತೆಯೂ ಇದ್ದ ಕರ್ಣನು ಪ್ರಕಾಶದಲ್ಲಿ ಸೂರ್ಯನಂತೆಯೂ, ಕಾಂತಿಯಲ್ಲಿ ಚಂದ್ರನಂತೆಯೂ, ತೇಜಸ್ಸಿನಲ್ಲಿ ಅಗ್ನಿಗೆ ಸಮಾನನಾಗಿಯೂ ಇದ್ದನು. ಸೂರ್ಯಪುತ್ರನಾದ ಕರ್ಣನು ಕನಕತಾಳವೃಕ್ಷದಂತೆ ಎತ್ತರವಾಗಿಯೂ, ಸಿಂಹದಂತಹ ಶರೀರವುಳ್ಳವನಾಗಿಯೂ, ಸಕಲಗುಣಸಂಪನ್ನನಾಗಿಯೂ ಇದ್ದನು. ರಂಗಮಂಟಪದೊಳಕ್ಕೆ ಬಂದು, ಸುತ್ತಲೂ ನೋಡಿ, ಉಚ್ಚಾಸನದಲ್ಲಿ ಕುಳಿತಿದ್ದ ದ್ರೋಣ-ಕೃಪರನ್ನು ಅನಾದರಣೆಯಿಂದಲೇ ನಮಿಸಿ, ರಂಗಮಂಟಪದ ಮಧ್ಯದಲ್ಲಿ ನಿಂತನು. 'ಇವನಾರು? ಎಲ್ಲಿಯವನು?' ಎಂದು

ಸಭಿಕರಾಡಿಕೊಳ್ಳುತ್ತಿದ್ದ ಪಿಸುಮಾತುಗಳಿಂದ ಸಭಾಮಂಟಪದಲ್ಲಿಯೇ ಒಂದು ವಿಧವಾದ ಉದ್ವೇಗವಿರುವಂತೆ ಕಂಡುಬರುತ್ತಿದ್ದಿತು. ಸೂರ್ಯಪುತ್ರನಾದ ಕರ್ಣನು ಗುಡುಗಿನಂತೆ ಗಂಭೀರವಾದ ಧ್ವನಿಯಲ್ಲಿ ತನ್ನ ಸಹೋದರನಾದ ಪಾರ್ಥನನ್ನು–ಸಹೋದರನೆಂಬ ಅರಿವಿಲ್ಲದೆಯೇ–ಸಂಬೋಧಿಸಿ ಹೇಳಿದನು:

"ಪಾರ್ಥ! ಎವೆಯಿಕ್ಕದೇ ನೋಡುತ್ತಿರುವ ಈ ಸಭಾಸದರ ಮುಂದೆ ನೀನು ತೋರಿದ ಧನುರ್ವಿದ್ಯಾಚಾತುರ್ಯವನ್ನು ಮೀರಿಸಿ ನಾನು ನನ್ನ ಚಾತುರ್ಯವನ್ನು ತೋರುವೆನು. ಸಭಿಕರು ಮಾತ್ರವಲ್ಲ; ನೀನೂ ಸಹ ಅಚ್ಚರಿಹೊಂದುವ ರೀತಿಯಲ್ಲಿ ತೋರುವೆನು"–ಎಂದು ಹೇಳಿ ಹೆಗಲ ಮೇಲಿದ್ದ ಧನುಸ್ಸನ್ನು ಎಡಗೈಯಲ್ಲಿ ಹಿಡಿದು, ಬತ್ತಳಿಕೆಯಿಂದ ಹೊರತೆಗೆದ ಬಾಣವನ್ನು ಯೋಜಿಸುತ್ತಿದ್ದಂತೆಯೇ ಸಭಿಕರೆಲ್ಲರೂ–ಯಾವುದೋ ಯಂತ್ರದಿಂದ ಹೊಡೆದೆಬ್ಬಿಸಲ್ಪಟ್ಟವರಂತೆಯೇ–ಚಕಿತರಾಗಿ ಮೇಲೆದ್ದು ನಿಂತರು.

ಕರ್ಣನ ಮಾತುಗಳನ್ನು ಕೇಳಿ ದುರ್ಯೋಧನನಿಗೆ ಅಮಿತಾನಂದವಾಯಿತು. ಅಂತೆಯೇ ಅರ್ಜುನನಿಗೆ ಸ್ವಲ್ಪ ನಾಚಿಕೆಯೂ ಅನಂತರ ಕೋಪವೂ ಉಂಟಾಯಿತು. ದ್ರೋಣರ ಅನುಮತಿಯನ್ನು ಪಡೆದು ಕರ್ಣನು–ಪಾರ್ಥನು ಹಿಂದೆ ತೋರಿದ್ದ ಧನುರ್ವಿದ್ಯಾಚಾತುರ್ಯವೆಲ್ಲವನ್ನೂ ಒಂದರ ಮೇಲೊಂದಾಗಿ ಪ್ರದರ್ಶಿಸಿದನು. ಸಭಿಕರೆಲ್ಲರೂ 'ಭಲಾ!ಭಲಾ!'–ಎಂದು ಕರ್ಣನನ್ನು ಶ್ಲಾಘಿಸಿದರು. ದುರ್ಯೋಧನನು ರಂಗಮಂಟಪದೊಳಕ್ಕೆ ಬಂದು ಕರ್ಣನನ್ನು ಬಾಚಿ ತಬ್ಬಿ, ಅನಂತರ ಕೈಹಿಡಿದು ಹೇಳಿದನು :

"ವೀರಾಗ್ರಣಿಯೇ! ನನ್ನ ಅದೃಷ್ಟವಿಶೇಷದಿಂದಲೇ ನೀನಿಂದು ನನಗೆ ಲಭಿಸಿರುವೆ. ನೀನು ನನ್ನ ರಾಜ್ಯದಲ್ಲಿ ಸ್ವೇಚ್ಛೆಯಿಂದಿರಬಹುದು. ನಾನೂ ಮತ್ತು ನನ್ನ ರಾಜ್ಯದ ಪ್ರಜೆಗಳೂ ನಿನ್ನ ಆಜ್ಞಾಧಾರಕರಾಗಿರುವೆವು."

"ದುರ್ಯೋಧನ! ನಿನ್ನ ಮಾತಿನಿಂದಲೇ ಸಕಲವೂ ಪ್ರಾಪ್ತವಾಯಿತೆಂದೇ ತಿಳಿದಿರುವೆನು. ಆದರೆ ನಾನು ನಿನ್ನ ಮೈತ್ರಿಯನ್ನು ಮಾತ್ರವೇ ಅಪೇಕ್ಷಿಸುವೆನು. ರಾಜೇಂದ್ರನೇ! ನನ್ನ ಮತ್ತೊಂದು ಇಚ್ಛೆಯೆಂದರೆ ಅರ್ಜುನನೊಡನೆ ದ್ವಂದ್ವಯುದ್ಧ; ಇದು ನನ್ನ ಜೀವನದ ಹಂಬಲ."

"ಕರ್ಣ! ನೀನು ನನ್ನೊಡನಿದ್ದು ಸಕಲವಿಧವಾದ ಭೋಗಗಳನ್ನೂ

ಅನುಭವಿಸು. ಬಂಧುಮಿತ್ರರಿಗೆ ಪ್ರಿಯವನ್ನುಂಟುಮಾಡುತ್ತಾ, ಶತ್ರುಗಳ ತಲೆಯ ಮೇಲೆ ಕಾಲಿಡುತ್ತಾ ನನ್ನ ರಾಜ್ಯದಲ್ಲಿ ಸುಖವಾಗಿರು"–ಎಂದು ಹೇಳಿ, ತನ್ನ ನೂರು ಮಂದಿ ತಮ್ಮಂದಿರನ್ನೂ–ಅಶ್ವತ್ಥಾಮನನ್ನೂ ಕರ್ಣನಿಗೆ ಪರಿಚಯಮಾಡಿಕೊಟ್ಟನು.

ಕರ್ಣನ ಮಾತುಗಳಿಂದ ಅಪಮಾನಿತನಾದಂತೆ ಭಾವಿಸಿದ ಅರ್ಜುನನು ಕೌರವಸಹೋದರರ ಮಧ್ಯದಲ್ಲಿ ಬೆಟ್ಟದಂತೆ ನಿಂತಿದ್ದ ಕರ್ಣನನ್ನು ಕುರಿತು ಹೇಳಿದನು :

**ಅನಾಹೂತೋಪಸೃಷ್ಟಾನಾಮನಾಹೂತೋಪಜಲ್ಪಿನಾಮ್ ।**
**ಯೇ ಲೋಕಾಸ್ತಾನ್ಹತಃ ಕರ್ಣ ಮಯಾ ತ್ವಂ ಪ್ರತಿಪತ್ಸ್ಯಸೇ ॥೧೮॥**

"ಕರ್ಣ! ಆಹ್ವಾನವಿಲ್ಲದೇ ಬರುವವರಿಗೂ ಮತ್ತು ಅನಾಹೂತರಾಗಿ ಮಧ್ಯೆ ಮಾತನಾಡುವವರಿಗೂ ಯಾವ ಲೋಕಗಳು ಸಿಕ್ಕುತ್ತವೆಯೋ–ಆ ಲೋಕಗಳಿಗೆ ನಿನ್ನನ್ನು ಈಗಲೇ ಸಂಹರಿಸಿ ಕಳುಹಿಸಿಕೊಡುವೆನು. ಎಚ್ಚರಿಕೆಯಿರಲಿ!"

ಕರ್ಣನು ಹೇಳುತ್ತಾನೆ :

**ರಙ್ಗೋಽಯಂ ಸರ್ವಸಾಮಾನ್ಯಃ ಕಿಮತ್ರ ತವ ಫಾಲ್ಗುನ ।**
**ವೀರ್ಯಶ್ರೇಷ್ಠಾಶ್ಚ ರಾಜಾನೋ ಬಲಂ ಧರ್ಮೋಽನುವರ್ತತೇ ॥೧೯॥**
**ಕಿಂ ಕ್ಷೇಪೈರ್ದುರ್ಬಲಾಯಾಸೈಃ ಶರೈಃ ಕಥಯ ಭಾರತ ।**
**ಗುರೋಃ ಸಮಕ್ಷಂ ಯಾವತ್ತೇ ಹರಾಮ್ಯದ್ಯ ಶಿರಃ ಶರೈಃ ॥೨೦॥**

"ಪಾರ್ಥ! ಈ ರಂಗಮಂಟಪವು ನಿನಗೆ ಮಾತ್ರವೇ ರಚಿತವಾಗಿಲ್ಲ. ಧನುರ್ವಿದ್ಯೆಯಲ್ಲಿ ಚತುರತೆಯಿರುವವರಿಗೆಲ್ಲಾ ಪ್ರದರ್ಶನಾರ್ಥವಾಗಿ ಈ ರಂಗಮಂಟಪವು ರಚಿತವಾಗಿದೆ. ರಾಜರು ಪರಾಕ್ರಮದಿಂದಲೇ ಶ್ರೇಷ್ಠ ರಾಗುತ್ತಾರೆ. ಧರ್ಮವು ಬಾಹುಬಲವನ್ನೇ ಅನುಸರಿಸುತ್ತದೆ. ಬರೀ ಆಕ್ಷೇಪ ಗಳಿಂದ ಪ್ರಯೋಜನವೇನು? ಪಾರ್ಥ! ಇದು ಕೇವಲ ದುರ್ಬಲತ್ವ ದ್ಯೋತಕವಾಗುವುದು. ಶಕ್ತಿಯಿದ್ದರೆ ಬಾಣಗಳ ಮೂಲಕ ಮಾತನಾಡು. ನಿನ್ನ ಗುರುವಿನೆದುರಿನಲ್ಲಿಯೇ ನಿನ್ನ ತಲೆಯನ್ನು ನನ್ನ ತೀಕ್ಷ್ಣವಾದ ಶರಗಳಿಂದ ಕೆಡಹುವೆನು."

ವೀರರಿಗೆ ಇಂತಹ ಮಾತುಗಳನ್ನು ಕೇಳಿದರೆ ಒಡನೆಯೇ ರೌದ್ರಾವೇಶ

ಗಳುಂಟಾಗುವುದರಲ್ಲಿ ಆಶ್ಚರ್ಯವೇನಿದೆ? ಧರ್ಮ-ಭೀಮಾದಿಗಳು ಪಾರ್ಥನನ್ನು ಬಾಚಿ ತಬ್ಬಿ, ಭುಜಗಳನ್ನು ಚಪ್ಪರಿಸಿ ಕಳುಹಿಸಿದರು. ಪಾರ್ಥನು ಗುರುಗಳಾದ ದ್ರೋಣರ ಅನುಜ್ಞೆಯನ್ನು ಪಡೆದು ದ್ವಂದ್ವಯುದ್ಧಕ್ಕೆ ಸಿದ್ಧನಾದನು. ಅತ್ತಕಡೆಯಲ್ಲಿ ಕರ್ಣನೂ ದುರ್ಯೋಧನಾದಿಗಳಿಂದ ಉತ್ತೇಜಿತನಾಗಿ ಯುದ್ಧಕ್ಕೆ ಸಿದ್ಧನಾದನು.

ಒಡನೆಯೇ ಭಯಂಕರವಾದ ಕಾರ್ಮುಗಿಲು ನಾಲ್ಕು ದಿಕ್ಕುಗಳನ್ನೂ ಆವರಿಸಿತು. ಗುಡುಗು-ಸಿಡಿಲು-ಮಿಂಚುಗಳೂ ಪ್ರೇಕ್ಷಕರಲ್ಲಿ ಹೆಚ್ಚಾದ ಭ್ರಾಂತಿಯನ್ನುಂಟುಮಾಡಿದುವು. ಇಷ್ಟಾದರೂ ಮಳೆಯು ಬಾರದಿರುವಿಕೆಯನ್ನು ಸೂಚಿಸುವ ಕಾಮನಬಿಲ್ಲು ಅಂತರಿಕ್ಷದಲ್ಲಿ ಪ್ರಕಾಶಿಸಿತು. ಇಂದ್ರಾಯುಧ (ಕಾಮನಬಿಲ್ಲು,) ಕಾರ್ಮುಗಿಲು, ಗುಡುಗು, ಮಿಂಚುಗಳನ್ನು ಮುಂದೆಮಾಡಿಕೊಂಡು ಅವುಗಳೊಡೆಯನಾದ ಇಂದ್ರನು ತನ್ನ ಮಗನನ್ನು ನೋಡಲು ಬಂದಿರುವನೋ ಎಂಬಂತೆ ಕಾಣುತ್ತಿತ್ತು. ಮತ್ತೊಂದೆಡೆಯಲ್ಲಿ ಸೂರ್ಯನು ತನ್ನ ಮುಂದಿದ್ದ ಮೋಡಗಳೆಲ್ಲವನ್ನೂ ದೂರಮಾಡಿ, ತನ್ನ ಮಗನಾದ ಕರ್ಣನನ್ನು ವಾತ್ಸಲ್ಯದಿಂದ ನೋಡುತ್ತಿರುವಂತೆ ಭಾಸವಾಗುತ್ತಿತ್ತು. ಅರ್ಥಾತ್ ಪಾರ್ಥನ ಮೇಲ್ಭಾಗದಲ್ಲಿ ಮೋಡಗಳು ಕಂಡುಬಂದುವು. ಕರ್ಣನ ಮೇಲೆ ಸೂರ್ಯನ ಬೆಳಕು ಬಿದ್ದಿದ್ದಿತು.

ದುರ್ಯೋಧನಾದಿಗಳು ಕರ್ಣನನ್ನು ಅನುಸರಿಸಿಯೂ, ಕೃಪ-ದ್ರೋಣ-ಭೀಷ್ಮರು ಪಾರ್ಥನನ್ನು ಅನುಸರಿಸಿಯೂ ನಿಂತಿದ್ದರು. ಸಭೆಯಲ್ಲಿಯೂ ಕೆಲವರು ಕರ್ಣನಿಗೆ ಜಯವನ್ನು ಕೋರುತ್ತಲೂ, ಕೆಲವರು ಪಾರ್ಥನಿಗೆ ಜಯವನ್ನು ಆಶಿಸುತ್ತಲೂ ವಿಭಾಗವಾದರು. ಕರ್ಣನ ಜನ್ಮರಹಸ್ಯವನ್ನು ತಿಳಿದಿದ್ದ ಕುಂತಿಯು ಮಾತ್ರ ತನ್ನ ಈರ್ವರು ಮಕ್ಕಳೂ ದ್ವಂದ್ವಯುದ್ಧಕ್ಕೆ ಇಳಿದಿರುವುದನ್ನು ಕಂಡು ಮೂರ್ಛೆಹೋದಳು. ಒಡನೆಯೇ ವಿದುರನು ದಾಸಿಯರ ಸಹಾಯದಿಂದ ಕುಂತಿಯ ಮೇಲೆ ಶ್ರೀಗಂಧದ ನೀರನ್ನು ಸಿಂಪಡಿಸಿ ಪ್ರಜ್ಞೆಬರುವಂತೆ ಮಾಡಿದನು. ಚೇತನಗೊಂಡ ಕುಂತಿಯು ತನ್ನ ಮಕ್ಕಳಿಬ್ಬರೂ ಕವಚ-ತೂಣೀರಗಳೊಡನೆ ಯುದ್ಧಕ್ಕೆ ಸಿದ್ಧರಾಗಿರುವುದನ್ನು ನೋಡಿ ಪುನಃ ಭೀತಳಾದಳು. ಆದರೆ ಆ ಯುದ್ಧವನ್ನು ತಡೆಯಲು ಆಕೆಗೆ ಸಾಧ್ಯವಿರಲಿಲ್ಲ.

ಆ ಮಧ್ಯದಲ್ಲಿ ಧರ್ಮಸೂಕ್ಷ್ಮವನ್ನರಿತಿದ್ದ ಕೃಪರು ಕರ್ಣನನ್ನು ಕುರಿತು ಹೇಳಿದರು: "ಕರ್ಣ! ಈ ಪಾಂಡವನು ಕುಂತಿಯ ಕಿರಿಯ ಮಗನು. ಇವನು ಕೌರವಮಹಾವಂಶಕ್ಕೆ ಸೇರಿದವನಾಗಿದ್ದಾನೆ. ನಿನ್ನೊಡನೆ ದ್ವಂದ್ವಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದಾನೆ. ಆದರೆ ಯುದ್ಧವು ಪ್ರಾರಂಭವಾಗುವುದಕ್ಕೆ ಮೊದಲು ನೀನಾರು? ಯಾವ ಮಹಾವಂಶಕ್ಕೆ ಸೇರಿದವನು? ನಿನ್ನ ತಂದೆ-ತಾಯಿಗಳಾರು?–ಇವೆಲ್ಲವನ್ನೂ ವಿವರಿಸಿ ಹೇಳಬೇಕು. ಅನಂತರವೇ ನೀನು ದ್ವಂದ್ವಯುದ್ಧಕ್ಕೆ ಯೋಗ್ಯನೋ ಅಯೋಗ್ಯನೋ–ಎಂಬುದನ್ನು ಪಾರ್ಥನು ನಿರ್ಧರಿಸುವನು.

**ವೃಥಾಕುಲಸಮಾಚಾರೈರ್ನ ಯುಧ್ಯನ್ತೇ ನೃಪಾತ್ಮಜಾಃ ॥೩೩॥**

ರಾಜಪುತ್ರರು ಕುಲಾಚಾರಹೀನರೊಡನೆ ಯುದ್ಧಮಾಡಲಾರರು."

ಅಡ್ಡಮಳೆಯು ಬಿದ್ದಾಗ ಸರೋವರದಲ್ಲಿರುವ ಕಮಲದ ಎಸಳುಗಳು ಕಳಚಿ ಕೆಳಗೆ ಬಿದ್ದು ಕಮಲವೂ ಕಾಂತಿಹೀನವಾಗುವಂತೆ–ಕೃಪರ ಮಾತನ್ನು ಕೇಳಿದ ಕರ್ಣನ ಮುಖಕಮಲವು ವಿವರ್ಣವಾಯಿತು.

ಚತುರನಾದ ದುರ್ಯೋಧನನು ಕರ್ಣನ ಕುಂದಿದ್ದ ಮುಖಾರವಿಂದ ವನ್ನು ನೋಡಿ ಕೃಪರನ್ನು ಕುರಿತು ಹೇಳತೊಡಗಿದನು :

**ಆಚಾರ್ಯ ತ್ರಿವಿಧಾ ಯೋನೀ ರಾಜ್ಞಾಂ ಶಾಸ್ತ್ರವಿನಿಶ್ಚಯೇ ।**
**ಸತ್ಕುಲೀನಶ್ಚ ಶೂರಶ್ಚ ಯಶ್ಚ ಸೇನಾಂ ಪ್ರಕರ್ಷತಿ ॥೩೫॥**

"ಆಚಾರ್ಯರೇ! ಶಾಸ್ತ್ರಗಳನ್ನು ಪರಿಶೀಲಿಸಿ ಹೇಳುವುದಾದರೆ ಮೂರು ಮಾರ್ಗಗಳಿಂದ ರಾಜತ್ವವನ್ನು ಪಡೆಯಲು ಸಾಧ್ಯವಿದೆ. ಕುಲವು ಮಾತ್ರವೇ ರಾಜತ್ವದ ಸಾಧನವೆನಿಸಲಾರದು. ಕುಲ, ಶೌರ್ಯ ಮತ್ತು ಸೇನೆ ಯನ್ನು ನಡೆಸುವ ಸಾಮರ್ಥ್ಯ (ಸೇನಾಪತ್ಯ)–ಇವು ಮೂರು ರಾಜತ್ವದ ಸಾಧಕಗಳಾಗಿರುತ್ತವೆ. ಶೌರ್ಯ ಮತ್ತು ಸೇನೆಯನ್ನು ನಡೆಸುವ ಸಾಮರ್ಥ್ಯ ಇವೆರಡೂ ಕರ್ಣನಲ್ಲಿರುವಾಗ ಕುಲವನ್ನು ಪರಿಶೀಲಿಸುವ ಕಾರಣವೇನೂ ಇಲ್ಲ. ಒಂದು ವೇಳೆ ಅರ್ಜುನನು ರಾಜನಲ್ಲದವನೊಡನೆ ಯುದ್ಧವನ್ನು ಮಾಡಲು ಇಷ್ಟಪಡುವುದಿಲ್ಲವಾದರೆ–ಈಗಲೇ ನಾನು ಕರ್ಣನನ್ನು ಅಂಗ ರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡುವೆನು."

ಹೀಗೆ ಹೇಳಿದ ದುರ್ಯೋಧನನು, ಹಿರಿಯರು ತನ್ನ ನಿರ್ಧಾರವನ್ನು

ಕುರಿತು ಏನು ಹೇಳುವರೆಂಬ ನಿರೀಕ್ಷೆಯನ್ನೂ ಮಾಡಲಿಲ್ಲ. ಕರ್ಣಾರ್ಜುನರ ಯುದ್ಧವಾಗಿ, ಅರ್ಜುನನ ವಿನಾಶವಾಗಬೇಕೆಂಬುದೇ ದುರ್ಯೋಧನನ ಮುಖ್ಯವಾದ ಆಶಯವಾಗಿತ್ತು. ಕಾಲವು ಮಿಂಚಿಹೋದರೆ ಯುದ್ಧವೆಲ್ಲಿ ನಡೆಯದೇ ಹೋಗುವುದೋ ಎಂಬ ಆತಂಕವೂ ದುರ್ಯೋಧನನ ಮನಸ್ಸಿನಲ್ಲಿ



ಹುಟ್ಟಿರಬಹುದು. ರಾಜಪುರೋಹಿತರನ್ನು ಕೂಡಲೇ ಕರೆಯಿಸಿದನು. ರತ್ನಸಿಂಹಾಸನವನ್ನು ತರಿಸಿ ಮಂಗಳವಾದ್ಯಗಳೊಡನೆ ಕರ್ಣನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದನು. ತಲೆಯ ಮೇಲೆ ಶ್ವೇತಚ್ಛತ್ರಿಯು ಹಿಡಿಯಲ್ಪಟ್ಟಿತು. ಚಾರರು ಚಾಮರಗಳನ್ನು ಬೀಸತೊಡಗಿದರು. ಪುರೋಹಿತರು ಮಂತ್ರೋಚ್ಚಾರಣೆಮಾಡುತ್ತಾ–'ಕರ್ಣನಿಗೆ ಜಯವಾಗಲಿ!'–ಎಂಬ ಜಯಘೋಷ

ಗಳೊಡನೆ ಅರಳು ಮತ್ತು ಕುಸುಮಾಕ್ಷತೆಗಳನ್ನು ತಲೆಯ ಮೇಲೆ ಹಾಕಿ, ಸುಗಂಧೋದಕದಿಂದ ಕರ್ಣನನ್ನು ಯಥಾವಿಧಿಯಾಗಿ ಅಭಿಷೇಚಿಸಿದರು. ಈ ರೀತಿಯಾಗಿ ದುರ್ಯೋಧನಾದಿಗಳು ಕರ್ಣನಿಗೆ ಅಂಗರಾಜ್ಯದ ಪಟ್ಟಾಭಿಷೇಕ ವನ್ನೂ ಮಾಡಿದರು. ಕೃಪರ ಮಾತುಗಳನ್ನು ಕೇಳಿ ವಿಷಣ್ಣನಾಗಿದ್ದ ಕರ್ಣನಿಗೆ ತನ್ನನ್ನು ಕ್ಷಣಮಾತ್ರದಲ್ಲಿ ರಾಜನನ್ನಾಗಿ ಮಾಡಿದ ದುರ್ಯೋಧನನ ವಿಷಯವಾಗಿ ಏನು ಹೇಳಬೇಕೆಂಬುದೇ ತೋರದಾಯಿತು. ದುರ್ಯೋಧನನನ್ನು ನೋಡುತ್ತಿದ್ದಂತೆಯೇ ಕರ್ಣನ ಕಣ್ಣುಗಳಿಂದ ಕೃತಜ್ಞತಾರೂಪ ವಾದ ಆನಂದಬಾಷ್ಪಗಳು ಉದುರತೊಡಗಿದುವು.

"ಕೌರವೇಶ್ವರ! ನೀನು ಮಾಡಿರುವ ಅಂಗರಾಜ್ಯಾಭಿಷೇಕಕ್ಕೆ ಅನುಗುಣವಾದ ಯಾವ ಪ್ರತ್ಯುಪಕಾರವನ್ನು ಮಾಡಲಿ? ನಿನ್ನ ಇಂದಿನ ಕಾರ್ಯವು ನನ್ನ ಜೀವನದಲ್ಲಿಯೇ ಚಿರಸ್ಮರಣೀಯವಾಗಿ ನಿಲ್ಲುವುದಾಗಿದೆ. ನೀನು ಏನು ಹೇಳಿದರೆ ಅದನ್ನು ಮಾಡಿಕೊಡಲು ಸದಾ ಸಿದ್ಧನಿದ್ದೇನೆ, ರಾಜೇಂದ್ರ!"

ಕರ್ಣನ ಮಾತುಗಳನ್ನು ಕೇಳಿ ದುರ್ಯೋಧನನು ಕರ್ಣನ ಕೈಹಿಡಿದು ಹೇಳಿದನು : "ನನಗೆ ಬೇರಾವ ಪ್ರತ್ಯುಪಕಾರವೂ ಬೇಡ, ಕರ್ಣ! ನಿನ್ನೊಡನೆ ಅಚಲವಾದ, ಪವಿತ್ರವಾದ ಸಖ್ಯವಿರಬೇಕೆಂಬುದೇ ನನ್ನ ಜೀವನದ ಹಂಬಲ."

ಕರ್ಣನು ಹಾಗೆಯೇ ಆಗಲೆಂದು ಹೇಳುತ್ತಾ ಸಿಂಹಾಸನದಿಂದಿಳಿದು ದುರ್ಯೋಧನನನ್ನು ಗಾಢಾಲಿಂಗನಮಾಡಿಕೊಂಡನು. ಅವರ ಆಗಿನ ಆನಂದವು ಅವರ್ಣನೀಯವಾಗಿತ್ತು. ಕರ್ಣನ ಅಂಗರಾಜ್ಯದ ಅಭಿಷೇಕ ದೊಡನೆ ಕರ್ಣ-ದುರ್ಯೋಧನರ ಮೈತ್ರಿಯ ಅಂಕುರಾರ್ಪಣವೂ ಆಯಿತು. ಸಭಿಕರೆಲ್ಲರೂ 'ಕರ್ಣನಿಗೆ ಜಯವಾಗಲಿ!' 'ಕೌರವೇಶ್ವರನಿಗೆ ಜಯ ವಾಗಲಿ!' ಎಂದು ನೂರಾರು ಬಾರಿ ಜಯಘೋಷಗಳನ್ನು ಮಾಡಿದರು.

೧೩೬ನೆಯ ಅಧ್ಯಾಯವು ಮುಗಿಯಿತು.

## ಭೀಮಸೇನನಿಂದ ಕರ್ಣನ ತಿರಸ್ಕಾರ : ದುರ್ಯೋಧನನಿಂದ ಪುರಸ್ಕಾರ

ವೈಶಂಪಾಯನರು ಹೇಳುತ್ತಾರೆ :

**ತತಃ ಸ್ರಸ್ತೋತ್ತರಪಟಃ ಸಪ್ರಸ್ವೇದಃ ಸವೇಪಥುಃ ।**
**ವಿವೇಶಾಧಿರಥೋ ರಙ್ಗಂ ಯಷ್ಟಿಪ್ರಾಣೋ ಹ್ವಯನ್ನಿವ ॥೧॥**

ಮಹಾರಾಜ! ಬಳಿಕ ನೆಲದವರೆಗೂ ಇಳಿಬಿದ್ದಿದ್ದ ಉತ್ತರೀಯವನ್ನು ಹೊದೆದುಕೊಂಡು, ಅಂಗಾಂಗಗಳಿಂದಲೂ ಬೆವರನ್ನು ಸುರಿಸುತ್ತಾ, ತರ-ತರನೆ ನಡುಗುತ್ತಾ, ಆಸರೆಯ ಕೋಲು ಹಿಡಿದು– 'ಮಗನೇ!'–ಎಂಬ ಅಕ್ಕರೆಯ ದನಿಯೊಡನೆ ಅಧಿರಥನು ರಂಗಮಂಟಪವನ್ನು ಪ್ರವೇಶಿಸಿದನು.

ಒಡನೆಯೇ ಕರ್ಣನು ತನ್ನ ಧನುರ್ಬಾಣಗಳನ್ನು ತೆಗೆದಿಟ್ಟು, ಪಿತೃಪ್ರೇಮದಿಂದ ಪ್ರೇರಿತನಾಗಿ ಅಧಿರಥನ ಬಳಿಗೆ ಹೋಗಿ, ಅಭಿಷೇಕದಿಂದ ತೋಯ್ದಿದ್ದ ತಲೆಯನ್ನು ಅವನ ಕಾಲುಗಳ ಮೇಲಿಟ್ಟನು. ಅಭಿಷಿಕ್ತವಾದ ತಲೆಗೆ ತನ್ನ ಕಾಲುಗಳ ಸ್ಪರ್ಶವಾಗಕೂಡದೋ ಎಂಬಂತೆ ಅಧಿರಥನು ಅಂಗವಸ್ತ್ರದಿಂದ ತನ್ನ ಕಾಲುಗಳನ್ನು ಮುಚ್ಚಿಕೊಂಡು, ಕರ್ಣನನ್ನು ತನ್ನ ಎರಡು ಕೈಗಳಿಂದಲೂ ಹಿಡಿದು ಮೇಲೆತ್ತಿ– "ಮಗನೇ! ನನ್ನ ಇಂದಿನ ಆನಂದವನ್ನು ಯಾರಲ್ಲಿ ಹೇಳಲಿ?"–ಎನ್ನುತ್ತಾ ಬಾಚಿ ತಬ್ಬಿಕೊಂಡು ಸತತವಾಗಿ ಬರುತ್ತಿದ್ದ ಆನಂದಬಾಷ್ಪಗಳಿಂದ ಮೊದಲೇ ತೋಯ್ದುಹೋಗಿದ್ದ ಕರ್ಣನ ತಲೆಯನ್ನು ಮತ್ತಷ್ಟು ತೋಯಿಸಿದನು.

ಆಗ ಭೀಮಸೇನನು ಕರ್ಣನನ್ನು, ನಿಶ್ಚಯವಾಗಿಯೂ ಅಧಿರಥನ ಮಗನೆಂದೇ ನಿಶ್ಚಯಿಸಿ ಅಟ್ಟಹಾಸದ ನಗುವನ್ನು ನಕ್ಕು ಹೇಳತೊಡಗಿದನು :

"ಕರ್ಣ! ಸಾರಥಿಯ ಮಗನಾದ ನೀನು ನಿಶ್ಚಯವಾಗಿಯೂ ಕ್ಷತ್ರಿಯಕುಲಾವತಂಸನಾದ ಅರ್ಜುನನ ಶಸ್ತ್ರಾಸ್ತ್ರಗಳಿಗೆ ಲಕ್ಷ್ಯನಾಗಲು ಯೋಗ್ಯನಲ್ಲ. ಅವನಿಗೆ ಸಮಾನನೆಂದು ಸೆಣಸಿ, ಅವನ ಶರಗಳಿಂದ ಪ್ರಾಣ

ಬಿಡಲು ಖಂಡಿತವಾಗಿಯೂ ನೀನು ಅನರ್ಹನು. ನಿನ್ನ ಕುಲಾನುಗತವಾಗಿ ಬಂದ ಚಾವಟಿಯನ್ನೇ ಹಿಡಿಯುವುದು ಒಳ್ಳೆಯದಲ್ಲವೇ? ಸಾರಥಿಯ ಮಗನಿಗೆ ಅಂಗರಾಜ್ಯದ ಅಭಿಷೇಕ! ಯಜ್ಞದಲ್ಲಿ ಅಗ್ನಿಯ ಸಮೀಪದಲ್ಲಿರುವ ಪುರೋಡಾಶವನ್ನು ತಿನ್ನಲು ನಾಯಿಯು ಹೇಗೆ ಯೋಗ್ಯವಲ್ಲವೋ– ಹಾಗೆಯೇ ಅಂಗರಾಜ್ಯಕ್ಕೆ ಅಧಿಪತಿಯಾಗಲು ಸರ್ವಥಾ ನೀನು ಯೋಗ್ಯನಲ್ಲ.''

ಭೀಮಸೇನನ ಮಾತುಗಳು ಕರ್ಣನ ಕಿವಿಯೊಳಗೆ ಶೂಲದಂತೆ ಪ್ರವೇಶಿಸಿದುವು. ಅಂಗರಾಜ್ಯದ ಪಟ್ಟಾಭಿಷೇಕದಿಂದ ಪ್ರಫುಲ್ಲವಾಗಿದ್ದ ಮುಖಾರವಿಂದವು ಕೋಪದ ಆವಿರ್ಭಾವದಿಂದ ಕೆಂಡದಂತೆ ಕೆಂಪಾಯಿತು. ತುಟಿಗಳು ಅದುರತೊಡಗಿದುವು.

ಭೀಮನ ಕಡೆಗೆ ತಿರುಗಿ ದುರ-ದುರನೆ ನೋಡಿದನು. ಭೀಮನು ಪಕ-ಪಕನೆ ನಗುತ್ತಿದ್ದನು.

ನಿರುಪಾಯನಾದ ಕರ್ಣನು ದೀರ್ಘವಾದ ನಿಟ್ಟುಸಿರೊಂದನ್ನು ಬಿಡುತ್ತಾ, ತನ್ನ ಆರಾಧ್ಯದೇವನಾದ ಮತ್ತು ನಿಜಪಿತೃವಾದ ಸೂರ್ಯ ದೇವನನ್ನು ದೈನ್ಯದಿಂದ ದಿಟ್ಟಿಸಿನೋಡಿದನು.

ಕರ್ಣಸಖನಿಗೆ ಭೀಮನ ಮಾತುಗಳನ್ನು ಕೇಳಿ ಸುಮ್ಮನೆ ಕುಳಿತಿರಲು ಸಾಧ್ಯವಾಗಲೇ ಇಲ್ಲ. ಮದಿಸಿದಾನೆಯು ಕಮಲಗಳಿಂದ ತುಂಬಿದ ಸರೋವರದಿಂದ ಗರ್ಜಿಸುತ್ತಾ ಹೊರಗೆ ಬರುವಂತೆ–ಅನುಜರ ಮಧ್ಯದಿಂದ ದುರ್ಯೋಧನನು ಹೊರಬಂದು, ಕೋಪಾವಿಷ್ಟನಾಗಿ, ಭಯಂಕರವಾದ ಸಾಹಸಕಾರ್ಯವನ್ನು ಮಾಡಲು ಸಮರ್ಥನಾದ ಭೀಮಸೇನನನ್ನು ಕುರಿತು ಕರ್ಕಶಧ್ವನಿಯಿಂದ ಹೇಳತೊಡಗಿದನು :

“ವೃಕೋದರ! ಇಂತಹ ತುಚ್ಛವಾದ ಮಾತುಗಳನ್ನು ಆಡುವುದು ನಿನಗೆ ಸರ್ವಥಾ ಯೋಗ್ಯವಲ್ಲ.

**ಕ್ಷತ್ರಿಯಾಣಾಂ ಬಲಂ ಜ್ಯೇಷ್ಠಂ ಯೋದ್ಧವ್ಯಂ ಕ್ಷತ್ರಬನ್ಧುನಾ * ।**
**ಶೂರಾಣಾಂ ಚ ನದೀನಾಂ ಚ ದುರ್ವಿದಾಃ ಪ್ರಭವಾಃ ಕಿಲ ॥೧೧॥**

---

* 'ಕ್ಷತ್ರಬಂಧು' ಶಬ್ದಕ್ಕೆ ಕ್ಷತ್ರಿಯಾಧಮನೆಂದು ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ.

ಕ್ಷತ್ರಿಯರಿಗೆ ಬಲವೇ ಪ್ರಧಾನವಾಗಿರುವುದು. ಆದುದರಿಂದ ಕ್ಷತ್ರಿಯನು ತನ್ನ ಎದುರಾಳಿಯು ಕ್ಷತ್ರಬಂಧುವೇ ಆಗಿದ್ದರೂ (ಕ್ಷತ್ರಿಯಾಧಮನೇ ಆಗಿದ್ದರೂ) ಅವನು ಬಲಿಷ್ಠನಾಗಿದ್ದರೆ, ಬಲದಲ್ಲಿ ತನಗೆ ಸಮಾನನಾಗಿದ್ದರೆ ಅವನೊಡನೆ ಯುದ್ಧಮಾಡಬೇಕು. ಮಹಾನದಿಗಳ ಮೂಲಗಳು ಹೇಗೆ ರಹಸ್ಯವಾಗಿಯೇ ಇವೆಯೋ–ಹಾಗೆಯೇ ವೀರರಾದವರ ಕುಲ-ಗೋತ್ರಗಳೂ ಗುಪ್ತವಾಗಿಯೇ ಇರುವುವು.

**ಸಲಿಲಾದುತ್ಥಿತೋ ವಹ್ನಿರ್ಯೇನ ವ್ಯಾಪ್ತಂ ಚರಾಚರಮ್ ।**
**ದಧೀಚಸ್ಯಾಸ್ಥಿತೋ ವಜ್ರಂ ಕೃತಂ ದಾನವಸೂದನಮ್ ॥೧೨॥**

ಪ್ರಪಂಚದಲ್ಲೆಲ್ಲಾ ಹರಡಿರುವ ಅಗ್ನಿಯು ನೀರಿನಿಂದ ಹುಟ್ಟಿದೆಯೆಂಬುದನ್ನು ನೀನು ತಿಳಿದಿರುವೆಯಲ್ಲವೇ? ಸಕಲದೈತ್ಯ-ದಾನವರನ್ನೂ ಸಂಹರಿಸಿದ, ಮಹಾತೇಜಸ್ಸಿನಿಂದ ಕೂಡಿರುವ ಇಂದ್ರನ ವಜ್ರಾಯುಧವು ಮಾನವನಾದ ದಧೀಚನ ಮೂಳೆಯಿಂದ ಮಾಡಲ್ಪಟ್ಟಿದೆ.

**ಆಗ್ನೇಯಃ ಕೃತ್ತಿಕಾಪುತ್ರೋ ರೌದ್ರೋ ಗಾಙ್ಗೇಯ ಇತ್ಯಪಿ ।**
**ಶ್ರೂಯತೇ ಭಗವಾನ್ದೇವಃ ಸರ್ವಗುಹ್ಯಮಯೋ ಗುಹಃ ॥೧೩॥**

ಮಹಾಮಹಿಮನಾದ ಷಣ್ಮುಖನ ನಿಜವಾದ ತಂದೆ-ತಾಯಿಗಳಾರೆಂಬುದು ಇಂದಿಗೂ ಸಹ ರಹಸ್ಯವಾಗಿಯೇ ಉಳಿದಿದೆ. ಕೆಲವರು ಅವನನ್ನು ಅಗ್ನಿಯ ಮಗನೆಂದೂ, ಕೆಲವರು ಕೃತ್ತಿಕಾನಕ್ಷತ್ರಗಳ ಮಗನೆಂದೂ, ಮತ್ತೆ ಕೆಲವರು ರುದ್ರನ ಮಗನೆಂದೂ, ಇನ್ನೂ ಕೆಲವರು ಗಂಗಾಪುತ್ರನೆಂದೂ ಹೇಳುವರು. ಆದರೆ ಗುಹನ ಕುಲ-ಗೋತ್ರಗಳನ್ನು ಯಾರು ತಾನೇ ಪರಿಶೀಲಿಸಲು ಹೋಗುವರು? ಅವನ ಪರಾಕ್ರಮವೇ ಅಲ್ಲವೇ ಅವನ ಖ್ಯಾತಿಗೆ ಕಾರಣವಾಗಿರುವುದು? ಅದೂ ಅಲ್ಲದೇ ಕೆಳಗಿನ ಕುಲದಲ್ಲಿ ಜನ್ಮತಾಳಿದವರೂ ಉತ್ತಮಕುಲಕ್ಕೆ ಸೇರಿದ ನಿದರ್ಶನಗಳೂ ಅನೇಕವಿವೆ.

**ಕ್ಷತ್ರಿಯೇಭ್ಯಶ್ಚ ಯೇ ಜಾತಾ ಬ್ರಾಹ್ಮಣಾಸ್ತೇ ಚ ತೇ ಶ್ರುತಾಃ ।**
**ವಿಶ್ವಾಮಿತ್ರಪ್ರಭೃತಯಃ ಪ್ರಾಪ್ತಾ ಬ್ರಹ್ಮತ್ವಮವ್ಯಯಮ್ ॥೧೪॥**

ವಿಶ್ವಾಮಿತ್ರನೇ ಮೊದಲಾದ ಮಹಾಮಹಿಮರು ಕ್ಷತ್ರಿಯಕುಲದಲ್ಲಿ ಹುಟ್ಟಿಯೂ ಬ್ರಾಹ್ಮಣರೆನಿಸಿದರು. ಶಾಶ್ವತವಾದ ಬ್ರಹ್ಮತ್ವವನ್ನು ಪಡೆದರು.

**ಆಚಾರ್ಯಃ ಕಲಶಾಜ್ಜಾತೋ ದ್ರೋಣಃ ಶಸ್ತ್ರಭೃತಾಂ ವರಃ ।**
**ಗೌತಮಸ್ಯಾನ್ವವಾಯೇ ಚ ಶರಸ್ತಮ್ಬಾಚ್ಚ ಗೌತಮಃ ॥೧೫॥**

ನಮ್ಮ ಆಚಾರ್ಯರಾದ ದ್ರೋಣ-ಕೃಪರ ಜನ್ಮವೃತ್ತಾಂತಗಳಾದರೂ ಏನು? ಒಬ್ಬರು (ದ್ರೋಣರು) ಕಲಶದಿಂದ ಜನ್ಮತಾಳಿದರು. ಮತ್ತೊಬ್ಬರು (ಕೃಪರು) ಗೌತಮರ ವಂಶದಲ್ಲಿ ನೊಜೆಯಹುಲ್ಲಿನ ಗುತ್ತಿಯಿಂದ ಜನ್ಮತಾಳಿದರು. ಅವರ ಕುಲ-ಗೋತ್ರಗಳ ವಿಷಯವಾಗಿ ವಿವಾದವೇನಾದರೂ ಇದೆಯೇ? ಎಲ್ಲಕ್ಕಿಂತಲೂ ಮಿಗಿಲಾಗಿ ನಿಮ್ಮ ಜನ್ಮವೃತ್ತಾಂತವೂ ನಮ್ಮೆಲ್ಲರಿಗೂ ಚೆನ್ನಾಗಿ ತಿಳಿದಿದೆ. ಆದುದರಿಂದ ಮಹಾಮಹಿಮರ ಮತ್ತು ವೀರರ ಕುಲ-ಗೋತ್ರಗಳು ವಿಮರ್ಶನೀಯವಲ್ಲ.

ಸ್ವಾಭಾವಿಕಗುಣಗಳನ್ನೇ ಪರಿಶೀಲಿಸುವುದಾದರೆ–ಕರ್ಣನು ಸೂತಪುತ್ರನಲ್ಲ. ಹೆಣ್ಣು ಜಿಂಕೆಯೊಂದು ಹುಲಿಮರಿಯನ್ನು ಹಡೆಯಲು ಸಾಧ್ಯವಿದೆಯೇ? ಭೀಮಸೇನ! ಸಾಮಾನ್ಯಮಹಿಳೆಯ ಹೊಟ್ಟೆಯಲ್ಲಿ ಸೂರ್ಯಸಮಾನವಾದ ತೇಜಸ್ಸಿನಿಂದಲೂ, ಸಕಲಲಕ್ಷಣಗಳಿಂದಲೂ, ಕುಂಡಲ-ಕವಚಗಳಿಂದಲೂ ಕೂಡಿರುವ ಇಂತಹ ಮಹಾಪುರುಷನ ಜನ್ಮವು ಸಾಧ್ಯವೇ? ಇವನು ಮಹಾವಂಶೋತ್ಪನ್ನನೆಂಬುದರಲ್ಲಿ ಸಂಶಯವಿಲ್ಲ. ಇವನ ಭುಜಬಲ-ಪರಾಕ್ರಮಗಳಿಂದಲೂ ಮತ್ತು ನಾನು ಇವನ ಆಜ್ಞಾಧಾರಕನಾಗಿರುವುದರಿಂದಲೂ ಇವನು ಅಂಗರಾಜ್ಯಕ್ಕೆ ಮಾತ್ರವೇ ಅಲ್ಲ ; ಸಕಲಭುವನಗಳಿಗೂ ಸಾರ್ವಭೌಮನಾಗಲು ಸಮರ್ಥನಾಗಿರುವನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ನಾನು ಮಾಡಿರುವ ಕಾರ್ಯವು ಯಾವನಿಗಾದರೂ ಅಸಹನೀಯವಾಗಿದ್ದರೆ ಅಂತಹವನು ಕೂಡಲೇ ರಥವನ್ನು ಹತ್ತಿ, ಧನುಸ್ಸನ್ನು ಬಗ್ಗಿಸಿ, ಹೆದೆಯೇರಿಸಲಿ."

ದುರ್ಯೋಧನನ ಮಾತುಗಳನ್ನು ಕೇಳಿ ರಂಗಮಂಟಪದಲ್ಲಿ ಕೋಲಾಹಲವೇ ಉಂಟಾಯಿತು. ಅನೇಕರು ದುರ್ಯೋಧನನ ಮಾತುಗಳನ್ನು ಒಪ್ಪಿದರು. 'ದುರ್ಯೋಧನನಿಗೆ ಜಯವಾಗಲಿ!', 'ಕರ್ಣನಿಗೆ ಜಯವಾಗಲಿ!' ಎಂದು ಕೂಗಲು ತೊಡಗಿದರು. ಆ ವೇಳೆಗೆ ಸರಿಯಾಗಿ ಸೂರ್ಯನು ಅಸ್ತಂಗತನಾದನು. ದುರ್ಯೋಧನನು ಕರ್ಣನ ಕೈಹಿಡಿದು

ಮಿನುಗುತ್ತಿದ್ದ ಸಾವಿರಾರು ದೀಪಗಳ ಮತ್ತು ಜ್ವಲಿಸುತ್ತಿದ್ದ ಪಂಜಿನ ಬೆಳಕಿನಲ್ಲಿ ರಂಗಮಂಟಪದಿಂದ ಹೊರಕ್ಕೆ ಕರೆದೊಯ್ದನು. ಪಾಂಡವರೂ ದ್ರೋಣ-ಕೃಪ-ಭೀಷ್ಮರೊಡನೆ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

'ಅರ್ಜುನನ ಸಾಮರ್ಥ್ಯವು ಕರ್ಣನಿಗೆಲ್ಲಿದೆ?'

'ನೀನು ಏನೇ ಹೇಳಿದರೂ ಕರ್ಣನೇ ಅರ್ಜುನನಿಗಿಂತಲೂ ಪರಾ ಕ್ರಮಿ.'

'ನನಗೇನೋ ಇಬ್ಬರೂ ಸಮಾನರೆಂದೇ ತೋರುತ್ತದೆ.'

'ನೀವು ಏನೇ ಹೇಳಿದರೂ ಇಬ್ಬರನ್ನೂ ದ್ವಂದ್ವಯುದ್ಧಕ್ಕೆ ಬಿಟ್ಟು ಇವರ ಪರೀಕ್ಷೆಯಾಗಬೇಕೇ ಹೊರತು ನಾವೇನನ್ನೂ ನಿರ್ಧಾರಮಾಡಲು ಸಾಧ್ಯವೇ ಇಲ್ಲ.'

'ಇವೆಲ್ಲವೂ ಹೇಗಾದರೂ ಇರಲಿ ; ದುರ್ಯೋಧನನಾಡಿದ ಮಾತು ಗಳೂ ಒಪ್ಪತಕ್ಕುವುಗಳೇ ಆಗಿವೆ.'

ಈ ರೀತಿಯಾಗಿ ಮಾತನಾಡಿಕೊಳ್ಳುತ್ತಾ ಪ್ರೇಕ್ಷಕರೆಲ್ಲರೂ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

ಕರ್ಣನ ದಿವ್ಯಲಕ್ಷಣಗಳನ್ನು ಕಂಡು ಅವನು ತನ್ನ ಮೊದಲನೆಯ ಮಗನೆಂದು ನಿರ್ಧರಿಸಿದ ಕುಂತಿಯು, ತನ್ನ ಮಗನಿಗೆ ಅಂಗರಾಜ್ಯದ ರಾಜಪದವಿಯು ಸಿಕ್ಕಿದುದಕ್ಕಾಗಿ ಬಹುವಾಗಿ ಸಂತೋಷಪಟ್ಟಳು. ಆದರೆ ಅದನ್ನು ಯಾರಿಗೂ ತಿಳಿಸಲಿಲ್ಲ. ಕರ್ಣನೊಡನೆ ಬೆಳೆಸಿದ ಸಖ್ಯದ ಕಾರಣ ದಿಂದಾಗಿ ದುರ್ಯೋಧನನು ಅರ್ಜುನನ ಸಂಬಂಧವಾಗಿದ್ದ ಭಯವನ್ನು ತೊರೆದನು. ಕರ್ಣನೂ ಶಸ್ತ್ರನಿಷ್ಣಾತನಾದ ದುರ್ಯೋಧನನಿಗೆ ಪ್ರಿಯವಾಕ್ಯ ಗಳನ್ನು ಹೇಳುತ್ತಾ ಸಂತೋಷಪಡಿಸುತ್ತಿದ್ದನು. ಆಗ ಯುಧಿಷ್ಠಿರನೂ ಕರ್ಣನಿಗೆ ಸಮಾನನಾದ ಧನುರ್ವಿದ್ಯಾಕುಶಲನು ಪೃಥ್ವಿಯಲ್ಲಿಯೇ ಬೇರೊಬ್ಬನಿಲ್ಲವೆಂದೂ ಭಾವಿಸಿದನು.

೧೩೭ನೆಯ ಅಧ್ಯಾಯವು ಮುಗಿಯಿತು.

೧೩೮ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

# ದ್ರೋಣರು ಶಿಷ್ಯರ ಮೂಲಕ ದ್ರುಪದನನ್ನು ಪರಾಜಯಗೊಳಿಸಿ ದ್ರುಪದನಿಂದ ಅರ್ಧರಾಜ್ಯವನ್ನು ಪಡೆದುದು

ವೈಶಂಪಾಯನರು ಹೇಳುತ್ತಾರೆ :

**ಪಾಣ್ಡವಾನ್ಧಾರ್ತರಾಷ್ಟ್ರಾಂಶ್ಚ ಕೃತಾಸ್ತ್ರಾನ್ಪ್ರಸಮೀಕ್ಷ್ಯ ಸಃ ।**
**ಗುರ್ವರ್ಥಂ ದಕ್ಷಿಣಾಕಾಲೇ ಪ್ರಾಪ್ತೇಽಮನ್ಯತ ವೈ ಗುರುಃ ॥೧॥**

ಪಾರಿಕ್ಷಿತ! ಕೌರವ-ಪಾಂಡವರಾಜಕುಮಾರರೆಲ್ಲರೂ ಧನುರ್ವಿದ್ಯಾ ಪ್ರವೀಣರಾದುದನ್ನು ಗಮನಿಸಿ, ಗುರುಗಳ ಸಲುವಾಗಿ ಶಿಷ್ಯರು ದಕ್ಷಿಣೆಯನ್ನು ಕೊಡುವ ಕಾಲವು ಸನ್ನಿಹಿತವಾಗಲಾಗಿ, ದ್ರೋಣರು ಯಾವ ರೂಪದಲ್ಲಿ ಗುರುದಕ್ಷಿಣೆಯನ್ನು ಪಡೆಯಬೇಕೆಂಬ ವಿಷಯವಾಗಿ ನಿಶ್ಚಯ ಮಾಡಿದರು.

ವಿದ್ಯೆಯು ಸಾಂಗವಾಗಿ ಮುಗಿದನಂತರ ಗುರುಗಳು ಕೇಳಿದ ಗುರುದಕ್ಷಿಣೆಯನ್ನು ಕೊಡುವುದು ಸಂಪ್ರದಾಯವಾಗಿತ್ತು.

ಒಂದು ದಿನ ರಾಜಕುಮಾರರೆಲ್ಲರನ್ನೂ ಕುಳ್ಳಿರಿಸಿಕೊಂಡು ದ್ರೋಣರು ಹೇಳಿದರು :

"ರಾಜಕುಮಾರರೇ! ನಿಮ್ಮ ಧನುರ್ವಿದ್ಯಾಭ್ಯಾಸವು ಮುಗಿದಿದೆ ಮತ್ತು ಗುರುದಕ್ಷಿಣೆಯನ್ನು ಕೊಡುವ ಕಾಲವೂ ಸನ್ನಿಹಿತವಾಗಿದೆ. ಆದುದ ರಿಂದ ನೀವು ನನಗೆ ಪ್ರಿಯವಾದ ಗುರುದಕ್ಷಿಣೆಯನ್ನು ಕೊಡುವಿರಾ?"

ಶಿಷ್ಯರೆಲ್ಲರೂ ಗುರುಗಳ ಮಾತುಗಳನ್ನು ಗಮನವಿಟ್ಟು ಕೇಳುತ್ತಾ ಕುಳಿತಿದ್ದರು. ದ್ರೋಣರು ಪುನಃ ಹೇಳಿದರು :

**ಪಾಞ್ಚಾಲರಾಜಂ ದ್ರುಪದಂ ಗೃಹೀತ್ವಾ ರಣಮೂರ್ಧನಿ ।**
**ಪರ್ಯಾನಯತ ಭದ್ರಂ ವಃ ಸಾ ಸ್ಯಾತ್ಪರಮದಕ್ಷಿಣಾ ॥೩॥**

"ನೀವೆಲ್ಲರೂ ಸೇರಿ ಪಾಂಚಾಲದೇಶಕ್ಕೆ ಹೋಗಿ ದ್ರುಪದನನ್ನು ಯುದ್ಧದಲ್ಲಿ ಸೆರೆಹಿಡಿದು ತಂದು ನನಗೊಪ್ಪಿಸಬೇಕು. ಅದೇ ನನಗೆ ಕೊಡಬೇಕಾದ ಶ್ರೇಷ್ಠವಾದ ಗುರುದಕ್ಷಿಣೆ."

ರಾಜಕುಮಾರರೆಲ್ಲರೂ–'ಹಾಗೆಯೇ ಆಗಲಿ'–ಎಂದು ಏಕಕಂಠದಿಂದ ಹೇಳಿ, 'ನಾ ಮುಂದು-ತಾ ಮುಂದು' ಎಂಬುದಾಗಿ ಒಡನೆಯೇ ತಮ್ಮ-ತಮ್ಮ ದಿವ್ಯರಥಗಳನ್ನು ಹತ್ತಿ, ದ್ರೋಣರೊಡನೆ ಪಾಂಚಾಲನಗರದ ಕಡೆಗೆ ಧಾವಿಸಿದರು. ದುರ್ಯೋಧನನು ಕರ್ಣ, ಯುಯುತ್ಸು, ದುಃಶಾಸನ, ವಿಕರ್ಣ, ಜಲಸಂಧ, ಸುಲೋಚನ–ಮುಂತಾದ ಕುರುವೀರರ ಸಮೇತನಾಗಿ ಶೀಘ್ರವಾಗಿ ಹೊರಟನು. ಕುರುರಾಜಕುಮಾರರು ಪಾಂಚಾಲದೇಶವನ್ನು ಪ್ರವೇಶಿಸುತ್ತಲೇ ಹಾದಿಯಲ್ಲಿ ಬರುತ್ತಿದ್ದ ಸೈನಿಕರನ್ನು ಧ್ವಂಸಮಾಡುತ್ತಾ ಹೆಚ್ಚಾದ ರಣೋತ್ಸಾಹದೊಡನೆ ರಾಜಧಾನಿಯನ್ನು ಮುತ್ತಿದರು.

ನಗರದಲ್ಲಾಗುತ್ತಿದ್ದ ಕೋಲಾಹಲವನ್ನು ಕೇಳಿದ ದ್ರುಪದನು ತನ್ನ ತಮ್ಮಂದಿರಿಂದೊಡಗೂಡಿ ಅರಮನೆಯಿಂದ ಹೊರಗೆ ಬಂದು ನೋಡಿದನು. ಕೌರವರಾಜಕುಮಾರರು ಯುದ್ಧಸನ್ನದ್ಧರಾಗಿ ಬಂದಿರುವುದನ್ನು ಕಂಡು, ಮರುಕ್ಷಣದಲ್ಲಿಯೇ ದಿವ್ಯರಥವನ್ನೇರಿ ಅನುಜರಿಂದ ಸಮೇತನಾಗಿ ಶತ್ರುಗಳನ್ನು ಎದುರಿಸಿ ನಿಂತನು. ಬಳಿಕ ಯುದ್ಧಸನ್ನದ್ಧರಾದ ದ್ರುಪದನ ಸಹೋದರರು ಗರ್ಜನೆಮಾಡುತ್ತಾ ಶತ್ರುಸೈನ್ಯದ ಮೇಲೆ ಬಾಣಗಳ ಮಳೆಗರೆದರು. ದುರ್ಜಯನಾದ ದ್ರುಪದನು ಉತ್ತಮವಾದ ರಥದಲ್ಲಿ ಕುಳಿತು ಕೌರವರಾಜಕುಮಾರರ ಬಳಿಗೆ ಬಂದು ನಿಶಿತವಾದ ಬಾಣಗಳನ್ನು ಪ್ರಯೋಗಿಸಿದನು. ಎರಡು ಕಡೆಗಳಿಂದಲೂ ಶರವರ್ಷವು ಪ್ರಾರಂಭವಾಯಿತು.

ಕರ್ಣನಿಂದ ಕೂಡಿದ ಕೌರವರಾಜಕುಮಾರರ ಮತ್ತು ಪಾಂಡವರಾದ ತಮ್ಮ ಬಲಾಬಲಗಳ ತಾರತಮ್ಯವನ್ನು ಇಂದು ಪ್ರದರ್ಶಿಸಬೇಕೆಂಬ ಆಸೆಯಿಂದಲೂ, ದರ್ಪದಿಂದ ಕೊಬ್ಬಿಹೋಗಿದ್ದ ಕೌರವರಾಜಕುಮಾರರ ಗರ್ವವನ್ನು ಮುರಿಯುವ ಸಲುವಾಗಿಯೂ ಅರ್ಜುನನು ಮೊದಲೇ ತನ್ನ ಸಹೋದರರೊಡನೆ ಸಮಾಲೋಚಿಸಿ ಆಚಾರ್ಯದ್ರೋಣರಿಗೆ ಹೇಳಿದನು :

**ಏಷಾಂ ಪರಾಕ್ರಮಸ್ಯಾನ್ತೇ ವಯಂ ಕುರ್ಯಾಮ ಸಾಹಸಮ್ ।**
**ಏತೈರಶಕ್ಯಃ ಪಾಞ್ಚಾಲೋ ಗ್ರಹೀತುಂ ರಣಮೂರ್ಧನಿ ॥೧೩॥**

"ಗುರುದೇವ! ಇವರು ತಮ್ಮ ಪರಾಕ್ರಮಗಳನ್ನು ತೋರಿಸಿದ ನಂತರವೇ ನಾವು ನಮ್ಮ ಪರಾಕ್ರಮವನ್ನು ತೋರಿಸುತ್ತೇವೆ. ರಣರಂಗದಲ್ಲಿ

ಈ ದುರ್ಯೋಧನಾದಿಗಳಿಗೆ ದ್ರುಪದನನ್ನು ಬಂಧಿಸಲು ಶಕ್ಯವಾಗಲಾರ ದೆಂಬುದು ನನ್ನ ಅಭಿಪ್ರಾಯವಾಗಿದೆ"–ಹೀಗೆ ಹೇಳಿ, ತನ್ನ ಸಹೋದರ ರೊಡನೆ ನಗರಕ್ಕೆ ಸ್ವಲ್ಪ ದೂರದಲ್ಲಿ ಯುದ್ಧಸನ್ನದ್ಧನಾಗಿ ನಿಂತಿದ್ದನು.

ಅತ್ತ ದ್ರುಪದನು ಬಾಣಪ್ರಯೋಗದ ಕೌಶಲದಿಂದ ಕೌರವರಾಜ ಕುಮಾರರನ್ನು ಭ್ರಾಂತರನ್ನಾಗಿ ಮಾಡಿದನು. ಒಂದೇ ರಥದಲ್ಲಿ ಕುಳಿತು ನಾಲ್ಕು ದಿಕ್ಕುಗಳಲ್ಲಿಯೂ ಬಹುವೇಗದಿಂದ ಸಂಚರಿಸುತ್ತಾ, ಅನುಸ್ಯೂತವಾಗಿ ಬಾಣಗಳ ಮಳೆಗರೆಯುತ್ತಿರುವುದನ್ನು ಕಂಡು, ರಾಜಕುಮಾರರಿಗೆ ನೂರಾರು ದ್ರುಪದರು ತಮ್ಮೆದುರಾಗಿ ಬಂದು ಯುದ್ಧಮಾಡುತ್ತಿರುವರೋ ಎಂಬ ಭ್ರಾಂತಿಯುಂಟಾಯಿತು.

ದ್ರುಪದನ ಬಾಣಗಳು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿದುವು. ಆ ರಣ ರಂಗದಲ್ಲಿ ಪಾಂಚಾಲರ ಶಂಖನಿನಾದಗಳೂ, ಸಾವಿರಾರು ಭೇರೀ-ಮೃದಂಗ ಗಳ ಶಬ್ದಗಳೂ ಅನೇಕಪ್ರಕಾರವಾಗಿ ಕೇಳಿಬರುತ್ತಿದ್ದುವು. ಮಹಾವೀರರಾದ ಪಾಂಚಾಲಯೋಧರು ಮಾಡುತ್ತಿದ್ದ ಸಿಂಹನಾದಗಳೂ ಮತ್ತು ಧನುಷ್ಟೇಂಕಾರ ಗಳೂ ಆಕಾಶವನ್ನೂ ವ್ಯಾಪಿಸಿದುವು. ದುರ್ಯೋಧನ, ವಿಕರ್ಣ, ಸುಬಾಹು, ದೀರ್ಘಲೋಚನ, ದುಃಶಾಸನ–ಮುಂತಾದವರೆಲ್ಲರೂ ಬಹುಕ್ರುದ್ಧರಾಗಿ ಪಾಂಚಾಲಯೋಧರ ಮೇಲೆ ಬಾಣಗಳ ಮಳೆಗರೆದರು.

ಅದನ್ನು ಕಂಡು ದುರ್ಜಯನಾದ ಪಾರ್ಷತನು ಶರೀರದ ಮೇಲೆ ಅನೇಕ ಬಾಣಕ್ಷತಗಳಾಗಿದ್ದರೂ ಲೆಕ್ಕಿಸದೇ, ಕೌರವರನ್ನು ಸದೆಬಡಿದನು. ಹೀಗೆ ಪಾಂಚಾಲನು ದುರ್ಯೋಧನ-ವಿಕರ್ಣ-ಕರ್ಣರನ್ನೂ, ಇನ್ನೂ ಅನೇಕ ರಾಜಕುಮಾರರನ್ನೂ, ಚತುರಂಗಸೈನ್ಯಗಳನ್ನೂ–ಅಗ್ನಿಚಕ್ರದೋಪಾದಿಯಲ್ಲಿ ರಣರಂಗದಲ್ಲಿ ಸಂಚರಿಸುತ್ತಾ–ಬಾಣಗಳಿಂದ ಬಹುವಾಗಿ ಗಾಯಗೊಳಿಸಿ ಅವರ ರಣೋತ್ಸಾಹವನ್ನೇ ಕುಗ್ಗಿಸಿದನು. ಆ ವೇಳೆಗೆ ಪಾಂಚಾಲಸೈನಿಕರು ಮಾತ್ರವಲ್ಲದೇ, ಬಾಲಕರು ಮೊದಲ್ಗೊಂಡು ವೃದ್ಧರವರೆಗೂ ಎಲ್ಲ ಪ್ರಜೆ ಗಳೂ ಶಸ್ತ್ರಪಾಣಿಗಳಾಗಿ ಬಂದು, ಮಳೆಗರೆಯುವ ರೀತಿಯಲ್ಲಿ ಶತ್ರುಗಳ ಮೇಲೆ ಒನಕೆ, ದೊಣ್ಣೆ ಮೊದಲಾದುವುಗಳನ್ನು ಸುರಿಸಲು ಪ್ರಾರಂಭಿಸಿದರು. ಕೌರವರು ಆ ಅವ್ಯಾಹತವಾದ ಶಸ್ತ್ರಗಳ ಆಘಾತವನ್ನು ತಾಳಲಾರದೇ ಹಾಹಾಕಾರಮಾಡುತ್ತಾ ಪಾಂಡವರ ಸಮೀಪಕ್ಕೆ ಓಡಿದರು.

ರೋಮಕೂಪಗಳು ನಿಮಿರಿ ನಿಲ್ಲುವಂತೆ ಹಾಹಾಕಾರಮಾಡುತ್ತಾ ಓಡಿ ಬರುತ್ತಿದ್ದ ಕೌರವರ ಆರ್ತನಾದಗಳನ್ನು ಕೇಳಿದ ಅರ್ಜುನನು–ಗುರುಗಳಾದ ದ್ರೋಣಾಚಾರ್ಯರಿಗೆ ನಮಸ್ಕರಿಸಿ, ಅಣ್ಣನಾದ ಯುಧಿಷ್ಠಿರನನ್ನು ಅಲ್ಲಿಯೇ ಇರುವಂತೆಯೂ–ಯುದ್ಧದಲ್ಲಿ ಭಾಗವಹಿಸಬಾರದೆಂದೂ ಹೇಳಿ, ನಕುಲ-ಸಹದೇವರನ್ನು ತನ್ನ ರಥದ ರಕ್ಷಕರನ್ನಾಗಿಟ್ಟುಕೊಂಡು ಗದಾಪಾಣಿಯಾದ ಭೀಮನನ್ನು ಮುಂದುಮಾಡಿಕೊಂಡು ರಣಾಂಗಣಕ್ಕೆ ಹೊರಟನು. ಕೌರವರು ಪಲಾಯನಮಾಡಿದುದರಿಂದ ಶತ್ರುಪಕ್ಷದವರು ಕೇಕೆಹಾಕಿಕೊಂಡು ನಗುತ್ತಾ ಗರ್ಜನೆಮಾಡುತ್ತಿರುವುದನ್ನು ಕೇಳಿ, ಪಾಪರಹಿತನಾದ ಅರ್ಜುನನು ತನ್ನ ಸಹೋದರರಿಂದೊಡಗೂಡಿ ರಥಚಕ್ರಧ್ವನಿಯಿಂದ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ, ಬಹಳ ಶೀಘ್ರವಾಗಿ ಪಾಂಚಾಲರ ಬಳಿಗೆ ತೆರಳಿದನು.

ಮೊಸಳೆಯು ಸಮುದ್ರದೊಳಗೆ ನುಗ್ಗಿಹೋಗುವಂತೆ–ಭೀಮಸೇನನು ಯಮಧರ್ಮನೋಪಾದಿಯಲ್ಲಿ ಗದಾಧರನಾಗಿ ಸಮುದ್ರದಂತೆ ಭೋರ್ಗರೆಯುತ್ತಿದ್ದ ಪಾಂಚಾಲಸೇನೆಯೊಳಗೆ ನುಗ್ಗಿದನು. ಭೀಮನಿಗೆ ಕಾಲಾಳುಗಳ ಮೇಲಾಗಲೀ, ಅಶ್ವಾರೋಹಿಸೈನಿಕರ ಮೇಲಾಗಲೀ ಯುದ್ಧ ಮಾಡುವುದು ರುಚಿಸಲಿಲ್ಲ. ನೇರವಾಗಿ ಗಜಾರೋಹೀಸೈನ್ಯದ ಮೇಲೆ ನುಗ್ಗಿ, ತನ್ನ ಎದೆಯಿಂದ ಮದಗಜಗಳನ್ನು ಅಪ್ಪಳಿಸಲು ಮೊದಲಿಟ್ಟನು. ಮತ್ತೊಂದು ಕಡೆಯಲ್ಲಿ ಪಾರ್ಥನು ತೀಕ್ಷ್ಣಬಾಣಗಳ ವರ್ಷದಿಂದ ಪಾಂಚಾಲಸೈನ್ಯವನ್ನು ಧ್ವಂಸಮಾಡಲು ಪ್ರಾರಂಭಿಸಿದನು. ಭೀಮನ ಗದಾಪ್ರಹಾರಗಳಿಂದ ಮದ ಗಜಗಳ ಕುಂಭಸ್ಥಳಗಳು ಸೀಳಿಹೋಗಿ, ನದಿಯ ಪ್ರವಾಹದಂತೆ ರಕ್ತವು ಹರಿಯುತ್ತಿದ್ದಿತು. ವಜ್ರಾಯುಧದ ಆಘಾತದಿಂದ ಪರ್ವತಶಿಖರಗಳು ಕಳಚಿ ಕೆಳಗೆ ಬೀಳುವಂತೆ–ಭೀಮನ ಗದಾಪ್ರಹಾರದಿಂದ ಸಾವಿರಾರು ಆನೆಗಳು ಪ್ರಾಣಗಳನ್ನು ತೊರೆದು ಕೆಳಗುರುಳಿದುವು. ಅರಣ್ಯದಲ್ಲಿ ದನಕಾಯುವವನು ತನ್ನ ಕೋಲಿನಿಂದ ಹಸುಗಳನ್ನು ಬೆದರಿಸಿಕೊಂಡು ಹೋಗುವಂತೆ– ಭೀಮನು ಗದೆಯಿಂದ ಪಾಂಚಾಲನ ಗಜಾಶ್ವ-ರಥ-ಪದಾತಿಸೈನ್ಯಗಳನ್ನು ಭೀತರನ್ನಾಗಿಸಿ ಓಡಿಸುತ್ತಿದ್ದನು.

ಈ ಮಧ್ಯದಲ್ಲಿ ಅರ್ಜುನನು ತನ್ನ ಗುರುಗಳಾದ ದ್ರೋಣರನ್ನು

ಸಂತುಷ್ಟರನ್ನಾಗಿ ಮಾಡಲು ತನ್ನ ರಥವನ್ನು, ಪಾಂಚಾಲನ ರಥದ ಬಳಿಗೆ ಓಡಿಸಿ, ಬಾಣಗಳ ಸತತಪ್ರಯೋಗದಿಂದ ಪಾಂಚಾಲನನ್ನು ಮುಚ್ಚಿಬಿಟ್ಟನು. ಪ್ರಳಯಕಾಲದ ಅಗ್ನಿಯು ಪ್ರಪಂಚದಲ್ಲಿರುವ ಸಕಲಚರಾಚರಗಳನ್ನೂ ಭಸ್ಮ ಮಾಡುವ ರೀತಿಯಲ್ಲಿ–ಪಾಂಚಾಲನ ರಕ್ಷಣೆಗಾಗಿ ಬಂದ ರಥಾಶ್ವ-ಗಜ-ಪದಾತಿಗಳ ಸಮೂಹವನ್ನೂ ನಿರ್ಮೂಲಮಾಡಿದನು. ಪಾಂಚಾಲ-ಸೃಂಜಯ ವೀರರೂ ಕೂಡ ನಾನಾವಿಧವಾದ ಬಾಣಗಳಿಂದ ಪಾರ್ಥನನ್ನು ಆಕ್ರಮಿಸಿ, ಸಿಂಹನಾದಗಳನ್ನು ಮಾಡುತ್ತಾ ಪಾಂಡುಪುತ್ರನೊಡನೆ ಯುದ್ಧಮಾಡುತ್ತಿದ್ದರು. ಆ ಯುದ್ಧವು ಬರುಬರುತ್ತಾ ಘೋರಯುದ್ಧವಾಗಿ ಪರಿಣಮಿಸಿತು. ಎರಡೂ ಪಕ್ಷಗಳ ಬಾಣಪ್ರಯೋಗವೈಖರಿಯು ಪರಮಾದ್ಭುತವಾಗಿ ಕಾಣುತ್ತಿದ್ದಿತು. ದ್ರುಪದಾದಿಗಳು ಪದೇ-ಪದೇ ಮಾಡುತ್ತಿದ್ದ ಸಿಂಹನಾದಗಳನ್ನು ಕೇಳಿ ಪಾಕಶಾಸನಿಗೆ ಸೈರಣೆಯು ಉಳಿಯಲಿಲ್ಲ. ಕೂಡಲೇ ಕಿರೀಟಿಯು ಬಾಣಗಳ ಸಮೂಹದಿಂದ ಅವರನ್ನು ಮುಚ್ಚಿ ಭ್ರಾಂತರನ್ನಾಗಿ ಮಾಡಿ, ಅವರನ್ನು ಸಂಪೂರ್ಣವಾಗಿ ಆಕ್ರಮಿಸಿದನು. ಆ ಸಮಯದಲ್ಲಿ ಅವನು ಬಿಡುತ್ತಿದ್ದ ಬಾಣಗಳು ನದಿಯ ರೀತಿಯಲ್ಲಿ ಬತ್ತಳಿಕೆಯಿಂದ ಹರಿದು ಬರುತ್ತಿರುವಂತೆ ಕಾಣುತ್ತಿದ್ದುವೇ ಹೊರತು ಬತ್ತಳಿಕೆಯಿಂದ ತೆಗೆಯುವ–ಧನುಸ್ಸಿಗೆ ಜೋಡಿಸುವ–ಧನುಸ್ಸನ್ನು ಸೆಳೆದುಬಿಡುವ ಕಾರ್ಯಗಳೊಂದೂ ಕಾಣುತ್ತಿರಲಿಲ್ಲ. 'ಅಯ್ಯೋ! ಅಯ್ಯೋ!' ಎಂದು ಕೂಗಿಕೊಂಡು ಹತವಾಗುತ್ತಿರುವ ಸೈನ್ಯಸಮೂಹವನ್ನು ಕಂಡು ಪಾಂಚಾಲನೇ ತನ್ನ ಸೇನಾನಾಯಕನಾದ ಸತ್ಯಜಿತನೊಡನೆ–ಶಂಬರನೆಂಬ ರಾಕ್ಷಸನು ಇಂದ್ರನ ಮುಂದೆ ಯುದ್ಧಕ್ಕೆ ಬಂದು ನಿಂತಿದ್ದಂತೆ–ಅರ್ಜುನನ ಮುಂದೆ ಬಂದು ನಿಂತನು.

ಅನಂತರ ನಡೆದ ಪಾಂಚಾಲ-ಪಾರ್ಥರ ಯುದ್ಧವು ಅವರ್ಣನೀಯವಾಗಿತ್ತು. ಕ್ಷಣಮಾತ್ರದಲ್ಲಿ ಪಾರ್ಥನು ಬಾಣಗಳಿಂದ ಪಾಂಚಾಲನನ್ನು ಮುಚ್ಚಿಬಿಟ್ಟನು. 'ಮಹಾಸಿಂಹವು ಮದಿಸಿದ ಸಲಗವನ್ನು ಆಕ್ರಮಿಸುವಂತೆ ಅರ್ಜುನನು ದ್ರುಪದನನ್ನು ಹಿಡಿಯಲು ಇಚ್ಛಿಸುತ್ತಿದ್ದಾನೆ'–ಎಂದು ದ್ರುಪದನ ಸೈನಿಕರಲ್ಲಿ ಹಾಹಾಕಾರವುಂಟಾಯಿತು. ಪಾರ್ಥನು ಪಾಂಚಾಲನನ್ನು ಸೆರೆಹಿಡಿಯಲು ಸನ್ನಾಹಮಾಡುತ್ತಿರುವುದನ್ನು ಕಂಡು ಸತ್ಯಜಿತನು ಮಧ್ಯದಲ್ಲಿ ನುಗ್ಗಿಬಂದನು.

ಯುದ್ಧಭೂಮಿಯಲ್ಲಿ ಎದುರು-ಬದುರಾಗಿ ನಿಂತ ಅರ್ಜುನ-ಸತ್ಯಜಿತರು ಇಂದ್ರ-ಬಲಿಗಳೋಪಾದಿಯಲ್ಲಿ ಸೈನ್ಯಗಳಲ್ಲಿ ಕ್ಷೋಭೆಯನ್ನುಂಟು ಮಾಡಿದರು. ಅನಂತರ ಪಾರ್ಥನು ಸತ್ಯಜಿತನ ಶರೀರದಲ್ಲಿ ಬಹಳ ಆಳವಾಗಿ ನಾಟಿಕೊಳ್ಳುವಂತೆ ಹತ್ತು ಬಾಣಗಳನ್ನು ವೇಗವಾಗಿ ಪ್ರಯೋಗಿಸಿದನು. ಸತ್ಯಜಿತನು ಅದನ್ನೂ ಸಹಿಸಿಕೊಂಡು ಮರುಕ್ಷಣದಲ್ಲಿಯೇ ನೂರು ಬಾಣ ಗಳನ್ನು ಪಾರ್ಥನ ಮೇಲೆ ಪ್ರಯೋಗಿಸಿದನು. ಸತ್ಯಜಿತನ ಶರಸಮೂಹದಿಂದ ಮುಚ್ಚಲ್ಪಟ್ಟ ಮಹಾರಥನಾದ ಪಾರ್ಥನು ಧನುಷ್ಟೇಂಕಾರಮಾಡಿ ಬಹುವೇಗ ವಾಗಿ ಬಾಣಗಳನ್ನು ಬಿಡಲು ಉಪಕ್ರಮಿಸಿದನು. ಮರುಕ್ಷಣದಲ್ಲಿಯೇ ಅರ್ಜುನನು ಸತ್ಯಜಿತನ ಧನುಸ್ಸಿಗೆ ಗುರಿಯಿಟ್ಟು ಹೊಡೆದು ಅದನ್ನು ಕತ್ತರಿಸಿ ದ್ರುಪದನ ಕಡೆಗೆ ಹೊರಟನು.

ಆದರೆ ಸತ್ಯಜಿತನು ಅಷ್ಟಕ್ಕೇ ಯುದ್ಧವನ್ನು ನಿಲ್ಲಿಸಲಿಲ್ಲ. ದ್ರುಪದನನ್ನು ಸರ್ವಪ್ರಕಾರದಿಂದಲೂ ರಕ್ಷಿಸುವುದು ಅವನ ಕರ್ತವ್ಯವಾಗಿದ್ದಿತು. ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಕ್ಷಣಮಾತ್ರದಲ್ಲಿ ಶಿಂಜಿನಿಯನ್ನು ಬಂಧಿಸಿ, ಟೇಂಕಾರಮಾಡಿ, ದ್ರುಪದನಿದ್ದ ಕಡೆಗೆ ವೇಗದಿಂದ ಹೋಗುತ್ತಿದ್ದ ಪಾರ್ಥನನ್ನು ತಡೆದು ನಿಲ್ಲಿಸಿ–ಅವನನ್ನೂ, ಅವನ ಸಾರಥಿಯನ್ನೂ ಮತ್ತು ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ ಬಹುತೀಕ್ಷ್ಣವಾದ ಬಾಣಗಳಿಂದ ಘಾಸಿ ಪಡಿಸಿದನು. ಸತ್ಯಜಿತನಿಂದ ಪ್ರಹೃತನಾದ ಪಾರ್ಥನು ಅವನ ಆ ಉದ್ಧಟ ತನವನ್ನು ಸಹಿಸಲಾರದವನಾಗಿ, ಅವನನ್ನು ಸಂಹಾರಮಾಡುವುದೇ ಯುಕ್ತ ವೆಂದು ನಿಶ್ಚಯಿಸಿ, ಒಡನೆಯೇ ಅವನ ಮೇಲೆ ಅವ್ಯಾಹತವಾಗಿ ಬಾಣಗಳನ್ನು ಪ್ರಯೋಗಿಸಿದನು. ಸತ್ಯಜಿತನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ, ಧ್ವಜವನ್ನೂ, ಅಂಗರಕ್ಷಕರನ್ನೂ, ಸಾರಥಿಯನ್ನೂ ಅರ್ಜುನನು ಧ್ವಂಸಮಾಡಿಬಿಟ್ಟನು.

ಅರ್ಜುನನು ಹತ್ತಾರು ಬಾರಿ ಸತ್ಯಜಿತನ ಧನುಸ್ಸನ್ನು ಕತ್ತರಿಸಿದನು. ರಥಕ್ಕೆ ಕಟ್ಟಿದ್ದ ಕುದುರೆಗಳೂ ಸತ್ತುಹೋದನಂತರದಲ್ಲಿ ಸತ್ಯಜಿತನು ಮುಂದೇನೂ ಮಾಡಲಾಗದೇ ಯುದ್ಧದಿಂದ ವಿಮುಖನಾದನು. ಯುದ್ಧ ದಿಂದ ಪರಾಙ್ಮುಖನಾದ ಸತ್ಯಜಿತನನ್ನು ನೋಡಿ ದ್ರುಪದನು ಬಹುವೇಗ ದಿಂದ ಅರ್ಜುನನ ಸಮೀಪಕ್ಕೆ ಬಂದು, ಅವನ ಮೇಲೆ ಬಾಣಗಳ ಮಳೆಗರೆ

ದನು. ಆ ಸಮಯದಲ್ಲಿ ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನು ದ್ರುಪದ ನೊಡನೆ ಅತಿಘೋರವಾದ ಯುದ್ಧವನ್ನೇ ಮಾಡಬೇಕಾಯಿತು. ಪಾಂಚಾಲ ರಾಜನ ಧನುಸ್ಸನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ, ಮರುಕ್ಷಣದಲ್ಲಿ ಅವನ ರಥದ ಧ್ವಜದಂಡವನ್ನೂ ಕತ್ತರಿಸಿ ಕೆಳಗುರುಳಿಸಿದನು. ಪುನಃ ಐದು ಬಾಣಗಳಿಂದ ಅವನ ಸಾರಥಿಯನ್ನೂ ಮತ್ತು ಕುದುರೆಗಳನ್ನೂ ಪ್ರಹರಿಸಿದನು. ದ್ರುಪದನು ತುಂಡಾಗಿ ಹೋದ ಧನುಸ್ಸಿನ ಭಾಗವನ್ನು ಕೆಳಗೆ ಹಾಕಿ ಮತ್ತೊಂದು ಧನುಸ್ಸನ್ನೂ ಮತ್ತು ಬತ್ತಳಿಕೆಯನ್ನೂ ತೆಗೆದುಕೊಳ್ಳುವಷ್ಟ ರಲ್ಲಿಯೇ ಅರ್ಜುನನು ಕೈಯಲ್ಲಿ ಕತ್ತಿಯನ್ನು ಹಿಡಿದು, ಅದನ್ನು ಝಳಪಿ ಸುತ್ತಾ ಸಿಂಹನಾದಮಾಡಿದನು. ಮರುಕ್ಷಣದಲ್ಲಿಯೇ ಅರ್ಜುನನು ದ್ರುಪದನ ರಥದೊಳಕ್ಕೆ ಹಾರಿಬಿಟ್ಟನು. ಗರುಡನು ಸಮುದ್ರವನ್ನು ಅಲ್ಲೋಲ-ಕಲ್ಲೋಲಮಾಡಿ ಒಳಗಿರುವ ಸರ್ಪವನ್ನು ಹಿಡಿಯುವಂತೆ– ಅರ್ಜುನನು ಕತ್ತಿಯ ಸಹಾಯದಿಂದ ದ್ರುಪದನನ್ನು ಬಂಧಿಸಿದನು. ತಮ್ಮ ರಾಜನು ರಥದಲ್ಲಿಯೇ ಬಂಧಿತನಾದುದನ್ನು ಕಂಡು ಪಾಂಚಾಲಸೈನ್ಯವು ದಿಕ್ಕಾಪಾಲಾಗಿ ಚದುರಿಹೋಯಿತು.

ತನ್ನ ಬಾಹುಬಲವನ್ನು ಸಮಸ್ತಸೈನ್ಯಕ್ಕೂ ಪ್ರದರ್ಶಿಸುತ್ತಾ, ಸಿಂಹ ನಾದಗಳನ್ನು ಮಾಡುತ್ತಾ, ದ್ರುಪದನನ್ನು ಬಂಧಿಸಿ ರಥದಲ್ಲಿ ಕರೆತರುತ್ತಿದ್ದ ಅರ್ಜುನನನ್ನು ಕಂಡು ಹೆಚ್ಚು ಉತ್ಸಾಹಿತರಾದ ರಾಜಕುಮಾರರು ಅರಕ್ಷಿತವಾಗಿದ್ದ ಮಹಾತ್ಮನಾದ ದ್ರುಪದನ ಪಟ್ಟಣವನ್ನು ಧ್ವಂಸಮಾಡಲು ಉಪಕ್ರಮಿಸಿದರು. ಅದನ್ನು ನೋಡಿದ ಪಾರ್ಥನು ಭೀಮಸೇನನನ್ನು ಕುರಿತು ಹೇಳಿದನು :

**ಸಮ್ಬನ್ಧೀ ಕುರುವೀರಾಣಾಂ ದ್ರುಪದೋ ರಾಜಸತ್ತಮಃ ।**
**ಮಾ ವಧೀಸ್ತದ್ಬಲಂ ಭೀಮ ಗುರುದಾನಂ ಪ್ರದೀಯತಾಮ್ ॥**

"ಭೀಮಸೇನ! ರಾಜಶ್ರೇಷ್ಠನಾದ ದ್ರುಪದನು ಕುರುವಂಶದವರಿಗೆ ಬಂಧುವೂ ಆಗಿರುವನು. ಅವನ ಸೈನ್ಯವನ್ನು ಕಾರಣವಿಲ್ಲದೇ ಕೊಲ್ಲಬೇಡ. ಗುರುದಕ್ಷಿಣಾರೂಪವಾಗಿ ದ್ರುಪದನನ್ನು ಆಚಾರ್ಯರಿಗೆ ಸಮರ್ಪಿಸು."

ಭೀಮನಿಗೆ ಯುದ್ಧದಲ್ಲಿನ್ನೂ ತೃಪ್ತಿಯುಂಟಾಗಿರಲಿಲ್ಲ. ಅವನಿಗೆ ಇನ್ನೂ ಯುದ್ಧಮಾಡಬೇಕೆನ್ನುವ ಹುಮ್ಮಸ್ಸಿದ್ದಿತು. ಆದರೂ ಅರ್ಜುನ

ನಿಂದ ನಿವಾರಿತನಾದ ಭೀಮನು, ಅವನ ಮಾತಿಗೆ ಪುರಸ್ಕಾರವನ್ನಿತ್ತು ಯುದ್ಧಭೂಮಿಯಿಂದ ಹಿಂದಿರುಗಿದನು.

ರಣಾಂಗಣದಲ್ಲಿ ದ್ರುಪದನನ್ನು ಕೈಸೆರೆಹಿಡಿದು ಪಾಂಡುಕುಮಾರರು ಅಮಾತ್ಯಸಹಿತನಾದ ದ್ರುಪದನನ್ನು ಕರೆತಂದು, ಆಚಾರ್ಯದ್ರೋಣರಿಗೆ ಅರ್ಪಿಸಿದರು. ಆ ವೇಳೆಗೆ ದ್ರುಪದನ ದರ್ಪವೆಲ್ಲವೂ ಸಂಪೂರ್ಣವಾಗಿ ಉಡುಗಿಹೋಗಿದ್ದಿತು. ಯುದ್ಧದ ಕಾರಣದಿಂದಾಗಿ ಅಪಾರನಷ್ಟವೂ ಆಗಿದ್ದಿತು. ಅಂತಹ ಪರಿಸ್ಥಿತಿಯಲ್ಲಿ ತನ್ನ ವಶನಾದ ದ್ರುಪದನನ್ನು ಕಂಡು, ಅಂದಿನ ವೈರಕ್ಕೆ ಕಾರಣವಾಗಿದ್ದ ದ್ರುಪದನ ಹಿಂದಿನ ಮಾತುಗಳೆಲ್ಲವನ್ನೂ ಸ್ಮರಿಸುತ್ತಾ ದ್ರೋಣರು ದ್ರುಪದನನ್ನು ಕುರಿತು ಹೇಳಿದರು :

**ವಿಮೃದ್ಯ ತರಸಾ ರಾಷ್ಟ್ರಂ ಪುರಂ ತೇ ಮೃದಿತಂ ಮಯಾ ।**
**ಪ್ರಾಪ್ಯ ಜೀವಂ ರಿಪುವಶಂ ಸಖಿಪೂರ್ವಂ ಕಿಮಿಷ್ಯತೇ ॥೬೫॥**

"ದ್ರುಪದ! ನಿನ್ನ ರಾಷ್ಟ್ರವನ್ನು ಆಕ್ರಮಿಸಿ, ನಿನ್ನ ರಾಜಧಾನಿಯನ್ನು ಧ್ವಂಸಗೊಳಿಸಿರುವೆನು. ಈಗ ನಿನ್ನ ಪ್ರಾಣಗಳು ಶತ್ರುವಶವಾಗಿ ಹೋಗಿವೆ. ಈಗಲಾದರೂ ಹಿಂದಿನ ಮೈತ್ರಿಯನ್ನು ಇಚ್ಛಿಸುವೆಯೋ ಇಲ್ಲವೋ–ಹೇಳು. ನಾನು ವಿಜಯೀ ; ನೀನು ಪರಾಜಿತ. ನಮ್ಮಿಬ್ಬರಲ್ಲಿ ಹಿಂದಿನ ಗೆಳೆತನ ಹೇಗಿರುವುದು ?"–ಹೀಗೆ ಹೇಳಿದ ದ್ರೋಣರು ದ್ರುಪದನನ್ನು ನೋಡಿ ಒಮ್ಮೆ ಗಹಗಹಿಸಿ ನಕ್ಕು ಪುನಃ ಒಂದೆರಡು ಮಾತುಗಳನ್ನು ಹೇಳಿದರು :

"ವೀರನೇ! ದ್ರುಪದ! ಪ್ರಾಣವು ಹೋಗಿಬಿಡುವುದೆಂದು ಭಯಪಡ ಬೇಡ. **ಕ್ಷಮಿಣೋ ಬ್ರಾಹ್ಮಣಾ ವಯಂ**–ಬ್ರಾಹ್ಮಣರಾದ ನಾವು ಯಾವಾಗಲೂ ಕ್ಷಮಾವಂತರಾಗಿರುತ್ತೇವೆ. ನಾವಿಬ್ಬರೂ ಆಶ್ರಮದಲ್ಲಿದ್ದಾಗ ನಿನ್ನೊಡನೆ ಆಟ-ಪಾಟಗಳಲ್ಲಿ ಭಾಗವಹಿಸುತ್ತಿದ್ದುದರಿಂದಲೇ ಇಬ್ಬರಲ್ಲಿಯೂ ಸ್ನೇಹವೂ, ಪ್ರೀತಿಯೂ ಸಂವರ್ಧಿತವಾಯಿತು.

**ಪ್ರಾರ್ಥಯೇಯಂ ತ್ವಯಾ ಸಖ್ಯಂ ಪುನರೇವ ಜನಾಧಿಪ ।**
**ವರಂ ದದಾಮಿ ತೇ ರಾಜನ್ರಾಜ್ಯಸ್ಯಾರ್ಧಮವಾಪ್ನುಹಿ ॥೬೮॥**

ಕ್ಷತ್ರಿಯರ್ಷಭನೇ! ನಿನ್ನೊಡನೆ ನಾನು ಪುನಃ ಮೈತ್ರಿಯನ್ನು

ಪ್ರಾರ್ಥಿಸುತ್ತೇನೆ. ನಮ್ಮ ಸ್ನೇಹದ ಕುರುಹಾಗಿ ನಾನೀಗ ಗೆದ್ದಿರುವ ನಿನ್ನ ಸಂಪೂರ್ಣರಾಜ್ಯದಲ್ಲಿ ಅರ್ಧರಾಜ್ಯವನ್ನು ನಿನಗೇ ಕೊಟ್ಟುಬಿಡುತ್ತೇನೆ. ಇದೇ ನಾನೀಗ ನಿನಗೆ ಕೊಡಲಿರುವ ವರ. ದ್ರುಪದ! ನಿನ್ನೊಡನೆ ಬಾಲ್ಯದಲ್ಲಿದ್ದ ಸ್ನೇಹವನ್ನು ಊರ್ಜಿತಗೊಳಿಸಬೇಕೆಂಬ ಒಂದೇ ಒಂದು ಆಕಾಂಕ್ಷೆಯಿಂದ ನಾನಿಷ್ಟು ಶ್ರಮಪಡಬೇಕಾಯಿತು. ಆ ಸ್ನೇಹವನ್ನು ಊರ್ಜಿತಗೊಳಿಸಲು ನಿನ್ನ ದೇಶದ ಆಕ್ರಮಣವು ಅನಿವಾರ್ಯವಾಯಿತು. ಏಕೆಂದರೆ :

**ಅರಾಜಾ ಕಿಲ ನೋ ರಾಜ್ಞಃ ಸಖಾ ಭವಿತುಮರ್ಹಸಿ ।**
**ಅತಃ ಪ್ರಯತಿತಂ ರಾಜ್ಯೇ ಯಜ್ಞಸೇನ ಮಯಾ ತವ ॥೬೯॥**

ಯಜ್ಞಸೇನ! 'ರಾಜನಾಗಿಲ್ಲದ ನೀನು ರಾಜನಾದ ನನಗೆ ಸ್ನೇಹಿತ ನಾಗಲು ಅರ್ಹನಾಗುವುದಿಲ್ಲ'–ಎಂಬುದನ್ನು ನೀನು ಸ್ಪಷ್ಟಪಡಿಸಿದ್ದೆ. ಆ ಕಾರಣದಿಂದಲೇ ನಾನು ರಾಜ್ಯವನ್ನು ಗೆದ್ದು ರಾಜತ್ವವನ್ನು ಪಡೆಯಬೇಕಾ ಯಿತು. ಅದಕ್ಕಾಗಿಯೇ ಪ್ರಯತ್ನಿಸಿದೆನು. ನಿನ್ನ ಅಖಂಡರಾಜ್ಯವನ್ನೂ ಇಂದು ನಾನು ಗೆದ್ದಿದ್ದೇನೆ. ರಾಜತ್ವವನ್ನೂ ಸಂಪಾದಿಸಿದ್ದೇನೆ. ನಿನ್ನೊಡನೆ ಮೈತ್ರಿಯಿಂದಿರಬೇಕೆಂಬ ಆಕಾಂಕ್ಷೆಯಿಂದಲೇ ಅರ್ಧರಾಜ್ಯವನ್ನು ಪುನಃ ನಿನಗೇ ಕೊಟ್ಟು ನಿನ್ನನ್ನೂ ರಾಜನನ್ನಾಗಿ ಮಾಡುವ ಆಶಯದಿಂದಿರುತ್ತೇನೆ.

**ರಾಜಾಸಿ ದಕ್ಷಿಣೇ ಕೂಲೇ ಭಾಗೀರಥ್ಯಾಹಮುತ್ತರೇ ।**
**ಸಖಾಯಂ ಮಾಂ ವಿಜಾನೀಹಿ ಪಾಞ್ಚಾಲ ಯದಿ ಮನ್ಯಸೇ ॥೭೦॥**

ಭಾಗೀರಥಿಯ ದಕ್ಷಿಣತೀರದ ಪ್ರದೇಶಗಳಿಗೆ ನೀನು ರಾಜನಾಗುವೆ. ಉತ್ತರತೀರದ ಪ್ರದೇಶಗಳಿಗೆ ನಾನು ರಾಜನಾಗಿರುತ್ತೇನೆ. ನಿನಗೂ ಉಚಿತ ವೆನಿಸುವುದಾದರೆ ನನ್ನನ್ನು ಮಿತ್ರನೆಂದು ಪರಿಗ್ರಹಿಸು."

ದ್ರುಪದನು ಹೇಳಿದನು :

**ಅನಾಶ್ಚರ್ಯಮಿದಂ ಬ್ರಹ್ಮನ್ವಿಕ್ರಾನ್ತೇಷು ಮಹಾತ್ಮಸು ।**
**ಪ್ರೀಯೇ ತ್ವಯಾಹಂ ತ್ವತ್ತಶ್ಚ ಪ್ರೀತಿಮಿಚ್ಛಾಮಿ ಶಾಶ್ವತೀಮ್ ॥೭೧॥**

"ಬ್ರಾಹ್ಮಣೋತ್ತಮ! ಮಹಾಪರಾಕ್ರಮಿಗಳಾದ ಮಹಾತ್ಮರು ಹೀಗೆ ಹೇಳುವುದರಲ್ಲಿ ಆಶ್ಚರ್ಯವೇನಿದೆ? ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿ

ದ್ದೇನೆ ಮತ್ತು ಕೃತಜ್ಞನೂ ಆಗಿದ್ದೇನೆ. ನಿನ್ನೊಡನೆ ಶಾಶ್ವತವಾದ ಮೈತ್ರಿಯನ್ನೂ ಅಪೇಕ್ಷಿಸುತ್ತೇನೆ."

ಜನಮೇಜಯ! ದ್ರುಪದನು ಶಾಶ್ವತವಾದ ಪ್ರೀತಿಯನ್ನು (ಮೈತ್ರಿಯನ್ನು) ಇಚ್ಛಿಸುತ್ತೇನೆಂದು ಹೇಳಿದನಂತರ ಪ್ರೀತಾತ್ಮರಾದ ದ್ರೋಣರು ಅವನನ್ನು ಬಂಧನದಿಂದ ಬಿಡುಗಡೆಮಾಡಿಸಿ, ರಾಜೋಚಿತವಾದ ವಿಧಿಯಿಂದ ಸತ್ಕರಿಸಿ, ಅರ್ಧರಾಜ್ಯವನ್ನೂ ವಹಿಸಿಕೊಟ್ಟರು. ದ್ರೋಣರಿಂದ ಪರಾಭವ ಹೊಂದಿದ ದ್ರುಪದರಾಜನು ಗಂಗಾನದಿಯ ದಕ್ಷಿಣತೀರದಲ್ಲಿದ್ದ, ಪ್ರಜೆಗಳಿಂದ ನಿಬಿಡವಾಗಿದ್ದ ಮಾಕಂದೀ ಮತ್ತು ನಗರಗಳಲ್ಲಿ ಶ್ರೇಷ್ಠವಾದುದೆಂದು ಪ್ರಖ್ಯಾತವಾಗಿದ್ದ ಕಾಂಪಿಲ್ಯವೆಂಬ ನಗರಗಳಿಂದ ಕೂಡಿದ್ದ ಚರ್ಮಣ್ವತೀ ನದಿಯವರೆಗೂ ವ್ಯಾಪಿಸಿದ್ದ ದಕ್ಷಿಣಪಾಂಚಾಲದೇಶವನ್ನು ದೀನಮನಸ್ಕನಾಗಿಯೇ ಸಂರಕ್ಷಿಸುತ್ತಿದ್ದನು. ಯದ್ಯಪಿ ದ್ರುಪದನು ದ್ರೋಣರೊಡನೆ ಕೃತಜ್ಞತೆಯಿಂದ ಕೂಡಿದ ಮಾತುಗಳನ್ನಾಡಿದರೂ ಹೃದಯವು ಬಹಳ ಕಠೋರವಾಗಿಯೇ ಇದ್ದಿತು. ಕ್ಷಾತ್ರಬಲದಿಂದ ಬ್ರಾಹ್ಮಣನನ್ನು ಪರಾಜಯಗೊಳಿಸಲು ಸಾಧ್ಯವಾಗಲಾರದೆಂಬ ನಿಶ್ಚಿತಾಭಿಪ್ರಾಯವೂ ದ್ರುಪದನಿಗಿದ್ದಿತು. ತನ್ನನ್ನು ಬ್ರಾಹ್ಮಬಲಕ್ಕಿಂತಲೂ ಹೀನನೆಂದೇ ಭಾವಿಸಿದನು. ಆದುದರಿಂದ ದ್ರೋಣರನ್ನು ಪರಾಜಯಗೊಳಿಸುವ ಸಲುವಾಗಿಯೇ ಪುತ್ರನೊಬ್ಬನನ್ನು ಪಡೆಯಬೇಕೆಂಬ ಆಶಯದಿಂದ ದ್ರುಪದನು ಪ್ರಪಂಚವನ್ನು ಸುತ್ತುತ್ತಿದ್ದನು.

ಇತ್ತಲಾಗಿ ದ್ರೋಣರು ಅಹಿಚ್ಛತ್ರವೆಂಬ ನಗರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ತಮಗೆ ಸೇರಿದ್ದ ಉತ್ತರಪಾಂಚಾಲದೇಶವನ್ನು ಆಳತೊಡಗಿದರು. ಜನಮೇಜಯ! ಈ ರೀತಿಯಾಗಿ ಹಲವಾರು ಪ್ರಾಂತಗಳಿಂದ ಸಂಪನ್ನವಾಗಿದ್ದ 'ಅಹಿಚ್ಛತ್ರ' ಎಂಬ ಪಟ್ಟಣವು ಪಾರ್ಥನಿಂದ ಜಯಿಸಲ್ಪಟ್ಟು, ದ್ರೋಣರಿಗೆ ಗುರುದಕ್ಷಿಣಾರೂಪವಾಗಿ ಕೊಡಲ್ಪಟ್ಟಿತು.

೧೩೮ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನಿಗೆ ಯೌವರಾಜ್ಯಾಭಿಷೇಕ : ಪಾಂಡವರ ಏಳಿಗೆಯಿಂದ ಧೃತರಾಷ್ಟ್ರನ ಚಿಂತೆ

ವೈಶಂಪಾಯನರು ಹೇಳುತ್ತಾರೆ :

**ತತಃ ಸಂವತ್ಸರಸ್ಯಾನ್ತೇ ಯೌವರಾಜ್ಯಾಯ ಪಾರ್ಥಿವ ।**
**ಸ್ಥಾಪಿತೋ ಧೃತರಾಷ್ಟ್ರೇಣ ಪಾಣ್ಡುಪುತ್ರೋ ಯುಧಿಷ್ಠಿರಃ ॥೧॥**

**ಧೃತಿಸ್ಥೈರ್ಯಸಹಿಷ್ಣುತ್ವಾದಾನೃಶಂಸ್ಯಾತ್ತಥಾರ್ಜವಾತ್ ।**
**ಭೃತ್ಯಾನಾಮನುಕಮ್ಪಾರ್ಥಂ ತಥೈವ ಸ್ಥಿರಸೌಹೃದಾತ್ ॥೨॥**

ಜನಮೇಜಯ! ಒಂದು ವರ್ಷವು ಕಳೆಯಿತು. ಪ್ರಜೆಗಳ ಇಚ್ಛಾನುಸಾರವಾಗಿ ಧೃತರಾಷ್ಟ್ರನು ಯುಧಿಷ್ಠಿರನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು. ಯುಧಿಷ್ಠಿರನು–ಧೃತಿ, ಸ್ಥೈರ್ಯ, ಕ್ಷಮೆ, ಅನಿಷ್ಠುರತೆ, ಋಜುತ್ವ–ಮುಂತಾದ ಕಲ್ಯಾಣಗುಣಗಳಿಂದ ಕೂಡಿದವನಾದುದರಿಂದಲೂ, ಪ್ರಜೆಗಳ ವಿಷಯದಲ್ಲಿ ಸ್ಥಿರವಾದ ಸೌಹಾರ್ದಭಾವವಿದ್ದುದರಿಂದಲೂ, ಪಾಲನೆಗೆ ಯೋಗ್ಯರಾದ ಪ್ರಜೆಗಳ ಅನುಕಂಪವನ್ನು ಗಳಿಸುವ ಸಲುವಾಗಿ ಅಥವಾ ಪ್ರಜೆಗಳ ವಿಷಯದಲ್ಲಿ ಅನುಕಂಪವನ್ನು ತೋರುವ ಸಲುವಾಗಿ ಧೃತರಾಷ್ಟ್ರನು ಯುಧಿಷ್ಠಿರನನ್ನು ಯುವರಾಜನನ್ನಾಗಿ ಮಾಡಿಕೊಂಡನು.

ಸದಾಚಾರ, ಸದ್ವ್ಯವಹಾರ, ಪ್ರಜಾಪಾಲನೆಯಲ್ಲಿಯೇ ಏಕಾಗ್ರತೆ–ಇವುಗಳಿಂದಾಗಿ ಯುಧಿಷ್ಠಿರನು ತನ್ನ ತಂದೆಯಾದ ಪಾಂಡುವಿನ ಕೀರ್ತಿಯನ್ನೂ ಮೀರಿಸಿದನು. ಭೀಮನು ಬಲರಾಮನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿ ಗದಾಯುದ್ಧ, ಖಡ್ಗಯುದ್ಧ ಮತ್ತು ರಥಯುದ್ಧಗಳಲ್ಲಿ ಹೆಚ್ಚಿನ ಪರಿಶ್ರಮವನ್ನು ಪಡೆದು ದ್ಯುಮತ್ಸೇನನಂತೆಯೇ ಹೆಚ್ಚು ಬಲಶಾಲಿಯಾದನು. ಹೆಚ್ಚು ಪರಾಕ್ರಮವನ್ನು ಹೊಂದಿ ಸಹೋದರರೊಡನೆ ಸೌಜನ್ಯದಿಂದ ಇರುತ್ತಿದ್ದನು.

ದೃಢಮುಷ್ಟಿ, ಲಾಘವ, ಲಕ್ಷ್ಯವೇಧ–ಇವುಗಳಲ್ಲಿ ಅರ್ಜುನನನ್ನು

ಮೀರಿಸುವವರು ಯಾರೂ ಇರಲಿಲ್ಲ. ಕ್ಷುರ, ನಾರಾಚ, ಭಲ್ಲ, ವಿಪಾಠ*–ಇವುಗಳ ಪ್ರಯೋಗಗಳಲ್ಲಿ ನಿಷ್ಣಾತನೆನಿಸಿದ್ದನು. ಆಯುಧಗಳು ಭಾರವಾಗಿರಲಿ, ವಕ್ರವಾಗಿರಲಿ, ಋಜುವಾಗಿರಲಿ–ಅವುಗಳನ್ನು ಅತ್ಯಂತಚಾತುರ್ಯದಿಂದ ಪ್ರಯೋಗಿಸುವುದನ್ನು ಅರ್ಜುನನು ಅರಿತಿದ್ದನು. ಬಾಣಪ್ರಯೋಗಗಳ ಲಾಘವ-ಸೌಷ್ಠವಗಳಲ್ಲಿ ಅರ್ಜುನನಿಗೆ ಸಮಾನರು ಬೇರೊಬ್ಬರಿಲ್ಲವೆಂದು ದ್ರೋಣರು ದೃಢವಾಗಿ ನಿಶ್ಚಯಿಸಿದ್ದರು.

ಒಂದು ದಿನ ದ್ರೋಣರು ರಾಜಕುಮಾರರ ನಡುವೆ ಕುಳಿತಿದ್ದ ಅರ್ಜುನನನ್ನು ಕುರಿತು ಹೇಳಿದರು :

**ಅಗಸ್ತ್ಯಸ್ಯ ಧನುರ್ವೇದೇ ಶಿಷ್ಯೋ ಮಮ ಗುರುಃ ಪುರಾ ।**
**ಅಗ್ನಿವೇಶ ಇತಿ ಖ್ಯಾತಸ್ತಸ್ಯ ಶಿಷ್ಯೋಽಸ್ಮಿ ಭಾರತ ॥೯॥**

**ತೀರ್ಥಾತ್ತೀರ್ಥಂ ಗಮಯಿತುಮಹಮೇತತ್ಸಮುದ್ಯತಃ ।**
**ತಪಸಾ ಯನ್ಮಯಾ ಪ್ರಾಪ್ತಮಮೋಘಮಶನಿಪ್ರಭಮ್ ॥೧೦॥**

**ಅಸ್ತ್ರಂ ಬ್ರಹ್ಮಶಿರೋ ನಾಮ ಯದ್ದಹೇತ್ಪೃಥಿವೀಮಪಿ ।**
**ದದತಾ ಗುರುಣಾ ಚೋಕ್ತಂ ನ ಮನುಷ್ಯೇಷ್ವಿದಂ ತ್ವಯಾ ॥೧೧॥**
**ಭಾರದ್ವಾಜ ವಿಮೋಕ್ತವ್ಯಮಲ್ಪವೀರ್ಯೇಷ್ವಪಿ ಪ್ರಭೋ ।**
**ತ್ವಯಾ ಪ್ರಾಪ್ತಮಿದಂ ವೀರ ದಿವ್ಯಂ ನಾನ್ಯೋಽರ್ಹತಿ ತ್ವಿದಮ್ ॥೧೨॥**
**ಸಮಯಸ್ತು ತ್ವಯಾ ರಕ್ಷ್ಯೋ ಮುನಿಸೃಷ್ಟೋ ವಿಶಾಮ್ಪತೇ ।**
**ಆಚಾರ್ಯದಕ್ಷಿಣಾಂ ದೇಹಿ ಜ್ಞಾತಿಗ್ರಾಮಸ್ಯ ಪಶ್ಯತಃ ॥೧೩॥**

"ಅರ್ಜುನ! ಅಗಸ್ತ್ಯರ ಶಿಷ್ಯರಾದ ಅಗ್ನಿವೇಶರೆಂಬುವರು ಧನುರ್ವಿದ್ಯೆಯಲ್ಲಿ ನಿಷ್ಣಾತರಾಗಿದ್ದರು. ಅವರೇ ನನ್ನ ಆಚಾರ್ಯರು.

---

* **ಕ್ಷುರಃ** : ನಾಪಿತನ ಕತ್ತಿ. ಅದರಂತೆ ಬಾಣದ ಒಂದು ಭಾಗದಲ್ಲಿ ಅಲುಗಿರುವುದಕ್ಕೆ ಕ್ಷುರವೆಂದು ಹೆಸರು.

ನಾರಾಚಃ : ನೆಟ್ಟಗಿದ್ದು ಅಗ್ರಭಾಗವು ಚೂಪಾಗಿ ಲೋಹಮಯವಾಗಿರುವುದಕ್ಕೆ ನಾರಾಚವೆಂದು ಹೆಸರು. ನಾರಾಚೋ ಲೋಹಸಾಯಕೇ ।

ಭಲ್ಲಃ : ತುದಿಯಲ್ಲಿ ಅರ್ಧಚಂದ್ರಾಕಾರದಂತಿರುವ ಬಾಣ.

ವಿಪಾಠಃ : ನೆಲವನ್ನು ಅಗೆಯುವ ಖನಕ ಅಥವಾ ಪಿಕಾಸಿಯಂತಿರುವ ಬಾಣ.

ಅವರಿಗೆ ನಾನು ನೆಚ್ಚಿನ ಶಿಷ್ಯನೂ ಆಗಿದ್ದೆನು. ಬಹುಕಾಲದ ತಪಃಪ್ರಭಾವದಿಂದ ಅವರಲ್ಲಿದ್ದ ಬ್ರಹ್ಮಶಿರವೆಂಬ ಮಹಾಸ್ತ್ರವನ್ನು ಪಡೆದೆನು. ಇದು ಪೃಥ್ವಿಯನ್ನೇ ದಹಿಸುವ ಸಾಮರ್ಥ್ಯವಿರುವ ಮಹಾಸ್ತ್ರ. ಇದಕ್ಕೆ ಯಾವುದರ ತಡೆಯೂ ಇಲ್ಲ. ಇಂದ್ರನ ವಜ್ರಾಯುಧಕ್ಕೆ ಸಮಾನವಾದುದು. ಇದು ಗುರುಪರಂಪರೆಯಿಂದಲೇ ಪಡೆಯತಕ್ಕ ಅಸ್ತ್ರವಾಗಿದೆ. ಇದನ್ನು ಉಪದೇಶಿಸುವಾಗ ನಮ್ಮ ಆಚಾರ್ಯರು ಈ ಮಹಾಸ್ತ್ರವನ್ನು ಸಾಧಾರಣಮಾನವರ ಮೇಲೆ ಪ್ರಯೋಗಿಸಲೇಬಾರದೆಂದೂ, ತನಗಿಂತಲೂ ಶಕ್ತಿಹೀನನಾದವನ ಮೇಲೆಯೂ ಪ್ರಯೋಗಿಸಬಾರದೆಂದೂ ಬಾರಿ-ಬಾರಿಗೂ ಹೇಳಿ ಉಪದೇಶಿಸಿದರು. ಈ ಮಹಾಸ್ತ್ರದ ಉಪದೇಶವನ್ನು ನೀನು ಪಡೆದಿರುವೆ. ನನ್ನ ಶಿಷ್ಯಕೋಟಿಯಲ್ಲಿ ಬೇರೆ ಯಾರೂ ಇದನ್ನು ಪಡೆಯಲು ಅರ್ಹರಲ್ಲ. ನೀನಾದರೂ ನನ್ನ ಆಚಾರ್ಯರು ಹೇಳಿರುವ ಮಾತನ್ನು ಸ್ಮರಣೆಯಲ್ಲಿಟ್ಟುಕೊಳ್ಳಬೇಕು. ಈ ಮಹಾಸ್ತ್ರವನ್ನು ಸ್ವೀಕರಿಸಿ, ಜ್ಞಾತಿ-ಬಾಂಧವರ ಸಮಕ್ಷದಲ್ಲಿಯೇ ನಮಗೆ ಗುರುದಕ್ಷಿಣೆಯನ್ನು ಕೊಡಬೇಕು, ಅರ್ಜುನ!"

ಅರ್ಜುನನು ಒಡನೆಯೇ ಗುರುಗಳ ಪಾದಕ್ಕೆರಗಿ ಹೇಳಿದನು :

"ಗುರುದೇವ! ತಾವು ಕೇಳುವ ಗುರುದಕ್ಷಿಣೆಯನ್ನು ಕೊಡಲು ಸಿದ್ಧನಾಗಿರುವೆನು."

ದ್ರೋಣರು ಶಿಷ್ಯನ ತಲೆಯನ್ನು ಸವರುತ್ತಾ 'ನಿಜವೇ, ಅರ್ಜುನ?" ಎಂದರು.

"ಸಂಶಯವೇಕೆ? ಗುರುದೇವ!"

**ಯುದ್ಧೇಽಹಂ ಪ್ರತಿಯೋದ್ಧವ್ಯೋ ಯುಧ್ಯಮಾನಸ್ತ್ವಯಾನಘ ॥**

"ಅನಘನೇ! ನಾನು ನಿನ್ನೊಡನೆ ಯುದ್ಧಕ್ಕೆ ನಿಂತಾಗ ನೀನೂ ನನಗೆ ಎದುರಾಗಿ ನಿಂತು ಯುದ್ಧಮಾಡಲೇಬೇಕು."*

---

* ದ್ರೋಣರು ತ್ರಿಕಾಲಜ್ಞಾನಿಗಳೆಂಬುದಕ್ಕೆ ಇದೊಂದು ಮುಖ್ಯ ನಿದರ್ಶನವಾಗಿದೆ. ಮುಂದಾಗುವುದನ್ನು ಮೊದಲೇ ಊಹಿಸಿದ್ದರು. ತಾವು ದುರ್ಯೋಧನನ ಕಡೆಯಲ್ಲಿರುವುದರಿಂದ ತಮಗೂ ಅರ್ಜುನನಿಗೂ ಯುದ್ಧವು ಅನಿವಾರ್ಯವೆಂಬುದನ್ನು ಮನಗಂಡಿದ್ದರು. ಅರ್ಜುನನಲ್ಲಿದ್ದ ಅಪಾರವಾದ ಗುರುಭಕ್ತಿಯ ಕಾರಣದಿಂದಾಗಿ ಗುರುಗ

ಅದಕ್ಕೆ ಅರ್ಜುನನು ಸ್ಥಿರಚಿತ್ತನಾಗಿಯೇ ಉತ್ತರಿಸಿದನು : "ತಮ್ಮ ಇಚ್ಛೆಯು ಹಾಗೆಯೇ ಇರುವುದಾದರೆ ಮತ್ತು ಅದರಿಂದಲೇ ತಾವು ಸುಪ್ರೀತ ರಾಗುವಿರಾದರೆ ತಾವು ಹೇಳಿದಂತೆಯೇ ಮಾಡುವೆನು." ಈ ರೀತಿ ಹೇಳಿ ದ್ರೋಣರ ಪಾದಕಮಲಗಳನ್ನು ಮುಟ್ಟಿ ನಮಸ್ಕರಿಸಿ, ಸರ್ವೋತ್ತಮವಾದ ಅಸ್ತ್ರೋಪದೇಶವನ್ನು ಪಡೆದನು. ಬಳಿಕ ಸ್ವಾಭಾವಿಕವಾಗಿಯೇ ಅರ್ಜುನನಿಗೆ ಸಮಾನನಾದ ಧನುರ್ಧರನು ಬೇರೊಬ್ಬನಿಲ್ಲವೆಂಬ ಪ್ರಸಿದ್ಧಿಯು ಸಮುದ್ರಪರ್ಯಂತವಾಗಿ ಭೂಮಿಯಲ್ಲಿ ಹರಡಿತು.

ಧನಂಜಯನು ಅಸ್ತ್ರಪ್ರಯೋಗದಲ್ಲಿ ಮಾತ್ರವಲ್ಲದೇ ಗದಾಯುದ್ಧ-ಖಡ್ಗಯುದ್ಧ-ರಥಯುದ್ಧಗಳಲ್ಲಿಯೂ ಹೆಚ್ಚಿನ ಪರಿಶ್ರಮವನ್ನು ಪಡೆದನು. ಸಹದೇವನು ಸುರಾಚಾರ್ಯನಾದ ಬೃಹಸ್ಪತಿಯ ನೀತಿಶಾಸ್ತ್ರವನ್ನು ಸಂಪೂರ್ಣವಾಗಿ ಅಧ್ಯಯನಮಾಡಿ, ಅಣ್ಣಂದಿರ ಆಜ್ಞಾನುವರ್ತಿಯಾಗಿ ಇರುತ್ತಿದ್ದನು. ನಕುಲನು ಎಲ್ಲರಿಗೂ ಅಚ್ಚುಮೆಚ್ಚಿನವನಾಗಿದ್ದನು. ದ್ರೋಣರ ಶಿಷ್ಯತ್ವದಲ್ಲಿ ನಕುಲನೂ ಧನುರ್ವಿದ್ಯೆಯನ್ನು ಕಲಿತು 'ಚಿತ್ರಯೋಧಿ' ಎಂದು ಪ್ರಸಿದ್ಧನಾಗಿ ಅತಿರಥನೆನಿಸಿದನು.

ಮೂರು ವರ್ಷಗಳ ಕಾಲ ಸತತವಾಗಿ ಯಜ್ಞಮಾಡಿ, ಅದರ ಫಲ ಪ್ರಭಾವದಿಂದ ಗಂಧರ್ವರನ್ನೂ ಹಿಮ್ಮೆಟ್ಟಿಸಿದ್ದ ಮಹಾಪರಾಕ್ರಮಶಾಲಿ ಯಾದ ಸೌವೀರರಾಜನನ್ನು ಪಾಂಡವರು, ಅರ್ಜುನನನ್ನು ಮುಂದಿಟ್ಟು ಕೊಂಡು–ಯುದ್ಧದಲ್ಲಿ ಸಂಹರಿಸಿ, ಮಹಾವೀರರೆಂಬ ಅಪಾರವಾದ ಕೀರ್ತಿ ಯನ್ನು ಗಳಿಸಿದರು.

ಪಾಂಡುವಿನಿಂದಲೂ ಸೋಲಿಸಲು ಸಾಧ್ಯವಾಗದೇ ಬಹಳ ಸೊಕ್ಕಿನಿಂದ ಮೆರೆಯುತ್ತಿದ್ದ ಯವನರಾಜನನ್ನು ಅರ್ಜುನನು ಸೋಲಿಸಿ, ಆಶ್ರಿತರಾಜ ನನ್ನಾಗಿ ಮಾಡಿಕೊಂಡನು. ಸೌವೀರದೇಶದಲ್ಲಿದ್ದ ವಿಪುಲನೆಂಬ ಮತ್ತೊಬ್ಬ ರಾಜನು ಕುರುವಂಶದವರನ್ನು ಯಾವಾಗಲೂ ತಾತ್ಸಾರದಿಂದಲೇ ಕಾಣು

---

ಳೊಡನೆ ಯುದ್ಧಮಾಡಲು ಅರ್ಜುನನು ಹಿಂಜರಿದರೆ ಆಗಬಹುದಾದ ವಿಪರ್ಯಾಸಗಳನ್ನು ತಪ್ಪಿಸಲೆಂದೇ ದ್ರೋಣರು ಅರ್ಜುನನೊಡನೆ ಇಂತಹ ಪ್ರತಿಜ್ಞೆಯನ್ನು ಜ್ಞಾತಿಗಳ ಸಮ್ಮುಖದಲ್ಲಿ ಮಾಡಿಸಿದರೆಂದು ಹೇಳಬಹುದಾಗಿದೆ.

ತ್ತಿದ್ದನು. ಅರ್ಜುನನ ಪರಾಕ್ರಮದಿಂದ ಅವನ ಶೌರ್ಯವೂ ಕುಂಠಿತವಾಗಿ ಅವನು ಕುರುವಂಶದ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಲೇಬೇಕಾಯಿತು. ಮದಾಂಧನಾಗಿದ್ದ ದತ್ತಾಮಿತ್ರನೆಂದು ಖ್ಯಾತನಾದ, ಸಂಗ್ರಾಮದಲ್ಲಿ ಮಹೋತ್ಸಾಹಿಯಾಗಿದ್ದ, ಸೌವೀರದ ಮತ್ತೊಬ್ಬ ರಾಜನಾದ ಸುಮಿತ್ರನೆಂಬ ಹೆಸರಿನ ರಾಜನನ್ನೂ ಅರ್ಜುನನು ಬಾಣಗಳಿಂದ ಪರಾಜಯಗೊಳಿಸಿದನು. ಭೀಮನ ಸಹಾಯವನ್ನು ಮಾತ್ರ ಪಡೆದು, ಏಕರಥನಾಗಿ ಅರ್ಜುನನು ಸುವಿಖ್ಯಾತರಾದ ಪೂರ್ವದಿಕ್ಕಿನ ರಾಜರ ಸಾವಿರಾರು ರಥಸೈನ್ಯಗಳನ್ನೂ ಧ್ವಂಸಮಾಡಿದನು. ಏಕರಥನಾಗಿಯೇ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿ, ಅಲ್ಲಿದ್ದ ರಾಜರೆಲ್ಲರನ್ನೂ ಜಯಿಸಿ, ಕುರುರಾಷ್ಟ್ರದ ಬೊಕ್ಕಸಕ್ಕೆ ಅಪಾರವಾದ ಧನವನ್ನು ತಂದು ತುಂಬಿದನು.

ಮಹಾತ್ಮರಾದ, ಪುರುಷಶ್ರೇಷ್ಠರಾದ ಪಾಂಡವರು ಈ ರೀತಿಯಾಗಿ ಪರರಾಷ್ಟ್ರಗಳನ್ನು ಜಯಿಸಿ, ಕುರುಜಾಂಗಲವನ್ನು ಅಭಿವೃದ್ಧಿಗೆ ತಂದರು. ದೃಢಧನ್ವಿಗಳಾದ ಪಾಂಡವರ ಬಲ-ಪರಾಕ್ರಮಗಳು ದೇಶಾದ್ಯಂತವಾಗಿ ಹರಡಿಬಿಟ್ಟಿವೆಯೆಂಬುದನ್ನು ತಿಳಿದು ಧೃತರಾಷ್ಟ್ರನಿಗೆ ಪಾಂಡವರ ವಿಷಯದಲ್ಲಿ ಪ್ರೀತ್ಯಾದರಗಳುಂಟಾಗುವುದಕ್ಕೆ ಬದಲಾಗಿ ಕಲುಷಿತವಾದ ಭಾವವೇ ಉಂಟಾಯಿತು. ( ಅಸೂಯೆಯುಂಟಾಯಿತು ) ಅದನ್ನೇ ಯಾವಾಗಲೂ ಯೋಚಿಸುತ್ತಿದ್ದ ರಾಜನಿಗೆ ರಾತ್ರಿಯಲ್ಲಿ ನಿದ್ರೆಯೂ ಬರುತ್ತಿರಲಿಲ್ಲ.

೧೩೯ನೆಯ ಅಧ್ಯಾಯವು ಮುಗಿಯಿತು.

೧೪೦ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನಿಗೆ ಕಣಿಕನ ಕೂಟನೀತಿಯ ಉಪದೇಶ

ವೈಶಂಪಾಯನರು ಹೇಳುತ್ತಾರೆ :

**ಶ್ರುತ್ವಾ ಪಾಣ್ಡುಸುತಾನ್ವೀರಾನ್ಬಲೋದ್ರಿಕ್ತಾನ್ಮಹೌಜಸಃ ।**
**ಧೃತರಾಷ್ಟ್ರೋ ಮಹೀಪಾಲಶ್ಚಿನ್ತಾಮಗಮದಾತುರಃ ॥೧॥**

ಜನಮೇಜಯ! ಪಾಂಡುವಿನ ಮಕ್ಕಳಾದ, ಮಹಾತೇಜಸ್ವಿಗಳಾದ,

ವೀರರಾದ ಯುಧಿಷ್ಠಿರಾದಿಗಳು ದಿನ-ದಿನಕ್ಕೂ ಬಲದಲ್ಲಿ ತನ್ನ ಮಕ್ಕಳಿಗಿಂತಲೂ ಔನ್ನತ್ಯವನ್ನು ಹೊಂದುತ್ತಿರುವರೆಂಬುದನ್ನು ಕೇಳಿ ಧೃತರಾಷ್ಟ್ರನು ವ್ಯಾಕುಲನಾಗಿ ಚಿಂತೆಗೀಡಾದನು. ಬೇರೆ ಮಾರ್ಗವನ್ನು ಕಾಣದೇ ಪ್ರಸಿದ್ಧರಾಜಕಾರಣಿಯಾದ ಕಣಿಕನೆಂಬ ಅಮಾತ್ಯಶ್ರೇಷ್ಠನನ್ನು ಕರೆಯಿಸಿ ಏಕಾಂತದಲ್ಲಿ ಮಾತನಾಡಿದನು. ಕಣಿಕನು ರಾಜಕಾರಣಿಯು ಮಾತ್ರವಲ್ಲದೇ–ರಾಜನೀತಿಜ್ಞನೂ ಆಗಿದ್ದನು. ಅವನ ಸಂಗಡ ಧೃತರಾಷ್ಟ್ರನು ಹೇಳತೊಡಗಿದನು :

**ಉತ್ಸಿಕ್ತಾಃ ಪಾಣ್ಡವಾ ನಿತ್ಯಂ ತೇಭ್ಯೋಽಸೂಯೇ ದ್ವಿಜೋತ್ತಮ ।**
**ತತ್ರ ಮೇ ನಿಶ್ಚಿತತಮಂ ಸಂಧಿವಿಗ್ರಹಕಾರಣಮ್ ।**
**ಕಣಿಕ ತ್ವಂ ಮಮಾಚಕ್ಷ್ವ ಕರಿಷ್ಯೇ ವಚನಂ ತವ ॥೩॥**

"ಬ್ರಾಹ್ಮಣೋತ್ತಮನೇ! ಪಾಂಡವರ ಪ್ರಭಾವವು ದಿನ-ದಿನಕ್ಕೂ ಹೆಚ್ಚುತ್ತಿದೆ. ಅವರ ಕೀರ್ತಿಯು ದಿಗಂತದವರೆಗೂ ವ್ಯಾಪಿಸುತ್ತಿದೆ. ಅವರ ಕೀರ್ತಿಯು ಹೆಚ್ಚುತ್ತಿದ್ದಂತೆಲ್ಲಾ ಮಾತ್ಸರ್ಯವೆಂಬ ದಾವಾಗ್ನಿಯು ನನ್ನ ಹೃದಯಾಂತರಾಳವನ್ನು ಸುಡಲು ಪ್ರಾರಂಭಿಸಿದೆ. ಈ ಸಮಯದಲ್ಲಿ ನಾನು ಅವರೊಡನೆ ಯಾವ ನೀತಿಯನ್ನು ಅನುಸರಿಸಿ ನಡೆಯಬೇಕೆಂಬುದನ್ನು ಪರ್ಯಾಲೋಚಿಸಿ ನಿಶ್ಚಯಮಾಡಿ ಹೇಳು. ಕಣಿಕ! ಅವರೊಡನೆ ನನಗೀಗ ಸಂಧಿಯು ಯೋಗ್ಯವೇ! ವಿರಸವು ಯೋಗ್ಯವೇ?–ಎಂಬುದನ್ನೂ ಹೇಳು. ನೀನು ಹೇಳಿದಂತೆಯೇ ನಾನು ನಡೆದುಕೊಳ್ಳುವೆನು."

ಧೃತರಾಷ್ಟ್ರನಿಂದ ಪರಿಪೃಷ್ಟನಾದ, ಬ್ರಾಹ್ಮಣೋತ್ತಮನಾದ, ರಾಜನೀತಿಯಲ್ಲಿ ನಿಷ್ಣಾತನಾದ ಕಣಿಕನು ಪ್ರಸನ್ನಾತ್ಮನಾಗಿ ಬಹುಕಠೋರವಾದ ರಾಜನೀತಿಯ ಸಿದ್ಧಾಂತವನ್ನು ಹೇಳತೊಡಗಿದನು :

**ಶೃಣು ರಾಜನ್ನಿದಂ ತತ್ರ ಪ್ರೋಚ್ಯಮಾನಂ ಮಯಾನಘ ।**
**ನ ಮೇಽಭ್ಯಸೂಯಾ ಕರ್ತವ್ಯಾ ಶ್ರುತ್ವೈತತ್ಕುರುಸತ್ತಮ ॥೪॥**

"ಮಹಾರಾಜ! ನಾನು ಹೇಳುವುದೆಲ್ಲವನ್ನೂ ಏಕಾಗ್ರಚಿತ್ತದಿಂದ ಕೇಳಿ ಸೂಕ್ತತೋರಿದಂತೆ ಮಾಡಬಹುದು. ನಾನು ರಾಜನೀತಿಯನ್ನು

ಅನುಸರಿಸಿ ಹೇಳುವುದು ನಿನಗೆ ಸಹ್ಯವಾಗಲೀ, ಸಹ್ಯವಾಗದಿರಲೀ–ನನ್ನಲ್ಲಿ ದೋಷವನ್ನೆಣಿಸಬಾರದು. ಇದು ನನ್ನ ಪ್ರಾರ್ಥನೆ.*



**ನಿತ್ಯಮುದ್ಯತದಣ್ಡಃ ಸ್ಯಾನ್ನಿತ್ಯಂ ವಿವೃತಪೌರುಷಃ ।**
**ಅಚ್ಛಿದ್ರಶ್ಛಿದ್ರದರ್ಶೀ ಸ್ಯಾತ್ಪರೇಷಾಂ ವಿವರಾನುಗಃ ॥೬॥**

ಮಹಾರಾಜ! ರಾಜರು ಯಾವಾಗಲೂ ಕತ್ತಿಯನ್ನು ಒರೆಯಿಂದ ಹೊರತೆಗೆದೇ ನಿಂತಿರಬೇಕು. ತಮ್ಮ ಪರಾಕ್ರಮವನ್ನು ಅನುದಿನವೂ

---

* ಪಾಂಡವರು ಉಚ್ಛ್ರಾಯಸ್ಥಿತಿಗೆ ಬರುವರೆಂಬ ಅಸೂಯೆಯಿಂದಾಗಿ ಧೃತರಾಷ್ಟ್ರನು ಕಣಿಕನನ್ನು ಕರೆದು ರಾಜನೀತಿಯ ರಹಸ್ಯವನ್ನು ಕೇಳುತ್ತಾನೆ. ಕಣಿಕನು ರಾಜರಾದವರು ಶತ್ರುಗಳ ವಿಷಯದಲ್ಲಿ ಅನುಸರಿಸಬೇಕಾದ ಮಾರ್ಗವನ್ನು ಕೂಲಂಕಷ

ಪ್ರದರ್ಶಿಸುತ್ತಿರಬೇಕು. ತಮ್ಮಲ್ಲಿರುವ ಲೋಪ-ದೋಷಗಳೂ ಮತ್ತು ನ್ಯೂನತೆಗಳೂ ಬಹಿರಂಗವಾಗದಂತೆ ನೋಡಿಕೊಳ್ಳಬೇಕು ಮತ್ತು ಶತ್ರುವಿನಲ್ಲಿರುವ ಲೋಪ-ದೋಷಗಳನ್ನೂ, ನ್ಯೂನತೆಗಳನ್ನೂ ತಿಳಿದುಕೊಳ್ಳಬೇಕು.

**ನಿತ್ಯಮುದ್ಯತದಣ್ಡಾದ್ಧಿ ಭೃಶಮುದ್ವಿಜತೇ ಜನಃ ।**
**ತಸ್ಮಾತ್ಸರ್ವಾಣಿ ಕಾರ್ಯಾಣಿ ದಣ್ಡೇನೈವ ವಿಧಾರಯೇತ್ ॥೭॥**

ಯಾವ ರಾಜನು ಯಾವಾಗಲೂ ಮೇಲೆ ಬೀಳುವ ಸ್ವಭಾವದಿಂದಿರುವನೋ–ಅವನನ್ನು ಕಂಡರೆ ಎಲ್ಲರೂ ಹೆಚ್ಚಾಗಿ ಭಯಪಡುವರು. ಆದುದರಿಂದ ರಾಜನಾದವನು ಎಲ್ಲ ಕಾರ್ಯಗಳನ್ನೂ ದಂಡದ ಮೂಲಕವಾಗಿಯೇ ಸಾಧಿಸಬೇಕು.*

**ನಾಸ್ಯಚ್ಛಿದ್ರಂ ಪರಂ ಪಶ್ಯೇಚ್ಛಿದ್ರೇಣ ಪರಮನ್ವಿಯಾತ್ ।**
**ಗೂಹೇತ್ಕೂರ್ಮ ಇವಾಙ್ಗಾನಿ ರಕ್ಷೇದ್ವಿವರಮಾತ್ಮನಃ ॥೮॥**

ಶತ್ರುವಿನ ಮೇಲೆ ಆಕ್ರಮಣದ ಸಿದ್ಧತೆಯನ್ನು ಮಾಡುವಾಗ ಅದರ ಸುಳಿವು ಶತ್ರುವಿಗೆ ಸ್ವಲ್ಪವೂ ತಿಳಿಯದಂತೆ ಎಚ್ಚರಿಕೆಯಿಂದಿರಬೇಕು. ಶತ್ರುವಿನಲ್ಲಿ ನ್ಯೂನತೆಯಿದೆಯೆಂದು ತೋರಿದೊಡನೆಯೇ ಮೇಲೆ ಬಿದ್ದು ಅವನನ್ನು ನಾಶಗೊಳಿಸಬೇಕು. ಆಮೆಯು ತನ್ನ ಅಂಗಾಂಗಗಳೆಲ್ಲವನ್ನೂ ಹುದುಗಿಸಿಕೊಳ್ಳುವಂತೆ–ರಾಜನಾದವನು ತನ್ನ ಮನಸ್ಸಿನ ಧ್ಯೇಯೋದ್ದೇಶಗಳನ್ನು ಹೊರಗೆಡಹಬಾರದು. ( ತನ್ನ ನ್ಯೂನತೆಯನ್ನು ಹೊರಗೆಡಹಬಾರದು. )

---

ವಾಗಿ ವಿವೇಚಿಸಿ ಹೇಳುತ್ತಾನೆ. 'ಪಾಂಡವರೇ ನಿನ್ನ ಶತ್ರುಗಳು' ಎಂ ದು ಕಣಿಕನು ನೇರ ವಾಗಿ ಹೇಳದಿದ್ದರೂ 'ಪಾಣ್ಡುಪುತ್ರೇಭ್ಯಃ ಆತ್ಮಾನಂ ರಕ್ಷ'–'ಪರಾಕ್ರಮಿಗಳಾದ ಪಾಂಡುಪುತ್ರರಿಂದ ನಿನ್ನನ್ನು ಸಂರಕ್ಷಿಸಿಕೋ'–ಎಂದು ಕಣಿಕನು ಹೇಳುವ ಮಾತು–'ಪಾಂಡವರೇ ತನ್ನ ಶತ್ರುಗಳು'–ಎಂಬ ಅಭಿಪ್ರಾಯವು ಧೃತರಾಷ್ಟ್ರನ ಮನಸ್ಸಿನಲ್ಲಿ ದೃಢವಾಗಿ ನಿಲ್ಲಲು ಕಾರಣವಾಗುತ್ತದೆ. ಪಾಂಡವರನ್ನು ಹೇಗಾದರೂ ಮಾಡಿ ಧ್ವಂಸಮಾಡಬೇಕೆನ್ನುವ ದುರ್ಯೋಧನನ ಯೋಜನೆಗಳಿಗೆ ಧೃತರಾಷ್ಟ್ರನ ಸತತವಾದ ಬೆಂಬಲವು ಸಿಕ್ಕಿದ್ದು ಕಣಿಕನ ರಾಜನೀತಿಯ ಉಪದೇಶದ ಪ್ರಭಾವದಿಂದಲೇ ಎಂದು ಭಾವಿಸಬಹುದಾಗಿದೆ.

* ಇಲ್ಲಿ ದಂಡವೆಂದರೆ ಶಿಕ್ಷೆ. ಕಠಿನಶಿಕ್ಷೆಯನ್ನು ಕೊಡುವ ರಾಜನನ್ನು ಕಂಡರೆ ಎಲ್ಲರೂ ಭಯಪಡುತ್ತಾರೆ. ಅಂತಹವನನ್ನು ' ಕ್ರೂರೀ' ಎಂದೂ ಕರೆಯುತ್ತಾರೆ.

**ನಾಸಮ್ಯಕ್ಕೃತಕಾರೀ ಸ್ಯಾದುಪಕ್ರಮ್ಯ ಕದಾಚನ ।**
**ಕಣ್ಟಕೋ ಹ್ಯಪಿ ದುಶ್ಛಿನ್ನ ಆಸ್ರಾವಂ ಜನಯೇಚ್ಚಿರಮ್ ॥೯॥**

ಒಂದು ಕಾರ್ಯಮಾಡಲು ನಿರ್ಧರಿಸಿದ ಮೇಲೆ ಕಡೆಯವರೆಗೂ ಆ ಕಾರ್ಯವನ್ನು ಪೂರ್ಣವಾಗಿ ಸಾಧಿಸಿಯೇ ತೀರಬೇಕು. ಒಂದು ಚಿಕ್ಕಮುಳ್ಳು ಕಾಲಿಗೆ ಚುಚ್ಚಿತೆಂದರೆ ಅದನ್ನು ಸಂಪೂರ್ಣವಾಗಿ ತೆಗೆಯುವವರೆಗೂ ಕಾಲಿನ ಬಾಧೆಯು ಹೋಗಲಾರದಲ್ಲವೇ? ಹಾಗೆಯೇ ಶತ್ರುಗಳನ್ನು ಸಂಪೂರ್ಣವಾಗಿ ವಿನಾಶಗೊಳಿಸುವುದು ರಾಜನ ಮುಖ್ಯ ಕರ್ತವ್ಯ.

**ವಧಮೇವ ಪ್ರಶಂಸನ್ತಿ ಶತ್ರೂಣಾಮುಪಕಾರಿಣಾಮ್ ।**
**ಸುವಿದೀರ್ಣಂ ಸುವಿಕ್ರಾನ್ತಂ ಸುಯುದ್ಧಂ ಸುಪಲಾಯಿತಮ್ ।**
**ಆಪದ್ಯಾಪದಿ ಕಾಲೇ ಚ ಕುರ್ವೀತ ನ ವಿಚಾರಯೇತ್ ॥೧೦॥**

ಶತ್ರುಗಳನ್ನೂ ಮತ್ತು ಅಪಕಾರಿಗಳನ್ನೂ ವಧೆಮಾಡುವುದೇ ಯೋಗ್ಯವೆಂದು ರಾಜನೀತಿಜ್ಞರು ಹೇಳುತ್ತಾರೆ ಮತ್ತು ಹೀಗೆ ಮಾಡುವುದನ್ನು ಅವರು ಪ್ರಶಂಸೆಮಾಡುತ್ತಾರೆ. ಮಹಾಪರಾಕ್ರಮಶಾಲಿಯಾದವನಿಗೂ ಆಪತ್ತೆಂಬುದು ತಪ್ಪಿದುದಲ್ಲ. ಪರಾಕ್ರಮಶಾಲಿಯಾದವನಿಗೆ ಕಾಲ-ಕಾಲಗಳಲ್ಲಿ ಒದಗುವ ಆಪತ್ತುಗಳನ್ನೇ ನಿರೀಕ್ಷಿಸುತ್ತಿದ್ದು, ಆ ಸಮಯದಲ್ಲಿ ಅಂತಹವನ ವಿಷಯದಲ್ಲಿ ಸ್ವಲ್ಪವೂ ದಯೆತೋರದೇ ಅವನನ್ನು ಸಂಹರಿಸಬೇಕು. ಯುದ್ಧದಲ್ಲಿ ನಿಷ್ಣಾತನಾದವನಿಗೂ ಆಪತ್ತಿಲ್ಲವೆಂಬುದಿಲ್ಲ. ಅವನಿಗೂ ಕೆಲವು ಸಮಯಗಳಲ್ಲಿ ಭ್ರಾಂತಿಯುಂಟಾಗುವುದು ಸಹಜ. ಅಂತಹ ಸಮಯವನ್ನೇ ಕಾದಿದ್ದು ಅವನನ್ನು ಪ್ರತಿಭಟಿಸಿ ಪಲಾಯನಮಾಡುವಂತೆ ಮಾಡಬೇಕು. ಶತ್ರುವು ವಿಪತ್ತಿನಲ್ಲಿರುವನೆಂದು ಖಂಡಿತವಾಗಿಯೂ ಕರುಣೆತೋರಬಾರದು. ಅವನ ಸಂಹಾರದಲ್ಲಿಯೇ ದೃಢದೃಷ್ಟಿಯಿರಬೇಕು. (ಭೇದೋಪಾಯ, ಪರಾಕ್ರಮ, ಯುದ್ಧ, ಪಲಾಯನ–ಇವುಗಳನ್ನು ಕಾಲಕ್ಕೆ ತಕ್ಕಂತೆ ಅನುಸರಿಸಿ ಶತ್ರುವಿನಾಶವನ್ನು ಮಾಡಬೇಕು.)

---

ಆದರೆ ಶಿಕ್ಷೆಯು ಕ್ರೂರವಾಗಿದ್ದಷ್ಟೂ ಅಪರಾಧಗಳು ಕಡಿಮೆಯಾಗುವುದೆಂದೂ ಅಭಿಪ್ರಾಯವಿದೆ. ಮಾನವೀಯತೆಯ ಅನುಕಂಪದಿಂದ ರಾಕ್ಷಸಪ್ರವೃತ್ತಿಯವರನ್ನೂ ಸರಿಯಾಗಿ ಶಿಕ್ಷಿಸದೇ ಇರುವುದರಿಂದ ಉಂಟಾಗುವ ಅನರ್ಥಗಳು ಸರ್ವವೇದ್ಯ.

**ನಾವಜ್ಞೇಯೋ ರಿಪುಸ್ತಾತ ದುರ್ಬಲೋಽಪಿ ಕಥಂಚನ ।**
**ಅಲ್ಪೋಽಪ್ಯಗ್ನಿರ್ವನಂ ಕೃತ್ಸ್ನಂ ದಹತ್ಯಾಶ್ರಯಸಂಶ್ರಯಾತ್ ॥೧೧॥**

ಶತ್ರುವು ದುರ್ಬಲನಾಗಿರುವನೆಂದು ಖಂಡಿತವಾಗಿಯೂ ಉದಾಸೀನ ಮಾಡಬಾರದು. ದುರ್ಬಲನಾಗಿರುವಾಗಲೇ ಸಮಯನೋಡಿ ಅವನನ್ನು ಹೊಡೆದುಹಾಕಬೇಕು. ಶತ್ರುನಿರ್ಮೂಲನಕ್ಕೆ ಅವನು ದುರ್ಬಲನಾಗಿರುವ ಕಾಲವೇ ಸಕಾಲವೆಂದು ಭಾವಿಸಬೇಕು. ಇಂದು ದುರ್ಬಲನಾಗಿರುವ ಶತ್ರುವು ಕಾರ್ಯ-ಕಾರಣಗಳಿಂದ ಬಹಳ ಬೇಗ ಪ್ರಬಲನಾಗಿ ಬಿಡಬಹುದು. ಒಂದೇ ಒಂದು ಸಣ್ಣ ಬೆಂಕಿಯ ಕಿಡಿಯು ಕಟ್ಟಿಗೆ ಮುಂತಾದ ಆಶ್ರಯಸಂಶ್ರಯದಿಂದ ದೊಡ್ಡ ಅರಣ್ಯವನ್ನೇ ದಹಿಸಿಬಿಡುತ್ತದೆ. ಇದನ್ನು ನಾವು ಮರೆಯಬಾರದು.

**ಅನ್ಧಃ ಸ್ಯಾದನ್ಧವೇಲಾಯಂ ಬಾಧಿರ್ಯಮಪಿ ಚಾಶ್ರಯೇತ್ ।**
**ಕುರ್ಯಾತ್ತೃಣಮಯಂ ಚಾಪಂ ಶಯೀತ ಮೃಗಶಾಯಿಕಾಮ್ ॥೧೨॥**

(ತನಗೆ ಆಪತ್ತೊದಗಿದಾಗ ಹೇಗಿರಬೇಕೆಂಬುದನ್ನೂ ಕಣಿಕನು ಹೇಳು ತ್ತಾನೆ.) ಆಪತ್ತೆಂಬುದು ಸರ್ವಸಾಮಾನ್ಯವಾದುದು. ಅದು ಯಾರನ್ನೂ ಕೇಳಿ ಯಾಗಲೀ, ಹೇಳಿಯಾಗಲೀ ಬರುವುದಿಲ್ಲ. ಜಾಗರೂಕನಾಗಿರುವವನಿಗೂ ಆಪತ್ತೆಂಬುದು ತಪ್ಪಿದ್ದಲ್ಲ. ಅಂತಹ ಸಮಯದಲ್ಲಿ ಕುರುಡನಂತೆ ವರ್ತಿಸ ಬೇಕಾಗುವುದು. ತನ್ನೆದುರಿನಲ್ಲಿಯೇ ತನ್ನ ಆಪ್ತರನ್ನೂ-ವಿಶ್ವಾಸಿಗಳನ್ನೂ ಅವ ಮಾನಪಡಿಸುತ್ತಿರುತ್ತಾರೆ. ಅದನ್ನು ನೋಡಿಯೂ ನೋಡದವನಂತೆಯೇ ಇದ್ದುಬಿಡಬೇಕು. ಪ್ರತೀಕಾರಮಾಡಲು ಹೋದರೆ ತನ್ನ ಪ್ರಾಣವೇ ಉಳಿಯ ಲಾರದು. ಕೆಲವು ಸಮಯಗಳಲ್ಲಿ ಕಿವುಡನಂತೆಯೂ ಇರಬೇಕು. ದುರ್ಭಾಗ್ಯ ನನ್ನು ಅನೇಕರು ಅನೇಕವಿಧವಾಗಿ ತೆಗಳುತ್ತಾರೆ. ಆ ಸಮಯದಲ್ಲಿ ತೆಗಳಿದ ವಾಕ್ಯಗಳನ್ನು ಕೇಳಿಯೂ ಕೇಳದವನಂತೆ ಸುಮ್ಮನಿರಬೇಕು. ಕೈಯಲ್ಲಿ ಆಯುಧವಿದ್ದ ಮಾತ್ರಕ್ಕೆ ಪ್ರಹರಿಸಲು ಹೋಗಬಾರದು. ತಾನು ನಿರ್ಬಲ ನಾಗಿರುವಾಗ ತನ್ನಲ್ಲಿರುವ ಧನುಸ್ಸನ್ನು ತೃಣಸಮಾನವನ್ನಾಗಿ ಕಾಣಬೇಕು. ಹತ್ತು ಜನರು ಆಕ್ರಮಿಸಲು ಬಂದಾಗ ಆಯುಧವನ್ನು ತೆಗೆದಿಟ್ಟು ಅವರಿಗೆ ಶರಣಾಗತನಾಗಬೇಕೇ ಹೊರತು ಆಯುಧವಿದೆಯೆಂಬ ದರ್ಪದಿಂದ ಪ್ರತಿಭಟಿ ಸಲು ಹೋಗಬಾರದು. ಅರಣ್ಯದಲ್ಲಿರುವ ಜಿಂಕೆಗಳು ಮಲಗಿದ್ದರೂ ಸ್ವಲ್ಪ ಶಬ್ದವಾದರೆ ಎದ್ದುಬಿಡುತ್ತವೆ. ಅದೇ ರೀತಿಯಲ್ಲಿ ಆಪತ್ತಿನಲ್ಲಿರುವವರು

ನಿದ್ರೆಯಲ್ಲಿಯೂ ಬಹಳ ಜಾಗರೂಕರಾಗಿರಬೇಕು. (ಕಾಲಾನುಗುಣವಾಗಿ ನೋಡಿಯೂ ನೋಡದವನಂತೆಯೂ ಕೇಳಿಯೂ ಕೇಳದವನಂತೆಯೂ ನಡೆದುಕೊಳ್ಳಬೇಕು.)

**ಸಾನ್ತ್ವಾದಿಭಿರುಪಾಯೈಸ್ತು ಹನ್ಯಾಚ್ಛತ್ರುಂ ವಶೇ ಸ್ಥಿತಮ್ ।**
**ದಯಾ ನ ತಸ್ಮಿನ್ಕರ್ತವ್ಯಾ ಶರಣಾಗತ ಇತ್ಯುತ ॥೧೩॥**

ತನ್ನ ವಶನಾಗಿರುವ ಶತ್ರುವನ್ನು ಯಾವ ಉಪಾಯದಿಂದಲಾದರೂ ಸಂಹರಿಸಬೇಕು. ಸೆರೆಸಿಕ್ಕಿದ ಅಥವಾ ಶರಣಾಗತನಾದ ಶತ್ರುವನ್ನು ಬಹಿರಂಗವಾಗಿ ಕೊಲ್ಲಲು ಹೋದರೆ ಅನೇಕರು ಪ್ರತಿಭಟಿಸಲೂಬಹುದು. ಆದುದರಿಂದ ಅಂತಹವನನ್ನು ಸಾಮ-ದಾನ-ಭೇದೋಪಾಯಗಳಿಂದ ವಶ ಪಡಿಸಿಕೊಂಡು ಸಂಹರಿಸಬೇಕು. ಶರಣಾಗತನಾಗಿರುವನೆಂಬ ಕಾರಣದಿಂದ ಅವನ ವಿಷಯದಲ್ಲಿ ಖಂಡಿತವಾಗಿಯೂ ದಯೆಯನ್ನು ತೋರಬಾರದು.

**ನಿರುದ್ವಿಗ್ನೋ ಹಿ ಭವತಿ ನ ಹತಾಜ್ಜಾಯತೇ ಭಯಮ್ ।**
**ಹನ್ಯಾದಮಿತ್ರಂ ದಾನೇನ ತಥಾ ಪೂರ್ವಾಪಕಾರಿಣಮ್ ॥೧೪॥**

ಸತ್ತುಹೋದ ಶತ್ರುವಿನಿಂದ ಭಯಪಡುವ ಕಾರಣವಿಲ್ಲ, ಅಲ್ಲವೇ? ಅಮಿತ್ರರಾದವರನ್ನೂ ಮತ್ತು ಹಿಂದೆ ಅಪಕಾರಮಾಡಿದವರನ್ನೂ ಅವರ ಭೃತ್ಯವರ್ಗದವರಿಗೆ ಧನಾದಿಗಳನ್ನು ಕೊಟ್ಟು ವಶಪಡಿಸಿಕೊಂಡು, ವಿಷ ಪ್ರಯೋಗವನ್ನು ಮಾಡಿಸಿಯಾದರೂ ಕೊಲ್ಲಬೇಕು. ಏಕೆಂದರೆ : ಶತ್ರು ವಿನಾಶದಿಂದ ಮಾತ್ರವೇ ರಾಜನಾದವನು ನಿಶ್ಚಿಂತೆಯಿಂದಿರಲು ಸಾಧ್ಯ ವಾಗುವುದು.

**ಹನ್ಯಾತ್ತ್ರೀನ್ಪಂಚ ಸಪ್ತೇತಿ ಪರಪಕ್ಷಸ್ಯ ಸರ್ವಶಃ ।**
**ಮೂಲಮೇವಾದಿತಶ್ಛಿನ್ದ್ಯಾತ್ಪರಪಕ್ಷಸ್ಯ ನಿತ್ಯಶಃ ॥೧೫॥**

ಶತ್ರುವಿನ ಪಟ್ಟಣವನ್ನು ಆಕ್ರಮಣಮಾಡಿ ಐಶ್ವರ್ಯವನ್ನು ಕೊಳ್ಳೆ ಹೊಡೆಯಬೇಕು. ಅವನ ಭೃತ್ಯವರ್ಗದವರನ್ನು ವಶಪಡಿಸಿಕೊಂಡು ಅವನ ರಾಜಧಾನಿಯಲ್ಲಿರುವ ವಿಷಯಗಳನ್ನು ಗ್ರಹಿಸಬೇಕು. ಅವನ ಆಪ್ತರೆನಿಸಿದವ ರಿಂದಲೇ ಅವನ ಮುಖಭಂಗಮಾಡಿಸಿ, ಶತ್ರುವಿನ ಉತ್ಸಾಹವನ್ನು ಕುಂದಿಸ ಬೇಕು. ಅಮಾತ್ಯ, ರಾಷ್ಟ್ರ, ದುರ್ಗ, ಕೋಶ, ದಂಡ–ಇವುಗಳೇ ರಾಜನ

ಸತ್ವಗಳು. ಅವುಗಳನ್ನು ಸಂಪೂರ್ಣವಾಗಿ ನಾಶಮಾಡಬೇಕು. ಅವುಗಳನ್ನು ನಾಶಮಾಡುವಾಗ ಸಾಮ, ದಾನ, ಭೇದ, ದಂಡ, ಉದ್ಬಂಧನ, ವಿಷ, ವಹ್ನಿ–ಇವುಗಳನ್ನು ಒಂದೊಂದಾಗಿ ಅಥವಾ ಒಟ್ಟಾಗಿ ನಿಯೋಜಿಸಬಹುದು. ಅನ್ನದಾನ-ತಾಂಬೂಲ-ಧನಾದಿಗಳಿಂದ ಶತ್ರುವಿನ ಭೃತ್ಯರನ್ನು ವಶಪಡಿಸಿಕೊಂಡು, ವಹ್ನಿ-ವಿಷಾದಿ ಪ್ರಯೋಗಗಳನ್ನು ಮಾಡಿಸಿ ಮೊದಲು ಮುಖ್ಯಶತ್ರುವನ್ನೇ ವಿನಾಶಗೊಳಿಸಬೇಕು. ಹೀಗೆ ಶತ್ರುವಿನ ತ್ರಿವರ್ಗ-ಪಂಚವರ್ಗ-ಸಪ್ತವರ್ಗಗಳನ್ನೂ ನಾಶಗೊಳಿಸಿ ಪರಪಕ್ಷದ ಮೂಲವನ್ನೇ ಕತ್ತರಿಸಿ ಹಾಕುತ್ತಿರಬೇಕು. ಶತ್ರುರಾಜನು ಯಾವ ವಿಧದಲ್ಲಿಯೂ ತಲೆಯೆತ್ತದಂತೆಯೇ ಮಾಡಬೇಕು.

**ತತಃ ಸಹಾಯಾಂಸ್ತತ್ಪಕ್ಷಾನ್ಸರ್ವಾಂಶ್ಚ ತದನನ್ತರಮ್ ॥೧೬॥**

**ಛಿನ್ನಮೂಲೇ ಹ್ಯಧಿಷ್ಠಾನೇ ಸರ್ವೇ ತಜ್ಜೀವಿನೋ ಹತಾಃ ।**
**ಕಥಂ ನು ಶಾಖಾಸ್ತಿಷ್ಠೇರಂಶ್ಛಿನ್ನಮೂಲೇ ವನಸ್ಪತೌ ॥೧೭॥**

ಅನಂತರ ಅವನ ಅಧಿಕಾರವರ್ಗದವರನ್ನೂ, ಬಂಧುವರ್ಗದವರನ್ನೂ ಬಹಳ ಸುಲಭವಾಗಿ ನಿರ್ಮೂಲಮಾಡಬಹುದು. ರಾಜನೇ ಹೋದ ಮೇಲೆ ಅವನಿಂದಲೇ ಜೀವನನಿರ್ವಹಣೆಯನ್ನು ಮಾಡುವ ಮತ್ತಾರೂ ಉಳಿಯ ಲಾರರು. ದೊಡ್ಡ ಮರದ ಬುಡವನ್ನೇ ಕತ್ತರಿಸಿ ತೆಗೆದುಹಾಕಿಬಿಟ್ಟರೆ–ಕೊಂಬೆಗಳೂ, ಚಿಗುರೆಲೆಗಳೂ ಹೇಗೆ ತಾನೇ ಉಳಿದಾವು?

**ಏಕಾಗ್ರಃ ಸ್ಯಾದವಿವೃತೋ ನಿತ್ಯಂ ವಿವರದರ್ಶಕಃ ।**
**ರಾಜನ್ನಿತ್ಯಂ ಸಪತ್ನೇಷು ನಿತ್ಯೋದ್ವಿಗ್ನಃ ಸಮಾಚರೇತ್ ॥೧೮॥**

ಶತ್ರುಗಳ ನಿರ್ಮೂಲನವನ್ನು ಸಾಧಿಸುವುದರಲ್ಲಿಯೂ ಏಕಾಗ್ರತೆ ಯಿಂದಿರಬೇಕು. ಆದರೆ ತನ್ನ ಮನಸ್ಸಿನ ಇಂಗಿತವನ್ನು ಮಾತ್ರ ಯಾರ ಲ್ಲಿಯೂ ಹೇಳಬಾರದು. ಶತ್ರುವಿನ ಲೋಪ-ದೋಷಗಳನ್ನೂ ಶತ್ರುಪಕ್ಷ ದಲ್ಲಿರುವ ನ್ಯೂನತೆಗಳನ್ನೂ ಸರ್ವದಾ ಗಮನಿಸುತ್ತಲೇ ಇರಬೇಕು. ಶತ್ರು ಗಳ ವಿಷಯದಲ್ಲಿ ಸರ್ವದಾ ಉದ್ವಿಗ್ನನಾಗಿರಬೇಕೇ ಹೊರತು ಶತ್ರುವು ತನ್ನ ನ್ನೇನೂ ಮಾಡಲಾರನೆಂಬ ಭ್ರಾಂತಿಯಿಂದ ಆಲಸನಾಗಿರಕೂಡದು. ಶತ್ರುವು ಸಂಪೂರ್ಣವಾಗಿ ನಿರ್ಮೂಲನಾಗುವವರೆಗೂ ದೇಶಕ್ಕಾಗಲೀ, ರಾಜನಿ ಗಾಗಲೀ ಯಾವ ವಿಧವಾದ ಶಾಂತಿ-ಸಮಾಧಾನಗಳೂ ಲಭಿಸಲಾರವು.

**ಅಗ್ನ್ಯಾಧಾನೇನ ಯಜ್ಞೇನ ಕಾಷಾಯೇಣ ಜಟಾಜಿನೈಃ ।**
**ಲೋಕಾನ್ವಿಶ್ವಾಸಯಿತ್ವೈವ ತತೋ ಲುಮ್ಪೇದ್ಯಥಾ ವೃಕಃ ॥೧೯॥**

ಶತ್ರುಗಳ ವಿನಾಶಕ್ಕೆ ಅಥವಾ ಶತ್ರುಪಕ್ಷದ ವಿನಾಶಕ್ಕೆ ಹಲವು ಬಾರಿ ಅನೇಕ ರೀತಿಯ ಸೋಗುಗಳನ್ನೂ ಹಾಕುತ್ತಿರಬೇಕು. ಅಗ್ನಿಹೋತ್ರಾದಿ ಗಳನ್ನೂ, ಯಜ್ಞ-ಯಾಗಾದಿಗಳನ್ನೂ ಸಮಯವರಿತು ಮಾಡಬೇಕು. ತ್ಯಾಗ ದ್ಯೋತಕವಾದ ಕಾಷಾಯವಸ್ತ್ರಗಳನ್ನೂ ಧರಿಸಬೇಕು. ಜಟೆಯನ್ನು ಧರಿಸಿ ಕೃಷ್ಣಾಜಿನವನ್ನೂ ಹೊದೆಯಬೇಕಾಗುವುದು. ಇವೆಲ್ಲವನ್ನೂ ಸಮಯೋಚಿತ ವಾಗಿ ಮಾಡಬೇಕು. ಹೀಗೆ ಮಾಡುವುದರಿಂದ ಪ್ರಜೆಗಳ ವಿಶ್ವಾಸವನ್ನು ಗಳಿಸಬಹುದು. ಹೀಗೆಯೇ ಮಾಡುತ್ತಿದ್ದು ಸಮಯವು ಸಿಕ್ಕಿದಾಗ– ತೋಳವು ಕುರಿಗಳ ಮೇಲೆ ಬೀಳುವಂತೆ–ಶತ್ರುವಿನ ಮೇಲೆ ಬಿದ್ದು ಅವನನ್ನು ಧ್ವಂಸಮಾಡಬೇಕು.

**ಅಙ್ಕುಶಂ ಶೌಚಮಿತ್ಯಾಹುರರ್ಥಾನಾಮುಪಧಾರಣೇ ।**
**ಆನಾಮ್ಯ ಫಲಿತಾಂ ಶಾಖಾಂ ಪಕ್ವಂ ಪಕ್ವಂ ಪ್ರಶಾತಯೇತ್ ।**
**ಫಲಾರ್ಥೋಽಯಂ ಸಮಾರಮ್ಭೋ ಲೋಕೇ ಪುಂಸಾಂ**
**ವಿಪಶ್ಚಿತಾಮ್ ॥೨೦॥**

ಶೌಚ-ಸದಾಚಾರಗಳ ಪ್ರದರ್ಶನವೂ ಜನಾಕರ್ಷಣೆಗೆ ಮತ್ತು ಧನಾರ್ಜನೆಗೆ ಒಂದು ಅಂಕುಶವಿದ್ದಂತೆ. ಕೊಕ್ಕೆಯ ಕೋಲು ( ಕೊಕ್ಕೆ ಯಿರುವ ನೀಳವಾದ ಕೋಲು ) ತುದಿಯಲ್ಲಿ ಬಗ್ಗಿರುವಂತೆ ಧನಾರ್ಥಿಯಾದ ವನು ಲೋಕಕ್ಕೆ ವಿನಮ್ರನಾಗಿರುವಂತೆಯೇ ತೋರಿಕೊಳ್ಳಬೇಕು. ಈ ವಿನಮ್ರತೆಯಿಂದಲೇ ಅವನು ಜನರನ್ನೂ, ಜನರಲ್ಲಿರುವ ಅರ್ಥವನ್ನೂ ಸೆಳೆದುಕೊಳ್ಳಬಲ್ಲನು. ಕೊಂಬೆಯ ಒಂದು ಕೊನೆಯಲ್ಲಿರುವ ಸುಪಕ್ವವಾದ ಹಣ್ಣನ್ನು ಕೊಕ್ಕೆಯಿಂದಲೇ ಬಗ್ಗಿಸಿ ಕೊಯಿದುಕೊಳ್ಳಲು ಸಾಧ್ಯವಾಗುತ್ತದೆ. ಅದು ಹೊರತಾಗಿ ಋಜುತ್ವದಿಂದ ಅಥವಾ ನೀಳವಾಗಿರುವ ಕೋಲಿನಿಂದ ಅದನ್ನು ಉಪಾಯವಾಗಿ ಪಡೆಯುವ ಸಾಧ್ಯತೆಯಿಲ್ಲ. ಮರವನ್ನಳ್ಳಾಡಿಸಿ ದರೂ ಹಣ್ಣುಗಳು ಕೆಳಗೆ ಬಿದ್ದು ಜಜ್ಜಿಹೋಗುತ್ತವೆ. ಆದುದರಿಂದ ಕೊಕ್ಕೆ ಯಿರುವ (ತುದಿಯಲ್ಲಿ ಬಗ್ಗಿರುವ ) ಕೋಲಿನಿಂದಲೇ ಸುಪಕ್ವವಾದ ಹಣ್ಣನ್ನು

ಉಪಾಯವಾಗಿ ಕೊಯ್ದುಕೊಳ್ಳಲು ಸಾಧ್ಯವಾಗುವುದು. (ಅದೇ ರೀತಿಯಲ್ಲಿ ಧನಾರ್ಜನೆಮಾಡುವವನು ಯಾವಾಗಲೂ ವಿನಮ್ರಭಾವವನ್ನೇ ಪ್ರದರ್ಶಿಸಬೇಕು.)

**ವಹೇದಮಿತ್ರಂ ಸ್ಕನ್ಧೇನ ಯಾವತ್ಕಾಲಸ್ಯ ಪರ್ಯಯಃ ।**
**ತತಃ ಪ್ರತ್ಯಾಗತೇ ಕಾಲೇ ಭಿನ್ದ್ಯಾದ್ಘಟಮಿವಾಶ್ಮನಿ ॥೨೧॥**

ಸಮಯವರಿತು ಕಾರ್ಯಮಾಡಬೇಕು. ಕೋಪ-ತಾಪಗಳಿಗೆ ಮನ ಸೋತು ಅಕಾಲದಲ್ಲಿ ಶತ್ರುವಿನ ವಿಧ್ವಂಸನಕ್ಕೆ ಪ್ರಯತ್ನಿಸಬಾರದು. ಕಾಲವು ಸನ್ನಿಹಿತವಾಗುವವರೆಗೂ–ಇಂತಹವರ ಮೇಲೆ ತನಗೆ ಶತ್ರುತ್ವವಿದೆಯೆಂಬು ದನ್ನೇ ತೋರಗೊಡಬಾರದು. ಶತ್ರುವನ್ನಾದರೂ ಹೆಗಲಮೇಲೆಯೇ ಕೂರಿಸಿ ಕೊಳ್ಳಬೇಕು. ಅವನ ವಿಷಯದಲ್ಲಿ ಹೆಚ್ಚು ಸರಸದಿಂದ ವರ್ತಿಸಬೇಕು. ಕಾಲವು ಒದಗಿಬಂದಿತೆಂದರೆ–ಮಡಕೆಯನ್ನು ಕಲ್ಲಿನ ಮೇಲೆ ಕುಕ್ಕಿ ಒಡೆದು ಹಾಕುವಂತೆ–ಕೆಳಕ್ಕೆ ಕೆಡವಿ ಧ್ವಂಸಮಾಡಬೇಕು.

**ಅಮಿತ್ರೋ ನ ವಿಮೋಕ್ತವ್ಯಃ ಕೃಪಣಂ ಬಹ್ವಪಿ ಬ್ರುವನ್ ।**
**ಕೃಪಾ ನ ತಸ್ಮಿನ್ಕರ್ತವ್ಯಾ ಹನ್ಯಾದೇವಾಪಕಾರಿಣಮ್ ॥೨೨॥**

ಶತ್ರುವಾದವನು ಸೆರೆಸಿಕ್ಕಿರುವಾಗ ಎಷ್ಟೇ ಅಂಗಲಾಚಿ ಬೇಡಿದರೂ ಅವನನ್ನು ಬಂಧನದಿಂದ ಬಿಡಲಾಗದು. ಅವನ ವಿಷಯದಲ್ಲಿ ಕೃಪೆಯೆಂಬು ದನ್ನು ಸ್ವಲ್ಪವಾದರೂ ತೋರಬಾರದು. ಅಪಕಾರಮಾಡಿದವರನ್ನು ನಿರ್ಘೃಣತೆಯಿಂದ ಕೊಲ್ಲಬೇಕು.

**ಹನ್ಯಾದಮಿತ್ರಂ ಸಾನ್ತ್ವೇನ ತಥಾ ದಾನೇನ ವಾ ಪುನಃ ।**
**ತಥೈವ ಭೇದದಣ್ಡಾಭ್ಯಾಂ ಸರ್ವೋಪಾಯೈಃ ಪ್ರಶಾತಯೇತ್ ॥೨೩॥**

ಮಹಾರಾಜ! ಶತ್ರುವನ್ನು ಸಂಹರಿಸಲು ಇಂತಹುದೇ ಮಾರ್ಗವನ್ನು ಅನುಸರಿಸಬೇಕೆಂಬ ನಿಯಮವೇನೂ ಇರುವುದಿಲ್ಲ. ಸಾಮ, ದಾನ, ಭೇದ, ದಂಡ–ಈ ನಾಲ್ಕು ಉಪಾಯಗಳಲ್ಲಿ ಯಾವ ಉಪಾಯವನ್ನಾದರೂ ಅವ ಲಂಬಿಸಿ ಶತ್ರುವನ್ನು ಧ್ವಂಸಮಾಡಬಹುದು. ಒಂದೇ ಉಪಾಯದಿಂದ ಶತ್ರು ವಿನ ಧ್ವಂಸವಾಗದಿದ್ದರೆ ಸರ್ವೋಪಾಯಗಳನ್ನೂ ವಿನಿಯೋಜಿಸಿಯಾದರೂ ಅವನನ್ನು ಧ್ವಂಸಮಾಡಲೇಬೇಕು. ಒಂದು ಉಪಾಯದಿಂದ ಸಾಧ್ಯವಾಗ

ಲಿಲ್ಲವೆಂದು ಅಧೀರನಾಗಬಾರದು. ಶತ್ರುವಿನ ಧ್ವಂಸವಾಗುವವರೆಗೂ ನಾನಾ ವಿಧವಾದ ಉಪಾಯಗಳನ್ನು ಯೋಚಿಸುತ್ತಲೇ ಇರಬೇಕು."

ಧೃತರಾಷ್ಟ್ರನು ಎಲ್ಲವನ್ನೂ ಕೇಳಿದನು. ಮನಸ್ಸಿಗೆ ಬಹಳ ಹಿತವಾಗಿ ತೋರಿತು.

( ತಾವು ಯೋಚಿಸುತ್ತಿರುವುದನ್ನೇ ಇತರರೂ ಪುಷ್ಟೀಕರಿಸಿ ಹೇಳಿದರೆ ಹಿತವಾಗುವುದಿಲ್ಲವೇ? )

ಧೃತರಾಷ್ಟ್ರನ ಅರಳಿದ ಮುಖಾರವಿಂದದಿಂದ ಒಂದೆರಡು ಮಾತು ಗಳು ಹೊರಬಿದ್ದುವು : "ವಿಪ್ರೋತ್ತಮನೇ! ಸಾಮ-ದಾನ-ಭೇದ-ದಂಡೋ ಪಾಯಗಳಿಂದ ಶತ್ರುಗಳನ್ನು ವಿನಾಶಮಾಡುವ ರೀತಿಯು ಹೇಗೆಂಬುದನ್ನು ಇನ್ನೂ ವಿವರವಾಗಿ ಹೇಳು."

"ಮಹಾರಾಜ! ನೀತಿಶಾಸ್ತ್ರಾರ್ಥದಲ್ಲಿ ವಿಶೇಷಪ್ರಾವಿಣ್ಯವನ್ನು ಪಡೆ ದಿದ್ದ, ಅರಣ್ಯದಲ್ಲಿ ವಾಸಮಾಡುತ್ತಿದ್ದ ಒಂದು ನರಿಯ ವೃತ್ತಾಂತವನ್ನು ಯಥಾವತ್ತಾಗಿ ಹೇಳುವೆನು : ಕೇಳು. ಕಥೆಯನ್ನು ಕೇಳಿದನಂತರ ನಿನಗೆ ಸಾಮ-ದಾನ-ಭೇದ-ದಂಡೋಪಾಯಗಳನ್ನು ಸಮಯಗಳಲ್ಲಿ ಹೇಗೆ ನಿಯೋಜಿಸಬೇಕೆಂಬುದರ ಅರಿವುಂಟಾಗುತ್ತದೆ.

ಸ್ವಾರ್ಥಿಯಾದ, ನೀತಿಶಾಸ್ತ್ರಗಳನ್ನು ತಿಳಿದಿದ್ದ, ಪಂಡಿತನೆಂದೇ ಪ್ರಸಿದ್ಧವಾಗಿದ್ದ ನರಿಯೊಂದು–ಹುಲಿ, ಇಲಿ, ತೋಳ, ಮುಂಗುಸಿ– ಇವು ಗಳೊಡನೆ ಅರಣ್ಯದಲ್ಲಿ ಆರಾಮವಾಗಿ ಅಲೆಯುತ್ತಿದ್ದಾಗ ದಷ್ಟ-ಪುಷ್ಟವಾಗಿದ್ದ ಜಿಂಕೆಯೊಂದನ್ನು ಕಂಡಿತು. ಜಿಂಕೆಯು ಓಟದಲ್ಲಿ ಪ್ರಸಿದ್ಧಿಯಾದ ಪ್ರಾಣಿ ಯಾದುದರಿಂದ ಅದನ್ನು ಹಿಂಬಾಲಿಸಿ ಹೋಗಿ ಹಿಡಿಯಲು ಆ ಮಿತ್ರವೃಂದಕ್ಕೆ ಸಾಧ್ಯವಾಗಲಿಲ್ಲ. ಹೇಗಾದರೂ ಮಾಡಿ ಜಿಂಕೆಯನ್ನು ತಿನ್ನಬೇಕೆಂಬ ಚಪಲವು ಅವುಗಳಿಗುಂಟಾಯಿತು. ಎಲ್ಲವೂ ಅಲ್ಲಿಯೇ ಸಮಾಲೋಚನೆಗೆ ಕುಳಿತುವು. ನರಿಯು ಮಾತನ್ನು ಪ್ರಾರಂಭಿಸಿತು :

"ವ್ಯಾಘ್ರರಾಜ! ನೀನೆಷ್ಟೇ ಪ್ರಯತ್ನಿಸಿದರೂ ನೀನಿಂದು ಈ ಜಿಂಕೆ ಯನ್ನು ಕೊಲ್ಲಲು ಸಮರ್ಥನಾಗಲಾರೆ. ಯೌವನದಲ್ಲಿರುವ, ವೇಗವಾಗಿ ಓಡಲೂ ಸಮರ್ಥವಾಗಿರುವ ಮತ್ತು ಬಹುಬುದ್ಧಿಯಾದ ಈ ಜಿಂಕೆಯನ್ನು

ಸಂಹರಿಸಲು ಸಾಧ್ಯವಾಗುವುದೂ ಇಲ್ಲ. ಆದುದರಿಂದ ನಾವು ಈ ಜಿಂಕೆಯನ್ನು ಉಪಾಯಾಂತರದಿಂದ ಕೊಲ್ಲಬೇಕಾಗಿದೆ. ನಾನು ಉಪಾಯವನ್ನು ಸೂಚಿಸುತ್ತೇನೆ. ಅದನ್ನು ಕಾರ್ಯಗತಮಾಡುವ ಕರ್ತವ್ಯವು ನಿಮ್ಮದು. ಜಿಂಕೆಯು ಮಲಗಿರುವಾಗ ಇಲಿಯು ಹೋಗಿ ಅದರ ಕಾಲನ್ನು ಕಚ್ಚಲಿ. ಕಾಲಿನ ಬಾಧೆಯಿಂದಾಗಿ ಜಿಂಕೆಯು ವೇಗವಾಗಿ ಓಡಲಾರದು. ಆ ಸಮಯದಲ್ಲಿ ನೀನು ಜಿಂಕೆಯನ್ನು ಬಹಳ ಸುಲಭವಾಗಿ ಸಂಹರಿಸಬಹುದು. ಅನಂತರ ನಾವೆಲ್ಲರೂ ಕೂಡಿಕೊಂಡು ಬಹಳ ಹರ್ಷಚಿತ್ತರಾಗಿ ಜಿಂಕೆಯ ಮಾಂಸವನ್ನು ಕಿತ್ತು ಭಕ್ಷಿಸೋಣ. ಆಗಬಹುದೇ?"

ನರಿಯ ಯೋಜನೆಯಂತೆ ಜಿಂಕೆಯು ಮಲಗಿ ನಿದ್ರಿಸುತ್ತಿದ್ದಾಗ ಇಲಿಯು ಮೆಲ್ಲನೆ ಹೋಗಿ ಅದರ ಕಾಲಿಗೆ ಘಾಸಿಮಾಡಿತು. ಹುಲಿಯು ಒಡನೆಯೇ ನೋವಿನಿಂದ ಕುಂಟುತ್ತಾ ಹೋಗುತ್ತಿದ್ದ ಜಿಂಕೆಯ ಮೇಲೆ ಹಾರಿ ಕೊಂದಿತು. ನರಿಯೂ ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬಂದು ಸತ್ತ ಜಿಂಕೆಯನ್ನು ವಶಪಡಿಸಿಕೊಂಡು ಸಂತೋಷವನ್ನು ಸೂಚಿಸುತ್ತಾ ಹೇಳಿತು : "ಗೆಳೆಯರೇ! ನಮಗಿಂದು ಸುದಿನ. ಒಳ್ಳೆಯ ಆಹಾರವು ಸಿಕ್ಕಿದೆ. ನಾನಿಲ್ಲಿಯೇ ಇದ್ದು ಇದನ್ನು ರಕ್ಷಿಸುತ್ತಾ ಇರುವೆನು. ನೀವೆಲ್ಲರೂ ಕೂಡಲೇ ಹೋಗಿ ಸ್ನಾನಾದಿಗಳನ್ನು ಮುಗಿಸಿ ಬನ್ನಿರಿ."

ನರಿಯ ಮಾತಿನಂತೆಯೇ ಹುಲಿ, ಇಲಿ, ಮುಂಗುಸಿ, ತೋಳಗಳು ಸ್ನಾನಕ್ಕಾಗಿ ನದಿಯೆಡೆಗೆ ಧಾವಿಸಿದುವು. ನರಿಯು ಮುಂದೇನು ಮಾಡಬೇಕೆಂಬುದನ್ನು ಯೋಚಿಸುತ್ತಾ ಕುಳಿತಿದ್ದಿತು.

ಎಲ್ಲಕ್ಕಿಂತಲೂ ಮೊದಲು ಹುಲಿಯು ಸ್ನಾನವನ್ನು ಮುಗಿಸಿಕೊಂಡು ನರಿಯಿದ್ದ ಜಾಗಕ್ಕೆ ಬಂದಿತು. ಆಲೋಚನೆಯಲ್ಲಿ ಮಗ್ನವಾಗಿದ್ದ ನರಿಯನ್ನು ಪ್ರಶ್ನಿಸಿತು :

"ಜಂಬುಕ! ನೀನೇಕೆ ಶೋಕಿಸುತ್ತಾ ಕುಳಿತಿರುವೆ? ಮಹಾಪ್ರಾಜ್ಞನು ನೀನು. ಮಹಾಚತುರನು. ಹೀಗಿರುವಾಗ ನಿನ್ನ ದುಃಖಕ್ಕೆ ಕಾರಣವಾದರೂ ಏನು? ಸತ್ತಿರುವ ಜಿಂಕೆಯ ಮಾಂಸವನ್ನು ಭೋಜನಮಾಡಿ ಇಂದು ಸುಖವಾಗಿ ಕಾಲಕಳೆಯಬಹುದಲ್ಲವೇ? ನಿನ್ನ ದುಃಖಕ್ಕೆ ಕಾರಣವನ್ನು ನಿಸ್ಸಂಕೋಚವಾಗಿ ಹೇಳು."

"ಹೇಳಿಬಿಡಲೇ?"

"ನಿಶ್ಚಯವಾಗಿಯೂ ಹೇಳು."

"ಆ ಸಣ್ಣ ಇಲಿಯು ನಿನ್ನನ್ನು ಮೂದಲಿಸಿದ ವಿಷಯವನ್ನು ನಿನ್ನೊಡನೆಯೇ ಹೇಳುವುದೆಂತು? ಬಹಳ ಬಲಾತ್ಕರಿಸಿ ಕೇಳುತ್ತಿರುವೆ. ಹೇಳದೇ ವಿಧಿಯಿಲ್ಲ. ಆ ಚಿಟ್ಟಿಲಿಯು–' ವ್ಯಾಘ್ರರಾಜನ ಶಕ್ತಿಗೆ ಧಿಕ್ಕಾರ '– ಎಂದು ಹೇಳಿದುದಲ್ಲದೇ ತಾನೇ ಜಿಂಕೆಯನ್ನು ಕೊಂದುದಾಗಿಯೂ ಹೇಳಿತು. ' ಇಂದು ನನ್ನ ಭುಜಬಲ-ಪರಾಕ್ರಮಗಳಿಂದ ಕೊಂದು ತಂದ ಆಹಾರದಿಂದ ವ್ಯಾಘ್ರರಾಜನು ಹಸಿವನ್ನಡಗಿಸಿಕೊಳ್ಳುವನು '–ಎಂದು ದರ್ಪದಿಂದಲೇ ಹೇಳಿತು. ಅದರ ದರ್ಪದ ಮತ್ತು ದುರಹಂಕಾರದ, ಮಿತ್ರನಿಂದಾರೂಪವಾದ ಮಾತುಗಳನ್ನು ಕೇಳಿ ಜಿಂಕೆಯನ್ನು ಮುಟ್ಟಲೇ ಕೂಡದೆಂದು ನಾನಂತೂ ನಿರ್ಧರಿಸಿಬಿಟ್ಟಿರುವೆನು. ಇದನ್ನು ತಿನ್ನುವುದು ನನಗೆ ಅಷ್ಟಾಗಿ ಇಷ್ಟವಿಲ್ಲ, ಮೃಗರಾಜ!"

"ಆಹಾ! ಇಲಿಯು ಹಾಗೆ ಹೇಳಿತೇ? ಇಂದು ನನಗೆ ಜ್ಞಾನೋದಯವಾಯಿತು. ಇಲ್ಲಿಂದ ಮುಂದಕ್ಕೆ ಬೇರೊಬ್ಬರ ಸಹಾಯವಿಲ್ಲದೇ ನನ್ನ ಭುಜಬಲ-ಪರಾಕ್ರಮಗಳಿಂದಲೇ ಅರಣ್ಯದಲ್ಲಿರುವ ಪ್ರಾಣಿಗಳನ್ನು ಕೊಂದು ಜೀವಿಸುವೆನೇ ಹೊರತು, ಆಹಾರಕ್ಕಾಗಿ ಪರರ ಸಹಾಯವನ್ನು ಖಂಡಿತ ವಾಗಿಯೂ ಪಡೆಯುವುದಿಲ್ಲ. ಇಲಿಯ ಸಹಾಯದಿಂದ ದೊರೆತಿರುವ ಆಹಾರವು ನನಗೂ ನಿಂದ್ಯವೇ ಆಗಿದೆ. ನಾನೂ ಮುಟ್ಟಲಾರೆನು"–ಎಂದು ಹೇಳಿ ಗರ್ಜನೆಮಾಡುತ್ತಾ ಹುಲಿಯು ಹೊರಟೇಹೋಯಿತು.

ಹುಲಿಯು ಅತ್ತಕಡೆ ಹೋದೊಡನೆಯೇ ಇಲಿಯು ಇತ್ತಕಡೆಯಿಂದ ಬಂದಿತು. ನರಿಯು ಇಲಿಯನ್ನು ಆದರದಿಂದ ಪಕ್ಕದಲ್ಲೇ ಕುಳ್ಳಿರಿಸಿಕೊಂಡು ಹೇಳಿತು :

"ಇಲಿರಾಯ! ನಿನಗೆ ಮಂಗಳವಾಗಲಿ. ಸತ್ತುಬಿದ್ದಿರುವ ಜಿಂಕೆ ಯನ್ನು ನಾನಂತೂ ತಿನ್ನಲಾರೆನು."

"ಅದೇಕೆ? ಜಂಬುಕ!"

“ವಿಷಪರೀಕ್ಷೆಯ ನೈಪುಣ್ಯವು ನಮ್ಮೆಲ್ಲರಿಗಿಂತಲೂ ಹೆಚ್ಚಾಗಿ ಮುಂಗುಸಿಗಿದೆಯಲ್ಲವೇ? ಸತ್ತುಬಿದ್ದಿರುವ ಜಿಂಕೆಯನ್ನು ಮೂಸಿನೋಡಿದ ಮುಂಗುಸಿಯು–‘ಹುಲಿಯ ವಿಷವು ಜಿಂಕೆಯಲ್ಲಿ ವ್ಯಾಪ್ತವಾಗಿಬಿಟ್ಟಿದೆ ಯೆಂದೂ, ಅದರಿಂದ ತಾನು ಅದನ್ನು ತಿನ್ನುವುದಿಲ್ಲವೆಂದೂ, ನರಿ ಯೇನಾದರೂ (ನಾನೇನಾದರೂ) ಅನುಮತಿಯನ್ನಿತ್ತರೆ ಇಲಿರಾಯ ನನ್ನೇ (ನಿನ್ನನ್ನೇ) ತಿನ್ನುವುದಾಗಿಯೂ’–ಹೇಳಿತು.”

ನರಿಯ ಮಾತನ್ನು ಕೇಳಿದೊಡನೆಯೇ ಭಯದಿಂದ ನಡುಗುತ್ತಾ ಇಲಿಯು ಬಿಲದೊಳಗೆ ನುಸುಳಿಕೊಂಡಿತು.

ಇಲಿಯು ಬಿಲವನ್ನು ಸೇರಿದನಂತರ ಯಥಾವಿಧಿಯಾಗಿ ಸ್ನಾನಮಾಡಿ ತೋಳವು ಬಂದಿತು. ಅದು ಬಂದೊಡನೆಯೇ ನರಿಯು ಮೇಲೆದ್ದು ಒಂದೆರಡು ಹೆಜ್ಜೆಗಳು ಮುಂದೆ ಹೋಗಿ–“ವೃಕರಾಜ! ವ್ಯಾಘ್ರವು ನಿನ್ನ ಮೇಲೆ ಬಹಳ ಕೋಪಗೊಂಡಿದೆ. ನಿನಗೆ ಒಳ್ಳೆಯದಾಗಲಾರದು. ವ್ಯಾಘ್ರಿಯನ್ನೂ ಕರೆತರಲು ಹೋಗಿದೆ. ನಿನ್ನಿಚ್ಛೆಯಿದ್ದಂತೆ ಮಾಡಬಹುದು. ಮಿತ್ರನೆಂಬ ಅಭಿಮಾನದಿಂದ ಗುಪ್ತವಿಷಯವನ್ನು ಹೊರಗೆಡಹಿದ್ದೇನೆ.”

ಜಂಬುಕವು ಹೀಗೆ ಹೇಳಿದ ಕೂಡಲೇ ಮಾಂಸಾಹಾರಿಯಾದ ತೋಳವು ಭಯಗೊಂಡು ಪುನಃ ಅಲ್ಲಿ ಒಂದು ನಿಮಿಷವೂ ನಿಲ್ಲಲಿಲ್ಲ. ಶರೀರವನ್ನು ಮುದುಡಿಕೊಂಡು ನಾಗಾಲೋಟದಿಂದ ಓಡಿಹೋಯಿತು.

ಕಡೆಗೆ ಮುಂಗುಸಿಯು ಸ್ನಾನಾದಿಕ್ರಿಯೆಗಳನ್ನು ಮುಗಿಸಿಕೊಂಡು ಒಳ್ಳೆಯ ಭೋಜನಮಾಡುವ ಆಸೆಯಿಂದ ಬಂದಿತು. ಮುಂಗುಸಿಯು ಬಂದೊಡನೆಯೇ ನರಿಯೂ ಆರ್ಭಟಮಾಡುತ್ತಾ ಮೇಲೆ ಬೀಳುವಂತೆಯೇ ಮುಂಗುಸಿಯ ಮುಂದೆ ನಿಂತು ಕರ್ಕಶಧ್ವನಿಯಲ್ಲಿ ಹೇಳತೊಡಗಿತು :

“ಎಲವೋ ಮುಂಗುಸಿ! ನನ್ನ ಭುಜಬಲ-ಪರಾಕ್ರಮಗಳಿಂದ ಹುಲಿ, ಇಲಿ, ತೋಳಗಳನ್ನು ಅಪ್ಪಳಿಸಿ ಓಡಿಸಿಬಿಟ್ಟಿದ್ದೇನೆ. ನಿನಗೇನಾದರೂ ಇಂದು ಜಿಂಕೆಯನ್ನು ತಿನ್ನಬೇಕೆನ್ನುವ ಆಸೆಯಿದ್ದರೆ ನನ್ನೊಡನೆ ಸೆಣೆಸಿ ನನ್ನನ್ನು ಸೋಲಿಸಿದ ನಂತರವೇ ತಿನ್ನಬೇಕು.”

ಮುಂಗುಸಿಯ ಹೃದಯವು ಬಡಿದುಕೊಳ್ಳಲಾರಂಭಿಸಿತು. “ಹುಲಿ,

ತೋಳ, ಬುದ್ಧಿವಂತನಾದ ಇಲಿರಾಯ–ಇವರೇ ನಿನ್ನೊಡನೆ ಸೆಣಸಿ ಪರಾಜಿತರಾಗಿರುವಾಗ ನಿನ್ನ ಶಕ್ತಿಯು ಅವರಿಗಿಂತಲೂ ಹೆಚ್ಚಿನದಿರಬೇಕು. ಆದುದರಿಂದ ನಿನ್ನೊಡನೆ ಕದನಕ್ಕೆ ನಾನೆಂದಿಗೂ ಬರಲಾರೆನು"–ಎಂದು ಹೇಳಿ ಹೊರಟುಹೋಯಿತು. ಬಳಿಕ ನರಿಯೊಂದೇ ಮಾಂಸವನ್ನು ತಿಂದಿತು.

**ಏವಂ ಸಮಾಚರನ್ನಿತ್ಯಂ ಸುಖಮೇಧೇತ ಭೂಪತಿಃ ।**
**ಭಯೇನ ಭೇದಯೇದ್ಭೀರುಂ ಶೂರಮಞ್ಜಲಿಕರ್ಮಣಾ ॥೫೦॥**

**ಲುಬ್ಧಮರ್ಥಪ್ರದಾನೇನ ಸಮಂ ನ್ಯೂನಂ ತಥೌಜಸಾ ।**
**ಏವಂ ತೇ ಕಥಿತಂ ರಾಜಞ್ಛೃಣು ಚಾಪ್ಯಪರಂ ತಥಾ ॥೫೧॥**

ರಾಜರೂ ಇದೇ ನೀತಿಯನ್ನೇ ಅನುಸರಿಸಿದರೆ ಸುಖಿಗಳಾಗುವರು. ದುರ್ಬಲರಲ್ಲಿ ಭಯೋತ್ಪಾದನೆಯನ್ನು ಮಾಡುತ್ತಾ, ತನಗಿಂತಲೂ ಹೆಚ್ಚು ಪರಾಕ್ರಮವುಳ್ಳವರನ್ನು ಕೈಮುಗಿದು ಆಶ್ರಯಿಸುತ್ತಾ, ಲೋಭಿಯಾದವನಿಗೆ ಹಣವನ್ನು ಕೊಡುತ್ತಾ, ತನಗೆ ಸಮಾನರಾದವರಲ್ಲಿಯೂ–ತನಗಿಂತಲೂ ಬಲದಲ್ಲಿ ಕಡಿಮೆಯಾಗಿರುವವರಲ್ಲಿಯೂ ಹೆಚ್ಚಿನ ಪರಾಕ್ರಮವನ್ನು ತೋರುತ್ತಾ ಶತ್ರುಗಳನ್ನು ಹೇಗೆ ಪರಾಭವಗೊಳಿಸಬಹುದೆಂಬುದನ್ನೂ–ತನ್ನ ಪ್ರಯೋಜನವನ್ನು ಹೇಗೆ ಸಾಧಿಸಿಕೊಳ್ಳಬಹುದೆಂಬುದನ್ನೂ, ನಿನಗೆ ಹೇಳಿರುವೆನು. ಇನ್ನೂ ಕೆಲವು ಗುಪ್ತವಿಷಯಗಳನ್ನು ಹೇಳುವೆನು ; ಕೇಳು, ಮಹಾರಾಜ!

**ಪುತ್ರಃ ಸಖಾ ವಾ ಭ್ರಾತಾ ವಾ ಪಿತಾ ವಾ ಯದಿ ವಾ ಗುರುಃ ।**
**ರಿಪುಸ್ಥಾನೇಷು ವರ್ತನ್ತೋ ಹನ್ತವ್ಯಾ ಭೂತಿಮಿಚ್ಛತಾ ॥೫೨॥**

ಮಗನಾಗಲೀ, ಮಿತ್ರನಾಗಲೀ, ಸಹೋದರನಾಗಲೀ, ತಂದೆಯಾಗಲೀ, ಆಚಾರ್ಯನೇ ಆಗಲೀ–ಶತ್ರುಸ್ಥಾನದಲ್ಲಿದ್ದರೆ ಐಶ್ವರ್ಯಕಾಮನಾದವನು ಅವರನ್ನೂ ದಯಾಶೂನ್ಯನಾಗಿ ಧ್ವಂಸಮಾಡಲೇಬೇಕು. ಶತ್ರುಗಳಲ್ಲಿ ತನ್ನವರು, ಬಂಧುಗಳು, ಮಿತ್ರರು ಎಂಬ ತಾರತಮ್ಯವನ್ನಿಟ್ಟುಕೊಳ್ಳಲೇ ಕೂಡದು.

**ಶಪಥೇನಾಪ್ಯರಿಂ ಹನ್ಯಾದರ್ಥದಾನೇನ ವಾ ಪುನಃ ।**
**ವಿಷೇಣ ಮಾಯಯಾ ವಾಪಿ ನೋಪೇಕ್ಷೇತ ಕಥಂಚನ ।**
**ಉಭೌ ಚೇತ್ಸಂಶಯೋಪೇತೌ ಶ್ರದ್ಧಾವಾಂಸ್ತತ್ರ ವರ್ಧತೇ ॥೫೩॥**

ಶಪಥದಿಂದಾಗಲೀ, ವಿಷಪ್ರಯೋಗದಿಂದಾಗಲೀ, ಹಣವನ್ನು ಕೊಟ್ಟಾಗಲೀ, ಮಾಯೆಯಿಂದಾಗಲೀ ( ಮಾಟ-ಮಂತ್ರಗಳಿಂದಾಗಲೀ ) ಶತ್ರುವನ್ನು ವಿನಾಶಮಾಡಬೇಕು. ಯಾವ ಕಾರಣದಿಂದಲೂ ಉಪೇಕ್ಷಿಮಾಡಬಾರದು. ಉಭಯಪಕ್ಷಗಳೂ ಸಮಾನಬಲದಿಂದಿರುವಾಗ–ಜಯಾಪಜಯಗಳು ಅನಿಶ್ಚಿತವಾಗಿರುವಾಗ–ಶ್ರದ್ಧಾವಂತನಾಗಿ ಚಾತುರ್ಯದಿಂದ ಕಾರ್ಯ ಮಾಡುವವನು ಜಯಶಾಲಿಯಾಗುತ್ತಾನೆ.

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಪ್ರತಿಪನ್ನಸ್ಯ ನ್ಯಾಯ್ಯಂ ಭವತಿ ಶಾಸನಮ್ ॥೫೪॥**

ಕಾರ್ಯಾಕಾರ್ಯವಿವೇಚನೆಯಿಲ್ಲದಿರುವ, ಗರ್ವಿಷ್ಠನಾದ, ದುಷ್ಟ ಪ್ರವೃತ್ತಿಯುಳ್ಳ, ದಾರಿಯನ್ನು ಬಿಟ್ಟು ನಡೆಯುವ ಆಚಾರ್ಯನೂ ಶಿಕ್ಷಾರ್ಹನೇ ಆಗುತ್ತಾನೆ.

**ಕ್ರುದ್ಧೋಽಪ್ಯಕ್ರುದ್ಧರೂಪಃ ಸ್ಯಾತ್ಸ್ಮಿತಪೂರ್ವಾಭಿಭಾಷಿತಾ ।**
**ನ ಚಾಪ್ಯನ್ಯಮಪಧ್ವಂಸೇತ್ಕದಾಚಿತ್ಕೋಪಸಂಯುತಃ ॥೫೫॥**

ಮಹಾರಾಜ! ಕೋಪಬಂದಿದ್ದರೂ ಮುಖದಲ್ಲಿ ಅದನ್ನು ತೋರಬಾರದು. ಮಾತಿನಲ್ಲಿಯೂ ಕೋಪದ ನಿಷ್ಠುರತೆಯನ್ನು ತೋರಬಾರದು. ಮುಖದಲ್ಲಿ ಮಂದಹಾಸವನ್ನು ಬೀರುತ್ತಲೇ ಮಾತನಾಡುತ್ತಿರಬೇಕು. ಕೋಪಾವಿಷ್ಟನಾಗಿ ಮತ್ತೊಬ್ಬರನ್ನು ನಿಂದಿಸಬಾರದು.

**ಪ್ರಹರಿಷ್ಯನ್ಪ್ರಿಯಂ ಬ್ರೂಯಾತ್ಪ್ರಹರನ್ನಪಿ ಭಾರತ ।**
**ಪ್ರಹೃತ್ಯ ಚ ಕೃಪಾಯೀತ ಶೋಚೇತ ಚ ರುದೇತ ಚ ॥೫೬॥**

ಶತ್ರುವನ್ನು ನಾಶಮಾಡುವ ಮೊದಲು ಮತ್ತು ನಾಶಮಾಡುವ ಕಾಲದಲ್ಲಿಯೂ ಪ್ರಿಯೋಕ್ತಿಗಳನ್ನೇ ಹೇಳುತ್ತಿರಬೇಕು. ಶತ್ರುವನ್ನು ಧ್ವಂಸಮಾಡಿದನಂತರ ಅವನಿಗಾಗಿ ಪರಿತಾಪಪಡಬೇಕು. ಕೆಲವು ಸಮಯಗಳಲ್ಲಿ ಅವನ ಗುಣಗಾನಮಾಡುತ್ತಾ ದುಃಖಿಸುತ್ತಾ ಅಳಲೂ ಬೇಕಾಗುವುದು.

**ಆಶ್ವಾಸಯೇಚ್ಚಾಪಿ ಪರಂ ಸಾನ್ತ್ವಧರ್ಮಾರ್ಥವೃತ್ತಿಭಿಃ ।**
**ಅಥಾಸ್ಯ ಪ್ರಹರೇತ್ಕಾಲೇ ಯದಾ ವಿಚಲಿತೇ ಪಥಿ ॥೫೭॥**

ಶತ್ರುವು ತನಗಿಂತಲೂ ಪರಾಕ್ರಮಿಯಾಗಿರುವನೆಂಬುದು ತಿಳಿದಾಗ

ಅವನನ್ನು ನಾನಾರೀತಿಗಳಲ್ಲಿ ಸಂತೈಸುತ್ತಲಿದ್ದು, ಅವನು ದುರ್ಬಲನಾದ ನೆಂದು ಅಥವಾ ಅದೃಷ್ಟಹೀನನಾದನೆಂದು ತಿಳಿದೊಡನೆಯೇ ಧ್ವಂಸಮಾಡ ಬೇಕು.

**ಅಪಿ ಘೋರಾಪರಾಧಸ್ಯ ಧರ್ಮಮಾಶ್ರಿತ್ಯ ತಿಷ್ಠತಃ ।**
**ಸ ಹಿ ಪ್ರಚ್ಛಾದ್ಯತೇ ದೋಷಃ ಶೈಲೋ ಮೇಘೈರಿವಾಸಿತೈಃ ॥೫೮॥**

ತೋರಿಕೆಯ ಸದಾಚಾರಪ್ರವರ್ತನೆಯೆಂಬುದು ಮಾಡಿದ ಅಪರಾಧಕ್ಕೆ ಒಂದು ಆವರಣದ ರೂಪದಲ್ಲಿರುವುದು. ಕಪ್ಪುಮೋಡಗಳು ಪರ್ವತವನ್ನೇ ಮುಚ್ಚುವಂತೆ ಸದಾಚಾರದ ತೋರಿಕೆಯು ಅವನ ಮಹಾಪರಾಧವನ್ನೂ ಮುಚ್ಚಿಬಿಡುವುದು.

**ಯಃ ಸ್ಯಾದನುಪ್ರಾಪ್ತವಧಸ್ತಸ್ಯಾಗಾರಂ ಪ್ರದೀಪಯೇತ್ ।**
**ಅಧನಾನ್ನಾಸ್ತಿಕಾಂಶ್ಚೌರಾನ್ವಿಷಯೇ ಸ್ವೇ ನ ವಾಸಯೇತ್ ॥೫೯॥**

ಯಾರನ್ನು ಕೊಲ್ಲಬೇಕಾಗಿರುವುದೋ ಅಂತಹವರ ಮನೆಯನ್ನೇ ಭಸ್ಮಮಾಡಬೇಕು. (ಮನೆಗೆ ಬೆಂಕಿ ಹಾಕಿ ನಿಃಶೇಷವಾಗಿ ನಾಶಮಾಡಬೇಕು.) ದರಿದ್ರರನ್ನೂ, ನಾಸ್ತಿಕರನ್ನೂ ಮತ್ತು ಕಳ್ಳರನ್ನೂ ದೇಶದಲ್ಲಿರಗೊಡಬಾರದು. (ಇಂತಹವರು ಶತ್ರುಗಳ ಕೈಗೊಂಬೆಗಳಾಗುವ ಸಂಭವವುಂಟು.)

**ಪ್ರತ್ಯುತ್ಥಾನಾಸನಾದ್ಯೇವ ಸಮ್ಪ್ರದಾನೇನ ಕೇನಚಿತ್ ।**
**ಪ್ರತಿವಿಶ್ರಬ್ಧಘಾತೀ ಸ್ಯಾತ್ತೀಕ್ಷ್ಣದಂಷ್ಟ್ರೋ ನಿಮಗ್ನಕಃ ॥೬೦॥**

ಶತ್ರುವು ಬಂದೊಡನೆಯೇ ಅವನನ್ನು ಇದಿರ್ಗೊಂಡು ಆಸನ-ಭೋಜನಾದಿಗಳಿಂದ ಉಪಚರಿಸಿ, ಪ್ರಿಯವಸ್ತುವನ್ನು ಬಹುಮಾನಕೊಟ್ಟು ಸಂಪೂರ್ಣವಿಶ್ವಾಸಿಯನ್ನಾಗಿ ಮಾಡಿಕೊಂಡು ಅನಂತರ ನಾಶಮಾಡಬೇಕು. ಕಚ್ಚಿದೊಡನೆಯೇ ಮರಣಹೊಂದಿಸುವ ವಿಷದ ಹಲ್ಲಿರುವ ಹಾವಿನಂತೆ– ಶತ್ರುವನ್ನು ಕ್ಷಣಮಾತ್ರದಲ್ಲಿ ಧ್ವಂಸಗೊಳಿಸುವ ತೀಕ್ಷ್ಣವಾದ ಕೋರೆಹಲ್ಲನ್ನು (ಆಯುಧವನ್ನು) ಹೊಂದಿರಬೇಕು.

**ಅಶಙ್ಕಿತೇಭ್ಯಃ ಶಙ್ಕೇತ ಶಙ್ಕಿತೇಭ್ಯಶ್ಚ ಸರ್ವಶಃ ।**
**ಆಶಙ್ಕ್ಯಾದ್ಭಯಮುತ್ಪನ್ನಮಪಿ ಮೂಲಂ ನಿಕೃನ್ತತಿ ॥೬೧॥**

ನೀನು ಯಾರ ವಿಷಯದಲ್ಲಿ ಸಂಶಯಿಸುವುದಿಲ್ಲವೋ ಅವರನ್ನೂ ಬಹಳ ಜಾಗರೂಕತೆಯಿಂದ ಪರೀಕ್ಷಿಸುತ್ತಲೇ ಇರಬೇಕು. ನಿನಗೆ ಆಗದವ

ರೆಂದು ಯಾರ ವಿಷಯದಲ್ಲಿ ಸಂಶಯವಿರುವುದೋ ಅವರ ವಿಷಯದಲ್ಲಿ ನೀನು ಸರ್ವಪ್ರಕಾರದಿಂದಲೂ ಎಚ್ಚರದಿಂದಿರಬೇಕು. ನೀನು ಯಾರ ವಿಷಯದಲ್ಲಿ ಸಂಶಯಪಡುವುದಿಲ್ಲವೋ ಮತ್ತು ಯಾರು ನಿನ್ನ ನಂಬಿಕೆಗೆ ಪಾತ್ರರೆಂದು ಭಾವಿಸಿರುವೆಯೋ–ಅಂತಹವರಿಂದಲೇ ಅಪಾಯವೇನಾದರೂ ಸಂಭವಿಸಿದರೆ ಅದು ನೀನು ತಡೆದುಕೊಳ್ಳಲಾಗದ ಅಪಾಯವಾಗುತ್ತದೆ. ನಿನ್ನನ್ನೇ ಅದು ಸಂಪೂರ್ಣವಾಗಿ ವಿನಾಶಗೊಳಿಸಿಬಿಡುತ್ತದೆ.

**ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ ।**
**ವಿಶ್ವಾಸಾದ್ಭಯಮುತ್ಪನ್ನಂ ಮೂಲಾನ್ಯಪಿ ನಿಕೃನ್ತತಿ ॥೬೨॥**

ವಿಶ್ವಾಸಕ್ಕೆ ಯೋಗ್ಯರಲ್ಲದವರನ್ನು ನಂಬಲೇ ಬಾರದು. ವಿಶ್ವಾಸಕ್ಕೆ ಯೋಗ್ಯರಾದವರನ್ನೂ ಸಂಪೂರ್ಣವಾಗಿ ನಂಬಬಾರದು. ಏಕೆಂದರೆ : ಹೆಚ್ಚು ನಂಬಿದವನಿಂದ ಉಂಟಾಗುವ ಭಯವು ರಾಜನನ್ನೇ ಸಮೂಲವಾಗಿ ನಾಶಮಾಡಿಬಿಡುತ್ತದೆ. ( ವಿಶ್ವಸನೀಯರಾಗಿರುವವರೇನಾದರೂ ಶತ್ರುಗಳ ಕಡೆಗೆ ಸೇರಿಬಿಟ್ಟರೆ ನಿನ್ನ ಮೂಲೋತ್ಪಾಟನೆಯಾಗುತ್ತದೆ. )

**ಚಾರಃ ಸುವಿಹಿತಃ ಕಾರ್ಯ ಆತ್ಮನಶ್ಚ ಪರಸ್ಯ ವಾ ।**
**ಪಾಷಣ್ಡಾಂಸ್ತಾಪಸಾದೀಂಶ್ಚ ಪರರಾಷ್ಟ್ರೇಷು ಯೋಜಯೇತ್ ॥೬೩॥**

ಸೇವಕರ ವಿಧೇಯತೆಯನ್ನು ಸಂಪೂರ್ಣವಾಗಿ ಪರೀಕ್ಷಿಸಿ ಅನಂತರ ಅವರನ್ನು ತನ್ನ ದೇಶದಲ್ಲಿಯೂ, ಶತ್ರುರಾಷ್ಟ್ರಗಳಲ್ಲಿಯೂ ಗೂಢಚಾರರನ್ನಾಗಿ ನಿಯೋಜಿಸಬೇಕು. ವಂಚನೆಮಾಡುವುದರಲ್ಲಿ ನಿಷ್ಣಾತರಾದವರನ್ನೂ, ತಾಪಸವೇಷಧಾರಿಗಳನ್ನೂ ಶತ್ರುರಾಷ್ಟ್ರಗಳಲ್ಲಿ ಗೂಢಚಾರರನ್ನಾಗಿ ನಿಯಮಿಸಬೇಕು.

**ಉದ್ಯಾನೇಷು ವಿಹಾರೇಷು ದೇವತಾಯತನೇಷು ಚ ।**
**ಪಾನಾಗಾರೇಷು ರಥ್ಯಾಸು ಸರ್ವತೀರ್ಥೇಷು ಚಾಪ್ಯಥ ॥೬೪॥**
**ಚತ್ವರೇಷು ಚ ಕೂಪೇಷು ಪರ್ವತೇಷು ವನೇಷು ಚ ।**
**ಸಮವಾಯೇಷು ಸರ್ವೇಷು ಸರಿತ್ಸು ಚ ವಿಚಾರಯೇತ್ ॥೬೫॥**

ಉದ್ಯಾನವನಗಳಲ್ಲಿ, ವಿಹಾರಸ್ಥಳಗಳಲ್ಲಿ, ದೇವಾಲಯಗಳಲ್ಲಿ, ಪುಣ್ಯ ತೀರ್ಥಗಳಲ್ಲಿ, ಪಾನೀಯಗೃಹಗಳಲ್ಲಿ, ರಾಜಬೀದಿಗಳಲ್ಲಿ–ಗೂಢಚಾರರ

ಸಂಚಾರವಿರಬೇಕು. ರಾಜ್ಯವ್ಯವಹಾರದಲ್ಲಿ ತೀರ್ಥರೆಂದರೆ : ಮುಖ್ಯಾಧಿಕಾರಿಗಳು, ಪ್ರಧಾನಾಮಾತ್ಯರು, ರಾಜಪುರೋಹಿತರು, ಯುವರಾಜ, ದಂಡನಾಯಕ, ದ್ವಾರಪಾಲಕರು, ಅಂತಃಪುರದೊಡನೆ ಸಂಪರ್ಕವಿರುವವರು, ಕಾರಾಗೃಹದ ಅಧಿಕಾರಿ, ರಾಜನ ಅಂಗರಕ್ಷಕರು, ಧನಾಧ್ಯಕ್ಷ, ಸರ್ಕಾರದ ಪ್ರಧಾನಕಾರ್ಯದರ್ಶಿ, ಪ್ರಧಾನನಗರರಕ್ಷಕ, ನಗರದ ರಚನಾಶಿಲ್ಪಿ, ದೇಶದ ನ್ಯಾಯಾಧಿಪತಿ, ಸಭಾಪತಿ, ದಂಡಾಧ್ಯಕ್ಷ, ಕೋಟೆಯ ರಕ್ಷಕ, ಶಸ್ತ್ರಾಗಾರದ ಅಧಿಪತಿ, ಗಡಿಪ್ರದೇಶಗಳ ರಕ್ಷಕರ ಅಧಿಪತಿ ಮತ್ತು ಅರಣ್ಯದ ಮುಖ್ಯಾಧಿಕಾರಿ–ಇವರೊಡನೆ ಗೂಢಚಾರರು ಸದಾ ಸಂಪರ್ಕವನ್ನಿಟ್ಟುಕೊಂಡಿರಬೇಕು. ಯಜ್ಞ-ಯಾಗಾದಿಗಳು ನಡೆಯುವ ಕಡೆಗಳಲ್ಲಿಯೂ, ಕೂಪ-ನದೀ-ಪರ್ವತ-ವನಗಳಲ್ಲಿಯೂ ಮತ್ತು ಜನರು ಸೇರುವ ಎಲ್ಲ ಸ್ಥಳಗಳಲ್ಲಿಯೂ ಗೂಢಚಾರರು ತಮ್ಮ ವ್ಯಾಪ್ತಿಯನ್ನು ಇಟ್ಟುಕೊಂಡಿರಬೇಕು.

**ವಾಚಾ ಭೃಶಂ ವಿನೀತಃ ಸ್ಯಾದ್ಧೃದಯೇನ ತಥಾ ಕ್ಷುರಃ ।**
**ಸ್ಮಿತಪೂರ್ವಾಭಿಭಾಷೀ ಸ್ಯಾತ್ಸೃಷ್ಟೋ ರೌದ್ರಾಯ ಕರ್ಮಣೇ ॥೬೬॥**

ಮಾತುಗಳಲ್ಲಿ ಯಾವಾಗಲೂ ಹೆಚ್ಚು ನಮ್ರತೆಯನ್ನೇ ತೋರಬೇಕು. ಆದರೆ ಅಂತರಂಗವು ಮಾತ್ರ ಕತ್ತಿಯ ಅಲುಗಿನಂತೆ ತೀಕ್ಷ್ಣವಾಗಿರಬೇಕು. ಕ್ರೂರವಾದ ಅಥವಾ ಭಯಂಕರವಾದ ಕಾರ್ಯಮಾಡುವಾಗಲೂ ಮುಗುಳ್ನಗುತ್ತಲೇ ಮಾತನಾಡುತ್ತಾ ಇರಬೇಕು.

**ಅಞ್ಜಲಿಃ ಶಪಥಃ ಸಾನ್ತ್ವಂ ಶಿರಸಾ ಪಾದವನ್ದನಮ್ ।**
**ಆಶಾಕರಣಮಿತ್ಯೇವಂ ಕರ್ತವ್ಯಂ ಭೂತಿಮಿಚ್ಛತಾ ॥೬೭॥**

ಅಭ್ಯುದಯವನ್ನು ಪಡೆಯಲಿಚ್ಛಿಸುವವನು–ತೋರಿಕೆಯ ನಮಸ್ಕಾರ, ತೋರಿಕೆಯ ಶಪಥ, ಸಂತೈಸುವುದು, ತಲೆತಗ್ಗಿಸಿ ಪಾದಗಳಿಗೆ ನಮಸ್ಕರಿಸುವುದು, ಬೇಕಾದುದನ್ನೇ ಕೊಡುವೆನೆಂದು ಹೇಳುವುದು–ಮುಂತಾದ ನಯ-ವಿನಯಗಳನ್ನು ವ್ಯವಹಾರಗಳಲ್ಲಿ ಇಟ್ಟುಕೊಳ್ಳಬೇಕು.

**ಸುಪುಷ್ಪಿತಃ ಸ್ಯಾದಫಲಃ ಫಲವಾನ್ಸ್ಯಾದ್ದುರಾರುಹಃ ।**
**ಆಮಃ ಸ್ಯಾತ್ಪಕ್ವಸಂಕಾಶೋ ನ ಚ ಜೀರ್ಯೇತ ಕರ್ಹಿಚಿತ್ ॥೬೮॥**

ಮಹಾರಾಜ! ಒಂದೇ ಮಾತಿನಲ್ಲಿ ಹೇಳುವುದಾದರೆ : ನೀತಿಶಾಸ್ತ್ರ

ವನ್ನು ತಿಳಿದವನು–ಫಲವಿಲ್ಲದ ಪುಷ್ಪಭರಿತವಾದ ವೃಕ್ಷದಂತಿರಬೇಕು. ವೃಕ್ಷ ದಲ್ಲಿ ಫಲವು ಕಂಡರೂ ಅದು ನಿಲುಕದ ರೀತಿಯಲ್ಲಿರಬೇಕು. ಕಾಯಾಗಿದ್ದರೂ ಹಣ್ಣಿನಂತೆ ತೋರಬೇಕು. ಫಲಾಸ್ವಾದನೆಗೆ ಅವಕಾಶವನ್ನೀಯಬಾರದು. ಈ ರೀತಿಯಲ್ಲಿರುವ ರಾಜನ ಕೀರ್ತಿಗೆ ( ರಾಜನಿಗೆ ) ಎಂದೂ ಹಾನಿಯುಂಟಾಗುವುದಿಲ್ಲ ( ಆಸೆಯನ್ನು ತೋರಿಸುತ್ತಿರಬೇಕು. ಫಲವನ್ನು ಸುಲಭವಾಗಿ ಕೊಡಬಾರದು. ಆದರೆ ಕೊಡುವುದಿಲ್ಲವೆಂಬ ಭಾವನೆಯು ಆಶ್ರಿತರಿಗೆ ಉಂಟಾಗಬಾರದು. ಹೀಗಿರುವವನು ಸುಖವಾಗಿರುತ್ತಾನೆ. )

**ತ್ರಿವರ್ಗೇ ತ್ರಿವಿಧಾ ಪೀಡಾ ಹ್ಯನುಬನ್ಧಸ್ತಥೈವ ಚ ।**
**ಅನುಬನ್ಧಾಃ ಶುಭಾ ಜ್ಞೇಯಾಃ ಪೀಡಾಸ್ತು ಪರಿವರ್ಜಯೇತ್ ॥೧೯॥**

**ಧರ್ಮಂ ವಿಚರತಃ ಪೀಡಾ ಸಾಪಿ ದ್ವಾಭ್ಯಾಂ ನಿಯಚ್ಛತಿ ।**
**ಅರ್ಥಂ ಚಾಪ್ಯರ್ಥಲುಬ್ಧಸ್ಯ ಕಾಮಂ ಚಾತಿಪ್ರವರ್ತಿನಃ ॥೨೦॥**

ಧರ್ಮಾರ್ಥ-ಕಾಮಗಳು ಮೂರು ವಿಧವಾದ ಕೆಟ್ಟ ಮತ್ತು ಒಳ್ಳೆಯ ಫಲಗಳಿಂದ ಕೂಡಿರುತ್ತವೆ. ಅವುಗಳಲ್ಲಿ ಒಳ್ಳೆಯದನ್ನು ಮಾತ್ರವೇ ಅನು ಭವಿಸಿ, ಕೆಟ್ಟುದನ್ನು ದೂರಮಾಡಬೇಕು. ಒಂದನ್ನು ಆಚರಿಸಿ ಮತ್ತೆರಡನ್ನು ಬಿಡುವುದರಿಂದಲೂ ಪೀಡೆಯೇ ಉಂಟಾಗುತ್ತದೆ. ಕೇವಲ ಧರ್ಮವನ್ನೇ ಅವಲಂಬಿಸಿರುವವನು ಅರ್ಥ-ಕಾಮಗಳಿಲ್ಲದೇ ತೊಂದರೆಪಡುತ್ತಾನೆ. ಯಾವಾಗಲೂ ಅರ್ಥವನ್ನೇ ಬಯಸುವವನಿಗೆ ಧರ್ಮ-ಕಾಮಗಳೆರಡರ ಸಂಬಂಧಗಳಿಲ್ಲದಿದ್ದರೆ ತೊಂದರೆಯುಂಟಾಗುತ್ತದೆ. ಬರೀ ಕಾಮಾಸಕ್ತನಿಗೆ ಧರ್ಮಾರ್ಥಗಳಿಲ್ಲದಿದ್ದರೆ ತೊಂದರೆಯಾಗುತ್ತದೆ. ಆದುದರಿಂದ ಚತುರ ನಾದವನು ಧರ್ಮಾರ್ಥ-ಕಾಮಗಳನ್ನು ಸಮವಾಗಿಯೇ ಆಚರಣೆಗೆ ತರಬೇಕು.

**ಅಗರ್ವಿತಾತ್ಮಾ ಯುಕ್ತಶ್ಚ ಸಾನ್ತ್ವಯುಕ್ತೋಽನಸೂಯಿತಾ ।**
**ಅವೇಕ್ಷಿತಾರ್ಥಃ ಶುದ್ಧಾತ್ಮಾ ಮನ್ತ್ರಯೀತ ದ್ವಿಜೈಃ ಸಹ ॥೨೧॥**

ರಾಜನು ನಿರಹಂಕಾರಿಯಾಗಿ, ಅಸೂಯಾರಹಿತನಾಗಿ, ಸಂತೈಸುವ ಗುಣವುಳ್ಳವನಾಗಿ, ಶುದ್ಧಾಂತಃಕರಣನಾಗಿ, ನೀತಿಶಾಸ್ತ್ರಕೋವಿದರಾಗಿರುವ ಬ್ರಾಹ್ಮಣರೊಡನೆ ಸಮಾಲೋಚನೆ ಮಾಡಬೇಕು.

**ಕರ್ಮಣಾ ಯೇನ ಕೇನೈವ ಮೃದುನಾ ದಾರುಣೇನ ಚ ।**
**ಉದ್ಧರೇದ್ದೀನಮಾತ್ಮಾನಂ ಸಮರ್ಥೋ ಧರ್ಮಮಾಚರೇತ್ ॥೨೨॥**

ದುರವಸ್ಥೆಯ ಕಾಲದಲ್ಲಿ ಸತ್ಕರ್ಮದಿಂದಾಗಲೀ, ಅಸತ್ಕರ್ಮ ದಿಂದಾಗಲೀ, ಹೇಯವೆನಿಸಿದ ಕರ್ಮದಿಂದಾಗಲೀ, ಕ್ರೂರಕರ್ಮದಿಂದಾ ಗಲೀ–ದುರವಸ್ಥೆಯನ್ನು ನಿವಾರಣೆಮಾಡಿಕೊಂಡು, ಐಶ್ವರ್ಯ-ಪರಾಕ್ರಮ ಗಳೆರಡರಲ್ಲಿಯೂ ಸಮರ್ಥನೆಂದು ಖ್ಯಾತನಾದನಂತರ ಧರ್ಮಾಚರಣೆ ಯನ್ನು ಮಾಡುವುದು ಯುಕ್ತವೆನಿಸುತ್ತದೆ.

**ನ ಸಂಶಯಮನಾರುಹ್ಯ ನರೋ ಭದ್ರಾಣಿ ಪಶ್ಯತಿ ।**
**ಸಂಶಯಂ ಪುನರಾರುಹ್ಯ ಯದಿ ಜೀವತಿ ಪಶ್ಯತಿ ॥೭೩॥**

ಕಷ್ಟಸಹಿಷ್ಣುತೆಯಿಲ್ಲದ ಮನುಷ್ಯನು ಜೀವನದಲ್ಲಿ ಕಲ್ಯಾಣವನ್ನು ಹೊಂದಲಾರನು. ಸಾಹಸಕಾರ್ಯವನ್ನು ಮಾಡಲುಹೋಗಿ ಪ್ರಾಣಸಂಕಟ ಕ್ಕೊಳಗಾದವನು ಸಂಕಟದಿಂದ ಪಾರಾಗಿ ಕೆಲಸದಲ್ಲಿ ಯಶಸ್ವಿಯಾದರೆ ಅತಿಯಾದ ಸೌಖ್ಯವನ್ನು ಅನುಭವಿಸುವನು.

**ಯಸ್ಯ ಬುದ್ಧಿಃ ಪರಿಭವೇತ್ತಮತೀತೇನ ಸಾನ್ತ್ವಯೇತ್ ।**
**ಅನಾಗತೇನ ದುರ್ಬುದ್ಧಿಂ ಪ್ರತ್ಯುತ್ಪನ್ನೇನ ಪಣ್ಡಿತಮ್ ॥೭೪॥**

ಕಷ್ಟಕ್ಕೊಳಗಾಗಿರುವವರನ್ನು ಹಿಂದೆ ನಡೆದ ನಳ-ಶ್ರೀರಾಮಾದಿಗಳ ಚರಿತ್ರೆಗಳನ್ನು ಹೇಳಿ ಸಂತೈಸಬೇಕು. ಕಷ್ಟದಿಂದ ವಿವೇಕಶೂನ್ಯರಾಗಿರು ವವರನ್ನು ಮುಂಬರುವ ಸುಖಪ್ರಾಪ್ತಿಯನ್ನು ಹೇಳಿ ಸಂತೈಸಬೇಕು. ಪಂಡಿತರನ್ನು ತಾತ್ಕಾಲಿಕವಾಗಿ ಧನಾದಿಗಳನ್ನು ಕೊಟ್ಟು ಸಂತೈಸಬೇಕು.

**ಯೋಽರಿಣಾ ಸಹ ಸಂಧಾಯ ಶಯೀತ ಕೃತಕೃತ್ಯವತ್ ।**
**ಸ ವೃಕ್ಷಾಗ್ರೇ ಯಥಾ ಸುಪ್ತಃ ಪತಿತಃ ಪ್ರತಿಬುಧ್ಯತೇ ॥೭೫॥**

ಶತ್ರುವಿನೊಡನೆ ಸಂಧಿಮಾಡಿಕೊಂಡು ಕೃತಕೃತ್ಯನಾದೆನೆಂದು ಭಾವಿಸಿ, ನಿಶ್ಚಿಂತನಾಗಿ ಯಾವನು ಮಲಗಿರುವನೋ–ಅವನು ಮರದ ಮೇಲೆ ಮಲಗಿ ನಿದ್ರಿಸುತ್ತಿದ್ದಾಗ ಹಠಾತ್ತಾಗಿ ಕೆಳಗೆ ಬೀಳುವವನ ಅವಸ್ಥೆಯನ್ನೇ ಅನುಭವಿಸುವನು. ( ಬಿದ್ದ ಮೇಲೆಯೇ ಎಚ್ಚರಗೊಳ್ಳುತ್ತಾನೆ. )

**ಮನ್ತ್ರಸಂವರಣೇ ಯತ್ನಃ ಸದಾ ಕಾರ್ಯೋಽನಸೂಯತಾ ।**
**ಆಕಾರಮಭಿರಕ್ಷೇತ ಚಾರೇಣಾಪ್ಯನುಪಾಲಿತಃ ॥೭೬॥**

ರಾಜನು ಎಂತಹ ಆಘಾತವೇ ಸಂಭವಿಸಿದರೂ ಹೆದರದೇ ಅಸೂಯಾ

ರಹಿತನಾಗಿ ತನ್ನ ಸಮಾಲೋಚನೆಯನ್ನು ಗೂಢವಾಗಿಯೇ ಮಾಡಬೇಕು. ತನ್ನ ಮಂತ್ರಾಲೋಚನೆಯು ರಟ್ಟಾಗದಂತೆ ನೋಡಿಕೊಳ್ಳಬೇಕು. ಗೂಢಚಾರರಿಂದ ಸಕಲವನ್ನೂ ತಿಳಿಯಬೇಕಲ್ಲದೇ ತಿಳಿದನಂತರ ತನ್ನ ಮನಸ್ಸಿನ ಮೇಲೆ ಉಂಟಾಗುವ ಪರಿಣಾಮವನ್ನು ಮುಖಭಾವದಿಂದ ಹೊರಸೂಸದಂತೆ ಎಚ್ಚರಿಕೆಯನ್ನು ವಹಿಸಬೇಕು. ಮುಖಭಾವಗಳಿಂದಲೇ ಹೃದಯದಲ್ಲೇನಿದೆಯೆಂಬುದನ್ನು ಇತರ ದೇಶಗಳ ಗೂಢಚಾರರು ಅರಿಯಲು ಸಮರ್ಥರಾಗಿರುತ್ತಾರೆ.

**ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮ ದಾರುಣಮ್ ।**
**ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಮಹತೀಂ ಶ್ರಿಯಮ್ ॥೭೭॥**

ಬೆಸ್ತರವನಂತೆ ಕಾರ್ಯಮಾಡದಿದ್ದರೆ ಐಶ್ವರ್ಯಸಂಪಾದನೆಯಾಗಲಾರದು. ಬೆಸ್ತರವನು ಗಾಳಕ್ಕೆ ಹುಳುವನ್ನು ಕಟ್ಟಿ ಮೀನುಗಳನ್ನು ಆಕರ್ಷಿಸುವಂತೆ–ನಯ-ವಿನಯಗಳ ಮಾತುಗಳಿಂದ ಶತ್ರುವನ್ನು ವಿಮೋಹಗೊಳಿಸಬೇಕು. ಹುಳುವಿನಿಂದ ಮೀನನ್ನು ಆಕರ್ಷಿಸಿ ಗಾಳಕ್ಕೆ ಸಿಕ್ಕಿಸುವಂತೆ–ಸಮಯನೋಡಿ ಶತ್ರುವಿನ ಮರ್ಮವನ್ನು ಭೇದಿಸಿ, ಅವನನ್ನು ಸೆರೆಹಿಡಿಯಬೇಕು. ಕೈಗೆ ಸಿಕ್ಕಿದ ಮೀನನ್ನು ಬೆಸ್ತರವನು ಕತ್ತರಿಸುವಂತೆ–ಐಶ್ವರ್ಯಕಾಮನಾದವನು ಶತ್ರುವಿನ ನಿರ್ಮೂಲನಕ್ಕಾಗಿ ದಾರುಣವಾದ ಕಾರ್ಯಗಳನ್ನೂ ಮಾಡಬೇಕು. ಹೀಗೆ ಮಾಡದವನು ಮಹತ್ತಾದ ಐಶ್ವರ್ಯವನ್ನು ಗಳಿಸಲಾರನು.

**ಕರ್ಶಿತಂ ವ್ಯಾಧಿತಂ ಕ್ಲಿನ್ನಮಪಾನೀಯಮಘಾಸಕಮ್ ।**
**ಪರಿವಿಶ್ವಸ್ತಮನ್ದಂ ಚ ಪ್ರಹರ್ತವ್ಯಮರೇರ್ಬಲಮ್ ॥೭೮॥**

ಶತ್ರುಸೈನ್ಯದೊಡನೆ ಮೊದಲು ಯುದ್ಧಮಾಡಿ ಅದು ಆಯಾಸಗೊಳ್ಳುವಂತೆ ಮಾಡಬೇಕು. ಶತ್ರುಸೈನ್ಯಗಳಿರುವ ಸ್ಥಳಗಳಲ್ಲಿ ಸಾಂಕ್ರಾಮಿಕರೋಗಗಳು ಹರಡುವಂತೆ ಮಾಡಬೇಕು. ಅನಂತರದಲ್ಲಿ ನೀರು, ಆಹಾರ ಮತ್ತು ಹುಲ್ಲು–ಇವು ಯಾವುವೂ ಶತ್ರುಸೈನ್ಯಕ್ಕೆ ಸಿಕ್ಕದಂತೆ ಮಾಡಬೇಕು. ನಾಲ್ಕು ದಿಕ್ಕುಗಳಿಂದಲೂ ಆಹಾರ-ಪಾನೀಯಗಳು ಬರುವುದನ್ನು ತಡೆದುಬಿಟ್ಟರೆ ಶತ್ರುಸೈನ್ಯದ ಬಲವು ಬಹುವಾಗಿ ಕುಗ್ಗಿಹೋಗುವುದು. ಶತ್ರುಗಳು ಮೇಲೆ ಬೀಳಲಾರರೆಂದು ನಂಬಿ ಯುದ್ಧಸಿದ್ಧರಾಗಿರದ ಸಮಯದಲ್ಲಿಯೇ ಶತ್ರು

ಸೈನ್ಯದ ಮೇಲೆ ಕಡೆಯದಾಗಿ ಪ್ರಚಂಡದಾಳಿಯನ್ನು ನಡೆಸಿ, ಸಂಪೂರ್ಣವಾಗಿ ಧ್ವಂಸಮಾಡಬೇಕು.

**ನಾರ್ಥಿಕೋಽರ್ಥಿನಮಭ್ಯೇತಿ ಕೃತಾರ್ಥೇ ನಾಸ್ತಿ ಸಂಗತಮ್ ।**
**ತಸ್ಮಾತ್ಸರ್ವಾಣಿ ಸಾಧ್ಯಾನಿ ಸಾವಶೇಷಾಣಿ ಕಾರಯೇತ್ ॥೭೯॥**

ಹಣವಂತನು ಮತ್ತೊಬ್ಬ ಹಣವಂತನ ಬಳಿಗೆ ಯಾಚನೆಮಾಡಲು ಹೋಗುವುದಿಲ್ಲ. ದೀನನಾದವನು ಮಾತ್ರವೇ ಐಶ್ವರ್ಯವಂತನ ಬಳಿಗೆ ಯಾಚನೆಮಾಡಲು ಹೋಗುವನು. ಆದರೆ ದೀನನೂ ಕೃತಾರ್ಥನಾದರೆ (ತನ್ನ ಆಸೆಯನ್ನು ಪೂರೈಸಿಕೊಂಡರೆ ) ಅವನಾದರೂ ಪುನಃ ಧನಿಕನ ಬಳಿಗೆ ಬರಲಾರನು. ಆದುದರಿಂದ ರಾಜನು ಒಂದು ಕಾರ್ಯವು ತನ್ನಿಂದ ನಿರ್ವಹಿಸಲು ಸಾಧ್ಯವಿದ್ದರೂ ಅದನ್ನು ಪೂರ್ಣವಾಗಿ ಮಾಡಿಕೊಡಬಾರದು. ದರಿದ್ರನಾದವನು ಯಾವಾಗಲೂ ತನ್ನನ್ನು ಅವಲಂಬಿಸಿರುವಂತೆಯೇ ಮಾಡ ಬೇಕು.

**ಸಂಗ್ರಹೇ ವಿಗ್ರಹೇ ಚೈವ ಯತ್ನಃ ಕಾರ್ಯೋಽನಸೂಯತಾ ।**
**ಉತ್ಸಾಹಶ್ಚಾಪಿ ಯತ್ನೇನ ಕರ್ತವ್ಯೋ ಭೂತಿಮಿಚ್ಛತಾ ॥೮೦॥**

ಐಶ್ವರ್ಯವನ್ನೂ ಮತ್ತು ಯಶಸ್ಸನ್ನೂ ಅಪೇಕ್ಷಿಸುವವನು–ಮಿತ್ರರ ಮತ್ತು ಐಶ್ವರ್ಯದ ಸಂಗ್ರಹದಲ್ಲಿ ಯಾವಾಗಲೂ ಪ್ರಯತ್ನಶೀಲನಾಗಿರ ಬೇಕು. ಅಂತೆಯೇ ಶತ್ರುವಿನೊಡನೆ ಯುದ್ಧಮಾಡುವುದಕ್ಕೂ ಸರ್ವದಾ ಸಿದ್ಧನಾಗಿರಬೇಕು. ಎಂತಹ ತೊಂದರೆಗಳೇ ಬಂದರೂ, ಒಮ್ಮೆ ಮಾಡಿದ ಪ್ರಯತ್ನವು ಸಫಲವಾಗದಿದ್ದರೂ ನಿರುತ್ಸಾಹಿಯಾಗಬಾರದು. ಮುಂದೆ ಜಯವು ಲಭಿಸಿಯೇ ತೀರುವುದೆಂಬ ಭರವಸೆಯನ್ನಿಟ್ಟುಕೊಂಡು ಉತ್ಸಾಹ ಶೀಲನಾಗಿ ಕೆಲಸಮಾಡುತ್ತಲೇ ಇರಬೇಕು.

**ನಾಸ್ಯ ಕೃತ್ಯಾನಿ ಬುಧ್ಯೇರನ್ಮಿತ್ರಾಣಿ ರಿಪವಸ್ತಥಾ ।**
**ಆರಬ್ಧಾನ್ಯೇವ ಪಶ್ಯೇರನ್ಸುಪರ್ಯವಸಿತಾನ್ಯಪಿ ॥೮೧॥**

ಚತುರನಾದ ರಾಜನು ತನ್ನ ಹಿತೈಷಿಗಳಿಗಾಗಲೀ–ಶತ್ರುಗಳಿಗಾಗಲೀ ತಾನು ಮಾಡಲಿರುವ ಕಾರ್ಯಗಳನ್ನು ತಿಳಿಸಬಾರದು. ಆರಂಭಿಸಿದ ಕಾರ್ಯಗಳನ್ನು ಮುಗಿಸಿದ ಮೇಲೆಯೇ ಬೇರೆಯವರು ತಿಳಿಯಬೇಕೇ ಹೊರತು ಮೊದಲು ತಿಳಿಯುವಂತಿರಬಾರದು.

**ಭೀತವತ್ಸಂವಿಧಾತವ್ಯಂ ಯಾವದ್ಭಯಮನಾಗತಮ್ ।**
**ಆಗತಂ ತಂ ಭಯಂ ದೃಷ್ಟ್ವಾ ಪ್ರಹರ್ತವ್ಯಮಭೀತವತ್ ॥೮೨॥**

ಅಪಾಯವು ಸಂಭವಿಸದೇ ಇರುವವರೆಗೂ ಅಪಾಯವನ್ನು ಯೋಚಿಸಿ ಭೀತನಾಗಿರುವಂತೆಯೇ ಕಾರ್ಯಮಾಡಬೇಕು. ಅಪಾಯವು ಸಂಭವಿಸಿದಾಗ ನಿರ್ಭೀತನಂತೆ ಧೈರ್ಯದಿಂದ ಎದುರಿಸಿ ಜಯವನ್ನು ಗಳಿಸಬೇಕು.

**ದಣ್ಡೇನೋಪನತಂ ಶತ್ರುಮನುಗೃಹ್ಣಾತಿ ಯೋ ನರಃ ।**
**ಸ ಮೃತ್ಯುಮುಪಗೃಹ್ಣೀಯಾದ್ಗರ್ಭಮಶ್ವತರೀ ಯಥಾ ॥೮೩॥**

ಶಿಕ್ಷೆಗೊಳಗಾದ ( ದಂಡೋಪಾಯದಿಂದ ವಶಪಡಿಸಿಕೊಂಡ ) ಶತ್ರುವಿನ ವಿಷಯದಲ್ಲಿ ಯಾವ ರಾಜನು ದಯೆಯಿಡುವನೋ ಅವನು–ಗರ್ಭಧಾರಣೆ ಮಾಡಿದ ಹೇಸರಗತ್ತೆಯಂತೆ–ಮೃತ್ಯುವಶನಾಗುವುದರಲ್ಲಿ ಸಂಶಯವೇ ಇಲ್ಲ. (ಹೇಸರಗತ್ತೆಯು ಗರ್ಭಧಾರಣೆ ಮಾಡುವುದೇ ಇಲ್ಲ. ಅಪ್ಪಿ-ತಪ್ಪಿ ಗರ್ಭಧಾರಣೆ ಮಾಡಿದರೆ ಅದಕ್ಕೆ ಮೃತ್ಯುವು ಸನ್ನಿಹಿತವಾದಂತೆಯೇ ಸರಿ.)

**ಅನಾಗತಂ ಹಿ ಬುಧ್ಯೇತ ಯಚ್ಚ ಕಾರ್ಯಂ ಪುರಃ ಸ್ಥಿತಮ್ ।**
**ನ ತು ಬುದ್ಧಿಕ್ಷಯಾತ್ಕಿಂಚಿದತಿಕ್ರಾಮೇತ್ಪ್ರಯೋಜನಮ್ ॥೮೪॥**

ಮುಂದೆ ಉಂಟಾಗುವ ಅಪಾಯವನ್ನೂ ಇಂದೇ ಯೋಚಿಸಿ, ಅಪಾಯದಿಂದ ಪಾರಾಗಲು ಸಿದ್ಧತೆಯನ್ನು ಮಾಡಿಕೊಳ್ಳಬೇಕು. ಹಾಗಿಲ್ಲದಿದ್ದರೆ ಅಪಾಯವು ಒದಗಿದ ಕಾಲದಲ್ಲಿ ಅವಸರದ ಕಾರಣದಿಂದಾಗಿ ಸರಿಯಾಗಿ ಬುದ್ಧಿಯನ್ನು ಉಪಯೋಗಿಸಲಾಗದೇ ಪ್ರಮುಖವಿಷಯಗಳನ್ನೇ ಮರೆತುಬಿಡಬಹುದು.

**ಉತ್ಸಾಹಶ್ಚಾಪಿ ಯತ್ನೇನ ಕರ್ತವ್ಯೋ ಭೂತಿಮಿಚ್ಛತಾ ।**
**ವಿಭಜ್ಯ ದೇಶಕಾಲೌ ಚ ದೈವಂ ಧರ್ಮಾದಯಸ್ತ್ರಯಃ ।**
**ನೈಃಶ್ರೇಯಸೌ ತು ತೌ ಜ್ಞೇಯೌ ದೇಶಕಾಲಾವಿತಿ ಸ್ಥಿತಿಃ ॥೮೫॥**

ಶ್ರೇಯಸ್ಕಾಮನು ಯಾವ ಕಾರ್ಯವನ್ನಾದರೂ ಕಾಲ-ದೇಶಗಳನ್ನು ಅನುಸರಿಸಿಯೇ ಮಾಡಬೇಕು. ತನ್ನ ಗ್ರಹಗತಿಗಳನ್ನು ಸರಿಪಡಿಸುವ ಮಂತ್ರಪೂರ್ವಕವಾದ ಕರ್ಮಾನುಷ್ಠಾನಗಳನ್ನೂ ಮಾಡಬೇಕು. ದೇಶ-ಕಾಲಗಳು ಮನುಷ್ಯನ ಜೀವನದಲ್ಲಿ ಹೆಚ್ಚು ಪರಿಣಾಮವನ್ನುಂಟುಮಾಡುತ್ತವೆ. ದೇಶ

ಕಾಲಗಳೇ ಮನುಷ್ಯನ ಶ್ರೇಯಃ-ಪ್ರೇಯಗಳಿಗೆ ಕಾರಣವಾಗುತ್ತವೆ. ಇದು ನೀತಿಶಾಸ್ತ್ರದ ಸಿದ್ಧಾಂತವಾಗಿದೆ. ದೇಶ-ಕಾಲಗಳಿಗೆ ಅನುಸಾರವಾಗಿ ಧರ್ಮಾರ್ಥ-ಕಾಮಗಳ ಸಾಧನೆಗೆ ಪ್ರಯತ್ನಿಸಬೇಕು.

**ತಾಲವತ್ಕುರುತೇ ಮೂಲಂ ಬಾಲಃ ಶತ್ರುರುಪೇಕ್ಷಿತಃ ।**
**ಗಹನೇಽಗ್ನಿರಿವೋತ್ಸೃಷ್ಟಃ ಕ್ಷಿಪ್ರಂ ಸಂಜಾಯತೇ ಮಹಾನ್ ॥೮೬॥**

ಶತ್ರುವು ಬಾಲಕನಾಗಿರುವನೆಂಬ ಕಾರಣದಿಂದ ತಾತ್ಸಾರವನ್ನು ಮಾಡ ಕೂಡದು. ಕಾಲಕ್ರಮದಲ್ಲಿ ಆ ಬಾಲಕನ ಪ್ರಭಾವವೇ ತಾಲವೃಕ್ಷದ ಬೇರಿ ನಂತೆ ಸರ್ವವ್ಯಾಪಿಯಾಗಿಬಿಡಬಹುದು. ಅರಣ್ಯದಲ್ಲಿ ಬಿದ್ದ ಅಗ್ನಿಕಣವು ನಿಮಿಷಮಾತ್ರದಲ್ಲಿ ಹೊತ್ತಿಕೊಂಡು ಅರಣ್ಯವನ್ನೆಲ್ಲಾ ದಹಿಸಿಬಿಡುವಂತೆ– ಕಾಲಕ್ರಮದಲ್ಲಿ ಬಾಲಶತ್ರುವೇ ಪ್ರಭಾವವನ್ನು ಹೆಚ್ಚಿಸಿಕೊಂಡು ಶತ್ರುವಿನ (ತನ್ನ) ಮೂಲೋತ್ಪಾಟನವನ್ನೂ ಮಾಡಬಹುದು.

**ಅಗ್ನಿಂ ಸ್ತೋಕಮಿವಾತ್ಮಾನಂ ಸಂಧುಕ್ಷಯತಿ ಯೋ ನರಃ ।**
**ಸ ವರ್ಧಮಾನೋ ಗ್ರಸತೇ ಮಹಾನ್ತಮಪಿ ಸಂಚಯಮ್ ॥೮೭॥**

ಅಗ್ನಿಯ ಒಂದೇ ಕಿಡಿಯು ಸಂಬಂಧಾನುಸಂಬಂಧದಿಂದ ಸಂವರ್ಧಿಸು ವಂತೆ–ಯಾವನು ಯದ್ಯಪಿ ಬಲವಂತನಾಗಿರದಿದ್ದರೂ ಸಂಬಂಧಾನು ಸಂಬಂಧವನ್ನು ಕಲ್ಪಿಸಿಕೊಂಡು (ಮಿತ್ರ-ಬಂಧುಗಳನ್ನು ಹೆಚ್ಚಿಸಿಕೊಂಡು) ಸಂವರ್ಧಿಸುತ್ತಾನೆಯೋ ಅಂತಹವನು–ಸಂವರ್ಧಿತವಾದ ಅಗ್ನಿಕಣವು ಕಟ್ಟಿಗೆಯ ರಾಶಿಯನ್ನೇ ಭಸ್ಮಮಾಡಿಬಿಡುವಂತೆ–ಶತ್ರುಪಕ್ಷದ ಅಪಾರಶಕ್ತಿ ಯನ್ನೂ ಕುಂಠಿತಗೊಳಿಸಲು ಸಮರ್ಥನಾಗುತ್ತಾನೆ.

**ಆಶಾಂ ಕಾಲವತೀಂ ಕುರ್ಯಾತ್ಕಾಲಂ ವಿಘ್ನೇನ ಯೋಜಯೇತ್ ।**
**ವಿಘ್ನಂ ನಿಮಿತ್ತತೋ ಬ್ರೂಯಾನ್ನಿಮಿತ್ತಂ ವಾಪಿ ಹೇತುತಃ ॥೮೮॥**

ತಾನು ಕೊಡುವ ಆಶ್ವಾಸನೆಯು ಅನಿಶ್ಚಿತವಾಗಿರಬೇಕು. ಆಶ್ವಾಸನೆ ಯನ್ನು ಪೂರ್ಣಮಾಡಬೇಕಾದ ಸಂದರ್ಭವು ಒದಗಿದಾಗಲೆಲ್ಲಾ ಯಾವು ದಾದರೂ ವಿಘ್ನವನ್ನು ಒಡ್ಡಿ ಕಾಲವನ್ನು ತಳ್ಳುತ್ತಿರಬೇಕು. ಅವುಗಳನ್ನು ಹೇಳುವಾಗಲೂ ಯುಕ್ತಿಯುಕ್ತವಾಗಿಯೇ ಹೇಳಬೇಕು. ಆ ಯುಕ್ತಿಗಳೂ ಕೇಳುವವರಿಗೆ 'ನ್ಯಾಯಬದ್ಧವಾಗಿಯೇ ಇವೆ' ಎನ್ನುವಂತಿರಬೇಕು.

**ಕ್ಷುರೋ ಭೂತ್ವಾ ಹರೇತ್ಪ್ರಾಣಾನ್ನಿಶಿತಃ ಕಾಲಸಾಧನಃ ।**
**ಪ್ರತಿಚ್ಛನ್ನೋ ಲೋಮಹಾರೀ ದ್ವಿಷತಾಂ ಪರಿಕರ್ತನಃ ॥೮೯॥**

ರಾಜರು ಶತ್ರುಗಳನ್ನು ವಿನಾಶಮಾಡುವ ಕಾಲದಲ್ಲಿ ಕ್ಷೌರದ ಕತ್ತಿಯಂತೆಯೇ ವರ್ತಿಸಬೇಕು. ಕತ್ತಿಯ ಅಲುಗಿನಂತೆಯೇ ತೀಕ್ಷ್ಣಹೃದಯವುಳ್ಳವರಾಗಿ, ದಯಾಶೂನ್ಯರಾಗಿ ಶತ್ರುವಿನ ಕತ್ತನ್ನು ಹಾರಿಸಬೇಕು. ಕತ್ತಿ ಯನ್ನು ಮಡಿಸಿದಾಗ ಅದು ಒರೆಯೊಳಗೆ ಸೇರಿಹೋಗುವಂತೆ–ತಮ್ಮ ಧ್ಯೇಯಗಳೇನೆಂಬುದನ್ನು ಹೊರಕ್ಕೆ ತೋರಬಾರದು. ಕ್ಷೌರದ ಕತ್ತಿಯ ಉಪಯೋಗವು ಹೇಗೆ ನೈಮಿತ್ತಿಕವಾಗಿರುವುದೋ ಹಾಗೆಯೇ ರಾಜರು ಸಮಯವರಿತು ಕಾರ್ಯಮಾಡಬೇಕು. ಕಾರ್ಯಪ್ರವೃತ್ತವಾದಾಗ ಕತ್ತಿಯು ಹೇಗೆ ಕೇಶಲೇಶವನ್ನೂ ಬಿಡದೇ ತಲೆ ಮತ್ತು ಗಡ್ಡಗಳಲ್ಲಿರುವ ರೋಮಕೋಟಿಗಳನ್ನು ತೆಗೆದುಹಾಕುವುದೋ–ಹಾಗೆಯೇ ಬಂಧು-ದಾಯಾದ-ಮಿತ್ರ ಸಮೇತನಾದ ಶತ್ರುವನ್ನು ನಾಶಮಾಡಬೇಕು.

**ಪಾಣ್ಡವೇಷು ಯಥಾನ್ಯಾಯಮನ್ಯೇಷು ಚ ಕುರೂದ್ವಹ ।**
**ವರ್ತಮಾನೋ ನ ಮಜ್ಜೇಸ್ತ್ವಂ ತಥಾ ಕೃತ್ಯಂ ಸಮಾಚರ ॥೯೦॥**

ಕುರುಕುಲಾವತಂಸನೇ! ನೀನು ಪಾಂಡವರ ವಿಷಯದಲ್ಲಿಯೂ ಮತ್ತು ಇತರರ ವಿಷಯದಲ್ಲಿಯೂ ನ್ಯಾಯವಾದ ರೀತಿಯಲ್ಲಿಯೇ ( ರಾಜನೀತಿಯು ಸೂಚಿಸಿರುವ ರೀತಿಯಲ್ಲೇ ) ವರ್ತಿಸುವುದು ಯುಕ್ತವಾಗಿದೆ. ಆದರೆ ಮುಂದೆ ದುಃಖಿಸಬೇಕಾಗುವಂತೆ ಅಥವಾ ಸಂಕಟದಲ್ಲಿ ಸಿಕ್ಕಿಕೊಳ್ಳಬೇಕಾಗುವಂತೆ ಕಾರ್ಯಮಾಡಬೇಡ. ನೀನು ಸರ್ವಕಲ್ಯಾಣಗುಣಗಳಿಂದಲೂ ವಿಶಿಷ್ಟನಾಗಿ, ಸುಖ-ಸಂಪತ್ತುಗಳಿಂದಲೂ ಕೂಡಿರುವೆಯೆಂಬುದು ನಿಶ್ಚಯ. ಈಗ ನಿನಗೆ ಯಾವುದರಲ್ಲಿಯೂ ಕೊರತೆಯಿಲ್ಲ. ಪಾಂಡುಪುತ್ರರ ದೆಸೆಯಿಂದ ನಿನ್ನನ್ನು ರಕ್ಷಣೆಮಾಡಿಕೋ. ನಿನ್ನ ತಮ್ಮನ ಮಕ್ಕಳಾದ ಪಾಂಡುಪುತ್ರರು ನಿನ್ನ ಮಕ್ಕಳಿಗಿಂತಲೂ ಪರಾಕ್ರಮಿಗಳಾಗಿರುವುದಂತೂ ನಿಶ್ಚಯ. ಅವರ ವಿಷಯದಲ್ಲಿ ಏನಾದರೂ ಮಾಡಲು ಹೋಗಿ ಮುಂದೆ ಪಶ್ಚಾತ್ತಾಪಕ್ಕೆ ಕಾರಣವಾಗದ ರೀತಿಯಲ್ಲಿ ನೀನು ನಿನ್ನ ನೀತಿಯನ್ನು ರೂಪಿಸಿಕೊಳ್ಳಬೇಕಾಗಿದೆ.”

ಜನಮೇಜಯ! ಕಣಿಕನು ಧೃತರಾಷ್ಟ್ರನೊಡನೆ ಹೀಗೆ ಹೇಳಿ ತನ್ನ

ಮನೆಗೆ ಹೊರಟುಹೋದನು. ಕುರುಕುಲಾವತಂಸನಾದ ಧೃತರಾಷ್ಟ್ರನಾದರೋ ವ್ಯಾಕುಲಚಿತ್ತನಾಗಿ ಸ್ವಲ್ಪಹೊತ್ತು ಹಾಗೆಯೇ ಕುಳಿತಿದ್ದನು.

೧೪೦ನೆಯ ಅಧ್ಯಾಯವು ಮುಗಿಯಿತು.

೧೪೧ನೆಯ ಅಧ್ಯಾಯ ಜತುಗೃಹಪರ್ವ

## ಪಾಂಡವರ ವಿಷಯದಲ್ಲಿ ಪೌರರ ಅನುರಾಗ : ದುರ್ಯೋಧನನ ಚಿಂತೆ

ಜನಮೇಜಯ! ಅನಂತರ ಶಕುನಿ-ದುರ್ಯೋಧನ-ದುಃಶಾಸನ-ಕರ್ಣರು ಸೇರಿ ಪಾಂಡವರ ಸಂಹಾರಕ್ಕಾಗಿ ಬಹುದುಷ್ಟವಾದ ಯೋಜನೆಯೊಂದನ್ನು ಸಿದ್ಧಪಡಿಸಿದರು. ತಮ್ಮ ದುಷ್ಟಯೋಜನೆಗೆ ಒಪ್ಪಿಗೆಯನ್ನು ಪಡೆಯಲು ಅವರೆಲ್ಲರೂ ಧೃತರಾಷ್ಟ್ರನಲ್ಲಿಗೆ ಬಂದರು. ಕುಂತಿಯನ್ನು ಪುತ್ರರ ಸಮೇತ ದಹಿಸಬೇಕೆಂಬುದೇ ಅವರ ಯೋಜನೆಯಾಗಿದ್ದಿತು. ಆ ಯೋಜನೆಗೆ ರಾಜನ ಅನುಮತಿಯೂ ಸಿಕ್ಕಿತು.

ಮುಖಾವಲೋಕನದಿಂದಲೇ ಇತರರ ಹೃದಯಗಳಲ್ಲಿನ ಇಂಗಿತವನ್ನು ಅರಿಯಲು ಸಮರ್ಥನಾದ, ಧೃತರಾಷ್ಟ್ರನ ತಮ್ಮನಾದ ವಿದುರನು ದುಷ್ಟಚಿತ್ತರಾದ ದುರ್ಯೋಧನಾದಿಗಳ ಮುಖಭಾವಗಳಿಂದಲೂ ಮತ್ತು ಚಲನ-ವಲನಗಳಿಂದಲೂ ಅವರ ಮಂತ್ರಾಲೋಚನೆಯ ವಿಷಯವನ್ನು ಅರಿತುಕೊಂಡನು. ಧರ್ಮಾತ್ಮನಾದ, ಪಾಂಡವರ ಹಿತದಲ್ಲಿಯೇ ಆಸಕ್ತನಾಗಿದ್ದ, ಪಾಪರಹಿತನಾದ, ಮಹಾಜ್ಞಾನಿಯಾದ ವಿದುರನು ಕುಂತೀದೇವಿಯು ಮಕ್ಕಳೊಡನೆ ಅಲ್ಲಿಂದ ಪಲಾಯನಮಾಡುವುದೇ ಆ ಸಮಯದಲ್ಲಿ ಸೂಕ್ತವೆಂದು ನಿಶ್ಚಯಿಸಿದನು. ಅನಂತರ ವಿದುರನು ಅವರ ಪಲಾಯನಕ್ಕಾಗಿಯೇ :

**ತತೋ ವಾತಸಹಾಂ ನಾವಂ ಯನ್ತ್ರಯುಕ್ತಾಂ ಪತಾಕಿನೀಮ್ ।**
**ಊರ್ಮಿಕ್ಷಮಾಂ ದೃಢಾಂ ಕೃತ್ವಾ ಕುನ್ತೀಮಿದಮುವಾಚ ಹ ॥೫॥**

ಸುಂಟರಗಾಳಿಯನ್ನೂ-ಅಲೆಗಳನ್ನೂ ತಡೆದುಕೊಳ್ಳಲು ಸಮರ್ಥವಾದ, ಯಂತ್ರಯುಕ್ತವಾದ, ಧ್ವಜಯುಕ್ತವಾದ ಮತ್ತು ಹೆಚ್ಚು ದೃಢವಾದ ನಾವೆಯೊಂದನ್ನು ಸಿದ್ಧಗೊಳಿಸಿ ಮಹಾಮಾತೆಯಾದ ಕುಂತಿಗೆ ಹೇಳಿದನು :

**ಏಷ ಜಾತಃ ಕುಲಸ್ಯಾಸ್ಯ ಕೀರ್ತಿವಂಶಪ್ರಣಾಶನಃ ।**
**ಧೃತರಾಷ್ಟ್ರಃ ಪರೀತಾತ್ಮಾ ಧರ್ಮಂ ತ್ಯಜತಿ ಶಾಶ್ವತಮ್ ॥೬॥**

"ಕುಂತಿ! ನಿಶ್ಚಯವಾಗಿಯೂ ಪಾಪಾತ್ಮನಾದ ಈ ಧೃತರಾಷ್ಟ್ರನು ನಮ್ಮ ವಂಶವನ್ನೂ ಮತ್ತು ವಂಶದ ಕೀರ್ತಿಯನ್ನೂ ನಾಶಮಾಡಲೆಂದೇ ಜನ್ಮತಾಳಿದ್ದಾನೆ. ಇವನಿಂದು (ನಿಮ್ಮ ಮೇಲಿನ ದ್ವೇಷದಿಂದಾಗಿ) ಶಾಶ್ವತ ವಾದ ಸನಾತನಧರ್ಮವನ್ನೂ ತ್ಯಾಗಮಾಡಲಿದ್ದಾನೆ. ಶುಭಾಂಗಿಯೇ! ನಾನೀಗ ನದಿಯಲ್ಲಿ ಸಿದ್ಧಪಡಿಸಿರುವ ನಾವೆಯು ಅಲೆಗಳನ್ನೂ ಮತ್ತು ಬಿರು ಗಾಳಿಯನ್ನೂ ತಡೆದುಕೊಳ್ಳಲು ಅತ್ಯಂತ ಸಮರ್ಥವಾಗಿದೆ. ಮೃತ್ಯುಪಾಶ ದಿಂದ ಬಂಧಿತಳಾಗಿರುವ ನೀನು ಈ ನೌಕೆಯಲ್ಲಿ ಪುತ್ರರೊಡನೆ ಕುಳಿತು ಪಲಾಯನಮಾಡಿದರೆ ಮೃತ್ಯುವಿನಿಂದ ವಿಮೋಚಿತಳಾಗುವೆ."

ಜನಮೇಜಯ! ವಿದುರನ ಮಾತುಗಳನ್ನು ಕೇಳಿ ಯಶಸ್ವಿನಿಯಾದ ಕುಂತಿಯು ಬಹಳ ವ್ಯಥಿತಳಾಗಿ, ವಿದುರನ ನಿರ್ದೇಶನದಂತೆ ಮಕ್ಕಳೊಡನೆ ನಾವೆಯಲ್ಲಿ ಕುಳಿತು ಗಂಗಾನದಿಯಲ್ಲಿ ಬಹಳ ದೂರದವರೆಗೆ ಪ್ರಯಾಣ ಮಾಡಿದಳು.

ಅನಂತರ ವಿದುರನು ಮೊದಲೇ ಸೂಚಿಸಿದ್ದಂತೆ–ಪಾಂಡವರು ಆ ನಾವೆಯನ್ನು ಗಂಗಾನದಿಯಲ್ಲೇ ಬಿಟ್ಟು, ಕೌರವರು ಕೊಟ್ಟಿದ್ದ ಧನವನ್ನೂ ತೆಗೆದುಕೊಂಡು ಅಪಾಯರಹಿತವಾದ ಮತ್ತು ಗಹನವಾದ ಅರಣ್ಯವನ್ನು ಪ್ರವೇಶಿಸಿದರು. ಅವರು ವಾಸಿಸುತ್ತಿದ್ದ ಲಾಕ್ಷಾಗೃಹಕ್ಕೆ ಕಾರಣಾಂತರದಿಂದ ಪಾಪರಹಿತಳಾದ ಒಬ್ಬ ನಿಷಾದಿಯು ತನ್ನ ಐವರು ಪುತ್ರರೊಡನೆ ಅಂದೇ ಆಗಮಿಸಿದ್ದು, ಅರಗಿನಮನೆಯೊಡನೆ ಭಸ್ಮೀಭೂತಳಾದಳು. ಲಾಕ್ಷಾಗೃಹಕ್ಕೆ ಬೆಂಕಿಯಿಡಲೆಂದೇ ಬಹಳ ದಿವಸಗಳಿಂದಲೂ ಹೊಂಚುಹಾಕುತ್ತಿದ್ದ, ಪಾಪಿಷ್ಠನಾದ, ಮ್ಲೇಚ್ಛಾಧಮನಾದ ಪುರೋಚನನೂ ಭಸ್ಮವಾಗಿ ಹೋದನು.

ದುರಾತ್ಮರಾದ ಧೃತರಾಷ್ಟ್ರನ ಮಕ್ಕಳೂ ಮತ್ತು ಅವರ ಅನುಯಾಯಿ ಗಳೂ ವಂಚಿತರಾದರು. ಅವರ ದುಷ್ಟಯೋಜನೆಯು ನಿಷ್ಫಲವಾಗಿ ಹೋಯಿತು.

ವಿದುರನ ಸಲಹೆಯಂತೆ ನಡೆದುಕೊಂಡ ಕುಂತೀಸಮೇತರಾದ

ಪಾಂಡವರು ಅಪಾಯದಿಂದ ಪಾರಾದರು. ಮಹಾತ್ಮರಾದ ಪಾಂಡವರು ಸ್ವಲ್ಪವೂ ತೊಂದರೆಯಾಗದ ರೀತಿಯಲ್ಲಿ ಅರಗಿನಮನೆಯಿಂದ ಪಾರಾದರೆಂಬ ವಿಷಯವು ವಾರಣಾವತದ ಪ್ರಜೆಗಳಿಗೆ ತಿಳಿಯದೇ ಹೋಯಿತು. ಆ ನಗರದಲ್ಲಿ ವಾಸವಾಗಿದ್ದ ಜನರೆಲ್ಲರೂ ಲಾಕ್ಷಾಗೃಹವು ಭಸ್ಮವಾದುದನ್ನು ಕಂಡು, ಪಾಂಡವರೆಲ್ಲರೂ ದಗ್ಧರಾಗಿಹೋದರೆಂದೇ ಭಾವಿಸಿ ಬಹುದುಃಖಿತರಾಗಿ ಗಳ-ಗಳನೆ ಅಳತೊಡಗಿದರು.

ನಡೆದ ವೃತ್ತಾಂತವೆಲ್ಲವನ್ನೂ ಧೃತರಾಷ್ಟ್ರರಾಜನಿಗೆ ಪ್ರತಿನಿಧಿಯ ಮೂಲಕ ಯಥಾವತ್ತಾಗಿ ಹೇಳಿಕಳುಹಿಸಿದರು :

**ಸಂವೃತ್ತಸ್ತೇ ಮಹಾನ್ಕಾಮಃ ಪಾಂಡವಾನ್ದಗ್ಧವಾನಸಿ ।**
**ಸಕಾಮೋ ಭವ ಕೌರವ್ಯ ಭುಂಕ್ಷ್ವ ರಾಜ್ಯಂ ಸಪುತ್ರಕಃ ॥೧೫॥**

"ಕೌರವ್ಯ! ನಿನ್ನ ಮಹತ್ತಾದ ಮನೋರಥವು ಪೂರ್ಣವಾಯಿತು. ಬಹಳ ಚಾತುರ್ಯದಿಂದ ಪಾಂಡವರನ್ನು ಭಸ್ಮಮಾಡಿಬಿಟ್ಟೆಯಲ್ಲವೇ! ಈಗಲಾದರೂ ತೃಪ್ತನಾಗು. ನಿಃಸಪತ್ನವಾದ ಈ ರಾಜ್ಯವನ್ನು ಪುತ್ರ ಸಮೇತನಾಗಿ ಅನುಭವಿಸು."

ವಾರಣಾವತದ ಪ್ರಜೆಗಳ ಪ್ರತಿನಿಧಿಯು ಹೇಳಿದ ಮಾತುಗಳನ್ನು ಕೇಳಿ ದೊಡನೆಯೇ ಧೃತರಾಷ್ಟ್ರನು ಪುತ್ರಸಮೇತನಾಗಿ ಅಳಲಾರಂಭಿಸಿದನು. ಭೀಷ್ಮ-ವಿದುರರೊಡನೆಯೂ, ಇತರ ಬಂಧುಗಳೊಡನೆಯೂ ಕೂಡಿಕೊಂಡು ಪಂಚಪಾಂಡವರ ಮತ್ತು ಕುಂತಿಯ ಅಂತ್ಯಕ್ರಿಯೆಗಳನ್ನು ಬಹಳ ವಿಜೃಂಭಣೆ ಯಿಂದಲೇ ನೆರವೇರಿಸಿದನು"–ಎಂಬುದಾಗಿ ಹೇಳಿ ವೈಶಂಪಾಯನರು ಜತುಗೃಹದ ಕಥೆಯನ್ನು ಮುಗಿಸಿದರು. ಸಂಕ್ಷೇಪವಾದ ಕಥಾಶ್ರವಣದಿಂದ ತೃಪ್ತನಾಗದ ಜನಮೇಜಯನು ವೈಶಂಪಾಯನರನ್ನು ಪ್ರಾರ್ಥಿಸಿದನು :

"ಬ್ರಾಹ್ಮಣೋತ್ತಮರೇ! ಜತುಗೃಹದಹನ ಮತ್ತು ಪಾಂಡವ ವಿಮೋಕ್ಷಣವೆಂಬ ಈ ಕಥೆಯನ್ನು ನಾನು ವಿಸ್ತಾರವಾಗಿಯೇ ಕೇಳಲಿಚ್ಛಿಸಿ ದ್ದೇನೆ. ಅವರು (ದುರ್ಯೋಧನಾದಿಗಳು) ಮಾಡಿದ ಆ ದುಷ್ಕೃತ್ಯವು

ನಿಶ್ಚಯವಾಗಿಯೂ ಬಹುಕ್ರೂರವಾದುದು; ದಯಾರಹಿತವಾದುದು. ಈ ಕಥೆಯು ಹೇಗೆ ನಡೆಯಿತೋ ಹಾಗೆಯೇ ಹೇಳಿರಿ. ಯಥಾವತ್ತಾಗಿಯೇ ಇದನ್ನು ಕೇಳಲು ನನಗೆ ಕುತೂಹಲವುಂಟಾಗಿದೆ.''

''ಜನಮೇಜಯ! ಅರಗಿನ ಮನೆಯ ನಿರ್ಮಾಣ, ಅದನ್ನು ಭಸ್ಮ ಮಾಡಿದ ರೀತಿ ಮತ್ತು ಪಾಂಡವರು ಅಲ್ಲಿಂದ ಪಾರಾದುದು–ಇವೆಲ್ಲವನ್ನೂ ವಿಶದವಾಗಿಯೇ ಹೇಳುವೆನು''–ಎಂದು ವೈಶಂಪಾಯನರು ಕಥೆಯನ್ನು ಮುಂದುವರಿಸಿದರು :

''ಮಹಾಪರಾಕ್ರಮಶಾಲಿಯಾದ ಭೀಮಸೇನನನ್ನೂ–ಧನುರ್ವಿದ್ಯೆಯಲ್ಲಿ ಅದ್ವಿತೀಯನಾದ ಅರ್ಜುನನನ್ನೂ ಅನುದಿನವೂ ನೋಡುತ್ತಿದ್ದ, ದುಷ್ಟವಾದ ಮನಸ್ಸುಳ್ಳ ದುರ್ಯೋಧನನು ಅಸೂಯೆಯ ಕಾರಣದಿಂದಾಗಿ ಬಹುವಾಗಿ ಪರಿತಪಿಸುತ್ತಿದ್ದನು. ಸೂರ್ಯನ ಮಗನಾದ ಕರ್ಣನೂ, ಸುಬಲನ ಮಗನಾದ ಶಕುನಿಯೂ ಅನೇಕಾನೇಕ ಉಪಾಯಗಳಿಂದ ಪಾಂಡವರನ್ನು ಕೊಲ್ಲಲು ಸನ್ನಾಹಗಳನ್ನು ಮಾಡುತ್ತಲೇ ಇದ್ದರು.

ಪಾಂಡವರು ಅವೆಲ್ಲವನ್ನೂ ಒಂದೊಂದನ್ನಾಗಿ ನಿವಾರಣೆಮಾಡಿಕೊಳ್ಳುತ್ತಾ, ಮಹಾನುಭಾವನಾದ ವಿದುರನ ಆಜ್ಞಾಧಾರಕರಾಗಿದ್ದುಕೊಂಡು, ತಮಗೆ ಪದೇ-ಪದೇ ಒದಗುತ್ತಿದ್ದ ಅಪಾಯಗಳನ್ನಾಗಲೀ, ಅದರ ನಿವಾರಣೆಗೆ ತಾವು ಮಾಡುತ್ತಿದ್ದ ಉಪಾಯಗಳನ್ನಾಗಲೀ–ಬಹಿರಂಗ ಪಡಿಸದೇ ಇರುತ್ತಿದ್ದರು.

ಸಕಲಸದ್ಗುಣಸಂಪನ್ನರಾದ ಪಾಂಡುಕುಮಾರರನ್ನು ನೋಡಿ ಪೌರರು ಸಭೆಗಳಲ್ಲಿ, ನಾಲ್ಕು ಜನರು ಸೇರಿದ ಕಡೆಗಳಲ್ಲಿ ಪಾಂಡವರ ಸದ್ಗುಣಗಳನ್ನೇ ಪ್ರಶಂಸೆಮಾಡುತ್ತಿದ್ದರು. ಸಂಸತ್ತುಗಳಲ್ಲಿಯೂ, ನಾಲ್ಕು ಬೀದಿಗಳು ಸೇರುವ ಚೌಕಗಳಲ್ಲಿಯೂ ಜನರು–'ಪಾಂಡವಜ್ಯೇಷ್ಠನಾದ, ಯುವರಾಜನಾಗಿರುವ ಯುಧಿಷ್ಠಿರನು ನಮ್ಮ ರಾಜನಾಗಿ ರಾಜ್ಯಸಿಂಹಾಸನವನ್ನು ಆರೋಹಣಮಾಡಲು ಇದು ಸಕಾಲವಾಗಿದೆ'–ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. ಜನರು ತಮ್ಮ ತಮ್ಮ ಅಭಿಪ್ರಾಯಗಳನ್ನು ನಾನಾವಿಧವಾಗಿ ನಿರ್ಭಯವಾಗಿ ಮಾತನಾಡಿಕೊಳ್ಳುತ್ತಿದ್ದಾಗ ಧೃತರಾಷ್ಟ್ರನ ವಿಷಯವಾಗಿಯೂ ಅವರು ಹೀಗೆ ಹೇಳುತ್ತಿದ್ದರು :

"ಪ್ರಜ್ಞಾಚಕ್ಷುವಾದ, ಹುಟ್ಟುಕುರುಡನಾದ ಧೃತರಾಷ್ಟ್ರನು ನಮಗೆ ರಾಜನಾಗಿ ಮುಂದುವರಿಯಲು ಅರ್ಹನಾಗಿರುವುದಿಲ್ಲ. ಇವನು ಹುಟ್ಟಿನಲ್ಲಿ ಯದ್ಯಪಿ ಜ್ಯೇಷ್ಠನಾಗಿದ್ದರೂ ಹುಟ್ಟುಕುರುಡನೆಂಬ ಕಾರಣದಿಂದಲೇ ಇವನಿಗೆ ಹಿಂದೆ ರಾಜ್ಯವು ಲಭಿಸಲಿಲ್ಲ. ಪಾಂಡುವು ನಮ್ಮ ರಾಜನಾದನು. ಅವನು ಸತ್ತುಹೋದ ಬಳಿಕ–ಧೃತರಾಷ್ಟ್ರನು ನಮಗೆ ತಾತ್ಕಾಲಿಕವಾಗಿ ರಾಜನಾಗಿರುವನು. ಈ ರಾಜ್ಯಭಾರವನ್ನು ಇವನು ಮುಂದುವರಿಸಲು ಯೋಗ್ಯನಾಗಿರುವುದಿಲ್ಲ. ಧೃತರಾಷ್ಟ್ರನ ಬದಲು ಪಿತಾಮಹನಾದ, ಸತ್ಯಸಂಧನಾದ, ಮಹಾವ್ರತನಾದ ಭೀಷ್ಮನೇ ನಮಗೆ ರಾಜನಾಗಬೇಕಾಗಿದ್ದಿತು. ಆದರೆ ಈ ಹಿಂದೆಯೇ ಅವನು ತಂದೆಯ ಸಲುವಾಗಿ ರಾಜನಾಗುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವನಾದುದರಿಂದ ಈಗ ಅವನು ರಾಜ್ಯಭಾರವನ್ನು ಖಂಡಿತವಾಗಿಯೂ ವಹಿಸಲಾರನು. ಪಾಂಡವಜ್ಯೇಷ್ಠನಾದ ಯುಧಿಷ್ಠಿರನು ತರುಣನಾಗಿದ್ದಾನೆ. ಅವನು ಕುರುಚಕ್ರಾಧಿಪತ್ಯಕ್ಕೆ ರಾಜನಾಗಲು ಸರ್ವಥಾ ಯೋಗ್ಯನೂ ಆಗಿರುತ್ತಾನೆ. ನಾವೆಲ್ಲರೂ ಸೇರಿ ರಾಜ್ಯಸಿಂಹಾಸನದಲ್ಲಿ ಯುಧಿಷ್ಠಿರನ್ನು ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡೋಣ. ಧರ್ಮವಿದನಾದ ಯುಧಿಷ್ಠಿರನು ಭೀಷ್ಮನನ್ನೂ, ಧೃತರಾಷ್ಟ್ರನನ್ನೂ ಯಥಾಯೋಗ್ಯವಾಗಿ ಸಂಪೂಜಿಸುತ್ತಾ, ಪುತ್ರಸಹಿತನಾದ ಧೃತರಾಷ್ಟ್ರನಿಗೆ ಸಕಲಸುಖೋಪಭೋಗಗಳನ್ನೂ ಒದಗಿಸಿಕೊಟ್ಟು ಎಲ್ಲರನ್ನೂ ಚೆನ್ನಾಗಿ ನೋಡಿಕೊಳ್ಳುತ್ತಾನೆ."

ಇಂತಹ ಮಾತುಗಳು ಕೇವಲ ನಾಲ್ಕಾರು ಮಂದಿ ಮಾತ್ರವೇ ಆಡುವ ಮಾತುಗಳಾಗಿರಲಿಲ್ಲ. ಹಾಸ್ತಿನಪುರದಲ್ಲಿ ಎಲ್ಲ ಪ್ರಜೆಗಳೂ ಇದೇ ಮಾತುಗಳನ್ನಾಡತೊಡಗಿದರು. ಆ ಮಾತುಗಳು ದುರ್ಯೋಧನನ ಕಿವಿಗಳಿಗೂ ಬಿದ್ದುವು. ದುರ್ಯೋಧನನ ಸಮ್ಮುಖದಲ್ಲಿಯೂ ಅವರು ಅದೇ ಮಾತುಗಳನ್ನಾಡುತ್ತಿದ್ದರು. ಯುಧಿಷ್ಠಿರನಲ್ಲಿ ಅನುರಕ್ತರಾದ ಪ್ರಜೆಗಳು ಹೀಗೆ ಮಾತನಾಡಿಕೊಳ್ಳುತ್ತಿರುವುದನ್ನು ಕೇಳಿ ದುರ್ಯೋಧನನು ಬಹುವಾಗಿ ಪರಿತಪಿಸಿದನು. ಯದ್ಯಪಿ ಯುಧಿಷ್ಠಿರನಿಗೆ ಪಟ್ಟಗಟ್ಟುವ ವಿಷಯದಲ್ಲಿ ಭೀಷ್ಮ-ವಿದುರಾದಿಗಳು ಇನ್ನೂ ಯಾವ ನಿರ್ಧಾರಕ್ಕೂ ಬರದಿದ್ದರೂ ದುರ್ಯೋಧನನು ಪಟ್ಟಣಿಗರು ಆಡಿಕೊಳ್ಳುವುದನ್ನೂ ಸಹಿಸಿಕೊಳ್ಳಲಿಲ್ಲ. ಯುಧಿಷ್ಠಿರನ ವಿಷಯದಲ್ಲಿ

ಹುಟ್ಟಿದ ಅಸೂಯೆಯು ಅವನ ಅಂಗಾಂಗಗಳನ್ನೆಲ್ಲಾ ದಹಿಸತೊಡಗಿತು. ಅಸೂಯಾತಪ್ತನಾದ ದುರ್ಯೋಧನನು ತನ್ನ ಹೃದಯದ ವೇದನೆಯನ್ನು ತಾಳಲಾರದೇ ತಂದೆಯಾದ ಧೃತರಾಷ್ಟ್ರನ ಸಮೀಪಕ್ಕೆ ಹೋದನು.

ಪಟ್ಟಣಿಗರು ಯುಧಿಷ್ಠಿರನ ಮೇಲಿಟ್ಟಿದ್ದ ಅನುರಾಗದ ಕಾರಣದಿಂದ ಈರ್ಷ್ಯೆಗೊಂಡು, ಬಹುವಾಗಿ ಪರಿತಪಿಸುತ್ತಿದ್ದ ದುರ್ಯೋಧನನು–ಧೃತ ರಾಷ್ಟ್ರನ ಅರಮನೆಯಲ್ಲಿ ರಾಜನೊಬ್ಬನೇ ಏಕಾಕಿಯಾಗಿದ್ದ ಸಮಯದಲ್ಲಿ ಆತನನ್ನು ಕಂಡು, ಯಥಾಯೋಗ್ಯವಾಗಿ ಸಂಪೂಜಿಸಿ ಹೀಗೆ ಹೇಳಿದನು :

"ತಂದೆಯೇ! ಇತ್ತೀಚೆಗೆ ನಮ್ಮ ಪ್ರಜೆಗಳು ಬಹಳ ಅಮಂಗಳಕರ ವಾದ ಮಾತುಗಳನ್ನು ಆಡುತ್ತಿರುವುದನ್ನು ನಾನೇ ಕೇಳಿದೆನು. ಪ್ರಜೆಗಳು ನಿನ್ನನ್ನೂ ಮತ್ತು ಭೀಷ್ಮನನ್ನೂ ಅನಾದರಣೆಮಾಡಿ, ಪಾಂಡುಪುತ್ರನಾದ ಯುಧಿಷ್ಠಿರನನ್ನೇ ರಾಜನನ್ನಾಗಿ ಮಾಡಿಕೊಳ್ಳಲು ಅಪೇಕ್ಷಿಸುತ್ತಿದ್ದಾರೆ. ಭೀಷ್ಮನೂ ಇದನ್ನೇ ಅನುಮೋದಿಸಬಹುದು. ಏಕೆಂದರೆ : ಅವನಂತೂ ರಾಜ್ಯಭಾರವನ್ನು ವಹಿಸಿಕೊಳ್ಳಲು ಇಚ್ಛಿಸಲಾರನು. ಆದುದರಿಂದ ಜನರು ಮಾಡುತ್ತಿರುವ ಈ ಸನ್ನಾಹವು ನಮಗೆ ಬಹಳವಾದ ಪೀಡೆಯನ್ನು ಉಂಟುಮಾಡತಕ್ಕುದಾಗಿದೆ. ಪಾಂಡುವು ತನ್ನಲ್ಲಿದ್ದ ಸದ್ಗುಣಗಳಿಂದಲೂ ಮತ್ತು ಪರಾಕ್ರಮದಿಂದಲೂ ಕುರುವಂಶೀಯರಿಗೆ ಸೇರಿದ್ದ ಈ ಕುರುಜಾಂಗ ಲಕ್ಕೆ ರಾಜನಾದನು. ವಿಚಿತ್ರವೀರ್ಯನ ಹಿರಿಯ ಹೆಂಡತಿಯಲ್ಲಿ ನೀನು ಮೊದಲು ಹುಟ್ಟಿದೆಯಾದ್ದರಿಂದ ನಿನಗೇ ಈ ಕುರುಸಿಂಹಾಸನವು ಲಭಿಸ ಬೇಕಾಗಿದ್ದಿತು. ಆದರೆ ಅಂಗವಿಕಲತೆಯಿಂದಾಗಿ ನಿನಗೆ ಸಿಂಹಾಸನವು ಲಭಿಸ ಲಿಲ್ಲ. ಪಾಂಡುರಾಜನ ಉತ್ತರಾಧಿಕಾರಿಯು ಅವನ ಮಗನಾದ ಯುಧಿಷ್ಠಿರನೇ ಆಗುವುದಾದರೆ ಪಾಂಡುವಂಶೀಯರಿಗೆ ಮಾತ್ರವೇ ಈ ಕುರುರಾಜ್ಯದ ಸಿಂಹಾಸನವು ಸಿಕ್ಕುವುದೇ ಹೊರತು ಧಾರ್ತರಾಷ್ಟ್ರರಿಗೆ ಈ ಸಿಂಹಾಸನವು ಖಂಡಿತವಾಗಿಯೂ ಸಿಕ್ಕುವುದಿಲ್ಲ. ಇಂದು ಪಾಂಡುವಿನ ಮಗನು ರಾಜ ನಾಗುವುದಾದರೆ ಮುಂದೆ ಯುಧಿಷ್ಠಿರನ ಮಗನೂ, ಅನಂತರ ಅವನ ಮಗನೂ ರಾಜರಾಗುತ್ತಾರೆ. ಇದರಿಂದಾಗಿ ನಾವೂ ನಮ್ಮ ಮಕ್ಕಳೂ ರಾಜ ವಂಶದಿಂದಲೇ ಚ್ಯುತರಾಗುತ್ತೇವೆ. ಈ ಲೋಕದಲ್ಲಿ ನಾವು ಅಗಣ್ಯರಾಗು ತ್ತೇವೆ. ನಮ್ಮನ್ನು ರಾಜಕುಮಾರರೆಂದು ಯಾರೂ ಪರಿಗಣಿಸುವುದೂ ಇಲ್ಲ.

ಮಹಾರಾಜ! ರಾಜವಂಶದಲ್ಲಿ ಹುಟ್ಟಿಯೂ ರಾಜಕುಮಾರರೆಂಬ ಗೌರವ ವನ್ನು ಪಡೆಯದೇ ಕೇವಲ ಆಹಾರಕ್ಕಾಗಿ ಇತರರನ್ನು ಅವಲಂಬಿಸಿರುವುದು ನಿಶ್ಚಯವಾಗಿಯೂ ನರಕವಾಸವೇ ಸರಿ. ಈ ವಿಧವಾದ ನರಕವಾಸವು ನಮಗೆ ಪ್ರಾಪ್ತವಾಗದಂತೆ ನೀನು ಯಾವುದಾದರೂ ಯೋಗ್ಯವಾದ ನೀತಿಯನ್ನು ಅವಲಂಬಿಸು. ಹಿಂದೆ ಯಾವುದೇ ಕಾರಣದಿಂದಾದರೂ ನೀನೇ ಈ ರಾಜ್ಯಕ್ಕೆ ಅಧಿಪತಿಯಾಗಿದ್ದರೆ (ರಾಜ್ಯಾಡಳಿತವನ್ನು ವಹಿಸಿದ್ದರೆ) ನಿನ್ನ ಮಕ್ಕಳಾದ ನಾವೇ ರಾಜ್ಯವನ್ನು ಪಡೆಯುತ್ತಿದ್ದೆವು. ಅಂತಹ ಸಮಯದಲ್ಲಿ ಪ್ರಜೆಗಳು ನಮಗೆ ವಿರೋಧಿಗಳಾಗಿದ್ದರೂ ನಾವದನ್ನು ಲೆಕ್ಕಿಸಬೇಕಾಗಿರಲಿಲ್ಲ."

೧೪೧ನೆಯ ಅಧ್ಯಾಯವು ಮುಗಿಯಿತು.

೧೪೨ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ಪಾಂಡವರನ್ನು ವಾರಣಾವತಕ್ಕೆ ಕಳುಹಿಸಲು ಧೃತರಾಷ್ಟ್ರನೊಡನೆ ದುರ್ಯೋಧನನ ಸಮಾಲೋಚನೆ

"ಜನಮೇಜಯ! ಜ್ಞಾನನೇತ್ರನಾದ ಧೃತರಾಷ್ಟ್ರನು ಮಗನಾಡಿದ ಮಾತುಗಳೆಲ್ಲವನ್ನೂ ಕೇಳಿದನು. ಕಣಿಕನು ಹೇಳಿದ ರಾಜನೀತಿಯೂ ಕಿವಿ ಗಳಲ್ಲಿ ಪ್ರತಿಧ್ವನಿತವಾಗುತ್ತಿತ್ತು. ತತ್ಕಾಲದಲ್ಲಿ ಏನು ಮಾಡಬೇಕೆಂದು ನಿಶ್ಚಯಿಸಲು ಸಾಧ್ಯವಾಗದೇ ಡೋಲಾಯಮಾನಮನಸ್ಕನಾಗಿ ಚಿಂತಿಸ ತೊಡಗಿದನು. ತಂದೆಯ ಈ ಸ್ಥಿತಿಯನ್ನು ತಿಳಿದು ದುರ್ಯೋಧನನು ಕ್ಷಣ ಕಾಲ ಹೊರಗೆ ಹೋಗಿ ಕರ್ಣ-ಶಕುನಿ-ದುಃಶಾಸನರೊಡನೆ ಸಮಾಲೋಚಿಸಿ ಪುನಃ ತಂದೆಯ ಬಳಿಗೆ ಬಂದು ಹೇಳತೊಡಗಿದನು :

"ತಂದೆಯೇ! ವ್ಯಾಜಾಂತರದಿಂದ ಪಾಂಡವರನ್ನು ಈ ಕೂಡಲೇ ವಾರಣಾವತಕ್ಕೆ ಕಳುಹಿಸಿಬಿಡು. ಅವರಲ್ಲಿಗೆ ಹೋಗಿಬಿಟ್ಟರೆ ಮುಂದೆ ಅವರಿಂದ ನಮಗಾವ ಭಯವೂ ಇರುವುದಿಲ್ಲ."

ಧೃತರಾಷ್ಟ್ರನು ಮಗನು ಹೇಳಿದ ಮಾತುಗಳನ್ನು ಕೇಳಿ, ಮುಹೂರ್ತ

ಕಾಲ ಯೋಚನಾಪರನಾಗಿಯೇ ಕುಳಿತಿದ್ದನು. ಅನಂತರ ನಿಟ್ಟುಸಿರುಬಿಟ್ಟು ತಲೆಯೆತ್ತಿ ಮಗನ ಕಡೆಗೆ ತಿರುಗಿ ಹೇಳತೊಡಗಿದನು :

"ಮಗು! ನನ್ನ ತಮ್ಮನಾದ ಪಾಂಡುವು ಧರ್ಮಾತ್ಮನು. ಅವನು ತನ್ನ ಬಂಧುಗಳನ್ನು ಬಹಳ ಅಕ್ಕರೆಯಿಂದಲೇ ನೋಡಿಕೊಳ್ಳುತ್ತಿದ್ದನು. ಅದರಲ್ಲಿಯೂ ನನ್ನ ವಿಷಯದಲ್ಲಿ ಅವನಿಗಿದ್ದ ಪ್ರೀತಿಯು ಅಸಾಧಾರಣ ವಾಗಿತ್ತು. ಅವನೆಂದೂ ಪ್ರಾಪಂಚಿಕಸೌಖ್ಯದೆಡೆಗೆ ಗಮನಕೊಟ್ಟವನೇ ಅಲ್ಲ. ಪಾಂಡುವು ಭೋಜನಾದಿ ಸ್ವಕಾರ್ಯಗಳನ್ನು ಸ್ವಲ್ಪವೂ ಗಮನಿಸುತ್ತಿರಲಿಲ್ಲ. ಕೇವಲ ನನ್ನ ಸುಖೋಪಭೋಗಗಳಲ್ಲಿಯೇ ಆಸಕ್ತನಾಗಿದ್ದುಕೊಂಡು ಎಲ್ಲವನ್ನೂ ನನಗೆ ಒಪ್ಪಿಸಿಬಿಡುತ್ತಿದ್ದನು."

ಧೃತರಾಷ್ಟ್ರನ ಕಣ್ಣುಗಳಿಂದ ಒಂದೆರಡು ಕಂಬನಿಗಳು ಉದುರಿದುವು. ಉತ್ತರೀಯದಿಂದ ಕಣ್ಣುಗಳನ್ನು ಒರೆಸಿಕೊಂಡು ಮುಂದೆ ಹೇಳತೊಡಗಿದನು:

"ಈಗ ಅವನ ಮಗನಾದರೂ ತಂದೆಯಂತೆಯೇ ಧರ್ಮಿಷ್ಠನಾಗಿ ಸಕಲಗುಣಪರಿಪೂರ್ಣನಾಗಿರುವನು. ಅವನು ತನ್ನ ಗುಣಾತಿಶಯದಿಂದಲೇ ಪ್ರಜೆಗಳೆಲ್ಲರ ಪ್ರೀತಿಗೂ ಪಾತ್ರನಾಗಿರುವನು. ಅವನ ಸದ್ಗುಣಗಳಿಗೆ ಮನ ಸೋತು ಅನೇಕ ರಾಜರು ಯುಧಿಷ್ಠಿರನ ಮಿತ್ರರಾಗಿರುವರು. ಈಗ ನಾವು ಪಾಂಡವರನ್ನು ಬಲಾತ್ಕಾರದಿಂದ ದೇಶಭ್ರಷ್ಟರನ್ನಾಗಿ ಮಾಡಲು ಸಾಧ್ಯ ವಿದೆಯೇ? ಅಮಾತ್ಯ, ಸೇನಾಪತಿ–ಮೊದಲಾದ ಅಧಿಕಾರಿಗಳೂ ಮತ್ತು ಅವರ ಮಕ್ಕಳೂ, ಮೊಮ್ಮಕ್ಕಳೂ ಮತ್ತು ಸೈನಿಕರೂ ಪಾಂಡುವಿನಿಂದ ಪರಿ ಪಾಲಿತರಾಗಿದ್ದರು. ಪಾಂಡುವು ಅವರನ್ನು ಮಕ್ಕಳಂತೆಯೇ ಕಾಪಾಡು ತ್ತಿದ್ದನು. ಪ್ರಜೆಗಳನ್ನು ಬಹಳ ಅಕ್ಕರೆಯಿಂದ ಕಾಪಾಡುತ್ತಿದ್ದ ಪಾಂಡುವಿನ ಮೇಲಿದ್ದ ಪ್ರೇಮವೇ ಪ್ರಜೆಗಳಿಗೆ ಇಂದು ಯುಧಿಷ್ಠಿರನ ಮೇಲೆಯೂ ಇದೆ. ಹೀಗಿರುವಾಗ ನಾವೇನಾದರೂ ಪಾಂಡವರಿಗೆ ತೊಂದರೆಮಾಡಲು ಹೋದರೆ ಅವರೆಲ್ಲರೂ ಸೇರಿ ನಮ್ಮನ್ನು ಜೀವದಿಂದಿರಗೊಡುವರೇ? ನಮ್ಮನ್ನು ಬಂಧು-ಬಾಂಧವರೊಡನೆ ನಾಶಮಾಡುವರೆಂಬ ಭಯವೂ ನನಗಿದೆ, ದುರ್ಯೋಧನ!"

"ತಂದೆಯೇ! ನೀನು ಹೇಳುವುದೆಲ್ಲವೂ ನಿಜ. ಆದರೆ ನಿನ್ನ ಮನಸ್ಸಿ ನಲ್ಲಿರುವ ಆತಂಕವನ್ನು ಪರಿಹರಿಸಲು ಸಾಧ್ಯವಿದೆ. ನಾನು ಇವೆಲ್ಲವನ್ನೂ

ಯೋಚಿಸಿಯೇ ನಮ್ಮ ಭೃತ್ಯವರ್ಗದವರಿಗೂ, ಪ್ರಜೆಗಳ ನಾಯಕರಿಗೂ ಯಥೇಚ್ಛವಾಗಿ ದ್ರವ್ಯಾದಿಗಳನ್ನು ಕೊಟ್ಟು ಗೌರವಿಸುತ್ತಲೇ ಇರುವೆನು. ಆದುದರಿಂದ ಮುಂದೆ ಅವರೆಲ್ಲರೂ ನಮ್ಮ ಕಡೆಗೆ ಸೇರಿಕೊಳ್ಳುತ್ತಾರೆಂಬುದ ರಲ್ಲಿ ಸಂಶಯವೇ ಇಲ್ಲ. ನಾವು ಯಥೇಚ್ಛವಾಗಿ ಹಣವನ್ನು ಕೊಡುವುದರಿಂದ ನಾವು ಅತ್ಯಂತಸಮರ್ಥರಾಗಿರುವೆವೆಂಬ ಭಾವನೆಯೂ ಪ್ರಜೆಗಳ ಮನಸ್ಸಿನಲ್ಲಿ ಬೇರೂರುತ್ತಿದೆ. ಬೊಕ್ಕಸದ ಅಧಿಕಾರಿಗಳೂ–ಅಮಾತ್ಯರೂ ಈಗಾಗಲೇ ನನ್ನ ಅಧೀನಕ್ಕೆ ಒಳಗಾಗಿದ್ದಾರೆ. ಆದುದರಿಂದ ನೀನು ಯಾವುದಾದರೊಂದು ಯುಕ್ತಿಯುಕ್ತವಾದ ವ್ಯಾಜವನ್ನು ಮುಂದುಮಾಡಿ ಪಾಂಡವರನ್ನು ವಾರಣಾ ವತಕ್ಕೆ ಕೂಡಲೇ ಕಳುಹಿಸಿಕೊಡು. ಸಾಮ್ರಾಜ್ಯವು ನನ್ನ ಕೈವಶವಾದನಂತರ ಬೇಕಾದರೆ ಕುಂತಿಯೂ ಅವಳ ಮಕ್ಕಳೂ ವಾರಣಾವತದಿಂದ ಹಿಂದಿರುಗಲಿ."

"ಮಗು ದುರ್ಯೋಧನ! ನೀನು ಹೇಳಿದ ವಿಷಯಗಳೇ ನನ್ನ ಮನಸ್ಸಿನಲ್ಲಿಯೂ ಇವೆ. ಆದರೆ ಹಾಗೆ ಮಾಡುವುದು ಪಾಪಕಾರ್ಯವಾದುದ ರಿಂದ ಇದುವರೆಗೂ ಬಹಿರಂಗಪಡಿಸಿಲ್ಲ. ಅದೂ ಅಲ್ಲದೇ–ಭೀಷ್ಮನಾಗಲೀ, ದ್ರೋಣರಾಗಲೀ, ವಿದುರನಾಗಲೀ, ಗೌತಮರಾಗಲೀ–ಯಾರೂ ಪಾಂಡವ ರನ್ನು ದೇಶಭ್ರಷ್ಟರನ್ನಾಗಿ ಮಾಡುವುದನ್ನು ಖಂಡಿತವಾಗಿಯೂ ಒಪ್ಪ ಲಾರರು. ಅವರೆಲ್ಲರ ದೃಷ್ಟಿಯಲ್ಲಿ ನಾವೂ ಮತ್ತು ಪಾಂಡವರು ಒಂದೇ. ಧರ್ಮಿಷ್ಠರಾದ ಅವರು ಪಾಂಡವರಲ್ಲಾಗಲೀ ನಮ್ಮಲ್ಲಾಗಲೀ ಭೇದವನ್ನೆಣಿ ಸುವುದಿಲ್ಲ. ಹೀಗಿರುವಾಗ ನಾವೇನಾದರೂ ಪಾಂಡವರ ವಿಷಯದಲ್ಲಿ ಅಪಚಾರವನ್ನು ಮಾಡಿದರೆ ಕುರುವಂಶದವರಿಂದಲೂ ಮತ್ತು ಪ್ರಜಾಸ್ತೋಮ ದಿಂದಲೂ ಮರಣದಂಡನೆಗೆ ಗುರಿಯಾಗಬೇಕಾಗುವುದು. ಅಲ್ಲವೇ?"

"ತಾತ! ನೀನು ಹೇಳುವುದೆಲ್ಲವೂ ನಿಜ. ಆದರೆ ಸೂಕ್ಷ್ಮವಾಗಿ ಪರ್ಯಾಲೋಚಿಸಿದರೆ ಭಯಪಡುವುದಕ್ಕೆ ಕಾರಣವಿಲ್ಲ. ನನ್ನ ಅಭಿಪ್ರಾಯ ದಲ್ಲಿ ಭೀಷ್ಮನಿಗೆ ಉಭಯಪಕ್ಷಗಳಲ್ಲಿ ಯಾರ ಮೇಲೆಯೂ ಹೆಚ್ಚಿನ ಪ್ರೀತಿ ಯಿಲ್ಲ. ಎರಡು ಪಕ್ಷಗಳನ್ನೂ ಒಂದೇ ಸಮನಾಗಿ ಕಾಣುವನು. ಆದುದರಿಂದ ಉಭಯಪಕ್ಷಗಳಲ್ಲಿ ವೈಮನಸ್ಯವುಂಟಾದಾಗ ಭೀಷ್ಮನು ತಟಸ್ಥಭಾವವನ್ನು ವಹಿಸುವನೇ ಹೊರತು, ಪಾಂಡವರ ಪಕ್ಷಕ್ಕೆ ಖಂಡಿತವಾಗಿಯೂ ಸೇರಲಾ

ರನು. ದ್ರೋಣ-ಗೌತಮರಿಗೆ ಪಾಂಡವರಲ್ಲಿಯೇ ಹೆಚ್ಚು ಪ್ರೀತಿಯಿರ ಬಹುದು. ಆದರೆ ದ್ರೋಣಪುತ್ರನಾದ ಅಶ್ವತ್ಥಾಮನು ನಮ್ಮ ಪಕ್ಷದಲ್ಲಿಯೇ ಇರುವನು. ಮಗನನ್ನಗಲಿ ತಂದೆಯು ಪ್ರತಿಪಕ್ಷವನ್ನು ಹಿಡಿಯುವನೇ? ಆದುದರಿಂದ ಮಗನ ಪಕ್ಷದಲ್ಲಿಯೇ ತಂದೆಯೂ ಮನಸ್ಸಿಲ್ಲದಿದ್ದರೂ ಇರು ವುದು ಖಂಡಿತ. ದ್ರೋಣರೂ ಮತ್ತು ದ್ರೋಣಪುತ್ರನೂ ಎಲ್ಲಿರುವರೋ ಅಲ್ಲಿಯೇ ಶಾರದ್ವತರೂ ಇರುವರು. ಅವರ ವಿಷಯವಾಗಿಯೂ ಚಿಂತಿಸ ಬೇಕಾಗಿಲ್ಲ. ಸೋದರಳಿಯನಾದ ಅಶ್ವತ್ಥಾಮನನ್ನು ತೊರೆದು ಹೋಗಲು ಗೌತಮರಿಗೆ ಸಾಧ್ಯವಿದೆಯೇ? ಆದರೆ ವಿದುರನ ವಿಷಯವಾಗಿ ಸ್ವಲ್ಪ ಯೋಚಿಸಬೇಕಾಗಿದೆ. ಅವನು ಅನ್ನಾಹಾರಗಳಿಗೆ ನಮ್ಮನ್ನೇ ಆಶ್ರಯಿಸಿದ್ದರೂ ಅಂತರಂಗದಲ್ಲಿ ಶತ್ರುಪಕ್ಷದವರನ್ನೇ ಸೇರಿರುವನು. ಅವನೊಬ್ಬನು ಪ್ರತ್ಯಕ್ಷವಾಗಿಯೇ ಪಾಂಡವರ ಕಡೆಗೆ ಹೋಗಿ ಸೇರಿದರೂ ನಾವು ಭಯಪಡ ಬೇಕಾಗಿಲ್ಲ. ಅವನಿಂದ ನಮಗಾವ ತೊಂದರೆಯೂ ಆಗಲಾರದು. ಆದುದ ರಿಂದ ನಿರ್ಭಯವಾಗಿ ಇಂದೇ ಪಾಂಡವರನ್ನು ವಾರಣಾವತಕ್ಕೆ ಕಳುಹಿಸುವ ಸನ್ನಾಹವನ್ನು ಮಾಡು. ನನ್ನ ಹೃದಯದ ಆತಂಕವನ್ನು ಪರಿಹರಿಸು. ಅವರ ಇರುವಿಕೆಯಿಂದ ಉಂಟಾಗಿರುವ ಸಂಕಟವು ಧಗ-ಧಗನೆ ಉರಿಯುತ್ತಿರುವ ಬೆಂಕಿಯಂತೆ ನನ್ನನ್ನು ಸುಡುತ್ತಿದೆ. ನಿದ್ರೆಯನ್ನು ಹಾಳುಮಾಡಿಬಿಟ್ಟಿದೆ. ದಾರುಣವಾದ ಈಟಿಯಂತೆ ಹೃದಯದಲ್ಲಿ ನಾಟಿಬಿಟ್ಟಿದೆ. ತಾತ! ಆದುದರಿಂದ ಪಾಂಡವರನ್ನು ಈಗಲೇ ವಾರಣಾವತಕ್ಕೆ ಕಳುಹಿಸಿ, ನನ್ನ ಸಂಕಟವನ್ನು ಶಮನಗೊಳಿಸು."

ಮಗನ ಮಾತಿಗೆ ರಾಜನು ಸಮ್ಮತಿಸಿದನು.

೧೪೨ನೆಯ ಅಧ್ಯಾಯವು ಮುಗಿಯಿತು.

೧೪೩ನೆಯ ಅಧ್ಯಾಯ ಜತುಗೃಹಪರ್ವ(ಮುಂದುವರಿದಿದೆ.)

## ಧೃತರಾಷ್ಟ್ರನ ಆದೇಶದಂತೆ ವಾರಣಾವತಕ್ಕೆ ಪಾಂಡವರ ಪ್ರಯಾಣ

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ದುರ್ಯೋಧನನು ಅನುಜರಿಂದೊಡಗೂಡಿ ಪ್ರಜೆಗಳ

ನಾಯಕರನ್ನೂ–ರಾಷ್ಟ್ರದ ಅಧಿಕಾರಿಗಳನ್ನೂ ಸಂಪರ್ಕಿಸಿ, ಅವರಿಗೆ ಯಥೇಚ್ಛ ವಾಗಿ ಹಣವನ್ನೂ–ಯೋಗ್ಯಮರ್ಯಾದೆಗಳನ್ನೂ ಕೊಟ್ಟು ತನ್ನ ಕಡೆಗೆ ಸೆಳೆದುಕೊಳ್ಳಲು ಪ್ರಾರಂಭಿಸಿದನು. ಅತ್ತ ಕಡೆಯಲ್ಲಿ ಪಾಂಡವರನ್ನು ವಾರಣಾವತಕ್ಕೆ ಕಳುಹಿಸಲು ಧೃತರಾಷ್ಟ್ರನೂ ಸನ್ನಾಹಮಾಡುತ್ತಿದ್ದನು. ಏಕಾಂತದಲ್ಲಿ ತನ್ನ ಕಡೆಯ ಮಂತ್ರಿಗಳನ್ನು ಕರೆಯಿಸಿ, ಅವರಿಗೆ ಅನೇಕ ವಿಧವಾದ ಸಲಹೆಗಳನ್ನಿತ್ತನು. ಅವನ ಆಜ್ಞಾಧಾರಕವಾದ ಮಂತ್ರಿಗಳು ರಾಜಸಭೆಗೆ ಬಂದು ಪಾಂಡವರು ಕುಳಿತಿರುವ ಸಮಯವನ್ನು ನೋಡಿ ದೇಶ-ವಿದೇಶಗಳ ವರದಿಗಳನ್ನೊಪ್ಪಿಸುವ ನೆಪದಲ್ಲಿ ವಾರಣಾವತದ ಸೌಂದರ್ಯವನ್ನು ವಿಶೇಷವಾಗಿ ಬಣ್ಣಿಸತೊಡಗಿದರು :

"ವಾರಣಾವತವೆಂಬ ಸುಂದರವಾದ ನಗರಿಯೊಂದಿದೆ. ಅಲ್ಲಿ ಈಗ ತಾನೇ ಪಶುಪತಿಯ ಉತ್ಸವವು ಪ್ರಾರಂಭವಾಗಿದೆ. ಅನೇಕ ದಿನಗಳವರೆಗೆ ಈ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುವುದು. ದೇಶ-ವಿದೇಶಗಳಿಂದ ಲಕ್ಷೋಪಲಕ್ಷ ಜನರು ಈ ಉತ್ಸವವನ್ನು ನೋಡಲು ಬರುತ್ತಿದ್ದಾರೆ. ದಿವ್ಯಾಭರಣಗಳನ್ನು ಧರಿಸಿ ದೇಶಾಂತರಗಳಿಂದ ಬಂದಿರುವ ಸ್ತ್ರೀ-ಪುರುಷರ ಸಮೂಹವೇ ಒಂದು ಸೊಬಗಿನ ದೃಶ್ಯ. ಪ್ರಪಂಚದಲ್ಲಿ ಇದುವರೆಗೆ ಇಂತಹ ಉತ್ಸವವೇ ನಡೆದಿಲ್ಲವೆಂದು ಜನರು ಆಡಿಕೊಳ್ಳುತ್ತಿದ್ದಾರೆ, ಪ್ರಭೋ!"

ಧೃತರಾಷ್ಟ್ರಚೋದಿತರಾದ ಮಂತ್ರಿಗಳು ವಾರಣಾವತದ ವರ್ಣನೆ ಯನ್ನು ಪದೇ-ಪದೇ ಮಾಡುತ್ತಿರುವಾಗ–ಪಾಂಡವರಿಗೂ ಅತ್ತಕಡೆ ಗಮನವು ಹರಿಯಿತು. ಅವರಿಗೆ ಅದರ ವಿಷಯವಾಗಿ ಸ್ವಲ್ಪ ಕುತೂಹಲವು ಮೂಡಿದೆಯೆಂದು ತಿಳಿದೊಡನೆಯೇ ಅಂಬಿಕಾಸುತನು ಪಾಂಡುಪುತ್ರರನ್ನು ಕುರಿತು ಹೇಳಿದನು :

"ನನ್ನ ದೂತರೂ, ಮಂತ್ರಿಗಳೂ ಪದೇ-ಪದೇ ವಾರಣಾವತದ ವರ್ಣನೆಯನ್ನು ಮಾಡುತ್ತಿರುತ್ತಾರೆ. ಪ್ರಪಂಚದಲ್ಲಿಯೇ ಅಂತಹ ಸುಂದರ ವಾದ ನಗರಿಯಿಲ್ಲವೆಂದು ಹೇಳುತ್ತಿರುತ್ತಾರೆ. ನೀವೇನಾದರೂ ಆ ಸುಂದರ ನಗರಿಯನ್ನು ನೋಡಲು ಇಚ್ಛಿಸುವಿರಾದರೆ ಬಂಧು-ಮಿತ್ರರೊಡನೆ ಹೋಗಿ ಬನ್ನಿರಿ. ದೇವತೆಗಳ ರೀತಿಯಲ್ಲಿ ಸುಖವಾಗಿ ಕೆಲವು ದಿನಗಳನ್ನು ಅಲ್ಲಿಯೇ ಕಳೆದು ಬನ್ನಿರಿ. ಅಲ್ಲಿ ನಡೆಯುವ ಉತ್ಸವದಲ್ಲಿ ಬ್ರಾಹ್ಮಣರಿಗೂ, ಗಾಯಕ

ರಿಗೂ, ಧನ-ಕನಕ-ವಸ್ತುಗಳನ್ನು ಯಥೇಚ್ಛವಾಗಿ ಕೊಡಿರಿ. ಸ್ವಲ್ಪಕಾಲದವರೆಗೆ ಅಲ್ಲಿಯೇ ವಿಹರಿಸಿಕೊಂಡಿದ್ದು, ಸುಖೋಪಭೋಗಗಳನ್ನು ಅನುಭವಿಸಿ, ಅತ್ಯಂತಹರ್ಷವನ್ನು ಹೊಂದಿ, ಬಳಿಕ ನೀವು ಹಸ್ತಿನಾಪಟ್ಟಣಕ್ಕೆ ಹಿಂದಿರುಗಬಹುದು."

ಧೃತರಾಷ್ಟ್ರನ ಮುಖಭಂಗಿಯಿಂದಲೂ ಮತ್ತು ಧ್ವನಿಯಿಂದಲೂ ಕಪಟವು ಅವನ ಹೃದಯದಲ್ಲಡಗಿದೆಯೆಂಬುದನ್ನು ತಿಳಿಯಲು ಯುಧಿಷ್ಠಿರ ನಿಗೆ ಹೆಚ್ಚು ಕಷ್ಟವಾಗಲಿಲ್ಲ. ಅವನು ಮಾತುಗಳೂ ಮತ್ತು ಮಂದಹಾಸವೂ ತೋರಿಕೆಯಾಗಿ ಕಂಡುವು. ಆದರೂ ಮಾಡುವುದೇನು? ಅಪಾರವಾದ ಕೌರವಸಂಸಾರದಲ್ಲಿ ಪಾಂಡವರಿರುವುದು ಐದು ಮಂದಿ ಮಾತ್ರ. ಮಿತ್ರರೆನಿಸಿ ಕೊಂಡವರೂ ಯಾರೂ ಇರಲಿಲ್ಲ. ಅದನ್ನೇ ಯೋಚಿಸುತ್ತಾ ಯುಧಿಷ್ಠಿರನು ಧೃತರಾಷ್ಟ್ರನ ಮಾತಿಗೆ ಕೃತಕಮಂದಹಾಸದಿಂದಲೇ– 'ಆಗಲಿ, ತಾತ!'– ಎಂದು ಹೇಳಿ ಸಭೆಯಲ್ಲಿ ಕುಳಿತಿದ್ದ ಭೀಷ್ಮ, ವಿದುರ, ದ್ರೋಣ, ಬಾಹ್ಲಿಕ, ಸೋಮದತ್ತ, ಕೃಪ, ಅಶ್ವತ್ಥಾಮಾ, ಭೂರಿಶ್ರವ–ಇವರುಗಳನ್ನೂ, ಬ್ರಾಹ್ಮಣರನ್ನೂ, ಅಮಾತ್ಯರನ್ನೂ, ತಪಸ್ವಿಗಳನ್ನೂ, ಪುರೋಹಿತರನ್ನೂ, ಪೌರರನ್ನೂ ಮತ್ತು ಯಶಸ್ವಿನಿಯಾದ ಗಾಂಧಾರಿಯನ್ನೂ ಉದ್ದೇಶಿಸಿ ಹೇಳಿದನು :

"ಪೂಜ್ಯರೇ! ನಾನಿಂದು ನಮ್ಮ ತಂದೆಯಾದ ಧೃತರಾಷ್ಟ್ರನ ಅಪ್ಪಣೆ ಯಂತೆ ಪರಿವಾರಸಮೇತನಾಗಿ ಸುಂದರನಗರಿಯಾದ ವಾರಣಾವತಕ್ಕೆ ಹೋಗುವೆನು. ಅಲ್ಲಿ ಪ್ರವರ್ಧಮಾನರಾಗಲಿರುವ ನಮ್ಮನ್ನು ಪಾಪವು ಸೋಂಕದಿರಲೆಂದು ಪ್ರಸನ್ನಚಿತ್ತರಾಗಿ ತಾವೆಲ್ಲರೂ ಆಶೀರ್ವದಿಸಿರಿ."

ಯುಧಿಷ್ಠಿರನ ದೀನಧ್ವನಿಯ ಪ್ರಾರ್ಥನೆಯನ್ನು ಕೇಳಿ ಕುರುಮುಖ್ಯ ರೆಲ್ಲರೂ ಪ್ರಸನ್ನವದನರಾಗಿ ಏಕಕಂಠದಿಂದ ಹೇಳಿದರು :

**ಸ್ವಸ್ತ್ಯಸ್ತು ವಃ ಪಥಿ ಸದಾ ಭೂತೇಭ್ಯಶ್ಚೈವ ಸರ್ವಶಃ ।**
**ಮಾ ಚ ವೋऽಸ್ತ್ವಶುಭಂ ಕಿಂಚಿತ್ಸರ್ವಶಃ ಪಾಣ್ಡುನನ್ದನಾಃ ॥೧೮॥**

"ಪಾಂಡುಪುತ್ರರೇ! ನಿಮಗೆ ಮಂಗಳವಾಗಲಿ, ಪ್ರಯಾಣಕಾಲದಲ್ಲಿ ಮಾರ್ಗದಲ್ಲಿ ಪಂಚಭೂತಗಳೂ ನಿಮಗೆ ಕ್ಷೇಮವನ್ನುಂಟುಮಾಡಲಿ. ನಿಮಗೆ ಸ್ವಲ್ಪವಾದರೂ ಅಶುಭವುಂಟಾಗದಿರಲಿ."

ಯುಧಿಷ್ಠಿರನು ಅನುಜರೊಡನೆ ಸಭೆಗೆ ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸಿ, ತನ್ನ ಅರಮನೆಗೆ ಬಂದು ರಾಜ್ಯಪ್ರಾಪ್ತಿಗಾಗಿ ಮಾಡಬೇಕಾದ ವಿಧ್ಯುಕ್ತಕರ್ಮಗಳೆಲ್ಲವನ್ನೂ ಮಾಡಿ, ಸಕಲಸಂಭಾರಗಳೊಡನೆ ವಾರಣಾವತಕ್ಕೆ ಹೊರಟನು."

೧೪೩ನೆಯ ಅಧ್ಯಾಯವು ಮುಗಿಯಿತು.

೧೪೪ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ದುರ್ಯೋಧನನ ಅಪ್ಪಣೆಯಂತೆ ವಾರಣಾವತದಲ್ಲಿ ಪುರೋಚನನಿಂದ ಅರಗಿನ ಮನೆಯ ನಿರ್ಮಾಣ

ತಂದೆಯಾದ ಧೃತರಾಷ್ಟ್ರನು ಪಾಂಡವರಿಗೆ ಹೇಳಿದುದನ್ನು ಕೇಳಿ ದುರ್ಯೋಧನನಿಗೆ ಬಹಳ ಸಂತೋಷವಾಯಿತು. ಆದರೆ ದುರ್ಯೋಧನನ ಉದ್ದೇಶವು ಪಾಂಡವರನ್ನು ಕೇವಲ ದೇಶಭ್ರಷ್ಟರನ್ನಾಗಿ ಮಾಡುವುದೇ ಆಗಿರಲಿಲ್ಲ. ಅವರ ಇತಿಹಾಸವನ್ನೇ ಮುಗಿಸಿಬಿಡುವುದೂ ಆಗಿದ್ದಿತು. ಅವನು, ಅನಿಷ್ಟಕ್ರಿಯೆಗಳಲ್ಲಿ ಅಗ್ರಗಣ್ಯನೆನಿಸಿದ್ದ ಪುರೋಚನನೆಂಬ ಮಂತ್ರಿಯನ್ನು ಏಕಾಂತದಲ್ಲಿ ಕಂಡು ಅವನನ್ನು ಗಂಧ-ಪುಷ್ಪ-ಮಾಲ್ಯಾದಿಗಳಿಂದ ಉಪಚರಿಸಿದನು. ಅನಂತರ ದುರ್ಯೋಧನನು ಪುರೋಚನನ ಎದುರಾಗಿ ಕುಳಿತು ಆತನ ಬಲಗೈಯನ್ನು ಹಿಡಿದು ಹೀಗೆ ಹೇಳಿದನು :

"ಮಹಾಮಾತ್ಯ! ಇಂದು ನಮ್ಮ ಕುರುವಂಶದ ರಾಜ್ಯವೂ ಮತ್ತು ಅದರಲ್ಲಿರುವ ಸಕಲೈಶ್ವರ್ಯಗಳೂ ನನ್ನದಾಗಿರುವಂತೆ ನಿನ್ನದೂ ಆಗಿದೆ. ಅದನ್ನು ರಕ್ಷಿಸಲು ನೀನು ಸಹಕಾರವನ್ನೀಯಬೇಕಾಗಿದೆ.

ಪುರೋಚನ! ಈ ರಹಸ್ಯರಕ್ಷಣೆಯ ಕಾರ್ಯಭಾರವು ಸಂಪೂರ್ಣವಾಗಿ ನಿನ್ನ ಮೇಲೆಯೇ ಬಿದ್ದಿದೆ. ನನಗೆ ನಿನಗಿಂತಲೂ ನಂಬಿಕೆಗೆ ಪಾತ್ರರಾದವರು ಮತ್ತಾರೂ ಇಲ್ಲ. ಮಿತ್ರನೇ! ನನ್ನ ಏಕಾಂತಸಮಾಲೋಚನೆಗೆ ನೀನೊಬ್ಬನೇ ಯೋಗ್ಯನಾಗಿರುವೆ. ಆದುದರಿಂದ ನನ್ನ ಸಲಹೆಯನ್ನು ಕೇಳಿ ಕೂಡಲೇ ನಮ್ಮ ಶತ್ರುಗಳನ್ನು ಚಾತುರ್ಯದಿಂದ ಮುಗಿಸಿಬಿಡು. ನಾನು ಹೇಳುವ

ರೀತಿಯಲ್ಲಿಯೇ ನೀನು ಕಾರ್ಯವನ್ನು ನಿರ್ವಹಿಸು. ಇದು ಮತ್ತಾರಿಗೂ ಯಾವ ಕಾರಣದಿಂದಲೂ ತಿಳಿಯಬಾರದು.

ಪಾಂಡವರು ಧೃತರಾಷ್ಟ್ರನ ಅಪ್ಪಣೆಯಂತೆ ವಾರಣಾವತಕ್ಕೆ ಹೊರಟು ಬಿಟ್ಟಿರುವರು. ಧೃತರಾಷ್ಟ್ರನ ಶಾಸನಾನುಸಾರವಾಗಿ ಅವರು ಪಶುಪತಿಯ ಉತ್ಸವದಲ್ಲಿ ಭಾಗವಹಿಸಿ ಸುಖದಿಂದ ಕಾಲಕಳೆಯುವರು. ಅವರಲ್ಲಿಗೆ ಹೋಗುವ ಮೊದಲೇ ನೀನು ಹೇಸರಗತ್ತೆಗಳಿಂದ ಸಜ್ಜಾದ ರಥದಲ್ಲಿ ಕುಳಿತು ಅಲ್ಲಿಗೆ ಬಹುಶೀಘ್ರವಾಗಿ ಪ್ರಯಾಣಮಾಡಬೇಕು. ವಾರಣಾವತದಲ್ಲಿ ಅವ ರನ್ನು ಸ್ವಾಗತಿಸಲು ಸಿದ್ಧನಾಗು. ಪೂರ್ವಪರಿಚಯವಿರುವುದರಿಂದ ನಿನ್ನ ಮೇಲೆ ಸಂಶಯಬರಲು ಕಾರಣವಾಗುವುದಿಲ್ಲ. ಅವರಿಗೆ ತಾತ್ಕಾಲಿಕವಾಗಿ ಒಂದು ವಾಸಗೃಹವನ್ನು ಮಾಡಿಕೊಟ್ಟು, ಅನಂತರ ರಾಜನಾದ ಧೃತರಾಷ್ಟ್ರನ ಅಪ್ಪಣೆಯಂತೆ ಪಾಂಡುರಾಜಕುಮಾರರಿಗೆ ಒಂದು ಚೌಕಟ್ಟಿನ ಅರಮನೆಯನ್ನು ನಿರ್ಮಾಣಮಾಡು. ಆ ಅರಮನೆಯು ಊರಿನ ಹೊರಗಿರಬೇಕು. ಮದ್ದು-ಗುಂಡುಗಳ ಕೋಠಿಗೆ ಸಮೀಪವಾಗಿರಬೇಕು. ಅರಮನೆಯನ್ನು ಕಟ್ಟಲು ನಾನು ಹೇಳುವ ವಸ್ತುಗಳನ್ನೇ ಉಪಯೋಗಿಸಬೇಕು.

ಬೇಗನೆ ಹೊತ್ತಿಕೊಳ್ಳುವ ಪದಾರ್ಥಗಳೆಲ್ಲವನ್ನೂ ಮನೆಕಟ್ಟಲು ಉಪ ಯೋಗಿಸಬೇಕು. ತಿಳಿಯಿತೇ? ಪುರೋಚನ! ಸೆಣಬನ್ನೂ ರಾಳವನ್ನೂ ಉಪಯೋಗಿಸಬೇಕು. ಮಣ್ಣನ್ನು ತುಪ್ಪದೊಡನೆ ಮಿಶ್ರಮಾಡಬೇಕು. ಅದರ ಜೊತೆಗೆ ಮರದ ಪುಡಿಯನ್ನೂ ಅರಗನ್ನೂ ಬೆರೆಸಬೇಕು. ಅವುಗಳಿಂದಲೇ ಅರಮನೆಯ ಗೋಡೆಗಳನ್ನು ಕಟ್ಟಿಸಿ, ಅವುಗಳ ಸ್ವರೂಪವು ಹೊರಗೆ ಕಾಣದ ರೀತಿಯಲ್ಲಿ ಗೋಡೆಗಳನ್ನು ಗಿಲಾವು ಮಾಡಿಸಬೇಕು. ಸಂಶಯದಿಂದ ಗೋಡೆಗಳನ್ನು ಪರೀಕ್ಷಿಸಿದರೂ ಅದರಲ್ಲಿನ ವಸ್ತುಗಳು ಶೀಘ್ರವಾಗಿ ಹೊತ್ತಿ ಕೊಳ್ಳುವ ವಸ್ತುಗಳೆಂಬುದು ತಿಳಿಯಬಾರದು. ಆ ರೀತಿಯಲ್ಲಿ ಗಿಲಾವು ಮಾಡಿಸಬೇಕು. ಈ ಪ್ರಕಾರವಾಗಿ ನಿರ್ಮಿಸಿದ ಅರಮನೆಯಲ್ಲಿ ಪಾಂಡವರು ಕುಂತಿಯೊಡನೆಯೂ, ಅನುಜರೊಡನೆಯೂ ವಾಸಿಸುವಂತೆ ಪ್ರೇರಿಸಬೇಕು. ನೂತನವಾದ ಆ ಅರಮನೆಯಲ್ಲಿ ಅವರಿಗೆ ಯಾವುದರಲ್ಲಿಯೂ ನ್ಯೂನತೆ ಯಿರಬಾರದು. ರಾಜಯೋಗ್ಯವಾದ ಸಕಲವಸ್ತುಗಳೂ ಅಲ್ಲಿರಬೇಕು. ಎಲ್ಲ ವಸ್ತುಗಳೂ ಉತ್ತಮವಾಗಿಯೇ ಇರಬೇಕು. ಅದರಿಂದ ಧೃತರಾಷ್ಟ್ರ

ನಿಗೂ ತೃಪ್ತಿಯುಂಟಾಗುವುದು. ನಮ್ಮ ಉದ್ದೇಶವು ಈಡೇರುವವರೆಗೂ ವಾರಣಾವತದಲ್ಲಿರುವ ಯಾರೊಬ್ಬರಿಗೂ ಈ ವಿಷಯವು ತಿಳಿಯದೇ ಇರುವಂತೆ ಎಚ್ಚರಿಕೆಯಿಂದಿರಬೇಕು. ತಿಳಿಯಿತೇ? ಪುರೋಚನ! ಒಬ್ಬರಿಗೆ ತಿಳಿದರೂ ನಮ್ಮ ಯೋಜನೆಯು ಈಡೇರದೇ ಹೋಗಬಹುದು. ಪಾಂಡವರು ಆ ಅರಮನೆಯಲ್ಲಿ ನಿರ್ಭೀತರಾಗಿ ಮಲಗಿರುವರೆಂಬ ಭರವಸೆಯು ನಿನಗುಂಟಾದ ಕೂಡಲೇ ಆ ಅರಮನೆಗೆ ಬಾಗಿಲಕಡೆಯಿಂದ ಬೆಂಕಿಯಿಟ್ಟುಬಿಡು. ಎಚ್ಚರವಾದರೂ ಪಾಂಡವರು ಹೊರಗೆ ಬರಲು ಸಾಧ್ಯವಾಗದೇ ಭಸ್ಮವಾಗಿ ಹೋಗುವರು. ಪ್ರಜೆಗಳೂ ಸಹ–'ಆಕಸ್ಮಿಕವಾಗಿ ಅರಮನೆಗೆ ಬೆಂಕಿಯು ಬಿದ್ದು ಪಾಂಡವರು ಭಸ್ಮವಾಗಿಹೋದರು'–ಎಂದು ಭಾವಿಸುವರು. ಅಲ್ಲವೇ? ಪುರೋಚನ!"

ಪುರೋಚನನು ಹಾಗೆಯೇ ಆಗಲೆಂದು ಹೇಳಿ ಹೇಸರಗತ್ತೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತು ವಾರಣಾವತಕ್ಕೆ ಬಹುಶೀಘ್ರವಾಗಿ ಪ್ರಯಾಣ ಮಾಡಿದನು. ದುರ್ಯೋಧನನ ಸಲಹೆಯಂತೆ ಬಹುಶೀಘ್ರವಾಗಿ ವಾರಣಾವತಕ್ಕೆ ಹೋಗಿ ರಾಜಕುಮಾರನು ಹೇಳಿದ ರೀತಿಯಲ್ಲಿಯೇ ಅರಮನೆಯನ್ನು ಸಜ್ಜುಗೊಳಿಸಿದನು.

೧೪೪ನೆಯ ಅಧ್ಯಾಯವು ಮುಗಿಯಿತು.

೧೪೫ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ಪಾಂಡವರ ವಾರಣಾವತಯಾತ್ರೆ: ವಿದುರನ ಗುಪ್ತಸಂದೇಶ

ಜನಮೇಜಯ! ಇತ್ತಲಾಗಿ ಪಾಂಡವರ ಪ್ರಯಾಣಕ್ಕೆ ಉತ್ತಮವಾದ ಕುದುರೆಗಳಿಂದ ಸಜ್ಜಾದ ರಥಗಳು ಸಿದ್ಧವಾದುವು. ಪಾಂಡವರು ರಥಾರೋಹಣಮಾಡುವ ಮೊದಲು–ಸುತ್ತಲೂ ನೆರೆದಿದ್ದ ಭೀಷ್ಮ, ಧೃತರಾಷ್ಟ್ರ, ದ್ರೋಣ, ವಿದುರ ಮತ್ತು ಕುರುವಂಶದ ಹಿರಿಯರೆಲ್ಲರ ಪಾದಗಳನ್ನೂ ಮುಟ್ಟಿ ನಮಸ್ಕರಿಸಿದರು. ಸಮಾನವಯಸ್ಕರನ್ನು ಆಲಿಂಗಿಸಿಕೊಂಡರು. ಅಲ್ಲಿ ನೆರೆದಿದ್ದ ಮಕ್ಕಳು ಪಾಂಡವರಿಗೆ ನಮಸ್ಕರಿಸಿದವು. ಪಾಂಡವರು ಎಲ್ಲ ತಾಯಂದಿರಿಗೂ ನಮಸ್ಕರಿಸಿ ಅವರೆಲ್ಲರ ಅನುಜ್ಞೆಯನ್ನೂ ಪಡೆದರು.

ಪಾಂಡವರು ವೃದ್ಧಸ್ತ್ರೀಯರಿಂದಲೂ, ನಾಗರಿಕರಿಂದಲೂ ಅಪ್ಪಣೆ ಯನ್ನು ಪಡೆದವರಾಗಿ ರಥವನ್ನೇರಿ ಕುಳಿತರು. ಪ್ರಾಜ್ಞನಾದ ವಿದುರನೂ, ಕುರುಪುಂಗವರೂ ಮತ್ತು ಪ್ರಜಾಸ್ತೋಮವೂ ಬಹಳ ದುಃಖದಿಂದ ಪಾಂಡವರನ್ನು ಸ್ವಲ್ಪದೂರದವರೆಗೂ ಹಿಂಬಾಲಿಸಿದರು. ವಾರಣಾವತಕ್ಕೆ ಪ್ರಯಾಣಮಾಡುತ್ತಿರುವ ಕಾರಣವನ್ನು ಯಾರೂ ಯೋಚಿಸುತ್ತಿರಲಿಲ್ಲ. ಪಾಂಡವರ ಅಗಲಿಕೆಗೆ ಪಟ್ಟಣಿಗರೂ-ಪಟ್ಟಣದ ಅಗಲಿಕೆಗೆ ಪಾಂಡವರೂ ಬಹುವಾಗಿ ದುಃಖಿಸಿದರು. ನಾಗರಿಕರಲ್ಲಿ ನಿರ್ಭೀತರಾದ ಬ್ರಾಹ್ಮಣರು ದೀನ ರಾದ ಪಾಂಡುಪುತ್ರರನ್ನು ನೋಡಿ ಬಹುದುಃಖಿತರಾಗಿ, ಪಾಂಡವರ ಪ್ರಯಾ ಣಕ್ಕೆ ಧೃತರಾಷ್ಟ್ರನ ಕೌಟಿಲ್ಯವೇ ಕಾರಣವೆಂದು ಹೇಳಲು ಹಿಂಜರಿಯಲಿಲ್ಲ.

"ಧೃತರಾಷ್ಟ್ರನು ಪಾಂಡವರನ್ನೂ ಮತ್ತು ತನ್ನ ಮಕ್ಕಳನ್ನೂ ಸಮಾನ ದೃಷ್ಟಿಯಿಂದ ನೋಡುತ್ತಿಲ್ಲ. ದುರಾತ್ಮನಾದ ರಾಜನಿಗೆ ಧರ್ಮದ ಮೇಲೆ ದೃಷ್ಟಿಯೂ ಇಲ್ಲ. ಪಾಪರಹಿತವಾದ ಅಂತಃಕರಣವುಳ್ಳ ಯುಧಿಷ್ಠಿರ, ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮ ಮತ್ತು ಶ್ರೇಷ್ಠಧನುರ್ಧರನಾದ ಅರ್ಜುನ– ಇವರು ಯಾವಾಗಲೂ ಪಾಪಕರ್ಮದ ವಿಷಯದಲ್ಲಿ ಆಸಕ್ತರಾಗಿರುವುದಿಲ್ಲ. ಹೀಗಿರುವ ಇವರನ್ನೇ ಅನುಸರಿಸುವ ಮಾದ್ರಿಪುತ್ರರಾದರೂ ಪಾಪಕಾರ್ಯ ಗಳನ್ನು ಹೇಗೆತಾನೇ ಮಾಡಿಯಾರು? ಇವರು ಪರಂಪರಾಗತವಾದ ರಾಜ್ಯ ವನ್ನು ಅನುಭವಿಸುತ್ತಿರುವುದೇ ಧೃತರಾಷ್ಟ್ರನ ಅಸೂಯೆಗೆ ಮುಖ್ಯ ಕಾರಣ ವಾಗಿದೆ. ಪಾಂಡವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡುವ ಈ ಆಜ್ಞೆಗೆ ಭೀಷ್ಮನಾದರೂ ಅನುಮತಿಯಿತ್ತನೇಕೆ? ವಿಚಿತ್ರವೀರ್ಯನೂ ಮತ್ತು ಅವನ ಮಗನಾದ ಪಾಂಡುವೂ ನಮ್ಮೆಲ್ಲರನ್ನೂ–ತಂದೆಯು ಮಕ್ಕಳನ್ನು ಸಾಕು ವಂತೆಯೇ–ಸಾಕಿದರು. ಈಗ ಪಾಂಡುವು ಸ್ವರ್ಗಸ್ಥನಾಗಿರುವನು. ಅವನ ಮಕ್ಕಳ ವಿಷಯದಲ್ಲಿ ಧೃತರಾಷ್ಟ್ರನು ಅಸಹನೆಯನ್ನೇ ತೋರುತ್ತಿರುವನು. ಇಂತಹ ಧೃತರಾಷ್ಟ್ರನ ಅಧರ್ಮಯುಕ್ತವಾದ ಆಜ್ಞೆಗೆ ಒಪ್ಪದಿರುವ ನಾವೆಲ್ಲರೂ ಇಂದು ಪಾಂಡವರನ್ನೇ ಅನುಸರಿಸಿ ಹೋಗಿಬಿಡೋಣ"–ಎಂದು ಹೇಳಿ ಮುನ್ನಡೆಯುತ್ತಿದ್ದ, ದುಃಖಿತರಾದ ಪ್ರಜೆಗಳನ್ನು ಕುರಿತು ಯುಧಿಷ್ಠಿರನು ಹೇಳಿದನು :

"ಪ್ರಜೆಗಳೇ! ನೀವು ನಮ್ಮ ಮೇಲಿಟ್ಟಿರುವ ಅಭಿಮಾನಕ್ಕಾಗಿ ಚಿರ ಋಣಿಗಳಾಗಿದ್ದೇವೆ. ಧೃತರಾಷ್ಟ್ರನು ನಮ್ಮ ತಂದೆಯು ; ಪೂಜ್ಯನು ; ಜ್ಞಾನಗುರು ಮತ್ತು ಹಿರಿಯನೂ ಆಗಿರುವನು. ಅವನು ಮಾಡಿರುವ ಆಜ್ಞೆ ಯಲ್ಲಿ ಶಂಕಿತರಾಗದೇ ಅದನ್ನು ಪಾಲಿಸುವುದೇ ನಮ್ಮ ಮುಖ್ಯಕರ್ತವ್ಯ. ನೀವೆಲ್ಲರೂ ನಮ್ಮ ಮಿತ್ರರಾಗಿರುವಿರಿ. ನಮ್ಮನ್ನು ಆಶೀರ್ವದಿಸಿ, ಬಲಭಾಗ ದಲ್ಲಿ ಬಿಟ್ಟುಕೊಂಡು ನಿಮ್ಮ ನಿಮ್ಮ ಮನೆಗಳಿಗೆ ತೆರಳಿರಿ. ಸಮಯವು ಬಂದಾಗ - ನಮಗೆ ಅನುಕೂಲವಾಗಬಹುದೆಂದು ತೋರಿದಾಗ–ಹಿತವಾದ ಮತ್ತು ಪ್ರಿಯವಾದ ಕಾರ್ಯಗಳನ್ನು ಮಾಡಲು ನಮ್ಮ ಅಡ್ಡಿಯಿಲ್ಲ. ಈಗ ಮಾತ್ರ ತಾವೆಲ್ಲರೂ ದಯೆಯಿಟ್ಟು ಪಟ್ಟಣಕ್ಕೆ ತೆರಳಿರಿ."

ಯುಧಿಷ್ಠಿರನ ಮಾತುಗಳನ್ನು ಕೇಳಿದ ನಾಗರಿಕರು ರಥವನ್ನು ಪ್ರದಕ್ಷಿಣೆಮಾಡಿ, ಮನಃಪೂರ್ವಕವಾಗಿ ಪಾಂಡವರನ್ನು ಆಶೀರ್ವದಿಸಿ ತಮ್ಮ-ತಮ್ಮ ಮನೆಗಳಿಗೆ ತೆರಳಿದರು.

ಎಲ್ಲರೂ ತೆರಳಿದನಂತರ ಕಡೆಗುಳಿದವನು ವಿದುರನೊಬ್ಬನೇ. ಆದರೆ ವಿದುರನು ಪಾಂಡವರ ಜೊತೆಯಲ್ಲಿ ಹೊರಡಲು ಸಿದ್ಧನಾಗಿರಲಿಲ್ಲ. ಯುಧಿ ಷ್ಠಿರನಿಗೆ ಒಂದೆರಡು ಹಿತೋಕ್ತಿಗಳನ್ನು ಹೇಳಬೇಕೆನ್ನುವ ಆಸೆಯಿಂದ ಅಲ್ಲಿಯೇ ಉಳಿದನು. ಆದರೆ ತಾನು ಹೇಳುವುದು ಯಾರಿಗೂ ತಿಳಿಯದಂತೆ ಹೇಳಬೇಕೆಂಬ ಅಭಿಲಾಷೆಯೂ ವಿದುರನಿಗಿದ್ದಿತು.

**ಪ್ರಾಜ್ಞಃ ಪ್ರಾಜ್ಞಪ್ರಲಾಪಜ್ಞಃ ಪ್ರಲಾಪಜ್ಞಮಿದಂ ವಚಃ ।**
**ಪ್ರಾಜ್ಞಂ ಪ್ರಾಜ್ಞಃ ಪ್ರಲಾಪಜ್ಞಃ ಪ್ರಲಾಪಜ್ಞಂ ವಚೋಽಬ್ರವೀತ್ ॥೨೦॥**

ಪ್ರಾಜ್ಞನೂ ಮತ್ತು ಪ್ರಾಜ್ಞರಾಡುವ ಮಾತಿನ ಗೂಢಾರ್ಥವನ್ನು ಗ್ರಹಿಸಬಲ್ಲವನೂ ಆದ ವಿದುರನು ಪ್ರಾಜ್ಞನಾದ ಮತ್ತು ಪ್ರಾಜ್ಞಪ್ರಲಾಪವನ್ನು ತಿಳಿದಿದ್ದ ಯುಧಿಷ್ಠಿರನನ್ನು ಕುರಿತು ಹೇಳಿದನು :*

---

* ಇಲ್ಲಿ ಪ್ರಾಜ್ಞಪ್ರಲಾಪವೆಂದರೆ :– ವಿದ್ವಾಂಸರ ಮಾತೆಂದು ಸ್ವಾಭಾವಿಕವಾದ ಅರ್ಥ ವಾದರೂ ವ್ಯಾಖ್ಯಾನಕಾರರು– ಪ್ರ- ಪ್ರಕರ್ಷೇಣ, ಅಜ್ಞಃ–ಪ್ರಾಜ್ಞಃ –ಎಂದು ವಿಭಾಗ

**ಯೋ ಜಾನಾತಿ ಪರಪ್ರಜ್ಞಾಂ ನೀತಿಶಾಸ್ತ್ರಾನುಸಾರಿಣೀಮ್ ।**
**ವಿಜ್ಞಾಯೇಹ ತಥಾ ಕುರ್ಯಾದಾಪದಂ ನಿಸ್ತರೇದ್ಯಥಾ ॥೨೧॥**

"ಯುಧಿಷ್ಠಿರ! ಶತ್ರುಗಳಾದವರ ಮನಸ್ಸಿನಲ್ಲಿ ನೀತಿಶಾಸ್ತ್ರಾನುಸಾರ ವಾದ ಯಾವ ವಿಚಾರಗಳು ಉದ್ಭೂತವಾಗುತ್ತವೆ? ಅವರು ಅವೆಲ್ಲವನ್ನೂ ಕಾರ್ಯರೂಪಕ್ಕೆ ಯಾವ ಮಾರ್ಗದಿಂದ ತರುತ್ತಾರೆ?–ಎಂಬುದನ್ನು ಸಂಪೂರ್ಣವಾಗಿ ತಿಳಿದುಕೊಂಡು ( ಇದು ಶತ್ರುವಾದವನು ಬೀಸಿರುವ ಬಲೆ ಯೆಂಬುದನ್ನು ನಿಶ್ಚಯಿಸಿ ) ಅಂತಹ ಆಪತ್ತಿನಿಂದ ಪಾರಾಗಲು ಯಾವ ಕಾರ್ಯಮಾಡಬೇಕೆಂಬುದನ್ನು ಸಂಪೂರ್ಣವಾಗಿ ಪರಿಶೀಲಿಸಿ ಕಾರ್ಯಮಾಡ ಬೇಕು.

( ಕಣಿಕನು ಹೇಳಿದ ರಾಜನೀತಿಯು ಧೃತರಾಷ್ಟ್ರನಿಗೆ ತಿಳಿದಿರುವಂತೆ ಯುಧಿಷ್ಠಿರನಿಗೂ ತಿಳಿದಿದೆ. ನೀತಿಶಾಸ್ತ್ರವನ್ನು ತಿಳಿಯುವುದರಲ್ಲಿಯೂ ಎರಡು ಪ್ರಯೋಜನಗಳಿವೆ. ನೀತಿಶಾಸ್ತ್ರಾನುಸಾರವಾಗಿ ಶತ್ರುಗಳನ್ನು ವಿಧ್ವಂಸನ

---

ಮಾಡಿ ಪ್ರಾಜ್ಞರೆಂದರೆ ಬಹಳ ಅಜ್ಞಾನಿಗಳೆಂದು ಅರ್ಥಮಾಡಿದ್ದಾರೆ. ಇಲ್ಲಿ ಅಜ್ಞಾನಿ ಗಳೆಂದರೆ ವೇದಾರ್ಥವನ್ನರಿಯದವರು, ಮ್ಲೇಚ್ಛರು. ಅವರಾಡುವ ಭಾಷೆಯು ವಿದುರ ನಿಗೂ ತಿಳಿದಿತ್ತು. ಯುಧಿಷ್ಠಿರನಿಗೂ ತಿಳಿದಿತ್ತು.

ಮ್ಲೇಚ್ಛಭಾಷೆಯು ಅಪಭ್ರಂಶವಾದೊಂದು ಭಾಷೆ. ಅದರಲ್ಲಿ ಸಂಸ್ಕೃತದ ಕೆಲವು ಶಬ್ದಗಳೂ ಮತ್ತು ವರ್ಣಗಳೂ ವಿಕಾರಹೊಂದುವುವು. ಮೂಲವರ್ಣಗಳಿಗೆ ಲೋಪವೋ ಆಗಮವೋ ಆಗಿಬಿಡುವುದು. ಇಷ್ಟೇ ಕಾರಣದಿಂದ ಮಾತಿನ ಅರ್ಥವೇ ಬೇರೆಯಾಗು ವುದು. ಇದನ್ನು ಗಮನದಲ್ಲಿಟ್ಟುಕೊಂಡು ಅರ್ಥಮಾಡಿದರೆ ಮಾತ್ರ ವಾಸ್ತವಾಂಶವು ತಿಳಿಯುವುದು. ಇದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.

ವಿದುರನು ಯುಧಿಷ್ಠಿರನೊಡನೆ ಮ್ಲೇಚ್ಛಭಾಷೆಯಲ್ಲಿ ಅಥವಾ ಅಜ್ಞರ ಭಾಷೆಯಲ್ಲಿ ಮಾತನಾಡಿದನೆಂಬುದಕ್ಕೆ ಆಧಾರವು ನಮಗೆ ೧೪೭ನೆಯ ಅಧ್ಯಾಯದ ೬ನೆಯ ಶ್ಲೋಕ ದಲ್ಲಿ ಸಿಕ್ಕುತ್ತದೆ. ಸುರಂಗವನ್ನು ಅಗೆಯಲು ಬಂದ ವಿದುರನ ಮಿತ್ರನು ತಾನು ವಿದುರನ ಮಿತ್ರನೇ ಎಂಬುದನ್ನು ಖಚಿತಪಡಿಸಲು ಯುಧಿಷ್ಠಿರನಿಗೆ ಈ ಮಾತನ್ನು ಹೇಳುತ್ತಾನೆ :

**ಕಿಂಚಿಚ್ಚ ವಿದುರೇಣೋಕ್ತೋ ಮ್ಲೇಚ್ಛವಾಚಾಸಿ ಪಾಣ್ಡವ ।**
**ತ್ವಯಾ ಚ ತತ್ತಥೇತ್ಯುಕ್ತಮೇತದ್ವಿಶ್ವಾಸಕಾರಣಮ್ ॥೬॥**

ಆದರೆ ವ್ಯಾಸರು ಮ್ಲೇಚ್ಛಭಾಷೆಯ ಯಥಾರೂಪವಾದ ಶ್ಲೋಕಗಳನ್ನೇ ಇಲ್ಲಿ ಸಂಸ್ಕೃತಭಾಷೆಗೆ ಭಾಷಾಂತರಿಸಿ ಹೇಳಿರುವರೇ?–ಎಂಬುದನ್ನು ವಿವೇಚಿಸಬೇಕಾಗಿದೆ.

ಮಾಡುವುದೊಂದು ಪ್ರಯೋಜನ. ತಮ್ಮ ಶತ್ರುಗಳು ತಮಗೆ ಯಾವ ಯಾವ ವಿಧಾನಗಳಿಂದ ಉಪದ್ರವಕೊಡುವರೆಂಬುದನ್ನು ತಿಳಿಯುವುದು ಮತ್ತೊಂದು ಪ್ರಯೋಜನ. ಕಳ್ಳತನವನ್ನು ಕಂಡುಹಿಡಿಯಲು ಗ್ರಾಮ ರಕ್ಷಕರಿಗೆ ಕಳ್ಳತನವೂ ಗೊತ್ತಿರಬೇಕೆಂದು ಹೇಳುವಂತೆ–ಶತ್ರುಗಳು ನಮ್ಮ ಮೇಲೆ ಪ್ರಯೋಗಿಸುವ ವಿಧ್ವಂಸಕಸಾಧನಗಳೇನೆಂಬುದನ್ನು ತಿಳಿದು ಕೊಳ್ಳಲು–ಶತ್ರುಗಳನ್ನು ಕುಟಿಲೋಪಾಯಗಳಿಂದ ನಿರ್ಮೂಲನಮಾಡಲು ಮನಸ್ಸಿಲ್ಲದವರೂ ಆತ್ಮರಕ್ಷಣೆಗಾಗಿ ಕುಟಿಲನೀತಿಯನ್ನೂ ಮತ್ತು ರಾಜ ನೀತಿಯನ್ನೂ ತಿಳಿದಿರಬೇಕು. ಈ ರಾಜನೀತಿಯು ಯುಧಿಷ್ಠಿರನಿಗೂ ತಿಳಿ ದಿದೆ. ಆದರೆ ಈಗ ಧೃತರಾಷ್ಟ್ರನು ತಮ್ಮನ್ನು ವಾರಣಾವತಕ್ಕೆ ಕಳುಹಿಸಿ ರುವುದು ರಾಜತಂತ್ರವೇ–ಅಥವಾ ಯಾವ ವಿಧವಾದ ದುರಾಲೋಚ ನೆಯೂ ಇಲ್ಲದೇ ಕಳುಹಿಸಿರುವನೇ? – ಎಂಬುದನ್ನು ಮಾತ್ರವೇ ಯುಧಿಷ್ಠಿ ರನು ತಿಳಿದುಕೊಳ್ಳಬೇಕಾದ ಅವಶ್ಯಕತೆಯಿದೆ. ಧೃತರಾಷ್ಟ್ರನು ರಾಜತಂತ್ರ ದಿಂದ ಮಾಡಿದ ಕಾರ್ಯವಿದೆಂದು ಯುಧಿಷ್ಠಿರನಿಗೆ ತಿಳಿದರೆ–ಮುಂದೆ ಅದಕ್ಕೆ ನಿವಾರಣೋಪಾಯವನ್ನೂ ಅವನು ಕಂಡುಕೊಳ್ಳಬಲ್ಲನು. ಈ ಹಿನ್ನೆಲೆ ಯಲ್ಲಿಯೇ ವಿದುರನು ಮೊದಲನೆಯದಾಗಿ 'ನೀತಿಶಾಸ್ತ್ರಾನುಸಾರಿಣೀಂ ಪರಪ್ರಜ್ಞಾಂ ಯೋ ಜಾನಾತಿ–ನೀತಿಶಾಸ್ತ್ರಾನುಸಾರವಾಗಿ ಶತ್ರುಗಳಾದ ವರು ಏನು ಯೋಚಿಸುತ್ತಾರೆಂಬುದನ್ನು ಯಾವನು ತಿಳಿಯುತ್ತಾನೆಯೋ–

---

ವ್ಯಾಖ್ಯಾನಕಾರರೇ ತಮ್ಮ ವ್ಯಾಖ್ಯೆಯಲ್ಲಿ– ಯದ್ಯಪಿ ಯುಧಿಷ್ಠಿರಂ ಪ್ರತಿ ವಿದುರೇಣ ಮ್ಲೇಚ್ಛಭಾಷಯೋಕ್ತಂ ತಥಾಪಿ ವ್ಯಾಸೇನ ತತ್ಸಂಸ್ಕೃತೇನೈವೋಪನಿಬದ್ಧಂ – ಯುಧಿಷ್ಠಿರನನ್ನು ಕುರಿತು, ವಿದುರನು ಮ್ಲೇಚ್ಛಭಾಷೆಯಲ್ಲಿ ಹೇಳಿದನಾದರೂ ವ್ಯಾಸರು ಅವನ ಉಪದೇಶವನ್ನು ಮಹಾಭಾರತದಲ್ಲಿ ಸಂಸ್ಕೃತದಲ್ಲಿಯೇ ಪರಿವರ್ತಿಸಿ ಹೇಳಿರು ತ್ತಾರೆ –ಎಂದು ವಿವರಿಸಿದ್ದಾರೆ. ಹೀಗಿರುವಾಗ ಸಂಸ್ಕೃತಶಬ್ದಗಳು ಮ್ಲೇಚ್ಛಭಾಷಾ ಶಬ್ದಗಳಾಗಿವೆಯೆಂದು ಇಲ್ಲಿ ವ್ಯಾಖ್ಯಾನಮಾಡುವ ಕಾರಣವೇನು?

ಎರಡನೆಯದಾಗಿ : ಪಾಂಡವರು ಹೊರಟಾಗಲೇ ಪುರೋಚನನು ದುರ್ಯೋಧನನ ಆಜ್ಞಾನುವರ್ತಿಯಾಗಿ ಅರಗಿನ ಮನೆಯ ನಿರ್ಮಾಣಕ್ಕೆಂದು ವಾರಣಾವತಕ್ಕೆ ತೆರಳಿ ದನು. ವಿದುರನು ಬಹಳ ಸೂಕ್ಷ್ಮಬುದ್ಧಿಯುಳ್ಳವನಾದುದರಿಂದಲೂ, ಪರೇಂಗಿತವನ್ನು ತಿಳಿಯಲು ಸಮರ್ಥನಾಗಿದ್ದುದರಿಂದಲೂ–"ಪಾಂಡವರನ್ನು ವಾರಣಾವತಕ್ಕೆ ಕಳುಹಿಸಿ,

ಅವನು ಅಪಾಯದಿಂದ ಪಾರಾಗುತ್ತಾನೆ. ಅರ್ಥಾತ್ ಧೃತರಾಷ್ಟ್ರನು ಶತ್ರುನಿರ್ಮೂಲನಕ್ಕಾಗಿ ನೀತಿಶಾಸ್ತ್ರವನ್ನು ಅವಲಂಬಿಸಿ ಕಾರ್ಯಮಾಡುತ್ತಿದ್ದಾನೆ'–ಎಂಬ ಸೂಚನೆಯನ್ನು ಯುಧಿಷ್ಠಿರನಿಗೆ ಕೊಡುತ್ತಾನೆ. )

**ಅಲೋಹಂ ನಿಶಿತಂ ಶಸ್ತ್ರಂ ಶರೀರಪರಿಕರ್ತನಮ್ ।**
**ಯೋ ವೇತ್ತಿ ನ ತು ತಂ ಘ್ನನ್ತಿ ಪ್ರತಿಘಾತವಿದಂ ದ್ವಿಷಃ ॥೨೨॥**

ಮನುಷ್ಯರನ್ನು ಕೊಲ್ಲಲು ಲೋಹಸಂಬಂಧವಾದ ಶಸ್ತ್ರಗಳು ಮಾತ್ರವೇ ಕಾರಣವಲ್ಲ. ಲೋಹದಿಂದ ಮಾಡಲ್ಪಡದಿರುವ ನಿಶಿತವಾದ ಶಸ್ತ್ರವೂ ಒಂದಿದೆ. ಅದೂ ಸಹ ಮನುಷ್ಯನ ಶರೀರವನ್ನು ಭಗ್ನಗೊಳಿಸುತ್ತದೆ–ಎಂಬ ಈ ವಿಷಯವನ್ನು ಯಾರು ತಿಳಿಯುತ್ತಾರೋ–ಅಂತಹವನಿಗೆ ಶತ್ರುಗಳು ಪ್ರಯೋಗಿಸುವ ಈ ಅಲೋಹಶಸ್ತ್ರವು ತೊಂದರೆಪಡಿಸುವುದಿಲ್ಲ. (ಶತ್ರುಗಳಾದವರು ಎದುರಿಗೆ ಬಂದು ಶಸ್ತ್ರಗಳಿಂದಲೇ ಕೊಲೆಮಾಡುತ್ತಾರೆಂದು ಭಾವಿಸುವಂತಿಲ್ಲ. ಶತ್ರುಗಳ ವಿಧ್ವಂಸನಕ್ಕೆ ಅವರು ಅನೇಕವಿಧವಾದ ಉಪಾಯಗಳನ್ನೂ ಹುಡುಕುತ್ತಿರುತ್ತಾರೆ. ಅವು ಯಾವುವೆಂಬುದನ್ನು ನೀವು ಅರಿತುಕೊಳ್ಳಬೇಕು. ಅವನ್ನು ಅರಿತುಕೊಂಡರೆ ಅನಂತರ ಅಲೋಹಶಸ್ತ್ರದ ಆಘಾತದಿಂದ ನೀವು ಪಾರಾಗಬಹುದು. ಇದು ವಿದುರನ ಅಭಿಪ್ರಾಯವಾಗಿದೆ. ಶಸ್ತ್ರಗಳಿಂದ ಕೊಲ್ಲುವುದಿಲ್ಲ ಎಂದು ಹೇಳಿದೊಡನೆಯೇ ಸಾಮಾನ್ಯವಾಗಿ

---

ಅಗ್ನಿಪ್ರಯೋಗವೇ ಮೊದಲಾದ ಕೃತ್ರಿಮಗಳಿಂದ ಅವರನ್ನು ಸಂಹಾರಮಾಡಲು ದುರ್ಯೋಧನನು ಉದ್ಯುಕ್ತನಾಗಿರುವನು"–ಎಂಬುದನ್ನು ತಿಳಿಯಲು ವಿದುರನಿಗೆ ಸಾಧ್ಯವಾಯಿತು. ಆದರೆ ದುರ್ಯೋಧನನು ಪುರೋಚನನ ಮೂಲಕ ಲಾಕ್ಷಾಗೃಹವನ್ನು ನಿರ್ಮಿಸಿ ಅದರಿಂದಲೇ ಪಾಂಡವರ ನಾಶಕ್ಕೆ ಸನ್ನಾಹಮಾಡಿರುವನೆಂಬುದು ವಿದುರನಿಗೆ ತಿಳಿದಿತ್ತೇ? ಎಂಬುದನ್ನೂ ಯೋಚಿಸಬೇಕಾಗಿದೆ. 'ಅಲ' ಎಂಬುದನ್ನು 'ಅನಲ' ಎಂದು ಮಾಡಿದರೂ ಸ್ವಾಭಾವಿಕವಾಗಿ ತೋರುವ 'ಅಗ್ನಿ' ಎಂಬ ಅರ್ಥಕ್ಕೆ ಪ್ರತಿಯಾಗಿ 'ಅಗ್ನಿಯಿಂದ ಹೊತ್ತಿಕೊಳ್ಳಬಹುದಾದ ಅರಗು ಮುಂತಾದ ವಸ್ತುಗಳು' ಎಂಬ ಅತಿದೂರಾರ್ಥವನ್ನು ಮಾಡಲು ಸಾಧ್ಯವಿದೆಯೇ ಎಂಬುದನ್ನೂ ಯೋಚಿಸಬೇಕಾಗಿದೆ. ಆದರೆ ಶ್ಲೋಕಗಳಿಗೆ ಯುಕ್ತಿಯುಕ್ತವಾಗಿ, ಚಮತ್ಕಾರವಾಗಿ ವ್ಯಾಖ್ಯೆ ಮಾಡಲ್ಪಟ್ಟಿದೆಯೆಂಬುದರಲ್ಲಿ ಸಂಶಯವಿಲ್ಲ. ವಾಚಕರು ಎರಡು ವಿಧವಾದ ಅಭಿಪ್ರಾಯಗಳನ್ನೂ ತಿಳಿದು ಮಹಾಭಾರತದ ರಸದೂಟವನ್ನು ಸವಿಯಲೆಂಬ ಆಶಯದಿಂದ ಸಂಪೂರ್ಣವಿವರಣೆಯನ್ನೂ ಕೊಡಲಾಗಿದೆ.

ಅಗ್ನಿಯಿಂದ ಅಥವಾ ವಿಷದಿಂದ ಕೊಲ್ಲಬಹುದೆಂದು ಯಾರಾದರೂ ಅರ್ಥಮಾಡಬಹುದಾಗಿದೆ. ಇದಕ್ಕೆ ವಿಶೇಷಾರ್ಥವನ್ನು ಕಲ್ಪಿಸುವ ಆವಶ್ಯಕತೆಯಿಲ್ಲ.

ಆದರೆ ವ್ಯಾಖ್ಯಾನಕಾರರು ಈ ಶ್ಲೋಕವು ಅರಗಿನ ಮನೆಯ ವಿಷಯ ವನ್ನೇ ಹೇಳುವುದಾಗಿದೆಯೆಂದೂ, ಮ್ಲೇಚ್ಛಭಾಷೆಯ ಪದಗಳು ಈ ಶ್ಲೋಕದಲ್ಲಿವೆ–ಎಂದೂ ವ್ಯಾಖ್ಯಾನಮಾಡಿರುತ್ತಾರೆ. ವ್ಯಾಖ್ಯಾನಕಾರರ ಅಭಿಪ್ರಾಯದಂತೆ ಮೇಲಿನ ಶ್ಲೋಕವನ್ನು ಕೆಳಗೆ ತೋರಿಸಿರುವಂತೆ ಪದ ವಿಭಾಗಮಾಡಬೇಕಾಗುತ್ತದೆ.

**ಅಲೋಹಂ–ನಿಶಿ–ತಂ–ಶಸ್ತ್ರಂ–ಶರೀರಪರಿ–ಕರ್ತನಮ್**

ಉತ್ತರಾರ್ಧವನ್ನು ಯಥಾನುರೂಪವಾಗಿಯೇ ಅರ್ಥಮಾಡಿರುತ್ತಾರೆ. ಇಲ್ಲಿ–ಅಲೋಹಂ ಎಂಬ ಪದವು ಮ್ಲೇಚ್ಛಭಾಷೆಯೆಂದು ವ್ಯಾಖ್ಯಾನಕಾರರ ಅಭಿಪ್ರಾಯ. 'ಅಲ' ಶಬ್ದಕ್ಕೆ ಅಗ್ನಿಯೆಂದು ಅರ್ಥಮಾಡಿ, ಮ್ಲೇಚ್ಛ ಭಾಷೆಯ ರೀತಿಯಾಗಿ ಅನಲ ಶಬ್ದದಲ್ಲಿರುವ ನಕಾರ ಲೋಪವಾಗಿದೆಯೆಂದು ಅಭಿಪ್ರಾಯಪಟ್ಟಿರುತ್ತಾರೆ. ಸಂಸ್ಕೃತದಲ್ಲಿ ಗೃಹಪರ್ಯಾಯದಲ್ಲಿ 'ಸಸ್ತ್ರ' ಎಂಬ ಪದವಿದೆ. ಮ್ಲೇಚ್ಛಭಾಷೆಯಲ್ಲಿ ಇದೇ ಪದದಲ್ಲಿರುವ 'ಸ' ಕಾರವು 'ಶ' ಕಾರವಾಗಿದೆ. ಅರ್ಥಾತ್ 'ಶಸ್ತ್ರಂ' ಎಂಬ ಪದಕ್ಕೆ 'ಮನೆ' ಎಂದು ಅರ್ಥವಾಗುತ್ತದೆ.

ಈ ಕಾರಣಗಳಿಂದಾಗಿ ಈ ಶ್ಲೋಕದ ಪೂರ್ವಾರ್ಧದ ಅರ್ಥವು ಈ ರೀತಿಯಾಗಿರುತ್ತದೆ. ತಂ ಶಸ್ತ್ರಂ– ಆ ವಾರಣಾವತದಲ್ಲಿರುವ ಮನೆಯನ್ನು ಅಲಾನಾಂ– ಅಗ್ನಿಯಿಂದ ಸುಡುವ ಅರಗು ಮುಂತಾದ ವಸ್ತುಗಳ ಊಹಂ– ಸಮುದಾಯವೆಂದೂ, ಶರೀರಪರಿ–ತನ್ನ ಸ್ವರೂಪವನ್ನು ಮರೆಸಿಕೊಂಡಿದ್ದು, ನಿಶಿ–ರಾತ್ರಿಯಲ್ಲಿ, ಕರ್ತನಂ–ಹಿಂಸೆಮಾಡುವುದಾಗಿದೆಯೆಂದೂ–ಯಾವನು ತಿಳಿದಿರುವನೋ ಮತ್ತು ಅದಕ್ಕೆ ಪ್ರತೀಕಾರವನ್ನೂ ಯಾವನು ತಿಳಿದಿರು ವನೋ–ಅವನನ್ನು ಶತ್ರುಗಳು ಕೊಲ್ಲಲಾರರು.

**ಕಕ್ಷಘ್ನಃ ಶಿಶಿರಘ್ನಶ್ಚ ಮಹಾಕಕ್ಷೇ ಬಿಲೌಕಸಃ ।**
**ನ ದಹೇದಿತಿ ಚಾತ್ಮಾನಂ ಯೋ ರಕ್ಷತಿ ಸ ಜೀವತಿ ॥೨೩॥**

ಒಣಹುಲ್ಲು ಮತ್ತು ಪೊದೆಗಳನ್ನು ಧ್ವಂಸಮಾಡುವವನೂ, ಶೀತ ವನ್ನು ಹೋಗಲಾಡಿಸುವವನೂ ಆದ ಅಗ್ನಿಯು ಮಹಾರಣ್ಯವನ್ನೇ ಸಂಪೂರ್ಣವಾಗಿ ಸುಟ್ಟರೂ ಅರಣ್ಯದ ಬಿಲದಲ್ಲಿರುವ ಸರ್ಪವನ್ನು ಸುಡ ಲಾರನು. ಹೀಗೆಂದು ತಿಳಿದು ಯಾವನು ( ಅಗ್ನಿಯು ಆವಿರ್ಭವಿಸಿದ ಸಮಯದಲ್ಲಿ ಸುರಂಗದಲ್ಲಿ ಸೇರಿಕೊಂಡು ) ತನ್ನನ್ನು ರಕ್ಷಿಸಿಕೊಳ್ಳು ತ್ತಾನೆಯೋ–ಅವನು ಬದುಕಿಕೊಳ್ಳುತ್ತಾನೆ.

(ವ್ಯಾಖ್ಯಾನಕಾರರು ಈ ಶ್ಲೋಕದಲ್ಲಿಯೂ ವಿದುರನು ಪುರೋಚನನ ಕಾರ್ಯವನ್ನು ಸೂಚಿಸಿರುವನೆಂದು ವ್ಯಾಖ್ಯಾನಮಾಡಿರುತ್ತಾರೆ. ಈ ಶ್ಲೋಕ ದಲ್ಲಿ ಪದಗಳ ಬಿಡಿಸುವಿಕೆಯು ಯಥಾಪೂರ್ವವಾಗಿಯೇ ಇರುತ್ತದೆ.)

**ಕಕ್ಷಘ್ನಃ–ಶಿಶಿರಘ್ನಃ–ಮಹಾಕಕ್ಷೇ–ಬಿಲೌಕಸಃ**

**ಕಕ್ಷಘ್ನಃ** –ಎಂಬ ಪದದಲ್ಲಿರುವ ಹನ್ ಧಾತುವಿಗೆ 'ಹನ–ಹಿಂಸಾ **ಗತ್ಯೋಃ**' ಎಂಬ ಧಾತ್ವರ್ಥದಂತೆ 'ಹಿಂಸೆ, ಗತಿ' ಎಂಬ ಅರ್ಥಗಳುಂಟು. **'ಕಕ್ಷ'** ಎಂಬ ಪದಕ್ಕೆ 'ಸಮೀಪ' ಎಂಬ ಅರ್ಥವೂ ಇದೆ. **ಕಕ್ಷಘ್ನಃ** = ಸಮೀಪವರ್ತೀ ಎಂದಾಗುತ್ತದೆ. 'ಶಿಶಿರಘ್ನಃ' ಎಂಬ ಪದದಲ್ಲಿ 'ಶಿರ' ಎಂಬುದು ಮ್ಲೇಚ್ಛಭಾಷೆಯಲ್ಲಿ ಶಿಶಿರವಾಗಿದೆ. ಶಿರಶಬ್ದಕ್ಕೆ ಅಗ್ನಿ ಎಂಬ ಅರ್ಥವೂ ಇದೆ. ಆದುದರಿಂದ 'ಶಿಶಿರಘ್ನಃ' ಎಂದರೆ ಅಗ್ನಿಯಿಂದ ನಿಮ್ಮನ್ನು ಕೊಲ್ಲುತ್ತಾನೆ–ಎಂದು ಅರ್ಥವಾಗುವುದು. ಮ್ಲೇಚ್ಛಭಾಷೆಯಲ್ಲಿ **ಮಹಾಕಕ್ಷಯೇ** ಎಂಬ ಪದವಿರುವುದಕ್ಕೆ ಬದಲಾಗಿ 'ಮಹಾಕಕ್ಷೇ' ಎಂದು ಮಾತ್ರವಿದೆ. **ಕಕ್ಷಯಃ = ಕಂ**–ಸುಖವನ್ನು **ಕ್ಷಯಃ** –ನಾಶಮಾಡುವವನು ಎಂದಾಗುತ್ತದೆ. **ಮಹಾಕಕ್ಷಯೇ** ( ಸತಿ ) = ಸುಖವನ್ನು ಕ್ಷಯಮಾಡುವ ಪ್ರಬಲನಾದ ಶತ್ರುವಿರುವಾಗ, **ಬಿಲೌಕಸಃ** – ಸುರಂಗಮಾರ್ಗದಲ್ಲಿರತಕ್ಕ ನಿಮ್ಮನ್ನು, ನ **ದಹೇತ್**–ಸುಡಲಾರನು. ಈ ರೀತಿಯಾದ ಸೂಚನೆಯನ್ನು ವಿದುರನು ಕೊಟ್ಟಿರುವನೆಂದು ವ್ಯಾಖ್ಯಾನಕಾರರು ಅಭಿಪ್ರಾಯಪಡುತ್ತಾರೆ.)

**ನಾಚಕ್ಷುರ್ವೇತ್ತಿ ಪನ್ಥಾನಂ ನಾಚಕ್ಷುರ್ವಿನ್ದತೇ ದಿಶಃ ।**
**ನಾಧೃತಿರ್ಬುದ್ಧಿಮಾಪ್ನೋತಿ ಬುಧ್ಯಸ್ವೈವಂ ಪ್ರಬೋಧಿತಃ ॥೨೪॥**

ಯುಧಿಷ್ಠಿರ! ಕಣ್ಣಿಲ್ಲದವನಿಗೆ ಅಥವಾ ವಿವೇಕವಿಲ್ಲದವನಿಗೆ ದಾರಿಯಾಗಲೀ–ದಿಕ್ಕಾಗಲೀ ತಿಳಿಯುವುದಿಲ್ಲ. ಧೈರ್ಯವಿಲ್ಲದವನಿಗೆ ಸ್ಥಿರ ಬುದ್ಧಿಯೂ ಇರುವುದಿಲ್ಲ. ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ಕಾರ್ಯ ಮಾಡು. ಎಚ್ಚರವಾಗಿರು.”

ಸುರಂಗದ ಮೂಲಕವಾಗಿ ತಪ್ಪಿಸಿಕೊಂಡ ಮೇಲೆ ಏನು ಮಾಡಬೇಕೆಂಬುದನ್ನು ವಿದುರನು ಹೇಳುತ್ತಾನೆ : “ವಿವೇಕದಿಂದಲೂ, ಧೈರ್ಯದಿಂದಲೂ ದಾರಿಯನ್ನು ಹುಡುಕಿಕೊಂಡು ಹೋಗಬೇಕು.” ವ್ಯಾಖ್ಯಾನಕಾರರೂ ಇದೇ ಅಭಿಪ್ರಾಯವನ್ನಿತ್ತಿದ್ದಾರೆ.

**ಅನಾಪ್ತೈರ್ದತ್ತಮಾದತ್ತೇ ನರಃ ಶಸ್ತ್ರಮಲೋಹಜಮ್ ।**
**ಶ್ವಾವಿಚ್ಛರಣಮಾಸಾದ್ಯ ಪ್ರಮುಚ್ಯೇತ ಹುತಾಶನಾತ್ ॥೨೫॥**

ಇದು ವಿದುರನ ನಾಲ್ಕನೆಯ ಉಪದೇಶ :

“ಆಪ್ತರಲ್ಲದವರಿಂದ ಕೊಡಲ್ಪಡುವ (ಪ್ರಯೋಗಿಸಲ್ಪಡುವ) ಅಲೋಹಶಸ್ತ್ರವನ್ನೇ (ಅಗ್ನಿ ಅಥವಾ ವಿಷವನ್ನೇ) ಅವರ ಪ್ರತಿಧ್ವಂಸನಕ್ಕಾಗಿ ಉಪಯೋಗಿಸಿ, ಮುಳ್ಳುಹಂದಿಯ ಬಿಲದಂತೆ ಉಭಯಪಾರ್ಶ್ವಗಳಲ್ಲಿಯೂ ರಂಧ್ರವಿರುವ ಸುರಂಗವನ್ನು ಸೇರಿ, ಅಗ್ನಿಯಿಂದ ಬಿಡುಗಡೆಹೊಂದಬೇಕು.”

(ವ್ಯಾಖ್ಯಾನಕಾರರು ಇಲ್ಲಿಯೂ ಸಹ ‘ಅಲಂ’ ಎಂಬುದನ್ನು ‘ಅನಲ’ ಎಂದೂ ‘ಶಸ್ತ್ರ’ ಎಂಬುದನ್ನು ‘ಸಸ್ತ್ರ’ ಎಂದೂ ತೆಗೆದುಕೊಂಡು ಹಿಂದಿನಂತೆಯೇ ಅರ್ಥಮಾಡಿರುತ್ತಾರೆ.

**ನರಃ – ಅನಾಪ್ತೈಃ – ದತ್ತಂ**–ಯಾವ ಮನುಷ್ಯನು ಶತ್ರುಗಳಿಂದ ಕೊಡಲ್ಪಟ್ಟ, **ಅಲೋಹಜಂ, ಅಲೋಹೇನ** –ಬೆಂಕಿಹೊತ್ತಿಕೊಳ್ಳಬಹುದಾದ ಅರಗು ಮುಂತಾದ ವಸ್ತುಗಳಿಂದ **ಜಂ**–ನಿರ್ಮಿತವಾದ, **ಸಸ್ತ್ರಂ**– ಮನೆಯನ್ನು, **ಆದತ್ತೇ**–ಪಡೆಯುತ್ತಾನೆಯೋ–ಅವನು ಸುರಂಗವನ್ನು ಸೇರಿ ಅಗ್ನಿಯಿಂದ ಬಿಡುಗಡೆಯನ್ನು ಹೊಂದುವನು.)

**ಚರನ್ಮಾರ್ಗಾನ್ವಿಜಾನಾತಿ ನಕ್ಷತ್ರೈರ್ವಿನ್ದತೇ ದಿಶಃ ।**
**ಆತ್ಮನಾ ಚಾತ್ಮನಃ ಪಞ್ಚ ಪೀಡಯನ್ನಾನುಪೀಡ್ಯತೇ ॥೨೬॥**

"ಅಲೆಯುತ್ತಾ ( ಸಂಚರಿಸುತ್ತಾ ) ದಾರಿಯನ್ನು ಕಂಡುಕೊಳ್ಳು ವವನು, ನಕ್ಷತ್ರಗಳಿಂದ ದಿಕ್ಕುಗಳನ್ನು ತಿಳಿಯುವವನು, ಯಥೇಚ್ಛವಾಗಿ ಹೋಗುತ್ತಿರುವ ತನ್ನ ಪಂಚೇಂದ್ರಿಯಗಳನ್ನೂ ಸೆಳೆದುಕೊಂಡು ಸ್ವಾಧೀನ ದಲ್ಲಿಟ್ಟುಕೊಳ್ಳುವವನು ಇತರರಿಂದ ಪೀಡಿತನಾಗುವುದಿಲ್ಲ."

(ಅಗ್ನಿಯ ರೂಪವಾದ ಪೀಡೆಯಿಂದ ವಿಮುಕ್ತನಾದನಂತರ ಏನು ಮಾಡಬೇಕೆಂಬ ವಿಷಯವಾಗಿ ವಿದುರನು ಸೂಚನೆಯನ್ನು ಕೊಡುತ್ತಾನೆ. ಸುರಂಗದಿಂದ ಹೊರಗೆ ಹೋದನಂತರ ಅಲ್ಲಲ್ಲಿ ಸಂಚರಿಸಿದರೆ ಬೇರೆಯ ದೇಶಕ್ಕೆ ಹೋಗುವ ಮಾರ್ಗವನ್ನು ತಿಳಿಯಬಹುದು. ನಕ್ಷತ್ರಗಳಿಂದ ದಿಕ್ಕು ಗಳನ್ನೂ ತಿಳಿಯಬಹುದು. ಹೀಗೆ ಹೇಳಿರುವುದರಿಂದ ಅಲ್ಲಲ್ಲಿ ಸುತ್ತಿ ಹೊಸ ದಾರಿಯನ್ನು ಹಿಡಿದು ಬೇರೆಯ ಸ್ಥಳಕ್ಕೆ ಹೋಗಬೇಕೆಂದು ಸೂಚಿತವಾಯಿತೇ ಹೊರತು–ಹಾಸ್ತಿನಪುರಕ್ಕೆ ಬರಬೇಕೆಂಬ ಅಭಿಪ್ರಾಯವಿಲ್ಲ. ಪಂಚೇಂದ್ರಿಯ ಗಳನ್ನೂ ಸ್ವಾಧೀನದಲ್ಲಿಟ್ಟುಕೊಂಡು ನಡೆಯಬೇಕೆಂದು ಸೂಚಿಸಿರುವುದರಿಂದ ಕಾಮ-ಕ್ರೋಧಾದಿಗಳಿಗೆಡೆಗೊಡದೇ ಬಹಳ ಜಾಗರೂಕರಾಗಿ ನಡೆದು ಕೊಳ್ಳಬೇಕೆಂದು ವಿದುರನು ಸ್ಪಷ್ಟವಾಗಿ ಸೂಚಿಸಿರುವನೆಂದು ಹೇಳಬಹು ದಾಗಿದೆ.)

ಹೀಗೆ ಹೇಳಿದ, ವಿದ್ವಾಂಸರಲ್ಲಿ ಶ್ರೇಷ್ಠನಾದ ವಿದುರನ ನೀತಿವಾಕ್ಯ ಗಳನ್ನು ಕೇಳಿ ಯುಧಿಷ್ಠಿರನು– ನೀನು ಹೇಳಿದುದೆಲ್ಲವನ್ನೂ ನಾನು ಗ್ರಹಿ ಸಿದೆನು'–ಎಂದನು.

ವಿದುರನು ಸಂತೋಷದಿಂದ ರಥವನ್ನು ಪ್ರದಕ್ಷಿಣೆಮಾಡಿ ಯುಧಿಷ್ಠಿರನ ಪರಿವಾರವನ್ನು ಮನಃಪೂರ್ವಕವಾಗಿ ಆಶೀರ್ವದಿಸಿ, ಹಾಸ್ತಿನಪಟ್ಟಣಕ್ಕೆ ಹೊರಟುಹೋದನು.

ವಿದುರ-ಭೀಷ್ಮರೂ ಮತ್ತು ಪರಿಜನರೂ ತಮ್ಮ ತಮ್ಮ ನಿವಾಸಗಳಿಗೆ ಹೊರಟುಹೋದನಂತರ ಕುಂತಿಯು ಮಗನ ಬಳಿಗೆ ಬಂದು ಕೇಳಿದಳು :

**ಕ್ಷತ್ತಾ ಯದಬ್ರವೀದ್ವಾಕ್ಯಂ ಜನಮಧ್ಯೇಽಬ್ರುವನ್ನಿವ ।**
**ತ್ವಯಾ ಚ ಸ ತಥೇತ್ಯುಕ್ತೋ ಜಾನೀಮೋ ನ ಚ ತದ್ವಯಮ್ ॥**
**ಯದೀದಂ ಶಕ್ಯಮಸ್ಮಾಭಿರ್ಜ್ಞಾತುಂ ನ ಚ ಸದೋಷವತ್ ।**
**ಶ್ರೋತುಮಿಚ್ಛಾಮಿ ತತ್ಸರ್ವಂ ಸಂವಾದಂ ತವ ತಸ್ಯ ಚ ॥೩೦॥**

"ಮಗು! ಜನಗಳ ಮಧ್ಯದಲ್ಲಿ ವಿದುರನು ಯಾವುದೋ ರಹಸ್ಯವಾದ ವಿಷಯಗಳನ್ನು ಹೇಳುತ್ತಿರುವಂತೆ ನಿನ್ನೊಡನೆ ಹೇಳಿದ ಮಾತುಗಳು ನಮಗಂತೂ ಅರ್ಥವಾಗಲೇ ಇಲ್ಲ. ಆದರೆ ನೀನು ಮಾತ್ರ ಅರ್ಥವಾದವ ನಂತೆ ತೋರ್ಪಡಿಸಿಕೊಳ್ಳುತ್ತಾ– 'ಸ ತಥಾ' 'ಅದು ಹಾಗೆಯೇ ಸರಿ'– ಎಂದು ಹೇಳಿದೆ. ಈ ಮಾತುಗಳನ್ನು ನಾವು ತಿಳಿದುಕೊಳ್ಳಲು ಶಕ್ಯವಾಗುವು ದಾಗಿದ್ದರೆ–ಹಾಗೆ ತಿಳಿಯುವುದರಿಂದ ದೋಷವೇನೂ ಇಲ್ಲದಿದ್ದರೆ– ನಿನಗೂ ಮತ್ತು ವಿದುರನಿಗೂ ನಡೆದ ಸಂಭಾಷಣೆಯನ್ನು ತಿಳಿಯಲು ನಾನು ಅಪೇಕ್ಷಿಸುತ್ತೇನೆ."

**ಗೃಹಾದಗ್ನಿಶ್ಚ ಬೋದ್ಧವ್ಯ ಇತಿ ಮಾಂ ವಿದುರೋಽಬ್ರವೀತ್ ।**
**ಪನ್ಥಾಶ್ಚ ವೋ ನಾವಿದಿತಃ ಕಶ್ಚಿತ್ಸ್ಯಾದಿತಿ ಧರ್ಮಧೀಃ ॥೩೨॥**

**ಜಿತೇನ್ದ್ರಿಯಶ್ಚ ವಸುಧಾಂ ಪ್ರಾಪ್ಸ್ಯತೀತಿ ಚ ಮೇಽಬ್ರವೀತ್ ।**
**ವಿಜ್ಞಾತಮಿತಿ ತತ್ಸರ್ವಂ ಪ್ರತ್ಯುಕ್ತೋ ವಿದುರೋ ಮಯಾ ॥೩೩॥**

"ಮಹಾಮಹಿಮನಾದ ವಿದುರನಾಡಿದ ಮಾತುಗಳನ್ನು ನಿನಗೆ ಹೇಳು ವುದರಲ್ಲಿ ಅನುಚಿತವೇನೂ ಆಗಲಾರದು, ತಾಯೇ! ನಾವು ವಾರಣಾವತ ದಲ್ಲಿ ವಾಸಮಾಡುವ ಮನೆಯ ದೆಸೆಯಿಂದ ಅಗ್ನಿಯು ಉತ್ಪನ್ನವಾಗುವುದು. ಅರ್ಥಾತ್ ಮನೆಗೆ ಅಗ್ನಿಯ ಭಯವಿದೆ–ಎಂದು ವಿದುರನು ಹೇಳಿದನು. ನಮಗೆ ವಾರಣಾವತದಲ್ಲಿ ವಿಷದಿಂದಲೋ ಅಥವಾ ಅಗ್ನಿಯಿಂದಲೋ ಅಪಾಯವುಂಟಾಗಬಹುದೆಂದು ವಿದುರನು ಹೇಳಿದನು. ಅದರಿಂದ ಪಾರಾಗಲು ದಾರಿಯು ನಿನಗೆ ತಿಳಿಯದೇ ಇಲ್ಲವೆಂದೂ, ಯಾರು ತಮ್ಮ ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಳ್ಳುವರೋ–ಅವರು ಅಖಂಡಚಕ್ರಾಧಿ ಪತ್ಯಕ್ಕೆ ಚಕ್ರವರ್ತಿಗಳಾಗಲು ಅರ್ಹರಾಗುವರೆಂದೂ ಹೇಳಿದನು. ನಾನದಕ್ಕೆ ಉತ್ತರವಾಗಿ–'ನೀನು ಹೇಳಿದುದನ್ನು ನಾನು ಗ್ರಹಿಸಿದೆನು'–ಎಂದು ಮಾತ್ರವೇ ಹೇಳಿದೆನಮ್ಮಾ."

ಪಾಂಡವರು ಫಾಲ್ಗುನಮಾಸದ ಅಷ್ಟಮಿಯ ದಿನ ರೋಹಿಣೀನಕ್ಷತ್ರ ದಲ್ಲಿ (ಹೊರಟವರಾಗಿ) ವಾರಣಾವತವನ್ನು ಸೇರಿದರು. ಬಂದ ರಾಜ ಕುಮಾರರಿಗೆ ಪುರಜನರು ಭವ್ಯಸ್ವಾಗತವನ್ನು ನೀಡಿದರು.

ಅಲ್ಲಿ ತಮ್ಮನ್ನು ಸ್ವಾಗತಿಸಲು ಬಂದಿದ್ದ ಅಪಾರಜನಸ್ತೋಮವನ್ನು ಪಾಂಡವರು ನೋಡಿದರು.

(ವಾರಣಾವತದ ಪ್ರಜೆಗಳ ಆನಂದಕ್ಕೆ ಪಾರವೇ ಇರಲಿಲ್ಲ. ಧೃತ ರಾಷ್ಟ್ರ-ದುರ್ಯೋಧನರು ಪಾಂಡವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡುವ ದುರುದ್ದೇಶದಿಂದ ವಾರಣಾವತಕ್ಕೆ ಕಳುಹಿಸಿದುದು ನಿಶ್ಚಯ. ಆದರೆ ಪ್ರಜೆ ಗಳಿಗೆ ಅಪ್ರತಿಮಪರಾಕ್ರಮಿಗಳಾದ, ಕೀರ್ತಿಮಂತರಾದ, ಗುಣಶಾಲಿಗಳಾದ ಪಂಚಪಾಂಡವರು ತಮ್ಮ ನಗರಿಗೆ ಬಂದರೆಂದರೆ ಹೆಚ್ಚಿನ ಸಂತೋಷವುಂಟಾ ಗುವುದು ಸಹಜವಾಗಿಯೇ ಇದೆ.)

೧೪೫ನೆಯ ಅಧ್ಯಾಯವು ಮುಗಿಯಿತು.

೧೪೬ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ವಾರಣಾವತದಲ್ಲಿ ಪಾಂಡವರಿಗೆ ಭವ್ಯಸ್ವಾಗತ : ಪುರೋಚನನ ಸತ್ಕಾರ : ಲಾಕ್ಷಾಗೃಹದಲ್ಲಿ ನಿವಾಸದ ವ್ಯವಸ್ಥೆ: ಯುಧಿಷ್ಠಿರ-ಭೀಮರ ಸಂವಾದ

ವೈಶಂಪಾಯನರು ಹೇಳುತ್ತಾರೆ :

**ತತಃ ಸರ್ವಾಃ ಪ್ರಕೃತಯೋ ನಗರಾದ್ವಾರಣಾವತಾತ್ ।**
**ಸರ್ವಮಙ್ಗಲಸಂಯುಕ್ತಾ ಯಥಾಶಾಸ್ತ್ರಮತನ್ದ್ರಿತಾಃ ॥೧॥**
**ಶ್ರುತ್ವಾಗತಾನ್ಪಾಣ್ಡುಪುತ್ರಾನ್ನಾನಾಯಾನೈಃ ಸಹಸ್ರಶಃ ।**
**ಅಭಿಜಗ್ಮುರ್ನರಶ್ರೇಷ್ಠಾನ್ ಶ್ರುತ್ವೈವ ಪರಯಾ ಮುದಾ ॥೨॥**

ಜನಮೇಜಯ! ಶಾಸ್ತ್ರಾನುಸಾರವಾಗಿ ಮಂಗಳದ್ರವ್ಯಗಳನ್ನು ತೆಗೆದು ಕೊಂಡು, ಮಂಗಳಘೋಷಗಳೊಡನೆ ವಾರಣಾವತದ ಪ್ರಜೆಗಳೆಲ್ಲರೂ ಪಾಂಡವರನ್ನು ಪುರದ್ವಾರದಲ್ಲಿ ಸ್ವಾಗತಿಸುವ ಸಲುವಾಗಿ ತೆರಳಿದರು. ಪಾಂಡವರು ವಾರಣಾವತಕ್ಕೆ ಬರುವರೆಂಬ ವಾರ್ತೆಯು ತಿಳಿದೊಡನೆಯೇ ಹತ್ತಿರದ ಊರುಗಳಿಂದಲೂ ನಾನಾವಿಧವಾದ ವಾಹನಗಳಲ್ಲಿ ಕುಳಿತು ಪ್ರಜೆಗಳು ಸಂಭ್ರಮದಿಂದ ರಾಜಕುಮಾರರ ಸ್ವಾಗತಕ್ಕೆ ಆಗಮಿಸಿದರು.

ತಂಡ-ತಂಡವಾಗಿ ವಾರಣಾವತದ ಪ್ರಜೆಗಳು ಯುಧಿಷ್ಠಿರನ ಎದುರಿಗೆ ಬಂದು ಜಯಕಾರಗಳನ್ನು ಮಾಡುತ್ತಾ ಸ್ವಾಗತಿಸಿದರು. ಲಕ್ಷೋಪಲಕ್ಷ

ಜನಸ್ತೋಮದ ಮಧ್ಯದಲ್ಲಿ ಯುಧಿಷ್ಠಿರನು–ದೇವತೆಗಳ ಮಧ್ಯದಲ್ಲಿರುವ ಇಂದ್ರನಂತೆಯೇ–ಪ್ರಕಾಶಿಸಿದನು. ಮಂಗಳವಾದ್ಯಪುರಃಸರವಾಗಿ ಬ್ರಾಹ್ಮಣರ ಸ್ವಸ್ತಿವಾಚನಗಳೊಡನೆ ಮತ್ತು ಪ್ರತಿಕ್ಷಣದಲ್ಲಿಯೂ ನಭೋಮಂಡಲ ವನ್ನು ಭೇದಿಸುವಂತೆ ಮಾಡುತ್ತಿದ್ದ ಜನರ ಜಯಘೋಷಗಳೊಡನೆ ಯುಧಿಷ್ಠಿರನು ಪರಿವಾರಸಮೇತನಾಗಿ, ಸುಂದರವಾಗಿ ಅಲಂಕರಿಸಲ್ಪಟ್ಟಿದ್ದ ವಾರಣಾವತವನ್ನು ಪ್ರವೇಶಿಸಿದನು. ಪಟ್ಟಣವನ್ನು ಪ್ರವೇಶಿಸಿದನಂತರ ಪಾಂಡವರು ಮೊಟ್ಟಮೊದಲು ಅನುಷ್ಠಾನನಿರತರಾಗಿದ್ದ ಶ್ರೋತ್ರಿಯರ ಮನೆಗಳಿಗೆ ತೆರಳಿ, ಕುಶಲಪ್ರಶ್ನೆಗಳನ್ನು ಮಾಡಿ, ಅವರಿಂದ ಆಶೀರ್ವಾದ ಗಳನ್ನು ಪಡೆದು, ಅನಂತರ ನಗರದ ಆಡಳಿತವರ್ಗದವರನ್ನು ಪರಿಚಯ ಮಾಡಿಕೊಂಡರು. ಜನನಾಯಕರ ಪ್ರಾರ್ಥನೆಯಂತೆ ರಥಿಕರ ಮನೆಗಳಿಗೂ, ವೈಶ್ಯರ ಮನೆಗಳಿಗೂ, ಶೂದ್ರರ ಮನೆಗಳಿಗೂ ತೆರಳಿ ಯೋಗ-ಕ್ಷೇಮಗಳನ್ನೂ ವಿಚಾರಿಸಿದನಂತರ, ತಮ್ಮನ್ನು ಅನುಸರಿಸಿ ಬರುತ್ತಿದ್ದ ಕುರುಮಂತ್ರಿಯಾದ ಪುರೋಚನನೊಡನೆ ತಮಗಾಗಿ ಸಿದ್ಧಪಡಿಸಿದ್ದ ಅರಮನೆಗೆ ತೆರಳಿದರು.

ಆ ಅರಮನೆಯಲ್ಲಿ ಪುರೋಚನನು ಪಾಂಡವರಿಗೆ ಬೇಕಾಗಿದ್ದ ಆಸನ-ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯ-ಪಾನೀಯ-ಶಯನಾದಿ ಸಕಲಸುಖೋಪ ಭೋಗವಸ್ತುಗಳನ್ನೂ ಸಿದ್ಧಪಡಿಸಿದ್ದನು. ಪಾಂಡವರ ನೂತನಜೀವನವು ಸುಖಮಯವಾಗಿಯೇ ಪ್ರಾರಂಭವಾಯಿತು.

ಹತ್ತು ರಾತ್ರಿಗಳು ಕಳೆದುವು. ಪಾಂಡವರ ಪರಿಚರ್ಯೆಯಲ್ಲಿಯೇ ಸದಾ ನಿರತನಾಗಿದ್ದ ಪುರೋಚನನು ಯುಧಿಷ್ಠಿರನ ಬಳಿಗೆ ಬಂದು ಹೇಳಿದನು :

"ಅತಿಸುಂದರವಾದ 'ಶಿವಗೃಹ'ವು ಸಿದ್ಧವಾಗಿದೆ. ನೂತನವಾದ ಅರಮನೆಗೆ ಪ್ರವೇಶಮಾಡಬಹುದಲ್ಲವೇ? ಯುಧಿಷ್ಠಿರ!"

ಆ ಮನೆಯು ಅಮಂಗಳಕರವೇ ಆಗಿದ್ದರೂ ಪುರೋಚನನು ಮನೆಗೆ 'ಶಿವಗೃಹ–ಮಂಗಳಕರವಾದ ಮನೆ' ಎಂದೇ ಹೆಸರನ್ನಿಟ್ಟಿದ್ದನು. ಗುಹ್ಯಕರು ಕೈಲಾಸದಲ್ಲಿರುವ ಶಿವಾಲಯವನ್ನು ಪ್ರವೇಶಿಸುವಂತೆ–ಪುರೋಚನನ ಸಲಹೆಯಂತೆ ಪಾಂಡವರು ನೂತನವಾದ ಅರಮನೆಯನ್ನು ಪ್ರವೇಶಿಸಿದರು.

ಅರಮನೆಯು ನೋಡಲು ಬಹಳ ಸುಂದರವಾಗಿತ್ತು. ಯುಧಿಷ್ಠಿರನು ಭೀಮಸೇನನಿಂದೊಡಗೂಡಿ ಅರಮನೆಯ ಸೊಬಗನ್ನು ನೋಡುತ್ತಿದ್ದನು. ನೋಡಲು ಕಣ್ಣಿಗೆ ಬಹಳ ಸುಂದರವಾಗಿ ಕಾಣುತ್ತಿದ್ದರೂ, ಒಂದು ವಿಧವಾದ ವಾಸನೆಯು ಸುತ್ತಲೂ ಹೊರಸೂಸುತ್ತಿತ್ತು. ಆ ವಾಸನೆಗೆ ಕಾರಣವನ್ನು ತಿಳಿಯಲು ಯುಧಿಷ್ಠಿರನು ಮನೆಗಾಗಿ ಉಪಯೋಗಿಸಿದ ವಸ್ತುಗಳೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸತೊಡಗಿದನು. ಆ ಅರಮನೆಯು ಇತರ ಸೌಧಗಳಂತೆ ಕೇವಲ ಇಟ್ಟಿಗೆ-ಗಾರೆಗಳಿಂದ ಕಟ್ಟಿದ್ದಲ್ಲವೆಂಬುದೂ, ತುಪ್ಪವನ್ನೂ ಅರಗನ್ನೂ ಮಿಶ್ರಣಮಾಡಿ ಗೋಡೆಗಳನ್ನು ಕಟ್ಟಿದ್ದಾರೆಂಬುದೂ ನಿಶ್ಚಿತವಾಯಿತು. ಒಡನೆಯೇ ಧರ್ಮಜನು ಭೀಮನನ್ನು ಕುರಿತು ಹೇಳಿದನು : "ಭೀಮಸೇನ! ಈ ಮನೆಯು ನಿಶ್ಚಯವಾಗಿಯೂ ಬೇಗನೆ ಹೊತ್ತಿಕೊಳ್ಳುವ ಅಗ್ನಿವರ್ಧಕಗಳಾದ ಪದಾರ್ಥಗಳಿಂದ ಕಟ್ಟಲ್ಪಟ್ಟಿದೆ. ನಮ್ಮ ಶತ್ರುಗಳು ತಮ್ಮ ಆಪ್ತರಿಂದ ಈ ಮನೆಯನ್ನು ಕಟ್ಟಿಸಿರುತ್ತಾರೆ. ಗೃಹಶಿಲ್ಪದಲ್ಲಿ ಚತುರರಾದ ಶಿಲ್ಪಿಗಳು ಅರಗು, ಹುಲ್ಲು, ಬಿದಿರು, ಜೊಂಡು, ತುಪ್ಪ–ಇವೆಲ್ಲವನ್ನೂ ಮಣ್ಣಿನೊಡನೆ ಬೆರೆಸಿ ಈ ಮನೆಯನ್ನು ನಿರ್ಮಿಸಿರುತ್ತಾರೆ. ದುಷ್ಟನಾದ ದುರ್ಯೋಧನನಿಂದ ನಿಯುಕ್ತನಾಗಿರುವ ಈ ಪುರೋಚನನು ನಮ್ಮನ್ನು ದಹಿಸುವುದಕ್ಕಾಗಿಯೇ ಸಮಯವನ್ನು ಕಾಯುತ್ತಲಿದ್ದಾನೆ. ನಮ್ಮ ನಂಬಿಕೆಗೆ ಸಂಪೂರ್ಣವಾಗಿ ಪಾತ್ರನಾಗಲು ಅವನು ಅನೇಕವಾದ ಸನ್ನಾಹಗಳನ್ನು ಮಾಡುತ್ತಲಿದ್ದಾನೆ. ನಿಶ್ಚಯವಾಗಿಯೂ ಚತುರನಾದ ವಿದುರನಿಗೆ ಇದರ ರಹಸ್ಯವು ತಿಳಿದಿದ್ದಿತು. ನಮ್ಮ ಹಿತಚಿಂತನೆಯಲ್ಲಿಯೇ ಸದಾ ನಿರತನಾಗಿರುವ ನಮ್ಮ ಚಿಕ್ಕಪ್ಪನು ನಮ್ಮ ಮೇಲಿನ ಅನುಕಂಪದಿಂದ ಈ ಮನೆಯ ವಿಷಯವಾಗಿ ಹಿಂದೆಯೇ ಹೇಳಿದ್ದನು. ದುರ್ಯೋಧನನ ರಹಸ್ಯವಾದ ನಿರ್ದೇಶನದಂತೆ ಅನಾರ್ಯರಿಂದ ಕಟ್ಟಲ್ಪಡುವ, ನಮ್ಮ ವಾಸಕ್ಕೆ ಸಿದ್ಧಪಡಿಸುವ ಸೌಧವು–ಅಗ್ನಿಸಂಬಂಧವಾದ ಅಪಾಯದಿಂದ ಕೂಡಿರಬಹುದೆಂಬ ಅಭಿಪ್ರಾಯವನ್ನೂ ವಿದುರನು ಸೂಚಿಸಿದ್ದನು."

"ಅಣ್ಣ! ನೀನು ಈ ಮನೆಗೆ ಅಗ್ನಿಯಿಂದ ಅಪಾಯವಿದೆಯೆಂದು ಹೇಳುವೆಯಾದರೆ ಅಥವಾ ಬೇಗನೆ ಹೊತ್ತಿಕೊಳ್ಳುವ ವಸ್ತುಗಳಿಂದಲೇ ಈ

ಮನೆಯು ರಚಿಸಲ್ಪಟ್ಟಿದೆಯೆಂದು ಭಾವಿಸುವೆಯಾದರೆ–ನಾವು ಈ ಮನೆ ಯನ್ನು ಕೂಡಲೇ ಬಿಟ್ಟು, ಹಿಂದೆ ವಾಸಮಾಡುತ್ತಿದ್ದ ಮನೆಗೇ ಹೋಗು ವುದು ಸೂಕ್ತವಲ್ಲವೇ?"

"ಇಲ್ಲ, ಭೀಮ! ಈ ಮನೆಯನ್ನು ಬಿಡುವ ಇಚ್ಛೆಯು ನನಗಿಲ್ಲ. ನಾವು ಇಲ್ಲಿಯೇ ನಮ್ಮ ಜೀವನವನ್ನು ಮುಂದುವರಿಸಬೇಕು. ಈ ಮನೆಯ ವಿಷಯವಾಗಿ ಸಂಶಯಪಟ್ಟಿರುವೆವೆಂಬ ಅಂಶವನ್ನೂ ಹೊರಗೆಡಹಬಾರದು. ಆದರೆ ನಾವು ಯಾವಾಗಲೂ ಜಾಗರೂಕರಾಗಿಯೇ ಇದ್ದುಕೊಂಡು ಕಾಲವು ಸನ್ನಿಹಿತವಾದೊಡನೆಯೇ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಮಾರ್ಗ ವೊಂದನ್ನು ಈಗಲೇ ನಿಶ್ಚಯಿಸಬೇಕು. ಪುರೋಚನನೇನಾದರೂ ನಮ್ಮ ಸಂಶಯಿತಮುಖಭಾವದಿಂದ ತಾನು ಮಾಡುತ್ತಿರುವ ಸನ್ನಾಹವು ನಮಗೆ ಗೊತ್ತಾಗಿದೆಯೆಂದು ತಿಳಿದನಾದರೆ–ತಾನು ಮಾಡಿರುವ ದುಷ್ಟ ಯೋಜನೆಯ ನಿರ್ವಹಣೆಯು ಸಾರ್ಥಕವಾಗಲಾರದೆಂದೆಣಿಸಿ, ಒಡನೆಯೇ ಬೇರೆ ಯಾವುದಾದರೂ ಉಪಾಯದಿಂದ ನಮ್ಮನ್ನು ಸುಟ್ಟುಬಿಡಬಹುದು. ನಿಶ್ಚಯವಾಗಿಯೂ ಅವನು ಈ ಕಾರ್ಯವನ್ನು ಅಧರ್ಮವೆಂದೆಣಿಸುವುದಿಲ್ಲ ಮತ್ತು ಅವನಿಗೆ ಪಾಪದ ಭಯವೂ ಇಲ್ಲ. ದುರ್ಯೋಧನನ ನಿರ್ದೇಶನ ದಂತೆ ಅವನಿಲ್ಲಿ ಕಾರ್ಯಮಾಡುತ್ತಿರುವನು. ನಮ್ಮನ್ನು ಸುಟ್ಟು ಬೂದಿಮಾಡಿ ದರೂ ನಮ್ಮ ಪಿತಾಮಹನಾದ ಭೀಷ್ಮನು ದುರ್ಯೋಧನನ ಮೇಲೆ ಕೋಪ ಗೊಳ್ಳುವನೇ? ಸತ್ತವರ ವಿಷಯವಾಗಿ ಮರುಕಗೊಂಡು ಪ್ರಬಲನಾದ ದುರ್ಯೋಧನನ ಕೋಪಕ್ಕೇಕೆ ಭೀಷ್ಮನು ಪಾತ್ರನಾಗುವನು? ಅಥವಾ ಭೀಷ್ಮನೂ, ಕೆಲವು ಕುರುಮುಖ್ಯರೂ ಪಾಪಕಾರ್ಯವನ್ನು ಖಂಡಿಸುವುದು ಧರ್ಮವೆಂದೆಣಿಸಿ ಆ ಸಮಯದಲ್ಲಿ ಕುಪಿತರಾಗಲೂಬಹುದು. ಆದರೆ ನಾವು ಸತ್ತನಂತರ ಅವರು ದುರ್ಯೋಧನನ ಮೇಲೆ ಮಾಡಿಕೊಳ್ಳಬಹುದಾದ ಕೋಪದಿಂದ ನಮಗಾಗುವ ಪ್ರಯೋಜನವಾದರೂ ಏನಿದೆ?

ಒಂದು ವೇಳೆ ನಾವು ಈಗಲೇ ಭಯಪಟ್ಟು ಈ ಅರಮನೆಯಿಂದ ತಪ್ಪಿಸಿಕೊಂಡು ಹೋಗಿಬಿಟ್ಟರೆ ದುರ್ಯೋಧನನು ನಮ್ಮನ್ನು ಬಿಟ್ಟುಬಿಡುವ ನೆಂದು ಭಾವಿಸಿರುವೆಯಾ? ರಾಜ್ಯಲುಬ್ಧನಾದ ದುರ್ಯೋಧನನು ಗುಪ್ತ

ಚಾರರ ಮೂಲಕ ನಾವಿರುವ ಸ್ಥಳವನ್ನು ಕಂಡುಹಿಡಿದು, ನಮ್ಮನ್ನು ಮುಗಿಸಿ ಬಿಡಬಹುದು. ಅವನಿಗೆ ಇದು ಸುಲಭಸಾಧ್ಯವೂ ಅಹುದು. ಏಕೆಂದರೆ :

**ಅಪದಸ್ಥಾನ್ಪದೇ ತಿಷ್ಠನ್ನಪಕ್ಷಾನ್ಪಕ್ಷಸಂಸ್ಥಿತಃ ।**
**ಹೀನಕೋಶಾನ್ಮಹಾಕೋಶಃ ಪ್ರಯೋಗೈರ್ಘಾತಯೇದ್ಧ್ರುವಮ್ ॥೨೭॥**

**ತದಸ್ಮಾಭಿರಿಮಂ ಪಾಪಂ ತಂ ಚ ಪಾಪಂ ಸುಯೋಧನಮ್ ।**
**ವಞ್ಚಯದ್ಭಿರ್ನಿವಸ್ತವ್ಯಂ ಛನ್ನಾವಾಸಂ ಕ್ವಚಿತ್ಕ್ವಚಿತ್ ॥೨೮॥**

ನಮಗಿಂದು ಯಾವ ವಿಧವಾದ ಸ್ಥಾನ-ಮಾನಗಳೂ ಇರುವುದಿಲ್ಲ. ಇದಕ್ಕೆ ಪ್ರತಿಯಾಗಿ ದುರ್ಯೋಧನನು ಸಾರ್ವಭೌಮನಾಗಿರುವನು. ತಪ್ಪಿಸಿ ಕೊಂಡು ಹೋಗಿ ಅನಾಥರಂತೆ ಅಲೆದಾಡುವ ನಮಗೆ ಮಿತ್ರರೇ ಮೊದಲಾದ ಯಾವ ಸಹಾಯವೂ ಇಲ್ಲ. ದುರ್ಯೋಧನನಿಗೆ ಇವೆರಡೂ ಇರುತ್ತವೆ. ನಾವಿಂದು ಧನಹೀನರಾಗಿದ್ದೇವೆ. ದುರ್ಯೋಧನನು ಬೊಕ್ಕಸಕ್ಕೆ ಒಡೆಯ ನಾಗಿದ್ದಾನೆ. ಈ ಕಾರಣಗಳಿಂದ ಅವನು ಉಪಾಯಾಂತರಗಳಿಂದ ನಮ್ಮನ್ನು ವಿನಾಶಮಾಡಬಹುದು. ಆದುದರಿಂದ ನಾವು ಈ ಸಮಯದಲ್ಲಿ ತಾಳ್ಮೆ ಯಿಂದಿದ್ದು, ಇತ್ತ ಪುರೋಚನನನ್ನೂ–ಅತ್ತ ದುರ್ಯೋಧನನನ್ನೂ ವಂಚಿಸಿ ಇಲ್ಲಿಂದ ತಪ್ಪಿಸಿಕೊಂಡು, ಕೆಲವು ಕಾಲ ಅಜ್ಞಾತವಾಸದಲ್ಲಿರಬೇಕು.

ನಾವು ತಪ್ಪಿಸಿಕೊಂಡು ಹೋಗುವ ಮೊದಲು ಬೇಟೆಯಾಡುವ ನೆಪ ದಲ್ಲಿ ಈ ನಗರದಿಂದ ಹೊರಗೆ ಹೋಗಿ, ಅಲ್ಲಿಂದ ನಾನಾಭಾಗಗಳಿಗೆ ಹೋಗುವ ಮಾರ್ಗಗಳನ್ನು ಅರಿತುಕೊಂಡಿರಬೇಕು. ಇಂದಿನಿಂದಲೇ ನಾವು ನಮ್ಮ ಏಕಾಂತಮಂದಿರದಿಂದ ಅರಮನೆಯ ಹೊರಭಾಗಕ್ಕೆ ಸುರಂಗ ವೊಂದನ್ನು ಅಗೆಯಲು ಪ್ರಾರಂಭಿಸಬೇಕು. ಇದನ್ನು ಮಾತ್ರ ಬಹಳ ರಹಸ್ಯ ವಾಗಿ ಮಾಡಬೇಕು. ಈ ವಿಧವಾದ ರಹಸ್ಯನೀತಿಯನ್ನು ನಾವು ಅನುಸರಿಸಿ ದರೆ ನಮಗೆ ಅಗ್ನಿಯ ಭಯವಿರುವುದಿಲ್ಲ. ಬಹಿರಂಗದಲ್ಲಿ ಬಹಳ ಸಂತೋಷ ವನ್ನೇ ತೋರುತ್ತಲಿದ್ದು, ಅಂತರಂಗದಲ್ಲಿ ನಮ್ಮ ಕಾರ್ಯವನ್ನು ಮಾಡುತ್ತಿರ ಬೇಕು. ನಾವು ರಹಸ್ಯವಾಗಿ ಮಾಡುವ ಕಾರ್ಯವು ಪುರೋಚನನಿಗೆ ಮಾತ್ರವಲ್ಲದೇ ಇಲ್ಲಿಯ ನಾಗರಿಕರಿಗೂ ತಿಳಿಯಬಾರದು."

೧೪೬ನೆಯ ಅಧ್ಯಾಯವು ಮುಗಿಯಿತು.

೧೪೭ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ವಿದುರನ ಮಿತ್ರನಿಂದ ಸುರಂಗನಿರ್ಮಾಣ

ಜನಮೇಜಯ! ಒಂದು ದಿನ ನಿರ್ಜನವಾದ ಪ್ರದೇಶದಲ್ಲಿ ಪಾಂಡವರೈವರೂ ಕುಂತಿಯೊಡನೆ ಕುಳಿತಿದ್ದಾಗ–ಸುರಂಗವನ್ನು ಕೊರೆಯುವುದರಲ್ಲಿ ಬಹಳ ಕುಶಲಿಯಾದ ವಿದುರನ ಮಿತ್ರನೊಬ್ಬನು ಅವರನ್ನು ಸಂಧಿಸಿ, ತನ್ನ ಪರಿಚಯವನ್ನು ಮಾಡಿಕೊಳ್ಳುತ್ತಾ ಹೇಳಿದನು :

"ನಾನು ವಿದುರನ ಸ್ನೇಹಿತನು. ವಿದುರನ ಆದೇಶದಂತೆ ನಾನಿಲ್ಲಿಗೆ ಬಂದಿರುತ್ತೇನೆ."

ವಿದುರನ ಸ್ನೇಹಿತನೆಂಬ ವಿಷಯವನ್ನು ತಿಳಿದೊಡನೆಯೇ ಅವನ ವಿಷಯದಲ್ಲಿ ಪಾಂಡವರಿಗೆ ಆತ್ಮೀಯತೆಯುಂಟಾಯಿತು. ವಿದುರಮಿತ್ರನು ಮುಂದುವರಿದು ಹೇಳಿದನು :

"ನಾನು ವಿದುರನಿಂದಲೇ ಇಲ್ಲಿಗೆ ಕಳುಹಿಸಲ್ಪಟ್ಟಿದ್ದೇನೆ. ನನಗೆ ಸುರಂಗವನ್ನು ಕೊರೆಯುವುದರಲ್ಲಿ ಹೆಚ್ಚು ಪರಿಶ್ರಮವಿದೆ. ಈಗ ನಾನು ನಿಮ್ಮ ಸೇವೆಗೆಂದೂ, ನಿಮಗೆ ಪ್ರಿಯವಾದ ಕಾರ್ಯಮಾಡಲೆಂದೂ ಬಂದಿರುವೆನು. ನಾನೇನು ಮಾಡಬೇಕೆಂಬುದನ್ನು ದಯೆಯಿಟ್ಟು ಹೇಳಿರಿ."

ವಿದುರಮಿತ್ರನು ಪುನಃ ಹೇಳಿದನು : "ವಿದುರನಿಗೆ ನನ್ನ ಮೇಲೆ ಬಹಳ ಪ್ರೀತಿಯಿದೆ. ಅಂತೆಯೇ ನಂಬಿಕೆಯೂ ಇದೆ. ಈ ಕಾರಣದಿಂದ ಅವನು ನನ್ನನ್ನು ಕರೆದು–'ಪಾಂಡವರ ಬಳಿಗೆ ಈಗಲೇ ಹೋಗಿ ಅವರಿಗೆ ಒಳ್ಳೆಯದನ್ನು ಮಾಡು'–ಎಂದು ಹೇಳಿರುವನು. ನಿಮಗೆ ಒಳ್ಳೆಯದಾಗಲು, ನೀವಿಲ್ಲಿಂದ ಪಾರಾಗಲು ನಾನೇನು ಮಾಡಬೇಕೆಂಬುದನ್ನು ಕೂಡಲೇ ಹೇಳಿರಿ. ಪುರೋಚನನು ಕೃಷ್ಣಪಕ್ಷದ ಚತುರ್ದಶಿಯಂದು ನಿಮ್ಮ ಅರಮನೆಗೆ ಬೆಂಕಿಯಿಡಲು ನಿಶ್ಚಯಿಸಿರುವನು. ತಾಯಿಯೊಡನೆ ವಾಸಮಾಡುತ್ತಿರುವ ಪಾಂಡವರೈವರನ್ನೂ ಜೀವಸಹಿತವಾಗಿ ಸುಟ್ಟು ಬೂದಿಮಾಡಬೇಕೆಂಬುದೇ ದುಷ್ಟದುರ್ಯೋಧನನ ದುರಾಲೋಚನೆಯಾಗಿದೆ. ಪಾಂಡುಪುತ್ರನೇ! ನೀನು ಹಾಸ್ತಿನಪುರದಿಂದ ವಾರಣಾವತಕ್ಕೆ ಪ್ರಯಾಣಹೊರಟ ಕಾಲದಲ್ಲಿ ವಿದುರನು ಮ್ಲೇಚ್ಛಭಾಷೆಯಲ್ಲಿ ಕೆಲವು ವಿಷಯಗಳನ್ನು ಹೇಳಿದನಲ್ಲವೇ? ಅವನು

ಮಾತು ಮುಗಿಸಿದನಂತರ ನೀನು ಸಹ ಅದೇ ಭಾಷೆಯಲ್ಲಿ ಉತ್ತರಿಸಿದೆ ಯಲ್ಲವೇ? ನನ್ನ ಮೇಲೆ ಸ್ವಲ್ಪವಾದರೂ ಅಪನಂಬಿಕೆಯಿಡುವ ಕಾರಣವಿಲ್ಲ ವೆಂಬುದನ್ನು ದೃಢಪಡಿಸಲು ನಾನು ಈ ವಿಷಯವನ್ನು ನಿನ್ನೊಡನೆ ಹೇಳು ತ್ತಿದ್ದೇನೆ. ಇನ್ನಾದರೂ ನಾನು ವಿದುರನ ಮಿತ್ರನೆಂಬುದನ್ನು ನಂಬಿ, ನಾನೇನು ಮಾಡಬೇಕೆಂಬುದನ್ನು ಕೂಡಲೇ ಹೇಳು, ಯುಧಿಷ್ಠಿರ!"

ಅದನ್ನು ಕೇಳಿದನಂತರ ಯುಧಿಷ್ಠಿರನಿಗೆ ಹೊಸಮನುಷ್ಯನ ವಿಷಯ ದಲ್ಲಿ ಸಂಶಯವು ಉಳಿಯಲಿಲ್ಲ. ಅವನನ್ನು ಕುರಿತು ಹೇಳತೊಡಗಿದನು :

"ಪುರುಷಶ್ರೇಷ್ಠನೇ! ನೀನು ವಿದುರನ ಮಿತ್ರನೆಂಬುದನ್ನೂ, ವಿದುರನ ನಂಬಿಕೆಗೆ ಸಂಪೂರ್ಣವಾಗಿ ಪಾತ್ರನಾಗಿರುವೆಯೆಂಬುದನ್ನೂ ತಿಳಿದೆನು. ಪ್ರಾಜ್ಞನಾದ ವಿದುರನಿಗೆ ತಿಳಿಯದ ವಿಷಯವೇ ಇಲ್ಲ. ಅವನಿಗೆ ನೀನು ಹೇಗೆ ಆಪ್ತನಾಗಿರುವೆಯೋ–ಹಾಗೆಯೇ ನಮಗೂ ಆಪ್ತನಾಗಿರುವೆ. ನಮ್ಮಿರ್ವರಲ್ಲಿ ಭೇದವೆಣಿಸುವ ಕಾರಣವೇ ಇಲ್ಲ. ನಾವು ವಿದುರನಿಗೆ ಸೇರಿದವರಾಗಿರುವಂತೆ ನಿನ್ನವರೂ ಆಗಿರುತ್ತೇವೆ. ಆದುದರಿಂದ ವಿದುರನು ಯಾವಾಗಲೂ ನಮ್ಮನ್ನು ರಕ್ಷಿಸುವಂತೆ ನೀನೂ ರಕ್ಷಿಸು. ಅಗ್ನಿಸಂಬಂಧವಾದ, ಬೇಗನೆ ಹೊತ್ತಿಕೊಳ್ಳುವ ವಸ್ತುಗಳಿಂದಲೇ ಈ ಮನೆಯು ದುರ್ಯೋಧನನ ಆದೇಶದಂತೆ ಪುರೋಚನನಿಂದ ಕಟ್ಟಲ್ಪಟ್ಟಿದೆಯೆಂಬ ವಿಷಯವನ್ನು ನಾನೂ ಅರಿತಿ ರುವೆನು. ಬೊಕ್ಕಸವನ್ನೂ ಮತ್ತು ಮಿತ್ರರಾಜರನ್ನೂ ತನ್ನ ಸ್ವಾಧೀನ ದಲ್ಲಿಟ್ಟುಕೊಂಡಿರುವ ಆ ದುಷ್ಟನು ನಮ್ಮನ್ನು ವಿನಾಶಮಾಡಲು ಅನುದಿನವೂ ಪ್ರಯತ್ನಿಸುತ್ತಲೇ ಇದ್ದಾನೆ. ಆದುದರಿಂದ ಸ್ವಲ್ಪ ಶ್ರಮವಹಿಸಿ ಮುಂದೆ ಸಂಭವಿಸಲಿರುವ ಅಪಾಯದಿಂದ ನಮ್ಮನ್ನು ಸಂರಕ್ಷಿಸು. ನಾವು ಜೀವಸಹಿತ ವಾಗಿ ಭಸ್ಮವಾಗಿಹೋಗಿಬಿಟ್ಟರೆ ದುರ್ಯೋಧನನ ಇಚ್ಛೆಯೇನೋ ನೆರವೇರಿ ದಂತಾಗುವುದು. ಈ ಅರಮನೆಯ ಸಮೀಪದಲ್ಲಿಯೇ ಆ ದುಷ್ಟನ ಆಯುಧಾಗಾರವೂ ಇದೆ. ಆಕಸ್ಮಿಕವಾಗಿ ಉಂಟಾಗುವ ಅಪಾಯದಿಂದ ತಪ್ಪಿಸಿಕೊಳ್ಳಲೂ ಸಾಧ್ಯವಾಗದಂತೆ ಈ ದೊಡ್ಡ ಅರಮನೆಯು ಕೋಟೆಯ ಪಕ್ಕದಲ್ಲಿಯೇ ಉದ್ದೇಶಪೂರ್ವಕವಾಗಿಯೇ ಕಟ್ಟಲ್ಪಟ್ಟಿದ್ದು, ಒಂದೇ ಬಾಗಿಲಿ ನಿಂದ ಕೂಡಿರುವುದು. ಆದರೆ ವಿದುರನಿಗೆ ಆ ದುರುಳನ ದುಷ್ಟಯೋಜನೆ ಗಳೆಲ್ಲವೂ ಮೊದಲೇ ತಿಳಿದಿದ್ದುವು. ಈ ವಿಷಯವನ್ನು ಮೊದಲೇ ನಮಗೆ

ವಿದುರನು ಸೂಚಿಸಿದ್ದನು. ಅವನು ಅಂದು ಸೂಚಿಸಿದ್ದ ಅಪಾಯವು ಇಂದು ಸನ್ನಿಹಿತವಾಗಿದೆ. ಪುರೋಚನನಿಗೆ ನಾವು ಅಪಾಯದಿಂದ ಪಾರಾಗುವೆವೆಂಬ ವಿಷಯವು ತಿಳಿಯದ ರೀತಿಯಲ್ಲಿ ನೀನಿಂದು ನಮ್ಮನ್ನು ರಕ್ಷಿಸಬೇಕು."

ವಿದುರಮಿತ್ರನು ಹಾಗೆಯೇ ಆಗಲೆಂದು ಹೇಳಿ ತನ್ನ ಕಾರ್ಯಕ್ಕೆ ಮೊದಲಿಟ್ಟನು. ಕೆಲವೇ ದಿನಗಳಲ್ಲಿ ಕೋಟೆಯ ಪಕ್ಕದಲ್ಲಿದ್ದ ಕಂದಕವನ್ನು ಸರಿಮಾಡುವ ನೆಪಮಾಡಿಕೊಂಡು ಒಂದು ದೊಡ್ಡ ಸುರಂಗವನ್ನು ನಿರ್ಮಾಣಮಾಡಿದನು. ಆ ಸುರಂಗವು ಅರಮನೆಯ ನಡುಭಾಗದಿಂದ ಕೊರೆಯಲ್ಪಟ್ಟಿತ್ತು. ಅದು ಹೊರಗೆ ಕಾಣದ ರೀತಿಯಲ್ಲಿ ಅದರ ದ್ವಾರವು ನೆಲಕ್ಕೆ ಸಮನಾಗಿ ಮುಚ್ಚಲ್ಪಟ್ಟಿತ್ತು. ಪುರೋಚನನಿಗೆ ಅದರ ಸುಳಿವು ಸ್ವಲ್ಪವೂ ತಿಳಿಯಕೂಡದೆಂದು ಸಕಲರೀತಿಯ ಮುನ್ನೆಚ್ಚರಿಕೆಯನ್ನೂ ತೆಗೆದುಕೊಳ್ಳ ಲಾಗಿತ್ತು. ಪುರೋಚನನೂ ಅರಮನೆಯ ಮಹಾದ್ವಾರದ ಸಮೀಪದಲ್ಲಿಯೇ ಬಿಡಾರಮಾಡಿಕೊಂಡಿದ್ದು ತನ್ನ ಯೋಜನೆಯನ್ನು ಪೂರೈಸಲು ಕಾಲವನ್ನು ನಿರೀಕ್ಷಿಸುತ್ತಿದ್ದನು. ಪಾಂಡವರು ರಾತ್ರಿಯಲ್ಲಿ ಮಲಗುವಾಗ ಆಯುಧ ಗಳನ್ನು ಸಜ್ಜುಗೊಳಿಸಿಟ್ಟುಕೊಂಡು ಮಲಗುತ್ತಿದ್ದರು. ಹಗಲೆಲ್ಲಾ ಬೇಟೆ ಯಾಡುವುದರಲ್ಲಿಯೇ ಕಾಲಕಳೆಯುತ್ತಿದ್ದರು. ದಿನಕ್ಕೆ ಒಂದೆರಡು ಬಾರಿ ಪುರೋಚನನನ್ನು ಕರೆಯಿಸಿ ಅವನು ಪ್ರತಿನಿತ್ಯವೂ ಒದಗಿಸುತ್ತಿದ್ದ ಸಂಭಾರ ಗಳಿಗಾಗಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾ ಪುರೋಚನನು ತಮ್ಮ ನಂಬಿಕೆಗೆ ಸಂಪೂರ್ಣಪಾತ್ರನಾಗಿರುವನೆಂಬ ಅಭಿಪ್ರಾಯವನ್ನು ಸೂಚಿಸು ತ್ತಿದ್ದರು. ಈ ಕಾರಣದಿಂದ ಪಾಂಡವರ ಹೃದಯದಲ್ಲಿದ್ದ ಪುರೋಚನನ ಮೇಲಿದ್ದ ಅಪನಂಬಿಕೆಯು ಪುರೋಚನನಿಗೆ ತಿಳಿಯಲು ಸಾಧ್ಯವಾಗಲಿಲ್ಲ ವೆಂದ ಮೇಲೆ ವಾರಣಾವತದ ನಾಗರಿಕರಿಗೆ ಅದರ ಸುಳಿವಾದರೂ ತಿಳಿಯುವುದೆಂತು? ವಿದುರಮಿತ್ರನೊಬ್ಬನು ಮಾತ್ರ ಇವೆಲ್ಲವನ್ನೂ ತಿಳಿದವನಾಗಿದ್ದನು.

೧೪೭ನೆಯ ಅಧ್ಯಾಯವು ಮುಗಿಯಿತು.

## ಅರಗಿನ ಮನೆಯ ದಹನ: ಪಾಂಡವರ ನಿರ್ಗಮನ

ಜನಮೇಜಯ! ವರ್ಷಪರ್ಯಂತವೂ ಸ್ವಲ್ಪವಾದರೂ ಸಂಶಯವನ್ನು ತೋರ್ಪಡಿಸದೇ ಯಾವಾಗಲೂ ನಗುನಗುತ್ತಲಿದ್ದ ಪಾಂಡವರನ್ನು ಕಂಡು ಪುರೋಚನನಿಗೆ ಬಹಳ ಸಂತೋಷವಾಯಿತು. ತನ್ನ ಕಾರ್ಯವನ್ನು ಪೂರ್ಣಮಾಡಲು ಕಾಲವೊದಗಿತೆಂಬುದೇ ಪುರೋಚನನ ಸಂತೋಷಕ್ಕೆ ಕಾರಣ. ಪುರೋಚನನ ಹೃದಯದ ಇಂಗಿತವನ್ನು ಯುಧಿಷ್ಠಿರನು ಅವನ ಮುಖಾವಲೋಕನದಿಂದಲೇ ಅರಿತು ಅನುಜರನ್ನು ಕುರಿತು ಹೇಳಿದನು : "ಸಹೋದರರೇ! ಪಾಪಿಷ್ಠನಾದ ಪುರೋಚನನನ್ನು ಸಂಪೂರ್ಣವಾಗಿ ವಂಚಿಸಿದ್ದಾಯಿತು. ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಇದು ಉತ್ತಮಸಮಯವಾಗಿದೆ. ಅರಮನೆಗೆ ಸೇರಿದಂತೆಯೇ ಇರುವ ಆಯುಧಾಗಾರಕ್ಕೆ ಬೆಂಕಿ ಹಚ್ಚಿಸಿ, ಪುರೋಚನನನ್ನೂ ಇಲ್ಲಿಯೇ ಭಸ್ಮವಾಗುವಂತೆ ಮಾಡಿ, ಆರು ಪ್ರಾಣಿಗಳನ್ನು ನಮ್ಮ ಸ್ಥಳದಲ್ಲಿಟ್ಟು ಯಾರಿಗೂ ತಿಳಿಯದಂತೆ ತಪ್ಪಿಸಿಕೊಂಡು ಹೋಗಬೇಕು."

ಯುಧಿಷ್ಠಿರನ ಮಾತಿಗೆ ಎಲ್ಲರೂ ಸಮ್ಮತಿಯನ್ನಿತ್ತರು. ಒಂದು ನಿರ್ದಿಷ್ಟದಿನದ ರಾತ್ರಿಯಲ್ಲಿ ದಾನಕೊಡಬೇಕೆಂಬ ವ್ಯಾಜದಿಂದ ಕುಂತಿಯು ಅನೇಕ ಬ್ರಾಹ್ಮಣ-ಸುವಾಸಿನಿಯರನ್ನು ಅರಮನೆಗೆ ಕರೆದು ಮೃಷ್ಟಾನ್ನ ಭೋಜನಮಾಡಿಸಿ, ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಟ್ಟಳು. ಬಂದ ಬ್ರಾಹ್ಮಣ ಸುವಾಸಿನಿಯರೆಲ್ಲರೂ ಸಂತುಷ್ಟರಾಗಿ ಕುಂತಿಯ ಅಪ್ಪಣೆ ಪಡೆದು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು. ಅನಾಹೂತಳಾದರೂ–ದೈವದಿಂದ ಆಹೂತಳಾಗಿ ಬಂದವಳಂತೆ–ಪಂಚಪುತ್ರರಿಂದೊಡಗೂಡಿದ ನಿಷಾದಿಯೊಬ್ಬಳು ಆಹಾರಾಪೇಕ್ಷೆಯಿಂದ ಅರಮನೆಗೆ ಬಂದಳು. ಯಥೇಚ್ಛವಾಗಿ ಆಹಾರವನ್ನು ಭಕ್ಷಿಸಿದುದು ಮಾತ್ರವಲ್ಲದೇ ಮಿತಿಮೀರಿ ಮದ್ಯವನ್ನೂ ಕುಡಿದು ಮತ್ತಳಾಗಿ ಅರಮನೆಯಿಂದ ಹೊರಗೆ ಹೋಗಲು ಕೂಡ ಸಾಧ್ಯವಾಗದೇ ಜ್ಞಾನಶೂನ್ಯಳಾಗಿ, ಮೃತಪ್ರಾಯಳಾಗಿ ತನ್ನ ಐವರು

ಮಕ್ಕಳೊಡನೆ ಅರಗಿನ ಮನೆಯಲ್ಲಿಯೇ ಮಲಗಿದಳು. ಗಾಢನಿದ್ರೆಯು ನಿಷಾದಿಯನ್ನೂ ಅವಳ ಐವರು ಮಕ್ಕಳನ್ನೂ ಆವರಿಸಿತು.

ಕಾಳರಾತ್ರಿ. ಮಾರುತನ ಪ್ರಭಾವವು ಬಹಳ ಪ್ರಬಲವಾಗಿತ್ತು. ಗಾಳಿಯ 'ಸೊಯ್' ಎಂಬ ಶಬ್ದದ ಹೊರತಾಗಿ ಮತ್ತಾವ ಶಬ್ದವೂ ಕೇಳಿ ಬರುತ್ತಿರಲಿಲ್ಲ. ನಗರದ ಪ್ರಜೆಗಳೆಲ್ಲರೂ ಗಾಢನಿದ್ರೆಯಲ್ಲಿದ್ದರು. ಆ ಸಮಯದಲ್ಲಿ ಭೀಮನು ದೊಡ್ಡದಾದ ಪಂಜೊಂದನ್ನು ಹೊತ್ತಿಸಿಕೊಂಡು ಮೊದಲು ಪುರೋಚನನ ಬಿಡಾರಕ್ಕೆ ಬೆಂಕಿಯಿಟ್ಟನು. ಅನಂತರ ಅರಗಿನ ಮನೆಯ ಬಾಗಿಲಿಗೂ, ಮನೆಯ ನಾಲ್ಕು ಕಡೆಗಳಿಗೂ ಬೆಂಕಿಯನ್ನು ಹೊತ್ತಿಸಿದನು. ಗಾಳಿಯ ಪ್ರಭಾವದಿಂದ ಅರಗಿನ ಮನೆಯು ಉರಿಯಲು ಪ್ರಾರಂಭವಾಯಿತೆಂದು ತಿಳಿದೊಡನೆಯೇ ತಾಯಿಯಿಂದೊಡಗೂಡಿದ ಪಾಂಡುನಂದನರು ಸುರಂಗವನ್ನು ಪ್ರವೇಶಿಸಿದರು.

ಅರಗಿನ ಮನೆಯ ಪಕ್ಕದಲ್ಲಿದ್ದ ಆಯುಧಾಗಾರವೂ ಹೊತ್ತಿಕೊಂಡು ಉರಿಯತೊಡಗಿತು. ವಾರಣಾವತದ ಜನರೆಲ್ಲರೂ ಛಟ-ಪಟಾ ಶಬ್ದಗಳಿಂದಲೂ–ಬೆಂಕಿಯ ಜ್ವಾಲೆಗಳಿಂದಲೂ ನಿದ್ದೆಯಿಂದ ಎಚ್ಚರಗೊಂಡವರಾಗಿ ಕಾಳರಾತ್ರಿಯಲ್ಲಿ ನಗರದ ಸುತ್ತಲೂ ಬೆಳಕುಚೆಲ್ಲುತ್ತಾ ಧಗ-ಧಗನೆ ಉರಿಯುತ್ತಿದ್ದ ಅರಮನೆಯ ಕಡೆಗೆ ಧಾವಿಸಿದರು. ಅರಮನೆಯ ನಾಲ್ಕೂ ಕಡೆಗಳಲ್ಲಿಯೂ ಬೆಂಕಿಯು ಉರಿಯುತ್ತಿದ್ದುದರಿಂದ ಯಾರೂ ಮುಂದೆ ಹೋಗಿ ಬೆಂಕಿಯನ್ನಾರಿಸುವ ಸಾಹಸವನ್ನು ಮಾಡಲಿಲ್ಲ. ಧಗ-ಧಗನೆ ಉರಿಯುತ್ತಿದ್ದ ಬೆಂಕಿಯನ್ನು ನೋಡುತ್ತಾ ಅರಮನೆಯೊಳಗಿದ್ದ ಪಾಂಡವರ ದುರವಸ್ಥೆಯನ್ನು ನೆನೆದು ನಾಗರಿಕರೆಲ್ಲರೂ ಕುಂದಿದ ಮುಖದಿಂದ ಕೂಡಿದವರಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು :

"ದುರ್ಯೋಧನನಿಂದ ನಿರ್ದೇಶನವನ್ನು ಪಡೆದ ಪಾಪಿಷ್ಠನಾದ ಪುರೋಚನನಿಂದ ಆತ್ಮವಿನಾಶಕ್ಕಾಗಿಯೇ ಈ ಮನೆಯು ಕಟ್ಟಲ್ಪಟ್ಟು ದಹಿಸಲ್ಪಟ್ಟಿತು. ನಿಷ್ಕಳಂಕರಾದ ಪಾಂಡುಪುತ್ರರನ್ನು ಶತ್ರುಗಳೆಂದು ಭಾವಿಸಿ, ಅವರ ವಿನಾಶಕ್ಕೆ ಕಾರಣನಾದ, ಪಕ್ಷಪಾತಿಯಾದ ಧೃತರಾಷ್ಟ್ರನಿಗೆ ಧಿಕ್ಕಾರ!"

ಜನರ ಆ ಧಿಕ್ಕಾರಶಬ್ದಗಳು ನಭೋಮಂಡಲವನ್ನೂ ವ್ಯಾಪಿಸಿದುವು. ಪುರೋಚನನೂ ಭಸ್ಮವಾಗಿ ಹೋಗಿದ್ದುದರಿಂದ ಜನರೆಲ್ಲರೂ ಸಂತೋಷ ದಿಂದ ಚೀತ್ಕಾರಮಾಡುತ್ತಾ ಹೇಳತೊಡಗಿದರು :

"ಪಾಪಿಗೆ ತಕ್ಕ ಶಾಸ್ತಿಯಾಯಿತು. ಪಾಪರಹಿತರಾದ, ಸಂಪೂರ್ಣ ವಿಶ್ವಾಸದಿಂದಿದ್ದ, ಪುಣ್ಯಾತ್ಮರಾದ ಪಾಂಡವರನ್ನು ದಹಿಸಿದ, ವಿಶ್ವಾಸಘಾತಕ ನಾದ, ಪಾಪಿಷ್ಠನಾದ ಪುರೋಚನನೂ ದಗ್ಧನಾಗಿ ಹೋಗಿದ್ದಾನೆ. ಹಾಗೆಯೇ ಆಗಬೇಕು"–ಎನ್ನುತ್ತಾ ಪಟ್ಟಣಿಗರು ಪಾಂಡವರನ್ನು ನೆನೆದು ಅವರಿಗಾಗಿ ಗೋಳಿಡುತ್ತಾ, ಅರಮನೆಯ ಸುತ್ತಲೂ ನಿಂತುಕೊಂಡೇ ಆ ರಾತ್ರಿಯನ್ನು ಕಳೆದರು.

ಇತ್ತಲಾಗಿ ಪಾಂಡವರೆಲ್ಲರೂ ತಾಯಿಯಾದ ಕುಂತಿಯೊಡನೆ ಸುರಂಗ ದಿಂದ ಹೊರಕ್ಕೆ ಬಂದು ಯಾರಿಗೂ ತಿಳಿಯದ ರೀತಿಯಲ್ಲಿ ಧಾವಿಸತೊಡ ಗಿದರು. ಆದರೆ ನಿದ್ರೆಯಿಲ್ಲದೇ ಭೀತಿಯಿಂದ ಬಳಲಿದ್ದ ಅವರಿಗೆ ವೇಗವಾಗಿ ನಡೆಯಲೂ ಸಾಧ್ಯವಾಗಲಿಲ್ಲ.

ಭೀಮಸೇನನು ಸಹೋದರರ ಮತ್ತು ತಾಯಿಯ ಅವಸ್ಥೆಯನ್ನು ನೋಡಿದನು. ಹೀಗೆಯೇ ನಡೆದರೆ ಹೆಚ್ಚುದೂರ ಹೋಗಲು ಸಾಧ್ಯವಾಗಲಾರ ದೆಂದು ಎಲ್ಲರಿಗೂ ಮನವರಿಕೆಯಾಯಿತು. ಮುಂದೆ ಮಾಡುವುದೇನು? ಎಲ್ಲರೂ ಭೀಮನ ಮುಖವನ್ನೇ ನೋಡತೊಡಗಿದರು. ಮಹಾಪರಾಕ್ರಮಿ ಯಾದ ಭೀಮನು ತನ್ನ ಬೃಹದಾಕಾರದ ಶರೀರವನ್ನೊಮ್ಮೆ ವೀಕ್ಷಿಸಿ, ತಾಯಿ ಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡನು. ನಕುಲ-ಸಹದೇವರನ್ನು ಎರಡು ಕಂಕುಳುಗಳಲ್ಲಿ ಎತ್ತಿಕೊಂಡು, ಯುಧಿಷ್ಠಿರ-ಪಾರ್ಥರನ್ನು ಕೈಗಳಿಂದಲೇ ತಬ್ಬಿ ಕೊಂಡು ಓಡಲಾರಂಭಿಸಿದನು. ಅವನಿಗೆ ಎದುರಾಗಿ ಸಿಕ್ಕಿದ ಎಷ್ಟೋ ಮರ-ಗಿಡಗಳು ಬೇರುಸಹಿತವಾಗಿ ಕಳಚಿ ಬೀಳುತ್ತಿದ್ದುವು. ಅವನು ಹೆಜ್ಜೆಯಿಡು ತ್ತಿದ್ದ ಜಾಗಗಳಲ್ಲಿ ಭೂಮಿಯು ಕುಸಿದು ಹಳ್ಳವು ಬೀಳುತ್ತಿದ್ದಿತು. ಅವನು ಹೋದ-ಹೋದಲ್ಲಿ ಮರ-ಗಿಡಗಳೆಲ್ಲವೂ ಕೆಳಗುರುಳಿ, ಹಳ್ಳಗಳೆಲ್ಲವೂ ಮುಚ್ಚಿ ಮುಂದೆ ದಾರಿಯಾಗುತ್ತಿತ್ತೇ ಹೊರತು ದಾರಿಯನ್ನು ಹುಡುಕಿ ಕೊಂಡು ಭೀಮನು ಹೋಗುತ್ತಿರಲಿಲ್ಲ. ಈ ರೀತಿಯಾಗಿ ವಾಯುವೇಗಕ್ಕೆ

ಸಮಾನವಾಗಿ ಓಡುತ್ತಿದ್ದ, ತೇಜಸ್ವಿಯಾದ ವೃಕೋದರನು ಬಹಳ ಬೇಗನೆ ಅನೇಕ ದರೀ-ದುರ್ಗಗಳನ್ನು ದಾಟಿಕೊಂಡು ಮುಂದೆ ಹೋದನು.

ಗ೪೮ನೆಯ ಅಧ್ಯಾಯವು ಮುಗಿಯಿತು.

೧೪೯ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ವಿದುರನು ಕಳುಹಿಸಿದ ನಾವೆಯಿಂದ ಪಾಂಡವರ ಗಂಗಾವತರಣ

ಪಾರಿಕ್ಷಿತ! ಭೀಮನಿಗೆ ಗಂಗಾನದಿಯು ಅಡ್ಡಲಾಗಿ ಬಂದಿತು. ನದಿಯ ತೀರದಲ್ಲಿ ಎಲ್ಲರನ್ನೂ ಇಳಿಸಿದನು. ಒಬ್ಬೊಬ್ಬರೂ ಒಂದೊಂದೆಡೆ ಯಲ್ಲಿಳಿದು ನದಿಯನ್ನು ದಾಟಲು ಅನುಕೂಲವಾದ ಸ್ಥಳವನ್ನು ಪರೀಕ್ಷಿಸು ತ್ತಿದ್ದರು. ನದಿಯ ಪಾತ್ರವು ಹೆಚ್ಚು ವಿಸ್ತಾರವಾಗಿರುವ ಸ್ಥಳದಲ್ಲಿ ಆಳವು ಕಮ್ಮಿಯಾಗಿದ್ದು ದಾಟಲು ಸುಲಭವಾಗುವುದು. ಅವರು ಎಷ್ಟೇ ಪ್ರಯತ್ನ ಪಟ್ಟರೂ ಕಾಲ್ನಡಿಗೆಯಿಂದಲೇ ನದಿಯನ್ನು ದಾಟುವ ಸ್ಥಳವನ್ನು ಕಂಡು ಹಿಡಿಯಲು ಸಾಧ್ಯವಾಗಲಿಲ್ಲ. ಆ ವೇಳೆಗೆ ಸರಿಯಾಗಿ ನಿರ್ಜನವಾಗಿದ್ದ ಆ ಅರಣ್ಯಪ್ರದೇಶದಿಂದ ನಾವಿಕರ ವೇಷವನ್ನು ಧರಿಸಿದ್ದ ಮನುಷ್ಯ ನೊಬ್ಬನು ಪಾಂಡವರ ಸಮೀಪಕ್ಕೆ ಬಂದು–"ಯುಧಿಷ್ಠಿರ! ನಾವೆಯ ಹೊರತಾಗಿ ಕಾಲ್ನಡಿಗೆಯಿಂದ ಈ ನದಿಯನ್ನು ದಾಟಲು ಸಾಧ್ಯವಿಲ್ಲ. ಎಲ್ಲೆಡೆಗಳಲ್ಲಿಯೂ ನದಿಯ ಆಳವು ಹೆಚ್ಚಾಗಿಯೇ ಇರುವುದು. ನಿಮ್ಮನ್ನು ದಾಟಿಸುವ ಸಲುವಾಗಿಯೇ ಯಂತ್ರಸಹಿತವಾದ ನಾವೆಯು ಸಿದ್ಧವಾಗಿರು ವುದು. ಮೇಧಾವಿಯಾದ ವಿದುರನು–ಗೂಢಚಾರರ ಮೂಲಕ ದುರ್ಯೋ ಧನನ ಕೃತ್ಯಗಳೆಲ್ಲವನ್ನೂ ತಿಳಿದು, ನೀವು ಈ ವೇಳೆಗೆ ನದಿಯ ಸಮೀಪಕ್ಕೆ ಬಂದು, ಮುಂದೆ ದಾಟಲು ಸಾಧ್ಯವಾಗದೇ ಶತ್ರುಗಳ ವಶರಾಗಬೇಕಾಗಬಹು ದೆಂಬ ಮುಂದಾಲೋಚನೆಯಿಂದ–ನಿಮ್ಮನ್ನು ದಾಟಿಸಲು ಯಂತ್ರಯುಕ್ತ ವಾದ ನಾವೆಯೊಡನೆ ನನ್ನನ್ನು ಕಳುಹಿಸಿರುವನು"–ಎಂದು ಹೇಳಿ, ಪಾಂಡವ ರನ್ನು ನೌಕೆಯ ಬಳಿಗೆ ಕರೆದುಕೊಂಡುಹೋಗಿ, ಅದರ ರಚನೆಯನ್ನು ವಿವರಿಸಿ ಹೇಳಿದನು. ಅತಿಚತುರರಾದ ನೌಕಾರಚನಾನಿಪುಣರಿಂದ ನಿರ್ಮಿಸಲ್ಪಟ್ಟಿದ್ದ ಯಂತ್ರನೌಕೆಯು, ಗಾಳಿಯನ್ನೂ–ಅಲೆಗಳನ್ನೂ ಎದುರಿಸಿ ನಿಲ್ಲುವ ರಚನಾ

ವಿಶೇಷದಿಂದ ಕೂಡಿದ್ದುದಲ್ಲದೇ–ವಾಯುವೇಗ-ಮನೋವೇಗಗಳಿಗೂ ಮಿಗಿಲಾದ ವೇಗದಿಂದ ಹೋಗುವುದೂ ಆಗಿದ್ದಿತು. ಅದನ್ನು ನೋಡಿದೊಡನೆಯೇ ಪಾಂಡವರು ನಾವೆಯನ್ನು ಹತ್ತಿ ಕುಳಿತುಕೊಳ್ಳಲಿಲ್ಲ. ಅವರ ಮನಸ್ಸಿನಲ್ಲಿನ್ನೂ ಭಯವೇ ಇದ್ದಿತು. ತಮ್ಮ ಮುಂದಿರುವ ನೌಕೆಯು ವಿದುರನು ಕಳುಹಿಸಿದ ನಾವೆಯೋ? ಅಥವಾ ಬೇರೆಯೋ? ಎಂಬ ಸಂಶಯವೂ ಅವರಿಗೆ ಉಂಟಾಯಿತು. ಏಕೆಂದರೆ : ಬೇರಾವುದಾದರೂ ನೌಕೆಯಾಗಿದ್ದರೆ ಅವರು ಅರಗಿನ ಮನೆಯಿಂದ ತಪ್ಪಿಸಿಕೊಂಡು ಬಂದಿರುವ ವಿಷಯವು ಕೂಡಲೇ ದುರ್ಯೋಧನನಿಗೆ ತಿಳಿದುಬಿಡಬಹುದಾಗಿತ್ತು.

ಕ್ಷಣಕಾಲ ಭ್ರಾಂತರಾಗಿ ನಿಂತಿದ್ದ ಪಾಂಡವರ ಅಭಿಪ್ರಾಯವನ್ನು ತಿಳಿದ ನಾವಿಕನು ಪುನಃ ಹೇಳತೊಡಗಿದನು : "ಯುಧಿಷ್ಠಿರ! ನಾನು ಮಹಾನುಭಾವನಾದ ವಿದುರನಿಂದಲೇ ಕಳುಹಿಸಲ್ಪಟ್ಟಿರುವೆನು. ಇದರಲ್ಲಿ ಸಂಶಯಪಡುವ ಕಾರಣವಿಲ್ಲ.

**ಕಕ್ಷಘ್ನಃ ಶಿಶಿರಘ್ನಶ್ಚ ಮಹಾಕಕ್ಷೇ ಬಿಲೌಕಸಃ ।**
**ನ ಹನ್ತೀತ್ಯೇವಮಾತ್ಮಾನಂ ಯೋ ರಕ್ಷತಿ ಸ ಜೀವತಿ ॥೭॥**

'ಒಣಹುಲ್ಲನ್ನೂ ಪೊದರುಗಳನ್ನೂ ಸುಟ್ಟುಹಾಕುವ, ಶೀತವನ್ನು ಹೋಗಲಾಡಿಸುವ ಅಗ್ನಿಯು ಒಣಮರಗಳಿರುವ ಮಹಾರಣ್ಯವನ್ನೇ ವ್ಯಾಪಿಸಿಕೊಂಡಿದ್ದರೂ ಬಿಲದಲ್ಲಿರುವ ಇಲಿ, ಹಾವು ಮುಂತಾದ ಪ್ರಾಣಿಗಳನ್ನು ಕೊಲ್ಲಲು ಸಮರ್ಥವಾಗುವುದಿಲ್ಲವೆಂಬ ರಹಸ್ಯವನ್ನು ತಿಳಿದು ಅದರಂತೆಯೇ ಯಾವನು ತನ್ನ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವನೋ–ಅವನು ಸುಖವಾಗಿ ಜೀವಿಸಿರಬಲ್ಲನು'–ಎಂಬ ಹಿತೋಪದೇಶಗಳನ್ನು ನೀನು ಹಾಸ್ತಿನಪುರದಿಂದ ವಾರಣಾವತಕ್ಕೆ ಹೊರಟಾಗ ಯಾರಿಗೂ ತಿಳಿಯದ ಮ್ಲೇಚ್ಛ ಭಾಷೆಯಲ್ಲಿ ವಿದುರನು ನಿನಗೆ ಹೇಳಿದ್ದನಲ್ಲವೇ? ಇದರಿಂದಲಾದರೂ ನೀನು ನನ್ನನ್ನು ವಿದುರನಿಂದಲೇ ಕಳುಹಿಸಲ್ಪಟ್ಟಿರುವನೆಂದೂ ಮತ್ತು ವಿದುರನ ಆಪ್ತನೌಕಾಚಾಲಕನೆಂದೂ ನಿಸ್ಸಂಶಯವಾಗಿ ತಿಳಿಯಬಹುದು. ವಿದುರನು ಮತ್ತೂ ಹೇಳಿದುದೇನೆಂದರೆ : 'ನೀವು ಈ ಕಷ್ಟಸಮಯದಲ್ಲಿ ಧೈರ್ಯಗೆಡುವ ಕಾರಣವಿಲ್ಲ. ಯುದ್ಧದಲ್ಲಿ ನಿಶ್ಚಯವಾಗಿಯೂ ಸೋದರ

ರಿಂದಲೂ ಕರ್ಣ-ಶಕುನಿಗಳಿಂದಲೂ ಕೂಡಿರುವ ದುರ್ಯೋಧನನನ್ನು ಪರಾಜಯಗೊಳಿಸುವಿರಿ. ನಿಮಗಾಗಿ ಸಿದ್ಧಪಡಿಸಿರುವ ಈ ನೌಕೆಯು ನಿಮ್ಮನ್ನು ಸುಖವಾಗಿ ನದಿಯನ್ನು ದಾಟಿಸುತ್ತದೆ. ಈ ದೇಶವನ್ನು ಬಿಟ್ಟು ಹೋಗಲು ಇದು ಅನುಕೂಲಮಾಡಿಕೊಡುತ್ತದೆ'–ಎಂದೂ ಹೇಳಿರುವನು. ಇನ್ನಾದರೂ ನೀವು ಸಂಶಯವಿಲ್ಲದೇ ನೌಕೆಯನ್ನು ಹತ್ತಿ ಕುಳಿತುಕೊಳ್ಳಿರಿ."

ಪಾಂಡವರು ತಮ್ಮ ಅಂದಿನ ಸ್ಥಿತಿಯನ್ನು ನೆನೆದು ದುಃಖಮನೋಭಾವದಿಂದ ಯೋಚನಾಪರರಾಗಿಯೇ ಇದ್ದರು. ಆದರೂ ನಾವಿಕನ ಹಿಂದೆ ನಡೆದು ಅವನ ನಿರ್ದೇಶದಂತೆ ಆರು ಮಂದಿಯೂ ನೌಕೆಯನ್ನು ಹತ್ತಿ ಕುಳಿತರು. ನೌಕೆಯೂ ಹೊರಟಿತು. ನಾವಿಕನು ಪುನಃ ಪಾಂಡವರೊಡನೆ ಹೇಳಿದನು :

"ವಿದುರನು ಮನಸ್ಸಿನಿಂದಲೇ ನಿಮ್ಮೆಲ್ಲರನ್ನೂ ಆಲಿಂಗಿಸಿ, ನೆತ್ತಿಯನ್ನು ಆಘ್ರಾಣಿಸಿ, ಪುನಃ–'ನಿಮ್ಮ ಪ್ರಯಾಣವು ನಿರ್ವಿಘ್ನವಾಗಿ ಸುಗಮವಾಗಿರಲಿ–ನೀವು ಯಾವಾಗಲೂ ಎಚ್ಚರಿಕೆಯಿಂದಿರತಕ್ಕದ್ದು'–ಎಂದು ಹೇಳಿರುವನು."

ಆ ಮಾತನ್ನು ಮುಗಿಸುವುದರೊಳಗಾಗಿಯೇ ವಾಯುವೇಗದಲ್ಲಿ ಹೋಗುತ್ತಲಿದ್ದ ಆ ನೌಕೆಯು ನದಿಯ ಆಚೆಯ ದಡವನ್ನು ಸೇರಿತು. ನಾವಿಕನು ಎಲ್ಲರನ್ನೂ ನೌಕೆಯಿಂದ ಮೆಲ್ಲನೆ ಇಳಿಸಿ, ದಡದ ಮೇಲ್ಭಾಗಕ್ಕೆ ಕರೆದೊಯ್ದು, ಮುಂದಿನ ಹಾದಿಯನ್ನು ಸೂಚಿಸಿ–'ನಿಮಗೆಲ್ಲರಿಗೂ ಜಯವಾಗಲಿ! ಮಾರ್ಗವು ಸುಗಮವಾಗಲಿ!'–ಎಂಬ ಮಂಗಳೋಕ್ತಿಗಳನ್ನು ಹೇಳಿ ತನ್ನ ನೌಕೆಗೆ ಹಿಂದಿರುಗಿದನು.

ಪಾಂಡವರೂ ವಿದುರನಿಗೆ ಕೆಲವು ಆಪ್ತವಿಷಯಗಳನ್ನೂ, ತಮ್ಮ ಕೃತಜ್ಞತೆಗಳನ್ನೂ ನಾವಿಕನೊಡನೆ ಹೇಳಿಕಳುಹಿಸಿ, ಯಾರೊಬ್ಬರಿಗೂ ಕಾಣದ ರೀತಿಯಲ್ಲಿ ಬಹುವೇಗವಾಗಿ ತಮ್ಮ ಪ್ರಯಾಣವನ್ನು ಮುಂದುವರಿಸಿದರು.

(ಇಲ್ಲಿ ವಿದುರನ ವಿಷಯವಾಗಿ ಒಂದೆರಡು ಪಙ್ಕ್ತಿಗಳನ್ನು ಬರೆದರೆ ತಪ್ಪಾಗಲಾರದು. ವಿದುರನು ಯಮಧರ್ಮನ ಅಂಶಜನೆಂದೂ ಮತ್ತು

ಮಹಾಜ್ಞಾನಿಯೆಂದೂ ಹಿಂದೆಯೇ ಹೇಳಿದೆ. ಆದರೆ ಪ್ರಕೃತಸಂದರ್ಭದಲ್ಲಿ ಅವನು ತನ್ನ ಜ್ಞಾನಯೋಗದಿಂದ ಪಾಂಡವರ ಕಷ್ಟಸ್ಥಿತಿಯನ್ನು ತಿಳಿದು ಕೊಳ್ಳಲಿಲ್ಲ. ಗೂಢಚಾರರ ಮೂಲಕ ಪ್ರತಿಯೊಂದು ವಿಷಯಗಳನ್ನೂ ಅನು ದಿನವೂ ತಿಳಿದುಕೊಳ್ಳುತ್ತಾ, ಮುಂದೇನಾಗಬಹುದೆಂಬುದನ್ನು ಆಲೋಚಿಸಿ ಕಾರ್ಯಮಾಡುತ್ತಿದ್ದನು. ವಿದುರನು ಅಂತಹ ಮೇಧಾವಿಯೂ ಮತ್ತು ರಾಜಕಾರಣಿಯೂ ಆಗಿದ್ದನು. ರಾಜ್ಯಾಡಳಿತವನ್ನು ಮಾಡಬೇಕಾದರೆ ಇಂತಹ ಮೇಧಾವಿಗಳು ಅತ್ಯವಶ್ಯಕ. ಕೇವಲ ಅಂಕಿ-ಅಂಶಗಳ ಮೇಲೆ ಕಾರ್ಯಮಾಡುವುದಕ್ಕಿಂತಲೂ ಶತ್ರುವಿನ ಹೃದಯವನ್ನು ತಿಳಿದು ಅದಕ್ಕೆ ಪ್ರತೀಕಾರವನ್ನು ಮುಂದಾಗಿಯೇ ಸಿದ್ಧಪಡಿಸುವುದು ಉತ್ತಮರಾಜ ಕಾರಣಿಯ ಲಕ್ಷಣ. ವಿದುರನು ಎರಡು ಸಂದರ್ಭಗಳಲ್ಲಿ ಇಬ್ಬರು ಆಪ್ತರನ್ನು ಪಾಂಡವರ ಸಹಾಯಕ್ಕಾಗಿ ಕಳುಹಿಸಿದುದೂ ಮತ್ತು ತಾವಾರೆಂಬುದನ್ನು ಅವರು ಪಾಂಡವರಿಗೆ ತಿಳಿಸಲು ಸೂಚಿಸಿದ ರಹಸ್ಯವಿಷಯಗಳೂ–ಹೆಚ್ಚು ಗಮನಾರ್ಹವಾಗಿವೆ. ಮಹಾಭಾರತಕಾಲದಲ್ಲಿ ಗೂಢಚಾರರ ವ್ಯವಸ್ಥೆಯು ಎಷ್ಟೊಂದು ಸುವ್ಯವಸ್ಥಿತವಾಗಿತ್ತೆಂಬುದಕ್ಕೆ ಇದೊಂದು ಉತ್ತಮನಿದರ್ಶನ ವಾಗಿದೆ.

ಎರಡನೆಯದಾಗಿ : ವ್ಯಾಸರು ಹೇಳಿರುವ ನೌಕೆಯ ವಿಷಯವನ್ನು ನೆನೆದರೂ ನಮ್ಮ ಶರೀರವು ರೋಮಾಂಚಗೊಳ್ಳುವುದು. ಅಲೆಗಳನ್ನೂ ಮತ್ತು ಗಾಳಿಯನ್ನೂ ಎದುರಿಸುವ ಯಂತ್ರಯುಕ್ತವಾದ ನೌಕೆಯ ರಚನೆ ಯನ್ನು ಎಷ್ಟೋ ಸಾವಿರ ವರ್ಷಗಳ ಹಿಂದೆಯೇ ಭಾರತೀಯರು ಅರಿ ತಿದ್ದರು. ಇಂತಹ ವಿಷಯಗಳು ನಮ್ಮ ರಾಷ್ಟ್ರೀಯಪ್ರೇಮವನ್ನು ಉದ್ಬೋಧ ಗೊಳಿಸಲು ಸಹಕಾರಿಯಾಗುತ್ತವೆ–ಎಂಬುದರಲ್ಲಿ ಸಂಶಯವಿಲ್ಲ.)

೧೪೯ನೆಯ ಅಧ್ಯಾಯವು ಮುಗಿಯಿತು.

## ಪಾಂಡವರು ನಿಧನಹೊಂದಿದ ವಾರ್ತೆಯನ್ನು ಕೇಳಿ ಧೃತರಾಷ್ಟ್ರಾದಿಗಳ ತೋರಿಕೆಯ ಶೋಕ : ಪಾಂಡವರಿಗೆ ಶ್ರಾದ್ಧಾದಿಕ್ರಿಯೆಗಳ ಆಚರಣೆ : ಅತ್ತ ಪಾಂಡವರ ವನಪ್ರವಾಸ

**ವೈಶಂಪಾಯನರು ಹೇಳುತ್ತಾರೆ :**

**ಅಥ ರಾತ್ರ್ಯಾಂ ವ್ಯತೀತಾಯಾಮಶೇಷೋ ನಾಗರೋ ಜನಃ ।**
**ತತ್ರಾಜಗಾಮ ತ್ವರಿತೋ ದಿದೃಕ್ಷುಃ ಪಾಣ್ಡುನನ್ದನಾನ್ ॥೧॥**

"ಜನಮೇಜಯ! ರಾತ್ರಿಯು ಕಳೆದು ಸೂರ್ಯೋದಯವಾದೊಡನೆಯೇ ವಾರಣಾವತದಲ್ಲಿ ಸಮಸ್ತನಾಗರಿಕರೂ ಪಾಂಡವರನ್ನು ನೋಡುವಸಲುವಾಗಿ ಅವಸರದಿಂದ ಅರಮನೆಯ ಸಮೀಪಕ್ಕೆ ಬಂದು ಸೇರಿದರು. ಆ ವೇಳೆಗೆ ಅರಮನೆಯನ್ನು ಪೂರ್ಣವಾಗಿ ಭಸ್ಮಮಾಡಿ ಯಜ್ಞೇಶ್ವರನೂ ವಿಶ್ರಾಂತಿಯನ್ನು ಹೊಂದುವುದರಲ್ಲಿದ್ದನು. ಕೆಳಗೆ ಬಿದ್ದವನನ್ನು ನಾಶಗೊಳಿಸಲು ಇದೇ ಸಮಯವೆಂದು ತಿಳಿದು ವಾರಣಾವತದ ಜನರೆಲ್ಲರೂ ದುರ್ಬಲನಾಗಿದ್ದ ಯಜ್ಞೇಶ್ವರನ ಮೇಲೆ ಬಲಪ್ರಯೋಗ ಮಾಡಿ, ಅವನನ್ನು ಶಮನಗೊಳಿಸಿದರು. ಬಹಳ ದೂರದವರೆಗೂ ಪ್ರಸರಿಸಿದ್ದ ವಾಸನೆಯಿಂದ, ಅರಮನೆಯು ಬೇಗ ಹೊತ್ತಿಕೊಳ್ಳುವ ಅರಗು ಮುಂತಾದ ಪದಾರ್ಥಗಳಿಂದ ಕಟ್ಟಲ್ಪಟ್ಟಿತ್ತೆಂಬುದನ್ನೂ ಪೌರರು ನಿಶ್ಚಯಿಸಿದರು. ಪುರೋಚನನೂ ಮನೆಯೊಡನೆ ಭಸ್ಮವಾಗಿರುವುದನ್ನೂ ನೋಡಿ ಪ್ರಜೆಗಳು ತಮ್ಮ-ತಮ್ಮಲ್ಲಿಯೇ ಆವೇಶಪೂರಿತರಾಗಿ ಮಾತನಾಡಿಕೊಳ್ಳುತ್ತಿದ್ದರು.

"ಈ ದುಷ್ಟಯೋಜನೆಯು ಪಾಂಡವರ ವಿನಾಶಕ್ಕಾಗಿಯೇ ದುರ್ಯೋಧನನಿಂದ ಮಾಡಲ್ಪಟ್ಟಿತ್ತು. ಇದರಲ್ಲಿ ಸಂಶಯಲೇಶವೂ ಇಲ್ಲ. ಈ ವಿಷಯವು ಧೃತರಾಷ್ಟ್ರನಿಗೂ ತಿಳಿಯದೇ ಇಲ್ಲ. ಅವನಾದರೂ ಮಗನ ದುಷ್ಟಯೋಜನೆಗೆ ಒಪ್ಪಿಯೇ ಇದ್ದಾನೆ. ಇಲ್ಲದಿದ್ದರೆ ಅವನು ಹೇಗಾದರೂ ಮಾಡಿ ಮಗನ ದುಷ್ಕಾರ್ಯಕ್ಕೆ ತಡೆಮಾಡಬಹುದಾಗಿದ್ದಿತು. ವಿದುರನಾಗಲೀ, ಭೀಷ್ಮನಾಗಲೀ, ದ್ರೋಣರಾಗಲೀ, ಕೃಪರಾಗಲೀ ಯಾರೂ ಈ

ವಿಷಯದಲ್ಲಿ ಧರ್ಮವಿಹಿತವಾದ ಮಾರ್ಗದಲ್ಲಿ ನಡೆದಿರುವುದಿಲ್ಲ. ಎಲ್ಲರೂ ಅಧರ್ಮಕ್ಕೇ ಉತ್ತೇಜನವನ್ನಿತ್ತಿದ್ದಾರೆ. ದುರಾತ್ಮನಾದ ಧೃತರಾಷ್ಟ್ರನಿಗೆ–'ನಿನ್ನ ಮಹತ್ತಾದ ಇಚ್ಛೆಯು ಪೂರ್ಣವಾಯಿತು. ನೀನು ಪಾಂಡವರನ್ನು ಜೀವಸಹಿತವಾಗಿ ಸುಟ್ಟು ಕೃತಕೃತ್ಯನಾಗಿರುವೆ'– ಎಂದೇ ಹೇಳಿ ಕಳುಹಿಸೋಣ"–ಎಂದು ದುಃಖಿತರಾಗಿದ್ದ ಪ್ರಜೆಗಳು ನಿಶ್ಚಯಿಸಿ ಧೈರ್ಯ ಶಾಲಿಗಳಾದ ಪ್ರಜಾಪ್ರಮುಖರನ್ನು ಹಾಸ್ತಿನಪುರಕ್ಕೆ ಕಳುಹಿಸಿಕೊಟ್ಟರು.

ಈ ಮಧ್ಯದಲ್ಲಿ ದುರ್ಯೋಧನನ ನಿರ್ದೇಶದಂತೆ ಪಾಂಡವರನ್ನು ಸುಡಲು ಬಂದಿದ್ದ ಪುರೋಚನನು ಹೇಗೆ ಭಸ್ಮವಾದನೆಂಬುದನ್ನು ಯಾರೂ ತರ್ಕಿಸಲಿಲ್ಲ. ಪಾಪಿಗೆ ತಕ್ಕ ಶಾಸ್ತಿಯಾಯಿತೆಂದೇ ಭಾವಿಸಿ, ಪಾಂಡವರು ಸತ್ತು ಹೋದುದರಿಂದುಂಟಾದ ಅಪಾರದುಃಖದಲ್ಲಿ ಮನಸ್ಸಿಗೆ ಸ್ವಲ್ಪ ಶಾಂತಿ ಯನ್ನೂ ತಂದುಕೊಂಡರು.

ನಿಷಾದಿ ಮತ್ತು ಅವಳ ಐವರು ಮಕ್ಕಳೂ ಸುಟ್ಟುಹೋಗಿದ್ದುದ ರಿಂದ ತಾಯಿಯೊಡನೆ ಪಾಂಡವರೈವರೇ ಸುಟ್ಟುಹೋಗಿದ್ದಾರೆಂಬ ನಿರ್ಧಾ ರಕ್ಕೆ ಬರಲು ಕಾರಣವಾಯಿತು. ವಿದುರನ ಮಿತ್ರನು ಪಾಂಡವರನ್ನು ಹುಡುಕುವ ನೆಪದಲ್ಲಿ ಸುರಂಗದ ಬಾಯನ್ನು ಧೂಳಿನಿಂದ ಮುಚ್ಚಿಬಿಟ್ಟನು. ಸುರಂಗದ ಮೇಲೆ ಬೂದಿಯ ರಾಶಿಯೂ ಬಿದ್ದಿದ್ದುದರಿಂದ ಅಲ್ಲಿ ಸುರಂಗ ವೊಂದಿರುವುದೆಂಬ ಸಂಶಯವೂ ಯಾರಿಗೂ ಉಂಟಾಗಲಿಲ್ಲ.

ಪುರೋಚನಸಮೇತರಾಗಿ ಪಾಂಡವರು ಭಸ್ಮೀಭೂತರಾದರೆಂಬ ದುಃಖವಾರ್ತೆಯು ಧೃತರಾಷ್ಟ್ರನಿಗೂ ತಿಳಿಯಿತು.

ಪಾಂಡವರ ಮರಣದ ವಾರ್ತೆಯನ್ನು ಕೇಳಿದೊಡನೆಯೇ ಧೃತ ರಾಷ್ಟ್ರನು ವಿಲಾಪಮಾಡಲಾರಂಭಿಸಿದನು. "ಅಯ್ಯೋ! ಇಂದು ನನ್ನ ತಮ್ಮ ನಾದ ಪಾಂಡುವು ನಿಶ್ಚಯವಾಗಿಯೂ ಮೃತನಾದನು. ತೇಜೋವಂತರಾದ ಅವನ ಐವರು ಮಕ್ಕಳನ್ನೂ ನೋಡಿಕೊಂಡು ನನ್ನ ತಮ್ಮನು ಬದುಕಿರುವ ನೆಂದೇ ಭಾವಿಸಿದ್ದೆನಲ್ಲಾ! ಅಯ್ಯೋ! ಕುಂತಿಯ ಸಮೇತರಾಗಿ ನನ್ನ ಕುಮಾ ರರು ಭಸ್ಮವಾಗಿ ಹೋದರೇ! ಇಂತಹ ದುರ್ವಾರ್ತೆಯನ್ನು ಕೇಳುವ ನನ್ನ ದುರ್ವಿಧಿಯು ಎಂತಹುದು? ಬಂಧು-ಮಿತ್ರರೇ! ನೀವೆಲ್ಲರೂ ವಾರಣಾವತಕ್ಕೆ

ಹೋಗಿರಿ. ಮಹಾಪರಾಕ್ರಮಿಗಳಾದ ನನ್ನ ಭ್ರಾತೃಸುತರಿಗೂ, ಕುಂತೀ ಭೋಜನ ಕುಮಾರಿಗೂ ಯಥಾವಿಧಿಯಾಗಿ ಅಂತ್ಯಕ್ರಿಯೆಗಳನ್ನು ಮಾಡಿರಿ. ಅವರೆಲ್ಲರ ಅಸ್ಥಿಸಂಚಯನಕ್ಕಾಗಿ ಶಾಸ್ತ್ರೋಕ್ತರೀತಿಯಲ್ಲಿ ಸಕಲಸಿದ್ಧತೆಗಳೂ ಕೂಡಲೇ ನಡೆಯಲಿ. ಬಂಧು-ಮಿತ್ರರೆಲ್ಲರೂ ಅವರಲ್ಲಿಗೆ ಹೋಗಲು ವಾಹನಗಳು ಸಿದ್ಧವಾಗಲಿ. ಮರಣಹೊಂದಿರುವವರ ಸದ್ಗತಿಪ್ರಾಪ್ತಿಗಾಗಿ ಏನೇನನ್ನು ಮಾಡಬೇಕಾಗಿದೆಯೋ ಎಲ್ಲವನ್ನೂ ಸಿದ್ಧಪಡಿಸಿರಿ."

ಹೀಗೆಂದು ಹೇಳಿ ಧೃತರಾಷ್ಟ್ರನು ಬಂಧು-ಬಾಂಧವಸಮೇತನಾಗಿ ಬಹಳ ಸಂಕಟಹೃದಯದಿಂದ ಕಣ್ಣೀರುಸುರಿಸುತ್ತಾ 'ಹಾ ಯುಧಿಷ್ಠಿರ! ಹಾ ಭೀಮ!'–ಎಂದು ಹೇಳುತ್ತಾ ಉದಕತರ್ಪಣವನ್ನಿತ್ತನು. ಹಾ ಅರ್ಜುನ! ಹಾ ನಕುಲ! ಹಾ ಸಹದೇವ! ಹಾ ಕುಂತಿ!'–ಎಂದು ಹೇಳಿಕೊಂಡು ಮಾಡುತ್ತಲಿದ್ದ ಪಟ್ಟಣಿಗರ ಮತ್ತು ಕುರುವಂಶದವರ ರೋದನವು ನಭೋಮಂಡಲವನ್ನು ಮುಟ್ಟಿತು.

ಆದರೆ ವಿದುರನು ಮಾತ್ರ ಎಲ್ಲರೂ ಮಾಡಿದಂತೆ ಮಾಡಿ, ತಾನೂ ದುಃಖಿತನಾಗಿರುವೆನೆಂಬ ತೋರಿಕೆಯನ್ನು ತೋರಿದನೇ ಹೊರತು ಅಂತರಂಗದಲ್ಲಿ ಹೆಚ್ಚು ದುಃಖಿಸಲಿಲ್ಲ. ಪಾಂಡವರು ಮೃತ್ಯುವಿನಿಂದ ಪಾರಾಗಿರುವರೆಂಬ ಸಂತೋಷವು ಅವನ ಹೃದಯದಲ್ಲಿದ್ದಿತು.

ಜನಮೇಜಯ! ನಾನು ಹಿಂದೆಯೇ ಹೇಳಿದಂತೆ–ಅತ್ತಲಾಗಿ ಪಾಂಡ ವರು ವಾರಣಾವತಪಟ್ಟಣದಿಂದ ಹೊರಟು ತಾಯಿಯಾದ ಕುಂತಿಯೊಡನೆ ಗಂಗಾತೀರವನ್ನು ಸೇರಿದರು. ನಾವಿಕನ ಭುಜಬಲ-ಸಾಮರ್ಥ್ಯಗಳಿಂದಲೂ, ನದಿಯ ಸೌಮ್ಯಪ್ರವಾಹದಿಂದಲೂ ಮತ್ತು ಅನುಕೂಲವಾದ ವಾತಾವರಣ ವಿದ್ದುದರಿಂದಲೂ ಪಾಂಡವರು ವಿದುರನು ಕಳುಹಿಸಿಕೊಟ್ಟಿದ್ದ ನೌಕೆಯಲ್ಲಿ ಬಹುವೇಗವಾಗಿ ನದಿಯನ್ನು ದಾಟಿದರು. ನಾವೆಯಿಂದಿಳಿದು ನಾವಿಕನೊಡನೆ ಹೇಳಬೇಕಾದುದನ್ನು ಹೇಳಿ ನಕ್ಷತ್ರಗಳ ಸಹಾಯದಿಂದ ದಕ್ಷಿಣದಿಕ್ಕನ್ನು ತಿಳಿದುಕೊಂಡು, ಆ ದಿಕ್ಕಿನ ಕಡೆಗೇ ಪ್ರಯಾಣಮಾಡಿದರು.

ಅವರು ಹೋಗುತ್ತಿದ್ದ ದಾರಿಯು ಘೋರವಾದ ಅರಣ್ಯಮಧ್ಯಕ್ಕೆ ಅವರನ್ನು ಕರೆದೊಯ್ದಿತು. ಹಸಿವು-ಬಾಯಾರಿಕೆಗಳಿಂದ ಎಲ್ಲರೂ ಬಹು

ವಾಗಿ ಬಳಲಿದ್ದರು. ನಿದ್ರೆಯು ಎಲ್ಲರನ್ನೂ ಆವರಿಸಿತ್ತು. ಮುಂದೇನು ಮಾಡ ಬೇಕೆಂಬುದು ತೋರದೇ ಯುಧಿಷ್ಠಿರನು ಭೀಮನಿಗೆ ಹೇಳಿದನು : "ಭೀಮ ಸೇನ! ಇದಕ್ಕಿಂತಲೂ ಕಷ್ಟತರವಾದ ಸನ್ನಿವೇಶವು ಮತ್ತೊಂದುಂಟೇ? ನಾವೀಗ ಘೋರಾರಣ್ಯದ ಮಧ್ಯಭಾಗಕ್ಕೆ ಬಂದುಬಿಟ್ಟಿದ್ದೇವೆ. ಇದು ಯಾವ ಭಾಗಕ್ಕೆ



ಸೇರಿದ್ದೆಂಬ ವಿಷಯವೂ ತಿಳಿಯದು. ಮುಂದಕ್ಕೆ ಕಾಲಿಡಲೂ ಶಕ್ತಿಯಿಲ್ಲದವರಾಗಿದ್ದೇವೆ. ಇಲ್ಲಿಯೇ ಇದ್ದುಬಿಡೋಣವೆಂದರೆ ಆ ಪಾಪಿಯಾದ ಪುರೋಚನನು ಸತ್ತುಹೋಗಿರುವನೋ, ಬದುಕಿಯೇ ಇರು ವನೋ–ಎಂಬ ವಿಷಯವೂ ನಮಗೆ ತಿಳಿಯದು. ಇಂತಹ ಭಯಂಕರ

ಸನ್ನಿವೇಶದಲ್ಲಿ ಯಾರಿಗೂ ತಿಳಿಯದಂತೆ ಪಾರಾಗುವುದಾದರೂ ಹೇಗೆ? ನನಗೆ ಹೊಳೆಯುತ್ತಿರುವ ಒಂದು ಮಾರ್ಗವೆಂದರೆ : ನೀನು ಹಿಂದಿನಂತೆಯೇ ನಮ್ಮೆಲ್ಲರನ್ನೂ ಎತ್ತಿಕೊಂಡುಹೋಗು. ಹೀಗೆ ಮಾಡಲು ನಿನ್ನೊಬ್ಬನಿಂದಲೇ ಸಾಧ್ಯ. ನೀನೇ ನಮ್ಮೆಲ್ಲರಿಗಿಂತಲೂ ಬಲಿಷ್ಠನಾಗಿರುವೆ ಮತ್ತು ಗಾಳಿಯಂತೆ ವೇಗವಾಗಿ ಹೋಗಲೂ ಸಮರ್ಥನಾಗಿರುವೆ."

ಮಹಾಬಲಶಾಲಿಯಾದ ಭೀಮನು ಹಿಂದಿನಂತೆಯೇ ಕುಂತಿಯನ್ನು ಹೆಗಲ ಮೇಲೂ, ಯಮಳರನ್ನು ಕಂಕುಳುಗಳಲ್ಲಿಯೂ, ಯುಧಿಷ್ಠಿರಾರ್ಜುನರನ್ನು ಕೈಗಳಲ್ಲಿಯೂ ಎತ್ತಿಕೊಂಡು ವೇಗದಿಂದ ಹೊರಟನು.

೧೫೦ನೆಯ ಅಧ್ಯಾಯವು ಮುಗಿಯಿತು.

೧೫೧ನೆಯ ಅಧ್ಯಾಯ ಜತುಗೃಹಪರ್ವ (ಮುಂದುವರಿದಿದೆ.)

## ಬಾಯಾರಿಕೆಯಿಂದ ಬಳಲಿದ್ದ ಕುಂತಿಗೆ ಭೀಮನಿಂದ ಜಲಾಹರಣ : ತಾಯಿಯ ಮತ್ತು ಸೋದರರ ದುರವಸ್ಥೆಗಾಗಿ ಭೀಮನ ಪರಿತಾಪ : ದುರ್ಯೋಧನನ ಮೇಲೆ ಆಕ್ರೋಶ

ಜನಮೇಜಯ! ಭೀಮನ ನಡಿಗೆಯ ವೇಗವು ವರ್ಣನಾತೀತವಾಗಿತ್ತು. ಅವನು ಹೋಗುತ್ತಿದ್ದ ರಭಸಕ್ಕೆ ಅರಣ್ಯದಲ್ಲಿದ್ದ ಮರ-ಗಿಡ-ಬಳ್ಳಿಗಳು ಅದುರುತ್ತಿದ್ದುವು. ಜ್ಯೇಷ್ಠ-ಆಷಾಢಮಾಸಗಳಲ್ಲಿ ಬೀಸುವಂತಹ ಬಿರುಗಾಳಿಯು ಅವನ ನಡಿಗೆಯ ವೇಗದಿಂದ ಉಂಟಾಯಿತು. ಅವನು ಮುಂದೆ ನಡೆದುಹೋಗುತ್ತಿದ್ದಂತೆಲ್ಲಾ ನಡಿಗೆಯ ರಭಸಕ್ಕೆ ಎದುರಿಗೆ ಸಿಕ್ಕಿದ ಮರ-ಗಿಡ-ಬಳ್ಳಿಗಳೆಲ್ಲವೂ ಬುಡಮೇಲಾಗಿ ಪಕ್ಕಕ್ಕೆ ಉರುಳುತ್ತಿದ್ದುವು. ಎದುರಿಗೆ ಸಿಕ್ಕುವ ಫಲ-ಪುಷ್ಪಭರಿತವಾಗಿದ್ದ ಸಾವಿರಾರು ವೃಕ್ಷಗಳನ್ನೂ, ಲತಾಗುಲ್ಮಗಳನ್ನೂ ಮುರಿದುಹಾಕುತ್ತಾ ಭೀಮನು ಮುಂದುವರಿದನು. ಅರುವತ್ತು ವರ್ಷ ವಯಸ್ಸಿನ, ಕೊಬ್ಬಿದ ಮತ್ತು ಮದಿಸಿದ ಆನೆಯು ರೋಷಾವೇಶದಿಂದ ಗಂಡಸ್ಥಲ-ಕರ್ಣಮೂಲ-ಗುಹ್ಯಪ್ರದೇಶಗಳಲ್ಲಿ ಮದೋದಕವನ್ನು ಸುರಿಸುತ್ತಾ ದೊಡ್ಡ ಮರಗಳನ್ನು ಮುರಿದುಹಾಕುತ್ತಾ ಓಡುತ್ತಿರುವ ಸ್ಮರಣೆಯನ್ನೇ ಭೀಮನ ವೇಗವು ತರುವುದಾಗಿತ್ತು. ಅವನ ಗಮನವೇಗವು ಗರುಡನ

ಅಥವಾ ಗಾಳಿಯ ವೇಗವನ್ನೂ ಮೀರಿಸಿತ್ತೆಂದರೆ ಅತಿಶಯೋಕ್ತಿಯಲ್ಲ. ಅವನ ವೇಗದಿಂದಾಗಿ ಯುಧಿಷ್ಠಿರಾದಿಗಳೂ ಮೂರ್ಛಿತರಾದಂತೆ ಕಾಣುತ್ತಿದ್ದರು.

ದುರ್ಯೋಧನನ ಭಯದ ಕಾರಣದಿಂದ ದಾಟಲು ಅಸಾಧ್ಯವೆನಿಸಿದ ನದೀ-ನದಗಳನ್ನೂ ಈಜಿಕೊಂಡು ತಾವಾರೆಂಬುದು ಯಾರಿಗೂ ತಿಳಿಯದಂತೆ ಪಾಂಡವರು ಮುಂದುವರಿಯುತ್ತಿದ್ದರು. ಕೋಮಲಾಂಗಿಯಾಗಿದ್ದ ಕುಂತಿಯನ್ನು ಹಳ್ಳ-ತಿಟ್ಟುಗಳಲ್ಲಿ, ನದಿಯ ದಂಡೆಗಳಲ್ಲಿ–ಭೀಮನು ಎತ್ತಿಕೊಂಡೇ ನಡೆಯುತ್ತಿದ್ದನು. ಹಿಂದಿನ ರಾತ್ರಿಯಿಂದ ಅಣ್ಣ-ತಮ್ಮಂದಿರನ್ನೂ, ತಾಯಿಯನ್ನೂ ಎತ್ತಿಕೊಂಡು ಅನವರತವಾಗಿ ನಡೆದು, ಸಾಯಂಕಾಲದ ವೇಳೆಗೆ ಭಯಂಕರವಾದ, ಅಲ್ಪಮೂಲ-ಫಲ-ಜಲಗಳಿದ್ದ, ಕ್ರೂರಮೃಗ-ಪಕ್ಷಿಗಳಿಂದ ನಿಬಿಡವಾಗಿದ್ದ ಮಹಾರಣ್ಯದೊಳಕ್ಕೆ ಪ್ರವೇಶಿಸಿದನು. ಹೊತ್ತು ಕಳೆದಂತೆ ಕತ್ತಲು ಸಂಪೂರ್ಣವಾಗಿ ಆವರಿಸಿ, ಮೃಗ-ಪಕ್ಷಿಗಳ ಭಯಂಕರ ನಿನಾದಗಳು ಮಾತ್ರ ಕೇಳುತ್ತಿದ್ದುವು. ಮುಂದೇನಿರುವುದೆಂಬ ಅರಿವೇ ಇಲ್ಲವಾಯಿತು. ದಿಕ್ಕುಗಳೇ ಕಾಣುತ್ತಿರಲಿಲ್ಲ. ಅಕಾಲದ ಬಿರುಗಾಳಿಯಿಂದ ನೂರಾರು ಮರಗಳ ಕೊಂಬೆಗಳು ರಭಸದಿಂದ ಮುರಿದು ಕೆಳಕ್ಕೆ ಬೀಳುತ್ತಿದ್ದುವು. ಅಂತಹ ಘೋರಾರಣ್ಯದ ಮಧ್ಯಭಾಗಕ್ಕೆ ಪಾಂಡವರು ಬಂದು ಸೇರಿದರು.

ಯದ್ಯಪಿ ಭೀಮನೇ ಹೆಚ್ಚಾಗಿ ಎಲ್ಲರನ್ನೂ ದಾರಿಯುದ್ದಕ್ಕೂ ಎತ್ತಿಕೊಂಡು ಹಲವು ಗಾವುದಗಳನ್ನು ನಡೆದುಬಂದಿದ್ದನಾದರೂ–ಯುಧಿಷ್ಠಿರಾದಿಗಳೂ ಹಸಿವು-ಬಾಯಾರಿಕೆಗಳಿಂದಲೂ, ಕಳೆದ ರಾತ್ರಿಯೆಲ್ಲಾ ನಿದ್ದೆಯಿಲ್ಲದೇ ಇದ್ದುದರಿಂದಲೂ ಬಹಳವಾಗಿ ಆಯಾಸಪಟ್ಟಿದ್ದರು. ಮುಂದೆ ಪ್ರಯಾಣಮಾಡಲು ಯಾರಿಗೂ ಚೈತನ್ಯವೇ ಇರಲಿಲ್ಲ.

ಶುಷ್ಕವಾದ ಆ ಮಹಾರಣ್ಯದಲ್ಲಿ ಪಾಂಡವರು ಕುಂತಿಯೊಡನೆ ಕುಳಿತಿರಲಾಗಿ, ಬಾಯಾರಿಕೆಯಿಂದ ಬಹಳವಾಗಿ ಬಳಲಿದ್ದ ಕುಂತಿಯು ಮಕ್ಕಳನ್ನು ಕುರಿತು ಹೇಳಿದಳು : "ಮಕ್ಕಳಿರಾ! ಐದು ಮಕ್ಕಳ ತಾಯಿಯು ನಾನು. ಅವರ ಮಧ್ಯದಲ್ಲಿಯೇ ಕುಳಿತಿರುವೆನು. ಆದರೆ ಬಾಯಾರಿಕೆಯಿಂದ ಬಳಲುತ್ತಿರುವೆನು."

ಬಾರಿ-ಬಾರಿಗೂ ಹೇಳುತ್ತಿದ್ದ ಕುಂತಿಯ ಆ ಮಾತುಗಳು ಪಾಂಡವರ

ಹೃದಯವನ್ನು ಸಂಕಟಪಡಿಸುತ್ತಿದ್ದುವು. ಆದರೆ ಮಾಡುವುದೇನು? ತಾಯಿಯ ವಿಷಯವಾಗಿ ಹುಟ್ಟಿದ ಕಾರುಣ್ಯವು ಭೀಮನ ಹೃದಯದಲ್ಲಿ ಬಹಳ ತಾಪವನ್ನುಂಟುಮಾಡಿತು.

ಭೀಮನು ತಾಯಿಯ ಬಾಯಾರಿಕೆಯನ್ನು ಪರಿಹರಿಸುವುದಕ್ಕಾಗಿ ನೀರಿರುವ ಸ್ಥಳವನ್ನು ಹುಡುಕಿಕೊಂಡು ಇನ್ನೂ ಸ್ವಲ್ಪ ಮುಂದಕ್ಕೆ ಹೋಗ ಬೇಕೆಂದು ನಿಶ್ಚಯಿಸಿ, ಯುಧಿಷ್ಠಿರಾದಿಗಳನ್ನೂ ತಾಯಿಯನ್ನೂ ಎತ್ತಿಕೊಂಡು ಮುಂದೆ ನಡೆದು, ಸ್ವಲ್ಪ ಹೊತ್ತಿನಲ್ಲಿಯೇ ಬಹಳ ಎತ್ತರವಾಗಿ ಬೆಳೆದಿದ್ದ, ನೂರಾರು ಕೊಂಬೆಗಳಿಂದ ಕೂಡಿ ವಿಶಾಲವಾಗಿದ್ದ ಮತ್ತು ನೆರಳಿನಿಂದ ಕೂಡಿದ್ದ ಆಲದ ಮರದ ಸಮೀಪಕ್ಕೆ ಬಂದು, ಅದರ ಕೆಳಗೆ ಎಲ್ಲರನ್ನೂ ಇಳಿಸಿ, ಹೇಳಿದನು :

"ನೀವೆಲ್ಲರೂ ಇಲ್ಲಿಯೇ ವಿಶ್ರಾಂತಿಯನ್ನು ಪಡೆಯುತ್ತಿರಿ. ನಾನು ನೀರನ್ನು ಹುಡುಕಿ ತರುತ್ತೇನೆ. ನೀರಿನಲ್ಲಿಯೇ ವಾಸಮಾಡುವ ಸಾರಸಪಕ್ಷಿ ಗಳ ಮಧುರಧ್ವನಿಗಳು ಹತ್ತಿರದಲ್ಲಿಯೇ ಕೇಳಿಬರುತ್ತಿರುವುದರಿಂದ ಅನತಿ ದೂರದಲ್ಲಿಯೇ ಒಂದು ಸರೋವರವಿದ್ದೇ ಇರಬೇಕೆಂದು ನಾನು ಭಾವಿಸು ತ್ತೇನೆ. ಹೋಗಿಬರಲೇ?"

ಎಲ್ಲರೂ ಬಹುವಾಗಿ ಬಳಲಿದ್ದರು. ಯುಧಿಷ್ಠಿರಾದಿಗಳಿಗೆ ಉತ್ತರ ಕೊಡುವಷ್ಟು ತ್ರಾಣವೂ ಇತ್ತೋ-ಇಲ್ಲವೋ ತಿಳಿಯದು. ಬಹಳ ಸಣ್ಣ ಧ್ವನಿಯಿಂದ ಯುಧಿಷ್ಠಿರನು–'ಹೋಗಿ ಬಾಪ್ಪಾ! ಬೇಗ ಬಾ!'–ಎಂದನು.

ಸಾರಸಪಕ್ಷಿಗಳ ಮಧುರನಿನಾದವನ್ನು ಆಲಿಸುತ್ತಾ ಅದೇ ದಿಕ್ಕನ್ನು ಹಿಡಿದು ಭೀಮನು ಧಾವಿಸಿದನು. ಸ್ವಲ್ಪ ದೂರ ನಡೆದ ನಂತರ ಸುಂದರ ವಾದ ಒಂದು ಸರೋವರವು ಕಂಡಿತು.

ಭೀಮನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಮಾನವನಿಗೆ ಅತಿ ದುಃಖದಲ್ಲಿಯೂ ಸಂತೋಷವೆಂದರೆ ಇದೇ ಅಲ್ಲವೇ? ಮಾರ್ಗಾಯಾಸ ದಿಂದ ಬಳಲಿ ಬೇಸತ್ತಿದ್ದ ಭೀಮನು ಕಮಲಪುಷ್ಪಗಳಿಂದ ನಿಬಿಡವಾಗಿದ್ದ ಸರೋವರಕ್ಕೆ ಧುಮುಕಿದನು. ಅಂತೆಯೇ ಸ್ನಾನವನ್ನೂ ಮಾಡಿ, ನೀರನ್ನು

ಕುಡಿದು, ಬಳಲಿಕೆಯನ್ನೂ ಪರಿಹಾರಮಾಡಿಕೊಂಡು ಹೊರಡಲು ಸಿದ್ಧ ನಾದನು.

ಭೀಮನು ಸರೋವರವನ್ನು ಹುಡುಕಿಕೊಂಡು ಬಂದುದೇಕೆ? ಕೇವಲ ತನ್ನ ಆಯಾಸಪರಿಹಾರಕ್ಕಾಗಿಯೇ? ಅಲ್ಲ. ತಾಯಿಯ ಮತ್ತು ಸಹೋದರರ ಬಾಯಾರಿಕೆಯ ಬಳಲಿಕೆಯನ್ನೂ ತಪ್ಪಿಸುವ ಸಲುವಾಗಿ ಬಂದನಲ್ಲವೇ? ಆ ಘೋರವಾದ ಕಾನನದಲ್ಲಿ ನೀರನ್ನೊಯ್ಯಲು ಭೀಮನಿಗೆ ಪಾತ್ರೆಯೆಲ್ಲಿದೆ? ಪಾತ್ರೆಯಿಲ್ಲದೇ ನೀರನ್ನೊಯ್ಯುವುದೆಂತು? ಭೀಮನು ಕ್ಷಣಕಾಲ ಯೋಚಿಸಿದನು. ನೀರಿನಲ್ಲಿ ಬಟ್ಟೆಯನ್ನು ತೋಯಿಸಿದ ಹೊರತು ಬೇರಾವ ರೀತಿಯಲ್ಲಿಯೂ ನೀರನ್ನೊಯ್ಯಲು ಸಾಧ್ಯವಿಲ್ಲವೆಂದು ನಿಶ್ಚಯಿಸಿ, ತನ್ನ ಉತ್ತರೀಯವನ್ನು ತೆಗೆದು ನೀರಿನಲ್ಲಿ ಚೆನ್ನಾಗಿ ನೆನೆಯಿಸಿ ಎತ್ತಿಕೊಂಡು ಹೊರಟನು.

ಎರಡು ಕ್ರೋಶಗಳ ದೂರದಲ್ಲಿದ್ದ ಕುಂತಿಯ ಸಮೀಪಕ್ಕೆ ಭೀಮನು ಬಹುವೇಗವಾಗಿ ಬಂದನು. ನೆಲದಮೇಲೆ ಮಲಗಿದ್ದ ಕುಂತಿಯನ್ನು ನೋಡಿದೊಡನೆಯೇ ಭೀಮನಿಗೆ ಶೋಕ-ದುಃಖಗಳುಂಟಾದುವು. ಹಾವಿನಂತೆ ಸುದೀರ್ಘವಾಗಿ ನಿಟ್ಟುಸಿರುಬಿಟ್ಟನು.

ಬರಿಯ ನೆಲವನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿದ್ದ ರಾಜಕುಮಾರರನ್ನೂ, ರಾಜಮಾತೆಯನ್ನೂ ನೋಡಿ ಭೀಮನಿಗೆ ದಾರುಣವಾದ ಹೃದಯವೇದನೆಯಾಯಿತು. ಎರಡು ಕಣ್ಣುಗಳಿಂದಲೂ ಧಾರಾಕಾರವಾದ ಅಶ್ರುಪ್ರವಾಹವೇ ಹೊರಟಿತು.

“ಅಯ್ಯೋ! ನಾನೆಂತಹ ಹತಭಾಗ್ಯನು! ಸಹೋದರರೂ ತಾಯಿಯೂ ಬರಿಯ ನೆಲದ ಮೇಲೆ ಮಲಗಿರುವ ದುರವಸ್ಥೆಯನ್ನು ನೋಡುವ ದುರದೃಷ್ಟವು ನನ್ನದಾಗಿದೆಯಲ್ಲವೇ?–ಇದಕ್ಕಿಂತಲೂ ನೋಡಲು ಕಷ್ಟಕರವಾದ ದೃಶ್ಯವು ಏನಿದೆ? ಅಯ್ಯೋ!” ಭೀಮನ ದಕ್ಷಿಣ ಹಸ್ತವು ವೇಗವಾಗಿ ಅವನ ತಲೆಯನ್ನು ಘಟ್ಟಿಸಿತು.

“ಅಂದು ವಾರಣಾವತದಲ್ಲಿ ಹಂಸತೂಲಿಕಾತಲ್ಪದ ಮೇಲೆ ಮಲಗಿಯೂ ನಿದ್ರೆಯನ್ನು ಹೊಂದದ ಇವರು ಇಂದು ಬರಿಯ ನೆಲದ ಮೇಲೆ

ಮಲಗಿ ನಿದ್ರಿಸುತ್ತಿರುವರಲ್ಲಾ! ಅಯ್ಯೋ! ಇಂತಹ ದಾರುಣದೃಶ್ಯವನ್ನು ಮತ್ತೆಲ್ಲಿ ಕಾಣುವೆನು? ಇದಕ್ಕಿಂತಲೂ ಕಷ್ಟತರವಾದ ದುರವಸ್ಥೆಯು ಮತ್ತೊಂದಿರುವುದೇ? ಖಂಡಿತವಾಗಿಯೂ ಇಲ್ಲ. ಐವರು ಮಕ್ಕಳನ್ನು ಪಡೆದೂ ರಾಜಮಾತೆಯೆನಿಸಿದ ಕುಂತಿಗೆ ಇಂದೊದಗಿರುವ ದಾರುಣವಾದ ದುರವಸ್ಥೆಯನ್ನು ಮತ್ತೆಲ್ಲಿ ಕಾಣುವೆನು? ಇಂತಹ ದಾರುಣವಾದ ಸನ್ನಿವೇಶವನ್ನು ಕಣ್ಣೆದುರಿನಲ್ಲಿಯೇ ನೋಡುತ್ತಿದ್ದರೂ ನನ್ನ ಹೃದಯವೇಕೆ ಒಡೆದು ಸೀಳಾಗಿಹೋಗಲಿಲ್ಲ?"

ಭೀಮನ ಮುಖಾರವಿಂದದಿಂದ ಬಿಸಿಯಾದ ನಿಟ್ಟುಸಿರು ಹೊರ ಹೊಮ್ಮುತ್ತಿತ್ತು.

"ಮಹಾಪರಾಕ್ರಮಿಯಾದ ವಸುದೇವನ ತಂಗಿಯಿವಳು. ರಾಜಾಧಿರಾಜನಾದ ಕುಂತಿಭೋಜನ ಮಗಳು. ಸರ್ವಲಕ್ಷಣಸಂಪನ್ನಳು. ಕುರುಕುಲತಿಲಕನಾದ ವಿಚಿತ್ರವೀರ್ಯನ ಸೊಸೆಯು. ಭುಜಬಲ-ಪರಾಕ್ರಮಗಳಿಂದ ಕುರುವಂಶದ ಕೀರ್ತಿಯನ್ನು ದಿಗಂತಕ್ಕೂ ಹರಡಿದ ಪಾಂಡುವಿನ ಮಡದಿಯು. ಅತುಲಪರಾಕ್ರಮಿಗಳಾದ ಐವರು ಮಕ್ಕಳ ತಾಯಿಯು. ಕಮಲದ ಎಸಳಿನಂತೆ ಕೋಮಲವಾದ ಶರೀರಕಾಂತಿಯಿಂದ ಕೂಡಿ ಹಂಸ ತೂಲಿಕೆಯ ಮೇಲೆ ಮಲಗುತ್ತಿದ್ದ ಈ ನನ್ನ ತಾಯಿಯಿಂದು ಈ ಘೋರಾರಣ್ಯದಲ್ಲಿ ಆಲದ ಮರದ ಬುಡದಲ್ಲಿ, ಕಲ್ಲು-ಮುಳ್ಳುಗಳಿಂದ ಕೂಡಿರುವ ಈ ಭೂಪ್ರದೇಶದಲ್ಲಿ ಮಲಗಿರುವಳು. ಅಯ್ಯೋ! ಬರಿಯ ನೆಲವೆಂಬ ಪರಿವೆಯೇ ಇಲ್ಲದೇ ಮಲಗಿರುವಳಲ್ಲಾ! ದೇವಾಧಿದೇವತೆಗಳಾದ ಧರ್ಮ, ಇಂದ್ರ, ವಾಯು–ಇವರಿಂದ ಮಕ್ಕಳನ್ನು ಪಡೆದ ಈ ಮಾತೆಯಿಂದು ಬಳಲಿ-ಬೆಂಡಾಗಿ, ಗಡುಸಾದ ಈ ನೆಲದ ಮೇಲೆ ಮಲಗಿರುವಳಲ್ಲಾ!

ಇವಳೂ ಮತ್ತು ನರವ್ಯಾಘ್ರರಾದ ಈ ನನ್ನ ಸಹೋದರರೂ ಇಂತಹ ದುರವಸ್ಥೆಯಲ್ಲಿರುವುದನ್ನು ನಾನು ಕಾಣುತ್ತಿರುವೆನಲ್ಲವೇ? ಇದಕ್ಕಿಂತಲೂ ದುಃಖಕರವಾದುದು ಬೇರಾವುದಿದೆ?

ಈ ಪುರುಷವ್ಯಾಘ್ರರು ಬರಿಯ ನೆಲದ ಮೇಲೆ ಮಲಗಿರುವ ದಾರುಣ ದೃಶ್ಯವನ್ನು ನಾನಿಂದು ಕಾಣುತ್ತಿರುವೆನು. ಅಯ್ಯೋ ವಿಧಿಯೇ! ಎಂತಹ

ಹತಾಶನು ನಾನು? ಧರ್ಮಾತ್ಮನಾದ, ಅಖಂಡಭೂಮಂಡಲಕ್ಕೂ ಚಕ್ರ ವರ್ತಿಯಾಗಲು ಅರ್ಹನಾಗಿರುವ ಯುಧಿಷ್ಠಿರನಿಂದು ಸಾಮಾನ್ಯಮಾನವ ನಂತೆ ಬರಿಯ ನೆಲದ ಮೇಲೆ ಬಳಲಿಕೆಯಿಂದ ಮಲಗಿ ನಿದ್ರಿಸುತ್ತಿರುವನು. ನೀಲಮೇಘಶ್ಯಾಮನಾದ, ನರಶ್ರೇಷ್ಠನಾದ ಈ ಅರ್ಜುನನೂ ಸಾಮಾನ್ಯ ರಂತೆ ಬರಿಯ ನೆಲದ ಮೇಲೆ ಮಲಗಿ ನಿದ್ರಿಸುತ್ತಿರುವನು. ಇದಕ್ಕಿಂತಲೂ ದುಃಖಕರವಾದ ದೃಶ್ಯವು ಮತ್ತೊಂದಿರುವುದೇ? ಸೌಂದರ್ಯದಲ್ಲಿ ಅಶ್ವಿನೀ ದೇವತೆಗಳನ್ನೂ ಮೀರಿಸುವ ಈ ಯಮಳರೂ ದಿಕ್ಕುಗೆಟ್ಟ ಮಾನವರಂತೆ ಇಲ್ಲಿ ನಿದ್ರಿಸುತ್ತಿದ್ದಾರೆ.

**ಜ್ಞಾತಯೋ ಯಸ್ಯ ನೈವ ಸ್ಯುರ್ವಿಷಮಾಃ ಕುಲಪಾಂಸನಾಃ ।**
**ಸ ಜೀವೇತ ಸುಖಂ ಲೋಕೇ ಗ್ರಾಮದ್ರುಮ ಇವೈಕಜಃ ॥೩೨॥**

ಮಾತ್ಸರ್ಯದಿಂದ ಕೂಡಿರುವ, ಕುಲಘಾತಕರಾದ ಬಂಧು-ದಾಯಾದರನ್ನು ಪಡೆಯದಿರುವವರು ಗ್ರಾಮದಲ್ಲಿರುವ ಒಂಟಿಮರದಂತೆ ಸುಖದಿಂದ ಬದುಕಿ ಬಾಳುತ್ತಾರೆ.

**ಏಕೋ ವೃಕ್ಷೋ ಹಿ ಯೋ ಗ್ರಾಮೇ ಭವೇತ್ಪರ್ಣಫಲಾನ್ವಿತಃ ।**
**ಚೈತ್ಯೋ ಭವತಿ ನಿರ್ಜ್ಞಾತಿರರ್ಚನೀಯಃ ಸುಪೂಜಿತಃ ॥೩೩॥**

ಹೇಗೆಂದರೆ : ಫಲ-ಪುಷ್ಪಭರಿತವಾಗಿರುವ, ಗ್ರಾಮಸಮೀಪದಲ್ಲಿರುವ ಒಂಟಿಮರವನ್ನು ಆ ಊರಿನವರೆಲ್ಲರೂ ದೇವವೃಕ್ಷವೆಂದೇ ಭಾವಿಸಿ, ಗೌರವಿಸಿ, ಪೂಜಿಸಿ ಪೋಷಿಸುತ್ತಾರೆ. ಬೇರೊಂದು ಮರವೇ ಇಲ್ಲದಿದ್ದರೆ ಇರುವ ಒಂದೇ ಮರವನ್ನು ಜನರು ಖಂಡಿತವಾಗಿಯೂ ಉದಾಸೀನತೆ ಯಿಂದ ಕಾಣಲಾರರು. ಅದರಂತೆ ಬಂಧು-ದಾಯಾದರಿಲ್ಲದಿದ್ದರೂ ಒಬ್ಬ ಮನುಷ್ಯನು ಸುಖವಾಗಿ ಬಾಳಲು ಅವಕಾಶವಿದೆ.

**ಯೇಷಾಂ ಚ ಬಹವಃ ಶೂರಾಃ ಜ್ಞಾತಯೋ ಧರ್ಮಮಾಶ್ರಿತಾಃ ।**
**ತೇ ಜೀವನ್ತಿ ಸುಖಂ ಲೋಕೇ ಭವನ್ತಿ ಚ ನಿರಾಮಯಾಃ ॥೩೪॥**

ಹಲವಾರು ಮಂದಿ ಪರಾಕ್ರಮಿಗಳಾದ ಬಂಧು-ಬಾಂಧವರಿಂದೊಡ ಗೂಡಿಯೂ ಸುಖವಾಗಿ ಬಾಳಿ ಬದುಕಬಹುದು. ಆದರೆ ಬಂಧು-ಬಾಂಧ ವರು ಧರ್ಮಾತ್ಮರಾಗಿಯೂ, ಹಿತಾಕಾಂಕ್ಷಿಗಳಾಗಿಯೂ ಇರಬೇಕು.

**ಬಲವನ್ತಃ ಸಮೃದ್ಧಾರ್ಥಾ ಮಿತ್ರಬಾನ್ಧವನನ್ದನಾಃ ।**
**ಜೀವನ್ತ್ಯನ್ಯೋನ್ಯಮಾಶ್ರಿತ್ಯ ದ್ರುಮಾಃ ಕಾನನಜಾ ಇವ ॥೩೫॥**

ಅರಣ್ಯದಲ್ಲಿರುವ ವೃಕ್ಷಗಳು ಅನ್ಯೋನ್ಯಾಶ್ರಯದಿಂದ ಬೆಳೆಯುವುವು. ಅದರಂತೆಯೇ ಬಂಧು-ಮಿತ್ರರೂ ಮತ್ತು ಜ್ಞಾತಿಗಳೂ ಪರಾಕ್ರಮಶಾಲಿ ಗಳಾಗಿದ್ದು, ಶ್ರೇಯಃ-ಪ್ರೇಯಗಳಲ್ಲಿ ಒಬ್ಬರಿಗೊಬ್ಬರು ಪ್ರೋತ್ಸಾಹವನ್ನೀ ಯುತ್ತಾ, ಪರಸ್ಪರಾವಲಂಬನೆಯಿಂದಿದ್ದರೆ–ಆಗಲೂ ಸುಖವಾಗಿ ಜೀವಿಸು ತ್ತಾರೆ.

ಆದರೆ ನಮ್ಮ ಇಂದಿನ ಸ್ಥಿತಿಯು ಹಾಗಿರುವುದಿಲ್ಲ. ನಮ್ಮ ಬಂಧು-ದಾಯಾದರು ನಮ್ಮನ್ನು ಬಹಳವಾಗಿ ಈರ್ಷ್ಯೆಯಿಂದ ಕಾಣುತ್ತಿ ದ್ದಾರೆ. ನಮ್ಮ ವಿನಾಶಕ್ಕೆ ತಕ್ಕ ಸನ್ನಾಹವನ್ನೂ ಅನವರತವೂ ಮಾಡುತ್ತಲೇ ಇರುತ್ತಾರೆ. ಧೃತರಾಷ್ಟ್ರನಿಂದ ಮತ್ತು ಅವನ ಮಗನಾದ ದುರಾತ್ಮನಾದ ದುರ್ಯೋಧನನಿಂದ ನಾವು ದೇಶಭ್ರಷ್ಟರಾಗಿ ಮಾಡಲ್ಪಟ್ಟೆವು. ಬೇರೆಡೆ ಯಲ್ಲಿಯೂ ನಾವು ಬದುಕಿರುವುದನ್ನು ಆ ಪಾಪಿಯು ಸಹಿಸಲಿಲ್ಲ. ನಮ್ಮೈವರನ್ನೇ ಅಲ್ಲದೇ–ಪಾಪವೆಂದರೇನೆಂಬುದನ್ನೇ ಅರಿಯದ ನಮ್ಮ ತಾಯಿಯನ್ನೂ ಸುಟ್ಟುಬಿಡಲು ನಿಶ್ಚಯಿಸಿದ್ದನು. ಅದೃಷ್ಟವಶದಿಂದ ಬಹಳ ಕಷ್ಟದಿಂದ ಅದನ್ನೂ ತಪ್ಪಿಸಿಕೊಂಡು ಬಂದದ್ದಾಯಿತು. ಅಲ್ಲಿಂದ ತಪ್ಪಿಸಿಕೊಂಡು ಬಂದು ಈಗ ಈ ಮರದ ನೆರಳಿನಲ್ಲಿದ್ದೇವೆ. ಇಲ್ಲಿಯವರೆಗೂ ಇಷ್ಟೆಲ್ಲಾ ಕಷ್ಟಗಳನ್ನೂ ಅನುಭವಿಸಿ ಮುಂದೆಲ್ಲಿ ಹೋಗುವುದು?”

ಹೀಗೆ ಯೋಚಿಸುತ್ತಿದ್ದಂತೆಯೇ ಭೀಮನ ಮುಖದಿಂದ ನಿಟ್ಟುಸಿ ರೊಂದು ಹೊರಬಂದಿತು. ದುರ್ಯೋಧನನನ್ನು ನೆನೆಯುತ್ತಿದ್ದಂತೆಯೇ ಭೀಮನ ಮುಖವು ಕೆಂಪೇರಿತು. ಕಟ-ಕಟನೆ ಹಲ್ಲುಕಡಿದನು.

“ಮುಂದೇನಾಗುವುದೆಂಬ ದೂರಮತಿಯಿಲ್ಲದ ದುರ್ಮತಿಯೇ! ಇಂದು ನಿನ್ನ ಇಷ್ಟಾರ್ಥವೇನೋ ಕೈಗೂಡಿರಬಹುದು. ಅಂಧರಾಜನ ಮಗ ನಾದ ನೀನಿಂದು ಕ್ಷಣಿಕವಾದ ಸುಖವನ್ನು ಅನುಭವಿಸುತ್ತಿರುವೆ. ನಿಶ್ಚಯ ವಾಗಿಯೂ ಈ ಸಮಯದಲ್ಲಿ ದೈವವು ನಿನ್ನ ಭಾಗಕ್ಕಿದ್ದು, ನಿನ್ನ ಗ್ರಹಗತಿ ಗಳೂ ಚೆನ್ನಾಗಿವೆ. ಮೂಢನೇ! ನೀನು ಇದುವರೆಗೂ ಜೀವಸಹಿತ ಉಳಿದಿ

ರುವ ಕಾರಣವನ್ನಾದರೂ ತಿಳಿದಿರುವೆಯಾ? ಪಾಪಿಗಳೇ! ಯುಧಿಷ್ಠಿರನು ನಿಮ್ಮ ಪ್ರಾಣಾಪಹಾರಮಾಡಲು ನನಗೆ ಅನುಮತಿಯನ್ನು ಕೊಟ್ಟಿಲ್ಲವಾದು ದರಿಂದ ನಿಮ್ಮ ಜೀವಗಳು ಉಳಿದಿರುವುವೆಂಬುದನ್ನು ಮರೆಯಬೇಡಿರಿ. ದುರ್ಯೋಧನ! ಹಾಗಿಲ್ಲದಿದ್ದರೆ ಇಂದೇ–ಈ ಕ್ಷಣದಲ್ಲಿಯೇ, ಕರ್ಣ-ದುಃಶಾಸನಾದಿಗಳೊಡನೆ ಸಬಾಂಧವನಾದ ನಿನ್ನನ್ನು ಯಮಾಲಯಕ್ಕೆ ಕಳು ಹಿಸಿಬಿಡುತ್ತಿದ್ದೆನು. ಆದರೆ, ನಾನೇನು ಮಾಡಲಿ? ಪಾಪಿಯೇ! ಧರ್ಮಾತ್ಮ ನಾದ ಯುಧಿಷ್ಠಿರನು ನಿಮ್ಮ ಮೇಲೆ ಇನ್ನೂ ಕೋಪಗೊಂಡಿರುವುದಿಲ್ಲ."

ಭೀಮನು ಅಂಗೈಗಳನ್ನು ಮಸೆಯುತ್ತಾ, ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ ಇರುವುದನ್ನು ನೋಡಿದರೆ–ಕಾಲನೇ ಬಂದು ನಿಂತಿರುವಂತೆ–ಭಾಸವಾಗುತ್ತಿತ್ತು. ಮರುಕ್ಷಣದಲ್ಲಿಯೇ ಭೀಮನ ದೃಷ್ಟಿಯು ಮಲಗಿರುವ ಸಹೋದರರೆಡೆಗೆ ಪ್ರಸರಿಸಿ ಅವನ ಹೃದಯದಲ್ಲಿ ಕಾರುಣ್ಯವು ತುಂಬಿತು. ಜ್ವಾಲೆಯುಡುಗಿದ ಯಜ್ಞೇಶ್ವರನಂತೆ ಭೀಮನ ಕೋಪವೆಲ್ಲವೂ ಶಾಂತವಾಗಿ ಹೋಯಿತು. ಸಹೋದರರೆಲ್ಲರೂ ಸಾಮಾನ್ಯಮಾನವರಂತೆ ಯಾವ ವಿಧವಾದ ಯೋಚನೆಯೂ ಇಲ್ಲದೇ ನಿಶ್ಚಿಂತರಾಗಿ ಭೂಮಿಯ ಮೇಲೆ ಮಲಗಿದ್ದರು. ಭೀಮನು ಒಂದೆರಡು ಕ್ಷಣಗಳು ಸುತ್ತಲೂ ನೋಡಿ ಹತ್ತಿರ ದಲ್ಲಿಯೇ ಒಂದು ಪಟ್ಟಣವಿರಬಹುದೆಂದು ಊಹಿಸಿದನು. ಪುನಃ ಸಹೋ ದರರ ಪಕ್ಕದಲ್ಲಿ ಕುಳಿತು ಯೋಚಿಸಿದನು : "ಎಚ್ಚರವಾಗಿರಬೇಕಾದ ಸ್ಥಳ ದಲ್ಲಿ ಇವರು ಹೀಗೆ ಮಲಗಿರುವಾಗ ನಾನು ಎಚ್ಚರದಿಂದಲೇ ಕುಳಿತಿರಬೇಕು. ಎದ್ದಮೇಲೆಯೇ ಇವರು ನೀರನ್ನು ಕುಡಿಯಲಿ. ಈಗ ಸಂಪೂರ್ಣವಾಗಿ ನಿದ್ರಿಸಿ ಆಯಾಸವನ್ನು ಪರಿಹರಿಸಿಕೊಳ್ಳಲಿ."

ಜನಮೇಜಯ! ಭೀಮನು ಈ ರೀತಿಯಾಗಿ ನಿಶ್ಚಯಿಸಿ ತಾನು ಜಾಗ್ರತನಾಗಿಯೇ ಕುಳಿತಿದ್ದನು.

೧೫೧ನೆಯ ಅಧ್ಯಾಯವು ಮುಗಿಯಿತು.

೧೫೨ನೆಯ ಅಧ್ಯಾಯ ಹಿಡಿಂಬವಧಪರ್ವ

## ಹಿಡಿಂಬೆಯ ಆಗಮನ : ಭೀಮನೊಡನೆ ಪ್ರೇಮಾಲಾಪ

ಜನಮೇಜಯ! ಪಾಂಡವರು ಮಲಗಿದ್ದ ಸ್ಥಳಕ್ಕೆ ಸ್ವಲ್ಪ ದೂರ

ದಲ್ಲಿಯೇ ಒಂದು ದೊಡ್ಡ ಸಾಲವೃಕ್ಷವಿತ್ತು. ಅದರ ಮೇಲೆ ಹಿಡಿಂಬನೆಂಬ ರಾಕ್ಷಸನು ವಾಸವಾಗಿದ್ದನು. ಅವನು ನರಭಕ್ಷಕನಾಗಿದ್ದನಲ್ಲದೇ– ಮಹಾ ಪರಾಕ್ರಮಿಯೂ ಆಗಿದ್ದನು. ಬಹಳ ಕ್ರೂರಿಯಾಗಿಯೂ, ಹೆಚ್ಚು ಮೊನಚಾದ ಕೋರೆದಾಡೆಗಳನ್ನು ಹೊಂದಿ ಭಯಂಕರನಾಗಿಯೂ, ಜಲಸಹಿತವಾದ ಕಾರ್ಮುಗಿಲಿನಂತೆ ಕಪ್ಪಾಗಿಯೂ, ತಾಮ್ರಾಕ್ಷನಾಗಿಯೂ ಇದ್ದನು. ಆ ಸಮಯದಲ್ಲಿ ಅವನು ಹಸಿವೆಯಿಂದ ಕಂಗೆಟ್ಟು, ಮಾನವಮಾಂಸಕ್ಕೆ ಹಾತೊರೆಯುತ್ತಿದ್ದನು. ಮುಂದಕ್ಕೆ ನೇತುಬಿದ್ದಂತಿದ್ದ ಉದ್ದವಾದ ಕಿಬ್ಬೊಟ್ಟೆಯಿಂದ ಕೂಡಿದ್ದನಲ್ಲದೇ–ಅವನ ಹೊಟ್ಟೆಯು ಬಹಳ ನೀಳವಾಗಿತ್ತು. ಅವನ ತಲೆ, ಮೀಸೆ ಮತ್ತು ಗಡ್ಡದ ಕೂದಲುಗಳು ರಕ್ತದಂತೆ ಕೆಂಪಾಗಿದ್ದುವು. ಅವನ ಕತ್ತು ಮತ್ತು ಹೆಗಲುಗಳು ಮಹಾವೃಕ್ಷದಂತೆ ವಿಶಾಲವಾಗಿಯೂ, ಕಠಿನವಾಗಿಯೂ ಇದ್ದುವು. ಅವನ ಕಿವಿಗಳು ಶಂಕುವಿನಂತಿದ್ದು ಭಯಂಕರವಾದ ಆಕೃತಿಯನ್ನು ಹೊಂದಿದ್ದುವು. ಕರಾಳರೂಪಿಯಾದ, ವಿರೂಪಾಕ್ಷನಾದ ಮತ್ತು ಪಿಂಗಾಕ್ಷನಾದ ಹಿಡಿಂಬನು ತಾನು ಕುಳಿತಿದ್ದ ಜಾಗದಿಂದಲೇ ಸುತ್ತಲೂ ಒಮ್ಮೆ ವೀಕ್ಷಿಸಿದನು. ಮರದ ಕೆಳಗೆ ಮಲಗಿದ್ದ ಪಾಂಡವರು ಅವನ ದೃಷ್ಟಿಗೆ ಗೋಚರರಾದರು. ತಲೆಯ ಮೇಲೆ ವಕ್ರ-ವಕ್ರವಾಗಿ ನಿಮಿರಿನಿಂತಿದ್ದ, ಒರಟಾಗಿದ್ದ ಕೂದಲುಗಳನ್ನು ಬೆರಳುಗಳಿಂದ ಕೆರೆದುಕೊಳ್ಳುತ್ತಾ, ಮಹಾವಕ್ರನಾದ ಹಿಡಿಂಬನು–ಸುರಂಗದಂತಿದ್ದ, ಕೆಟ್ಟವಾಸನೆಯಿಂದ ಕೂಡಿದ್ದ ಬಾಯನ್ನು ಕ್ಷಣ-ಕ್ಷಣಕ್ಕೂ ಹಿಗ್ಗಿಸಿ ಆಕಳಿಸುತ್ತಾ, ಪಾಂಡುನಂದನರನ್ನು ಪುನಃ ಪುನಃ ವೀಕ್ಷಿಸತೊಡಗಿದನು. ಸ್ಥೂಲಶರೀರನಾದ, ಮಹಾಬಲಶಾಲಿಯಾದ, ಕಪ್ಪಾದ ಮೋಡದ ಕಾಂತಿಯನ್ನು ಹೊಂದಿದ್ದ, ಕೋರೆದಾಡೆಗಳಿಂದ ಕೂಡಿದ್ದ ಹಿಡಿಂಬನಿಗೆ ಮನುಷ್ಯನ ಮಾಂಸವೆಂದರೆ ಮಹಾಪ್ರೀತಿ. ಮನುಷ್ಯನ ವಾಸನೆಯನ್ನು ಕ್ಷಣ-ಕ್ಷಣಕ್ಕೂ ಆಘ್ರಾಣಿಸುತ್ತಾ ತನ್ನ ಪಕ್ಕದಲ್ಲಿದ್ದ ತಂಗಿಯನ್ನು ಸಂಬೋಧಿಸಿ ಹೇಳಿದನು :

"ಪ್ರಿಯಸೋದರಿ! ಬಹಳ ದಿನಗಳನಂತರ ನಮಗೆ ಹೆಚ್ಚು ಪ್ರಿಯವಾದ ಆಹಾರವು ಸಿಕ್ಕಿದೆ. ಈ ಸುಮಧುರವಾದ ಆಹಾರವನ್ನು ನೆನೆದಂತೆಲ್ಲಾ ನನ್ನ ನಾಲಿಗೆಯಿಂದ ಜೊಲ್ಲುಸುರಿಯಲು ಪ್ರಾರಂಭವಾಗುತ್ತದೆ. ಚೂಪಾಗಿರುವ ನನ್ನ ಎಂಟು ಕೋರೆಹಲ್ಲುಗಳು ಯಾವ ವಸ್ತುವನ್ನೇ ಕೊಟ್ಟರೂ

ಅಡೆ-ತಡೆಯಿಲ್ಲದೇ ಹರಿದು-ಕಿತ್ತುಬಿಡುತ್ತವೆ. ಈ ಹಲ್ಲುಗಳನ್ನು ಇಂದು ನಾನು ಇವರ ಶರೀರಗಳಲ್ಲಿರುವ ರುಚಿ-ರುಚಿಯಾದ ಮಾಂಸಗಳಲ್ಲಿ ಮುಳುಗಿಸಿಬಿಡುತ್ತೇನೆ.

ಅಲ್ಲಿ ಮಲಗಿರುವ ಮಾನವರ ಕುತ್ತಿಗೆಗಳನ್ನು ಬಗೆದು, ರಕ್ತಧಮನಿ ಗಳನ್ನು ಸೀಳಿ, ಚಿಮ್ಮುವ ಬಿಸಿ-ಬಿಸಿಯಾದ, ಹೊಸದಾದ, ನೊರೆಯಿಂದ ಕೂಡಿದ ರಕ್ತವನ್ನು ಹೀರಿಬಿಡುತ್ತೇನೆ. ನೀನು ಈಗಲೇ ಹೋಗಿ ಅಲ್ಲಿ ಮಲಗಿರುವವರು ಯಾರೆಂಬುದನ್ನು ತಿಳಿ. ಅತ್ತಕಡೆಯಿಂದ ಬರುತ್ತಿರುವ ಮನುಷ್ಯವಾಸನೆಯು ನನ್ನ ಘ್ರಾಣೇಂದ್ರಿಯಕ್ಕೆ ಬಹಳ ಆನಂದವನ್ನುಂಟು ಮಾಡುತ್ತಿದೆ. ಅಲ್ಲಿರುವವರೆಲ್ಲರನ್ನೂ ಕೊಂದು, ನನ್ನಲ್ಲಿಗೆ ಕೂಡಲೇ ತೆಗೆದು ಕೊಂಡು ಬಾ. ಅವರೆಲ್ಲರೂ ನಮ್ಮ ಆಡಳಿತಕ್ಕೊಳಪಟ್ಟ ಪ್ರದೇಶದಲ್ಲಿಯೇ ಮಲಗಿರುವುದರಿಂದ ನೀನು ಭಯಪಡುವ ಕಾರಣವಿಲ್ಲ. ನನ್ನ ಆಜ್ಞೆಯನ್ನು ಕೂಡಲೇ ನಿರ್ವಹಿಸು. ನೀನಿಲ್ಲಿಗೆ ಅವರನ್ನು ಕೊಂದುತಂದನಂತರ ಇಬ್ಬರೂ ಸೇರಿ ಶರೀರಗಳಿಂದ ಮಾಂಸವನ್ನು ಕಿತ್ತು, ಸ್ವೇಚ್ಛೆಯಿಂದ ತಿಂದುಬಿಡೋಣ. ರಕ್ತ-ಮಾಂಸಗಳನ್ನು ಯಥೇಚ್ಛವಾಗಿ ಕುಡಿದು-ತಿಂದು, ನಾವಿಬ್ಬರೂ ನಾನಾರೀತಿಯ ತಾಳ-ಲಯಗಳಿಗೆ ಅನುಸಾರವಾಗಿ ನರ್ತನಮಾಡೋಣ."

ಹಿಡಿಂಬನು ಹೊಟ್ಟೆಯನ್ನು ನೀವಿಕೊಂಡು ಆರಾಮವಾಗಿ ಮಲಗಿಯೇ ಇದ್ದನು. ಹಿಡಿಂಬೆಯು–ತಾಯಿಯೊಡನೆ ಐವರು ಮಾನವರನ್ನೂ ಕೊಂದು ತರುವಳೆಂಬುದರಲ್ಲಿ ಅವನಿಗೆ ಯಾವ ಸಂಶಯವೂ ಇರಲಿಲ್ಲ. ಅಣ್ಣನ ಮಾತಿನಂತೆ ಹಿಡಿಂಬೆಯು ಪಾಂಡವರು ಮಲಗಿದ್ದ ಸ್ಥಳಕ್ಕೆ ಬಂದಳು. ಐವರು ಮಲಗಿರುವುದನ್ನೂ, ಅಪರಾಜಿತನಾದ ಭೀಮಸೇನನೊಬ್ಬನು ಅವರೆಲ್ಲವನ್ನೂ ಕಾಯುತ್ತಾ ಕುಳಿತಿರುವುದನ್ನೂ ನೋಡಿದಳು. ಸುಂದರ ನಾಗಿದ್ದ, ಶಾಲವೃಕ್ಷದಂತೆ ಅದ್ಭುತಾಕಾರವನ್ನು ಹೊಂದಿದ್ದ ಭೀಮನನ್ನು ನೋಡಿದೊಡನೆಯೇ–ಕೊಲ್ಲಲು ಬಂದಿದ್ದ ಹಿಡಿಂಬೆಯ ಹೃದಯಾಂತರಾಳ ದಲ್ಲಿದ್ದ ಕಾಮಜ್ಯೋತಿಯು ಉದ್ದೀಪ್ತವಾಯಿತು. ಮುಂದಕ್ಕೆ ಹೆಜ್ಜೆಯಿಡದೇ ನಿಂತಲ್ಲಿಯೇ ನಿಂತು ಭೀಮನನ್ನೇ ದಿಟ್ಟಿಸಿನೋಡುತ್ತಾ ತನ್ನಲ್ಲಿಯೇ ಯೋಚಿಸ ತೊಡಗಿದಳು. "ಎಂತಹ ಸುಂದರವಾದ ರೂಪು! ಶ್ಯಾಮಲವರ್ಣದ

ಶರೀರ ; ಮಹಾಬಾಹುಗಳಿಂದ ಕೂಡಿರುವನು. ಸಿಂಹದ ಸ್ಕಂಧದಂತೆ ಸ್ಕಂಧ ಗಳುಳ್ಳವನಾಗಿದ್ದಾನೆ. ಇವನ ಕುತ್ತಿಗೆಯು ಮೂರು ಗೆರೆಗಳಿಂದ ಕೂಡಿದ್ದು ಸೊಗಸಾದ ಶಂಖದಂತೆಯೇ ಇದೆ. ಇವನ ಕಣ್ಣುಗಳು ಕಮಲದಂತೆ ಸುಂದರ ವಾಗಿವೆ. ಇಂತಹ ಸರ್ವಾಂಗಸುಂದರನು ನನಗೆ ಪತಿಯಾಗಲು ಯೋಗ್ಯ ನಾಗಿರುವನು.

**ನಾಹಂ ಭ್ರಾತೃವಚೋ ಜಾತು ಕುರ್ಯಾಂ ಕ್ರೂರೋಪಸಂಹಿತಮ್ ।**
**ಪತಿಸ್ನೇಹೋಽತಿಬಲವಾನ್ನ ತಥಾ ಭ್ರಾತೃಸೌಹೃದಮ್ ॥೧೯॥**

ನಾನು ನಮ್ಮಣ್ಣನ ಕ್ರೂರವಾದ ಆಜ್ಞೆಯನ್ನು ಖಂಡಿತವಾಗಿಯೂ ನಿರ್ವಹಿಸುವುದಿಲ್ಲ. ಸ್ತ್ರೀಯರಿಗೆ ಗಂಡನ ಮೇಲಿರುವ ಪ್ರೇಮವು ಸೋದರನ ಮೇಲಿರುವ ಪ್ರೀತಿಗಿಂತಲೂ ಹೆಚ್ಚಿನದಾಗಿರುತ್ತದೆ.

**ಮುಹೂರ್ತಮೇವ ತೃಪ್ತಿಶ್ಚ ಭವೇದ್ಭ್ರಾತುರ್ಮಮೈವ ಚ ।**
**ಹತೈರೇತೈರಹತ್ವಾ ತು ಮೋದಿಷ್ಯೇ ಶಾಶ್ವತೀಃ ಸಮಾಃ ॥೨೦॥**

ಅಣ್ಣನ ಆಜ್ಞೆಯಂತೆ ನಾನಿವರನ್ನು ಕೊಂದದ್ದೇ ಆದರೆ ಅದರಿಂದ ನಾನೂ ಮತ್ತು ನನ್ನಣ್ಣನೂ ಅನುಭವಿಸುವ ಸುಖವು ಕೇವಲ ಕ್ಷಣಿಕ ವಾದುದು. ಭೋಜ್ಯವಸ್ತುವು ನಾಲಿಗೆಯ ಮೇಲಿರುವಾಗ ಮಾತ್ರ ಕ್ಷಣಿಕ ವಾದ ರುಚಿಯನ್ನು ಉಂಟುಮಾಡುವುದೇ ಹೊರತು ಗಂಟಲೊಳಗೆ ನುಸುಳಿದನಂತರ ಅದರ ರುಚಿಯನ್ನು ಅನುಭವಿಸಲು ಸಾಧ್ಯವಾಗುವುದಿಲ್ಲ. ನಾನಿವನನ್ನು ಕೊಲ್ಲದೇ ಒಲಿಸಿಕೊಂಡೆನಾದರೆ–ಇವನ ಜೊತೆಯಲ್ಲಿ ಅನವರತವಾದ ದಾಂಪತ್ಯಸುಖವನ್ನು ಅನುಭವಿಸುತ್ತಾ ಅನಂತವರ್ಷಗಳ ಕಾಲ ಸಂತೋಷದಿಂದಿರಬಹುದು."

ಇಷ್ಟಬಂದಂತೆ ರೂಪವನ್ನು ಹೊಂದಬಲ್ಲ ಶಕ್ತಿಯನ್ನು ಪಡೆದಿದ್ದ ರಾಕ್ಷಸಿಯಾದ ಹಿಡಿಂಬೆಯು ಹೀಗೆ ನಿರ್ಧರಿಸಿ, ಸುಂದರವಾದ ಮಾನುಷಸ್ತ್ರೀ ರೂಪವನ್ನು ಧರಿಸಿ, ಮೆಲ್ಲ-ಮೆಲ್ಲನೆ ಹೆಜ್ಜೆಗಳನ್ನಿಡುತ್ತಾ ಭೀಮನ ಸಮೀಪಕ್ಕೆ ಬಂದಳು.

ಶ್ರೇಷ್ಠವಾದ ಮತ್ತು ಉತ್ತಮವಾದ ಆಭರಣಗಳನ್ನು ಧರಿಸಿದ್ದ

ಹಿಡಿಂಬೆಯು ಮುಗುಳ್ನಗೆಯನ್ನು ಬೀರುತ್ತಾ, ಲಜ್ಜಾನ್ವಿತೆಯಾಗಿರುವಂತೆ ನಟಿಸುತ್ತಾ ಭೀಮನನ್ನು ಕೇಳಿದಳು :

"ಮಾನವಶ್ರೇಷ್ಠನೇ! ನೀನೆಲ್ಲಿಂದ ಬಂದೆ ಮತ್ತು ನೀನು ಯಾರು? ಅಂತಃಪುರದಲ್ಲಿ ಮಲಗುವಂತೆ ನಿರ್ಭಯವಾಗಿ ನಿದ್ರಿಸುತ್ತಿರುವ, ವೃದ್ಧೆಯಾಗಿ ರುವ, ಶ್ಯಾಮಲವರ್ಣದವಳಾಗಿರುವ, ಕೋಮಲಶರೀರಳಾದ ಇವಳಾರು? ಇವಳು ನಿನಗೇನಾಗಬೇಕು? ಇದು ರಾಕ್ಷಸರ ವಿಹಾರಪ್ರದೇಶವೆಂಬುದು ಈಕೆಗೆ ತಿಳಿಯದು. ಕ್ರೂರನಾದ ಹಿಡಿಂಬನೆಂಬ ರಾಕ್ಷಸನೊಬ್ಬನು ಇಲ್ಲಿ ಜೀವಿಸುತ್ತಿರುವನು. ನಾನು ಅವನಿಂದಲೇ ಕಳುಹಿಸಲ್ಪಟ್ಟಿರುವೆನು. ಏಕೆಂಬುದು ಗೊತ್ತೇ? ತನ್ನ ಆಹಾರಕ್ಕಾಗಿ ನಿಮ್ಮೆಲ್ಲರನ್ನೂ ಕೊಂಡೊಯ್ಯು ವುದಕ್ಕಾಗಿಯೇ ನನ್ನನ್ನಿಲ್ಲಿಗೆ ಅವನು ಕಳುಹಿಸಿರುವನು. ಆದರೆ ಅಮರ ರೂಪಿಯಾದ ನಿನ್ನನ್ನು ನೋಡಿದ ನಂತರ..."

ಭೀಮನು ಹಿಡಿಂಬೆಯ ಮಾತುಗಳನ್ನು ಅದುವರೆಗೂ ಕೇಳುತ್ತಿದ್ದ ವನು ಆ ಸಮಯಕ್ಕೆ ಸರಿಯಾಗಿ ಅವಳ ಮುಖವನ್ನು ದಿಟ್ಟಿಸಿ ನೋಡಿದನು. ಹಿಡಿಂಬೆಗೆ ಒಂದೆರಡು ಕ್ಷಣಗಳು ಮಾತುಗಳು ಹೊರಡಲಿಲ್ಲ. ಲಜ್ಜಾನ್ವಿತೆ ಯಾಗಿ ತಲೆತಗ್ಗಿಸಿ ನಿಂತಿದ್ದಳು. ಭೀಮನು ಮೌನದಿಂದಿದ್ದುದನ್ನು ಕಂಡು ತನ್ನ ಆಶಯವನ್ನು ಸ್ಪಷ್ಟಪಡಿಸಿದಳು : "ನಿನ್ನನ್ನು ಬಿಟ್ಟು ಬೇರೊಬ್ಬನನ್ನು ವರಿಸಕೂಡದೆಂದು ನಿಶ್ಚಯಿಸಿಬಿಟ್ಟಿದ್ದೇನೆ. ನೀನು ಸಕಲಧರ್ಮಗಳನ್ನೂ ತಿಳಿದವನಾಗಿರುವೆ. ನನ್ನ ವಿಷಯದಲ್ಲಿ ಹೇಗೆ ವರ್ತಿಸುವುದು ಸೂಕ್ತವೆನಿಸುವುದೋ ಹಾಗೆಯೇ ಮಾಡು. ನನ್ನ ಹೃದಯವೂ ಮತ್ತು ಶರೀರವೂ ಮದನನ ಮಾರಕಾಸ್ತ್ರಗಳಿಂದ ಪೀಡಿಸಲ್ಪಡುತ್ತಿವೆ. ನಿನ್ನವ ಳಾಗಲು ಕಾತರಳಾಗಿ ಬಂದಿರುವ ನನ್ನನ್ನು ಪರಿಗ್ರಹಿಸು. ಮಹಾಬಾಹು ವಾದ ಮಾನವಶ್ರೇಷ್ಠನೇ! ನರಭಕ್ಷಕನಾದ ನಮ್ಮಣ್ಣನಿಂದ ನಿನ್ನನ್ನು ಸಂರಕ್ಷಿಸುವೆನು. ನೀನು ನನ್ನ ಪತಿಯಾಗಲು ನಿರಾಕರಿಸಬೇಡ. ಸಾಮಾನ್ಯ ಮಾನವರಿಗೆ ಹೋಗಲು ಸಾಧ್ಯವಾಗದ ಪರ್ವತಶಿಖರಗಳಲ್ಲಿ ನಾವಿಬ್ಬರೂ ವಿಹರಿಸೋಣ. ನಾನು ಆಕಾಶದಲ್ಲಿಯೂ ಸಂಚರಿಸಬಲ್ಲೆನು. ನನ್ನೊಡನೆ ಸೇರಿ ನೀನು ಅಂತರಿಕ್ಷದಲ್ಲಿಯೂ ವಿಹಾರಸುಖವನ್ನು ಅನುಭವಿಸಬಹುದು."

ಭೀಮನು ಹಿಡಿಂಬೆಯ ಕಾಮಾತುರತೆಯ ಮಾತುಗಳನ್ನು ಕೇಳಿಯೂ ಕೇಳದವನಂತೆ ನಿರ್ಲಕ್ಷಿಸಿ ಸಮಯೋಚಿತವಾದ ಮಾತುಗಳನ್ನಾಡಿದನು :

"ರಾಕ್ಷಸವರಾಂಗನೆಯೇ! ರಕ್ಷಿಸುವ ಸಾಮರ್ಥ್ಯವಿರುವಾಗಲೂ ಮಲ ಗಿರುವ ತಾಯಿಯನ್ನೂ, ಅಗ್ರಜನನ್ನೂ, ಅನುಜರನ್ನೂ ಪರಿತ್ಯಜಿಸಿ ಹೊರಟು ಹೋಗಲು ಯಾರಿಗೆ ತಾನೇ ಸಾಧ್ಯವಾಗುವುದು? ನನ್ನಂತಹವರು ಕೇವಲ ಕಾಮೇಚ್ಛೆಯ ಪೂರ್ಣತೆಗಾಗಿ ಮಲಗಿರುವ ತಾಯಿ-ತಮ್ಮಂದಿರನ್ನೂ, ಧರ್ಮಾತ್ಮನಾದ ಅಣ್ಣನನ್ನೂ ರಾಕ್ಷಸನಿಗೆ ಬಲಿಗೊಟ್ಟು ಹೋಗಿಬಿಡುವರೆಂದು ಭಾವಿಸಿರುವೆಯಾ? ಹಾಗೆ ಮಾಡಲು ನನಗಂತೂ ಸರ್ವಥಾ ಸಾಧ್ಯವಿಲ್ಲ."

"ನರೋತ್ತಮ! ಇವರನ್ನು ನಮ್ಮಣ್ಣನಿಗೆ ಬಲಿಗೊಡಬೇಕಾಗಿಲ್ಲ. ನಿನಗೆ ಪ್ರಿಯವಾದ ಕಾರ್ಯವನ್ನೇ ಮಾಡುತ್ತೇನೆ. ಇವರನ್ನು ಈಗಲೇ ಎಬ್ಬಿಸು. ನಿನಗೆ ಹಿತವಾಗುವ ರೀತಿಯಲ್ಲಿ ಇವರೆಲ್ಲರನ್ನೂ ಬೇರೆಡೆಗೆ ಕರೆದೊಯ್ದು ನಿಮ್ಮೆಲ್ಲರನ್ನೂ ರಕ್ಷಿಸುವೆನು."

ಭೀಮನೊಮ್ಮೆ ಗಟ್ಟಿಯಾಗಿ ನಕ್ಕು ಉತ್ತರಿಸಿದನು : "ನಿಮ್ಮಣ್ಣನಿಗೆ ಭಯಪಟ್ಟು ಓಡಿಹೋಗಬೇಕೇ? ಅವನಿಗೆ ಭಯಪಟ್ಟು ಸುಖದಿಂದ ನಿದ್ರಿ ಸುತ್ತಿರುವ ನನ್ನ ತಾಯಿಯನ್ನೂ, ಭ್ರಾತೃಗಳನ್ನೂ ಖಂಡಿತವಾಗಿಯೂ ಎಚ್ಚರಿಸುವುದಿಲ್ಲ. ಅಜೇಯನಾದ ನನ್ನ ಬಾಹುಬಲ-ಪರಾಕ್ರಮಗಳಿಗೆ ಎದುರಾಗಿ ರಾಕ್ಷಸರು ಖಂಡಿತವಾಗಿಯೂ ನಿಲ್ಲಲಾರರು. ರಾಕ್ಷಸರು ಮಾತ್ರ ವಲ್ಲ ; ಮಾನವ-ಯಕ್ಷ-ಗಂಧರ್ವ-ಕಿನ್ನರ-ಕಿಂಪುರುಷರೂ ನನ್ನ ಎದುರಾಗಿ ನಿಂತು ಸೆಣೆಸಲಾರರು. ನೀನಿಲ್ಲಿ ಇರುವುದಾದರೆ ಇರಬಹುದು ; ಹೋಗು ವುದಾದರೆ ಹೋಗಬಹುದು. ನನ್ನ ಅಡ್ಡಿ-ಆತಂಕಗಳೇನೂ ಇಲ್ಲ. ಅಥವಾ ನರಭಕ್ಷಕನಾದ ನಿಮ್ಮಣ್ಣನನ್ನೇ ಬೇಕಾದರೂ ಕಳುಹಿಸು. ನನ್ನ ಅಭ್ಯಂತರ ವೇನೂ ಇಲ್ಲ."

೧೫೨ನೆಯ ಅಧ್ಯಾಯವು ಮುಗಿಯಿತು.

## ಹಿಡಿಂಬನ ಆಗಮನ: ಭೀಮ-ಹಿಡಿಂಬರ ಕದನ

ವೈಶಂಪಾಯನರು ಹೇಳುತ್ತಾರೆ :

**ತಾಂ ವಿದಿತ್ವಾ ಚಿರಗತಾಂ ಹಿಡಿಮ್ಬೋ ರಾಕ್ಷಸೇಶ್ವರಃ ।**
**ಅವತೀರ್ಯ ದ್ರುಮಾತ್ತಸ್ಮಾದಾಜಗಾಮಾಶು ಪಾಣ್ಡವಾನ್ ॥೧॥**

ಪಾರಿಕ್ಷಿತ! ಅತ್ತಲಾಗಿ ರಾಕ್ಷಸೇಶ್ವರನಾದ ಹಿಡಿಂಬನು–ತಂಗಿಯು ತಾನು ಹೇಳಿದ ಕಾರ್ಯವನ್ನು ಪೂರೈಸಿಕೊಂಡು ಬರುವಳೆಂದು ಬಹಳ ಹೊತ್ತಿನವರೆಗೂ ಕಾದನು. ಹಿಡಿಂಬೆಯು ಬರುವ ಸುಳಿವು ಕಾಣಲಿಲ್ಲ. ಕೂಡಲೇ ಮರದಿಂದಿಳಿದು ಪಾಂಡವರಿದ್ದೆಡೆಗೆ ಧಾವಿಸಿದನು. ಕೆಂಡದಂತಹ ಕಣ್ಣುಗಳಿಂದಲೂ, ನಿಮಿರಿದ ಮತ್ತು ಕೆದರಿದ ತಲೆಗೂದಲುಗಳಿಂದಲೂ ಕೂಡಿದ್ದ, 'ಆ' ಎಂದು ಬಾಯ್ದೆರೆದುಕೊಂಡು ಚೂಪಾಗಿದ್ದ ಕೋರೆದಾಡೆ ಗಳನ್ನು ಕಟ-ಕಟನೆ ಕಡಿಯುತ್ತಿದ್ದ, ಮೋಡದಂತೆಯೇ ಶರೀರಕಾಂತಿಯನ್ನು ಹೊಂದಿದ್ದ ಹಿಡಿಂಬನು ಬಹಳ ಭಯಂಕರನಾಗಿ ಕಾಣುತ್ತಿದ್ದನು.

ತನ್ನಣ್ಣನು ಮರದಿಂದಿಳಿದು ಕುಪಿತನಾಗಿ ಬರುತ್ತಿರುವುದನ್ನು ಹಿಡಿಂಬೆಯು ದೂರದಿಂದಲೇ ಕಂಡು, ಗಾಬರಿಯಿಂದ ಭೀಮನಿಗೆ ಹೇಳಿದಳು :

"ಪ್ರಿಯನೇ! ಪಾಪಿಯಾದ ನರಭಕ್ಷಕನು ಕುಪಿತನಾಗಿ ಇತ್ತಕಡೆಗೇ ಬರುತ್ತಲಿದ್ದಾನೆ. ನೀನು ನಿನ್ನ ಸಹೋದರರಿಂದೊಡಗೂಡಿ ನಾನು ಹೇಳಿ ದಂತೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಇದು ಯೋಚಿಸುತ್ತಾ ಕುಳಿತು ಕೊಳ್ಳುವ ಸಮಯವಲ್ಲ. ನಾನು ರಾಕ್ಷಸಿಯಾದ್ದರಿಂದ ಹೆಚ್ಚಾದ ಬಲದಿಂದ ಕೂಡಿರುವುದು ಮಾತ್ರವಲ್ಲದೇ–ಇಚ್ಛೆಬಂದಲ್ಲಿಗೆ ಹೋಗಲೂ ಸಮರ್ಥ ಳಿದ್ದೇನೆ. ನೀವೆಲ್ಲರೂ ನನ್ನ ಬೆನ್ನಿನ ಹಿಂಭಾಗದಲ್ಲಿ ಕುಳಿತುಕೊಳ್ಳಿರಿ. ನಾನು ನಿಮ್ಮನ್ನು ಆಕಾಶಮಾರ್ಗದಲ್ಲಿ ವೇಗವಾಗಿ ಒಯ್ದು, ನಿರಪಾಯವಾದ ಸ್ಥಳಕ್ಕೆ ಸೇರಿಸಿ ಬಿಡುವೆನು. ಸುಖದಿಂದ ನಿದ್ರಿಸುತ್ತಿರುವ ಇವರನ್ನು ಕೂಡಲೇ ಎಚ್ಚರಗೊಳಿಸು."

"ಸುಶ್ರೋಣಿಯೇ! ಭಯಪಡಬೇಡ. ನಾನಿಲ್ಲಿ ಇರುವವರೆಗೆ ಯಾವ ರಾಕ್ಷಸನೂ–ಯಾರನ್ನೂ–ಏನೂ ಮಾಡಲಾರನೆಂಬ ಭರವಸೆಯು ನನಗಿದೆ. ನೀನು ನೋಡುತ್ತಿರುವಂತೆಯೇ ಈಗ ಬರುತ್ತಿರುವ ಈ ನರಭಕ್ಷಕನ ಅಸುವನ್ನು ಕ್ಷಣಮಾತ್ರದಲ್ಲಿ ಹೀರಿಬಿಡುವೆನು. ಈ ರಾಕ್ಷಸಾಧಮನು ನನಗೆ ಸರಿಯಾದ ಎದುರಾಳಿಯಲ್ಲ. ಈ ಅರಣ್ಯದಲ್ಲಿರುವ ಸಾವಿರಾರು ರಾಕ್ಷಸರು ಸೇರಿದರೂ ನನ್ನ ಭುಜಬಲ-ಪರಾಕ್ರಮಗಳಿಗೆ ಸಾಟಿಯಾಗಲಾರರು. ನನ್ನ ಈ ಬಾಹುಗಳನ್ನಾದರೂ ನೋಡು. ( ನೀಳವಾದ ಬಾಹುಗಳನ್ನು ಮೇಲೆತ್ತಿ ಒಂದು ಕೈಯಿಂದ ಮತ್ತೊಂದು ತೋಳನ್ನು ಉಜ್ಜಿಕೊಳ್ಳುತ್ತಾ ) ಆನೆಯ ಸೊಂಡಿಲಿನಂತೆಯೇ ಇರುವುವಲ್ಲವೇ? (ತೊಡೆಗಳನ್ನೊಮ್ಮೆ ಆಸ್ಫಾಲಿಸಿ) ಇವು ಉಕ್ಕಿನ ಪರಿಘಗಳಂತೆ ಕಾಣುತ್ತಿವೆಯಲ್ಲವೇ? ( ಎದೆಯನ್ನು ಮುಂದೆ ಮಾಡಿ) ಕಲ್ಲಿನಂತೆ ಕಠಿನವಾಗಿರುವ ಈ ವಿಶಾಲವಾದ ವಕ್ಷಃಸ್ಥಳವನ್ನು ನೋಡು. ಸುಂದರಾಂಗಿಯೇ! ಇಂದ್ರನ ಪರಾಕ್ರಮಕ್ಕೆ ಸಾಟಿಯಾದ ಪರಾಕ್ರಮವು ನನ್ನಲ್ಲಿರುವುದೆಂಬುದನ್ನು ಇಂದು ನೀನೇ ಕಾಣುವೆ. ಮನುಷ್ಯನಾದ ಮಾತ್ರಕ್ಕೆ ನನ್ನಲ್ಲಿ ಪರಾಕ್ರಮವಿಲ್ಲವೆಂದು ಜರಿಯಬೇಡ. ನನ್ನ ಪರಾಕ್ರಮವೆಷ್ಟೆಂಬುದನ್ನಾದರೂ ಇಂದು ಪ್ರತ್ಯಕ್ಷವಾಗಿಯೇ ಕಾಣುವೆಯಂತೆ."

"ಪುರುಷವ್ಯಾಘ್ರನೇ! ಅಮರರೂಪಿಯಾದ ಸುಂದರಾಂಗನೇ! ನಿನ್ನನ್ನೂ–ನಿನ್ನ ಪರಾಕ್ರಮವನ್ನೂ ಜರಿಯುವ ಉದ್ದೇಶವು ನನಗಿಲ್ಲ. ಮನುಷ್ಯರ ಮೇಲೆ ದಾಳಿನಡೆಸಿ ರಾಕ್ಷಸನು ಮಾಡುತ್ತಿದ್ದ ಭೀಕರವಾದ ಕೊಲೆಗಳನ್ನು ನಾನು ನೋಡಿರುವೆನಾದುದರಿಂದ ಭ್ರಾಂತಳಾಗಿ ಹೇಳಿದೆನಷ್ಟೆ. ಅನ್ಯಥಾ ಭಾವಿಸಬೇಡ."

ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬಂದಿದ್ದ ಸಂಕ್ರುದ್ಧನಾದ, ನರಭಕ್ಷಕನಾದ ಹಿಡಿಂಬನು, ಭೀಮ-ಹಿಡಿಂಬೆಯರ ಮಾತುಗಳನ್ನು ಕೇಳಿಸಿಕೊಂಡನು. ಅವನ ತಂಗಿಯೂ ರಾಕ್ಷಸಿಯ ರೂಪದಲ್ಲಿರದೇ ಮಾನುಷವೇಷವನ್ನು ಧರಿಸಿ, ಹೂಮುಡಿದುಕೊಂಡು, ನಾನಾವಿಧವಾದ ರತ್ನಾಭರಣಗಳಿಂದ ಅಲಂಕೃತಳಾಗಿದ್ದಳು. ಅವಳ ಮುಖವು ಪೂರ್ಣಚಂದ್ರನ ಕಾಂತಿಯನ್ನು ಹೊಂದಿತ್ತು.

ಹುಬ್ಬುಗಳು, ಕಣ್ಣುಗಳು, ಮೂಗು, ಗುಂಗುರುಕೂದಲುಗಳಿಂದ ಕೂಡಿದ ಕೇಶರಾಶಿ, ಕೆಂಪಾದ ಉಗುರುಗಳು–ಎಲ್ಲವೂ ವಿಶೇಷಶೋಭೆಯಿಂದ ಕೂಡಿದ್ದುವು. ಅವಳು ಉಟ್ಟಿದ್ದ ನಯವಾದ, ತೆಳುವಾದ ಸೀರೆಯೂ ಶರೀರದ ಶೋಭೆಯನ್ನು ಹೆಚ್ಚಿಸುವುದಾಗಿದ್ದಿತು. ಅಂತಹ ರೂಪವನ್ನು ಧರಿಸಿದ್ದ ತಂಗಿಯನ್ನು ನೋಡಿ, ಅವಳು ಈ ಪುರುಷನನ್ನು ಕಾಮಿಸಿರಬಹು ದೆಂದು ಪುರುಷಾದನಾದ ಹಿಡಿಂಬನಿಗೆ ಸಂಶಯವು ಹುಟ್ಟಿತು. ಆ ಸಂಶಯ ದೊಡನೆಯೇ ಕೋಪವೂ ಇಮ್ಮಡಿಯಾಯಿತು.

ಮೊದಲೇ ಅಗಲವಾಗಿದ್ದ ಕಣ್ಣುಗಳನ್ನು ಮತ್ತಷ್ಟು ಹಿಗ್ಗಿಸಿಕೊಂಡು ತಂಗಿಯ ಕಡೆಗೆ ತಿರುಗಿ, ಹಲ್ಲುಕಡಿಯುತ್ತಾ ಹಿಡಿಂಬನು ಹೇಳಿದನು : "ಹಸಿದಿರುವ ನನಗೆ ಆಹಾರವನ್ನು ಪಡೆಯಲು ವಿಘ್ನಮಾಡುವವನು ನಿಶ್ಚಯವಾಗಿಯೂ ಬುದ್ಧಿಹೀನನೇ ಸರಿ. ನೀನಿಷ್ಟು ಮೂಢಳಾದೆಯಾ ಹಿಡಿಂಬೇ! ನನ್ನ ಕೋಪದ ವಿಷಯವಾಗಿ ನಿನಗೆ ಅಂಜಿಕೆಯೇ ಇಲ್ಲವೇ? ಪುಂಶ್ಚಲಿಯಾಗಿರುವ ನಿನಗೆ ಧಿಕ್ಕಾರವಿರಲಿ! ನೀನೀಗ ಸ್ವೈರಿಣಿಯಾಗಿರು ವುದು ಮಾತ್ರವಲ್ಲದೇ ನನಗೆ ಅಪ್ರಿಯವನ್ನೂ ಮಾಡಲು ನಿಶ್ಚಯಿಸಿರುವೆ ಯಲ್ಲವೇ? ನೀನೀಗ ಕಾಮವಶಳಾಗಿ ನಮ್ಮ ಪರಮಪವಿತ್ರವಾದ ರಾಕ್ಷಸ ವಂಶದ ಕೀರ್ತಿಯನ್ನೂ, ನಮ್ಮ ಪೂರ್ವಜರ ಗೌರವವನ್ನೂ ತೊಡೆದು ಹಾಕಲು ಸಿದ್ಧಳಾಗಿ ನಿಂತಿರುವೆ. ನೀನು ಯಾರಿಗಾಗಿ ಇಂತಹ ಅಪಚಾರವನ್ನು ಮಾಡಲು ನಿಶ್ಚಯಿಸಿರುವೆಯೋ ಅವರನ್ನೂ ನಿನ್ನ ಸಹಿತವಾಗಿಯೇ ಪೂರೈಸಿಬಿಡುವೆನು." ಹಿಡಿಂಬನು ಹೀಗೆ ಹೇಳುತ್ತಾ ಕೋಪಾವೇಶದಿಂದ ಕಟ-ಕಟನೆ ಹಲ್ಲುಕಡಿದು ಹಿಡಿಂಬೆಯನ್ನೂ ಮತ್ತು ಪಾಂಡವರನ್ನೂ ಕೊಲ್ಲುವ ಸಲುವಾಗಿ ಅವಳ ಮೇಲೆ ಬೀಳಲು ಹೋದನು. ಯೋಧರಲ್ಲಿ ಶ್ರೇಷ್ಠನಾದ ತೇಜಸ್ವಿಯಾದ ಭೀಮಸೇನನು, ಮೇಲೆ ಬೀಳಲು ರಭಸದಿಂದ ಬರುತ್ತಿದ್ದ ಹಿಡಿಂಬನನ್ನು ಬೆದರಿಸುತ್ತಾ ನಿಲ್ಲು-ನಿಲ್ಲೆಂದು ಗರ್ಜಿಸಿದನು.

ಮಹಾಪರಾಕ್ರಮಿಯಾದ ಭೀಮನು ಮೇಲೆ ಬೀಳುತ್ತಿದ್ದ ಹಿಡಿಂಬ ನನ್ನು ತಡೆದು ಹೇಳಿದನು : "ಹೆಂಗಸಿನ ಮೇಲೆ ಪರಾಕ್ರಮತೋರಲು ಹೋಗಬೇಡ! ಸ್ವಲ್ಪ ತಡೆ!" ಭೀಮನ ಮುಖದಲ್ಲಿ ತಿರಸ್ಕಾರದ ಮಂದ

ಹಾಸವಿದ್ದಿತು. "ಸುಖದಿಂದ ಮಲಗಿರುವ ಈ ನನ್ನ ತಾಯಿಯನ್ನೂ ಮತ್ತು ಸಹೋದರರನ್ನೂ ನಿನ್ನ ಈ ಆಟಾಟೋಪದ ಆರ್ಭಟದಿಂದ ಎಬ್ಬಿಸುವ ಪ್ರಯೋಜನವಾದರೂ ಏನು?

**ಮಯ್ಯೇವ ಪ್ರಹರೇಹಿ ತ್ವಂ ನ ಸ್ತ್ರಿಯಂ ಹನ್ತುಮರ್ಹಸಿ ।**
**ವಿಶೇಷತೋಽನಪಕೃತೇ ಪರೇಣಾಪಕೃತೇ ಸತಿ ॥೨೪॥**

ನನ್ನಲ್ಲಿಯೇ ನಿನ್ನ ಪರಾಕ್ರಮವನ್ನು ತೋರು. ನನ್ನನ್ನು ಪ್ರಹರಿಸು. ಹೆಂಗಸಿನ ಮೇಲೆ ಕೈಮಾಡುವುದು ಸರ್ವಥಾ ಯೋಗ್ಯವಲ್ಲ. ಅದರಲ್ಲಿಯೂ ಈಗಿವಳು ಯಾರಿಗೂ ಅಪಕಾರವನ್ನೆಸಗಿಲ್ಲ. ಯಾವ ಅಪರಾಧವನ್ನೂ ಮಾಡಿಲ್ಲ. ಇದಕ್ಕೆ ಪ್ರತಿಯಾಗಿ ಇವಳಿಗೇ ಮತ್ತೊಬ್ಬರಿಂದ ಅಪಕಾರವಾಗಿದೆ.

**ನ ಹೀಯಂ ಸ್ವವಶಾ ಬಾಲಾ ಕಾಮಯತ್ಯದ್ಯ ಮಾಮಿಹ ।**
**ಚೋದಿತೈಷಾ ಹ್ಯನಙ್ಗೇನ ಶರೀರಾನ್ತರಚಾರಿಣಾ ॥೨೫॥**

ಮೂಢನೇ! ಇವಳೀಗ ತನ್ನ ಅಧೀನದಲ್ಲಿಲ್ಲ. ನನ್ನನ್ನು ಕಾಮಿಸು ತ್ತಿರುವಳು. ಇದು ಇವಳ ಅಪರಾಧವಲ್ಲ. ಇವಳು ನನ್ನನ್ನು ಕಾಮಿಸಲು ಇವಳಲ್ಲಿ ಅಡಗಿರುವ ಅನಂಗನಾದ ಮದನನೇ ಕಾರಣ. ಅವನ ಪ್ರೇರಣೆ ಯಿಂದ ಅಥವಾ ಅವನ ಅಪರಾಧದ ಕಾರಣದಿಂದ ಇವಳು ನನ್ನನ್ನು ಕಾಮಿಸಿರುವಳು. ದುರ್ಬುದ್ಧಿಯವನೇ! ಅಂತರಂಗದಲ್ಲಿ ಸಂಚರಿಸುತ್ತಿರುವ ಅನಂಗನಿಂದ ಪ್ರೇರಿತಳಾಗಿ ಈ ಅಪರಾಧವನ್ನೆಸಗಿದ್ದಾಳೆ. ದುರಾತ್ಮನೇ! ನಿನ್ನ ಆಜ್ಞೆಯನ್ನು ಪರಿಪಾಲಿಸಬೇಕೆಂದೇ ಇವಳು ಇಲ್ಲಿಗೆ ಬಂದಳು. ಆದರೆ ನನ್ನನ್ನು ನೋಡಿದೊಡನೆಯೇ ಸುಪ್ತನಾಗಿ ಇವಳ ಹೃದಯದಲ್ಲಿರುವ ಅನಂಗನು ನನ್ನನ್ನು ಕಾಮಿಸುವಂತೆ ಪ್ರೇರಿಸಿದನು. ಆದುದರಿಂದ ನಿನ್ನ ತಂಗಿಯು ನಿನಗಾವ ಅಪರಾಧವನ್ನೂ ಮಾಡಿದಂತಾಗಲಿಲ್ಲ. ಅಲ್ಲವೇ? ನಿನಗೆ ಅಪರಾಧವೆಸಗಿದ್ದರೆ ಅದಕ್ಕೆ ಮದನನೇ ಕಾರಣ. ಇದಕ್ಕಾಗಿ ನಿನ್ನ ತಂಗಿಯನ್ನು ತೊಂದರೆಪಡಿಸಲು ಹೋಗುವುದು ಸರ್ವಥಾ ಯೋಗ್ಯವಲ್ಲ. ಅದೂ ಅಲ್ಲದೇ ನಾನು ಇಲ್ಲಿ ನಿಂತಿರುವಾಗ ಹೆಂಗಸೊಬ್ಬಳ ಕೊಲೆಯಾಗು ವುದು ಸಾಧ್ಯವಿಲ್ಲ. ರಾಕ್ಷಸಾಧಮ! ಮೊದಲು ನನ್ನೊಡನೆ ಯುದ್ಧಕ್ಕೆ ಬಾ.

ನಾನೊಬ್ಬನೇ ನಿನ್ನನ್ನು ಯಮಾಲಯಕ್ಕೆ ಸುಖವಾಗಿ ಕಳುಹಿಸಿಬಿಡುವೆನು. ಮದಗಜದ ಕಾಲಿಗೆ ಸಿಕ್ಕಿದ ತಲೆಯಂತೆ–ನಿನ್ನ ರುಂಡವು ನನ್ನ ಈ ಎರಡು ತೋಳುಗಳ ಬಲದಿಂದ ಪುಡಿ-ಪುಡಿಯಾಗಲಿದೆ. ಇಂದು ಯುದ್ಧರಂಗದಲ್ಲಿ ನಿನ್ನ ಅವಸಾನಾನಂತರ–ನರಿ, ರಣಹದ್ದು, ಕಂಕಪಕ್ಷಿಗಳು ನಿನ್ನ ಶರೀರವನ್ನು ಕಿತ್ತುತಿಂದು ಆನಂದಿಸಲಿ. ಅನೇಕ ವರ್ಷಗಳಿಂದ ಮಾನವರಿಗೆ ಮೃತ್ಯು ರೂಪವಾಗಿದ್ದ ಮತ್ತು ಅಪವಿತ್ರವಾಗಿದ್ದ ಈ ಅರಣ್ಯವು ಇಂದು ನಿನ್ನ ಅವಸಾನದಿಂದಾಗಿ ಪವಿತ್ರವೆನಿಸಲಿ. ಧೂರ್ತನೇ! ನೀನು ಮಹಾಕಾಯ ನಾಗಿರುವುದಕ್ಕಾಗಿ ಮತ್ತು ಪರ್ವತದಂತೆ ಆಕಾರವನ್ನು ತಾಳಿರುವುದಕ್ಕಾಗಿ ಹೆದರುವೆನೆಂದು ಭ್ರಮಿಸಬೇಡ. ಬಲಶಾಲಿಯಾದ ಸಿಂಹವು ಮದಗಜವನ್ನು ಅತ್ತಲಿತ್ತ ಎಳೆದಾಡಿ ಸಂಹರಿಸುವಂತೆ–ನಾನೂ ನಿನ್ನನ್ನು ಸಂಹರಿಸುವುದನ್ನಿಂದು ನಿನ್ನ ತಂಗಿಯೂ ನೋಡುವಳು.

ರಾಕ್ಷಸಾಧಮ! ನನ್ನಿಂದ ನೀನಿಂದು ಹತನಾದ ಬಳಿಕ ಈ ಕಾಡಿನಲ್ಲಿ ಸಂಚರಿಸುವ ಜನರು ಇನ್ನು ಮುಂದೆ ಯಾವ ವಿಧವಾದ ಬಾಧೆಗಳೂ ಮತ್ತು ಉಪಟಳಗಳೂ ಇಲ್ಲದೇ ಸಂಚರಿಸುತ್ತಾರೆ."

"ಹುಲುಮನುಜ! ವೃಥಾ ಜಂಬವನ್ನೇಕೆ ಕೊಚ್ಚಿಕೊಳ್ಳುವೆ! ಮೊದಲು ನೀನೀಗ ಹೇಳಿದುದನ್ನೆಲ್ಲಾ ಕಾರ್ಯರೂಪದಲ್ಲಿ ಮಾಡಿ ತೋರಿಸಿ ಅನಂತರ ಜಂಬಕೊಚ್ಚಿದರೆ ಅದಕ್ಕೆ ಬೆಲೆಯುಂಟು. ಆದುದರಿಂದ ತಡಮಾಡದೇ ಬೇಗನೇ ಬಾ. ನೀನು ಮಹಾಬಲಶಾಲಿಯೆಂದು ನಿನ್ನಷ್ಟಕ್ಕೆ ನೀನೇ ಭಾವಿಸಿರುವೆಯಲ್ಲವೇ? ಈಗ ನನ್ನೊಡನೆ ಸೆಣೆಸಲು ಬಂದನಂತರ ನನ್ನ ಪರಾಕ್ರಮವೆಷ್ಟೆಂಬುದೂ ನಿನಗೆ ತಿಳಿಯುವುದು. ನಿನ್ನೊಡನೆ ಕದನವು ಮುಗಿಯುವವರೆಗೂ ಮಲಗಿರುವ ಇವರನ್ನು ಹಿಂಸೆಮಾಡುವುದಿಲ್ಲ. ಅಲ್ಲಿಯವರೆಗೂ ಇವರು ಸುಖವಾಗಿಯೇ ಮಲಗಿರಲಿ. ಅಪ್ರಿಯವಾದ ಮಾತುಗಳನ್ನಾಡುತ್ತಿರುವ ಮೂಢನಾದ ನಿನ್ನನ್ನು ಮುಗಿಸಿ, ನಿನ್ನ ರಕ್ತವನ್ನು ಹೀರಿ, ಅನಂತರ ಮಲಗಿರುವ ಇವರನ್ನೂ ಪೂರೈಸಿ, ಕಟ್ಟಕಡೆಗೆ ನನಗೆ ದ್ರೋಹವನ್ನೆಸಗಿರುವ ಇವಳನ್ನೂ ಯಮಾಲಯಕ್ಕೆ ಕಳುಹಿಸಿಬಿಡುವೆನು."

ಹಿಡಿಂಬನು ಹೀಗೆ ಹೇಳುತ್ತಾ ತೋಳುಗಳನ್ನು ಎತ್ತಿಕೊಂಡು ಕ್ಷಣ ಮಾತ್ರದಲ್ಲಿ ಭೀಮನನ್ನು ನುಂಗಿಬಿಡುವನೋ ಎಂಬಂತೆ ಕರ್ಕಶಧ್ವನಿ

ಮಾಡುತ್ತಾ ಭೀಮನ ಕಡೆಗೆ ನುಗ್ಗಿದನು. ಸ್ವಲ್ಪವಾದರೂ ಭ್ರಾಂತಿಯನ್ನು ಹೊಂದದೇ ಸ್ಥಿರವಾಗಿ ನಿಂತಿದ್ದ ಭೀಮನು ಮೇಲೆ ಬಿದ್ದ ಹಿಡಿಂಬನ ತೋಳು ಗಳನ್ನು ಲೀಲಾಜಾಲವಾಗಿ ಹಿಡಿದು ನಿಲ್ಲಿಸಿ, ತನ್ನ ಭುಜಬಲ-ಪರಾಕ್ರಮ ಗಳಿಂದ ಅವನನ್ನು ಮೂವತ್ತೆರಡು ಗಜಗಳಾಚೆಗೆ–ಸಿಂಹವು ಸಣ್ಣ ಪ್ರಾಣಿ ಯೊಂದನ್ನು ಅತ್ತಲಿತ್ತ ಎಳೆದಾಡಿ ಹಿಂಸಿಸುವಂತೆ–ತಳ್ಳಿಬಿಟ್ಟನು. ಅದ ರಿಂದಾಗಿ ಹಿಡಿಂಬನಿಗೆ ಭೀಮನ ಶಕ್ತಿಯೇನೆಂಬುದರ ಅರಿವಾಯಿತು. ಹತ್ತಿರದ ಗೋಡೆಗೆ ಚೆಂಡನ್ನು ಹೊಡೆದರೆ ಹೊಡೆತದ ವೇಗದಿಂದ ಹೊಡೆದವನ ಕಡೆಗೇ ಪುಟಿದು ಪುನಃ ಬಂದು ಸೇರುವಂತೆ–ಹಿಡಿಂಬನು ಭೀಮನಿಂದ ಬಹಳ ರಭಸದಿಂದ ತಳ್ಳಲ್ಪಟ್ಟರೂ ತಳ್ಳಲ್ಪಟ್ಟ ವೇಗದಿಂದಲೇ ಭೀಮನೆಡೆಗೆ ಓಡಿ ಬಂದು, ಅವನನ್ನು ಬಿಗಿಯಾಗಿ ಅಪ್ಪಿಕೊಂಡು, ಘೋರನಿನಾದಮಾಡಿ ದನು. ಅವನ ಕರ್ಕಶಧ್ವನಿಯನ್ನು ಕೇಳಿ ತನ್ನ ತಾಯಿ ಮತ್ತು ಸಹೋದರರು ಎಚ್ಚೆತ್ತಾರೆಂದು ಶಂಕಿಸಿದ ಭೀಮನು ಹಿಡಿಂಬನ ಬಾಹುಪಾಶದಿಂದ ಬಿಡಿಸಿ ಕೊಂಡು ಹೆಚ್ಚಾದ ಬಲಪ್ರಯೋಗಮಾಡಿ ಹಿಂದಿನ ಬಾರಿ ತಳ್ಳಿದುದ ಕ್ಕಿಂತಲೂ ದೂರಕ್ಕೆ ತಳ್ಳಿಬಿಟ್ಟನು. ಆ ವಿಧವಾದ ಕಾಳಗವು ಸ್ವಲ್ಪಹೊತ್ತಿನ ವರೆಗೂ ನಡೆಯಿತು. ಇಬ್ಬರೂ ತಮ್ಮ ಸಂಪೂರ್ಣಶಕ್ತಿಯನ್ನೂ ಕೇಂದ್ರೀಕರಿಸಿ ಯುದ್ಧಮಾಡುತ್ತಿದ್ದರು. ಮದಿಸಿದ ಮತ್ತು ರೊಚ್ಚಿಗೆದ್ದ ಅರುವತ್ತುವರ್ಷ ವಯಸ್ಸಿನ ಎರಡು ಮದಗಜಗಳಂತೆ–ಭೀಮ-ಹಿಡಿಂಬರು ಹತ್ತಿರದಲ್ಲಿದ್ದ ವೃಕ್ಷಗಳನ್ನೇ ಕಿತ್ತು ಹೊಡೆದಾಡಲು ಪ್ರಾರಂಭಿಸಿದರು.

ಇಷ್ಟೆಲ್ಲಾ ಗದ್ದಲವು ನಡೆಯುತ್ತಿರುವಾಗ ಯಾರಿಗೆ ತಾನೇ ಎಚ್ಚರ ವಾಗುವುದಿಲ್ಲ? ಕುಂತೀ-ಯುಧಿಷ್ಠಿರಾದಿಗಳು ಮೇಲೆದ್ದು ತಮ್ಮ ಮುಂದೆಯೇ ನಿಂತಿದ್ದ ಹಿಡಿಂಬೆಯನ್ನು ಮೊದಲು ನೋಡಿದರು.

೧೫೩ನೆಯ ಅಧ್ಯಾಯವು ಮುಗಿಯಿತು.

## ಹಿಡಿಂಬೆಯು ಕುಂತಿಯೊಡನೆ ತನ್ನ ಆಶಯವನ್ನು ಹೇಳಿದುದು : ಭೀಮನಿಂದ ಹಿಡಿಂಬನ ಸಂಹಾರ

ಜನಮೇಜಯ! ಅಪ್ಸರೆಯಂತೆ ಮನೋಹರರೂಪವನ್ನು ಧರಿಸಿದ್ದ ಹಿಡಿಂಬೆಯನ್ನು ನೋಡಿ ಆಗ ತಾನೇ ಎಚ್ಚರಗೊಂಡ ಧರ್ಮಾದಿಗಳು ಅಚ್ಚರಿಗೊಂಡರು. ಸ್ತ್ರೀಸಹಜವಾದ ಸೌಜನ್ಯದಿಂದ ಕುಂತಿಯು ಮೇಲೆದ್ದು, ಹಿಡಿಂಬೆಯ ಬಳಿಗೆ ಬಂದು, ಅವಳನ್ನು ಔಪಚಾರಿಕವಾದ ಮಾತುಗಳಿಂದ ಸಂತೈಸುತ್ತಾ ಕೇಳಿದಳು : "ದೇವಕನ್ಯೆಯರಿಗೆ ಸಮಾನವಾದ ದೇಹಕಾಂತಿಯನ್ನು ಪಡೆದಿರುವ ನೀನು ಎಲ್ಲಿಯವಳು? ನಿನ್ನ ಕುಲ-ಗೋತ್ರಗಳಾದರೂ ಯಾವುವು? ಯಾವ ಕಾರ್ಯಕ್ಕಾಗಿ ನೀನಿಲ್ಲಿಗೆ ಬಂದಿರುವೆ ಮತ್ತು ಯಾವಾಗ ಬಂದೆ? ಸುಂದರಾಂಗಿಯೇ! ನಿನ್ನನ್ನು ನೋಡಿದರೆ ನೀನು ಸಾಮಾನ್ಯ ಸ್ತ್ರೀಯಂತೆ ಕಾಣುವುದಿಲ್ಲ. ನೀನೇನಾದರೂ ಈ ವನದ ಅಧಿದೇವತೆಯೇ? ಅಥವಾ ಅಪ್ಸರೆಯೇ? ನಿನ್ನ ವಿಷಯಗಳೆಲ್ಲವನ್ನೂ ನನ್ನಲ್ಲಿ ಮರೆಮಾಚದೇ ಹೇಳು ಮತ್ತು ಇಲ್ಲಿಗೆ ನೀನು ಬಂದ ಕಾರಣವನ್ನೂ ತಿಳಿಸು."

ಸಂಭಾವಿತಳಾದ ಸ್ತ್ರೀಗೆ ಸಹಜವಾದ ಸೌಜನ್ಯದಿಂದಲೇ ಹಿಡಿಂಬೆಯೂ ಉತ್ತರಿಸಿದಳು :

"ಮಾತೆಯೇ! ಈ ವಿಶಾಲವಾಗಿರುವ ಮಹಾರಣ್ಯವು ಹಿಡಿಂಬ ರಾಕ್ಷಸನಿಗೂ ಮತ್ತು ನನಗೂ ವಾಸಸ್ಥಾನವಾಗಿದೆ. ರಾಕ್ಷಸಾಧಿಪತಿಯಾದ ಹಿಡಿಂಬನ ತಂಗಿಯು ನಾನು. ನಿನ್ನನ್ನೂ ಮತ್ತು ನಿನ್ನ ಮಕ್ಕಳನ್ನೂ ಕೊಲ್ಲುವ ಸಲುವಾಗಿ ನಾನು ನಮ್ಮಣ್ಣನಾದ ಹಿಡಿಂಬನಿಂದ ಕಳುಹಿಸಲ್ಪಟ್ಟೆನು. ಆದರೆ ನಾನು ನಮ್ಮಣ್ಣನ ಕ್ರೂರವಾದ ಆಜ್ಞೆಯನ್ನು ಪರಿಪಾಲಿಸುವ ಸಲುವಾಗಿಯೇ ಇಲ್ಲಿಗೆ ಬಂದಾಗ ಬಲಿಷ್ಠನಾದ ಮತ್ತು ನೂತನ ಸ್ವರ್ಣದ ಕಾಂತಿಗೆ ಅನುರೂಪವಾದ ದೇಹಕಾಂತಿಯಿಂದ ಕೂಡಿದ್ದ ನಿನ್ನ ಮಗನನ್ನು ನೋಡಿದೆನು. ಜನನಿಯೇ! ಪ್ರೇಮಕ್ಕೆ ಅಧಿದೇವನಾದ ಕಾಮನ ಪ್ರಭಾವದಿಂದಾಗಿ ನಾನು ನಿನ್ನ ಮಗನ ಅಧೀನಳಾಗಿ, ಮನದಲ್ಲಿಯೇ ಅವನನ್ನು ನನ್ನ ಪತಿಯೆಂದು

ನಿಶ್ಚಯಿಸಿದೆನು. ಅವನನ್ನು ಇಲ್ಲಿಂದ ಕರೆದೊಯ್ಯಲು ನಾನು ಮಾಡಿದ ಪ್ರಯತ್ನವು ಫಲಕಾರಿಯಾಗಲಿಲ್ಲ. ನಾನು ಬಹಳ ಹೊತ್ತಿನವರೆಗೂ ಹಿಂದಿರುಗದೇ ಇದ್ದುದನ್ನು ಕಂಡು ಪುರುಷಾದನಾದ ನಮ್ಮಣ್ಣ ಹಿಡಿಂಬನು ಕುಪಿತನಾಗಿ ನಿಮ್ಮೆಲ್ಲರನ್ನೂ ತಿಂದುಹಾಕಲು ಇಲ್ಲಿಗೇ ಬಂದನು. ಆದರೆ ಮಹಾಪರಾಕ್ರಮಿಯಾದ ನಿನ್ನ ಮಗನಿಂದ (ನನ್ನ ಭಾವೀಪತಿಯಿಂದ) ಆ ದುಷ್ಟರಾಕ್ಷಸನು ಬಹಳ ದೂರಕ್ಕೆ ತಳ್ಳಲ್ಪಟ್ಟನು. ಈಗ ನನ್ನ ಭಾವೀಪತಿಯೂ ಮತ್ತು ಸಹೋದರನೂ ದ್ವಂದ್ವಯುದ್ಧದಲ್ಲಿ ತೊಡಗಿದ್ದಾರೆ. ಮಹಾಪರಾಕ್ರಮಿಗಳಾದ ನರ-ರಾಕ್ಷಸರು ಒಬ್ಬರು ಮತ್ತೊಬ್ಬರನ್ನು ಅಪ್ಪಳಿಸುತ್ತಾ ತಮ್ಮ ಸಿಂಹಗರ್ಜನೆಗಳಿಂದ ಈ ಪ್ರದೇಶವನ್ನೆಲ್ಲಾ ಭ್ರಾಂತಿಗೊಳಿಸಿಬಿಟ್ಟಿದ್ದಾರೆ. ಇವರಿಬ್ಬರೂ ಮಾಡುತ್ತಿರುವ ಘೋರಯುದ್ಧವನ್ನಾದರೂ ನೋಡು, ತಾಯೇ!"

ಅವಳ ಮಾತುಗಳನ್ನು ಕೇಳಿದೊಡನೆಯೇ ಯುಧಿಷ್ಠಿರಾದಿಗಳು ಥಟ್ಟನೆ ಮೇಲೆದ್ದರು. ಭೀಮ-ಹಿಡಿಂಬರು ಪರಸ್ಪರವಾಗಿ ಸೆಳೆದಾಡುತ್ತಾ ಒಬ್ಬರನ್ನು ಮತ್ತೊಬ್ಬರು ಅಪ್ಪಳಿಸಬೇಕೆಂಬ ನಿಶ್ಚಯದಿಂದ–ಬಲದಿಂದ ದರ್ಪಿತವಾದ ಎರಡು ಸಿಂಹಗಳಂತೆ–ಕದನವಾಡುತ್ತಿರುವುದನ್ನೂ ನೋಡಿದರು. ಒಬ್ಬರನ್ನೊಬ್ಬರು ಬಲವಾಗಿ ತಬ್ಬಿಕೊಂಡು ಅತ್ತಲಿತ್ತ ಸೆಳೆದಾಡುತ್ತಿರುವಾಗ ಮೇಲೆದ್ದ ಭೂಮಿಯ ಧೂಳು ವನವನ್ನೆಲ್ಲಾ ಪ್ರಸರಿಸಿ–ದೂರದಿಂದ ನೋಡುವವರಿಗೆ ಕಾಳ್ಗಿಚ್ಚಿನ ಹೊಗೆಯೋ–ಎಂಬ ಭ್ರಾಂತಿಯನ್ನುಂಟುಮಾಡುತ್ತಿತ್ತು. ಧೂಳಿನಿಂದ ಮುಚ್ಚಿಹೋಗಿದ್ದ, ಬೆಟ್ಟಗಳಂತಿದ್ದ ಭೀಮ-ಹಿಡಿಂಬರು ಮಂಜಿನಿಂದ ಮುಚ್ಚಿರುವ ಎರಡು ಪರ್ವತಗಳಂತೆಯೇ ಕಾಣುತ್ತಿದ್ದರು. ರಾಕ್ಷಸನಿಂದ ಬಹುವಾಗಿ ಪೀಡಿಸಲ್ಪಡುತ್ತಿದ್ದ ಭೀಮನನ್ನು ನೋಡಿ ಅರ್ಜುನನು ನಸುನಗುತ್ತಾ ಹೇಳಿದನು : "ಭೀಮಸೇನ! ಹೆದರಬೇಡ. ನಾವು ಮಲಗಿದ್ದುದರಿಂದ ನೀನು ರಾಕ್ಷಸನೊಡನೆ ಸೆಣೆಸುತ್ತಿರುವ ವಿಷಯವು ತಿಳಿಯಲಿಲ್ಲ. ಕದನದಲ್ಲಿ ನೀನು ಬಹಳ ಆಯಾಸವನ್ನು ಹೊಂದಿರುವೆ. ಆದುದರಿಂದ ನಾನು ನಿನ್ನ ಸಹಾಯಕ್ಕೆ ನಿಲ್ಲುವೆನು. ರಾಕ್ಷಸನನ್ನು ಕೊಲ್ಲಲು ನನ್ನನ್ನು ಬಿಡು. ನಕುಲ-ಸಹದೇವರು ತಾಯಿಯ ರಕ್ಷಣೆಯನ್ನು ಮಾಡುವರು."

ಯದ್ಯಪಿ ಭೀಮಸೇನನು ಯುದ್ಧದಿಂದ ಬಳಲಿದ್ದರೂ ನಸುನಗುತ್ತಲೇ ಹೇಳಿದನು : “ಸಹೋದರ! ನಮ್ಮಿರ್ವರ ದ್ವಂದ್ವಯುದ್ಧವನ್ನು ಪ್ರೇಕ್ಷಕನಂತೆ ನೋಡುತ್ತಿರು. ಫಲಿತಾಂಶದ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಪಡಬೇಕಾಗಿಯೇ ಇಲ್ಲ. ನನ್ನ ತೋಳುಗಳ ನಡುವೆ ಸಿಕ್ಕಿಕೊಂಡ ಇವನು ಮತ್ತೆ ಪ್ರಾಣವನ್ನುಳಿಸಿಕೊಂಡು ಖಂಡಿತವಾಗಿಯೂ ಹೊರಬರಲಾರನು.”

“ಭೀಮ! ನೀನು ಹೇಳುತ್ತಿರುವುದರಲ್ಲಿ ನನಗಾವ ಸಂಶಯವೂ ಇಲ್ಲ. ಆದರೆ ಇಷ್ಟು ಹೊತ್ತಿನವರೆಗೆ ಇವನೊಡನೆ ಸೆಣೆಸುತ್ತಿರುವುದೇಕೆ? ಮೇಲಾಗಿ ನಾವು ಈ ಅರಣ್ಯದಲ್ಲಿಯೇ ನಿಲ್ಲುವಂತೆಯೂ ಇಲ್ಲ. ಮುಂದೆ ಪ್ರಯಾಣ ಮಾಡಬೇಕಾಗಿದೆ. ಪೂರ್ವದಿಕ್ಕಿನಲ್ಲಿ ಅರುಣೋದಯದ ಕೆಂಪು ರಂಜಿಸುತ್ತಿದೆ. ಪ್ರಾತಃಸಂಧ್ಯೆಯ ಕಾಲವು ಸನ್ನಿಹಿತವಾಗಿದೆ. ಸಂಧ್ಯೆಗಳಲ್ಲಿ ರಾಕ್ಷಸರ ಬಲವು ಹೆಚ್ಚಿಬಿಡುತ್ತದೆ. ಆದುದರಿಂದ ಕೂಡಲೇ ಕಾರ್ಯವನ್ನು ಮುಗಿಸಿಬಿಡು. ಇವನೊಡನೆ ದ್ವಂದ್ವಯುದ್ಧದ ವರಸೆಗಳನ್ನು ತೋರುತ್ತಾ ಪ್ರದರ್ಶನಮಾಡಲು ಇದು ಸಮಯವಲ್ಲ. ಸಂಧ್ಯಾಕಾಲಗಳಲ್ಲಿ ರಾಕ್ಷಸರು ಮಾಯಾಯುದ್ಧವನ್ನು ಪ್ರಾರಂಭಿಸಿಬಿಡುವರು. ಆದುದರಿಂದ ಈ ಕೂಡಲೇ ನಿನ್ನ ತೋಳುಗಳ ಸಂಪೂರ್ಣಶಕ್ತಿಯನ್ನೂ ಪ್ರಯೋಗಿಸಿ ಇವನನ್ನು ಯಮಾಲಯಕ್ಕೆ ಕಳುಹಿಸಿಬಿಡು.”

ಅರ್ಜುನನ ಮಾತುಗಳನ್ನು ಕೇಳಿದನಂತರ ಭೀಮನಿಗೆ ರಾಕ್ಷಸನ ಮೇಲಿನ ಕೋಪವು ಇಮ್ಮಡಿಯಾಯಿತು. ಅಂತೆಯೇ ತನ್ನ ಸಂಪೂರ್ಣ ಶಕ್ತಿಯನ್ನೂ ಕೇಂದ್ರೀಕರಿಸಿ ಯುದ್ಧಮಾಡಲು ಪ್ರಾರಂಭಿಸಿದನು. ಭೀಮನು-ಪ್ರಳಯಕಾಲದಲ್ಲಿ ವಾಯುದೇವನು ಪ್ರಪಂಚದ ವಿನಾಶಕ್ಕಾಗಿ ಚಂಡಮಾರುತದ ಸ್ವರೂಪವನ್ನು ತಾಳುವಂತೆ–ಉಗ್ರರೂಪವನ್ನು ತಾಳಿದನು. ಮೋಡದಂತೆ ಕಪ್ಪಾಗಿದ್ದ ರಾಕ್ಷಸನ ಮಹಾಶರೀರವನ್ನು ಮೇಲೆತ್ತಿ ಕೈ-ಕಾಲುಗಳನ್ನು ಹಿಡಿದು ಚಕ್ರಾಕಾರವಾಗಿ ನೂರು ಬಾರಿ ತಿರುಗಿಸಿ ಹೇಳಿದನು:

**ವೃಥಾಮಾಂಸೈರ್ವೃಥಾಪುಷ್ಟೋ ವೃಥಾವೃದ್ಧೋ ವೃಥಾಮತಿಃ ।**
**ವೃಥಾಮರಣಮರ್ಹಸ್ತ್ವಂ ವೃಥಾದ್ಯ ನ ಭವಿಷ್ಯಸಿ ॥೨೬॥**

"ರಾಕ್ಷಸಾಧಮನೇ! ವ್ಯರ್ಥವಾದ ಮಾಂಸದಿಂದ ನಿನ್ನ ನಿಷ್ಪ್ರಯೋಜಕವಾದ ಶರೀರವನ್ನು ಪುಷ್ಟಿಗೊಳಿಸಿರುವೆ. ಅನೇಕವರ್ಷಗಳಿಂದಲೂ ನಿನ್ನ ಶರೀರವು ನಿಷ್ಪ್ರಯೋಜಕವಾಗಿಯೇ ಬೆಳೆಯುತ್ತಲಿದೆ. ನಿನ್ನ ಶರೀರದಂತೆಯೇ ನಿನ್ನ ಬುದ್ಧಿಯೂ ನಿಷ್ಪ್ರಯೋಜಕವಾಗಿದೆ. ವ್ಯರ್ಥವಾದ ಸಾವಿಗೆ ನೀನು ಯೋಗ್ಯನು. ಆದರೆ ಈಗ ಅಂತಹ ನಿಷ್ಪ್ರಯೋಜಕವಾದ ನಿನ್ನ ಶರೀರದ ಚೂರ್ಣೀಕರಣವು ಮಾತ್ರ ವ್ಯರ್ಥವಾಗಲಾರದು. ಏಕೆಂದರೆ : ನಿನ್ನ ಅವಸಾನದಿಂದ ಈ ವನವು ನಿಷ್ಕಂಟಕವಾಗುವುದು. ರಾಕ್ಷಸಾಧಮನಾದ ನೀನು ಇನ್ನು ಮುಂದೆ ಇಲ್ಲಿ ಸಂಚರಿಸುವ ಮನುಷ್ಯರನ್ನು ಕೊಂದು ಅವರ ಮಾಂಸವನ್ನು ತಿನ್ನಲಾರೆ."

ಭೀಮನು ರಾಕ್ಷಸನ ಕೈ-ಕಾಲುಗಳನ್ನು ಹಿಡಿದು ತಿರುಗಿಸುತ್ತಲೇ ಇದ್ದನು. ಆ ವಿಧವಾದ ಕಾಲಹರಣವೂ ಅರ್ಜುನನಿಗೆ ಸಹ್ಯವಾಗಲಿಲ್ಲ. ಅರ್ಜುನನು ಪುನಃ ಭೀಮನಿಗೆ ಹೇಳಿದನು : "ಭೀಮಸೇನ! ಈ ರಾಕ್ಷಸನನ್ನು ಪರಾಜಯಗೊಳಿಸುವುದು ನಿನಗೆ ಅಸಾಧ್ಯವೆಂದು ತೋರಿದರೆ ಇವನ ಸಂಹಾರಕ್ಕೆ ನನ್ನ ಸಹಾಯವನ್ನು ತೆಗೆದುಕೋ. ಇಲ್ಲದಿದ್ದರೆ ವ್ಯರ್ಥವಾಗಿ ಕಾಲಹರಣಮಾಡದೇ ಕೂಡಲೇ ಮುಗಿಸಿಬಿಡು ಅಥವಾ ಇವನ ಸಂಹಾರಕ್ಕೆ ನನ್ನನ್ನಾದರೂ ಬಿಡು. ನೀನೀಗಲೇ ರಾಕ್ಷಸನ ಅವಸ್ಥೆಯನ್ನು ಮುಗಿಸಿಯೇ ಇರುವೆ. ಸ್ವಲ್ಪಕಾಲ ವಿಶ್ರಾಂತಿಯನ್ನು ತೆಗೆದುಕೋ. ಉಳಿದಿರುವ ಅಲ್ಪಕಾರ್ಯವನ್ನು ನಾನು ಮಾಡಿ ಮುಗಿಸಿಬಿಡುತ್ತೇನೆ."

ಅರ್ಜುನನ ಮಾತುಗಳು ಮುಗಿಯುವುದರೊಳಗಾಗಿಯೇ ಭೀಮನು–ಸಾಧಾರಣವಾದ ಪ್ರಾಣಿಯೊಂದನ್ನು ನೆಲದ ಮೇಲೆ ಅಪ್ಪಳಿಸಿ ಕೊಲ್ಲುವಂತೆ–ರೋಷಾವೇಷದಿಂದ ರಾಕ್ಷಸನನ್ನು ನೆಲದ ಮೇಲೆ ಅಪ್ಪಳಿಸಿ ಕೊಂದುಬಿಟ್ಟನು. ಹಿಡಿಂಬನು ಸಾಯುವ ಕಡೆಗಾಲದಲ್ಲಿ–ನೀರಿನಲ್ಲಿ ತೋಯ್ದ ದುಂದುಭಿಯ ಧ್ವನಿಯಂತೆ–ಅತಿಕರ್ಕಶವಾದ ಆಕ್ರಂದನಮಾಡಿ ಯಮಾಲಯ

ವನ್ನು ಸೇರಿದನು. ಭೀಮನು ರಾಕ್ಷಸನ ಮಹಾಶರೀರವನ್ನು ತನ್ನೆರಡು ತೋಳುಗಳಿಂದಲೂ ನಡುಭಾಗಕ್ಕೆ ಸರಿಯಾಗಿ ಬಗ್ಗಿಸಿ ಮುರಿದುದನ್ನು ನೋಡಿ ಯುಧಿಷ್ಠಿರಾದಿಗಳಿಗೆ ಬಹಳ ಆನಂದವಾಯಿತು. ಹಿಡಿಂಬನು ಮರಣ ಹೊಂದಿದುದನ್ನು ಕಂಡು ಸಹೋದರರೆಲ್ಲರೂ ಪ್ರತ್ಯೇಕ-ಪ್ರತ್ಯೇಕವಾಗಿ ಭೀಮ ನನ್ನು ಬಾಚಿತಬ್ಬಿಕೊಂಡು, ತಮ್ಮ ಕೃತಜ್ಞತೆಯನ್ನೂ, ಶ್ಲಾಘನೆಯನ್ನೂ ಸೂಚಿಸಿದರು. ಅರ್ಜುನನು ಭೀಮನನ್ನು ಕುರಿತು–"ಅಣ್ಣ! ಇಲ್ಲಿಯ ಕಾರ್ಯವು ಮುಗಿಯಿತು. ಇಲ್ಲಿಯೇ ಸಮೀಪದಲ್ಲಿ ನಗರವಿರುವಂತಿದೆ. ಅಲ್ಲಿಗೆ ನಾವೆಲ್ಲರೂ ಹೊರಟುಹೋಗೋಣ., ದುರ್ಯೋಧನನಿಗೆ ಈ ವಿಷಯ ಗಳೊಂದೂ ತಿಳಿಯಬಾರದು"–ಎಂದು ಹೇಳಿದನು. ಅರ್ಜುನನ ಮಾತನ್ನು ಸಕಲರೂ ಸಮ್ಮತಿಸಿ ತಾಯಿಯೊಡನೆ ಹೊರಟರು. ಹಿಡಿಂಬೆಯೂ ಅವರನ್ನೇ ಹಿಂಬಾಲಿಸಿದಳು.

ಂ೫೪ನೆಯ ಅಧ್ಯಾಯವು ಮುಗಿಯಿತು.

ಂ೫೫ನೆಯ ಅಧ್ಯಾಯ ಹಿಡಿಂಬವಧಪರ್ವ (ಮುಂದುವರಿದಿದೆ.)

## ಹಿಡಿಂಬೆಯ ವಧೆಗೆ ಭೀಮನ ಪ್ರಯತ್ನ: ಯುಧಿಷ್ಠಿರನ ತಡೆ : ಹಿಡಿಂಬೆಯ ಪ್ರೇಮಯಾಚನೆ : ಭೀಮ-ಹಿಡಿಂಬೆಯರ ಸಮಾಗಮ : ಘಟೋತ್ಕಚನ ಜನನ

ಪಾರಿಕ್ಷಿತ! ಹಿಂಬಾಲಿಸಿ ಬರುತ್ತಿರುವ ಹಿಡಿಂಬೆಯನ್ನು ಕುರಿತು ಭೀಮನು ಹೇಳಿದನು :

**ಸ್ಮರನ್ತಿ ವೈರಂ ರಕ್ಷಾಂಸಿ ಮಾಯಾಮಾಶ್ರಿತ್ಯ ಮೋಹಿನೀಮ್ ।**
**ಹಿಡಿಮ್ಬೇ ವ್ರಜ ಪನ್ಥಾನಂ ತ್ವಮಿಮಂ ಭ್ರಾತೃಸೇವಿತಮ್ ॥೧॥**

"ಹಿಡಿಂಬೇ! ರಾಕ್ಷಸರು ಯಾವಾಗಲೂ ತಮಗೆ ಅಥವಾ ತಮ್ಮ ಬಾಂಧವರಿಗೆ ಶತ್ರುಗಳೆನಿಸಿದವರ ಮೇಲೆ ಸೇಡುತೀರಿಸಿಕೊಳ್ಳುವ ಸ್ವಭಾವ ದವರಾಗಿರುತ್ತಾರೆ. ಸೇಡುತೀರಿಸಿಕೊಳ್ಳುವುದಕ್ಕಾಗಿ ಮಾಯೆಯೇ ಮೊದ ಲಾದ ಅನೇಕವಾದ ಕುಮಾರ್ಗಗಳನ್ನೂ ಅನುಸರಿಸುವುದುಂಟು. ಆದುದ

ರಿಂದ ನಿನ್ನನ್ನೂ ನಿಮ್ಮಣ್ಣನನ್ನು ಕಳುಹಿಸಿರುವ ಸ್ಥಳಕ್ಕೇ ಕಳುಹಿಸುವುದು ಸೂಕ್ತವೆನಿಸುತ್ತದೆ.”

ಹಿಡಿಂಬೆಯೊಡನೆಯೂ ಭೀಮನು ಯುದ್ಧಕ್ಕೆ ಸನ್ನದ್ಧನಾದಂತೆ ತೋರಿತು. ಭೀಮನನ್ನು ಸಂತೈಸುತ್ತಾ ಯುಧಿಷ್ಠಿರನು ಹೇಳಿದನು :

**ಕ್ರುದ್ಧೋಽಪಿ ಪುರುಷವ್ಯಾಘ್ರ ಭೀಮ ಮಾ ಸ್ಮ ಸ್ತ್ರಿಯಂ ವಧೀಃ ।**
**ಶರೀರಗುಪ್ತ್ಯಭ್ಯಧಿಕಂ ಧರ್ಮಂ ಗೋಪಾಯ ಪಾಣ್ಡವ ॥೨॥**

“ಪುರುಷವ್ಯಾಘ್ರನೇ! ಭೀಮಸೇನ! ನೀನು ಎಷ್ಟೇ ಕೋಪಗೊಂಡಿದ್ದರೂ ಸ್ತ್ರೀವಧೆಯನ್ನು ಖಂಡಿತವಾಗಿಯೂ ಮಾಡಬೇಡ. ಶರೀರರಕ್ಷಣೆಗಿಂತಲೂ ಹೆಚ್ಚಿನದು ಧರ್ಮರಕ್ಷಣೆ. ಆದುದರಿಂದ ಮುಂದೆ ನಮ್ಮ ಶರೀರಕ್ಕೆ ಅಪಾಯವುಂಟಾಗುವುದೆಂದು ಭ್ರಮಿಸಿ ಅಧರ್ಮವೆನಿಸಿದ ಸ್ತ್ರೀವಧೆಯನ್ನು ಮಾಡಬಾರದು. ಯಾವಾಗಲೂ ಧರ್ಮವನ್ನು ರಕ್ಷಿಸು. ನಮ್ಮನ್ನು ಕೊಲ್ಲುವ ಇಚ್ಛೆಯಿಂದಲೇ ಬಂದಿದ್ದ ಮಹಾಬಲಶಾಲಿಯಾದ ಹಿಡಿಂಬನನ್ನು ಕೊಂದಿದ್ದಾಯಿತಲ್ಲವೇ? ಇವಳು ಅವನ ತಂಗಿ. ಒಂದು ವೇಳೆ ಇವಳಣ್ಣನನ್ನು ಕೊಂದುದಕ್ಕಾಗಿ ಇವಳು ನಮ್ಮ ಮೇಲೆ ಕೋಪಗೊಂಡರೂ ಏನು ತಾನೇ ಮಾಡಿಯಾಳು? ಇವಳಣ್ಣನನ್ನೇ ನೀನು ಕೊಂದಿರುವಾಗ ಇವಳು ನಮ್ಮನ್ನು ಕೊಲ್ಲಲು ಸಮರ್ಥಳಾಗುವಳೇ? ಆದುದರಿಂದ ನಮ್ಮ ಶರೀರರಕ್ಷಣೆಯ ಕಾರಣಕ್ಕಾಗಿ ಅಧರ್ಮವೆನಿಸಿದ ಸ್ತ್ರೀಹತ್ಯೆಯನ್ನು ಮಾಡುವುದು ಯುಕ್ತವೆನಿಸುವುದಿಲ್ಲ, ತಮ್ಮ!”

ಭೀಮಸೇನನ ಕೋಪವಿಳಿಯಿತು. ಹಿಡಿಂಬೆಯು–ತನ್ನ ವಿಷಯದಲ್ಲಿ ಅನುತಾಪವನ್ನು ತೋರಿದ ಯುಧಿಷ್ಠಿರನಿಗೂ–ಕುಂತಿಗೂ ನಮಸ್ಕರಿಸಿ, ಕೈಮುಗಿದುಕೊಂಡು ಕುಂತಿಗೆ ಹೇಳಿದಳು : “ಅಮ್ಮ! ಮನ್ಮಥನ ಬಾಣಗಳಿಗೆ ತುತ್ತಾದ ಸ್ತ್ರೀಯರು ಯಾವ ವಿಧವಾದ ಯಾತನೆಯನ್ನು ಅನುಭವಿಸುವರೆಂಬ ವಿಷಯವು ನಿನಗೆ ತಿಳಿಯದೇ ಇಲ್ಲ. ನಿನ್ನ ಮಗನಾದ ಭೀಮಸೇನನನ್ನು ನೋಡಿದ ಮೊದಲ್ಗೊಂಡು ಅಂತಹ ದಾರುಣವಾದ ಯಾತನೆಯನ್ನು ಅನುಭವಿಸುತ್ತಲಿದ್ದೇನೆ. ನಿನ್ನ ಮಗನು ನನ್ನ ಮಾನಸಿಕಯಾತನೆಯನ್ನು ನಿವಾರಿಸುವನೆಂಬ ಆಕಾಂಕ್ಷೆಯಿಂದ ಇದುವರೆವಿಗೂ ಸಹಿಸಿರುವೆನು.

ನನ್ನ ಮಾನಸಿಕಯಾತನೆಗೆ ನಿವಾರಣೆಯ ಕಾಲವೀಗ ಸನ್ನಿಹಿತವಾಗಿದೆ. ನಾನು ಸುಖಪಡುವ ದಿನಗಳೂ ಸನ್ನಿಹಿತವಾಗಿವೆಯೆಂದು ಭಾವಿಸುತ್ತೇನೆ. ಬಂಧು-ಮಿತ್ರರೆಲ್ಲರನ್ನೂ ವಿಸರ್ಜಿಸಿ, ಕುಲಧರ್ಮವನ್ನೂ ಬದಿಗೊತ್ತಿ ಪುರುಷ ವ್ಯಾಘ್ರನಾಗಿರುವ ನಿನ್ನ ಮಗನನ್ನು ಪತಿಯನ್ನಾಗಿ ಅಂಗೀಕರಿಸಿರುತ್ತೇನೆ. ಒಂದು ವೇಳೆ ನಾನು ನಿನ್ನಿಂದಲೇ ಆಗಲೀ, ಈ ವೀರನಿಂದಲೇ ಆಗಲೀ– ತಿರಸ್ಕರಿಸಲ್ಪಟ್ಟೆನಾದರೆ ನಿಶ್ಚಯವಾಗಿಯೂ ಈ ಶರೀರದ ಅಂತ್ಯವನ್ನೇ ಮಾಡಿಬಿಡುವೆನು. ತಾಯೇ! ಆದುದರಿಂದ, ನನ್ನ ಮೇಲೆ ಕರುಣೆತೋರು ವುದು ಯುಕ್ತವಾಗಿದೆ. ನನ್ನನ್ನು ಅತಿಮೂಢಳೆಂದು, ಭಕ್ತೆಯೆಂದು ಅಥವಾ ಅನುಸರಿಸಿಬಂದವಳೆಂದು ಭಾವಿಸಿಯಾದರೂ ನನ್ನ ಮೇಲೆ ಕರುಣೆತೋರಿ ನಿನ್ನ ಮಗನು ನನ್ನನ್ನು ಪರಿಗ್ರಹಿಸುವಂತೆ ಹೇಳು. ಕುಂತೀದೇವಿ! ದೇವ ರೂಪಿಯಾದ ಇವನನ್ನು ವಿಹಾರಾರ್ಥವಾಗಿ ನನ್ನ ಇಚ್ಛೆಬಂದೆಡೆಗೆ ಕರೆ ದೊಯ್ಯಲು ಅನುಮತಿಯನ್ನು ಕೊಡು. ಮಹಾಮಾತೆಯೇ! ನನ್ನನ್ನು ನಂಬು. ನಾನು ಪುನಃ ನಿನ್ನ ಮಗನನ್ನು ಇಲ್ಲಿಗೇ ತಂದುಬಿಡುವೆನು. ನೀನು ಯಾವಾಗ ನನ್ನ ಸ್ಮರಣೆಮಾಡಿದರೂ ಆ ಕೂಡಲೇ ಬಂದು ನೀನು ಹೇಳಿದ ಸ್ಥಳಕ್ಕೆ ನಿಮ್ಮನ್ನು ಕ್ಷಣಮಾತ್ರದಲ್ಲಿ ಎತ್ತಿಕೊಂಡು ಹೋಗಿ ಬಿಡುವೆನು. ಹಾದಿಯಲ್ಲಿ ಗಿರಿ-ದುರ್ಗ, ಹಳ್ಳ-ಕೊಳ್ಳಗಳಿದ್ದರೂ ಸ್ವಲ್ಪ ವಾದರೂ ಅಪಾಯವಾಗದಂತೆ ಕರೆದೊಯ್ಯುವೆನು. ನೀವು ಯಾವುದಾದ ರೊಂದೆಡೆಗೆ ಶೀಘ್ರವಾಗಿ ಹೋಗಬೇಕೆಂದು ನಿಶ್ಚಯಿಸಿದಾಗ ನನ್ನ ಸ್ಮರಣೆ ಯನ್ನು ಮಾಡಿದರೆ ನಾನು ಬಂದು ನನ್ನ ಹೆಗಲಿನ ಮೇಲೆ ಕುಳ್ಳಿರಿಸಿಕೊಂಡು ಕ್ಷಣಮಾತ್ರದಲ್ಲಿ ನಿಮ್ಮನ್ನು ಆ ಸ್ಥಳಕ್ಕೆ ಬಿಡುವೆನು. ಹೆಚ್ಚು ಹೇಳಲೇಕೆ? ನಿನ್ನ ದಾಸಿಗೆ ದಾಸಿಯಾಗಿರುವೆನಮ್ಮಾ, ಆದರೆ ಭೀಮನು ಮಾತ್ರ ನನ್ನನ್ನು ಪರಿಗ್ರಹಿಸುವಂತೆ ಹೇಳು, ತಾಯೇ!

**ಆಪದಸ್ತರಣೇ ಪ್ರಾಣಾನ್ಧಾರಯೇದ್ಯೇನ ಕೇನ ವಾ ।**
**ಸರ್ವಮಾವೃತ್ಯ ಕರ್ತವ್ಯಂ ತಂ ಧರ್ಮಮನುವರ್ತತಾ ॥೧೩॥**

ಆಪತ್ಕಾಲದಲ್ಲಿ ಪ್ರಾಣವನ್ನು ಉಳಿಸಿಕೊಳ್ಳುವುದೊಂದೇ ಮಾನವನ ಮುಖ್ಯ ಧರ್ಮವಾಗಿರುತ್ತದೆ. (ಆಪತ್ಕಾಲದಲ್ಲಿಯೂ ಧರ್ಮಾಧರ್ಮಗಳ

ವಿವೇಚನೆಯನ್ನು ಮಾಡುತ್ತಾ ಕುಳಿತರೆ ಧರ್ಮಸಾಧನೆಗೆ ಕಾರಣಭೂತ ವಾದ ಶರೀರವೇ ಬಿದ್ದುಹೋಗಬಹುದು.) ಧರ್ಮವನ್ನು ಅನುಸರಣೆ ಮಾಡುವವರು ಆಪತ್ಕಾಲದಲ್ಲಿ ಪ್ರಾಣವನ್ನು ಉಳಿಸಿಕೊಳ್ಳಲು ಯಾವ ಉಪಾಯವನ್ನಾದರೂ ಅನುಸರಿಸಬಹುದೆಂದು ಹೇಳುತ್ತಾರೆ.

**ಆಪತ್ಸು ಯೋ ಧಾರಯತಿ ಧರ್ಮಂ ಧರ್ಮವಿದುತ್ತಮಃ ।**
**ವ್ಯಸನಂ ಹ್ಯೇವ ಧರ್ಮಸ್ಯ ಧರ್ಮಿಣಾಮಾಪದುಚ್ಯತೇ ॥೧೪॥**

ಆಪತ್ಕಾಲದಲ್ಲಿಯೂ* ಧರ್ಮಮಾರ್ಗದಲ್ಲಿಯೇ ಯಾವನು ಇರುವನೋ–ಅವನೇ ನಿಶ್ಚಯವಾಗಿಯೂ ಧರ್ಮಿಷ್ಠರಲ್ಲಿ ಶ್ರೇಷ್ಠನೆನಿಸುವನು. ಆಪತ್ಕಾಲವೆಂಬುದು ಧರ್ಮಕ್ಕೂ ಮತ್ತು ಧರ್ಮಿಷ್ಠರಿಗೂ ಬಹಳ ತೊಂದರೆಯನ್ನುಂಟುಮಾಡುವುದು. ( ಧರ್ಮಕ್ಕೆ ಒದಗುವ ತೊಂದರೆಯೇ ಧರ್ಮಿಷ್ಠರಿಗೆ ಒದಗುವ ಆಪತ್ತು. )

**ಪುಣ್ಯಂ ಪ್ರಾಣಾನ್ಧಾರಯತಿ ಪುಣ್ಯಂ ಪ್ರಾಣದಮುಚ್ಯತೇ ।**
**ಯೇನ ಯೇನಾಚರೇದ್ಧರ್ಮಂ ತಸ್ಮಿನ್ಗರ್ಹಾ ನ ವಿದ್ಯತೇ ॥೧೫॥**

ಪುಣ್ಯವೇ ನಮ್ಮ ಪ್ರಾಣವನ್ನು ಉಳಿಸುವುದು. ಪುಣ್ಯಕ್ಕೆ 'ಪ್ರಾಣದ' ಎಂದೂ ಹೆಸರಿದೆ. ಆದುದರಿಂದ ಧರ್ಮಾಚರಣೆಗೆ ಅನುಸರಿಸುವ ಯಾವುದೇ ಮಾರ್ಗವೂ ನಿಂದ್ಯವಲ್ಲ."

ಯುಧಿಷ್ಠಿರನಿಗೂ ಹಿಡಿಂಬೆಯು ಹೇಳಿದ ಮಾತುಗಳು 'ಸರಿ' ಎನಿಸಿದುವು. ಅಂತೆಯೇ ಅವಳನ್ನು ಕುರಿತು ಹೇಳಿದನು : "ಹಿಡಿಂಬೇ!

---

* ಹಿಡಿಂಬೆಯ ಇಂಗಿತವು ಹೀಗಿದ್ದಿರಬಹುದು. ಭೀಮನೊಡನೆ ಸೇರಬೇಕಾದುದು ಅವಳ ಧರ್ಮ. ಮನಸ್ಸಿನಲ್ಲಿ ಪತಿಯೆಂದು ವರಿಸಿದನಂತರ ಹೇಗಾದರೂ ಮಾಡಿ ಅವನೊಡನೆ ಸೇರಲೇಬೇಕು. ಹೇಗೆ ಸೇರುವುದು? 'ಮೂಢಳೆಂದಾದರೂ ಭಾವಿಸು, ದಾಸಿಯೆಂದಾದರೂ ಭಾವಿಸು'–ಎಂದೇ ಹಿಡಿಂಬೆಯು ಹೇಳುತ್ತಾಳೆ. 'ನಿಮ್ಮನ್ನು ಹೊತ್ತು ಎಲ್ಲಿಗೆ ಬೇಕಾದರೂ ಕರೆದೊಯ್ಯುವೆನು'–ಎಂದು ಹೇಳಿ, ತಾನು ದಾಸಿಯ ಕಾರ್ಯವನ್ನು ಹೇಗೆ ಮಾಡುವೆನೆಂಬುದರ ನಿರೂಪಣೆಯನ್ನೂ ಕೊಡುತ್ತಾಳೆ. ಆದುದರಿಂದ ಧರ್ಮಾನುಸರಣೆಯನ್ನು ಮಾಡುವಾಗ ಅಥವಾ ಧರ್ಮಕಾರ್ಯವನ್ನು ನಿರ್ವಹಿಸಬೇಕಾಗಿರುವಾಗ–ಮಧ್ಯೆ ಅನುಸರಿಸಬೇಕಾಗಿರುವ ಮಾರ್ಗಗಳು ಸಾಧುವೇ ಎಂದು ಯೋಚಿಸಬೇಕಾದ ಕಾರಣವಿಲ್ಲ.

ನೀನು ಹೇಳುವುದೆಲ್ಲವೂ ನಿಶ್ಚಯ. ಇದರಲ್ಲಿ ಸಂಶಯಲೇಶವೂ ಇಲ್ಲ. ನಿನ್ನ ಆಶಯದಂತೆ ಭೀಮನನ್ನು ನೀನು ಪತಿಯನ್ನಾಗಿ ಪಡೆಯಬಹುದು. ಭೀಮನು ಸ್ನಾನ-ಸಂಧ್ಯಾದಿಗಳನ್ನು ಮಾಡಿ, ಪರಿಶುದ್ಧನಾಗಿ ನಿನ್ನೊಡನೆ ಬರುವನು. ಸಾಯಂಕಾಲದವರೆಗೆ ನೀನವನನ್ನು ಎಲ್ಲಿಗೆ ಬೇಕಾದರೂ ಕರೆದೊಯ್ದು ವಿಹರಿಸಬಹುದು. ಆದರೆ ರಾತ್ರಿಯ ವೇಳೆಗೆ ಇವನನ್ನು ಇಲ್ಲಿಗೆ ಕರೆತಂದು ಬಿಡಬೇಕು."

ಯುಧಿಷ್ಠಿರನ ಮಾತಿಗೆ ಭೀಮನೂ ಒಪ್ಪಿ ಹಿಡಿಂಬೆಯನ್ನು ಕುರಿತು ಹೇಳಿದನು : "ಹಿಡಿಂಬೇ! ನಮ್ಮಣ್ಣನ ಮಾತನ್ನು ನಾನೂ ಸಮ್ಮತಿಸುವೆನು. ಆದರೆ ನನ್ನದೂ ಒಂದು ನಿಬಂಧನೆಯಿದೆ. ಅದಕ್ಕೆ ನೀನು ಒಪ್ಪುವುದಾದರೆ ಮಾತ್ರವೇ ನಿನ್ನೊಡನೆ ಬರಲು ಸಾಧ್ಯವಾದೀತು. ನಿನ್ನಲ್ಲೊಬ್ಬ ಮಗನು ಹುಟ್ಟುವವರೆಗೆ ಮಾತ್ರವೇ ನಾನು ನಿನ್ನ ಜೊತೆಯಲ್ಲಿರುವೆನು. ಆಗ ಬಹುದೇ?"

ಮಂದಹಾಸಪೂರ್ಣವಾದ ಮುಖಭಾವದಿಂದಲೇ ಹಿಡಿಂಬೆಯು ಭೀಮನ ಮಾತಿಗೆ ಒಪ್ಪಿಗೆಯನ್ನಿತ್ತಳು. ಭೀಮನನ್ನು ಬೆನ್ನಮೇಲೆ ಕುಳ್ಳಿರಿಸಿ ಕೊಂಡು ಕ್ಷಣಮಾತ್ರದಲ್ಲಿ ಆಕಾಶಕ್ಕೆ ಹಾರಿದಳು. ಪರ್ವತದ ತಪ್ಪಲುಗಳಲ್ಲಿ, ದೇವತೆಗಳು ಸಂಚರಿಸುವ ಗಿರಿ-ಗುಹೆಗಳಲ್ಲಿ, ಮೃಗ-ಪಕ್ಷಿಗಳಿಂದ ನಿಬಿಡವಾದ ಸುಂದರ ಕಾನನಪ್ರದೇಶಗಳಲ್ಲಿ ಯಥೇಚ್ಛವಾಗಿ ವಿಹರಿಸಿದಳು. ಪರಮ ಸುಂದರರೂಪವನ್ನು ತಾಳಿ, ಸರ್ವಾಭರಣಗಳನ್ನೂ ಧರಿಸಿ ಪಾಂಡುಪುತ್ರ

---

'ಅಪೇಯಪಾನವನ್ನು ಮಾಡುವುದಿಲ್ಲ' – ಎಂಬುದು ಒಬ್ಬನ ಧರ್ಮವಾಗಿರುತ್ತದೆ. ಮದ್ಯಾದ್ಯಪೇಯಗಳನ್ನು ಕುಡಿಯದಿರುವುದು ಧರ್ಮವೇ ಸರಿ. ಯಾವುದೋ ಖಾಯಿಲೆಯು ಬಂದು ಅಪೇಯ ಅಥವಾ ಮದ್ಯದಿಂದ ಮಾಡಿದ ಔಷಧಿಯಿಂದ ಪ್ರಾಣವುಳಿಯುವು ದೆನ್ನುವುದಾದರೆ–ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿ 'ಅಪೇಯಪಾನ ಮಾಡುವುದಿಲ್ಲ' ಎಂಬ ಧರ್ಮವನ್ನು ತಾತ್ಕಾಲಿಕವಾಗಿಯಾದರೂ ಬಿಡಬೇಕಾಗುತ್ತದೆ.

'ಧರ್ಮವು ಹೆಚ್ಚೇ ; ಪ್ರಾಣವು ಹೆಚ್ಚೇ' – ಎಂಬ ಜಿಜ್ಞಾಸೆಯು ಬಂದಾಗ ಅಧರ್ಮವನ್ನು ಮಾಡಿ ಬದುಕುವುದಕ್ಕಿಂತಲೂ ಧರ್ಮದಿಂದಿದ್ದು ಸಾಯುವುದೇ ಲೇಸೆಂದು ಹೇಳುವ ಧರ್ಮವೀರರಿದ್ದಾರೆ. ಆದರೆ ಯಾವ ಅಧರ್ಮಕಾರ್ಯಮಾಡಿ ದರೂ ಅದಕ್ಕೆ ಪ್ರಾಯಶ್ಚಿತ್ತವೂ ಒಂದಿದೆ. ಆಪತ್ಕಾಲದಲ್ಲಿ ಅನಿವಾರ್ಯವಾಗಿ ಅಧರ್ಮಾ

ನೊಡನೆ ರಮಿಸಿದಳು. ವನ-ದುರ್ಗಗಳಲ್ಲಿ, ಪುಷ್ಪಭರಿತವಾಗಿರುವ ವೃಕ್ಷಮೂಲಗಳಲ್ಲಿ, ಕಮಲಗಳಿಂದ ಕೂಡಿರುವ ಸುಮನೋಹರವಾದ ತಟಾಕಗಳಲ್ಲಿ, ನದಿಗಳಲ್ಲಿ, ನದಿಗಳ ಮಧ್ಯದಲ್ಲಿರುವ ದ್ವೀಪಪ್ರದೇಶಗಳಲ್ಲಿ, ಸಮುದ್ರದ ದಂಡೆಗಳಲ್ಲಿ, ಸುಂದರಪ್ರದೇಶಗಳಲ್ಲಿ, ಸರ್ವರ್ತುಗಳಲ್ಲಿಯೂ ಫಲಗಳನ್ನು ಬಿಡುವ ವಿಚಿತ್ರತರವಾದ ವನಗಳಲ್ಲಿ, ಮಾನಸಸರೋವರದ ಸಮೀಪದಲ್ಲಿ– ಹಿಡಿಂಬೆಯು ಭೀಮನೊಡನೆ ಸ್ವೇಚ್ಛೆಯಿಂದ ವಿಹರಿಸಿದಳು.

ಸ್ವಲ್ಪ ದಿವಸಗಳು ಕಳೆದನಂತರ ಹಿಡಿಂಬೆಯು ಗರ್ಭಧಾರಣೆ ಮಾಡಿ, ಒಡನೆಯೇ ಬಹಳ ಬಲಶಾಲಿಯಾದ ಮಗನನ್ನು ಪ್ರಸವಿಸಿದಳು. ಹುಟ್ಟಿದ ಮಗುವು ಒಡನೆಯೇ ದೊಡ್ಡದಾಗಿ ಬೆಳೆಯಿತು. ವಿರೂಪವಾದ ಕಣ್ಣುಗಳು, ವಿಶಾಲವಾದ ಮುಖ, ಶಂಕುಗಳಂತಿದ್ದ ಕಿವಿಗಳು, ಕೆಂಪಾದ ತುಟಿಗಳು, ತೀಕ್ಷ್ಣವಾಗಿದ್ದ ಕೋರೆದಾಡೆಗಳು, ಸ್ಥೂಲವಾದ ಶರೀರ, ಬೋಳುತಲೆ– ಇಂತಹ ಲಕ್ಷಣಗಳಿಂದ ಕೂಡಿದ್ದ ಹಿಡಿಂಬಾಪುತ್ರನು ನೋಡಲು ಬಹಳ ಭಯಂಕರನಾಗಿ ಕಾಣುತ್ತಿದ್ದನು. ಹುಟ್ಟಿದಾಗಲೇ ಅವನು ಸಕಲಮಾಯಾ ವಿದ್ಯೆಗಳಲ್ಲಿಯೂ ನಿಷ್ಣಾತನಾಗಿದ್ದನು. ಧನುರ್ವಿದ್ಯೆಯಲ್ಲಿ ಅಪ್ರತಿಮನಾಗಿ ದ್ದನು. ಉದ್ದವಾದ ಮೂಗಿನಿಂದಲೂ, ವಿಶಾಲವಾದ ವಕ್ಷಃಸ್ಥಳದಿಂದಲೂ, ಬಹಳ ಎತ್ತರವಾಗಿದ್ದ ಜಾನು-ಗುಲ್ಫಾಂತರ ಪ್ರದೇಶಗಳಿಂದಲೂ, ಅತಿಯಾದ ಪರಾಕ್ರಮದಿಂದಲೂ, ಗಾಳಿಗಿಂತಲೂ ಮಿಗಿಲಾದ ಗಮನಶಕ್ತಿಯಿಂದಲೂ ಕೂಡಿದ್ದ ಆ ಬಾಲಕನು ಭಯಂಕರರಾಕ್ಷಸನಂತೆ ಕಾಣುತ್ತಿದ್ದನೇ ಹೊರತು–

---

ಚರಣೆಮಾಡಿ ಎಲ್ಲ ವಸ್ತುಗಳಿಗಿಂತಲೂ ಪ್ರಿಯತಮವಾದ ಪ್ರಾಣವನ್ನು ಉಳಿಸಿಕೊಂಡು ಅನಂತರದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬಹುದು. ಇನ್ನೂ ಅನೇಕಾನೇಕ ಧರ್ಮಕಾರ್ಯಗಳನ್ನು ಮಾಡಬಹುದು. ಆದರೆ ಆಯುಷ್ಯವೇ ಮುಗಿದಿದ್ದರೆ ಅಪೇಯಪಾನ ಮಾಡುವುದರಿಂದ ಆಯುಷ್ಯವು ಹೇಗೆ ಉಳಿದೀತು? ಆಯುಷ್ಯ ವಿರುವುದಾದರೆ ಅಧರ್ಮಾಚರಣೆಯಿಲ್ಲದೆಯೇ ಉಳಿದುಕೊಳ್ಳಬಹುದು. ಆಯುಷ್ಯವು ತೀರಿದ್ದರೆ ಅಪೇಯಪಾನಮಾಡಿಯೂ ಉಳಿಯಲಾರನು. ಹೀಗಿರುವಾಗ ಸಾಯುವ ಕಡೆಗಾಲದಲ್ಲಿ ಅಧರ್ಮಾಚರಣೆಯನ್ನೇಕೆ ಮಾಡಬೇಕು?– ಎಂಬುದು ಮುಂದಿನ ವಾದ. ಧರ್ಮಾಧರ್ಮಗಳ ಆಚರಣೆಗಳೆಲ್ಲವೂ ಮುಖ್ಯವಾಗಿ ಮನಸ್ಸಿನ ದಾರ್ಢ್ಯ ವನ್ನೇ ಅವಲಂಬಿಸಿವೆ. ಮನಸ್ಸು ದುರ್ಬಲವಾಗಿದ್ದರೆ, ಮಾನವನು ಯಾವು ದೊಂದು ಕಾರ್ಯವನ್ನು ಮಾಡಲೂ ಅಂಜುತ್ತಾನೆ. ಇಂದ್ರಿಯಗಳಿಗೆ ದಾಸನಾಗು

ಮಾನವಶ್ರೇಷ್ಠನಾದ ಭೀಮನ ಮಗನಾದರೂ–ಮಾನವನ ಲಕ್ಷಣಗಳು ಅವನಲ್ಲಿ ಸ್ವಲ್ಪವಾದರೂ ಇರಲಿಲ್ಲ.

ಅವನು ಮಾನವನಿಂದ ಜನ್ಮತಾಳಿದ್ದರೂ ಅವನ ಆಕಾರ ಮತ್ತು ಪರಾಕ್ರಮಗಳು ಅತಿಮಾನುಷವಾಗಿದ್ದುವು. ಪಿಶಾಚ-ಗುಹ್ಯಕರುಗಳನ್ನೂ ಮೀರಿಸುವಂತಿದ್ದನು. ಹುಟ್ಟಿದ ಒಂದು ಘಳಿಗೆಯಲ್ಲೇ ಆ ಶಿಶುವು ಬಾಲ್ಯ-ಕೌಮಾರಾವಸ್ಥೆಗಳನ್ನೂ ದಾಟಿ, ಯೌವನವನ್ನೂ ಹೊಂದಿತು.*

ಬೋಳುತಲೆಯ ಭೀಮನ ಮಗನು ಒಡನೆಯೇ ತಾಯಿಯ ಪಾದ ಕಮಲಗಳನ್ನು ಮುಟ್ಟಿ ನಮಸ್ಕರಿಸಿ, ತಂದೆಯಾದ ಭೀಮನಿಗೂ ಅಭಿವಾದನ ಮಾಡಿದನು. ಸುಪ್ರೀತರಾದ ತಂದೆ-ತಾಯಿಗಳು ಮಗನಿಗೆ ನಾಮಕರಣವನ್ನು ಮಾಡಿದರು.

**ಘಟೋ ಹಾಸ್ಯೋತ್ಕಚ ಇತಿ ಮಾತಾ ತಂ ಪ್ರತ್ಯಭಾಷತ ।**
**ಅಬ್ರವೀತ್ತೇನ ನಾಮಾಸ್ಯ ಘಟೋತ್ಕಚ ಇತಿ ಸ್ಮ ಹ ॥೩೮॥**

'ಮಣ್ಣಿನ ಗಡಿಗೆಯ ಅಡಿಭಾಗದಂತೆ ಬೋಳಾಗಿಯೂ ನುಣುಪಾಗಿಯೂ ಇವನ ತಲೆ ಇದೆ'–ಎಂದು ಮಗುವಿನ ತಾಯಿಯು ನುಡಿದುದ ರಿಂದ ಇವನನ್ನು 'ಘಟೋತ್ಕಚ' (ಗಡಿಗೆಯಂತೆ ಬೋಳುತಲೆಯುಳ್ಳವನು ) ಎಂದೇ ಕರೆದರು.**

ಘಟೋತ್ಕಚನು ತಂದೆ-ತಾಯಿಗಳು ಮತ್ತು ಪಾಂಡವರೆಲ್ಲರ ಪ್ರೀತಿಗೂ ಪಾತ್ರನಾದನು.

ಪುತ್ರನ ಜನನವಾದನಂತರ ಹಿಡಿಂಬೆಯು ಭೀಮನನ್ನು ಅಗಲುವ

---

ತ್ತಾನೆ. ಮನಸ್ಸು ದೃಢವಾಗಿದ್ದರೆ ಆಪತ್ತುಗಳನ್ನೂ ತೃಣೀಕರಿಸುತ್ತಾನೆ. ಅಧರ್ಮ ಪ್ರವರ್ತನೆಗೆ ಕಾರಣಭೂತಗಳಾದ ಪಂಚೇಂದ್ರಿಯಗಳನ್ನೂ ಹತೋಟಿಯಲ್ಲಿಟ್ಟುಕೊಂಡಿರುತ್ತಾನೆ.

* ಪಾರ್ವತೀದೇವಿಯ ವರದಂತೆ ರಾಕ್ಷಸಸ್ತ್ರೀಯರು ತಾವು ಗರ್ಭಧರಿಸಿದ ದಿನವೇ ಪ್ರಸವಿಸಲೂ ಮತ್ತು ಶಿಶುವು ತಾನು ಇಚ್ಛಿಸಿದ ಆಕಾರವನ್ನು ಹೊಂದಲೂ ಸಮರ್ಥ ರಾಗಿರುತ್ತಾರೆ.

** ಅಸ್ಯ ಘಟಃ = ಇವನ ತಲೆಯು ಉತ್ಕಚಃ= ಕೇಶರಹಿತವಾಗಿದೆ. ಹ = ಆಶ್ಚರ್ಯ. ಆದುದರಿಂದ ಘಟೋತ್ಕಚ. ಈ ರೀತಿಯಲ್ಲೂ ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ.

ಕಾಲವು ಸನ್ನಿಹಿತವಾಯಿತೆಂದು ಭಾವಿಸಿದಳು. ಧರ್ಮರಾಜನಿಗೂ ಮತ್ತು ಕುಂತಿಗೂ ನಮಸ್ಕರಿಸಿ, ಇಚ್ಛೆಯಿದ್ದೆಡೆಗೆ ಹೊರಟುಹೋದಳು. ಅನಂತರ ಘಟೋತ್ಕಚನು ಕೂಡ ಎಲ್ಲರಿಗೂ ನಮಸ್ಕರಿಸಿ ಹೇಳಿದನು : "ಪೂಜ್ಯರೇ! ನಾನು ತಮಗೆ ಯಾವ ಕಾರ್ಯವನ್ನು ಮಾಡಿಕೊಡಲಿ? ನಿಸ್ಸಂಕೋಚವಾಗಿ ಹೇಳಿರಿ."

ಕುಂತಿಯು, ಮೊಮ್ಮಗನ ಮಾತುಗಳನ್ನು ಕೇಳಿ ಸಂತೋಷಭರಿತಳಾಗಿ ಹೇಳಿದಳು : " ಮಗು! ನೀನು ಕುರುವಂಶಸಂಭೂತನಾಗಿರುವೆ. ನಿಮ್ಮ ತಂದೆಯಂತೆಯೇ ಪರಾಕ್ರಮವನ್ನೂ ಪಡೆದಿರುವೆ. ನನ್ನ ಐವರು ಮಕ್ಕಳಿಗೂ ನೀನೇ ಜ್ಯೇಷ್ಠಪುತ್ರನು. ಆದುದರಿಂದ ಮುಂದೆ ನೀನು ಸಮಯಗಳಲ್ಲಿ ಸಹಾಯಮಾಡಬೇಕು."

ಪಿತಾಮಹಿಯ ಮಾತುಗಳನ್ನು ಕೇಳಿದ ಘಟೋತ್ಕಚನು ಕುಂತಿಗೆ ವಿನಯಪೂರ್ವಕವಾಗಿ ನಮಸ್ಕರಿಸಿ ಹೇಳಿದನು : "ತಾಯೇ! ರಾವಣ ಮತ್ತು ಅವನ ಮಗನಾದ ಇಂದ್ರಜಿತು ಇವರಿಗೆ ಸಮಾನವಾದ ಶರೀರದಾರ್ಢ್ಯ ಮತ್ತು ಪರಾಕ್ರಮವುಳ್ಳ ನಾನು ಈ ಲೋಕದಲ್ಲಿ ಮಾನವರಿಗಿಂತಲೂ ಅಧಿಕನಾಗಿರುತ್ತೇನೆ. ನೀವು ನೆನೆದಾಗ ನಾನು ಸಿದ್ಧನಾಗಿ ಬರುವೆನು" – ಎಂದು ಹೇಳಿ ಪಾಂಡವರ ಅನುಮತಿಯನ್ನು ಪಡೆದು ರಾಕ್ಷಸಶ್ರೇಷ್ಠನಾದ ಘಟೋತ್ಕಚನು ಉತ್ತರದಿಕ್ಕಿನ ಕಡೆಗೆ ಹೊರಟುಹೋದನು.

ಜನಮೇಜಯ! ಘಟೋತ್ಕಚನ ಜನನದ ಕಾರಣವೂ ಬಹಳ ರಹಸ್ಯವಾಗಿರುವುದು. ಕರ್ಣನಿಗೆ ಇಂದ್ರನು ಒಂದು ಅಮೋಘವಾದ ಮತ್ತು ಅಪ್ರತಿಮವಾದ ಶಕ್ತ್ಯಾಯುಧವನ್ನು ಕೊಟ್ಟಿದ್ದನು. ಆ ಆಯುಧವು ಎದುರಾಳಿಯೊಬ್ಬನನ್ನು ಕೊಲ್ಲದೇ ಬಿಡುವುದಿಲ್ಲವೆಂಬ ನಿಶ್ಚಯವಿತ್ತು. ಅರ್ಜುನನಿಗುಂಟಾಗುವ ಅಪಾಯವನ್ನು ತಪ್ಪಿಸುವ ಸಲುವಾಗಿ ಕರ್ಣನಿಗೆ ಪ್ರತಿಯೋಧನಾಗಲು ಇಂದ್ರನೇ ಘಟೋತ್ಕಚನ ಜನ್ಮಕ್ಕೆ ಕಾರಣನಾದನು.

೧೫೫ನೆಯ ಅಧ್ಯಾಯವು ಮುಗಿಯಿತು.

## ಪಾಂಡವರಿಂದ ವ್ಯಾಸರ ದರ್ಶನ : ಏಕಚಕ್ರನಗರಗಮನ

ವೈಶಂಪಾಯನರು ಹೇಳುತ್ತಾರೆ :

**ತೇ ವನೇನ ವನಂ ಗತ್ವಾ ಘ್ನಂತೋ ಮೃಗಗಣಾನ್ಬಹೂನ್ ।**
**ಅಪಕ್ರಮ್ಯ ಯಯುೂ ರಾಜಂ ಸ್ತ್ವರಮಾಣಾ ಮಹಾರಥಾಃ ॥೧॥**

ಜನಮೇಜಯ! ಹಿಡಿಂಬಾ-ಘಟೋತ್ಕಚರು ಹೊರಟುಹೋದ ನಂತರ ಮಹಾರಥರಾದ ಪಾಂಡವರು ಅಲ್ಲಲ್ಲಿ ಜಿಂಕೆಗಳನ್ನೂ, ಅನೇಕದುಷ್ಟ ಪ್ರಾಣಿಗಳನ್ನೂ ಬೇಟೆಯಾಡುತ್ತಾ, ವನದಿಂದ ವನಕ್ಕೆ ಅವಸರದಿಂದ ಧಾವಿಸುತ್ತಿದ್ದರು. ಅವರು ಹಾಗೆಯೇ ಹೋಗುತ್ತಿದ್ದಾಗ ಮತ್ಸ್ಯ, ತ್ರಿಗರ್ತ, ಪಾಂಚಾಲ, ಕೀಚಕ–ಈ ದೇಶಗಳೆಲ್ಲವೂ ಹಿಂದುಳಿಯುತ್ತಾ ಹೋದುವು. ಅನೇಕ ಮಹಾನದೀ-ನದ-ತಟಾಕಗಳನ್ನೂ, ಗಿರಿ-ಗುಹಾ-ದುರ್ಗಗಳನ್ನೂ ದಾಟಿದರು. ಜಟಾಧಾರಿಗಳಾಗಿ ವಲ್ಕಲಗಳನ್ನೂ–ಕೃಷ್ಣಾಜಿನಗಳನ್ನೂ ಧರಿಸಿದ್ದ ಅವರು ತಪಸ್ವಿಗಳಂತೆಯೇ ಕಾಣುತ್ತಿದ್ದರು. ಅವರ ಮಧ್ಯದಲ್ಲಿದ್ದ ಕುಂತಿಯೂ ತಾಪಸಿಯಂತೆಯೇ ಕಾಣುತ್ತಿದ್ದಳು. ಯುಧಿಷ್ಠಿರಾದಿಗಳು ಕೆಲವು ಸಮಯಗಳಲ್ಲಿ ಜನನಿಯನ್ನು ಎತ್ತಿಕೊಂಡೇ ನಡೆಯುತ್ತಿದ್ದರು. ಅರಣ್ಯದಲ್ಲಿಯೂ ಆ ರಾಜಕುಮಾರರು ವ್ಯರ್ಥವಾಗಿ ಕಾಲಯಾಪನೆ ಮಾಡುತ್ತಿರಲಿಲ್ಲ. ತಾವು ಹಸ್ತಿನೆಯಲ್ಲಿ ಕಲಿತಿದ್ದ ವೇದ-ವೇದಾಂಗಗಳನ್ನು ಪುನರಾವರ್ತನಮಾಡುತ್ತಾ, ಧರ್ಮಾರ್ಥ-ಕಾಮ-ಮೋಕ್ಷಗಳ ವಿಷಯವಾಗಿ ತಮ್ಮಲ್ಲಿಯೇ ಜಿಜ್ಞಾಸೆಮಾಡುತ್ತಾ ಮುಂದುವರಿಯುತ್ತಿದ್ದರು. ಹೀಗೆಯೇ ಪ್ರಯಾಣಮಾಡುತ್ತಿದ್ದಾಗ ಅವರಿಗೆ ಪಿತಾಮಹರಾದ ವ್ಯಾಸಮಹರ್ಷಿಗಳ ದರ್ಶನವಾಯಿತು. ದರ್ಶನವಾದೊಡನೆಯೇ ತಾಯಿಯೊಡನೆ ಎಲ್ಲರೂ ವ್ಯಾಸರಿಗೆ ನಮಸ್ಕರಿಸಿ, ಬದ್ಧಾಂಜಲಿಗಳಾಗಿ ಅವರ ಮುಂದೆ ನಿಂತರು.

ವ್ಯಾಸರು ಎಲ್ಲರನ್ನೂ ಆಶೀರ್ವದಿಸಿ ಹೇಳಿದರು : "ಭರತಕುಲೋತ್ಪನ್ನರಾದ ರಾಜಕುಮಾರರೇ! ದುರ್ಯೋಧನನು ನಿಮ್ಮನ್ನು ಮೋಸದಿಂದ ದೇಶ

ಭ್ರಷ್ಟರನ್ನಾಗಿ ಮಾಡಿದ ವಿಷಯವೂ ಮತ್ತು ಇಂದು ನೀವು ಅನುಭವಿಸು ತ್ತಿರುವ ಕಷ್ಟಪರಂಪರೆಗಳೂ ನನಗೆ ಸಂಪೂರ್ಣವಾಗಿ ತಿಳಿದಿವೆ. ಇವೆಲ್ಲ ವನ್ನೂ ತಿಳಿದನಂತರವೇ ಕಷ್ಟದಲ್ಲಿ ಸಿಲುಕಿರುವ ನಿಮಗೆ ಒಳ್ಳೆಯದನ್ನು ಮಾಡುವ ಇಚ್ಛೆಯಿಂದಲೇ ನಾನು ಇಲ್ಲಿಗೆ ಬಂದಿರುವೆನು. ಹಿಂದೆ ಅನುಭವಿ ಸಿದ ಕಷ್ಟಗಳನ್ನು ನೆನೆದು ನೀವು ಯೋಚಿಸಬೇಡಿರಿ. ಈಗ ನೀವು ಅನುಭವಿ ಸುತ್ತಿರುವ ಕಷ್ಟಗಳೆಲ್ಲವೂ ಪರಿಣಾಮದಲ್ಲಿ ನಿಮ್ಮ ಸುಖಕ್ಕೇ ಕಾರಣವಾಗು ವುವು. ನೀವೂ ಮತ್ತು ಧೃತರಾಷ್ಟ್ರನ ಮಕ್ಕಳೂ ನನಗೆ ಸಮಾನರು. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ–

**ದೀನತೋ ಬಾಲತಶ್ಚೈವ ಸ್ನೇಹಂ ಕುರ್ವನ್ತಿ ಮಾನವಾಃ ।**
**ತಸ್ಮಾದಭ್ಯಧಿಕಃ ಸ್ನೇಹೋ ಯುಷ್ಮಾಸು ಮಮ ಸಾಮ್ಪ್ರತಮ್ ॥೬॥**

ಸಾಮಾನ್ಯವಾಗಿ ದೀನರ ಅಥವಾ ಅದೃಷ್ಟಹೀನರ ಮತ್ತು ಬಾಲಕರ ವಿಷಯದಲ್ಲಿ ಜನರು ಪಕ್ಷಪಾತವನ್ನು ವಹಿಸುವುದು ಅಥವಾ ಮರುಕವನ್ನು ತೋರುವುದು ಸಹಜವಾಗಿರುತ್ತದೆ. ಆದುದರಿಂದ ನಿಮ್ಮ ವಿಷಯದಲ್ಲಿ ನನ್ನ ಮಮತೆಯು ಈಗ ಅತ್ಯಧಿಕವಾಗಿದೆ. ಈ ಕಾರಣದಿಂದಲೇ ನಾನು ನಿಮಗೆ ಒಳ್ಳೆಯದನ್ನು ಮಾಡಲು ಬಂದಿರುವೆನು. ನಾನು ಹೇಳುವುದನ್ನು ಅನನ್ಯ ಮನಸ್ಕರಾಗಿ ಕೇಳಿರಿ. ಇಲ್ಲಿಗೆ ಅನತಿದೂರದಲ್ಲಿಯೇ ಒಂದು ಸುಂದರನಗರಿ ಯಿದೆ. ಅಲ್ಲಿ ವಾಸಮಾಡುವುದರಿಂದ ನಿಮಗಾವ ಅಪಾಯವೂ ಉಂಟಾಗು ವುದಿಲ್ಲ. ಅಲ್ಲಿ ನೀವು ವೇಷಾಂತರಗಳನ್ನು ಧರಿಸಿ ಜೀವಿಸುತ್ತಿದ್ದು, ನಾನು ಪುನಃ ಬರುವುದನ್ನು ನಿರೀಕ್ಷಣೆ ಮಾಡುತ್ತಿರಿ.” ವ್ಯಾಸರು ಹೀಗೆ ಹೇಳಿ ನಾನಾ ವಿಧವಾದ ಪ್ರಿಯವಚನಗಳಿಂದ ಪಾಂಡವರನ್ನು ಸಂತೈಸಿ, ಸಮೀಪದಲ್ಲಿದ್ದ ಏಕಚಕ್ರನಗರಿಗೆ ಅವರನ್ನು ಕರೆದುಕೊಂಡು ಹೋದರು. ಹೋಗುತ್ತಿರುವಾಗ ಹಾದಿಯಲ್ಲಿ ಯೋಚನಾಪರವಶಳಾಗಿದ್ದ ಕುಂತಿಯನ್ನು ಕುರಿತು ವ್ಯಾಸರು ಹೇಳಿದರು : “ದೀರ್ಘಾಯುಷ್ಮಂತರಾದ ಮಕ್ಕಳನ್ನು ಪಡೆದಿರುವ ವೀರಮಾತೆಯೇ! ನೀನು ಸ್ವಲ್ಪವಾದರೂ ಯೋಚಿಸುವ ಕಾರಣವಿಲ್ಲ. ಈ ನಿನ್ನ ಮಗನಾದ ಯುಧಿಷ್ಠಿರನು ಯಾವಾಗಲೂ ಸತ್ಯ-ಧರ್ಮಗಳನ್ನು ಉಪಾಸನೆ ಮಾಡುತ್ತಾ ಇರುವುದರಿಂದಲೇ ಭೂಮಂಡಲದಲ್ಲಿರುವ ರಾಜರೆಲ್ಲರನ್ನೂ

ಗೆದ್ದು ಚಕ್ರವರ್ತಿಯಾಗುವನು. ಮಹಾಪರಾಕ್ರಮಿಗಳಾದ ಭೀಮಾರ್ಜುನರನ್ನು ಸಹೋದರರನ್ನಾಗಿ ಪಡೆದಿರುವ ಯುಧಿಷ್ಠಿರನು ಸಾರ್ವಭೌಮನಾಗುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ನಿನ್ನ ಮಕ್ಕಳೂ ಮತ್ತು ಮಾದ್ರಿಯ ಮಕ್ಕಳೂ ಮುಂದೆ ತಮ್ಮ ರಾಷ್ಟ್ರದಲ್ಲಿ ಬಹಳ ಸಂತೋಷದಿಂದ ಕಾಲಯಾಪನ ಮಾಡುವರು. ಇಷ್ಟೇ ಅಲ್ಲದೇ ಇವರು ರಾಜಸೂಯ, ಅಶ್ವಮೇಧಗಳೇ ಮೊದಲಾದ ಅನೇಕ ಯಜ್ಞಗಳನ್ನೂ ಮಾಡಿ, ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಡುವರು. ರಾಜ್ಯದಲ್ಲಿ ತಮ್ಮ ಬಂಧು-ಮಿತ್ರರನ್ನೂ ವಿಶೇಷವಾಗಿ ಪುರಸ್ಕರಿಸುವರು. ಅವರೆಲ್ಲರ ಸುಖೋಪಭೋಗಗಳಿಗೆ ಕೊರತೆಯಿಲ್ಲದಂತೆ ನೋಡಿಕೊಳ್ಳುವರು."

ವ್ಯಾಸರು ಹೀಗೆ ಹೇಳುತ್ತಾ ಏಕಚಕ್ರನಗರವನ್ನು ಪ್ರವೇಶಿಸಿ, ಅಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣನೊಬ್ಬನ ಪರಿಚಯವನ್ನು ಪಾಂಡವರಿಗೆ ಮಾಡಿ ಕೊಟ್ಟರು. ಹೊರಡುವ ಸಮಯದಲ್ಲಿ ಪುನಃ ಯುಧಿಷ್ಠಿರಾದಿಗಳಿಗೆ–

**ಇಹ ಮಾಸಂ ಪ್ರತೀಕ್ಷಧ್ವಮಾಗಮಿಷ್ಯಾಮ್ಯಹಂ ಪುನಃ ।**
**ದೇಶಕಾಲೌ ವಿದಿತ್ವೈವ ಲಪ್ಸ್ಯಧ್ವಂ ಪರಮಾಂ ಪದಮ್ ॥೧೮॥**

'ನನ್ನ ಆಗಮನವನ್ನೇ ನಿರೀಕ್ಷಿಸುತ್ತಿರಿ. ನಾನು ಪುನಃ ಒಂದು ತಿಂಗಳಲ್ಲಿಯೇ ಇಲ್ಲಿಗೆ ಬರುವೆನು. ದೇಶ-ಕಾಲ-ವರ್ತಮಾನಗಳಿಗೆ ಹೊಂದಿ ಕೊಂಡು ನಡೆದರೆ ಸುಖವಾಗಿರಬಹುದು'–ಎಂದರು. ಅವರ ಈ ಮಾತು ಗಳಿಗೆ ಪಾಂಡವರೆಲ್ಲರೂ ಸಮ್ಮತಿಸಿ, ಹಾಗೆಯೇ ಆಗಲೆಂದು ಹೇಳಿ ಅಭಿವಾದನ ಮಾಡಿದನಂತರ ವ್ಯಾಸರು ತಮ್ಮ ಆಶ್ರಮಕ್ಕೆ ಪ್ರಯಾಣಮಾಡಿದರು.

೧೫೬ನೆಯ ಅಧ್ಯಾಯವು ಮುಗಿಯಿತು.

## ಬ್ರಾಹ್ಮಣನ ಕಷ್ಟಪರಿಹಾರಕ್ಕಾಗಿ ಕುಂತೀ-ಭೀಮರ ಸಂವಾದ : ಬ್ರಾಹ್ಮಣನ ದುಃಖೋದ್ಗಾರ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ಏಕಚಕ್ರನಗರಕ್ಕೆ ಹೋದನಂತರ ನಮ್ಮ ಮುತ್ತಾತಂದಿರು ಅಲ್ಲಿ ಮಾಡಿದ ಕಾರ್ಯವೇನು? ದಯೆಯಿಟ್ಟು ನನಗೆ ಎಲ್ಲವನ್ನೂ ವಿಶದವಾಗಿ ತಿಳಿಸಿರಿ. ಕಥೆಯನ್ನು ಕೇಳುತ್ತಿದ್ದಂತೆಲ್ಲಾ ಇನ್ನೂ ಕೇಳಬೇಕೆಂಬ ಅಭಿಲಾಷೆಯು ಹೆಚ್ಚುತ್ತಿದೆ."

"ಜನಮೇಜಯ! ವ್ಯಾಸರು ಹೇಳಿರುವಂತೆಯೇ ಎಲ್ಲವನ್ನೂ ವಿಶದ ವಾಗಿಯೇ ಹೇಳುವೆನು. ಸಾವಧಾನದಿಂದ ಕೇಳು"–ಎಂದು ಹೇಳಿ ವೈಶಂಪಾಯನರು ಮುಂದಿನ ಕಥೆಯನ್ನು ಪ್ರಾರಂಭಿಸಿದರು.

"ಪಾಂಡವರು ಏಕಚಕ್ರನಗರಿಗೆ ಬಂದು ವ್ಯಾಸರು ಪರಿಚಯಮಾಡಿ ಕೊಟ್ಟ ಬ್ರಾಹ್ಮಣನ ಮನೆಯಲ್ಲಿ ಸ್ವಲ್ಪಕಾಲ ವಾಸವಾಗಿದ್ದರು. ಅವರು ಕ್ಷತ್ರಿಯರಾಜಕುಮಾರರಾದರೂ ತಾವು ಧರಿಸಿದ್ದ ಬ್ರಾಹ್ಮಣವೇಷಕ್ಕೆ ಅನು ಸಾರವಾಗಿ ಭಿಕ್ಷಾವೃತ್ತಿಯಿಂದಲೇ ಜೀವನವನ್ನು ನಡೆಸುತ್ತಿದ್ದರು. ನಗರದ ಸುತ್ತಮುತ್ತಲೂ ತಿರುಗಾಡುತ್ತಿದ್ದಾಗ ಪಾಂಡವರು ಕಾಡು-ಮೇಡುಗಳನ್ನೂ, ನದಿಗಳನ್ನೂ, ತಟಾಕಗಳನ್ನೂ ನೋಡಿಕೊಂಡು ಬರುತ್ತಿದ್ದರು. ಅವರು ತಮ್ಮ ಸ್ವಾಭಾವಿಕವಾದ ಸದ್ಗುಣಗಳಿಂದ ಆ ನಗರಿಯಲ್ಲಿ ವಾಸಿಸುತ್ತಿದ್ದವರೆಲ್ಲರಿಗೂ ಅಚ್ಚು-ಮೆಚ್ಚಿನವರಾಗಿದ್ದರು. ಹಗಲೆಲ್ಲಾ ಭಿಕ್ಷೆಯೆತ್ತಿ ರಾತ್ರಿಯಲ್ಲಿ ಐವರೂ ತಮ್ಮ-ತಮ್ಮ ಸಂಚಿತವನ್ನು ತಂದು ತಾಯಿಯ ಮುಂದಿಡುತ್ತಿದ್ದರು. ಮಹಾಮಾತೆಯಾದ ಕುಂತಿಯು ಅವೆಲ್ಲವನ್ನೂ ಒಟ್ಟಾಗಿ ಸೇರಿಸಿ ಎಲ್ಲರಿಗೂ ವಿಭಾಗಮಾಡಿಕೊಡುತ್ತಿದ್ದಳು. ವಿಭಾಗಮಾಡುವುದರಲ್ಲಿಯೂ ಒಂದು ವೈಶಿಷ್ಟ್ಯವಿತ್ತು.

**ಅರ್ಧಂ ತು ಭುಞ್ಜತೇ ವೀರಾಃ ಸಹ ಮಾತ್ರಾ ಪರಂತಪಾಃ ।**
**ಅರ್ಧಂ ಸರ್ವಸ್ಯ ಭೈಕ್ಷಸ್ಯ ಭೀಮೋ ಭುಙ್ಕ್ತೇ ಮಹಾಬಲಃ ॥೬॥**

ತಂದ ಭಿಕ್ಷೆಯಲ್ಲಿ ಅರ್ಧಭಾಗವನ್ನು ಯುಧಿಷ್ಠಿರಾರ್ಜುನ-ನಕುಲ-ಸಹದೇವರು ತಾಯಿಯೊಡನೆ ಭುಂಜಿಸುತ್ತಿದ್ದರು. ಉಳಿದ ಅರ್ಧವನ್ನು ಭೀಮನೊಬ್ಬನೇ ಭುಂಜಿಸುತ್ತಿದ್ದನು.

ಭರತಕುಲಶಿರೋಮಣಿಯೇ! ಜನಮೇಜಯ! ಈ ರೀತಿಯಲ್ಲಿ ಆ ನಗರದಲ್ಲಿ ವಾಸಮಾಡುತ್ತಿದ್ದ ಪಾಂಡವರಿಗೆ ಬಹಳ ದಿನಗಳು ನೆಮ್ಮದಿಯಿಂದಲೇ ಕಳೆದುವು.

ಒಂದು ದಿನ ಭೀಮನು ಭಿಕ್ಷೆಗಾಗಲೀ, ಪರ್ಯಟನಕ್ಕಾಗಲೀ ಹೊರಗೆ ಹೋಗದೇ ಕುಂತಿಯ ಜೊತೆಯಲ್ಲಿ ಮನೆಯಲ್ಲಿಯೇ ಇದ್ದುಬಿಟ್ಟನು. ಉಳಿದ ನಾಲ್ವರೂ ಹೊರಗೆ ಹೋಗಿದ್ದರು. ಆ ವೇಳೆಗೆ ಸರಿಯಾಗಿ ತಾವು ವಾಸಿಸುತ್ತಿದ್ದ ಬ್ರಾಹ್ಮಣನ ಮನೆಯ ಕಡೆಯಿಂದ ಅಳುವ ಶಬ್ದವು ಕೇಳಿಬರಲಾಗಿ ಕುಂತಿಯು ಒಡನೆಯೇ ಮೇಲೆದ್ದು ಬಾಗಿಲ ಬಳಿ ನಿಂತು ಕೇಳಿದಳು. ರೋದನವು ನಿಮಿಷ-ನಿಮಿಷಕ್ಕೂ ಹೆಚ್ಚುತ್ತಿದ್ದಿತು. ಕರುಣಾಮಯಿಯಾದ ಮತ್ತು ಸಾಧ್ವಿಯಾದ ಕುಂತಿಗೆ ಅದನ್ನು ಸಹಿಸಲಾಗಲಿಲ್ಲ. ಬ್ರಾಹ್ಮಣನ ಮನೆಯಲ್ಲಾಗುತ್ತಿದ್ದ ಗೋಳಾಟವನ್ನು ಕೇಳಿ ಕುಂತಿಯ ಹೃದಯವೂ ದುಃಖಪೂರ್ಣವಾಯಿತು. ಕಣ್ಣುಗಳಲ್ಲಿ ನೀರೂರಿತು. ಒಡನೆಯೇ ಭೀಮನು ಕುಳಿತಿದ್ದಲ್ಲಿಗೆ ಹೋಗಿ ದಯಾಪೂರ್ಣವಾದ ಈ ಮಾತುಗಳನ್ನು ಹೇಳಿದಳು :

"ಭೀಮಸೇನ! ಇಲ್ಲಿಗೆ ಬಂದನಂತರ ನಮ್ಮ ಅನೇಕಕಷ್ಟಗಳು ಪರಿಹಾರವಾಗಿವೆ. ನಾವು ಒಂದು ವಿಧದಲ್ಲಿ ಸುಖವಾಗಿಯೇ ಇದ್ದೇವೆ. ಈ ಬ್ರಾಹ್ಮಣನೂ ನಮ್ಮನ್ನು ಬಹಳ ಮರ್ಯಾದೆಯಿಂದಲೇ ಕಾಣುತ್ತಿದ್ದಾನೆ. ನಮಗೆ ಕಷ್ಟಸಮಯದಲ್ಲಿ ಉಪಕರಿಸಿರುವ ಈ ಬ್ರಾಹ್ಮಣನಿಗೆ ಏನಾದರೂ ಪ್ರತ್ಯುಪಕಾರವನ್ನು ಮಾಡಬೇಕೆಂದು ನನ್ನ ಮನಸ್ಸು ತವಕಪಡುತ್ತಿದೆ.

**ಏತಾವಾನ್ಪುರುಷಸ್ತಾತ ಕೃತಂ ಯಸ್ಮಿನ್ನ ನಶ್ಯತಿ ।**
**ಯಾವಚ್ಚ ಕುರ್ಯಾದನ್ಯೋಽಸ್ಯ ಕುರ್ಯಾದಭ್ಯಧಿಕಂ ತತಃ ॥೧೪॥**

ಯಾವನ ವಿಷಯದಲ್ಲಿ ಮಾಡಿದ ಉಪಕಾರವು ನಿಷ್ಪ್ರಯೋಜನವೆನಿಸು

ವುದಿಲ್ಲವೋ–ಅಂತಹ ಮನುಷ್ಯನು ಒಳ್ಳೆಯ ಮಾನವನೆನಿಸುತ್ತಾನೆ. ಅಂತಹವನು ತಾನು ಹೊಂದಿದ ಉಪಕಾರಕ್ಕೆ ದ್ವಿಗುಣವಾಗಿ ಪ್ರತ್ಯುಪಕಾರವನ್ನು ಮಾಡುತ್ತಾನೆ. ನಮಗೆ ಕಷ್ಟಸಮಯದಲ್ಲಿ ಉಪಕಾರವನ್ನೆಸಗಿರುವ ಈ ಬ್ರಾಹ್ಮಣನು ಯಾವುದೋ ಒಂದು ಮಹಾಕಷ್ಟಕ್ಕೆ ಸಿಲುಕಿರುವನೆಂಬುದರಲ್ಲಿ ಸಂಶಯವಿಲ್ಲ. ನಿಶ್ಚಯವಾಗಿಯೂ ನಾವು ಈ ಸಮಯದಲ್ಲಿ ಇವನಿಗೆ ಸಹಾಯಕರಾದರೆ ಇವನು ನಮಗೆ ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಿದಂತಾಗುವುದು.”

“ಅಮ್ಮ! ಈಗಲೇ ಹೋಗಿ ಬ್ರಾಹ್ಮಣನ ಕಷ್ಟವೇನೆಂಬುದನ್ನು ತಿಳಿದು ಬಾ. ‘ಅದು ಹೇಗೆ ಬಂದಿತು? ಏತಕ್ಕಾಗಿ ಬಂದಿತು? ಯಾವಾಗ ಬಂದಿತು?’–ಎಂಬುದೆಲ್ಲವನ್ನೂ ವಿಶದವಾಗಿ ತಿಳಿದುಕೋ. ದುಷ್ಕರವಾಗಿದ್ದರೂ ಆ ಕಷ್ಟವನ್ನು ನಾನು ಪರಿಹರಿಸುವೆನು. ಆಗಬಹುದೇ?”

ತಾಯಿ-ಮಕ್ಕಳಿಬ್ಬರೂ ಹೀಗೆಂದು ಮಾತನಾಡಿಕೊಳ್ಳುತ್ತಿರುವ ಸಮಯದಲ್ಲಿಯೇ ಪುನಃ ಬ್ರಾಹ್ಮಣ-ಬ್ರಾಹ್ಮಣಿಯರ ಆರ್ತನಾದವು ಕೇಳಿಸಿತು.

ವೀರಸುತನ ಆಶ್ವಾಸನೆಯನ್ನು ತೆಗೆದುಕೊಂಡನಂತರ ವೀರಮಾತೆಯಾದ ಕುಂತಿಯು–ಕಟ್ಟಿಹಾಕಿರುವ ತನ್ನ ಪುಟ್ಟ ಕರುವಿನೆಡೆಗೆ ಬಾಲವನ್ನೆತ್ತಿಕೊಂಡು ಓಡಿಹೋಗುವ ಹಸುವಿನಂತೆ–ಬ್ರಾಹ್ಮಣನ ಒಳಮನೆಗೆ ಧಾವಿಸಿದಳು. ಅಲ್ಲಿ ಬ್ರಾಹ್ಮಣ ಮತ್ತು ಅವನ ಪತ್ನೀ-ಪುತ್ರಿಯರು ದುಃಖದಿಂದ ತಲೆತಗ್ಗಿಸಿಕೊಂಡು ಕುಳಿತಿರುವುದನ್ನು ಕುಂತಿಯು ನೋಡಿದಳು.

ತನಗಂದು ಒದಗಿರುವ ಕಷ್ಟವನ್ನು ನೆನೆದು ದುಃಖಿಸುತ್ತಾ ಬ್ರಾಹ್ಮಣನು ಹೇಳತೊಡಗಿದನು :

**ಧಿಗಿದಂ ಜೀವಿತಂ ಲೋಕೇ ಗತಸಾರಮನರ್ಥಕಮ್ ।**
**ದುಃಖಮೂಲಂ ಪರಾಧೀನಂ ಭೃಶಮಪ್ರಿಯಭಾಗಿ ಚ ॥೨೦॥**

“ಅಯ್ಯೋ! ಈ ಪ್ರಾಪಂಚಿಕಜೀವನಕ್ಕೆ ಧಿಕ್ಕಾರವಿರಲಿ. ಸಾರವಿಲ್ಲದ ಜೀವನ! ಪ್ರಯೋಜನವಿಲ್ಲದ ಜೀವನ! ದುಃಖವೇ ಆಧಾರಸ್ತಂಭವಾಗಿರುವ

ದಾರುಣಜೀವನ! ಅಸ್ವತಂತ್ರಜೀವನ! ಜೀವನವೆಂಬುದು ನಿಶ್ಚಯವಾಗಿಯೂ ಅಪ್ರಿಯಗಳಿಗೆ ಆಶ್ರಯವಾದುದು!

**ಜೀವಿತೇ ಪರಮಂ ದುಃಖಂ ಜೀವಿತೇ ಪರಮೋ ಜ್ವರಃ ।**
**ಜೀವಿತೇ ವರ್ತಮಾನಸ್ಯ ದುಃಖಾನಾಮಾಗಮೋ ಧ್ರುವಃ ॥೨೧॥**

ಪ್ರಾಣಧಾರಣೆಯೇ ಬಹುಕ್ಲೇಶವಾದುದು. ಬಹುವಿಧವಾದ ರೋಗ-ರುಜಿನಗಳಿಂದಲೂ, ಭಯದಿಂದಲೂ ಪೂರ್ಣವಾದುದು. ಪ್ರಾಣ ಧಾರಣೆ ಮಾಡಿರುವವನಿಗೆ ದೇಹದಲ್ಲಿ ಪ್ರಾಣಗಳಿರುವ ಪರ್ಯಂತವಾಗಿ ದುಃಖಗಳು ಒಂದಾದಮೇಲೊಂದು ಬರುತ್ತಲೇ ಇರುತ್ತವೆ. ಇದು ನಿಶ್ಚಯ.

**ಆತ್ಮಾ ಹ್ಯೇಕೋ ಹಿ ಧರ್ಮಾರ್ಥೌ ಕಾಮಂ ಚೈವ ನಿಷೇವತೇ ।**
**ಏತೈಶ್ಚ ವಿಪ್ರಯೋಗೋಽಪಿ ದುಃಖಂ ಪರಮನನ್ತಕಮ್ ॥೨೨॥**

ಆತ್ಮನು ಒಬ್ಬನೇ ಧರ್ಮಾರ್ಥ-ಕಾಮಗಳನ್ನು ಸೇವಿಸುತ್ತಾನೆ. ಹೀಗೆ ಧರ್ಮಾರ್ಥ-ಕಾಮಗಳನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುತ್ತಿರುವಾಗ ಸ್ವಲ್ಪ ಏರು-ಪೇರುಗಳು ಸಂಭವಿಸಿದರೂ ಜೀವನವೇ ದಾರುಣವಾಗಿ ಪರಿಣಮಿಸಿ ಬಿಡುವುದು.

**ಆಹುಃ ಕೇಚಿತ್ಪರಂ ಮೋಕ್ಷಂ ಸ ಚ ನಾಸ್ತಿ ಕಥಂಚನ ।**
**ಅರ್ಥಪ್ರಾಪ್ತೌ ತು ನರಕಃ ಕೃತ್ಸ್ನ ಏವೋಪಪದ್ಯತೇ ॥೨೩॥**

ಮೋಕ್ಷಸಾಧನೆಯೇ ಎಲ್ಲಕ್ಕಿಂತಲೂ ಮಿಗಿಲಾದ ಪರಮಾರ್ಥಸಾಧನೆ ಯೆಂದು ಕೆಲವರು ಹೇಳುವರು. ಆದರೆ ಧರ್ಮಾರ್ಥ-ಕಾಮಗಳ ಅನುಸರಣೆ ಯಿಂದ ಮೋಕ್ಷಸಾಧನೆಯು ಸಾಧ್ಯವಾಗಲಾರದೆಂಬುದು ನನ್ನ ನಿಶ್ಚಯ. ಮಾನವನು ಧಾರ್ಮಿಕನಾಗಿರಬಹುದು. ಅರ್ಥಪ್ರಾಪ್ತಿಯ ವಿಷಯವು ಬಂದಾಗಲೇ ಮಾನವನು ನರಕಯಾತನೆಯನ್ನು ಅನುಭವಿಸಬೇಕಾಗುವುದು.

**ಅರ್ಥೇಪ್ಸುತಾ ಪರಂ ದುಃಖಮರ್ಥಪ್ರಾಪ್ತೌ ತತೋಽಧಿಕಮ್ ।**
**ಜಾತಸ್ನೇಹಸ್ಯ ಚಾರ್ಥೇಷು ವಿಪ್ರಯೋಗೇ ಮಹತ್ತರಮ್ ॥೨೪॥**

ಮೊದಲನೆಯದಾಗಿ ಅರ್ಥಸಂಚಯನಕ್ಕೆ ಇಚ್ಛೆಪಟ್ಟರೆ ಅನೇಕ ವಿಧವಾದ ಕ್ಲೇಶಗಳು ಒಡನೆಯೇ ಪ್ರಾರಂಭವಾಗುವುವು. ಅರ್ಥಪ್ರಾಪ್ತಿ

ಯಾದರೋ ಬಹಳ ಕಷ್ಟದಿಂದಲೇ ಸಾಧ್ಯವಾಗುವುದು. ಅರ್ಥಪ್ರಾಪ್ತಿ ಯಾಯಿತೆಂದರೆ ಅದರ ರಕ್ಷಣೆಗಾಗಿ ಇನ್ನೂ ಹೆಚ್ಚಿನ ಕಷ್ಟಕ್ಕೆ ಗುರಿಯಾಗ ಬೇಕಾಗುವುದು. ಶಾರೀರಕವಾದ ಕಷ್ಟವು ಮಾತ್ರವಲ್ಲದೇ–ಸದಾ ಮಾನಸಿಕ ಚಿಂತೆಯೂ ಪ್ರಾರಂಭವಾಗುವುದು. ಅರ್ಥವು ಕಳೆದುಹೋದರೆ ಇನ್ನೂ ಹೆಚ್ಚಿನ ದುಃಖವು ಒದಗುತ್ತದೆ.*

ನಾನು ಯಾವ ರೀತಿಯಲ್ಲಿ ಇಂದು ಒದಗಿರುವ ಅಪಾಯದಿಂದ ಪಾರಾಗುವೆನು? ನನಗಂತೂ ಯಾವ ಮಾರ್ಗವೂ ತಿಳಿಯದಾಗಿದೆ. ಅಥವಾ ಅಪಾಯವಿಲ್ಲದ ಸ್ಥಳಕ್ಕೆ ಸಂಸಾರದೊಡನೆ ಓಡಿಹೋಗಿಬಿಡಲೇ? ಪ್ರಿಯಳೇ! ನಾನು ಹಿಂದೆ ಹೇಳಿದ ಮಾತುಗಳು ನಿನ್ನ ಸ್ಮರಣೆಯಲ್ಲಿರುವುದೇ? ನಾವಿಲ್ಲಿಂದ ಕ್ಷೇಮವಾಗಿರುವ ಬೇರೆಯ ಸ್ಥಳಕ್ಕೆ ಹೋಗಿ ಜೀವಿಸೋಣವೆಂದು ಹಲವು ಬಾರಿ ನಿನಗೆ ಹೇಳಿದ್ದೆನು. ಆದರೆ ನೀನಾಗ ನನ್ನ ಮಾತಿಗೆ ಕಿವಿಗೊಡಲಿಲ್ಲ. ಎಷ್ಟೋ ಬಾರಿ ಹೇಳಿದರೂ–'ಇದು ನಾನು ಹುಟ್ಟಿದ ಸ್ಥಳ ; ಇಲ್ಲಿಯೇ ನಾನು ಬೆಳೆದಿರುವುದು ; ಇದು ನಮ್ಮ ತಾತ-ಮುತ್ತಾತಂದಿರ ಊರು ; ಇದನ್ನು ಬಿಡಲಾರೆ'–ಎಂದೇ ಹೇಳುತ್ತಾ ಬಂದೆಯಲ್ಲವೇ? ನಿಮ್ಮ ತಂದೆ-ತಾಯಿಗಳೂ, ಬಂಧು-ಬಳಗದವರೂ ಪರಲೋಕಕ್ಕೆ ಹೋದಮೇಲೆಯೂ ನಿನಗೆ ಈ ಊರಿನ ವ್ಯಾಮೋಹವು ಹೋಗದೆ ಇಲ್ಲಿಯೇ ಇರಬೇಕೆಂದು ಹಟಮಾಡಿದೆ. ನಿನ್ನ ಮಾತಾ-ಪಿತೃಗಳ ಮೇಲಿನ ವ್ಯಾಮೋಹದಿಂದ ಹಿಂದೆ ನೀನು ಈ ಊರನ್ನು ಬಿಡಲು ಒಪ್ಪದೇ ಇದ್ದುದೇನೋ ಸರಿಯೇ. ಅನಂತರ

---

* ತನಗೆ ಪ್ರಾಪ್ತವಾಗಿರುವ ವಸ್ತುಗಳ ಮೇಲೆ ಮಾನವನು ಹೆಚ್ಚಾದ ವ್ಯಾಮೋಹವನ್ನು ಹೊಂದಿರುತ್ತಾನೆ. ಕಾರಣಾಂತರಗಳಿಂದ ಆ ವಸ್ತುಗಳಿಗೆ ಉಪದ್ರವವು ಸಂಭವಿಸಿದರೆ ಆಗ ಮನುಷ್ಯನು ಚಿಂತೆಗೆ ಒಳಗಾಗುತ್ತಾನೆ.

ಇಲ್ಲಿ ಬ್ರಾಹ್ಮಣನು ಅರ್ಥವೆಂದರೆ ಹಣದ ವಿಷಯವನ್ನು ಮಾತ್ರವೇ ಹೇಳುತ್ತಿಲ್ಲ–ತಾನು ಇಷ್ಟಪಡುವ ಯಾವುದೇ ಪದಾರ್ಥವಾದರೂ ಅದೇ 'ಅರ್ಥ'. ಆ ಅರ್ಥವು ಸಂತಾನವೂ ಆಗಬಹುದು ; ಯಾವುದಾದರೂ ಪದಾರ್ಥವೂ ಆಗಬಹುದು.

**ಯಾವನ್ತೋ ಯಸ್ಯ ಸಂಯೋಗಾ ದ್ರವ್ಯೈರಿಷ್ಟೈರ್ಭವನ್ತ್ಯುತ ।**
**ತಾವನ್ತೋಽಸ್ಯ ನಿಖನ್ಯನ್ತೇ ಹೃದಯೇ ಶೋಕಶಙ್ಕವಃ ॥**

ವಾದರೂ ನನ್ನ ಮಾತಿಗೆ ಒಪ್ಪಬಹುದಾಗಿದ್ದಿತು. ಇಂದು ನೋಡು. ಆ ನಿನ್ನ ವ್ಯಾಮೋಹವೇ ಶೂಲಪ್ರಾಯವಾಗಿ ನಿಂತಿದೆ. ಹಿಂದೆ ನೀನು ಯಾವ ಬಂಧು-ಬಳಗದವರ ಮೇಲಿನ ವ್ಯಾಮೋಹದಿಂದ ಈ ಊರನ್ನು ಬಿಡಲು ಒಪ್ಪದೇ ಹೋದೆಯೋ–ಅಂತಹ ಬಂಧುಗಳಿಗಿಂತಲೂ ಹೆಚ್ಚಿನ ಮಮತೆಯುಳ್ಳ ಬಂಧುವಿನ ಸಾವನ್ನು ಇಂದು ನೀನು ಪ್ರತ್ಯಕ್ಷವಾಗಿ ನೋಡುವ ಕಾಲವು ಸನ್ನಿಹಿತವಾಗಿದೆ. ಅಯ್ಯೋ! ಈ ದೃಶ್ಯವು ನಿಶ್ಚಯವಾಗಿಯೂ ಎಷ್ಟು ದುಃಖಕರವಾದುದು? ಅದನ್ನು ನೆನೆಯಲು ಕೂಡ ಸಾಧ್ಯವಿಲ್ಲ. ಇದು ಹಾಗಾಗಬಾರದು. ನನ್ನ ಅವಸಾನಕಾಲವೇ ಸನ್ನಿಹಿತವಾಗಿದೆ. ನಾನು ನನ್ನ ಸತೀ-ಸುತರನ್ನು ಬಲಿಗೊಟ್ಟು ಕಠಿನಹೃದಯನಂತೆ ಖಂಡಿತವಾಗಿಯೂ ಬದುಕಿರಲಾರೆನು.

**ಸಹಧರ್ಮಚರೀಂ ದಾನ್ತಾಂ ನಿತ್ಯಂ ಮಾತೃಸಮಾಂ ಮಮ ।**
**ಸಖಾಯಂ ವಿಹಿತಾಂ ದೇವೈರ್ನಿತ್ಯಂ ಪರಮಿಕಾಂ ಗತಿಮ್ ॥೩೧॥**

**ಪಿತ್ರಾ ಮಾತ್ರಾ ಚ ವಿಹಿತಾಂ ಸದಾ ಗಾರ್ಹಸ್ಥ್ಯಭಾಗಿನೀಮ್ ।**
**ವರಯಿತ್ವಾ ಯಥಾನ್ಯಾಯಂ ಮನ್ತ್ರವತ್ಪರಿಣೀಯ ಚ ॥೩೨॥**

**ಕುಲೀನಾಂ ಶೀಲಸಮ್ಪನ್ನಾಮಪತ್ಯಜನನೀಮಪಿ ।**
**ತ್ವಾಮಹಂ ಜೀವಿತಸ್ಯಾರ್ಥೇ ಸಾಧ್ವೀಮನಪಕಾರಿಣೀಮ್ ।**
**ಪರಿತ್ಯಕ್ತುಂ ನ ಶಕ್ಷ್ಯಾಮಿ ಭಾರ್ಯಾಂ ನಿತ್ಯಮನುವ್ರತಾಮ್ ॥೩೩॥**
**ಕುತ ಏವ ಪರಿತ್ಯಕ್ತುಂ ಸುತಂ ಶಕ್ಷ್ಯಾಮ್ಯಹಂ ಸ್ವಯಮ್ ।**
**ಬಾಲಮಪ್ರಾಪ್ತವಯಸಮಜಾತವ್ಯಞ್ಜನಾಕೃತಿಮ್ ॥೩೪॥**

ನೀನು ಸಹಧರ್ಮಚಾರಿಣಿಯಾಗಿಯೂ, ಪತಿಯ ಸುಖವೇ ನಿನ್ನ ಸುಖವೆಂದು ಭಾವಿಸಿ ಸ್ವಸುಖವನ್ನು ನಿರ್ಲಕ್ಷಿಸಿರುವವಳೂ ಆಗಿರುವೆ. ನನ್ನ ಪೋಷಣೆಯಲ್ಲಿ ತಾಯಿಯಂತೆಯೂ ಇರುವೆ. ದೇವತೆಗಳು ನಿನ್ನನ್ನು ನನ್ನ

---

ಯಾವುದಾದರೂ ಪದಾರ್ಥದಲ್ಲಿಯೇ ಆಗಲೀ, ಸತೀ-ಸುತರಲ್ಲಿಯೇ ಆಗಲೀ– ಯಾವನು ಎಷ್ಟು ಅಕ್ಕರೆಯನ್ನಿಟ್ಟಿರುವನೋ ಅವನ ಹೃದಯದಲ್ಲಿ ಆ ಅಕ್ಕರೆಯ ವಸ್ತುಗಳ ವಿರಹದ ಭಯದಿಂದ ಉಂಟಾಗುವ ಶೋಕದ ಈಟಿಗಳು ಅದೇ ಪ್ರಮಾಣದಲ್ಲಿಯೇ ಇರಿಯುತ್ತಿರುತ್ತವೆ. ಪ್ರಿಯತಮವಾದ ವಸ್ತುಗಳ ವಿರಹವೆಂಬುದನ್ನು ಮನುಷ್ಯನು ಜ್ಞಾಪಿಸಿಕೊಳ್ಳಲೂ ಭಯಪಡುವನು.

ಆಪ್ತಳಾದ ಗೆಳತಿಯನ್ನಾಗಿ ಮಾಡಿಕೊಟ್ಟಿದ್ದಾರೆ. ಎಲ್ಲ ಕಾಲಗಳಲ್ಲಿಯೂ ಶಾಶ್ವತವಾಗಿ ಇರುವವಳು ನೀನೊಬ್ಬಳೇ. ನನ್ನ ತಾಯಿ-ತಂದೆಗಳು ನಿನ್ನನ್ನು ನನ್ನ ಗೃಹಸ್ಥಾಶ್ರಮದ ಕರ್ಮಾನುಷ್ಠಾನಗಳಿಗೆ ಅಧಿಕಾರಿಣಿಯನ್ನಾಗಿ ಸ್ವೀಕರಿಸುತ್ತಾರೆ. ಸತ್ಕುಲಪ್ರಸೂತೆಯಾದ, ಸರ್ವಕಾಲದಲ್ಲಿಯೂ ಪತಿಯ ಹಿತದಲ್ಲಿಯೇ ನಿರತಳಾಗಿರುವ, ಗುಣಸಂಪನ್ನೆಯಾದ, ಪುತ್ರವತಿಯಾದ ನಿನ್ನನ್ನು ನನ್ನ ಪ್ರಾಣವನ್ನುಳಿಸಿಕೊಳ್ಳುವ ಸಲುವಾಗಿ ಖಂಡಿತವಾಗಿಯೂ ಪರಿತ್ಯಾಗಮಾಡಲಾರೆನು. ಈ ನನ್ನ ಮಗನನ್ನು ತಾನೇ ಹೇಗೆ ಬಲಿಗೊಡಲಿ? ಇವನಿನ್ನೂ ಬಾಲನಾಗಿರುವನು. ಯೌವನದ ಕುರುಹುಗಳಾದ ಗಡ್ಡ-ಮೀಸೆಗಳೂ ಇವನಿಗೆ ಹುಟ್ಟಿಯೇ ಇರುವುದಿಲ್ಲ. ಇಂತಹ ಎಳೆವಯಸ್ಸಿನ ಕೂಸನ್ನು ಬಲಿಗೊಡಲು ಸಾಧ್ಯವಾದೀತೇ? ಮಗಳನ್ನು ತಾನೇ ಹೇಗೆ ಬಲಿಗೊಡಲಿ?

**ಭರ್ತುರರ್ಥಾಯ ನಿಕ್ಷಿಪ್ತಾಂ ನ್ಯಾಸಂ ಧಾತ್ರಾ ಮಹಾತ್ಮನಾ ॥೩೫॥**

**ಯಯಾ ದೌಹಿತ್ರಜಾಲ್ಲೋಕಾನಾಶಂಸೇ ಪಿತೃಭಿಃ ಸಹ ।**
**ಸ್ವಯಮುತ್ಪಾದ್ಯ ತಾಂ ಬಾಲಾಂ ಕಥಮುತ್ಸ್ರಷ್ಟುಮುತ್ಸಹೇ ॥೩೬॥**

ಸೃಷ್ಟಿಕರ್ತನು ಇವಳನ್ನು ನ್ಯಾಸರೂಪವಾಗಿಟ್ಟು ನನ್ನ ಮಗಳಾಗಿ ಹುಟ್ಟಿಸಿರುವುದರ ಕಾರಣವಾದರೂ ಏನು? ಸತ್ಕುಲಪ್ರಸೂತನಾದ ವರನಿಗೆ ಕೊಟ್ಟು ಮದುವೆಮಾಡಿ, ಇವಳಲ್ಲಿ ಹುಟ್ಟುವ ಮಗನಿಂದ (ದೌಹಿತ್ರನಿಂದ) ಲಭಿಸುವ ಉತ್ತಮಲೋಕಗಳನ್ನು ನಾನೂ ಮತ್ತು ನನ್ನ ಪಿತೃಗಳೂ ಪಡೆಯಲೆಂದೇ ಅಲ್ಲವೇ? ನಾನೇ ಇವಳಿಗೆ ಜನ್ಮವನ್ನಿತ್ತು ಈಗ ಹೇಗೆತಾನೇ ಇವಳನ್ನು ಪರಿತ್ಯಜಿಸಲಿ?

**ಮನ್ಯನ್ತೇ ಕೇಚಿದಧಿಕಂ ಸ್ನೇಹಂ ಪುತ್ರೇ ಪಿತುರ್ನರಾಃ ।**
**ಕನ್ಯಾಯಾಂ ಕೇಚಿದಪರೇ ಮಮ ತುಲ್ಯಾವುಭೌ ಸ್ಮೃತೌ ॥೩೭॥**

ತಂದೆಗೆ ಮಗನ ಮೇಲೆ ಹೆಚ್ಚು ಪ್ರೇಮವಿರುವುದೆಂದು ಕೆಲವರು, ಮಗಳ ಮೇಲೆ ಹೆಚ್ಚು ಪ್ರೇಮವಿರುವುದೆಂದು ಕೆಲವರು ಹೇಳುತ್ತಾರೆ. ಆದರೆ ನನಗೆ ಇವರಿಬ್ಬರ ಮೇಲೂ ಪ್ರೇಮವು ಸಮಾನವಾಗಿಯೇ ಇದೆ. ಆದುದರಿಂದ ಸತ್ಪುತ್ರರನ್ನು ಪಡೆದು, ನನ್ನ ವಂಶದವರಿಗೆ ಸದ್ಗತಿಯನ್ನು ಕೊಡುವ

ಬಾಲೆಯಾದ ನನ್ನೀ ಮಗಳನ್ನು ಖಂಡಿತವಾಗಿಯೂ ಬಲಿಗೊಡಲಾರೆನು. ನಾನೇ ಬಲಿಯಾಗಲೇ? ಆಗಲಾದರೂ ನನಗೆ ಪರಲೋಕದಲ್ಲಿ ಶಾಂತಿಯೆಲ್ಲಿಯದು? ನನ್ನನ್ನಗಲಿದ ಇವರಿಗೆ ಮುಂದೆ ತಮ್ಮ ಜೀವನವನ್ನು ನಡೆಸಲು ಹೇಗೆತಾನೇ ಸಾಧ್ಯವಾಗುವುದು? ಒಟ್ಟಿನಲ್ಲಿ ಈ ಮೂವರಲ್ಲಿ ಯಾರೊಬ್ಬರನ್ನು ಬಲಿಗೊಡುವುದೂ ಕ್ರೂರವೂ ಮತ್ತು ನಿಂದ್ಯವೂ ಆಗುವುದು. ಇವರನ್ನು ಬಿಟ್ಟು ನಾನೇ ಹೋಗಿಬಿಟ್ಟರೂ ನನ್ನನ್ನಗಲಿದ ಇವರು ಮುಂದೆ ಜೀವಿಕೆಗೆ ಅವಕಾಶವಿಲ್ಲದೇ ವಿನಾಶಹೊಂದುವುದಂತೂ ನಿಶ್ಚಯ. ಅಯ್ಯೋ! ಇಂದು ನನಗೊದಗಿರುವ ಕಷ್ಟವು ನಿಶ್ಚಯವಾಗಿಯೂ ದುಸ್ಸಹವಾಗಿದೆ. ಹಾಗೂ ಇದರಿಂದ ಪಾರಾಗುವ ಬಗೆಯೂ ನನಗೆ ತೋರದಾಗಿದೆ. ಯಾವ ಮಾರ್ಗವನ್ನು ಅನುಸರಿಸಿ ಕಾರ್ಯಮಾಡಲಿ? ಇವರೆಲ್ಲರೊಡನೆಯೇ ನಾನೂ ಪ್ರಾಣತ್ಯಾಗಮಾಡಬೇಕು. ಅದೊಂದೇ ನನಗೆ ಈಗ ಉಳಿದಿರುವ ಮಾರ್ಗ. ಇವರಲ್ಲಿ ಯಾರೊಬ್ಬರನ್ನಾದರೂ ಪರಿತ್ಯಾಗಮಾಡಿ ನಾನು ಉಳಿದುಕೊಳ್ಳುವುದಂತೂ ಖಂಡಿತವಾಗಿಯೂ ಉಚಿತವಲ್ಲ. ಹಾಗೆ ಮಾಡಲು ನನಗೆ ಸಾಧ್ಯವಾಗುವುದೂ ಇಲ್ಲ."

೧೫೭ನೆಯ ಅಧ್ಯಾಯವು ಮುಗಿಯಿತು.

೧೫೮ನೆಯ ಅಧ್ಯಾಯ ಬಕವಧಪರ್ವ (ಮುಂದುವರಿದಿದೆ.)

## ಪ್ರಾಣತ್ಯಾಗಮಾಡಲು ಬ್ರಾಹ್ಮಣಿಯ ಅನುರೋಧ

ಜನಮೇಜಯ! ಬ್ರಾಹ್ಮಣನು ಈ ಪ್ರಕಾರವಾದ ನಿರ್ಧಾರಕ್ಕೆ ಬಂದು ಮಾತನಾಡದೇ ಸುಮ್ಮನೆ ಕುಳಿತನು. ಪತಿವ್ರತಾಶಿರೋಮಣಿಯಾದ ಅವನ ಮಡದಿಯು ಪತಿಯನ್ನು ಸಂತೈಸುತ್ತಾ ಹೇಳಿದಳು :

**ನ ಸಂತಾಪಸ್ತ್ವಯಾ ಕಾರ್ಯಃ ಪ್ರಾಕೃತೇನೇವ ಕರ್ಹಿಚಿತ್ ।**
**ನ ಹಿ ಸನ್ತಾಪಕಾಲೋಽಯಂ ವೈದ್ಯಸ್ಯ ತವ ವಿದ್ಯತೇ ॥೧॥**

"ಪತಿದೇವನೇ! ಪಂಡಿತೋತ್ತಮನಾದ ನೀನು ಸಾಧಾರಣಮನುಷ್ಯರಂತೆ ಹೀಗೆಲ್ಲಾ ದುಃಖಿಸಬಾರದು. ಅದೂ ಅಲ್ಲದೇ ಇದು ದುಃಖಿಸುತ್ತಾ ಕುಳಿತುಕೊಳ್ಳುವ ಕಾಲವೂ ಅಲ್ಲ. ನೀನು ತಿಳಿದವನಲ್ಲವೇ?

**ಅವಶ್ಯಂ ನಿಧನಂ ಸರ್ವೈರ್ಗನ್ತವ್ಯಮಿಹ ಮಾನವೈಃ ।**
**ಅವಶ್ಯಮ್ಭಾವಿನ್ಯರ್ಥೇ ವೈ ಸಂತಾಪೋ ನೇಹ ಮಾನವೈಃ ॥೨॥**

ಹುಟ್ಟಿದ ಪ್ರಾಣಿಗಳೆಲ್ಲವೂ ಒಂದಲ್ಲ ಒಂದು ದಿನ ಸತ್ತುಹೋಗಲೇ ಬೇಕು. ಈ ವಿಷಯವು ನಿನಗೆ ತಿಳಿಯದೇ ಇಲ್ಲ. ಆಗಲೇಬೇಕಾಗಿರುವ ಕಾರ್ಯದ ವಿಷಯದಲ್ಲಿ ಖಂಡಿತವಾಗಿಯೂ ದುಃಖಿಸಬಾರದು.

**ಭಾರ್ಯಾ ಪುತ್ರೋಽಥ ದುಹಿತಾ ಸರ್ವಮಾತ್ಮಾರ್ಥಮಿಷ್ಯತೇ ।**
**ವ್ಯಥಾಂ ಜಹಿ ಸುಬುದ್ಧ್ಯಾ ತ್ವಂ ಸ್ವಯಂ ಯಾಸ್ಯಾಮಿ ತತ್ರ ಚ ॥೩॥**

**ಏತದ್ಧಿ ಪರಮಂ ನಾರ್ಯಾಃ ಕಾರ್ಯಂ ಲೋಕೇ ಸನಾತನಮ್ ।**
**ಪ್ರಾಣಾನಪಿ ಪರಿತ್ಯಜ್ಯ ಯದ್ಭರ್ತೃಹಿತಮಾಚರೇತ್ ॥೪॥**

ಭಾರ್ಯಾ-ಸುತ-ಪುತ್ರಿಯರನ್ನು ಪಡೆಯುವುದು ಸ್ವಹಿತಕ್ಕಾಗಿಯೇ ಅಲ್ಲವೇ? ಒಳ್ಳೆಯ ಬುದ್ಧಿಯಿಂದ ವಿವೇಚಿಸಿ ನಿನ್ನ ದುಃಖವನ್ನು ದೂರ ಮಾಡು. ನಾನೇ ಸ್ವಯಂ ಅಲ್ಲಿಗೆ ಹೋಗುತ್ತೇನೆ. ಇದು ಧರ್ಮವಿಹಿತವೂ ಮತ್ತು ಸ್ತ್ರೀಯರ ಮುಖ್ಯಕರ್ತವ್ಯವೂ ಆಗಿದೆ. ತನ್ನ ಪ್ರಾಣಗಳನ್ನಾದರೂ ತೊರೆದು ಪತಿಗೆ ಹಿತವನ್ನುಂಟುಮಾಡುವುದೇ ನಿಜಸತಿಯ ಶ್ರೇಷ್ಠಕರ್ತವ್ಯ ಮತ್ತು ಇದೇ ಸನಾತನಧರ್ಮ.

**ತಚ್ಚ ತತ್ರ ಕೃತಂ ಕರ್ಮ ತವಾಪೀದಂ ಸುಖಾವಹಮ್ ।**
**ಭವತ್ಯಮುತ್ರ ಚಾಕ್ಷಯ್ಯಂ ಲೋಕೇಽಸ್ಮಿಂಶ್ಚ ಯಶಸ್ಕರಮ್ ॥೫॥**

ನಾನು ಮಾಡಲು ನಿಶ್ಚಯಿಸಿರುವ ಈ ಕಾರ್ಯವು ನಿನಗೆ ಸುಖವನ್ನುಂಟುಮಾಡುವುದು ಮಾತ್ರವಲ್ಲದೇ–ನನಗೂ ಸಹ ಈ ಕಾರ್ಯದಿಂದ ಪರಲೋಕದಲ್ಲಿ ಸದ್ಗತಿಯೂ, ಈ ಲೋಕದಲ್ಲಿ ಶಾಶ್ವತವಾದ ಕೀರ್ತಿಯೂ ಲಭಿಸುವುದು.

ಪತಿದೇವ! ನಾನು ಮುಂದೆ ಹೇಳಲಿರುವುದು ಎಲ್ಲಕ್ಕಿಂತಲೂ ಮಹತ್ತ್ವದ ಧರ್ಮವಾಗಿದೆ. ನಾನು ಹೇಳಲಿರುವ ಧರ್ಮದ ಆಚರಣೆಯಿಂದ ನಿನಗೆ ಅರ್ಥ-ಧರ್ಮಗಳೆರಡೂ ಲಭ್ಯವಾಗುತ್ತವೆ. ಇದನ್ನು ನೀನೇ ಯೋಚಿಸಿ ನೋಡು.

**ಯದರ್ಥಮಿಷ್ಯತೇ ಭಾರ್ಯಾ ಪ್ರಾಪ್ತಃ ಸೋಽರ್ಥಸ್ತ್ವಯಾ ಮಯಿ ।**
**ಕನ್ಯಾ ಚೈಕಾ ಕುಮಾರಶ್ಚ ಕೃತಾಹಮನೃಣಾ ತ್ವಯಾ ॥೭॥**

ಲೋಕದಲ್ಲಿ ಮದುವೆಯಾಗುವುದರ ಮುಖ್ಯಪ್ರಯೋಜನವನ್ನು ನೀನು ಈಗಾಗಲೇ ನನ್ನಿಂದ ಪಡೆದುದಾಗಿದೆಯಲ್ಲವೇ? ಮಕ್ಕಳ ಪ್ರಾಪ್ತಿಯೇ ಮದುವೆಯ ಮುಖ್ಯಪ್ರಯೋಜನ. ನಮ್ಮ ಕುಲಕ್ಕೆ ದೀಪಪ್ರಾಯನಾಗಿರುವ ಒಂದು ಗಂಡುಮಗುವನ್ನೂ, ದೌಹಿತ್ರನನ್ನು ಪಡೆಯಲು ಒಂದು ಹೆಣ್ಣು ಮಗುವನ್ನೂ ಪಡೆದಿರುತ್ತೇನೆ. ಆದುದರಿಂದ ನನ್ನಿಂದಾಗಬೇಕಾದ ಕಾರ್ಯವು ಮುಗಿದುಹೋಗಿದೆ. ನನ್ನ ಋಣವನ್ನು ತೀರಿಸಿಬಿಟ್ಟಿದ್ದೇನೆ. ನಾನು ಹೋದರೂ ಮಕ್ಕಳನ್ನು ಸಾಕುವ ಸಾಮರ್ಥ್ಯವು ನಿನಗಿರುವುದು. ನಿನ್ನನ್ನಗಲಿದ ಮೇಲೆ ನನ್ನೊಬ್ಬಳಿಂದ ಈ ಮಕ್ಕಳನ್ನು ಸಾಕಲು ಸಾಧ್ಯವೇ ಇಲ್ಲ. ಸರ್ವಪ್ರಾಣಧನೇಶ್ವರನೇ! ನೀನು ನಮ್ಮನ್ನಗಲಿದರೆ ಈ ಮಕ್ಕಳು ಹೇಗೆ ಬದುಕುವುವು? ನಾನು ಹೇಗೆ ಇವರನ್ನು ಭರಿಸಿ ಪೋಷಿಸುವೆನು?

**ಕಥಂ ಹಿ ವಿಧವಾನಾಥಾ ಬಾಲಪುತ್ರಾ ವಿನಾ ತ್ವಯಾ ।**
**ಮಿಥುನಂ ಜೀವಯಿಷ್ಯಾಮಿ ಸ್ಥಿತಾ ಸಾಧುಗತೇ ಪಥಿ ॥೧೦॥**

ವಿಧವೆಯಾಗಿ, ಅನಾಥಳಾಗಿ ಇಬ್ಬರು ಮಕ್ಕಳನ್ನೂ ಕಟ್ಟಿಕೊಂಡು ನಾನು ಮರ್ಯಾದೆಯಿಂದ ಜೀವಿಸಲು ಮತ್ತು ಈ ಮಕ್ಕಳನ್ನು ಕಾಪಾಡಿಕೊಳ್ಳಲು ಹೇಗೆತಾನೇ ಸಾಧ್ಯವಾಗುವುದು?

**ಅಹಂ ಕೃತಾವಲಿಪ್ತೈಶ್ಚ ಪ್ರಾರ್ಥ್ಯಮಾನಾಮಿಮಾಂ ಸುತಾಮ್ ।**
**ಅಯುಕ್ತೈಸ್ತವ ಸಮ್ಬನ್ಧೇ ಕಥಂ ಶಕ್ಷ್ಯಾಮಿ ರಕ್ಷಿತುಮ್ ॥೧೧॥**

ಪ್ರಾಣೇಶ್ವರ! ಈ ನಿನ್ನ ಮಗಳು ದುಷ್ಟರಿಂದಲೂ, ಅವಿವೇಕಿಗಳಿಂದಲೂ ಪರಿಣಯಕ್ಕಾಗಿ ಪ್ರಾರ್ಥಿಸಲ್ಪಟ್ಟರೆ–ಇವಳನ್ನು ರಕ್ಷಿಸಿಕೊಳ್ಳಲು ನಾನು ಹೇಗೆ ಸಮರ್ಥಳಾದೇನು?

**ಉತ್ಸೃಷ್ಟಮಾಮಿಷಂ ಭೂಮೌ ಪ್ರಾರ್ಥಯನ್ತಿ ಯಥಾ ಖಗಾಃ ।**
**ಪ್ರಾರ್ಥಯನ್ತಿ ಜನಾಃ ಸರ್ವೇ ಪತಿಹೀನಾಂ ತಥಾ ಸ್ತ್ರಿಯಮ್ ॥೧೨॥**

**ಸಾಹಂ ವಿಚಾಲ್ಯಮಾನಾ ವೈ ಪ್ರಾರ್ಥ್ಯಮಾನಾ ದುರಾತ್ಮಭಿಃ ।**
**ಸ್ಥಾತುಂ ಪಥಿ ನ ಶಕ್ಷ್ಯಾಮಿ ಸಜ್ಜನೇಷ್ಟೇ ದ್ವಿಜೋತ್ತಮ ॥೧೩॥**

ಬೀದಿಯಲ್ಲಿ ಎಸೆಯಲ್ಪಟ್ಟ ಮಾಂಸದ ತುಂಡನ್ನು ಪಕ್ಷಿಗಳು ಕಿತ್ತು ತಿನ್ನುವಂತೆ-ಪತಿಹೀನೆಯಾದ ಹೆಂಗಸನ್ನು ಬಹುಜನರು ಅಪೇಕ್ಷಿಸುವರು. ಬ್ರಾಹ್ಮಣೋತ್ತಮನೇ! ದುಷ್ಟರಿಂದ ಅಪೇಕ್ಷಿಸಲ್ಪಡುವ ನಾನು ಪತಿಯನ್ನಗಲಿದ ದಾರುಣಕಷ್ಟಗಳನ್ನು ಸಹಿಸದವಳಾಗಿ, ಮರ್ಯಾದೆಯಿಂದ ವಂಚಿತಳಾಗಿ ಸಜ್ಜನರು ಅನುಸರಿಸಿರುವ ಸನ್ಮಾರ್ಗದಲ್ಲಿರಲು ಅಸಮರ್ಥಳಾಗುವೆನು.

ನಮ್ಮ ಕುಲದಲ್ಲಿ ಹುಟ್ಟಿರುವ ಒಬ್ಬಳೇ ಮಗಳನ್ನು ಅಬಲೆಯಾದ ನಾನು ಪಿತೃ-ಪಿತಾಮಹರು ಅನುಸರಿಸಿರುವ ಸದಾಚಾರಪದ್ಧತಿಯಲ್ಲಿ ಹೇಗೆ ತಾನೇ ವಿವಾಹಮಾಡಿಕೊಡಬಲ್ಲೆನು? ನಮ್ಮ ವಂಶಕ್ಕೆ ದೀಪಪ್ರಾಯನಾಗಿರುವ ಈ ಶಿಶುವನ್ನು ಸಕಲಗುಣಸಂಪನ್ನನನ್ನಾಗಿಯೂ ಮತ್ತು ಸಕಲವಿದ್ಯಾ ಪಾರಂಗತನನ್ನಾಗಿಯೂ ಮಾಡಲು ನಿರ್ಧನಳಾದ ಪತಿಹೀನೆಯಾದ ನನಗೆ ಸಾಧ್ಯವಾಗುವುದೇ?

**ಇಮಾಮಪಿ ಚ ತೇ ಬಾಲಾಮನಾಥಾಂ ಪರಿಭೂಯ ಮಾಮ್ ।**
**ಅನರ್ಹಾಃ ಪ್ರಾರ್ಥಯಿಷ್ಯನ್ತಿ ಶೂದ್ರಾ ವೇದಶ್ರುತಿಂ ಯಥಾ ॥೧೬॥**

**ತಾಂ ಚೇದಹಂ ನ ದಿತ್ಸೇಯಂ ತದ್ಗುಣೈರುಪಬೃಂಹಿತಾಮ್ ।**
**ಪ್ರಮಥ್ಯೈನಾಂ ಹರೇಯುಸ್ತೇ ಹವಿರ್ಧ್ವಾಂಕ್ಷಾ ಇವಾಧ್ವರಾತ್ ॥೧೭॥**

ನಾನು ಅನಾಥೆಯೆಂದು ತಿಳಿದೊಡನೆಯೇ–ಅನಧಿಕಾರಿಗಳಾದ ಸ್ತ್ರೀ-ಶೂದ್ರಾದಿಗಳು ವೇದವನ್ನು ಕಲಿಯಲು ಉತ್ಸುಕರಾಗಿ ಬರುವಂತೆ–ಅಯೋಗ್ಯರಾದವರು ಈ ನಿನ್ನ ಮಗಳ ಪಾಣಿಗ್ರಹಣಕ್ಕಾಗಿ ಮುಂದೆ ಬರುತ್ತಾರೆ. ನಾನು ಒಂದು ವೇಳೆ ನಿನ್ನಂತೆಯೇ ಸಕಲಗುಣಸಂಪನ್ನೆಯಾಗಿರುವ ಇವಳನ್ನು ಅಂತಹವರಿಗೆ ಮದುವೆಮಾಡಿಕೊಡಲು ಸಮ್ಮತಿಸದಿದ್ದರೆ ಅವರು–ಯಜ್ಞದಲ್ಲಿ ಹೋಮಕ್ಕಾಗಿ ಇಟ್ಟಿರುವ ಹವಿಸ್ಸನ್ನು ಕಾಗೆಗಳು ಕಚ್ಚಿಕೊಂಡು ಹೋಗುವಂತೆ – ಬಲಾತ್ಕಾರವಾಗಿಯೇ ಕರೆದೊಯ್ಯಲೂಬಹುದು.

**ಸಮ್ಪ್ರೇಕ್ಷಮಾಣಾ ಪುತ್ರಂ ತೇ ನಾನುರೂಪಮಿವಾತ್ಮನಃ ।**
**ಅನರ್ಹವಶಮಾಪನ್ನಾಮಿಮಾಂ ಚಾಪಿ ಸುತಾಂ ತವ ॥೧೮॥**

**ಅವಜ್ಞಾತಾ ಚ ಲೋಕೇಷು ತಥಾತ್ಮಾನಮಜಾನತೀ ।**
**ಅವಲಿಪ್ತೈರ್ನರೈರ್ಬ್ರಹ್ಮನ್ಮರಿಷ್ಯಾಮಿ ನ ಸಂಶಯಃ ॥೧೯॥**

**ತೌ ಚ ಹೀನೌ ಮಯಾ ಬಾಲೌ ತ್ವಯಾ ಚೈವ ತಥಾತ್ಮಜೌ ।**
**ವಿನಶ್ಯೇತಾಂ ನ ಸಂದೇಹೋ ಮತ್ಸ್ಯಾವಿವ ಜಲಕ್ಷಯೇ ॥೨೦॥**

ನಿನ್ನಂತೆ ಸಕಲಗುಣಸಂಪನ್ನನಾಗಿ ವೇದ-ವೇದಾಂಗಪಾರಂಗತನಾಗಲು ಅಸಮರ್ಥನಾಗುವ ಮಗನನ್ನೂ, ಅಯೋಗ್ಯರ ಕೈಸೇರಿದ ಮಗಳನ್ನೂ ನೋಡಿಕೊಂಡಿರಲು ನಿಶ್ಚಯವಾಗಿಯೂ ನನಗೆ ಸಾಧ್ಯವಾಗಲಾರದು. ಗರ್ವಿತರಾದ ಅಯೋಗ್ಯರಿಂದ ಅಪಮಾನಿತಳಾಗಿ ಮುಂದೇನು ಮಾಡಬೇಕೆಂಬ ಅರಿವಿಲ್ಲದವಳಾಗಿ ನಾನು ಪ್ರಾಣಬಿಡುವುದೂ ನಿಶ್ಚಯ. ಈ ಮಕ್ಕಳಾದರೂ ತಂದೆ-ತಾಯಿಗಳ ಅವಸಾನಾನಂತರ–ನೀರೊಣಗಿದ ಕೆರೆಯಲ್ಲಿನ ಮೀನುಗಳಂತೆ–ರಕ್ಷಕರಿಲ್ಲದೇ ಸತ್ತುಹೋಗುವರು.

**ತ್ರಿತಯಂ ಸರ್ವಥಾಪ್ಯೇವಂ ವಿನಶಿಷ್ಯತ್ಯಸಂಶಯಮ್ ।**
**ತ್ವಯಾ ವಿಹೀನಂ ತಸ್ಮಾತ್ತ್ವಂ ಮಾಂ ಪರಿತ್ಯಕ್ತುಮರ್ಹಸಿ ॥೨೧॥**

ಪತಿದೇವ! ಆದುದರಿಂದ ನೀನೊಬ್ಬನು ನಮ್ಮನ್ನಗಲಿದರೆ ನಾವು ಮೂವರೂ ಖಂಡಿತವಾಗಿಯೂ ವಿನಾಶಹೊಂದುವೆವು. ಆದುದರಿಂದ ನೀನು ನಮ್ಮನ್ನು ಪರಿತ್ಯಜಿಸಿ ಹೋಗುವುದು ಖಂಡಿತವಾಗಿಯೂ ಸಾಧುವಲ್ಲ.

**ವ್ಯುಷ್ಟಿರೇಷಾ ಪರಾ ಸ್ತ್ರೀಣಾಂ ಪೂರ್ವಂ ಭರ್ತುಃ ಪರಾಂ ಗತಿಮ್ ।**
**ಗನ್ತುಂ ಬ್ರಹ್ಮನ್ಸಪುತ್ರಾಣಾಮಿತಿ ಧರ್ಮವಿದೋ ವಿದುಃ ॥೨೨॥**

ಈ ಕಾರಣಗಳಿಂದ ನೀನು ನನ್ನನ್ನು ತ್ಯಾಗಮಾಡುವುದೇ ಯುಕ್ತವಾಗಿ ಕಾಣುತ್ತದೆ ಮತ್ತು ಇದು ಧರ್ಮಸಮ್ಮತವೂ ಆಗಿದೆ. ಪುತ್ರವತಿಯಾದ ಹೆಂಗಸು ಗಂಡನಿಗಿಂತಲೂ ಮೊದಲು ಸಾಯುವುದು ಶ್ರೇಯಸ್ಕರವೆಂದೂ ಪ್ರಶಂಸನೀಯವೆಂದೂ ಧರ್ಮಕೋವಿದರು ಹೇಳುತ್ತಾರೆ. ನಾನು ನಿನಗಾಗಿ ಪುತ್ರೀ-ಸುತ-ಬಾಂಧವರೆಲ್ಲರನ್ನೂ, ಮೇಲಾಗಿ ನನ್ನ ಪ್ರಾಣಗಳನ್ನೂ ಪರಿತ್ಯಜಿಸಲು ಸಿದ್ಧಳಿದ್ದೇನೆ.

**ಯಜ್ಞೈಸ್ತಪೋಭಿರ್ನಿಯಮೈರ್ದಾನೈಶ್ಚ ವಿವಿಧೈಸ್ತಥಾ ।**
**ವಿಶಿಷ್ಯತೇ ಸ್ತ್ರಿಯಾ ಭರ್ತುರ್ನಿತ್ಯಂ ಪ್ರಿಯಹಿತೇ ಸ್ಥಿತಿಃ ॥೨೩॥**

ಪತಿಗೆ ಹಿತವಾದ ಮತ್ತು ಪ್ರಿಯವಾದ ಕಾರ್ಯವನ್ನು ನೆರವೇರಿಸುವುದರಲ್ಲಿ ತೊಡಗುವುದೇ ಸ್ತ್ರೀಯರ ಅತಿಮುಖ್ಯವಾದ ಕರ್ತವ್ಯ. ಯಜ್ಞ, ತಪಸ್ಸು, ನಿಯಮ, ದಾನ–ಮುಂತಾದ ಮಹಾಪುಣ್ಯಕಾರ್ಯಗಳೂ ಪತಿಸೇವೆಗೆ ಎರಡನೆಯದಾಗುತ್ತವೆ. ಆದುದರಿಂದ ನಾನು ಮಾಡಲು ಇಚ್ಛಿಸಿರುವ ಈ ಕಾರ್ಯವು ( ಪ್ರಾಣತ್ಯಾಗವು ) ಧರ್ಮವಿಹಿತವಾಗಿರುವುದು ಮಾತ್ರವಲ್ಲದೇ–ನಿನಗೂ ಮತ್ತು ನಮ್ಮ ವಂಶಕ್ಕೂ ಶ್ರೇಯಸ್ಕರವಾಗಿಯೂ ಇರುತ್ತದೆ.

**ಇಷ್ಟಾನಿ ಚಾಪ್ಯಪತ್ಯಾನಿ ದ್ರವ್ಯಾಣಿ ಸುಹೃದಃ ಪ್ರಿಯಾಃ ।**
**ಆಪದ್ಧರ್ಮಪ್ರಮೋಕ್ಷಾಯ ಭಾರ್ಯಾ ಚಾಪಿ ಸತಾಂ ಮತಮ್ ॥೨೬॥**

ಸತೀ-ಸುತ-ಬಾಂಧವರು, ಪ್ರಿಯಮಿತ್ರರು, ದ್ರವ್ಯ–ಇವರೆಲ್ಲರೂ ಆಪತ್ಕಾಲದಲ್ಲಿ ಧರ್ಮಾನುಸಾರವಾಗಿ ಆಪತ್ತಿನಿಂದ ಬಿಡುಗಡೆಯನ್ನು ಹೊಂದಲು ಇರತಕ್ಕವರೆಂದು ಧರ್ಮಜ್ಞರು ಹೇಳುತ್ತಾರೆ.

**ಆಪದರ್ಥೇ ಧನಂ ರಕ್ಷೇದ್ದಾರಾನ್ರಕ್ಷೇದ್ಧನೈರಪಿ ।**
**ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ॥೨೭॥**

ಆಪತ್ಕಾಲದಲ್ಲಿ ರಕ್ಷಣೆಗಾಗಿ ಧನವನ್ನು ಕೂಡಿಡಬೇಕು. ಅದೇ ಧನದಿಂದ ಹೆಂಡತಿಯನ್ನು ಕಾಪಾಡಬೇಕು. ಅಥವಾ ಧನಕ್ಕಿಂತಲೂ ಹೆಚ್ಚಾಗಿ ಹೆಂಡತಿಯನ್ನು ಕಾಪಾಡಬೇಕು. ಆದರೆ ತನಗೆ ಹೆಚ್ಚು ಆಪತ್ತು ಒದಗಿದಾಗ ಧನವನ್ನಾದರೂ–ಹೆಂಡತಿಯನ್ನಾದರೂ ತ್ಯಾಗಮಾಡಿ ತನ್ನನ್ನು ರಕ್ಷಿಸಿಕೊಳ್ಳಬೇಕು.

**ದೃಷ್ಟಾದೃಷ್ಟಫಲಾರ್ಥಂ ಹಿ ಭಾರ್ಯಾ ಪುತ್ರೋ ಧನಂ ಗೃಹಮ್ ।**
**ಸರ್ವಮೇತದ್ವಿಧಾತವ್ಯಂ ಬುಧಾನಾಮೇಷ ನಿಶ್ಚಯಃ ॥೨೮॥**

ಹೆಂಡತಿ, ಮಕ್ಕಳು, ಐಶ್ವರ್ಯ, ಮನೆ–ಇವುಗಳನ್ನು ಮಾನವನು ಪಡೆಯುವುದು ತನ್ನ ದೃಷ್ಟಾದೃಷ್ಟಫಲಪ್ರಾಪ್ತಿಗಾಗಿ ( ಐಹಿಕಾಮುಷ್ಮಿಕ ಫಲಗಳ ಪ್ರಾಪ್ತಿಗಾಗಿ ) ಎಂದು ವಿದ್ವಾಂಸರು ನಿಶ್ಚಯಿಸಿರುತ್ತಾರೆ.

**ಏಕತೋ ವಾ ಕುಲಂ ಕೃತ್ಸ್ನಮಾತ್ಮಾ ವಾ ಕುಲವರ್ಧನಃ ।**
**ನ ಸಮಂ ಸರ್ವಮೇವೇತಿ ಬುಧಾನಾಮೇಷ ನಿಶ್ಚಯಃ ॥೨೯॥**

ತನಗೆ ಸೇರಿದ ಬಂಧುಜನರೆಲ್ಲರನ್ನೂ ಒಟ್ಟಾಗಿ ಸೇರಿಸಿ ತೂಗಿದರೂ ಕುಲಸಂವರ್ಧನಕ್ಕೆ ಕಾರಣಭೂತವಾದ ತನ್ನ ಶರೀರಕ್ಕೆ ಸಮನಾಗಲಾರ ದೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಪತಿದೇವ! ಈಗೊದಗಿರುವ ಆಪತ್ತಿನ ನಿವಾರಣೆಗೆ ನನ್ನನ್ನು ಉಪಯೋಗಿಸಿಕೊಳ್ಳುವುದೇ ಸೂಕ್ತವಾಗಿದೆ. ಹೀಗೆ ಮಾಡಿ ನಿನ್ನ ಆತ್ಮವನ್ನು ನೀನು ಸಂರಕ್ಷಿಸುವವನಾಗು. ಈ ಮಕ್ಕಳನ್ನೂ ಸಂರಕ್ಷಿಸು. ನನಗಲ್ಲಿಗೆ ಹೋಗಲು ಅನುಮತಿಯನ್ನು ಕೊಡು. ಆರ್ಯನೇ! ಮೇಲಾಗಿ ನಾನೇ ಅಲ್ಲಿಗೆ ಹೋದರೆ ರಾಕ್ಷಸನು ನನ್ನನ್ನು ತಿಂದುಬಿಡುವನೆಂದೂ ಹೇಳಲಾಗುವುದಿಲ್ಲ.

**ಅವಧ್ಯಾಂ ಸ್ತ್ರಿಯಮಿತ್ಯಾಹುರ್ಧರ್ಮಜ್ಞಾ ಧರ್ಮನಿಶ್ಚಯೇ ।**
**ಧರ್ಮಜ್ಞಾನ್ರಾಕ್ಷಸಾನಾಹುರ್ನ ಹನ್ಯಾತ್ಸ ಚ ಮಾಮಪಿ ॥೩೧॥**

**ನಿಸ್ಸಂಶಯಂ ವಧಃ ಪುಂಸಾಂ ಸ್ತ್ರೀಣಾಂ ಸಂಶಯಿತೋ ವಧಃ ।**
**ಅತೋ ಮಾಮೇವ ಧರ್ಮಜ್ಞ ಪ್ರಸ್ಥಾಪಯಿತುಮರ್ಹಸಿ ॥೩೨॥**

ಧರ್ಮವಿದರು ಸ್ತ್ರೀಹತ್ಯೆಯು ನಿಷಿದ್ಧವೆಂದು ಭಾವಿಸಿರುವರು. ರಾಕ್ಷಸ ರಲ್ಲಿಯೂ ಧರ್ಮಜ್ಞರು ಇರುತ್ತಾರೆ. ಆದುದರಿಂದ ಆ ರಾಕ್ಷಸನು ಗಂಡಸರನ್ನು ತಿನ್ನುವನೆಂಬುದು ನಿಶ್ಚಯವಾದರೂ–ಹೆಂಗಸಾದ ನನ್ನನ್ನು ತಿನ್ನದೆಯೇ ಇರಬಹುದು. ಈ ಕಾರಣದಿಂದಾದರೂ ನನ್ನನ್ನೇ ರಾಕ್ಷಸನ ಬಳಿಗೆ ಕಳುಹಿಸುವುದು ಸರ್ವಥಾ ಯುಕ್ತವಾಗಿದೆ.

ಪತಿದೇವ! ನಾನು ನಿನ್ನೊಡನಿದ್ದು ಸಂಪೂರ್ಣಸುಖವನ್ನೂ ಅನುಭವಿ ಸಿರುವೆನು. ನನಗೆ ಬೇಕಾದ ವಸ್ತುಗಳೆಲ್ಲವನ್ನೂ ಪಡೆದು ಸಂತುಷ್ಟಳಾಗಿರು ವೆನು. ನಿನ್ನ ಸೇವೆಮಾಡಿ ಧರ್ಮವನ್ನೂ ಗಳಿಸಿರುವೆನು. ಮೇಲಾಗಿ ಪುತ್ರವತಿಯೂ ಆಗಿರುವೆನು. ನನ್ನ ಜೀವಮಾನದಲ್ಲಿ ಇದಕ್ಕಿಂತಲೂ ಹೆಚ್ಚು ಸಾಧಿಸಬೇಕಾಗಿರುವುದೇನಿದೆ? ಆದುದರಿಂದ ಪ್ರಾಣಬಿಡಲು ನನಗೆ ವ್ಯಥೆಯಾಗುವುದಿಲ್ಲ. ಸಂತೋಷವಾಗಿಯೇ ಪ್ರಾಣಬಿಡುವೆನು. ಮಕ್ಕಳು ಇನ್ನೂ ಬಹಳ ಚಿಕ್ಕವರೆಂದೂ ವ್ಯಥೆಪಡಬೇಕಾಗಿಲ್ಲ. ಇಬ್ಬರೂ ಸಾಕಷ್ಟು ದೊಡ್ಡವರಾಗಿದ್ದಾರೆ. ಆದುದರಿಂದ ನಿನಗೆ ಒಳ್ಳೆಯದನ್ನು ಮಾಡುವು

ದೊಂದೇ ಇಂದಿನ ನನ್ನ ಮುಖ್ಯ ಕರ್ತವ್ಯವಾಗಿದೆ. ಇವೆಲ್ಲವನ್ನೂ ಯೋಚಿಸಿಯೇ ನಾನು ಈ ನಿರ್ಧಾರಕ್ಕೆ ಬಂದಿರುವೆನು. ಪತಿದೇವ! ನನ್ನನ್ನು ಕಳುಹಿಸಿದನಂತರ ನೀನು ಬೇರೊಬ್ಬಳನ್ನು ಮದುವೆಯಾಗಲೂಬಹುದು. ಅವಳೊಡನೆ ಯಥಾಪೂರ್ವವಾಗಿ ಪುನಃ ಶ್ರೌತ-ಸ್ಮಾರ್ತಕರ್ಮಾನುಷ್ಠಾನಗಳನ್ನೂ ಆಚರಿಸಬಹುದು.

**ನ ಚಾಪ್ಯಧರ್ಮಃ ಕಲ್ಯಾಣ ಬಹುಪತ್ನೀಕೃತಾಂ ನೃಣಾಮ್ ।**
**ಸ್ತ್ರೀಣಾಮಧರ್ಮಃ ಸುಮಹಾನ್ಭರ್ತುಃ ಪೂರ್ವಸ್ಯ ಲಙ್ಘನೇ ॥೩೬॥**

ಮಂಗಳಸ್ವರೂಪನೇ! ಹೀಗೆ ಮಾಡುವುದರಿಂದ ಪಾಪಲೇಶವೂ ಇಲ್ಲ. ಬಹುಪತ್ನೀತ್ವವು ಪುರುಷನಿಗೆ ಅಧರ್ಮವಾಗಲಾರದು. ಆದರೆ (ಪತಿಯಿದ್ದಾಗಲಾಗಲೀ ಅಥವಾ ಸತ್ತಮೇಲಾಗಲೀ) ಪೂರ್ವಪತಿಯನ್ನು ಉಲ್ಲಂಘಿಸುವುದು ಸ್ತ್ರೀಯರಿಗೆ ದೊಡ್ಡ ಅಧರ್ಮ. (ಹೇಯವಾದುದು ಮತ್ತು ನಿಂದ್ಯವಾದುದು.) ಇವೆಲ್ಲವನ್ನೂ ಪರ್ಯಾಲೋಚಿಸಿ, ಆತ್ಮನಾಶವು ನಿಂದ್ಯವೆಂಬುದನ್ನೂ ತಿಳಿದವನಾಗಿ, ನನ್ನನ್ನು ರಾಕ್ಷಸನಲ್ಲಿಗೆ ಕಳುಹಿಸಿ ನಿನ್ನನ್ನೂ, ಮಕ್ಕಳನ್ನೂ, ವಂಶವನ್ನೂ ರಕ್ಷಿಸು."

ಜನಮೇಜಯ! ಪತ್ನಿಯಾಡಿದ ಮಾತುಗಳನ್ನು ಕೇಳಿ ಬ್ರಾಹ್ಮಣನು ಅವಳನ್ನು ಬಾಚಿ ತಬ್ಬಿಕೊಂಡನು. ಯದ್ಯಪಿ ಬ್ರಾಹ್ಮಣೆಯು ಆತ್ಮಬಲಿಗೆ ಸಿದ್ಧಳಾಗಿದ್ದರೂ ಸಕಲಗುಣಸಂಪನ್ನೆಯಾದ ಭಾರ್ಯೆಯನ್ನು ಕಳುಹಿಸಿಬಿಡಲು ಬ್ರಾಹ್ಮಣನಿಗೆ ಸಾಧ್ಯವಾದೀತೇ? ಬಹುದುಃಖಿತನಾಗಿ ಭಾರ್ಯೆಯೊಡನೆ ಕಂಬನಿಗರೆದನು.

ನೂರೈವತ್ತೆಂಟನೆಯ ಅಧ್ಯಾಯವು ಮುಗಿಯಿತು.

೧೫೯ನೆಯ ಅಧ್ಯಾಯ ಬಕವಧಪರ್ವ (ಮುಂದುವರಿದಿದೆ.)

## ಬ್ರಾಹ್ಮಣಕನ್ಯೆಯ ತ್ಯಾಗಬುದ್ಧಿ: ವಿವೇಕವಾಣಿ : ಕುಂತಿಯ ಪ್ರವೇಶ

ವೈಶಂಪಾಯನರು ಹೇಳುತ್ತಾರೆ :

**ತಯೋರ್ದುಃಖಿತಯೋರ್ವಾಕ್ಯಮತಿಮಾತ್ರಂ ನಿಶಮ್ಯ ತು ।**
**ತತೋ ದುಃಖಪರೀತಾಙ್ಗೀ ಕನ್ಯಾ ತಾವಭ್ಯಭಾಷತ ॥೧॥**

ಪಾರಿಕ್ಷಿತ! ಅಲ್ಲಿಯೇ ಕುಳಿತಿದ್ದ ಹೆಣ್ಣುಮಗಳಿಗೆ ದುಃಖಿತರಾಗಿದ್ದ ತಾಯಿ-ತಂದೆಗಳಾಡಿದ ಮಾತುಗಳನ್ನು ಕೇಳಿ ಬಹಳ ದುಃಖವಾಯಿತು. ಅವರನ್ನು ಕುರಿತು ಕನ್ಯೆಯು ಹೇಳಿದಳು : "ಅಪ್ಪಾ! ಅಮ್ಮಾ! ನೀವೇಕಿಷ್ಟು ಅಳುತ್ತಿರುವಿರಿ? ನಿಮ್ಮ ಕಷ್ಟಗಳನ್ನು ಪರಿಹರಿಸುವವರು ಮತ್ತು ನಿಮಗೆ ಕಷ್ಟಕಾಲದಲ್ಲಿ ನೆರವಾಗುವವರು ಯಾರೂ ಇಲ್ಲವೇ ಇಲ್ಲವೆಂಬಂತೆ ಅಳುತ್ತಿರುವಿರಲ್ಲಾ? ನಾನು ಹೇಳುವುದನ್ನಾದರೂ ಕೇಳಿರಿ. ನಿಮ್ಮದುಃಖವನ್ನು ನಿಲ್ಲಿಸಿರಿ. ಅನಂತರ ನಿಮಗೆ ಸೂಕ್ತಕಂಡಂತೆ ವರ್ತಿಸಿರಿ.

**ಧರ್ಮತೋಽಹಂ ಪರಿತ್ಯಾಜ್ಯಾ ಯುವಯೋರ್ನಾತ್ರ ಸಂಶಯಃ ।**
**ತ್ಯಕ್ತವ್ಯಾಂ ಮಾಂ ಪರಿತ್ಯಜ್ಯ ತ್ರಾಹಿ ಸರ್ವಂ ಮಯೈಕಯಾ ॥೩॥**

ಎಂದಾದರೊಂದು ದಿನ ನನ್ನನ್ನು ಮನೆಯಿಂದ ಹೊರಕ್ಕೆ ಕಳುಹಿಸಲೇ ಬೇಕಾಗಿರುವುದು. ಇದು ನಿಮ್ಮ ಕರ್ತವ್ಯವೂ ಆಗಿರುತ್ತದೆ. ಇದರಲ್ಲಾವ ಸಂಶಯವೂ ಇರುವುದಿಲ್ಲ. ನನ್ನನ್ನು ಕಳುಹಿಸಬೇಕೆಂಬುದು ವಿಧಿನಿಯಮವೇ ಆಗಿರುವಾಗ–ಎಂದೋ ಕಳುಹಿಸಿಕೊಡುವುದಕ್ಕೆ ಬದಲಾಗಿ ಇಂದೇ ನನ್ನನ್ನು ರಾಕ್ಷಸನ ಬಳಿಗೆ ಕಳುಹಿಸಿಕೊಟ್ಟು ಈಗ ಒದಗಿರುವ ಕಷ್ಟದಿಂದ ಪಾರಾಗಕೂಡದೇಕೆ?

**ಇತ್ಯರ್ಥಮಿಷ್ಯತೇಽಪತ್ಯಂ ತಾರಯಿಷ್ಯತಿ ಮಾಮಿತಿ ।**
**ಅಸ್ಮಿನ್ನುಪಸ್ಥಿತೇ ಕಾಲೇ ತರಧ್ವಂ ಪ್ಲವವನ್ಮಯಾ ॥೪॥**

ಇಹಲೋಕದಲ್ಲಿ ರಕ್ಷಣೆಪಡೆಯಲು ಮತ್ತು ಪರಲೋಕದಲ್ಲಿ ಸದ್ಗತಿ ಯನ್ನು ಪಡೆಯಲು ಮಾನವರು ಸಂತಾನವನ್ನು ಅಪೇಕ್ಷಿಸುವರು. ಆದುದ ರಿಂದ ಈಗ ನಿಮಗೊದಗಿರುವ ಕಷ್ಟವೆಂಬ ಪ್ರವಾಹವನ್ನು, ನನ್ನನ್ನೇ ದೋಣಿಯ ರೂಪದಲ್ಲಿಟ್ಟುಕೊಂಡು ದಾಟಬಹುದಲ್ಲವೇ?

**ಇಹ ವಾ ತಾರಯೇದ್ದುರ್ಗಾದುತ ವಾ ಪ್ರೇತ್ಯ ಭಾರತ ।**
**ಸರ್ವಥಾ ತಾರಯೇತ್ಪುತ್ರಃ ಪುತ್ರ ಇತ್ಯುಚ್ಯತೇ ಬುಧೈಃ ॥೫॥**

ಮಕ್ಕಳು, ತಂದೆ-ತಾಯಿಗಳನ್ನು ಇಹದಲ್ಲಿ ಅನೇಕ ಕಷ್ಟಗಳಿಂದಲೂ ಪರದಲ್ಲಿ 'ಪುತ್' ಎಂಬ ನರಕದಿಂದಲೂ ಪಾರುಮಾಡುವುದರಿಂದಲೇ ಪುತ್ರರೆಂದು ಕರೆಯಲ್ಪಡುತ್ತಾರೆ.

**ಆಕಾಂಕ್ಷನ್ತೇ ಚ ದೌಹಿತ್ರಾನ್ಮಯಿ ನಿತ್ಯಂ ಪಿತಾಮಹಾಃ ।**
**ತತ್ಸ್ವಯಂ ವೈ ಪರಿತ್ರಾಸ್ಯೇ ರಕ್ಷನ್ತೀ ಜೀವಿತಂ ಪಿತುಃ ॥೬॥**

ನನ್ನಲ್ಲಿ ಮಗನು ಹುಟ್ಟಬೇಕೆಂಬುದು ನಮ್ಮ ಪೂರ್ವಜರ ಇಚ್ಛೆಯಾಗಿರುತ್ತದೆ. ನಾನು ಮಗನನ್ನು ಪಡೆದನಂತರ ಅವರು ಸದ್ಗತಿಯನ್ನು ಪಡೆಯುವರೆಂಬುದೂ ನಿಶ್ಚಯ. ಆದರೆ ನನಗೆ ಮಕ್ಕಳಾಗುವವರೆಗೂ ಕಾಯುತ್ತಾ ಕುಳಿತಿರುವುದಕ್ಕೆ ಬದಲಾಗಿ ಈಗ ನಮ್ಮ ತಂದೆಯಾದವನಿಗೆ ಒದಗಿರುವ ಕಷ್ಟವನ್ನು ಪರಿಹರಿಸಿದರೆ–ನಾನೇ ನಮ್ಮ ಪೂರ್ವಜರನ್ನು ರಕ್ಷಿಸಿದಂತಾಗುತ್ತದೆ.” ತಮ್ಮನ ಕಡೆ ಕೈತೋರಿಸುತ್ತಾ “ಇವನಿನ್ನೂ ಬಹಳ ಚಿಕ್ಕವನಪ್ಪಾ. ನೀನೇನಾದರೂ ಹೋಗಿಬಿಟ್ಟೆಯೆಂದರೆ ಇವನು ಖಂಡಿತವಾಗಿಯೂ ಬದುಕಲಾರನು. ನೀವಿಬ್ಬರೂ ಹೋದನಂತರ ಪಿತೃಗಳಿಗೆ ಸಲ್ಲಬೇಕಾದ ಕರ್ಮಗಳೆಲ್ಲವೂ ನಿಂತುಹೋಗುವುವು. ಅದರಿಂದಾಗಿ ಅವರಿಗೆ ಸದ್ಗತಿಯು ಸಿಕ್ಕದೇ ಪೇಚಾಡುವಂತಾಗುತ್ತದೆ. ಅವರಿಗೆ ಅನ್ಯಾಯಮಾಡಿದಂತಾಗುವುದಿಲ್ಲವೇನಪ್ಪಾ?

ತಂದೆಯಿಂದಲೂ, ತಾಯಿಯಿಂದಲೂ ಮತ್ತು ಈ ನನ್ನ ಚಿಕ್ಕ ತಮ್ಮನಿಂದಲೂ ಅಗಲಿದವಳಾಗಿ ದುಃಖದಲ್ಲಿ ಸಿಕ್ಕಿಹಾಕಿಕೊಂಡು ಕಡೆಯಲ್ಲಿ ನಾನೂ ಸತ್ತುಹೋಗುವೆನಪ್ಪಾ. ಇದಕ್ಕೆ ಬದಲಾಗಿ ನೀನೂ ಬದುಕಿಕೊಂಡು ನನ್ನ ತಾಯಿ, ಈ ನನ್ನ ತಮ್ಮ ಇವರೂ ಉಳಿಯುವುದಾದರೆ ನಮ್ಮ ವಂಶವೂ ಉದ್ಧಾರವಾಗುವುದಲ್ಲದೇ–ನಮ್ಮ ಪೂರ್ವಜರಿಗೂ ಪಿಂಡೋದಕಕ್ರಿಯೆಗಳು ಯಥಾವಿಧಿಯಾಗಿಯೇ ನಡೆಯುವುವು.

**ಆತ್ಮಾ ಪುತ್ರಃ ಸಖಾ ಭಾರ್ಯಾ ಕೃಚ್ಛ್ರಂ ತು ದುಹಿತಾ ಕಿಲ ।**
**ಸ ಕೃಚ್ಛ್ರಾನ್ಮೋಚಯಾತ್ಮಾನಂ ಮಾಂ ಚ ಧರ್ಮೇ ನಿಯೋಜಯ ॥**

ಜನಕನೇ! ‘ಆತ್ಮಾ ವೈ ಪುತ್ರನಾಮಾಸಿ’ ಎಂಬಂತೆ ಮಗನು ತಂದೆಯ ಪ್ರತಿಕೃತಿಯಾಗಿರುವನು. ಸತಿಯಾದವಳು ಗಂಡನಿಗೆ ಸುಖ-ದುಃಖಗಳೆರಡರಲ್ಲಿಯೂ ಎಡೆಬಿಡದೇ ಸಹಕರಿಸುವ ಸ್ನೇಹಿತೆಯಾಗಿರುವಳು. ಆದರೆ ಮಗಳು ಮಾತ್ರ ಯಾವಾಗಲೂ ತಂದೆ-ತಾಯಿಗಳ ದುಃಖಕ್ಕೇ ಕಾರಣಳಾಗು

ವಳು. ಆದುದರಿಂದ ನನ್ನನ್ನು ಪರಿತ್ಯಜಿಸಿ ಈ ಸಂಕಟದಿಂದ ಪಾರಾಗು. ಈ ಸಮಯದಲ್ಲಿ ನೀನು ನನ್ನನ್ನು ಕಳುಹಿಸುವುದರಿಂದ ನಾನೂ ಧರ್ಮಮಾರ್ಗ ವನ್ನು ಅನುಸರಿಸಿ ನಡೆದಂತಾಗುವುದು. ನಿನ್ನನ್ನಗಲಿ ನಾನೂ ಜೀವಿಸಿದೆನಾದರೆ ಅಬಲೆಯಾದ ನಾನು ರಕ್ಷಕರಿಲ್ಲದೇ ತಬ್ಬಲಿಯಾಗಿ ಅಲ್ಲಲ್ಲಿ ತಿರುಗಾಡ ಬೇಕಾಗುವುದು. ಆದರೆ ಈ ಸಮಯದಲ್ಲಿ ನಿನ್ನನ್ನು ರಕ್ಷಿಸಿ ನಾನೇ ಪ್ರಾಣ ತ್ಯಾಗಮಾಡಿದೆನಾದರೆ ಅಬಲೆಯಾದರೂ ಮಹಾಕಾರ್ಯವನ್ನು ಮಾಡಿದ ಕೀರ್ತಿಯನ್ನು ಪಡೆಯುವೆನು. ಆದುದರಿಂದ ಈ ಸಮಯದಲ್ಲಿ ನಾನೇ ಪ್ರಾಣಪರಿತ್ಯಾಗಮಾಡಲು ನಿಶ್ಚಯಿಸಿರುವೆನು. ನನ್ನನ್ನು ಬಿಟ್ಟು ನೀನು ರಾಕ್ಷಸನೆಡೆಗೆ ಹೋದೆಯಾದರೆ ನನಗೆ ಬಹಳ ದುಃಖವಾಗುವುದು. ಅಂತಹ ದುಃಖವನ್ನು ನಾನೆಂದಿಗೂ ಸಹಿಸಲಾರೆನು. ಆದುದರಿಂದ ನಮ್ಮ ಹಿತರಕ್ಷಣೆ ಗಾಗಿ, ಧರ್ಮದ ರಕ್ಷಣೆಗಾಗಿ, ವಂಶದ ರಕ್ಷಣೆಗಾಗಿ–ಎಂದಾದರೊಂದು ದಿನ ತೊರೆಯಲೇಬೇಕಾಗಿರುವ ನನ್ನನ್ನು ಇಂದೇ ತೊರೆದು ನಿನ್ನ ಆತ್ಮವನ್ನು ರಕ್ಷಿಸಿ ಕೊಳ್ಳುವುದು ಸೂಕ್ತವಾಗಿದೆ. ಮಾಡಲೇಬೇಕಾಗಿರುವ ಕರ್ತವ್ಯದಲ್ಲಿ ಸಾವಕಾಶಮಾಡುವುದೂ ಉಚಿತವಲ್ಲ. ನೀನು ನಮ್ಮನ್ನಗಲಿದನಂತರ ಉಂಟಾಗಬಹುದಾದ ಒಂದೊಂದು ದೃಶ್ಯವನ್ನು ನೆನೆಸಿಕೊಂಡರೂ ಮನಸ್ಸಿಗೆ ಬಹಳ ಕಷ್ಟವಾಗುವುದು.

ನೀನು ಸ್ವರ್ಗಾರೋಹಣಮಾಡಿದನಂತರ ಇತರರ ಮುಂದೆ ನಿಂತು ಒಂದು ಹಿಡಿ ಭಿಕ್ಷೆಗಾಗಿ ನಾಯಿಗಳಂತೆ ಅಲೆದಾಡುವ ಕಷ್ಟಕ್ಕಿಂತಲೂ–ಧರ್ಮ ರಕ್ಷಣೆಗಾಗಿ ಪ್ರಾಣಬಿಡುವುದು ಕಷ್ಟವೆನಿಸಲಾರದು. ನೀನು ನನ್ನನ್ನು ಕಳುಹಿಸಿಕೊಡುವುದರ ಮೂಲಕ ಈ ಮಹಾಕಷ್ಟದಿಂದ ಪಾರಾದರೆ ನಾನು ದೇವಲೋಕದಲ್ಲಿ ಸುಖದಿಂದ ಕಾಲಕಳೆಯುವೆನು. ನೀನು ಈ ರೀತಿಯಲ್ಲಿ ಮಗಳನ್ನು ಕಳುಹಿಸಿಕೊಟ್ಟು, ನನ್ನ ಮರಣಾನಂತರ ನನ್ನ ಸಲುವಾಗಿ ಕೊಡುವ ಜಲತರ್ಪಣದಿಂದ ದೇವತೆಗಳೂ ಮತ್ತು ಪಿತೃಗಳೂ ತೃಪ್ತರಾಗಿ ಎಲ್ಲರ ಹಿತಕ್ಕೂ ಕಾರಣರಾಗುತ್ತಾರೆ."

ಮಗಳ ಮಾತುಗಳನ್ನು ಕೇಳಿ ಬ್ರಾಹ್ಮಣ-ಬ್ರಾಹ್ಮಣಿಯರು ಬಹು ವಾಗಿ ಪರಿತಪಿಸಿದರು. ಮೂವರ ಕಣ್ಣುಗಳಲ್ಲಿಯೂ ಅಶ್ರುಬಿಂದುಗಳು

ಧಾರಾವಾಹಿಯಾಗಿ ಹರಿಯತೊಡಗಿದುವು. ಅವೆಲ್ಲವನ್ನೂ ನೋಡುತ್ತಾ ಅಲ್ಲಿಯೇ ಕುಳಿತಿದ್ದ ಬಾಲಕನು ಮೇಲೆದ್ದು ಒಬ್ಬೊಬ್ಬರ ಸಮೀಪಕ್ಕೂ ಹೋಗಿ ಕಿವಿಗಳಲ್ಲಿ– 'ಅಳಬ್ೇಡಪ್ಪಾ! ಅಳಬೇಡಮ್ಮಾ! ಅಕ್ಕ! ಅಳಬೇಡ!'– ಎಂದು ನಗು-ನಗುತ್ತಲೇ ತೊದಲುನುಡಿಯಲ್ಲಿ ಹೇಳುತ್ತಾ, ಅವರ ಕಣ್ಣೀರನ್ನು ಪುಟ್ಟ ಕೈಗಳಿಂದ ಒರೆಸಿದನು. ತಂದೆಯ ಮುಖದ ಮೇಲೆ ಕೈಯಿಟ್ಟುಕೊಂಡು–"ಅಪ್ಪಾ! ನೀವು ರಾಕ್ಷಸನಿಗಾಗಿ ಹೆದರಿ ಇಷ್ಟು ಅಳು ತ್ತಿರುವಿರೇನಪ್ಪಾ? ಈ ದರ್ಭೆಯಿಂದಲೇ ಆ ನರಭಕ್ಷಕನ ಕತ್ತನ್ನು ಕತ್ತರಿಸಿ ಬಿಡುವೆನಪ್ಪಾ!"–ಎಂದು ಹೇಳಿದೊಡನೆಯೇ ದುಃಖದಿಂದ ಕುಂದಿ ಹೋಗಿದ್ದ ಮೂವರ ಮುಖಾರವಿಂದಗಳೂ ಪ್ರಫುಲ್ಲವಾದುವು. ಮಗನು ರಾಕ್ಷಸನನ್ನು ಸಂಹರಿಸುವನೆಂಬ ಭಾವನೆಯಿಂದಲ್ಲ. ಅವನ ಮುದ್ದು ಮಾತುಗಳನ್ನು ಕೇಳಿ ಎಲ್ಲರೂ ನಕ್ಕರು. ಕ್ಷಣಕಾಲ ಎಲ್ಲರೂ ದುಃಖವನ್ನು ಮರೆತರು. ಮರೆಯಲ್ಲಿ ನಿಂತಿದ್ದ ಕುಂತಿಯು–ಅದೇ ಸರಿಯಾದ ಸಮಯ ವೆಂದು ತಿಳಿದು, ಅವರ ಬಳಿಗೆ ಹೋಗಿ ಪ್ರಾಣಹೋದವರನ್ನು ಅಮೃತದ ಸೇಚನೆಯಿಂದ ಜೀವಂತರನ್ನಾಗಿ ಮಾಡುವಂತೆ–ಅಮೃತಮಯವಾದ ವಾಣಿಯಿಂದ ಬ್ರಾಹ್ಮಣ-ಬ್ರಾಹ್ಮಣಿಯರಿಗೆ ನೂತನವಾದ ಚೈತನ್ಯವನ್ನುಂಟು ಮಾಡುವ ಈ ಮಾತುಗಳನ್ನಾಡಿದಳು.

೧೫೫ನೆಯ ಅಧ್ಯಾಯವು ಮುಗಿಯಿತು.

## ಕುಂತಿಗೆ ಬ್ರಾಹ್ಮಣನಿಂದ ದುಃಖದ ಕಾರಣದ ನಿವೇದನೆ

ಜನಮೇಜಯ! ಕುಂತಿಯು ಬ್ರಾಹ್ಮಣನನ್ನು ಪ್ರಶ್ನಿಸುತ್ತಾಳೆ :

**ಕುತೋ ಮೂಲಮಿದಂ ದುಃಖಂ ಜ್ಞಾತುಮಿಚ್ಛಾಮಿ ತತ್ತ್ವತಃ ।**
**ವಿದಿತ್ವಾಪ್ಯಪಕರ್ಷೇಯಂ ಶಕ್ಯಂ ಚೇದಪಕರ್ಷಿತುಮ್ ॥೧॥**

"ಬ್ರಾಹ್ಮಣೋತ್ತಮನೇ! ನಿನ್ನ ಕಷ್ಟದ ಕಾರಣವನ್ನು ತಿಳಿಯಲು ಅಪೇಕ್ಷಿಸಿರುವೆನು. ಏಕೆಂದರೆ : ಈ ಕಷ್ಟದ ಪರಿಹಾರವು ನನ್ನಿಂದ ಸಾಧ್ಯವಾಗುವುದಾಗಿದ್ದರೆ ನಿಶ್ಚಯವಾಗಿಯೂ ಪರಿಹಾರವನ್ನು ಮಾಡಿಕೊಡುವೆನು."

ವಿಪ್ರನು ಹೇಳುತ್ತಾನೆ :

"ತಾಪಸಿಯೇ! ಸತ್ಪುರುಷರ ಮುಖಾರವಿಂದಗಳಿಂದ ಹೊರಡುವ ಮಾತುಗಳನ್ನೇ ನೀನೂ ಆಡುತ್ತಿರುವೆ. ಆದರೆ ನಮಗಿಂದು ಒದಗಿರುವ ದುಃಖವು ಮನುಷ್ಯಮಾತ್ರರಿಂದ ಪರಿಹಾರವಾಗಲಾರದು. ಈ ಊರಿಗೆ ಅನತಿದೂರದಲ್ಲಿಯೇ ಬಕನೆಂಬ ರಾಕ್ಷಸನಿರುವನು. ಆ ನರಭಕ್ಷಕನೇ ಈ ಸುತ್ತ-ಮುತ್ತಲ ಪ್ರದೇಶಗಳಿಗೂ ಮತ್ತು ಈ ನಗರಿಗೂ ಅಧಿಪತಿಯೆನಿಸಿರುವನು. ಯಾವಾಗಲೂ ಮನುಷ್ಯರನ್ನು ತಿನ್ನುತ್ತಾ ಬಲಿಷ್ಠನಾಗಿ ಈ ಪ್ರದೇಶಗಳನ್ನು ಆಳುತ್ತಿರುವನು. ಈ ಪ್ರದೇಶಗಳು ಅವನಿಂದಲೇ ರಕ್ಷಿತವಾಗಿವೆಯೆಂದೂ ಹೇಳಬಹುದು. ಏಕೆಂದರೆ : ಅವನಿಲ್ಲಿರುವುದರಿಂದ ನಮಗೆ ಇತರ ಶತ್ರುಗಳಿಂದ ಭಯವಾಗಲೀ, ದುಷ್ಟಪ್ರಾಣಿಗಳಿಂದ ಭಯವಾಗಲೀ–ಇರುವುದಿಲ್ಲ. ಆದರೆ ಅವನು ನಮ್ಮನ್ನು ರಕ್ಷಿಸುತ್ತಿರುವುದಕ್ಕೆ ಪ್ರತಿಯಾಗಿ ನಾವು ತೆರಬೇಕಾಗಿರುವ ದಂಡವು ಮಾತ್ರ ದುಸ್ಸಹವಾಗಿದೆ.

ಒಂದೊಂದು ಸಂಸಾರದವರೂ ಒಂದೊಂದು ದಿನ ಆಹಾರವನ್ನು ಕಳುಹಿಸಬೇಕು. ಒಂದು ಬಂಡಿ ಅನ್ನ ಮತ್ತು ಅದಕ್ಕೆ ಬೇಕಾಗುವ ಪರಿಕರಗಳು, ಎರಡು ಕೋಣಗಳು ಮತ್ತು ಅವುಗಳನ್ನೊಯ್ಯುವ ಒಬ್ಬ ಮನುಷ್ಯ–ಇಷ್ಟೂ ಅವನಿಗೆ ಒಂದು ದಿನಕ್ಕೆ ಬೇಕಾಗಿರುವ ಆಹಾರ. ಆಹಾರವನ್ನು

ಕಳುಹಿಸಬೇಕಾದ ಸರದಿಯು ಅನೇಕ ವರ್ಷಗಳಿಗೊಮ್ಮೆ ಒಂದು ಸಂಸಾರಕ್ಕೆ ಬರುವುದು. ಸರದಿಯು ಬಂದ ಗೃಹಸ್ಥನೇನಾದರೂ ರಾಕ್ಷಸನ ಆಜ್ಞಾನು ಸಾರವಾಗಿ ತನ್ನ ಕರ್ತವ್ಯವನ್ನು ನಿರ್ವಹಿಸದಿದ್ದರೆ ಬಕಾಸುರನು ಒಡನೆಯೇ ಬಂದು ಅವನನ್ನು ಪತ್ನೀ-ಪುತ್ರಸಹಿತವಾಗಿಯೇ ತಿಂದು ಮುಗಿಸಿಬಿಡುವನು.

ಅಮ್ಮಾ! ನಮ್ಮ ದುರ್ವಿಧಿಯನ್ನು ಏನೆಂದು ಹೇಳಲಿ! ಆ ರಾಕ್ಷಸನು ನಮಗೆ ನಿಜವಾದ ರಾಜನಲ್ಲ. ಬಲಪ್ರಯೋಗದಿಂದ ನಮ್ಮನ್ನು ಆಳುತ್ತಿರುವ ನೆಂದು ಹೇಳಿದೆನಲ್ಲವೇ? ಈ ಪ್ರದೇಶದಲ್ಲಿ ವೇತ್ರಕೀಯಗೃಹವೆಂಬ ಪಟ್ಟಣ ವಿದೆ. ಅಲ್ಲಿ ನಮ್ಮ ನಿಜವಾದ ರಾಜನು ವಾಸಿಸುತ್ತಿದ್ದಾನೆ. ಅವನಿಗೆ ರಾಜ್ಯವನ್ನು ಹೇಗೆ ಆಳಬೇಕೆಂಬ ರಾಜನೀತಿಯೇ ತಿಳಿಯದಾಗಿದೆ. ಬುದ್ಧಿ ಹೀನನಾಗಿರುವುದರಿಂದ ಈ ಪ್ರದೇಶವನ್ನು ನಿರಪಾಯವಾಗಿಟ್ಟಿರಲು ಮತ್ತು ರಕ್ಷಿಸಲು ಯಾವ ವಿಧವಾದ ಎಚ್ಚರಿಕೆಯನ್ನೂ ಅವನು ತೆಗೆದುಕೊಂಡಿರು ವುದಿಲ್ಲ. ಸ್ವಾರ್ಥಿಯಾದ ಮತ್ತು ದುರ್ಬಲನಾದ ರಾಜನ ಆಶ್ರಯವನ್ನು ಪಡೆದಿರುವ ನಾವು ಇಂತಹ ದಾರುಣವಾದ ಕಷ್ಟಗಳನ್ನು ಅನುಭವಿಸಲೇ ಬೇಕಾದ ಸ್ಥಿತಿಯಲ್ಲಿದ್ದೇವೆ.

**ಬ್ರಾಹ್ಮಣಾಃ ಕಸ್ಯ ವಕ್ತವ್ಯಾಃ ಕಸ್ಯ ವಾಚ್ಛನ್ದಚಾರಿಣಃ ।**
**ಗುಣೈರೇತೇ ಹಿ ವತ್ಸ್ಯನ್ತಿ ಕಾಮಗಾಃ ಪಕ್ಷಿಣೋ ಯಥಾ ॥೧೧॥**

ಬ್ರಾಹ್ಮಣರಿಗೆ ಅಪ್ಪಣೆಮಾಡುವ ಅಧಿಕಾರವು ಯಾರಿಗಿದೆ? ಅವರನ್ನು ಅಧೀನದಲ್ಲಿಟ್ಟುಕೊಳ್ಳಲು ಯಾರಿಗೆ ತಾನೇ ಸಾಧ್ಯವಿದೆ? ಅವರು ಸ್ವೇಚ್ಛೆಯಿಂದ ಸಂಚರಿಸುವ ಪಕ್ಷಿಗಳಂತೆ ವ್ಯವಹರಿಸುತ್ತಾ ಸದ್ಗುಣಗಳಿರುವ ರಾಜನ ಬಳಿ ವಾಸಮಾಡುತ್ತಾರೆ.

**ರಾಜಾನಂ ಪ್ರಥಮಂ ವಿನ್ದೇತ್ತತೋ ಭಾರ್ಯಾಂ ತತೋ ಧನಮ್ ।**
**ತ್ರಯಸ್ಯ ಸಂಚಯೇನಾಸ್ಯ ಜ್ಞಾತೀನ್ಪುತ್ರಾಂಶ್ಚ ತಾರಯೇತ್ ॥೧೨॥**

ಒಂದೆಡೆಯಲ್ಲಿ ನೆಲೆಸಬೇಕಾದಾಗ ಮೊದಲು ಉತ್ತಮನಾದ, ಯೋಗ್ಯನಾದ, ಸಮರ್ಥನಾದ ರಾಜನನ್ನು ಆಶ್ರಯಿಸಬೇಕು. ಉತ್ತಮವಾದ ರಾಜಾಶ್ರಯವನ್ನು ಪಡೆದನಂತರವೇ ಮದುವೆಯಾಗಬೇಕು. ಮದುವೆ

ಯಾದನಂತರ ಧರ್ಮವಿಹಿತವಾದ ಮಾರ್ಗದಲ್ಲಿ ದ್ರವ್ಯಾರ್ಜನೆಯನ್ನು ಮಾಡಬೇಕು. ಪ್ರಜೆಗಳನ್ನು ರಕ್ಷಣೆಮಾಡುವ ಸಾಮರ್ಥ್ಯವಿರುವ ರಾಜ, ವಿನೀತಳಾದ ಪತ್ನೀ ಮತ್ತು ಐಶ್ವರ್ಯ–ಈ ಮೂರನ್ನೂ ಪಡೆದವನು ತನ್ನ ಪುತ್ರ-ಬಾಂಧವರನ್ನು ಸಂಕಟದಿಂದ ಪಾರುಮಾಡಲು ಸಮರ್ಥನಾಗುವನು.

ರಕ್ಷಣೆಮಾಡಲು ಸಮರ್ಥನಾದ ರಾಜನ ಆಶ್ರಯವನ್ನೇ ಪಡೆಯದೇ ದುರ್ಬಲರಾಜನ ದೇಶದಲ್ಲಿದ್ದೂ ವಿವಾಹಮಾಡಿಕೊಂಡೆನು ಮತ್ತು ಧನಾ ರ್ಜನೆಯನ್ನೂ ಮಾಡಿದೆನು. ನಾನು ಮೊದಲನೆಯ ನಿಯಮವನ್ನೇ ಉಲ್ಲಂಘಿಸಿರುವೆನಾದುದರಿಂದ ಈ ಆಪತ್ತಿನಲ್ಲಿ ಸಿಲುಕಿಕೊಂಡು ಬಹಳ ಸಂಕಟಪಡುತ್ತಿದ್ದೇನೆ.

ರಾಕ್ಷಸನಿಗೆ ಭತ್ಯರೂಪವಾದ ಮತ್ತು ನನ್ನ ವಂಶವಿನಾಶಕವಾದ ಆಹಾರವನ್ನು ಕಳುಹಿಸಬೇಕಾಗಿರುವ ಸರದಿಯು ಇಂದು ನಮ್ಮದಾಗಿದೆ. ಆಹಾರವೇನೆಂಬುದನ್ನೂ (ಒಬ್ಬ ಮನುಷ್ಯ, ಒಂದು ಬಂಡಿ ಅನ್ನ ಮತ್ತು ಎರಡು ಕೋಣಗಳು) ಈ ಹಿಂದೆಯೇ ಹೇಳಿರುವೆನಲ್ಲವೇ?

ಬೇರೊಬ್ಬ ಮನುಷ್ಯನನ್ನು ಕ್ರಯಕ್ಕೆ ಕೊಂಡು ಕಳುಹಿಸುವ ಆರ್ಥಿಕ ಸೌಕರ್ಯವೂ ನನಗಿಲ್ಲ ಮತ್ತು ನನ್ನ ಸಂಸಾರದಲ್ಲಿ ಯಾರನ್ನೂ ಕಳುಹಿಸಿ ಕೊಡಲು ನನಗೆ ಸಾಧ್ಯವಿಲ್ಲ. ಬೇರಾವ ರೀತಿಯಿಂದಲೂ ರಾಕ್ಷಸನಿಂದ ತಪ್ಪಿಸಿಕೊಳ್ಳುವ ಸಾಧ್ಯತೆಯೂ ಇಲ್ಲ. ಈ ಕಾರಣಗಳಿಂದಾಗಿ ಇಂದು ನಾನು ದಾಟಲು ಅಸಾಧ್ಯವಾದ ದುಃಖಸಾಗರದಲ್ಲಿ ಮುಳುಗಿಬಿಟ್ಟಿದ್ದೇನೆ.

ಈಗ ನಾನು ನನ್ನ ಪತ್ನೀ, ಪುತ್ರ, ಪುತ್ರೀ–ಇವರನ್ನು ಕೂಡಿಕೊಂಡೇ ಆ ರಾಕ್ಷಸನ ಬಳಿಗೆ ಹೋಗಬೇಕೆಂದು ನಿಶ್ಚಯಿಸಿಬಿಟ್ಟಿದ್ದೇನೆ. ಏಕೆಂದರೆ : ನಮ್ಮ ನಾಲ್ವರಲ್ಲಿ ಯಾರೊಬ್ಬರು ಹೋದರೂ ಉಳಿದವರು ಬದುಕಲಾರರು. ಆದುದರಿಂದಲೇ ಈ ನಿಶ್ಚಯಕ್ಕೆ ಬಂದಿರುತ್ತೇನೆ. ಬಹಳವಾಗಿ ಹಸಿದಿರುವ ಆ ರಾಕ್ಷಸನು ನಮ್ಮೆಲ್ಲರನ್ನೂ ಸಂತೋಷದಿಂದಲೇ ಭಕ್ಷಿಸುತ್ತಾನೆ.”

೧೬೦ನೆಯ ಅಧ್ಯಾಯವು ಮುಗಿಯಿತು.

೧೬೧ನೆಯ ಅಧ್ಯಾಯ ಬಕವಧಪರ್ವ (ಮುಂದುವರಿದಿದೆ.)

## ಕುಂತೀ ಮತ್ತು ಬ್ರಾಹ್ಮಣರ ಸಂಭಾಷಣೆ

ಜನಮೇಜಯ! ಬ್ರಾಹ್ಮಣನು ದೈನ್ಯವಾಣಿಯಿಂದ ಕುಂತಿಗೆ ತನ್ನ ಕಟ್ಟಕಡೆಯ ನಿರ್ಧಾರವನ್ನು ತಿಳಿಸಿದನು. ಬ್ರಾಹ್ಮಣನ ಮಾತುಗಳೆಲ್ಲವನ್ನೂ ಕೇಳಿದನಂತರ ಕುಂತಿಯು ಹೇಳತೊಡಗಿದಳು :

**ನ ವಿಷಾದಸ್ತ್ವಯಾ ಕಾರ್ಯೋ ಭಯಾದಸ್ಮಾತ್ಕಥಂಚನ ।**
**ಉಪಾಯಃ ಪರಿದೃಷ್ಟೋಽತ್ರ ತಸ್ಮಾನ್ಮೋಕ್ಷಾಯ ರಕ್ಷಸಃ ॥೧॥**

"ಬ್ರಾಹ್ಮಣೋತ್ತಮನೇ! ಮುಂದೆ ಸಂಭವಿಸಲಿರುವ ಭಯಕ್ಕಾಗಿ ನೀನು ವಿಷಾದಿಸಬೇಡ. ರಾಕ್ಷಸನಿಂದ ಪಾರಾಗಬಹುದಾದ ಉಪಾಯ ವೊಂದನ್ನು ನಾನು ಕಂಡುಕೊಂಡಿದ್ದೇನೆ. ನಿನಗೆ ಒಬ್ಬನೇ ಮಗನಿದ್ದು ಬಹಳ ಚಿಕ್ಕವನಾಗಿಯೂ ಇರುವನು. ಹರೆಯದವಳಾದ ಒಬ್ಬಳೇ ಮಗಳಿರುವಳು, ಅಲ್ಲವೇ? ಈ ಮುದ್ದುಮಕ್ಕಳಲ್ಲಿ ಯಾರೊಬ್ಬರೂ ರಾಕ್ಷಸನ ಬಳಿಗೆ ಹೋಗಬಾರದು. ಇಷ್ಟು ಮಾತ್ರವಲ್ಲ; ನಿನ್ನ ಹೆಂಡತಿಯಾಗಲೀ, ನೀನಾಗಲೀ–ರಾಕ್ಷಸನ ಬಳಿಗೆ ಹೋಗುವುದನ್ನೂ ನಾನು ಇಷ್ಟ ಪಡುವುದಿಲ್ಲ."

ಬ್ರಾಹ್ಮಣನು ಕಾತರದಿಂದ ಕೇಳುತ್ತಿದ್ದನು. ಯಾರನ್ನೂ ರಾಕ್ಷಸನ ಬಳಿಗೆ ಕಳುಹಿಸಿಕೊಡಬಾರದೆಂದು ಹೇಳುತ್ತಿರುವ ಕುಂತಿಯು ಮುಂದೆ ಏನು ಹೇಳುವಳೆಂಬುದನ್ನು ಅಲ್ಲಿ ಕುಳಿತಿದ್ದವರೆಲ್ಲರೂ ತವಕದಿಂದ ನಿರೀಕ್ಷಿಸು ತ್ತಿದ್ದರು.

ಮಹಾಮಾತೆಯಾದ ಕುಂತಿಯು ಮುಂದುವರಿದು ಗಂಭೀರವಾದ ಧ್ವನಿಯಿಂದಲೇ ಹೇಳಿದಳು : "ಬ್ರಾಹ್ಮಣೋತ್ತಮ! ನನಗೆ ಐವರು ಮಕ್ಕ ಳಿದ್ದಾರೆ. ಅವರಲ್ಲಿ ಯಾರಾದರೊಬ್ಬರು ರಾಕ್ಷಸನಿಗೆ ಕೊಡಬೇಕಾಗಿರುವ ಆಹಾರಪದಾರ್ಥಗಳ ಬಂಡಿಯನ್ನು ಹೊಡೆದುಕೊಂಡು ನಿನ್ನ ಪ್ರತಿನಿಧಿ ಯಾಗಿ ಹೋಗಿಬರುತ್ತಾರೆ."

ಧರ್ಮೈಕದೃಷ್ಟಿಯಿಂದ ಬ್ರಾಹ್ಮಣನು ಕುಂತಿಯನ್ನು ಕುರಿತು ಹೇಳಿದನು:

**ನಾಹಮೇತತ್ಕರಿಷ್ಯಾಮಿ ಜೀವಿತಾರ್ಥೀ ಕಥಂಚನ ।**
**ಬ್ರಾಹ್ಮಣಸ್ಯಾತಿಥೇಶ್ಚೈವ ಸ್ವಾರ್ಥೇ ಪ್ರಾಣಾನ್ವಿಯೋಜಯನ್ ॥೪॥**

"ನಾನು ನನ್ನ ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿ ಇಂತಹ ಸಲಹೆಗೆ ಖಂಡಿತವಾಗಿಯೂ ಒಪ್ಪಲಾರೆನಮ್ಮಾ! ಆತ್ಮರಕ್ಷಣೆಯ ಸಲುವಾಗಿ–ಅತಿಥಿ ಗಳಾಗಿ ಬಂದಿರುವ ಬ್ರಾಹ್ಮಣೋತ್ತಮರಾದ ನಿಮ್ಮನ್ನು ಸ್ವಾರ್ಥಕ್ಕಾಗಿ ಬಲಿಗೊಡಲೇ?

**ನ ತ್ವೇತದಕುಲೀನಾಸು ನಾಧರ್ಮಿಷ್ಠಾಸು ವಿದ್ಯತೇ ।**
**ಯದ್ಬ್ರಾಹ್ಮಣಾರ್ಥಂ ವಿಸೃಜೇದಾತ್ಮಾನಮಪಿ ಚಾತ್ಮಜಮ್ ॥೫॥**

ಬ್ರಾಹ್ಮಣನನ್ನು ಉಳಿಸಲು ತನ್ನನ್ನಾಗಲೀ, ಮಗನನ್ನಾಗಲೀ ಕೊಡುವೆ ನೆನ್ನುವ ಔದಾರ್ಯದ ಮಾತು ಅಕುಲೀನೆಯರಲ್ಲಿಯೂ, ಅಧರ್ಮಿಷ್ಠೆಯ ರಲ್ಲಿಯೂ ಸರ್ವಥಾ ಇರಲಾರದು.

**ಆತ್ಮನಸ್ತು ಮಯಾ ಶ್ರೇಯೋ ಬೋದ್ಧವ್ಯಮಿತಿ ರೋಚತೇ ।**
**ಬ್ರಹ್ಮವಧ್ಯಾತ್ಮವಧ್ಯಾ ವಾ ಶ್ರೇಯಾನಾತ್ಮವಧೋ ಮಮ ॥೬॥**

ತಾಯೇ! ನನಗೆ ಶ್ರೇಯಸ್ಕರವಾದುದು ಯಾವುದೆಂಬುದನ್ನು ನಾನೇ ನಿಶ್ಚಯಿಸಬೇಕಾಗಿದೆ. ಇದನ್ನು ಕೂಲಂಕಷವಾಗಿ ವಿಮರ್ಶಿಸಿದಾಗ ಬ್ರಹ್ಮಹತ್ಯೆ, ಆತ್ಮಹತ್ಯೆ–ಈ ಎರಡರಲ್ಲಿ ಆತ್ಮಹತ್ಯೆಯೇ ಶ್ರೇಯಸ್ಕರವೆಂದು ನಾನು ನಿಶ್ಚಯಿಸಿದ್ದೇನೆ. ಇದಕ್ಕೆ ಕಾರಣವಿಷ್ಟೇ, ತಾಯೇ!

**ಬ್ರಹ್ಮವಧ್ಯಾ ಪರಂ ಪಾಪಂ ನಿಷ್ಕೃತಿರ್ನಾತ್ರ ವಿದ್ಯತೇ ।**
**ಅಬುದ್ಧಿಪೂರ್ವಂ ಕೃತ್ವಾಪಿ ವರಮಾತ್ಮವಧೋ ಮಮ ॥೭॥**

ಬ್ರಹ್ಮಹತ್ಯೆಯು ಮಹಾಪಾತಕಗಳಲ್ಲಿ ಮೊದಲನೆಯದು. ತಾಯೇ! ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ತಿಳಿಯದೇ ಅಜಾಗರೂಕತೆಯಿಂದ ಮಾಡಿ ದರೂ ಬ್ರಹ್ಮಹತ್ಯೆಗೆ ದೋಷವು ತಪ್ಪಿದ್ದಲ್ಲ. ಆದುದರಿಂದ ಈ ಸಂದರ್ಭ ದಲ್ಲಿ ಬ್ರಹ್ಮಹತ್ಯೆಗಿಂತಲೂ ಆತ್ಮಹತ್ಯೆಯೇ ನನ್ನ ದೃಷ್ಟಿಯಲ್ಲಿ ಶ್ರೇಷ್ಠವಾದು ದೆಂದು ಕಾಣುತ್ತದೆ. ಮೇಲಾಗಿ ನಾನು ರಾಕ್ಷಸನ ಬಳಿಗೆ ಹೋಗಿ ಅವನಿಗೆ

ಆಹಾರವಾದರೆ ಅದು 'ಆತ್ಮಹತ್ಯೆ' ಎನಿಸಿಕೊಳ್ಳುವುದಿಲ್ಲ. ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದೂ ಇಲ್ಲ. ಬೇರೆಯವನು ನನ್ನನ್ನು ಕೊಲ್ಲುವುದರಿಂದ ನನಗೆ ಆತ್ಮಹತ್ಯೆಯನ್ನು ಮಾಡಿಕೊಂಡ ದೋಷವೂ ಉಂಟಾಗುವುದಿಲ್ಲ. ಆದರೆ ನಿನ್ನ ಮಾತಿನಂತೆ ನಡೆದರೆ ಬ್ರಾಹ್ಮಣರ ಹತ್ಯೆಗೆ ನಾನೇ ಸಂಪೂರ್ಣವಾಗಿ ಕಾರಣನಾಗುತ್ತೇನೆ. ನನಗಾಗಿ ಬ್ರಾಹ್ಮಣನೊಬ್ಬನು ಕೊಲ್ಲಲ್ಪಡುತ್ತಾನಾದುದರಿಂದ ಅವನ ಕೊಲೆಯ ಪಾತಕವು ನನಗೇ ಉಂಟಾಗುವುದು. ಬ್ರಾಹ್ಮಣನೊಬ್ಬನ ಕೊಲೆಗೆ ನಾನು ಕೇವಲ ಒಪ್ಪಿಗೆ ಯನ್ನಿತ್ತರೂ ಮಹಾಪಾಪಕ್ಕೆ ಗುರಿಯಾಗಬೇಕಾಗುವುದು. ಬ್ರಹ್ಮಹತ್ಯೆಗೆ ಪ್ರಾಯಶ್ಚಿತವೇ ಇಲ್ಲ. ಈ ಕಾರ್ಯವು ಕ್ಷುದ್ರವೂ ಕ್ರೂರವೂ ಆಗಿರುತ್ತದೆ.

ಈ ಕಾರ್ಯಕ್ಕಾಗಿ ನಿನ್ನ ಮಕ್ಕಳನ್ನು ಬಲಿಗೊಡುವುದು ಪರಮಪಾಪ.

**ಆಗತಸ್ಯ ಗೃಹಂ ತ್ಯಾಗಸ್ತಥೈವ ಶರಣಾರ್ಥಿನಃ ।**
**ಯಾಚಮಾನಸ್ಯ ಚ ವಧೋ ನೃಶಂಸೋ ಗರ್ಹಿತೋ ಬುಧೈಃ ॥೧೦॥**

ಮನೆಗೆ ಬಂದವನನ್ನು ಹಾಗೂ ಆಶ್ರಯವನ್ನು ಕೋರಿಬಂದ ಶರಣಾರ್ಥಿಯನ್ನು ಪರಿತ್ಯಜಿಸುವುದೂ, ರಕ್ಷಣೆಗಾಗಿ ಯಾಚಿಸಲು ಬಂದವ ನನ್ನು ಕೊಲೆಮಾಡುವುದೂ ಅತಿನಿಂದ್ಯವಾದ ಮತ್ತು ಅತಿಕ್ರೂರವಾದ ಕಾರ್ಯಗಳೆಂದು ವಿದ್ವಾಂಸರು ಹೇಳುತ್ತಾರೆ.

**ಕುರ್ಯಾನ್ನ ನಿನ್ದಿತಂ ಕರ್ಮ ನ ನೃಶಂಸಂ ಕಥಂಚನ ।**
**ಇತಿ ಪೂರ್ವಂ ಮಹಾತ್ಮಾನ ಆಪದ್ಧರ್ಮವಿದೋ ವಿದುಃ ॥೧೧॥**

ನಿಂದ್ಯವಾದ ಕಾರ್ಯವನ್ನೂ-ಕ್ರೂರವೆಂದು ಪರಿಗಣಿತವಾದ ಕಾರ್ಯ ವನ್ನೂ ಆಪತ್ಕಾಲದಲ್ಲಿಯೂ ಮಾಡಲೇಕೂಡದೆಂದು ಆಪದ್ಧರ್ಮದಲ್ಲಿ ಪರಿಣತರಾದವರು ಹೇಳುತ್ತಾರೆ.

**ಶ್ರೇಯಾಂಸ್ತು ಸಹದಾರಸ್ಯ ವಿನಾಶೋಽದ್ಯ ಮಮ ಸ್ವಯಮ್ ।**
**ಬ್ರಾಹ್ಮಣಸ್ಯ ವಧಂ ನಾಹಮನುಮಂಸ್ಯೇ ಕದಾಚನ ॥೧೨॥**

ಈ ಕಾರಣಗಳಿಂದ ನಾನಿಂದು ಸತೀ-ಸುತ-ಸುತೆಯರೊಂದಿಗೆ

ರಾಕ್ಷಸನಿಗೆ ಬಲಿಯಾಗುವುದೇ ಶ್ರೇಯಸ್ಕರವೆಂದೂ ನಿರ್ಧರಿಸಿದ್ದೇನೆ. ಆತ್ಮ ರಕ್ಷಣೆಗಾಗಿ ಬ್ರಾಹ್ಮಣವಧೆಯನ್ನು ನಾನೆಂದಿಗೂ ಅನುಮೋದಿಸುವುದಿಲ್ಲ."

ಕುಂತಿಯು ತನ್ನ ಐವರು ಮಕ್ಕಳಲ್ಲಿ ಒಬ್ಬನನ್ನು ಬಲಿಗೊಡಲು ಬಂದವಳಲ್ಲ. ಅಥವಾ ಬ್ರಾಹ್ಮಣನ ಕಷ್ಟವನ್ನು ನೋಡಿ ಕೇವಲ ಸಂತಾಪವನ್ನು ಸೂಚಿಸಿ ಹೋಗಲೂ ಬರಲಿಲ್ಲ. ಬ್ರಾಹ್ಮಣನ ಮಾತುಗಳನ್ನು ಕೇಳಿದ ನಂತರ ತನ್ನ ಮನಸ್ಸಿನಲ್ಲಿದ್ದ ಕೆಲವು ವಿಷಯಗಳನ್ನು ಸ್ಪಷ್ಟಪಡಿಸಬೇಕಾಯಿತು. ಕುಂತಿಯು ಬ್ರಾಹ್ಮಣನನ್ನು ಕುರಿತು ಹೇಳತೊಡಗಿದಳು :

"ವಿಪ್ರೋತ್ತಮ! ಬ್ರಾಹ್ಮಣರನ್ನು ಹೇಗಾದರೂ ಮಾಡಿ ರಕ್ಷಿಸಲೇ ಬೇಕೆಂಬ ಅಭಿಪ್ರಾಯವು ನನಗೂ ಸ್ಥಿರವಾಗಿದೆ. ಈ ಕಾರಣದಿಂದಲೇ ನಾನಿಲ್ಲಿಗೆ ಬಂದಿರುವೆನು. ನನಗೆ ನನ್ನ ಮಕ್ಕಳ ಮೇಲಿರುವ ಪ್ರೀತಿಯ ವಿಷಯವಾಗಿ ಹೇಳುವುದಾದರೆ–ಐವರು ಮಕ್ಕಳಿಗೆ ಬದಲಾಗಿ ನಾನು ನೂರು ಮಕ್ಕಳನ್ನು ಪಡೆದಿದ್ದರೂ ಎಲ್ಲರ ಮೇಲೆಯೂ ನನಗೆ ಪ್ರೀತಿಯು ಒಂದೇ ಸಮನಾಗಿರುತ್ತಿದ್ದಿತೇ ಹೊರತು ಒಬ್ಬರಿಗೊಬ್ಬರಿಗೆ ಪಕ್ಷಪಾತಮಾಡಲು ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ನನ್ನ ಮಗನನ್ನು ರಾಕ್ಷಸನ ಬಳಿಗೆ ನಿನ್ನ ಪ್ರತಿನಿಧಿಯಾಗಿ ಕಳುಹಿಸುವೆನೆಂದು ಹೇಳಿದೆನೇ ಹೊರತು ರಾಕ್ಷಸನಿಗೆ ಬಲಿಗೊಡಲು ಕಳುಹಿಸುವೆನೆಂದು ನಾನು ಹೇಳಲಿಲ್ಲ.

ಏಕೆಂದರೆ : ರಾಕ್ಷಸನು ನನ್ನ ಮಗನನ್ನು ಬಲಿಯಾಗಿ ತೆಗೆದುಕೊಳ್ಳುವಷ್ಟು ಸಮರ್ಥನಲ್ಲವೆಂದೇ ನಾನು ಖಚಿತವಾಗಿ ತಿಳಿದಿರುತ್ತೇನೆ. ನನ್ನ ಮಗನು ಅತ್ಯಂತಬಲಿಷ್ಠನೂ, ತೇಜಸ್ವಿಯೂ ಆಗಿರುವನಲ್ಲದೇ–ಅನೇಕ ವಿಧವಾದ ಮಂತ್ರಸಿದ್ಧಿಗಳನ್ನೂ ಪಡೆದಿರುತ್ತಾನೆ. ಆದುದರಿಂದ ನನ್ನ ಮಗನು ಆಹಾರವನ್ನು ರಾಕ್ಷಸನಿಗೆ ತಲುಪಿಸಿ, ಆತ್ಮರಕ್ಷಣೆಯನ್ನೂ ಮಾಡಿಕೊಂಡು ಬರುವನೆಂಬ ಭರವಸೆಯು ನನಗೆ ಸಂಪೂರ್ಣವಾಗಿದೆ. ಅವನು ಅನೇಕ ಮಹಾರಾಕ್ಷಸರೊಡನೆ ಸೆಣೆಸಿ ಅವರೆಲ್ಲರನ್ನೂ ಯಮಾಲಯಕ್ಕೆ ಕಳುಹಿಸಿರುವುದನ್ನು ನಾನು ಪ್ರತ್ಯಕ್ಷವಾಗಿಯೇ ನೋಡಿರುತ್ತೇನೆ. ಆದರೆ ಈ ವಿಷಯಗಳನ್ನು ಮಾತ್ರ ನೀನಾರಲ್ಲಿಯೂ ಬಹಿರಂಗಪಡಿಸಬಾರದು. ಏಕೆಂದರೆ: ಇದೇ ವಿಧವಾದ ಮಂತ್ರಶಕ್ತಿಯನ್ನು ಪಡೆಯಲು ಅಪೇಕ್ಷಿಸುವ ಅನೇಕರು ನನ್ನ ಮಗನನ್ನು ಪೀಡಿಸಲು ಪ್ರಾರಂಭಿಸುತ್ತಾರೆ.

**ಗುರುಣಾ ಚಾನನುಜ್ಞಾತೋ ಗ್ರಾಹಯೇದ್ಯತ್ಸುತೋ ಮಮ ।**
**ನ ಸ ಕುರ್ಯಾತ್ತಥಾ ಕಾರ್ಯಂ ವಿದ್ಯಯೇತಿ ಸತಾಂ ಮತಮ್ ॥**

ಅವರ ಪ್ರಾರ್ಥನೆಗೆ ಮನ್ನಣೆಯನ್ನಿತ್ತು ನನ್ನ ಮಗನೇನಾದರೂ ಗುರುವಿನ ಅನುಜ್ಞೆಯಿಲ್ಲದೇ ಮಹಾಮಂತ್ರವನ್ನು ಇತರರಿಗೆ ಉಪದೇಶಿಸಿಬಿಟ್ಟರೆ–ನನ್ನ ಮಗನಿಗೆ ಆ ಮಂತ್ರಸಿದ್ಧಿಯೇ ತಪ್ಪಿಹೋಗುವುದೆಂದು ಹಿರಿಯರು ಹೇಳಿರುತ್ತಾರೆ. ಆದುದರಿಂದ ನೀನು ಖಂಡಿತವಾಗಿಯೂ ಈ ವಿಷಯವನ್ನು ಯಾರಲ್ಲಿಯೂ ಹೇಳಬಾರದು. ತಿಳಿಯಿತೇ?"

ಕುಂತಿಯ ಮಾತುಗಳು ಅಮೃತಧಾರೆಯಂತೆ ಬ್ರಾಹ್ಮಣ-ಬ್ರಾಹ್ಮಣಿಯರ ಕಿವಿಗಳಲ್ಲಿ ಹರಿದುಹೋದುವು. ಅದೃಶ್ಯವಾಗಿ ಕಿವಿಯೊಳಗೆ ಹರಿದುಹೋಗಿದ್ದ ಅಮೃತಧಾರೆಯು ಆನಂದಾಶ್ರುಗಳ ರೂಪದಿಂದ ಸತಿ-ಪತಿಗಳಿಬ್ಬರ ಕಣ್ಣುಗಳಿಂದಲೂ ಪ್ರತ್ಯಕ್ಷವಾಗಿ ಹೊರಬಂದಿತು. ಕ್ಷಣಕಾಲದ ಹಿಂದೆ ದುಃಖಸಾಗರದಲ್ಲಿ ಮುಳುಗಿದ್ದ ಬ್ರಾಹ್ಮಣಸಂಸಾರವು ಕುಂತಿಯ ಮಾತುಗಳನ್ನು ಕೇಳಿದೊಡನೆಯೇ ಆನಂದಸಾಗರದಲ್ಲಿ ತೇಲಿತು. ತಮ್ಮ ಕಷ್ಟಕ್ಕೆ ಪರಿಹಾರವನ್ನು ಸೂಚಿಸಿದುದಕ್ಕಾಗಿ ಬ್ರಾಹ್ಮಣಿಯು ಮೇಲೆದ್ದು ಕುಂತಿಗೆ ನಮಸ್ಕರಿಸಿ ಪುರಸ್ಕರಿಸಿದಳು. ಕುಂತಿಯು ಅವಳನ್ನು ಹರಸಿ, ಅಲ್ಲಿಯೇ ಆಡುತ್ತಿದ್ದ ಮಗುವನ್ನು ಕೈಮೇಲೆತ್ತಿಕೊಂಡು ಮುದ್ದಾಡಿ, ಬ್ರಾಹ್ಮಣನ ಸಂಗಡವೇ ಭೀಮನೆಡೆಗೆ ಬಂದು, ಬ್ರಾಹ್ಮಣನ ಕಷ್ಟಗಳೆಲ್ಲವನ್ನೂ ವಿವರವಾಗಿ ತಿಳಿಸಿ ಅವನಿಗೆ ನೆರವಾಗಬೇಕೆಂದು ಹೇಳಿದಳು. ತಾಯಿಯ ಮಾತಿಗೆ ಭೀಮನು–'ಹಾಗೆಯೇ ಆಗಲಮ್ಮ!'–ಎಂದು ಧೋರಣೆಯಿಂದಲೇ ಒಪ್ಪಿಗೆಯನ್ನಿತ್ತನು."

ಇ೬೧ನೆಯ ಅಧ್ಯಾಯವು ಮುಗಿಯಿತು.

## ಬಕಾಸುರನ ಬಳಿಗೆ ಭೀಮನನ್ನು ಕಳುಹಿಸಲು ಯುಧಿಷ್ಠಿರನೊಡನೆ ಕುಂತಿಯ ಸಮಾಲೋಚನೆ

ವೈಶಂಪಾಯನರು ಹೇಳುತ್ತಾರೆ :

**ಕರಿಷ್ಯ ಇತಿ ಭೀಮೇನ ಪ್ರತಿಜ್ಞಾತೇಽಥ ಭಾರತ ।**
**ಆಜಗ್ಮುಸ್ತೇ ತತಃ ಸರ್ವೇ ಭೈಕ್ಷಮಾದಾಯ ಪಾಣ್ಡವಾಃ ॥೧॥**

ಜನಮೇಜಯ! 'ನಾನು ಈ ಕಾರ್ಯವನ್ನು ಮಾಡುತ್ತೇನೆ' ಎಂದು ಭೀಮನು ಭರವಸೆಯನ್ನು ಕೊಟ್ಟನಂತರ–ಭಿಕ್ಷಾಟನೆಗೆ ಹೋಗಿದ್ದ ಯುಧಿಷ್ಠಿರಾದಿಗಳು ಮನೆಗೆ ಬಂದು, ತಂದ ಭಿಕ್ಷೆಯನ್ನು ತಾಯಿಯ ಮುಂದಿಟ್ಟು ನಮಸ್ಕರಿಸಿದರು. ಭೀಮನಂದು ಭಿಕ್ಷೆಗೆ ಹೋಗಿರಲಿಲ್ಲ. ಬಕಾಸುರನ ಸಂಹಾರವನ್ನೇ ಕುರಿತು ಯೋಚಿಸುತ್ತಿದ್ದ ಭೀಮನ ಮುಖ ಭಾವವೂ ಎಂದಿನಂತೆ ಇರಲಿಲ್ಲ. ಭೀಮನ ಮುಖವನ್ನು ನೋಡಿದೊಡನೆಯೇ ಆ ವಿಷಯವನ್ನು ಯುಧಿಷ್ಠಿರನು ಗ್ರಹಿಸಿ ತಾಯಿಯ ಬಳಿಗೆ ಹೋಗಿ ಕೇಳಿದನು :

"ಅಮ್ಮಾ! ಭೀಮಸೇನನು ಏನನ್ನೋ ಯೋಚಿಸುತ್ತಿರುವನು. ಯಾವ ಮಹಾಕಾರ್ಯವನ್ನು ಮಾಡಲು ನಿಶ್ಚಯಿಸಿರುವನೋ? ಇಂದಿನ ಅವನ ಮುಖಲಕ್ಷಣವನ್ನು ನೋಡಿದರೆ ಯಾವುದೋ ಒಂದು ಮಹಾಕಾರ್ಯವನ್ನು ಸಾಧನೆಮಾಡುವ ರೀತಿಯಲ್ಲಿ ಯೋಚಿಸುತ್ತಿರುವಂತಿದೆ. ಆ ಕಾರ್ಯವನ್ನು ಅವನಾಗಿಯೇ ಮಾಡಲು ಹೊರಟಿರುವನೇ? ಅಥವಾ ನಿನ್ನ ಆಜ್ಞಾಧಾರಕನಾಗಿ ಆ ಮಹಾಕಾರ್ಯದ ಸಾಧನೆಯಲ್ಲಿ ಪ್ರವೃತ್ತನಾಗಿರುವನೇ? ಹೇಳು, ತಾಯೇ!

"ಮಗು! ಭೀಮನು ನನ್ನ ಮಾತಿನಂತೆಯೇ ಈ ಬ್ರಾಹ್ಮಣನ ಸಂಸಾರವನ್ನುಳಿಸಲು ಮತ್ತು ಈ ನಗರವನ್ನು ರಾಕ್ಷಸಬಾಧೆಯಿಂದ ವಿಮುಕ್ತಿಗೊಳಿಸಲು ನಿಶ್ಚಯಿಸಿರುತ್ತಾನೆ."

**ಕಿಮಿದಂ ಸಾಹಸಂ ತೀಕ್ಷ್ಣಂ ಭವತ್ಯಾ ದುಷ್ಕರಂ ಕೃತಮ್ ।**
**ಪರಿತ್ಯಾಗಂ ಹಿ ಪುತ್ರಸ್ಯ ನ ಪ್ರಶಂಸನ್ತಿ ಸಾಧವಃ ॥೫॥**

"ಆಗು-ಹೋಗುಗಳನ್ನು ವಿಚಾರಿಸದೇ ಎಂತಹ ತೀಕ್ಷ್ಣವಾದ ಕಾರ್ಯವನ್ನು ಮಾಡಹೊರಟಿರುವೆಯಮ್ಮಾ! ಈ ಕಾರ್ಯವು ದುಸ್ಸಾಧ್ಯ ವಾಗಿರುವುದು ಮಾತ್ರವಲ್ಲದೇ–ಅಸಾಧುವೂ ಆಗಿರುವುದು. ಪುತ್ರನ ಪರಿ ತ್ಯಾಗವನ್ನು ಸತ್ಪುರುಷರೆಂದಿಗೂ ಪ್ರಶಂಸಿಸುವುದಿಲ್ಲ. ಬೇರೆಯವರ ಮಗನ ರಕ್ಷಣೆಗಾಗಿ ನಿನ್ನ ಮಗನನ್ನೇ ಬಲಿಗೊಡಲು ಏಕೆ ಒಪ್ಪಿದೆಯಮ್ಮಾ? ನೀನು ಮಾಡಲು ನಿಶ್ಚಯಿಸಿರುವ ಈ ಕಾರ್ಯವು ಪ್ರಪಂಚದಲ್ಲಿ ಇಂದಿನ ನಡೆ-ನುಡಿಗಳಿಗೂ ಮತ್ತು ವೇದ-ಶಾಸ್ತ್ರಗಳಿಗೂ ವಿರುದ್ಧವಾಗಿದೆ. ಅದರಲ್ಲಿಯೂ ಭೀಮನನ್ನು ಪರಿತ್ಯಾಗಮಾಡಲು ನೀನು ನಿಶ್ಚಯಿಸಿರುವುದು ಬಹಳ ದುಃಖ ಕರವಾಗಿರುವುದು. ಏಕೆಂದರೆ : ಅವನಿರುವುದರಿಂದಲೇ ನಾವೆಲ್ಲರೂ ರಾತ್ರಿ ಯಲ್ಲಿ ನಿರ್ಭಯವಾಗಿ ಮಲಗುತ್ತಿರುವೆವು. ಧೃತರಾಷ್ಟ್ರನ ಮಗನಾದ ದುಷ್ಟ ದುರ್ಯೋಧನನಿಂದ ಅಪಹೃತವಾಗಿರುವ ನಮ್ಮ ರಾಜ್ಯವನ್ನು ಭೀಮನ ಭುಜಬಲದ ಆಸರೆಯಿಂದಲೇ ಪಡೆಯಬಹುದೆಂಬ ಆಸೆಯನ್ನೂ ಹೊಂದಿರುವೆವು.

ಅಮ್ಮ! ಭೀಮನ ಅಸದೃಶಪರಾಕ್ರಮವನ್ನು ನೆನೆದು ಶಕುನಿ-ದುರ್ಯೋಧನರೂ ರಾತ್ರಿಯ ವೇಳೆಯಲ್ಲಿ ನಿಶ್ಚಿಂತೆಯಿಂದ ನಿದ್ರೆಯನ್ನೂ ಮಾಡುತ್ತಿಲ್ಲ. ಭೀಮನಿಂದಲ್ಲವೇ ನಾವೆಲ್ಲರೂ ಅರಗಿನ ಮನೆಯಿಂದ ಪಾರಾಗಿ ಬಂದಿರುವುದು? ಇನ್ನೂ ಅನೇಕವಿಧವಾದ ಕಷ್ಟಗಳಿಂದ ಭೀಮನು ನಮ್ಮನ್ನು ಪಾರುಮಾಡಿರುವನು. ಕಪಟಿಯಾದ ಪುರೋಚನನನ್ನು ಯಮ ಲೋಕಕ್ಕೆ ಕಳುಹಿಸಿದ ಇವನೇ ಧೃತರಾಷ್ಟ್ರನ ಮಕ್ಕಳನ್ನೂ ಕೊಂದು ಅಷ್ಟೈಶ್ವರ್ಯಗಳಿಂದ ಕೂಡಿರುವ ಈ ಪೃಥ್ವಿಯು ನಮ್ಮ ಸ್ವಾಧೀನವಾಗು ವಂತೆ ಮಾಡುವನೆಂಬ ಭರವಸೆಯನ್ನು ನಾವೀಗಾಗಲೇ ಇಟ್ಟುಕೊಂಡಿರು ವೆವು. ಹೀಗಿರುವಾಗ ಇವನನ್ನೇ ಪರಿತ್ಯಾಗಮಾಡಲು ನಿಶ್ಚಯಿಸಿಬಿಟ್ಟೆಯಾ? ನಿನಗೆ ವಿವೇಚನಾಶಕ್ತಿಯೇ ಹೊರಟುಹೋಯಿತೇ? ಅನೇಕ ಕಷ್ಟಪರಂಪರೆ ಗಳನ್ನು ಅನುಭವಿಸಿ ನಿನ್ನ ಬುದ್ಧಿಯು ಮಂಕಾಗಿಬಿಟ್ಟಿರುವುದೇನಮ್ಮಾ?"

ಮಹಾಮಾತೆಯಾದ ಕುಂತಿಯು ಯುಧಿಷ್ಠಿರನ ಮಾತುಗಳನ್ನು ಕೇಳಿ ನಸುನಕ್ಕು ಸಮಾಧಾನದಿಂದಲೇ ಹೇಳಿದಳು :

"ಮಗು! ನೀನು ವೃಕೋದರನ ವಿಷಯವಾಗಿ ಪರಿತಾಪಪಡಬೇಕಾದ ಕಾರಣವಿಲ್ಲ. ನಾನಾದರೂ ವಿವೇಕಶೂನ್ಯಳಾಗಿ ಬುದ್ಧಿಹೀನೆಯಾಗಿರುವುದಿಲ್ಲ. ಈ ಬ್ರಾಹ್ಮಣನ ಮನೆಗೆ ನಾವು ಬಂದ ಮೇಲೆ ನಮ್ಮ ಅನೇಕಕಷ್ಟಗಳು ಪರಿಹಾರವಾಗಿವೆ ಮತ್ತು ಈ ಬ್ರಾಹ್ಮಣನು ನಮ್ಮನ್ನು ಬಹಳ ಮರ್ಯಾದೆ ಯಿಂದಲೂ ಕಾಣುತ್ತಿದ್ದಾನೆ. ದುಷ್ಟದುರ್ಯೋಧನನಿಗೂ ನಾವಿಲ್ಲಿರು ವುದನ್ನು ತಿಳಿಯಲು ಸಾಧ್ಯವಾಗಿಲ್ಲ. ಆದುದರಿಂದ ಈ ಬ್ರಾಹ್ಮಣನಿಗೆ ಪ್ರತ್ಯುಪಕಾರವನ್ನು ಮಾಡಲು ನಾನೀ ಕಾರ್ಯವನ್ನು ಒಪ್ಪಿಕೊಂಡೆನು.

**ಏತಾವಾನೇವ ಪುರುಷಃ ಕೃತಂ ಯಸ್ಮಿನ್ನ ನಶ್ಯತಿ ।**
**ಯಾವಚ್ಚ ಕುರ್ಯಾದನ್ಯೋಽಸ್ಯ ಕುರ್ಯಾದ್ಬಹುಗುಣಂ ತತಃ ॥೧೪॥**

ಯಾವನ ವಿಷಯದಲ್ಲಿ ಮಾಡಿದ ಉಪಕಾರವು ವ್ಯರ್ಥವೆನಿಸುವು ದಿಲ್ಲವೋ–ಅವನೇ ಮಾನವನೆನಿಸುವನು. ಉಪಕಾರಮಾಡಿದವನಿಗೆ ಅವನು ಮಾಡಿದುದಕ್ಕಿಂತಲೂ ಬಹುಪಾಲು ಹೆಚ್ಚಾದ ಪ್ರತ್ಯುಪಕಾರವನ್ನು ಮಾಡು ವುದು ಕರ್ತವ್ಯವೂ ಆಗಿರುತ್ತದೆ.

ಯುಧಿಷ್ಠಿರ! ಭೀಮನ ಪರಾಕ್ರಮವನ್ನು ತಿಳಿದೂ ನೀನೇಕೆ ಭ್ರಾಂತ ನಾಗಿರುವೆ? ಅರಗಿನ ಮನೆಯಿಂದ ಪಾರುಮಾಡಿದ ಮತ್ತು ಹಿಡಿಂಬನನ್ನು ಸಂಹರಿಸಿದ ಭೀಮನ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ನೋಡಿದನಂತರವೇ ನನಗೆ ಭೀಮನ ಪರಾಕ್ರಮದ ವಿಷಯದಲ್ಲಿ ಹೆಚ್ಚು ನಂಬಿಕೆಯುಂಟಾಯಿತು. ಭೀಮನ ಬಾಹುಶಕ್ತಿಯು ಹತ್ತು ಸಾವಿರ ಆನೆಗಳ ಶಕ್ತಿಗೆ ಸಾಟಿಯಾಗಿರುವು ದೆಂಬುದನ್ನು ನೀನರಿಯೆಯಾ? ಈ ಕಾರಣದಿಂದಲೇ ಒಂದೊಂದು ಆನೆಯ ಸಮತೂಕವಿರುವ ನಿಮ್ಮೆಲ್ಲರನ್ನೂ ಅರಗಿನ ಮನೆಯಿಂದ ಹೊರಕ್ಕೆ ಎತ್ತಿ ಕೊಂಡುಬರಲು ಇವನಿಗೆ ಸಾಧ್ಯವಾಯಿತು. ಪ್ರಪಂಚದಲ್ಲಿಯೇ ಇವನಿಗೆ ಸಮಾನರಾದ ಬಲಶಾಲಿಗಳು ಬೇರೊಬ್ಬರಿಲ್ಲ, ಯುಧಿಷ್ಠಿರ! ಇವನು ಮಹಾಪರಾಕ್ರಮಿಗಳನ್ನಾದರೂ ಸೋಲಿಸಿಬಿಡುವನು. ಇಂದ್ರನನ್ನು ಕೂಡ ಪರಾಜಯಗೊಳಿಸುವ ಪರಾಕ್ರಮವು ನನ್ನ ಮಗನಿಗಿರುವುದು. ಅಂದು ನಾನು ಕಂಡ ವೈಚಿತ್ರ್ಯವನ್ನು ಏನೆಂದು ಹೇಳಲಿ, ಮಗು! ಹುಟ್ಟಿದ ಮಗುವನ್ನು ನನ್ನ ತೊಡೆಯ ಮೇಲೆ ಮಲಗಿಸಿಕೊಂಡಿದ್ದೆನು. ಆಕಸ್ಮಿಕ

ವಾಗಿ ಮಗುವು ತೊಡೆಯಿಂದ ಜಾರಿ ಪರ್ವತದ ತಪ್ಪಲಿನಲ್ಲಿ ಬಿದ್ದಿತು. ಅಷ್ಟು ಮೇಲಿಂದ ಕಲ್ಲುಬಂಡೆಯ ಮೇಲೆ ಬಿದ್ದರೂ ಮಗುವು ನಗುತ್ತಲೇ ಇದ್ದಿತು. ಕಲ್ಲುಬಂಡೆಯು ಮಾತ್ರ ಪುಡಿ-ಪುಡಿಯಾಗಿಹೋಗಿತ್ತು. ಅಂದೇ ನಾನು–ಭೀಮನು ಮಹಾಪರಾಕ್ರಮಿಯೆಂಬುದನ್ನು ತಿಳಿದೆನು. ಈ ಕಾರಣದಿಂದಲೇ ನಾನಿವನನ್ನು ಇಂದು ಬ್ರಾಹ್ಮಣನ ಶತ್ರುವಿಗೆ ಎದುರಾಗಿ ಕಳುಹಿಸಲು ನಿಶ್ಚಯಿಸಿರುವೆನು. ಲೋಭದಿಂದಾಗಲೀ, ಅಜ್ಞಾನದಿಂದಾಗಲೀ ಅಥವಾ ಮೋಹದಿಂದಾಗಲೀ ನಾನೀ ಕಾರ್ಯವನ್ನು ಮಾಡುತ್ತಿಲ್ಲ, ಮಗು! ಬುದ್ಧಿಪೂರ್ವಕವಾಗಿಯೇ ಧರ್ಮರಕ್ಷಣೆಗಾಗಿ ಈ ಕಾರ್ಯವನ್ನು ಭೀಮನಿಂದ ಮಾಡಿಸಲು ನಿಶ್ಚಯಿಸಿರುವೆನು. ಯುಧಿಷ್ಠಿರ! ಈ ಕಾರ್ಯದಿಂದ ಎರಡು ವಿಧವಾದ ಪ್ರಯೋಜನಗಳನ್ನು ಹೊಂದುವೆವು. ಉಪಕಾರವನ್ನೆಸಗಿರುವ ಬ್ರಾಹ್ಮಣನಿಗೆ ಪ್ರತ್ಯುಪಕಾರವನ್ನು ಮಾಡುವುದು ಒಂದು. ಈ ನಗರಿಗೆ ಕಂಟಕಪ್ರಾಯನಾಗಿರುವ ರಾಕ್ಷಸನ ಸಂಹಾರದಿಂದ ಧರ್ಮರಕ್ಷಣೆಯಾಗುವುದು ಮತ್ತೊಂದು.

**ಯೋ ಬ್ರಾಹ್ಮಣಸ್ಯ ಸಾಹಾಯ್ಯಂ ಕುರ್ಯಾದರ್ಥೇಷು ಕರ್ಹಿಚಿತ್ ।**
**ಕ್ಷತ್ರಿಯಃ ಸ ಶುಭಾಲ್ಲೋಕಾನಾಪ್ನುಯಾದಿತಿ ಮೇ ಮತಿಃ ॥೨೨॥**

**ಕ್ಷತ್ರಿಯಸ್ಯೈವ ಕುರ್ವಾಣಃ ಕ್ಷತ್ರಿಯೋ ವಧಮೋಕ್ಷಣಮ್ ।**
**ವಿಪುಲಾಂ ಕೀರ್ತಿಮಾಪ್ನೋತಿ ಲೋಕೇಽಸ್ಮಿಂಶ್ಚ ಪರತ್ರ ಚ ॥೨೩॥**

**ವೈಶ್ಯಸ್ಯಾರ್ಥೇ ಚ ಸಾಹಾಯ್ಯಂ ಕುರ್ವಾಣಃ ಕ್ಷತ್ರಿಯೋ ಭುವಿ ।**
**ಸ ಸರ್ವೇಷ್ವಪಿ ಲೋಕೇಷು ಪ್ರಜಾ ರಞ್ಜಯತೇ ಧ್ರುವಮ್ ॥೨೪॥**

**ಶೂದ್ರಂ ತು ಮೋಚಯೇದ್ರಾಜಾ ಶರಣಾರ್ಥಿನಮಾಗತಮ್ ।**
**ಪ್ರಾಪ್ನೋತೀಹ ಕುಲೇ ಜನ್ಮ ಸದ್ದ್ರವ್ಯೇ ರಾಜಪೂಜಿತೇ ॥೨೫॥**

ಕ್ಷತ್ರಿಯನಾದವನು ಬ್ರಾಹ್ಮಣನಿಗೆ ಯಾವುದಾದರೊಂದು ರೀತಿಯಲ್ಲಿ ಸಹಾಯಮಾಡಿದರೆ ಪುಣ್ಯಲೋಕಗಳನ್ನು ಹೊಂದುತ್ತಾನೆ. ಕ್ಷತ್ರಿಯನು ಮತ್ತೊಬ್ಬ ಕ್ಷತ್ರಿಯನಿಗೆ ಪ್ರಾಣರಕ್ಷಣೆಯಲ್ಲಿ ಸಹಾಯಮಾಡುವುದರಿಂದ ಶಾಶ್ವತವಾದ ಕೀರ್ತಿಯನ್ನೂ, ವೈಶ್ಯನಿಗೆ ಸಹಾಯಮಾಡುವುದರಿಂದ ಲೋಕಪ್ರಸಿದ್ಧಿಯನ್ನೂ ಹೊಂದುವನು. ಶರಣಾಗತನಾಗಿ ಬಂದ ಶೂದ್ರ

ನನ್ನು ಕ್ಷತ್ರಿಯನು ಸಂರಕ್ಷಿಸಲೇಬೇಕು. ಅದರಿಂದ ಅವನು ರಾಜರಿಂದಲೂ ಗೌರವಿಸಲ್ಪಡುವ, ಧನ-ಧಾನ್ಯಸಮೃದ್ಧವಾದ ಸದ್ವಂಶದಲ್ಲಿ ಜನ್ಮತಾಳುವನು. ಈ ವಿಷಯವನ್ನು ನನಗೆ ಮಹರ್ಷಿಗಳಾದ ವ್ಯಾಸರೇ ತಿಳಿಸಿರುವರು. ಯುಧಿಷ್ಠಿರ! ಆದುದರಿಂದಲೇ ನಾನಿಂದು ಬ್ರಾಹ್ಮಣನಿಗೆ ಪ್ರತ್ಯುಪಕಾರವನ್ನು ಮಾಡಲು ನಿಶ್ಚಯಿಸಿ, ಈ ಕಾರ್ಯಕ್ಕೆ ಭೀಮಸೇನನನ್ನೇ ನಿಯೋಜಿಸಿರುವೆನು."

೧೬೨ನೆಯ ಅಧ್ಯಾಯವು ಮುಗಿಯಿತು.

೧೬೩ನೆಯ ಅಧ್ಯಾಯ ಬಕವಧಪರ್ವ (ಮುಂದುವರಿದಿದೆ.)

## ಭೀಮನು ಬಕಾಸುರನ ಬಳಿಗೆ ಭೋಜನಸಾಮಗ್ರಿಗಳನ್ನು ತೆಗೆದುಕೊಂಡು ಹೋದುದು : ಭೀಮ-ಬಕಾಸುರರ ಯುದ್ಧ: ಬಕಾಸುರನ ಮರಣ

ಜನಮೇಜಯ! ತಾಯಿಯ ಮಾತನ್ನು ಕೇಳಿ ಯುಧಿಷ್ಠಿರನಿಗೆ ಕುಂತಿಯ ನಿರ್ಧಾರವು 'ಸರಿ' ಎನ್ನಿಸಿತು. ಭೀಮಸೇನನು ಬಕನಿಗೆ ಬಲಿಯಾಗಿ ಬಿಡುವನೆಂಬ ಭ್ರಾಂತಿಯೂ ಹೋಯಿತು. ಅಂತೆಯೇ ತಾಯಿಗೆ ಹೇಳಿದನು:

**ಉಪಪನ್ನಮಿದಂ ಮಾತಸ್ತ್ವಯಾ ಯದ್ಬುದ್ಧಿಪೂರ್ವಕಮ್ ।**
**ಆರ್ತಸ್ಯ ಬ್ರಾಹ್ಮಣಸ್ಯೈತದನುಕ್ರೋಶಾದಿದಂ ಕೃತಮ್ ॥೧॥**

"ತಾಯೇ! ಕರುಣೆಯಿಂದ ಬುದ್ಧಿಪೂರ್ವಕವಾಗಿಯೇ ಬ್ರಾಹ್ಮಣನ ಕಷ್ಟವನ್ನು ನಿವಾರಿಸಲು ನಿಶ್ಚಯಿಸಿರುವುದು ನಿನಗೆ ಯುಕ್ತವಾಗಿಯೇ ಇದೆ. ಬ್ರಾಹ್ಮಣನ ಸಲುವಾಗಿ ನೀನಿಷ್ಟು ದಯಾಪರಳಾಗಿರುವುದರಿಂದ ನೀನು ಯೋಚಿಸಿರುವಂತೆಯೇ ಭೀಮಸೇನನು ನಿಶ್ಚಯವಾಗಿಯೂ ಬಕಾಸುರನನ್ನು ಕೊಂದು, ವಿಜಯಿಯಾಗಿ ಬರುವುದರಲ್ಲಿ ಸಂಶಯವೇ ಇಲ್ಲವಮ್ಮಾ! ಆದರೆ ಇದೊಂದು ವಿಷಯವನ್ನು ಮಾತ್ರ ಬ್ರಾಹ್ಮಣನಿಗೆ ಹೇಳಬೇಕು. ಬಕಾಸುರನನ್ನು ಕೊಂದವರಾರೆಂಬ ಸುಳಿವು ಈ ಪಟ್ಟಣದಲ್ಲಿರುವ ನಾಗರಿಕರಾರಿಗೂ ತಿಳಿಯಬಾರದು. ಇದನ್ನು ಯಾರಲ್ಲಿಯೂ ತಿಳಿಸುವುದಿಲ್ಲವೆಂಬ ಅಭಿವಚನವನ್ನು ನಾವು ಬ್ರಾಹ್ಮಣನಿಂದ ತೆಗೆದುಕೊಳ್ಳಬೇಕು."

ಪೂರ್ವಾಪರವಿವೇಚನೆಯುಳ್ಳ ಕುಂತಿಯೂ ಈ ವಿಷಯವನ್ನು ಮೊದಲೇ ಬ್ರಾಹ್ಮಣನಿಗೆ ಹೇಳಿದ್ದಳು.

ರಾತ್ರಿಯು ಕಳೆಯಿತು. ಭೀಮಸೇನನು ರಾಕ್ಷಸನಿಗಾಗಿ ಸಿದ್ಧಪಡಿಸಿದ್ದ ಆಹಾರದ ಬಂಡಿಯನ್ನು ಹೊಡೆದುಕೊಂಡು ರಾಕ್ಷಸನಿದ್ದೆಡೆಗೆ ಹೊರಟನು. ಆ ಮಹಾರಣ್ಯದಲ್ಲಿ ರಾಕ್ಷಸನ ನಿವಾಸಕ್ಕೆ ಎದುರಾಗಿ ಬಂಡಿಯನ್ನು ನಿಲ್ಲಿಸಿದನು. 'ಬಕಾಸುರ! ಓಡಿ ಬಾ!'–ಎಂದು ಹೆಸರು ಹಿಡಿದು ಕೂಗುತ್ತಾ ರಾಕ್ಷಸನಿಗಾಗಿ ತಂದಿದ್ದ ಅನ್ನದ ರಾಶಿಯನ್ನು ತಿನ್ನಲು ಮೊದಲುಮಾಡಿದನು.

ರಾಕ್ಷಸನನ್ನು ನಾಮನಿರ್ದೇಶನದಿಂದ ಕರೆದ ಮಹಾನುಭಾವರು ಅದುವರೆಗೆ ಯಾರೂ ಇರಲಿಲ್ಲ. ಬಕಾಸುರನಿಗದು ಹೊಸ ಅನುಭವ. ಭೀಮನ ಕೂಗನ್ನು ಕೇಳಿ ರಾಕ್ಷಸನಿಗೆ ಕೋಪಾವೇಶವುಂಟಾಯಿತು. ಒಡನೆಯೇ ತನ್ನ ನಿವಾಸವನ್ನು ಬಿಟ್ಟು ಭೀಮನಿದ್ದೆಡೆಗೆ ಧಾವಿಸಿದನು. ಮಹಾಕಾಯನಾದ, ಲೋಹಿತಾಕ್ಷನಾದ, ಕೆಂಪಾದ ಕೇಶ-ಶ್ಮಶ್ರುಗಳಿಂದ ಕೂಡಿದ್ದ, ಭಯಂಕರನಾದ ರಾಕ್ಷಸನು ಕೋಪಾವೇಶದಿಂದ ಭೂಮಿಯನ್ನೇ ಸೀಳಿಬಿಡುವನೋ ಎಂಬ ಭ್ರಾಂತಿಯನ್ನುಂಟುಮಾಡುವವನಾಗಿದ್ದನು. ಅವನ ಬಾಯಿಯೂ ಮತ್ತು ಎರಡು ಕಿವಿಗಳೂ ಸೇರಿದಂತೆಯೇ ಇದ್ದುವು. ಅವನ ಹುಬ್ಬುಗಳ ಮೇಲ್ಭಾಗದಲ್ಲಿ ಮೂರು ಗೆರೆಗಳು ಮೂಡಿದ್ದುವು. ರಾಕ್ಷಸನೇ ಎದುರಾಗಿ ಬಂದು ನಿಂತಿದ್ದರೂ ಭೀಮಸೇನನು ತಲೆಯನ್ನು ಮೇಲಕ್ಕೆ ಎತ್ತಲೇ ಇಲ್ಲ. ರಾಕ್ಷಸನಿಗಾಗಿ ತಂದಿದ್ದ ಆಹಾರವನ್ನೆಲ್ಲಾ ಒಂದೊಂದನ್ನಾಗಿ ಮುಗಿಸುತ್ತಿದ್ದನು. ಕನಸು-ನನಸುಗಳಲ್ಲಿಯೂ ಯೋಚಿಸದಂತಹ ದೃಶ್ಯವನ್ನು ರಾಕ್ಷಸನು ನೋಡಿದಾಗ–ಅವನಿಗುಂಟಾದ ಕೋಪದ ಆವೇಗವನ್ನು ವರ್ಣಿಸಲು ಸಾಧ್ಯವಾಗುವುದೇ? ಕೋಪದಿಂದ ಕಟ-ಕಟನೆ ಕಡಿದ ರಾಕ್ಷಸನ ಹಲ್ಲುಗಳ ಶಬ್ದವು ಗುಡುಗಿನಂತೆಯೇ ಅರಣ್ಯದ ಸುತ್ತಲೂ ಪ್ರತಿಧ್ವನಿತವಾಯಿತು. ಮೊದಲೇ ಅಗಲವಾಗಿದ್ದ ಕಣ್ಣುಗಳನ್ನು ಮತ್ತಷ್ಟು ಹಿಗ್ಗಿಸಿ ಮುಷ್ಟಿಯನ್ನು ಬಿಗಿಯಾಗಿ ಹಿಡಿದು, ಭೀಮನನ್ನು ಕುರಿತು ಹೇಳಿದನು : "ಯಮಾಲಯಕ್ಕೆ ಹೋಗಲಿಚ್ಛಿಸಿ ಬಂದಿರುವ ಈ ಮಂದಬುದ್ಧಿಯು ಯಾರು? ನನ್ನ ಎದುರಿನಲ್ಲಿಯೇ ನನಗಾಗಿ ತಂದಿರುವ ಆಹಾರವನ್ನು ತಿನ್ನುತ್ತಿರುವನಲ್ಲಾ! ಆಹಾ! ಓ ಮೂಢ!"

ರಾಕ್ಷಸನ ಗರ್ಜನೆಯು ಸಿಡಿಲಿನಂತೆಯೇ ಇದ್ದಿತು. ಅಲ್ಲಿದ್ದ ಪ್ರಾಣಿಗಳೆಲ್ಲವೂ ರಾಕ್ಷಸನ ಗರ್ಜನೆಯನ್ನು ಕೇಳಿ ಓಡುತ್ತಿದ್ದುವು. ಆದರೆ ರಾಕ್ಷಸನ ಮುಂದೆಯೇ ಆಹಾರವನ್ನು ತಿನ್ನುತ್ತಾ ಕುಳಿತಿದ್ದ ಭೀಮನು ರಾಕ್ಷಸನ ಗರ್ಜನೆಯನ್ನು ಲಕ್ಷಿಸಿದಂತೆಯೇ ಕಾಣಲಿಲ್ಲ. ಓರೆಗಣ್ಣಿನಿಂದ ಒಮ್ಮೆ ರಾಕ್ಷಸನನ್ನು ನೋಡಿ ನಸುನಕ್ಕು, ತನ್ನ ಕಾರ್ಯವನ್ನು ಮುಂದುವರಿಸಿದನು. ಆ ಸಂದರ್ಭದಲ್ಲಿ ರಾಕ್ಷಸನಿಗುಂಟಾದ ಕೋಪಕ್ಕೆ ಮಿತಿಯೇ ಇರಲಿಲ್ಲ. ಭಯಂಕರವಾಗಿ ಗರ್ಜನೆಮಾಡುತ್ತಾ, ಎರಡು ತೋಳುಗಳನ್ನೂ ಮೇಲೆತ್ತಿಕೊಂಡು ಭೀಮನನ್ನು ಒಂದೇ ಹೊಡೆತದಿಂದಲೇ ಮುಗಿಸಿಬಿಡಬೇಕೆಂದು ಅವನ ಸಮೀಪಕ್ಕೆ ಹಾರಿದನು. ಆಗಲೂ ಭೀಮನು ಮೃಷ್ಟಾನ್ನಭೋಜನವನ್ನು ಬಿಟ್ಟು ಮೇಲೇಳಲಿಲ್ಲ. ಹತ್ತಿರದಲ್ಲಿಯೇ ಪರ್ವತೋಪಮನಾಗಿ ನಿಂತಿದ್ದ ರಾಕ್ಷಸನನ್ನು ಪುನಃ ಓರೆಗಣ್ಣಿನಿಂದೊಮ್ಮೆ ನೋಡಿ ಬಂಡಿಯಲ್ಲಿದ್ದ ಆಹಾರವನ್ನೆಲ್ಲಾ ಮುಗಿಸಿಯೇಬಿಡಬೇಕೆಂಬ ನಿಶ್ಚಯದಿಂದ ಕುಳಿತಿರುವನೋ–ಎಂಬಂತೆ ನಿರ್ಭಯನಾಗಿ ನಿಶ್ಚಲನಾಗಿ ಊಟಮಾಡುತ್ತಲೇ ಇದ್ದನು.

ಅಂತಹ ಅಪಮಾನವನ್ನು ರಾಕ್ಷಸನು ಸಹಿಸಿಯಾನೇ? ತನ್ನೆರಡು ಕೈಗಳನ್ನೂ ಮೇಲಕ್ಕೆತ್ತಿ ಭೀಮನ ಬೆನ್ನಿನ ಮೇಲೆ ರಭಸದಿಂದ ಗುದ್ದಿದನು. ಆ ಹೊಡೆತದಿಂದ ಭೀಮಸೇನನು ಯಮಾಲಯಕ್ಕೆ ಹೋಗಿಬಿಟ್ಟಿರುವನೆಂದು ರಾಕ್ಷಸನ ಭ್ರಾಂತಿಯಾಗಿತ್ತು. ಆದರೆ ಭೀಮಸೇನನಿಗೆ ರಾಕ್ಷಸನು ಗುದ್ದಿದ ಅರಿವು ಉಂಟಾಯಿತೋ ಇಲ್ಲವೋ ತಿಳಿಯದು. ಏಕೆಂದರೆ : ಅಂತಹ ಬಲವಾದ ಏಟುಬಿದ್ದರೂ ಭೀಮನ ಬಾಯಿಗೆ ನುಸುಳುತ್ತಿದ್ದ ಒಂದು ತುತ್ತೂ ಹಿಂಚು-ಮುಂಚಾಗಲಿಲ್ಲ. ಭೋಜನವು ಯಥಾರೀತಿಯಾಗಿಯೇ ಸಾಗುತ್ತಿತ್ತು. ರಾಕ್ಷಸನಿಗೆ ಮುಂದೇನು ಮಾಡಬೇಕೆಂಬುದೇ ತೋರಲಿಲ್ಲ. ಸಮೀಪದಲ್ಲಿಯೇ ಇದ್ದ ಮಹಾವೃಕ್ಷವೊಂದನ್ನು ಕಿತ್ತು, ಭೀಮನನ್ನು ಅಪ್ಪಳಿಸಿಬಿಡಬೇಕೆಂದು ಮುಂದೆಬಂದನು. ಅಷ್ಟರೊಳಗಾಗಿ ಭೀಮಸೇನನು ತಂದಿದ್ದ ಅನ್ನವನ್ನೆಲ್ಲಾ ಮುಗಿಸಿ, ನೀರನ್ನು ಕುಡಿದು, ಕೈತೊಳೆದು ಮಂದಹಾಸವನ್ನು ಬೀರುತ್ತಾ, ಬಕನಿಗೆ ಎದುರಾಗಿ ನಿಂತು ಯುದ್ಧಕ್ಕೆ ಸಿದ್ಧನಾದನು. ರಾಕ್ಷಸನನ್ನು ಅಪಹಾಸ್ಯಮಾಡುತ್ತಾ, ಅವನು ತಂದಿದ್ದ ಮಹಾವೃಕ್ಷವನ್ನು ಎಡಗೈಯಿಂದಲೇ ಕಿತ್ತುಕೊಂಡನು. ಅದರಿಂದ ಹೆಚ್ಚು ಕುಪಿತನಾದ ರಾಕ್ಷಸನು

ಇನ್ನೂ ಹಲವಾರು ವೃಕ್ಷಗಳನ್ನು ಕಿತ್ತು ಭೀಮಸೇನನೆಡೆಗೆ ರಭಸದಿಂದ ಎಸೆದನು. ಭೀಮಸೇನನು ಅದೇ ವೃಕ್ಷಗಳಿಂದಲೇ ದ್ವಿಗುಣಿತವೇಗದಿಂದ ರಾಕ್ಷಸನಿಗೆ ಗುರಿಯಿಟ್ಟು ಹೊಡೆಯುತ್ತಿದ್ದನು. ನರ-ರಾಕ್ಷಸರಿಗೆ ನಡೆದ ವೃಕ್ಷಯುದ್ಧದ ಕಾರಣದಿಂದ ಕೆಲವು ನಿಮಿಷಗಳಲ್ಲಿಯೇ ಆ ಮಹಾರಣ್ಯವು ವೃಕ್ಷರಹಿತವಾಯಿತು. ರಾಕ್ಷಸನಿಗೆ ಮುಂದೆ ಕೀಳಲು ಮರಗಳೇ ಸಿಕ್ಕಲಿಲ್ಲ. ಬಕಾಸುರನು– "ನರಾಧಮನೇ! ನಾನಾರೆಂದು ತಿಳಿದಿರುವೆ? ನಾನು ಬಕಾಸುರನೆಂಬುದು ನಿನಗಿನ್ನೂ ತಿಳಿಯದೇ?" –ಎಂದು ಗರ್ಜನೆಮಾಡುತ್ತಾ ವೇಗದಿಂದ ಭೀಮನನ್ನು ಬಾಚಿ ತಬ್ಬಿದನು. ಮಹಾಪರಾಕ್ರಮಿಯಾದ ಭೀಮನು ರಾಕ್ಷಸನನ್ನು ಪ್ರತಿಯಾಗಿ ತಬ್ಬಿಕೊಂಡು ಅತ್ತಲಿತ್ತ ಎಳೆದಾಡಿದನು. ಭೀಮನನ್ನೂ ಎಳೆದಾಡಿ ಮತ್ತು ಭೀಮನಿಂದಲೂ ಎಳೆದಾಡಲ್ಪಟ್ಟವನಾಗಿ ರಾಕ್ಷಸನು ಬಹಳ ಆಯಾಸಗೊಂಡನು. ಇಬ್ಬರ ಎಳೆದಾಡುವಿಕೆಯಿಂದ ಭೂಮಿಯೇ ತತ್ತರಿಸಿತು. ಅಲ್ಲಿಯೇ ಬುಡಮೇಲಾಗಿ ಬಿದ್ದಿದ್ದ ಮಹಾವೃಕ್ಷಗಳೂ ಚೂರ್ಣಿತವಾದುವು. ಭೀಮಸೇನನು ಆಯಾಸಗೊಂಡಿದ್ದ ರಾಕ್ಷಸನನ್ನು ಭೂಮಿಯಲ್ಲಿ ಕೆಡವಿಕೊಂಡು ಮರ್ದಿಸಿ ಎರಡು ಮಂಡಿಗಳಿಂದಲೂ ರಾಕ್ಷಸನನ್ನು ಬಲವಾಗಿ ಪ್ರಹರಿಸಿದನು. ಪ್ರಾಣಬಿಡಲಾಗದ ಸಂಕಟದಿಂದ ಒದ್ದಾಡುತ್ತಿದ್ದ ರಾಕ್ಷಸನನ್ನು ಹಿಂದು-ಮುಂದಾಗಿ ಹಾಕಿ, ಅವನ ಬೆನ್ನಿನ ಮೇಲೆ ಮಂಡಿಯನ್ನೂರಿಕೊಂಡು, ಬಲಗೈಯಿಂದ ಕತ್ತನ್ನೂ–ಎಡಗೈಯಿಂದ ರಾಕ್ಷಸನುಟ್ಟಿದ್ದ ಬಟ್ಟೆಯನ್ನೂ ಹಿಡಿದು ಬಲವಾಗಿ ಬಗ್ಗಿಸಿದನು. ಭೀಮನು ಹೀಗೆ ಘೋರರಾಕ್ಷಸನ ಶರೀರವನ್ನು ಭಗ್ನಗೊಳಿಸುತ್ತಲೇ ರಾಕ್ಷಸನ ಬಾಯಿಯಿಂದ ರಕ್ತಪ್ರವಾಹವೇ ಹೊರಬಂದಿತು.

೧೬೩ನೆಯ ಅಧ್ಯಾಯವು ಮುಗಿಯಿತು.

## ಬಕಾಸುರನ ವಧೆಯಿಂದ ನಗರವಾಸಿಗಳ ಸಂತೋಷ

ವೈಶಂಪಾಯನರು ಹೇಳುತ್ತಾರೆ :

**ತತಃ ಸ ಭಗ್ನಪಾರ್ಶ್ವಾಙ್ಗೋ ನದಿತ್ವಾ ಭೈರವಂ ರವಮ್ ।**
**ಶೈಲರಾಜಪ್ರತೀಕಾಶೋ ಗತಾಸುರಭವದ್ಬಕಃ ॥೧॥**

ಜನಮೇಜಯ! ಮುರಿದುಹೋದ ಪಕ್ಕೆಲುಬುಗಳುಳ್ಳವನಾಗಿದ್ದ, ಪರ್ವತೋಪಮನಾಗಿದ್ದ ಬಕಾಸುರನು ಗಟ್ಟಿಯಾಗಿ ಚೀತ್ಕಾರಮಾಡುತ್ತಾ ಪ್ರಾಣತೊರೆದನು.

ಆ ಭೈರವಸ್ವನವನ್ನು ಕೇಳಿದ ಬಕಾಸುರನ ಬಂಧು-ದಾಯಾದರೆಲ್ಲರೂ ತಮ್ಮ ಪರಿಚಾರಕರೊಡನೆ ಭೀಮನಿದ್ದೆಡೆಗೆ ಓಡಿಬಂದರು. ತಮ್ಮ ರಾಜನಾದ ಬಕಾಸುರನು ಪರ್ವತದಂತೆ ಸತ್ತುಬಿದ್ದಿರುವುದನ್ನು ನೋಡಿ ಎಲ್ಲರೂ ಭೀತರಾದರು. ಭೀಮನಿಂದ ತಮ್ಮ ಅವಸಾನವೂ ಆಗಿಬಿಡಬಹುದೆಂದು ಅನೇಕ ರಾಕ್ಷಸರು ನಡುಗಿದರು. ಭೀಮನು ಭಯದಿಂದ ವಿಹ್ವಲರಾಗಿದ್ದ ರಾಕ್ಷಸರನ್ನು ಕುರಿತು ಹೇಳಿದನು : ಇನ್ನು ಮುಂದೆ ನೀವು ಮಾನವರನ್ನು ಕೊಲ್ಲಲೇಕೂಡದು. ನಿಮ್ಮಲ್ಲಾರಾದರೂ ಮಾನವರನ್ನು ಕೊಂದರೆ– ಅವರಿಗೂ ಈ ಬಕನಿಗಾದ ಗತಿಯೇ ಉಂಟಾದೀತು. "ಇನ್ನು ಮುಂದೆ ಮಾನವರನ್ನು ಕೊಲ್ಲುವುದಿಲ್ಲವೆಂದು ನನ್ನ ಮುಂದೆ ನೀವೆಲ್ಲರೂ ಪ್ರತಿಜ್ಞೆಮಾಡಿ ಇಲ್ಲಿಂದ ಹೋಗಬಹುದು."

ರಾಕ್ಷಸರೆಲ್ಲರೂ ಹಾಗೆಯೇ ಆಗಲೆಂದು ಹೇಳಿ, ಅವನು ಹೇಳಿದಂತೆಯೇ ಪ್ರತಿಜ್ಞೆಮಾಡಿ ಹೊರಟುಹೋದರು. ಅಂದಿನಿಂದ ಅವರು ಮಾನವರ ವಿಷಯದಲ್ಲಿ ಬಹಳ ಸೌಮ್ಯತೆಯಿಂದಲೇ ವರ್ತಿಸತೊಡಗಿದರು. ಬಕನ ಬಂಧು-ಮಿತ್ರರಲ್ಲಿ ಕೆಲವರು ಭೀಮನ ಪರಾಕ್ರಮವನ್ನು ತಿಳಿದು ಭೀತರಾಗಿ ಆ ಪ್ರದೇಶವನ್ನೇ ಬಿಟ್ಟು ಓಡಿಹೋದರು.

ಅನಂತರ ಭೀಮನು ರಾಕ್ಷಸನ ಹೆಣವನ್ನು ಎಳೆದು ತಂದು ನಗರದ ಮಹಾದ್ವಾರದಲ್ಲಿ ಹಾಕಿ ಯಾರಿಗೂ ತಿಳಿಯದಂತೆ ಮನೆಗೆ ಹಿಂದಿರುಗಿ ಬಂದನು.

ಮನೆಗೆ ಬಂದೊಡನೆಯೇ ಭೀಮನು ನಡೆದ ಸಂಗತಿಯೆಲ್ಲವನ್ನೂ ಯುಧಿಷ್ಠಿರನಿಗೆ ವಿವರವಾಗಿ ತಿಳಿಸಿದನು.

ಮರುದಿನ ಬೆಳಿಗ್ಗೆ ನಗರದ್ವಾರದ ಕಡೆಗೆ ಹೋದ ಪಟ್ಟಣಿಗರು ಪರ್ವತ ಶಿಖರದಂತೆ ರಕ್ತಸಿಕ್ತನಾಗಿ ಬಿದ್ದಿದ್ದ ಬಕಾಸುರನನ್ನು ಕಂಡು ಚಕಿತರಾದರು. ಪ್ರೇಕ್ಷಕರ ರೋಮಕೋಟಿಗಳು ರೋಮಾಂಚನದಿಂದ ನಿಮಿರಿನಿಂತುವು. ಕನಸಿನಲ್ಲಿಯೂ ನೆನೆಯಲಾಗದ ದೃಶ್ಯವು ಅದಾಗಿದ್ದಿತು. ಬಕಾಸುರನು ಸತ್ತುಬಿದ್ದಿರುವ ವಾರ್ತೆಯು ಕ್ಷಣಮಾತ್ರದಲ್ಲಿ ಏಕಚಕ್ರನಗರಿಯಲ್ಲಿದ್ದವರೆಲ್ಲ ರಿಗೂ ತಿಳಿಯಿತು. ಹೆಂಗಸರು, ಮಕ್ಕಳು, ಮುದುಕರು–ಎಲ್ಲರೂ ಸತ್ತು ಬಿದ್ದಿರುವ ಬಕಾಸುರನನ್ನು ನೋಡುವ ಕುತೂಹಲದಿಂದ ಊರಬಾಗಿಲಿಗೆ ಸಾಲು-ಸಾಲಾಗಿ ಬರತೊಡಗಿದರು. ಬಕನನ್ನು ಕೊಂದಿರುವ ಅತಿಮಾನುಷ ವಾದ ರೀತಿಯನ್ನು ಕಂಡು ಸಕಲರೂ ಆಶ್ಚರ್ಯಭರಿತರಾದರು. ಊರಿಗೇ ಮೃತ್ಯುಸ್ವರೂಪನಾಗಿದ್ದ ಬಕಾಸುರನ ಸಂಹಾರವಾದುದಕ್ಕಾಗಿ ಪಟ್ಟಣಿಗ ರೆಲ್ಲರೂ ತಮ್ಮ ಕುಲದೇವತೆಗಳಿಗೆ ಪೂಜಾದಿಗಳನ್ನು ಸಲ್ಲಿಸಿದರು.

ಸಂಹಾರಮಾಡಿದವನನ್ನು ತಿಳಿದುಕೊಳ್ಳುವ ಕುತೂಹಲದಿಂದ ಪಟ್ಟಣಿ ಗರು ಅಂದಿನ ಸರದಿಯು ಯಾರದೆಂಬುದನ್ನು ತಿಳಿದು, ಎಲ್ಲರೂ ಕೂಡಿ ಬ್ರಾಹ್ಮಣನ ಮನೆಗೆ ಹೋದರು. ರಾಕ್ಷಸನನ್ನು ಕೊಂದ ಮಹಾನುಭಾವ ನಾರೆಂಬ ವಿಷಯವನ್ನು ತಿಳಿಸಬೇಕೆಂದು ಬ್ರಾಹ್ಮಣನನ್ನು ಕೇಳಿದರು.

ಬ್ರಾಹ್ಮಣನು ತಾನು ಕುಂತಿಗಿತ್ತಿದ್ದ ಅಭಿವಚನದಂತೆ ನಡೆದ ವಿಷಯ ಗಳೆಲ್ಲವನ್ನೂ ವಿಶದವಾಗಿ ಹೇಳಲು ಇಚ್ಛಿಪಡಲಿಲ್ಲ. ಆದರೂ ಹೇಳದೇ ಸುಮ್ಮನಿರಲು ಕೂಡ ಸಾಧ್ಯವಾಗಲಿಲ್ಲ. ಬ್ರಾಹ್ಮಣನು ಪಟ್ಟಣಿಗರನ್ನು ಕುರಿತು ಹೇಳಿದನು : "ನಮಗೊದಗಿದ ಆಪತ್ತನ್ನು ಚಿಂತಿಸುತ್ತಾ ನಮ್ಮ ಮನೆಯಲ್ಲಿ ನಾವು ದುಃಖಿಸುತ್ತಾ ಕುಳಿತಿದ್ದೆವು. ಆ ಸಮಯಕ್ಕೆ ಸರಿಯಾಗಿ ಬ್ರಾಹ್ಮಣ ಸಿದ್ಧಪುರುಷನೊಬ್ಬನು ಮನೆಯೊಳಕ್ಕೆ ಬಂದು ನಮ್ಮ ದುಃಖಕ್ಕೆ ಕಾರಣವನ್ನೂ, ನಗರಕ್ಕೆ ಒದಗಿರುವ ಕಷ್ಟವನ್ನೂ–ಕೂಲಂಕಷವಾಗಿ ತಿಳಿದು ಕೊಂಡನು. ನಮ್ಮನ್ನು ಸಂತೈಸುತ್ತಾ ಹೀಗೆಂದು ಹೇಳಿದನು : 'ಬ್ರಾಹ್ಮಣ!

ನೀನು ದುಃಖಪಡುವ ಕಾರಣವಿಲ್ಲ. ಇಂದು ನಾನೇ ಆ ರಾಕ್ಷಸನಿಗೆ ಆಹಾರ ವನ್ನು ತೆಗೆದುಕೊಂಡು ಹೋಗುತ್ತೇನೆ. ನನಗಾಗಿ ನೀನು ಸ್ವಲ್ಪವೂ ಭಯ ಪಡಬೇಕಾಗಿಲ್ಲ' –ಎ ಂದು ಹೇಳಿ, ರಾಕ್ಷಸನಿಗಾಗಿ ಸಿದ್ಧಪಡಿಸಿದ್ದ ಅನ್ನದ ಬಂಡಿ ಯನ್ನು ತಾನೇ ಹೊಡೆದುಕೊಂಡು ಹೋದನು. ಈ ಲೋಕಕಲ್ಯಾಣ ಕಾರ್ಯವು ನಿಶ್ಚಯವಾಗಿಯೂ ಆ ಸಿದ್ಧಪುರುಷನಿಂದಲೇ ನಡೆದಿರಬೇಕು."

ಪಟ್ಟಣದಲ್ಲಿದ್ದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಲ್ಲರೂ ಬ್ರಾಹ್ಮಣನ ಮಾತನ್ನು ಕೇಳಿ ಆಶ್ಚರ್ಯಭರಿತರಾದರು ಹಾಗೂ ಸಂತುಷ್ಟರೂ ಆದರು. ಅಂದಿನಿಂದ ಆ ದಿನವನ್ನು ಬ್ರಾಹ್ಮಣಪೂಜಾದಿನವನ್ನಾಗಿ ಆಚರಿಸಲು ಮೊದಲಿಟ್ಟರು.

ಬಕಾಸುರನನ್ನು ಕೊಂದು ತಮ್ಮ ನಗರದ ಆಪತ್ತನ್ನು ನಿವಾರಿಸಿದ ಬ್ರಾಹ್ಮಣನ ಜ್ಞಾಪಕಾರ್ಥವಾಗಿ ನಡೆಸುತ್ತಿದ್ದ ಬ್ರಾಹ್ಮಣಪೂಜಾದಿನವೂ ಒಂದು ನಾಡಹಬ್ಬವಾಗಿಯೇ ಪರಿಣಮಿಸಿತು.

ಆ ಪರಮಾದ್ಭುತವನ್ನು ವೀಕ್ಷಿಸಲು ದೇಶದ ಹಲವು ಕಡೆಗಳಿಂದಲೂ ಏಕಚಕ್ರನಗರಿಗೆ ಜನರು ಆಗಮಿಸುತ್ತಿದ್ದರು. ಪಾಂಡವರು ಯಥಾಪೂರ್ವ ವಾಗಿ ಬ್ರಾಹ್ಮಣನ ಮನೆಯಲ್ಲಿ ವಾಸವಾಗಿದ್ದರು."

೧೬೪ನೆಯ ಅಧ್ಯಾಯವು ಮುಗಿಯಿತು.

೧೬೫ನೆಯ ಅಧ್ಯಾಯ ಚೈತ್ರರಥಪರ್ವ

## ಆಗಂತುಕನಾಗಿ ಬಂದಿದ್ದ ಬ್ರಾಹ್ಮಣನೊಬ್ಬನಿಂದ ವಿಚಿತ್ರಕಥಾಶ್ರವಣ

**ತೇ ತಥಾ ಪುರುಷವ್ಯಾಘ್ರಾ ನಿಹತ್ಯ ಬಕರಾಕ್ಷಸಮ್ ।**
**ಅತ ಊರ್ಧ್ವಂ ತತೋ ಬ್ರಹ್ಮನ್ಕಿಮಕುರ್ವತ ಪಾಣ್ಡವಾಃ ॥೧॥**

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ಬಕಾಸುರನನ್ನು ವಧಿಸಿದನಂತರ ಪುರುಷ ಶ್ರೇಷ್ಠರಾದ ಪಾಂಡವರು ಮುಂದೇನು ಮಾಡಿದರು? ಬಕಾಸುರನ ಸಂಹಾ ರವು ನಮಗೂ ರೋಮಾಂಚನವನ್ನೇ ಉಂಟುಮಾಡುವುದಾಗಿದೆ. ಪಾಂಡ

ವರ ಚರಿತ್ರೆಯನ್ನು ಪುನಃ ಪುನಃ ಕೇಳಬೇಕೆಂಬ ಕುತೂಹಲವೂ ನನಗೆ ಹೆಚ್ಚುತ್ತಿದೆ."

ಹೀಗೆ ಕೇಳಿದ ಜನಮೇಜಯನನ್ನು ಕುರಿತು ವೈಶಂಪಾಯನರು ಹೇಳ ತೊಡಗಿದರು :

"ಪಾರಿಕ್ಷಿತ! ಬಕಾಸುರನ ಸಂಹಾರವಾದನಂತರವೂ ಪಾಂಡವರು ಆ ಬ್ರಾಹ್ಮಣನ ಮನೆಯಲ್ಲಿಯೇ ವಾಸವಾಗಿದ್ದುಕೊಂಡು ಶಾಸ್ತ್ರೋಪನಿಷತ್ತು ಗಳನ್ನು ಅಧ್ಯಯನಮಾಡುತ್ತಿದ್ದರು.

ಕೆಲವು ದಿನಗಳು ಕಳೆದನಂತರ ನಿಷ್ಠಾವಂತನಾದ ಬ್ರಾಹ್ಮಣನೊಬ್ಬನು ಪಾಂಡವರು ವಾಸಿಸುತ್ತಿದ್ದ ಬ್ರಾಹ್ಮಣನ ಮನೆಗೆ ತಂಗಲು ಬಂದನು. ಅತಿಥಿಗಳ ವಿಷಯದಲ್ಲಿ ಬಹಳ ಆಸಕ್ತಿಯನ್ನು ಹೊಂದಿದ್ದ ಬ್ರಾಹ್ಮಣನು ಆಗಂತುಕನಾಗಿ ಬಂದ ಬ್ರಾಹ್ಮಣನನ್ನು ಸತ್ಕರಿಸಿ ತನ್ನ ಮನೆಯಲ್ಲಿಯೇ ಇರಲು ಸಕಲಸೌಕರ್ಯಗಳನ್ನೂ ಮಾಡಿಕೊಟ್ಟನು. ಹೊಸದಾಗಿ ಬಂದ ಬ್ರಾಹ್ಮಣನಿಗೂ ಮತ್ತು ಬ್ರಾಹ್ಮಣವೇಷಧಾರಿಗಳಾಗಿದ್ದ ಪಾಂಡವರಿಗೂ ಪರಸ್ಪರವಾಗಿ ವಿಶ್ವಾಸವು ಬೆಳೆಯಿತು. ವಿರಾಮಕಾಲದಲ್ಲಿ ಪಾಂಡವರು ಬ್ರಾಹ್ಮಣನಿಂದ ದೇಶ-ವಿದೇಶಗಳ ವಾರ್ತೆಗಳೆಲ್ಲವನ್ನೂ ಕೇಳಿ ತಿಳಿದುಕೊಳ್ಳುತ್ತಿದ್ದರು. ನದಿಗಳು, ತೀರ್ಥಗಳು, ಪರ್ವತಗಳು, ರಾಜರು, ದೇಶ-ಭಾಷೆ ಮತ್ತು ಜನಜೀವನ, ನಾನಾನಗರಿಗಳು, ದೇಶಗಳು–ಅವುಗಳ ರೂಪ-ರೇಖೆ ಗಳನ್ನೆಲ್ಲಾ ವಿವರವಾಗಿ ತಿಳಿಸಿದನಂತರ, ಆ ಬ್ರಾಹ್ಮಣನು ದ್ರೌಪದಿಯ ಸ್ವಯಂವರದ ವಾರ್ತೆಯನ್ನೂ, ಧೃಷ್ಟದ್ಯುಮ್ನ–ಶಿಖಂಡಿಗಳ ಜನ್ಮವೃತ್ತಾಂತ ವನ್ನೂ ಮತ್ತು ದ್ರೌಪದಿಯು ಯಜ್ಞಕುಂಡದಿಂದ ಹುಟ್ಟಿದವಳೆಂಬುದನ್ನೂ ಹೇಳಿದನು.

ದ್ರುಪದನನ್ನು ಸೋಲಿಸಿ ದ್ರೋಣರಿಗೆ ಗುರುದಕ್ಷಿಣೆಯನ್ನಿತ್ತಿದ್ದ ಪಾಂಡವರಿಗೆ ದ್ರುಪದನು ಮುಂದೇನು ಮಾಡಿದನೆಂಬ ವಿಷಯವು ತಿಳಿದಿರ ಲಿಲ್ಲ. ಅದನ್ನು ವಿಶದವಾಗಿ ತಿಳಿಯಬೇಕೆಂಬ ಕುತೂಹಲವು ಹುಟ್ಟಿ ಬ್ರಾಹ್ಮಣ ನನ್ನು ಕೇಳಿದರು :

"ವಿಪ್ರಶ್ರೇಷ್ಠನೇ! ಧೃಷ್ಟದ್ಯುಮ್ನನು ಯಜ್ಞಾಗ್ನಿಯಿಂದಲೂ ದ್ರೌಪದಿಯು ಯಜ್ಞವೇದಿಕೆಯಿಂದಲೂ ಹೇಗೆ ಜನ್ಮತಾಳಿದರು? ದ್ರುಪದನ

ಮಗನಾದ ಧೃಷ್ಟದ್ಯುಮ್ನನು ದ್ರೋಣರಿಂದ ಧನುರ್ವಿದ್ಯೆಯನ್ನು ಕಲಿಯಲು ಹೇಗೆ ಸಾಧ್ಯವಾಯಿತು? ಯಾರಿಂದ ಯಾವ ಕಾರಣದಿಂದ ದ್ರೋಣ-ದ್ರುಪದರ ಸ್ನೇಹವು ಕಡಿದುಹೋಯಿತು? ಎಲ್ಲವನ್ನೂ ಯಥಾವತ್ತಾಗಿ ಹೇಳಿರಿ."

ಅತಿಥಿಯಾಗಿ ಬಂದಿದ್ದ ಬ್ರಾಹ್ಮಣನು ಪಾಂಡವರಿಂದ ಪ್ರೇರಿತನಾಗಿ ದ್ರೌಪದೀಸಂಭವವೇ ಮೊದಲಾದ ಅದ್ಭುತಕಥೆಗಳನ್ನು, ವಿಸ್ತಾರವಾಗಿಯೇ ಹೇಳಲು ಉಪಕ್ರಮಿಸಿದನು.

೧೬೫ನೆಯ ಅಧ್ಯಾಯವು ಮುಗಿಯಿತು.

೧೬೬ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ದ್ರೋಣರಿಂದ ದ್ರುಪದನಿಗಾದ ಅವಮಾನ

ಬ್ರಾಹ್ಮಣನು ಹೇಳುತ್ತಾನೆ :

**ಗಙ್ಗಾದ್ವಾರಂ ಪ್ರತಿ ಮಹಾನ್ಬಭೂವರ್ಷಿರ್ಮಹಾತಪಾಃ ।**
**ಭರದ್ವಾಜೋ ಮಹಾಪ್ರಾಜ್ಞಃ ಸತತಂ ಸಂಶಿತವ್ರತಃ ॥೧॥**

"ಬ್ರಾಹ್ಮಣೋತ್ತಮರೇ! ಗಂಗಾದ್ವಾರದ ಸಮೀಪದ ಆಶ್ರಮವೊಂದರಲ್ಲಿ ಮಹಾಪ್ರಾಜ್ಞನೂ ಮತ್ತು ಕಠೋರವ್ರತನಿಷ್ಠನೂ ಆದ ಭರದ್ವಾಜನೆಂಬ ಮಹರ್ಷಿಯೊಬ್ಬನಿದ್ದನು. ಅವನೊಮ್ಮೆ ಸ್ನಾನಮಾಡಲು ಗಂಗಾನದಿಗೆ ಹೋದನು. ಆದರೆ ಅವನು ಹೋಗುವ ಮೊದಲೇ 'ಘೃತಾಚೀ' ಎಂಬ ಅಪ್ಸರೆಯು ಆಗ ತಾನೇ ಸ್ನಾನಮಾಡಿ, ಮೇಲೆ ಬಂದು ಸೀರೆಯನ್ನುಟ್ಟುಕೊಳ್ಳುತ್ತಿದ್ದಳು. ಭರದ್ವಾಜನು ಗಂಗಾನದಿಗೆ ಹೋಗುವ ವೇಳೆಗೆ ಸರಿಯಾಗಿ ವಾಯುದೇವನು ನವುರಾಗಿದ್ದ ಘೃತಾಚಿಯ ಸೀರೆಯನ್ನು ಹಾರಿಸಿಬಿಟ್ಟನು. ಸುವರ್ಣದ ಕಾಂತಿಯನ್ನು ಹೊರಹೊಮ್ಮುತ್ತಿದ್ದ, ಸರ್ವಲಕ್ಷಣಯುಕ್ತವಾಗಿದ್ದ ಘೃತಾಚಿಯ ಶರೀರಶೋಭೆಯನ್ನು ನಖ-ಶಿಖಾಂತವಾಗಿ ಕ್ಷಣಕಾಲ ನೋಡಿದ ಮಹರ್ಷಿಯ ಮನಸ್ಸು–'ಎಂತಹ ಅನುಪಮವಾದ ಸೌಂದರ್ಯವಿದು?'–ಎಂದು ಸಂಚಲಿಸಿತು. ಬಾಲ್ಯಪ್ರಭೃತಿ ಬ್ರಹ್ಮಚರ್ಯದಿಂದಲೇ ಕಾಲಕಳೆಯುತ್ತಿದ್ದ ಭರದ್ವಾಜನ ಮನಸ್ಸಿನಲ್ಲಿ ಘೃತಾಚಿಯ

ಚಿತ್ರವು ಕ್ಷಣಕಾಲ ಉಳಿದುದರ ಪರಿಣಾಮವಾಗಿ ರೇತಸ್ಸು ಸ್ಖಲನವಾಯಿತು. ಮಹರ್ಷಿಯು ಆ ರೇತಸ್ಸನ್ನು ಒಂದು ಯಜ್ಞಕಲಶದಲ್ಲಿಟ್ಟನು.* ಕಲಶದಲ್ಲಿಟ್ಟಿದ್ದ ರೇತಸ್ಸು ಕಾಲಾನುಕ್ರಮದಲ್ಲಿ ಶಿಶುವಾಯಿತು. ಪಾತ್ರೆಯಲ್ಲಿ (ದ್ರೋಣದಲ್ಲಿ) ಹುಟ್ಟಿದ್ದರಿಂದ ಭರದ್ವಾಜನು ಶಿಶುವಿಗೆ ದ್ರೋಣನೆಂದೇ ನಾಮಕರಣವನ್ನು ಮಾಡಿದನು. ಭರದ್ವಾಜನು ಧೀಮಂತನಾದ ತನ್ನ ಕುಮಾರನಿಗೆ ವೇದ-ವೇದಾಂಗಗಳನ್ನು ಅಧ್ಯಯನಮಾಡಿಸಿದನು. ಭರದ್ವಾಜನಿಗೆ ಪೃಷತನೆಂಬ ರಾಜನೊಬ್ಬನು ಸ್ನೇಹಿತನಾಗಿದ್ದನು. ಪೃಷತನಿಗೂ ದ್ರುಪದನೆಂಬ ಮಗನೊಬ್ಬನು ಹುಟ್ಟಿದನು. ದ್ರುಪದನು ತಂದೆಯ ಆಶಯದಂತೆ ಅನುದಿನವೂ ಭರದ್ವಾಜನ ಆಶ್ರಮಕ್ಕೆ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದನು. ಅದೇ ಸಮಯದಲ್ಲಿ ದ್ರೋಣನಿಗೂ ದ್ರುಪದನಿಗೂ ಮೈತ್ರಿಯು ಬೆಳೆಯಿತು. ಇಬ್ಬರೂ ಜೊತೆಯಲ್ಲಿಯೇ ವಿದ್ಯಾಭ್ಯಾಸಮಾಡುತ್ತಿದ್ದರು. ಕ್ರೀಡಾ-ವಿನೋದಗಳಲ್ಲಿಯೂ ಒಟ್ಟಿಗೇ ಇರುತ್ತಿದ್ದರು.

ರಾಜನಾದ ಪೃಷತನು ಲೋಕಾಂತರವನ್ನು ಹೊಂದಿದನಂತರ ದ್ರುಪದನೇ ರಾಜನಾದನು.

ಇತ್ತಲಾಗಿ ಪರಶುರಾಮನು ತನ್ನ ಸಕಲೈಶ್ವರ್ಯಗಳನ್ನೂ ಬ್ರಾಹ್ಮಣರಿಗೆ ದಾನಮಾಡುವನೆಂಬ ವಾರ್ತೆಯನ್ನು ದ್ರೋಣನು ಕೇಳಿದನು. ದ್ರೋಣನು ಅರಣ್ಯಕ್ಕೆ ಹೊರಟಿದ್ದ ಪರಶುರಾಮನನ್ನು ಸಂಧಿಸಿ ಕೇಳಿದನು :

**ಆಗತಂ ವಿತ್ತಕಾಮಂ ಮಾಂ ವಿದ್ಧಿ ದ್ರೋಣಂ ದ್ವಿಜೋತ್ತಮ ॥೯॥**

"ದ್ವಿಜೋತ್ತಮ! ಐಶ್ವರ್ಯಕಾಮನಾಗಿ ನಿನ್ನಲ್ಲಿಗೆ ಬಂದಿರುವ ನನ್ನನ್ನು ಭರದ್ವಾಜನ ಮಗನಾದ ದ್ರೋಣನೆಂದು ತಿಳಿಯುವವನಾಗು."

ಆದರೆ ಆ ಸಮಯಕ್ಕೆ ಸರಿಯಾಗಿ ಪರಶುರಾಮನಲ್ಲಿ ಯಾವುದೂ

---

* ಹೆಂಗಸಿನ ಗರ್ಭಕೋಶದ ಸಂಬಂಧವೇ ಇಲ್ಲದೇ ರೇತಸ್ಸು ನಾನಾವಿಧವಾದ ವಿಕಾರಗಳನ್ನು ಹೊಂದಿ ಶಿಶುವಾಗಲು ಭರದ್ವಾಜರು ಯಾವ ಪ್ರಕ್ರಿಯೆಯನ್ನು ವಿನಿಯೋಗಿಸಿದರೆಂಬುದಿಲ್ಲಿ ಸ್ಪಷ್ಟವಾಗಿಲ್ಲ. ಆದರೆ ರೇತಸ್ಸನ್ನು ಸ್ತ್ರೀಸಂಪರ್ಕವಿಲ್ಲದೆಯೇ ಶಿಶುವನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯು ನಮ್ಮ ಪೂರ್ವಜರಿಗೆ ತಿಳಿದಿತ್ತೆಂಬುದನ್ನು ಇಂತಹ ನಿದರ್ಶನಗಳಿಂದ ನಿರ್ಧರಿಸಬಹುದಾಗಿದೆ.

ಉಳಿದಿರಲಿಲ್ಲ. ದಾನ ಕೇಳಲು ಬಂದವನಿಗೆ 'ಇಲ್ಲ' ಎನ್ನುವುದು ಭಾರತೀಯರ ಸಂಪ್ರದಾಯದಲ್ಲಿಲ್ಲ. ದ್ರೋಣರ ಮಾತನ್ನು ಕೇಳಿ ಪರಶುರಾಮನು ಹೇಳಿದನು :

**ಶರೀರಮಾತ್ರಮೇವಾದ್ಯ ಮಯಾ ಸಮವಶೇಷಿತಮ್ ।**
**ಅಸ್ತ್ರಾಣಿ ವಾ ಶರೀರಂ ವಾ ಬ್ರಹ್ಮನ್ನೇಕತಮಂ ವೃಣು ॥೧೦॥**

"ಬ್ರಾಹ್ಮಣೋತ್ತಮ! ನನ್ನಲ್ಲಿ ಶರೀರವೊಂದು ಮಾತ್ರವೇ ಉಳಿದಿರುವುದು. ಶರೀರದೊಡನೆ ಅನೇಕಾನೇಕ ಶಸ್ತ್ರಾಸ್ತ್ರಗಳೂ ಇರುವುವು. ಈಗ ನೀನು ನನ್ನ ಶರೀರವನ್ನಾದರೂ ಪಡೆದುಕೊಳ್ಳಬಹುದು ; ಇಲ್ಲವೇ ನನ್ನಲ್ಲಿರುವ ಅಸ್ತ್ರಗಳನ್ನಾದರೂ ಪಡೆದುಕೊಳ್ಳಬಹುದು. ಈ ಎರಡರಲ್ಲಿ ಯಾವುದಾದರೊಂದನ್ನು ಯಾಚಿಸು. ಕೊಡಲು ಸಿದ್ಧನಿದ್ದೇನೆ."

**ಅಸ್ತ್ರಾಣಿ ಚೈವ ಸರ್ವಾಣಿ ತೇಷಾಂ ಸಂಹಾರಮೇವ ಚ ।**
**ಪ್ರಯೋಗಂ ಚೈವ ಸರ್ವೇಷಾಂ ದಾತುಮರ್ಹತಿ ಮೇ ಭವಾನ್ ॥**

"ಪೂಜ್ಯನೇ! ನಿನ್ನಲ್ಲಿರುವ ಸಕಲವಿಧವಾದ ಅಸ್ತ್ರಗಳನ್ನೇ ನನಗೆ ದಯಪಾಲಿಸು ಮತ್ತು ಅವುಗಳ ಪ್ರಯೋಗೋಪಸಂಹಾರಗಳನ್ನೂ ಉಪದೇಶಿಸು."

ಬ್ರಾಹ್ಮಣೋತ್ತಮರೇ! ಪರಶುರಾಮನು ಹಾಗೆಯೇ ಆಗಲೆಂದು ಹೇಳಿ ಸಕಲವಿಧವಾದ ಅಸ್ತ್ರಗಳನ್ನೂ ರಹಸ್ಯಗಳೊಡನೆ ದ್ರೋಣನಿಗೆ ದಾನ ಮಾಡಿಬಿಟ್ಟನು. ಅವುಗಳನ್ನು ಪಡೆದ ದ್ರೋಣನೂ ಕೃತಕೃತ್ಯನಾದನು. ಅವನು ಇಂತಹ ಅಸ್ತ್ರವನ್ನು ಪಡೆಯಲಿಲ್ಲವೆಂಬುದಿಲ್ಲ. ದ್ರೋಣನು ಪರಶುರಾಮನಿಂದ ಪರಮಶ್ರೇಷ್ಠವಾದ, ಸಕಲರಿಂದಲೂ ಸಮ್ಮಾನಿತವಾದ ಬ್ರಹ್ಮಾಸ್ತ್ರವನ್ನೂ ಪಡೆದನು. ಆದರಿಂದಾಗಿ ದ್ರೋಣನು ಅಸ್ತ್ರವಿಶಾರದರಲ್ಲಿ ಶ್ರೇಷ್ಠನೆಂಬ ಪ್ರಸಿದ್ಧಿಯನ್ನೂ ಹೊಂದಿದನು. ಬ್ರಹ್ಮಾಸ್ತ್ರವನ್ನೂ ಪಡೆದ ದ್ರೋಣನು ಪರಮಸಂತುಷ್ಟನಾದನೆಂದು ಹೇಳುವ ಕಾರಣವಿಲ್ಲ. ( ಅಕಿಂಚನನಾಗಿದ್ದವನು ಪರಶುರಾಮನಲ್ಲಿಗೆ ಹಣದಾಸೆಯಿಂದಲೇ ಬಂದಿದ್ದನು. ಧನವು ಸಿಕ್ಕದಿದ್ದರೂ ಬ್ರಹ್ಮಾಸ್ತ್ರವೇ ಮೊದಲಾದ ಮಹಾಸ್ತ್ರಗಳು ಪ್ರಾಪ್ತವಾಗಲಾಗಿ ಅವನಿಗುಂಟಾದ ಆನಂದಕ್ಕೆ ಪಾರವೇ ಇಲ್ಲವಾಯಿತು. ಧನ

ವನ್ನು ತನ್ನ ಗೆಳೆಯನಿಂದಾದರೂ ಪಡೆಯಬಹುದೆಂಬ ಭರವಸೆಯು ದ್ರೋಣನಿಗಿದ್ದಿತು. )

ಪರಶುರಾಮನಿಂದ ಮಹಾಸ್ತ್ರಗಳನ್ನು ಪಡೆದನಂತರ ದ್ರೋಣನು ತನ್ನ ಬಾಲ್ಯಸ್ನೇಹಿತನಾಗಿದ್ದ ದ್ರುಪದರಾಜನ ಬಳಿಗೆ ಹೋಗಿ, ಹಿಂದಿನ ಪರಿಚಯವನ್ನು ಮಾಡಿಕೊಡುತ್ತಾ–'ನಾನು ನಿನ್ನ ಸ್ನೇಹಿತನು. ಜ್ಞಾಪಕ ವಿದೆಯಲ್ಲವೇ?'–ಎಂದನು. ಆದರೆ ಆ ಸಮಯದಲ್ಲಿ ದ್ರುಪದನಿಗೆ ರಾಜತ್ವದ ದುರಭಿಮಾನವಿತ್ತು. ದ್ರೋಣನು ತನ್ನ ಬಾಲ್ಯಸ್ನೇಹಿತನೆಂಬ ನೆನಪು ದ್ರುಪದನಿಗಿತ್ತಾದರೂ ದುರಭಿಮಾನದಿಂದ ದ್ರೋಣನನ್ನು ಕುರಿತು ಹೇಳಿದನು:

**ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ ।**
**ನಾರಾಜಾ ಪಾರ್ಥಿವಸ್ಯಾಪಿ ಸಖಿಪೂರ್ವಂ ಕಿಮಿಷ್ಯತೇ ॥೧೫॥**

"ಶ್ರೋತ್ರಿಯನಾದವನು ಅಶ್ರೋತ್ರಿಯನಾದವನೊಡನೆ ಸ್ನೇಹ ಮಾಡುವುದಿಲ್ಲ. ರಥಿಕನು ರಥಿಕನಲ್ಲದವನೊಡನೆ ಸ್ನೇಹಮಾಡುವುದಿಲ್ಲ. ಅದರಂತೆ ರಾಜನಾದವನಿಗೆ ಸಾಮಾನ್ಯಪ್ರಜೆಯು (ರಾಜನಲ್ಲದವನು) ಸ್ನೇಹಿತನಾಗಲಾರನು. ಆದುದರಿಂದ ಹಿಂದೆ ನಡೆದುದನ್ನು ಕಟ್ಟಿಕೊಂಡು ಈಗೇನು ಮಾಡುವೆ?"

ಪಾಂಚಾಲನಿಗೆ ಕಾಲಾಂತರದಲ್ಲಿ ಬುದ್ಧಿಕಲಿಸಲು ನಿಶ್ಚಯಿಸಿದ ಬುದ್ಧಿವಂತರಾದ ದ್ರೋಣರು ಕುರುಮುಖ್ಯರ ಪಟ್ಟಣಕ್ಕೆ ಹೊರಟುಹೋದರು.

ಧನುರ್ವಿದ್ಯೆಯಲ್ಲಿ ಬಹುನಿಷ್ಣಾತರಾದ ದ್ರೋಣರು ತನ್ನ ರಾಜ್ಯಕ್ಕೆ ಆಗಮಿಸಿದುದಕ್ಕಾಗಿ ಭೀಷ್ಮನು ಆನಂದಭರಿತನಾದನು. ದ್ರೋಣರಿಗೆ ಧನ-ಕನಕ-ವಸ್ತು-ವಾಹನಗಳನ್ನಿತ್ತು ಪುರಸ್ಕರಿಸಿದನಲ್ಲದೇ–ತನ್ನ ಮೊಮ್ಮಕ್ಕಳನ್ನು ದ್ರೋಣರ ಬಳಿಗೆ ಶಿಷ್ಯವೃತ್ತಿಗಾಗಿ ಕಳುಹಿಸಿಕೊಟ್ಟನು.

ವಿದ್ಯಾಭ್ಯಾಸದ ಕಾಲದಲ್ಲಿ ಒಂದು ದಿನ ದ್ರೋಣರು ಯುಧಿಷ್ಠಿರನೇ ಮೊದಲಾದ ಶಿಷ್ಯರೆಲ್ಲರನ್ನೂ ಕುಳ್ಳಿರಿಸಿಕೊಂಡು ದ್ರುಪದನಿಗೆ ಪ್ರತೀಕಾರವನ್ನು ಮಾಡುವ ಉದ್ದೇಶದಿಂದ ಅವರನ್ನು ಕುರಿತು ಈ ಮಾತುಗಳನ್ನಾಡಿದರು :

"ಶಿಷ್ಯೋತ್ತಮರೇ! ನಾನು ನಿಮ್ಮಿಂದ ಗುರುದಕ್ಷಿಣೆಯನ್ನು ಪಡೆಯ

ಬೇಕೆಂಬ ಅಭಿಲಾಷೆಯುಳ್ಳವನಾಗಿದ್ದೇನೆ. ನಾನಾಶಿಸಿರುವ ಗುರುದಕ್ಷಿಣೆಯನ್ನು ಭೀಷ್ಮನಾಗಲೀ ಧೃತರಾಷ್ಟ್ರನಾಗಲೀ ಕೊಡಲಾರರು. ನನ್ನಿಂದ ಧನುರ್ವಿದ್ಯೆಯನ್ನು ಕಲಿತು ಶಸ್ತ್ರಾಸ್ತ್ರಗಳಲ್ಲಿ ಪ್ರಾವೀಣ್ಯವನ್ನು ಪಡೆಯುವ ನಿಮ್ಮಿಂದ ಮಾತ್ರವೇ ಆ ಗುರುದಕ್ಷಿಣೆಯನ್ನು ಕೊಡಲು ಸಾಧ್ಯವಾಗುವುದು. ನಾನು ಮುಂದೆ ಕೇಳುವ ಗುರುದಕ್ಷಿಣೆಯನ್ನು ಕೊಡುತ್ತೇವೆಂದು ನೀವು ಇಂದೇ ನನಗೆ ಅಭಿವಚನವನ್ನು ಕೊಡಬೇಕು."

ದ್ರೋಣರು ಹೀಗೆ ಹೇಳಿದೊಡನೆಯೇ ಅರ್ಜುನಪ್ರಮುಖರಾದ ಕುರುರಾಜಕುಮಾರರು–'ಹಾಗೆಯೇ ಆಗಲಿ. ನೀವು ಕೇಳುವ ಗುರುದಕ್ಷಿಣೆಯನ್ನು ಕೊಡುತ್ತೇವೆ'–ಎಂದು ಅಭಿವಚನವಿತ್ತರು. ಕಾಲಾನುಕ್ರಮದಲ್ಲಿ ಕುರುರಾಜಕುಮಾರರೆಲ್ಲರೂ ದ್ರೋಣರ ಆಚಾರ್ಯತ್ವದಲ್ಲಿ ಧನುರ್ವಿದ್ಯೆಯಲ್ಲಿ ವಿಶೇಷವಾದ ಪ್ರಾವೀಣ್ಯವನ್ನು ಪಡೆದರು. ಆಗ ದ್ರೋಣರು ತಮಗೆ ಸಲ್ಲಬೇಕಾಗಿದ್ದ ಗುರುದಕ್ಷಿಣೆಯ ವಿಷಯವಾಗಿ ಪ್ರಸ್ತಾಪಿಸುತ್ತಾ ಶಿಷ್ಯರನ್ನು ಕುಳ್ಳಿರಿಸಿಕೊಂಡು ಹೇಳಿದರು :

"ವೀರರೇ! ಅಹಿಚ್ಛತ್ರನಗರಿಯಲ್ಲಿ ಪೃಷತನ ಮಗನಾದ ದ್ರುಪದನೆಂಬ ರಾಜನಿದ್ದಾನೆ. ನೀವೀಗಲೇ ಅವನಲ್ಲಿಗೆ ಹೋಗಿ, ಅವನೊಡನೆ ಯುದ್ಧಮಾಡಿ ಅವನನ್ನು ಪರಾಭವಗೊಳಿಸಬೇಕು. ಆ ರಾಜ್ಯವು ನನ್ನದಾಗಬೇಕು. ಇದೇ ನಾನು ಕೃತಾಸ್ತ್ರರಾದ ನಿಮ್ಮಿಂದ ಅಪೇಕ್ಷಿಸಿರುವ ಗುರುದಕ್ಷಿಣೆ."

ಬ್ರಾಹ್ಮಣೋತ್ತಮರೇ! ದ್ರೋಣರು ಹೀಗೆ ಹೇಳಿದೊಡನೆಯೇ ಯುಧಿಷ್ಠಿರಾದಿಗಳು ಅಹಿಚ್ಛತ್ರನಗರಿಗೆ ಮುತ್ತಿಗೆ ಹಾಕಿ, ದ್ರುಪದನನ್ನು ಯುದ್ಧದಲ್ಲಿ ಸೋಲಿಸಿ, ಅವನನ್ನು ಬಂಧಿಸಿ ದ್ರೋಣರ ಸಮೀಪಕ್ಕೆ ಕರೆತಂದರು. ಆಗ ದ್ರೋಣರು ದ್ರುಪದನನ್ನು ಪ್ರೀತ್ಯಾದರಗಳಿಂದಲೇ ಮಾತನಾಡಿಸುತ್ತಾ ಹೇಳಿದರು :

**ಪ್ರಾರ್ಥಯಾಮಿ ತ್ವಯಾ ಸಖ್ಯಂ ಪುನರೇವ ನರಾಧಿಪ ।**
**ಅರಾಜಾ ಕಿಲ ನೋ ರಾಜ್ಞಃ ಸಖಾ ಭವಿತುಮರ್ಹತಿ ॥೨೬॥**

**ಅತಃ ಪ್ರಯತಿತಂ ರಾಜ್ಯೇ ಯಜ್ಞಸೇನ ತ್ವಯಾ ಸಹ ।**
**ರಾಜಾಸಿ ದಕ್ಷಿಣೇ ಕೂಲೇ ಭಾಗೀರಥ್ಯಾಹಮುತ್ತರೇ ॥೨೪॥**

"ನರಾಧಿಪನೇ! ನಿನ್ನೊಡನೆ ಪುನಃ ನಾನು ಸ್ನೇಹವನ್ನೇ ಅಪೇಕ್ಷಿಸು ತ್ತೇನೆ. 'ರಾಜನಾಗಿರದವನು ರಾಜನೊಡನೆ ಸಖ್ಯವನ್ನು ಬೆಳೆಸಲು ಅರ್ಹನಾಗಿರುವುದಿಲ್ಲ'–ಎಂದು ನೀನು ಬಹುಸ್ಪಷ್ಟವಾಗಿ ಹೇಳಿದ್ದೆಯಾದ್ದ ರಿಂದ ನಾನು ರಾಜತ್ವವನ್ನು ಸಂಪಾದಿಸಲು ಪ್ರಯತ್ನಿಸಬೇಕಾಯಿತು. ಇಂದು ನಾನು ನಿನ್ನ ರಾಜ್ಯ-ಕೋಶಾದಿಗಳಿಗೆ ಅಧಿಪತಿಯಾಗಿರುವೆನು. ಆದರೆ ಈ ರಾಜ್ಯವನ್ನು ನಾನೊಬ್ಬನೇ ಪಡೆಯಲು ಇಚ್ಛಿಸುವುದಿಲ್ಲ. ನಮ್ಮಿಬ್ಬರಲ್ಲಿ ಮೈತ್ರಿಯು ಪುನಃ ಬೆಳೆಯಬೇಕಾದರೆ–ನಿನ್ನ ಅಭಿಪ್ರಾಯದಂತೆ–ನೀನೂ ರಾಜನಾಗಿಯೇ ಇರಬೇಕು. ಆದುದರಿಂದ ಭಾಗೀರಥೀ ನದಿಯ ದಕ್ಷಿಣತೀರದ ರಾಜ್ಯವನ್ನು ನಿನಗೇ ಬಿಟ್ಟುಕೊಟ್ಟಿದ್ದೇನೆ. ಉತ್ತರತೀರದ ರಾಜ್ಯವನ್ನು ನಾನು ಆಳುತ್ತೇನೆ. ಈ ರೀತಿಯಲ್ಲಿ ಇಬ್ಬರೂ ರಾಜರಾಗಿ ಸಖ್ಯದಿಂದಿರಬೇಕೆಂಬುದೇ ನನ್ನ ಆಶಯವಾಗಿದೆ."

ಬ್ರಾಹ್ಮಣೋತ್ತಮರೇ! ದ್ರುಪದನಿಗೆ ದ್ರೋಣರು ಹೀಗೆ ಹೇಳಿದನಂತರ ಅಸ್ತ್ರವಿದರಲ್ಲಿ ಶ್ರೇಷ್ಠನೆನಿಸಿದ ದ್ರುಪದನು ದ್ರೋಣರನ್ನು ಕುರಿತು ಹೇಳಿದನು :

"ಮಹಾಮತಿಯೇ! ಭಾರದ್ವಾಜ! ನಿನಗೆ ಮಂಗಳವಾಗಲಿ. ನಿನ್ನ ಅಭಿಲಾಷೆಯಂತೆಯೇ ಬಾಲ್ಯದಲ್ಲಿ ನಮ್ಮಿಬ್ಬರಲ್ಲಿದ್ದ ಸ್ನೇಹವೇ ಮುಂದೆಯೂ ಶಾಶ್ವತವಾಗಿರಲಿ."

ಇವೇ ಮುಂತಾಗಿ ಅವರು ಪರಸ್ಪರವಾಗಿ ಮಾತನಾಡಿಕೊಂಡು, ಸಖ್ಯವನ್ನೂ ಪುನಃ ಬೆಳೆಸಿ, ತಮ್ಮ-ತಮ್ಮ ರಾಜ್ಯಗಳಿಗೆ ಹೊರಟುಹೋದರು.

ಯದ್ಯಪಿ ಆ ಸಮಯದಲ್ಲಿ ದ್ರುಪದನು ದ್ರೋಣರೊಡನೆ ಅಮೃತ ಧಾರೆಗೆ ಸಮಾನವಾದ ಸಖ್ಯದ ಮಾತುಗಳನ್ನಾಡಿದರೂ ತನಗಾದ ಅಪಮಾನ ವನ್ನು ಸಹಿಸಲು ಅವನಿಗೆ ಸಾಧ್ಯವಾಗಲಿಲ್ಲ. ಆ ಸಂಕಟವು ಅವನ ಹೃದಯ ದಿಂದ ಹೊರಟುಹೋಗಲೇ ಇಲ್ಲ. ದ್ರೋಣರಿಗೆ ಪ್ರತೀಕಾರಮಾಡಬೇಕೆಂದು ಮನಸ್ಸು ತವಕಿಸುತ್ತಿದ್ದಿತೇ ಹೊರತು–ಅವರೊಡನೆ ಸ್ನೇಹದಿಂದಿರ ಬೇಕೆನ್ನುವ ಆಶಯವು ದ್ರುಪದನಿಗೆ ಒಮ್ಮೆಯಾದರೂ ಉಂಟಾಗಲೇ ಇಲ್ಲ.

ಮನಸ್ಸು ಬಹಳವಾಗಿ ಕಲುಷಿತವಾಯಿತು. ಅದರಿಂದಾಗಿ ದ್ರುಪದನು ದಿನ-ದಿನಕ್ಕೂ ಕೃಶನಾಗುತ್ತಾ ಬಂದನು."

೧೬೬ನೆಯ ಅಧ್ಯಾಯವು ಮುಗಿಯಿತು.

೧೬೭ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ದ್ರುಪದನ ಯಜ್ಞ: ಧೃಷ್ಟದ್ಯುಮ್ನ-ದ್ರೌಪದಿಯರ ಜನನ

"ಬ್ರಾಹ್ಮಣಶ್ರೇಷ್ಠರೇ! ತಮ್ಮಿಬ್ಬರಲ್ಲಿಯೂ ಶಾಶ್ವತವಾದ ಮೈತ್ರಿಯಿರಬೇಕೆಂಬ ದ್ರೋಣರ ಮಾತಿಗೆ ದ್ರುಪದನು ತಾತ್ಕಾಲಿಕವಾಗಿ ಒಪ್ಪಿದರೂ ತನಗಾದ ಅಪಮಾನದಿಂದ ದಿನ-ದಿನಕ್ಕೂ ಕೃಶನಾಗುತ್ತಾ ಬಂದನು. ದ್ರೋಣರಿಗೆ ಪ್ರತೀಕಾರಮಾಡಿಯೇ ತೀರಬೇಕೆಂಬ ಛಲವು ದ್ರುಪದನ ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯಿತು. ದ್ರೋಣರಿಗೆ ಪ್ರತೀಕಾರ ಮಾಡಬೇಕಾದರೆ ಯುದ್ಧದಿಂದ ಸಾಧ್ಯವಿಲ್ಲವೆಂದೂ ದ್ರುಪದನು ನಿರ್ಧರಿಸಿದನು. ಯಜ್ಞ-ಯಾಗಾದಿಗಳನ್ನಾದರೂ ಮಾಡಿ ತನ್ನ ಇಷ್ಟಾರ್ಥವನ್ನು ಈಡೇರಿಸಿಕೊಳ್ಳಬೇಕೆಂದು ನಿಶ್ಚಯಿಸಿ, ಅಥರ್ವಪ್ರಕ್ರಿಯೆಯಲ್ಲಿ ನಿಷ್ಣಾತರಾದ ಬ್ರಾಹ್ಮಣರನ್ನು ಹುಡುಕಿಕೊಂಡು ಆಶ್ರಮದಿಂದ ಆಶ್ರಮಕ್ಕೆ ಅಲೆದಾಡಿದನು. 'ಅಯ್ಯೋ! ಸರ್ವಲಕ್ಷಣಸಂಪನ್ನನಾದ ಮಗನೊಬ್ಬನು ನನಗೆ ಹುಟ್ಟಲಿಲ್ಲವಲ್ಲ! ಈಗಿರುವ ಮಕ್ಕಳಿಗೆ ಮತ್ತು ನನ್ನ ಜ್ಞಾತಿ-ಬಾಂಧವರಿಗೆ ಧಿಕ್ಕಾರವಿರಲಿ. ಈಗಿರುವ ನನ್ನ ಒಡನಾಡಿಗಳಲ್ಲಿ ಯಾರೂ ದ್ರೋಣನನ್ನು ಮೀರಿಸಲಾರರು'–ಎಂದು ಹೇಳಿಕೊಂಡು ಪರಿತಪಿಸುತ್ತಿದ್ದನು. ದೀರ್ಘ ವಾಗಿ ನಿಟ್ಟುಸಿರುಬಿಡುತ್ತಿದ್ದನು. ಆದರೆ ಬ್ರಹ್ಮತೇಜಸ್ಸಿನ ಬಲದಿಂದ ಪ್ರಭಾವಶಾಲಿಗಳಾದ, ವಿನಯಶೀಲರಾದ, ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾದ ದ್ರೋಣರನ್ನು ಪರಾಭವಗೊಳಿಸುವುದು ದ್ರುಪದನಿಗೆ ಅಸಾಧ್ಯವೆನಿಸಿತು.

ಗಂಗಾ-ಯಮುನಾನದಿಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ಅಲೆದಾಡುತ್ತಿದ್ದಾಗ ದ್ರುಪದನು ಒಂದು ಆಶ್ರಮವನ್ನು ಕಂಡನು. ಆ ಆಶ್ರಮದಲ್ಲಿ ಎಲ್ಲರೂ ಸ್ನಾತಕರಾಗಿ, ವ್ರತನಿಷ್ಠರಾಗಿ ಧಾರ್ಮಿಕರಾಗಿದ್ದರು. ಅವರ ಮಧ್ಯದಲ್ಲಿ ಸೂರ್ಯೋಪಾಸಕರಾಗಿದ್ದ, ಬ್ರಹ್ಮತೇಜಸ್ಸಿನಿಂದ ವಿರಾಜಿಸುತ್ತಿದ್ದ ಯಾಜ ಮತ್ತು ಉಪಯಾಜರೆಂಬ ಬ್ರಾಹ್ಮಣೋತ್ತಮರನ್ನು ನೋಡಿದನು.

ಅವರು ಬಹಳ ನಿಷ್ಠಾವಂತರಾಗಿ ಜಿತೇಂದ್ರಿಯರಾಗಿದ್ದುದಲ್ಲದೇ– ಬ್ರಹ್ಮರ್ಷಿಗಳೂ ಆಗಿದ್ದರು. ಕಾಶ್ಯಪಗೋತ್ರಜರಾಗಿದ್ದ ಅವರು ಸದಾ ಸಂಹಿತಾಧ್ಯಯನದಲ್ಲಿ ನಿರತರಾಗಿದ್ದರು. ಅವರು ನಿಶ್ಚಯವಾಗಿಯೂ ದ್ರುಪದನ ಇಚ್ಛೆಯನ್ನು ಈಡೇರಿಸಿಕೊಡಲು ಸಮರ್ಥರಾಗಿದ್ದರು. ಅದನ್ನು ತಿಳಿದ ದ್ರುಪದನು ಯಾಜ ಮತ್ತು ಉಪಯಾಜರನ್ನು ಬಹುವಾಗಿ ಸ್ತುತಿಸಿದನು. ಯಾಜನಿಗಿಂತಲೂ ಉಪಯಾಜನು ಮಹಾಮೇಧಾವಿಯೆಂದು ತಿಳಿದವನಾಗಿ, ಅವನನ್ನು ಏಕಾಂತದಲ್ಲಿ ಸಂಧಿಸಿ, ಅವನಿಗೆ ಇಷ್ಟವೆನಿಸಿದ ವಸ್ತುಗಳನ್ನೆಲ್ಲಾ ಸಮರ್ಪಿಸಿದನು. ಕಾಲನ್ನು ಒತ್ತುತ್ತಿದ್ದನು. ಪ್ರಿಯವಾದ ಮಾತುಗಳನ್ನು ಹೇಳುತ್ತಿದ್ದನು. ಹೀಗೆಯೇ ಒಂದು ದಿನ ಅವನ ಪದತಳದಲ್ಲಿ ನಿಂತು ಸ್ತೋತ್ರಮಾಡಿ ಸತ್ಕರಿಸಿ ಹೇಳಿದನು :

**ಯೇನ ಮೇ ಕರ್ಮಣಾ ಬ್ರಹ್ಮನ್ಪುತ್ರಃ ಸ್ಯಾದ್ದ್ರೋಣಮೃತ್ಯವೇ ।**
**ಉಪಯಾಜ ಕೃತೇ ತಸ್ಮಿನ್ಗವಾಂ ದಾತಾಸ್ಮಿ ತೇಽರ್ಬುದಮ್ ॥೧೧॥**

**ಯದ್ವಾ ತೇಽನ್ಯದ್ದ್ವಿಜಶ್ರೇಷ್ಠ ಮನಸಃ ಸುಪ್ರಿಯಂ ಭವೇತ್ ।**
**ಸರ್ವಂ ತತ್ತೇ ಪ್ರದಾತಾಹಂ ನ ಹಿ ಮೇಽತ್ರಾಸ್ತಿ ಸಂಶಯಃ ॥೧೨॥**

"ಬ್ರಾಹ್ಮಣೋತ್ತಮನೇ! ನೀನು ನನ್ನಿಂದ ಒಂದು ಯಾಗವನ್ನು ಮಾಡಿಸಬೇಕು. ಆ ಯಾಗದ ಫಲದಿಂದ ನನಗೊಬ್ಬ ಮಗನು ಹುಟ್ಟಬೇಕು. ಆ ಮಗನು ನನ್ನ ಶತ್ರುವಾದ ದ್ರೋಣನನ್ನು ಕೊಲ್ಲುವ ಸಾಮರ್ಥ್ಯವನ್ನು ಹೊಂದಿರಬೇಕು. ಇಂತಹ ಯಾಗವನ್ನು ನೀನು ಮಾಡಿಸಿದೆಯಾದರೆ ನಿನಗೆ ಹತ್ತುಕೋಟಿ ಧೇನುಗಳನ್ನು ದಕ್ಷಿಣೆಯನ್ನಾಗಿ ಕೊಡುವೆನು ಅಥವಾ ಅದಕ್ಕಾಗಿ ನೀನು ಮತ್ತೇನನ್ನು ಅಪೇಕ್ಷಿಸಿದರೂ ಅವೆಲ್ಲವನ್ನೂ ಕೊಡಲು ಸಿದ್ಧನಿದ್ದೇನೆ. ನೀನು ಇಂತಹ ಯಾಗವನ್ನು ಮಾಡಿಸಲು ಸಮರ್ಥನೆಂಬುದರಲ್ಲಿ ನನಗೆ ಸಂಶಯವೇ ಇಲ್ಲ."

ಮಹಾರಾಜ! ನಾನು ಅಂತಹ ಯಾಗಗಳನ್ನು ಮಾಡಿಸಲಾರೆನು."*

---

* ಅಥರ್ವಪ್ರಕ್ರಿಯೆಗಳನ್ನೊಳಗೊಂಡ ಯಾಗಗಳನ್ನು ಸಾಮಾನ್ಯವಾಗಿ ಹೆಚ್ಚು ಜನರು ಮಾಡಿಸುವುದಿಲ್ಲ. ಇಂತಹ ಯಾಗಗಳಿಂದ ತನ್ನ ಹಿತವನ್ನು ಮತ್ತು ಶತ್ರುನಿಗ್ರಹವನ್ನು ಸಾಧಿಸಬಹುದಾದರೂ ಮೋಕ್ಷಮಾರ್ಗಕ್ಕೆ ಇದು ಆತಂಕವನ್ನುಂಟುಮಾಡಬಹುದೆಂದು ತಿಳಿದವರು ಹೇಳುತ್ತಾರೆ.

ಎಂದು ಉಪಯಾಜನಿಂದ ಒಡನೆಯೇ ಉತ್ತರ ಬಂದಿತು. 'ಏಕೆ ಮಾಡಿಸು ವುದಿಲ್ಲ? ' ಎ ಂದು ಕೇಳುವ ಧೈರ್ಯವು ರಾಜನಿಗಿರಲಿಲ್ಲ. ರಾಜನು ಋಷಿಯ ಶುಶ್ರೂಷೆಯಲಿಯೇ ನಿರತನಾದನು. ಸುಪ್ರೀತನಾದ ಮಹರ್ಷಿಯು ಎಂದಾದರೊಂದು ದಿನ ತನ್ನ ಇಚ್ಛೆಯನ್ನು ನೆರವೇರಿಸುವನೆಂದು ದ್ರುಪದನು ಭಾವಿಸಿದ್ದನು. ಒಂದು ವರ್ಷವು ಕಳೆಯಿತು. ದ್ರುಪದನ ನಿರೀಕ್ಷೆಯಂತೆ ಉಪಯಾಜನು ರಾಜನ ವಿಷಯದಲ್ಲಿ ಸುಪ್ರೀತನಾದನು. ಅನುದಿನವೂ ಶುಶ್ರೂಷೆಮಾಡುತ್ತಿದ್ದ ರಾಜನನ್ನು ಕುರಿತು ಬ್ರಾಹ್ಮಣನು ಮಧುರವಾದ ಮಾತಿನಿಂದ ಹೇಳಿದನು : "ಮಹಾರಾಜ! ಒಂದಾನೊಂದು ದಿನ ನಾನೂ ಮತ್ತು ನಮ್ಮಣ್ಣನಾದ ಯಾಜನೂ ಅರಣ್ಯದಲ್ಲಿ ತಿರುಗಾಡುತ್ತಿದ್ದೆವು. ಆ ಸಮಯದಲ್ಲಿ ಮರದ ಮೇಲಿನಿಂದ ಹಣ್ಣೊಂದು ಕೆಳಕ್ಕೆ ಬಿದ್ದಿತು. ಅದನ್ನು ಕಂಡೊಡನೆಯೇ ಯಾಜನು ಅದನ್ನು ತೆಗೆದುಕೊಂಡು ತಿಂದುಬಿಟ್ಟನು. ಹಣ್ಣು ಎಲ್ಲಿ ಬಿದ್ದಿದೆ? ಬಿದ್ದಿರುವ ಸ್ಥಳವು ಶುಚಿಯಾಗಿರುವುದೇ? ಎಂಬ ವಿವೇಚನೆಯನ್ನೂ ಅವನು ಮಾಡಲಿಲ್ಲ. ಅಪವಿತ್ರವಾದ ವಸ್ತುಗಳನ್ನು ಸ್ವೀಕರಿಸುವಾಗಲೂ ಅವನು ಸ್ವಲ್ಪವಾದರೂ ವಿವೇಚನೆಯನ್ನು ಮಾಡುವು ದಿಲ್ಲ. ಯಾವಾತನು ಒಂದು ಹಣ್ಣಿನ ಪರಿಶುದ್ಧತೆ–ಅಪರಿಶುದ್ಧತೆಗಳನ್ನು ವಿವೇಚಿಸಲಾರನೋ–ಅವನು ಮತ್ತಾವ ವಸ್ತುವಿನಲ್ಲಿಯೂ ಶುದ್ಧಾಶುದ್ಧತೆ ಗಳನ್ನು ವಿವೇಚಿಸಲಾರನು. ಅವನ ಸ್ವಭಾವವೇ ಹಾಗಿರುವುದು. ನಮ್ಮಣ್ಣನ ವಿಷಯದಲ್ಲಿ ಹೇಳುವುದಾದರೆ ; ಅವನು ಪರಿಶುದ್ಧತೆ-ಅಪರಿಶುದ್ಧತೆ ಗಳನ್ನು ವಿವೇಚಿಸುವುದಿಲ್ಲವೆಂಬುದಕ್ಕೆ ಮತ್ತೊಂದು ನಿದರ್ಶನವೂ ಇದೆ. ನಾವೆಲ್ಲರೂ ಒಬ್ಬರೇ ಗುರುಗಳಲ್ಲಿ ಅಧ್ಯಯನವನ್ನು ಮಾಡುತ್ತಿದ್ದೆವು. ಆಗಲೂ ನಮ್ಮಣ್ಣನು-ಅನೇಕಶಿಷ್ಯರು ತಿಂದು ಮಿಕ್ಕಿದ್ದ ಅನ್ನವನ್ನೇ ತಿನ್ನುತ್ತಿದ್ದನು. ಅದೂ ಅಲ್ಲದೇ ಅವನು ಉಚ್ಛಿಷ್ಟಾನ್ನದ ಪ್ರಶಂಸೆಯನ್ನೂ ಲಜ್ಜೆಯಿಲ್ಲದೇ ಮಾಡುತ್ತಿದ್ದನು. ಈ ಕಾರಣಗಳಿಂದ ನಮ್ಮಣ್ಣನು ಪ್ರಾಪಂಚಿಕಸುಖದಲ್ಲಿ ಮತ್ತು ಭೋಗ್ಯವಸ್ತುಗಳಲ್ಲಿ ಹೆಚ್ಚು ಆಸೆಯುಳ್ಳವನಾಗಿರುವನೆಂದು ಭಾವಿಸುತ್ತೇನೆ. ಆದುದರಿಂದ ಅವನ ಸಮೀಪಕ್ಕೆ ಹೋದೆಯಾದರೆ ನಿನ್ನ ಇಷ್ಟಾರ್ಥವು ನೆರವೇರುವುದು.

ದ್ರುಪದನಿಗೆ ಯಾಜನ ಬಳಿಗೆ ಹೋಗಲು ಇಷ್ಟವಿಲ್ಲದಿದ್ದರೂ ವಿಧಿಯಿಲ್ಲದೇ ಉಪಯಾಜನ ಮಾತಿನಂತೆ ಅವನ ಬಳಿಗೆ ಹೋದನು.

ಯಾಜನನ್ನು ಯಥಾವಿಧಿಯಾಗಿ ಸತ್ಕರಿಸಿ ಹೇಳಿದನು : "ಆಚಾರ್ಯ! ನೀನು ನನ್ನಿಂದ ಒಂದು ಯಾಗವನ್ನು ಮಾಡಿಸಬೇಕು. ದಕ್ಷಿಣಾರ್ಥವಾಗಿ ಎಂಬತ್ತು ಸಾವಿರ ಹಸುಗಳನ್ನು ಕೊಡಲು ಸಿದ್ಧನಾಗಿರುವೆನು. ಅಥವಾ ನೀನು ಕೇಳುವುದೆಲ್ಲವನ್ನೂ ಕೊಡುವೆನು. ನನಗೆ ದ್ರೋಣನ ಮೇಲಿರುವ ದ್ವೇಷಾಸೂಯೆಗಳು ನನ್ನ ಹೃದಯವನ್ನು ಪ್ರತಿಕ್ಷಣದಲ್ಲಿಯೂ ಸುಡುತ್ತಲಿವೆ. ಅದರ ಉಪಶಮನವನ್ನು ಮಾಡುವುದು ನಿನಗೇ ಸೇರಿದುದಾಗಿದೆ. ದ್ರೋಣನು ವೇದ-ವೇದಾಂಗಪಾರಂಗತನಾಗಿರುವಂತೆಯೇ ಬ್ರಹ್ಮಾಸ್ತ್ರವನ್ನೂ ಪಡೆದಿರುವನು. ಈ ಕಾರಣದಿಂದಲೇ ನನ್ನನ್ನು ಪರಾಜಯಗೊಳಿಸಿದನು. ಅವನು ತನ್ನ ಮೇಧಾಶಕ್ತಿಯಿಂದ ಕುರುವಂಶದ ಆಚಾರ್ಯನಾಗಿರುವನು. ಪ್ರಪಂಚದಲ್ಲಿರುವ ಯಾವ ಕ್ಷತ್ರಿಯರೂ ಅವನನ್ನು ಮೀರಿಸಲಾರರು. ಅವನ ಧನುಸ್ಸು ಆರು ಗುದ್ದಮೊಳಗಳಷ್ಟು ಉದ್ದವಿದ್ದು ಮಹಾಧನುಸ್ಸೆಂಬ ಹೆಸರನ್ನು ಪಡೆದಿರುವುದು. ಅವನ ಬಾಣಗಳು ಸಕಲಪ್ರಾಣಿಗಳ ಪ್ರಾಣಾಪಹರಣವನ್ನು ಮಾಡಲು ಸಮರ್ಥವಾಗಿರುವುವು. ನಿಶ್ಚಯವಾಗಿಯೂ ಅವನು ಬ್ರಾಹ್ಮಣವೇಷವನ್ನು ತಾಳಿ ಪ್ರಪಂಚದಲ್ಲಿರುವ ಕ್ಷತ್ರಿಯತೇಜಸ್ಸನ್ನು ವಿನಾಶಮಾಡುತ್ತಿದ್ದಾನೆ. ಕ್ಷತ್ರಿಯಕುಲವನ್ನೇ ವಿನಾಶಮಾಡಲು ಅವತರಿಸಿರುವ ಎರಡನೆಯ ಪರಶುರಾಮನೆಂದೂ ದ್ರೋಣನನ್ನು ಹೇಳಬಹುದಾಗಿದೆ. ಅವನು ಬಿಡುವ ತೀಕ್ಷ್ಣವಾದ ಬಾಣಗಳ ನಿವಾರಣೆಯನ್ನು ಮಾಡಿಕೊಳ್ಳಲು ಸಮರ್ಥನಾದ ಮಾನವನು ಪ್ರಪಂಚದಲ್ಲಿ ಯಾರೂ ಇರುವುದಿಲ್ಲ. ಉರಿಯುತ್ತಿರುವ ಅಗ್ನಿಗೆ ತುಪ್ಪವನ್ನು ಹಾಕಿದರೆ ಉಂಟಾಗುವ ಪರಿಣಾಮದಂತೆ–ದ್ರೋಣನಲ್ಲಿರುವ ಬ್ರಹ್ಮತೇಜಸ್ಸು–ಕ್ಷಾತ್ರತೇಜಸ್ಸಿನ ಜೊತೆಯಲ್ಲಿ ಸೇರಿಕೊಂಡು–ಯುದ್ಧದಲ್ಲಿ ನಿಲ್ಲುವ ಪ್ರತಿಯೊಬ್ಬ ಎದುರಾಳಿಯನ್ನೂ ದಹಿಸಿಬಿಡುತ್ತದೆ. ಬ್ರಹ್ಮತೇಜಸ್ಸು ಮತ್ತು ಕ್ಷಾತ್ರತೇಜಸ್ಸುಗಳಲ್ಲಿ ಬ್ರಹ್ಮತೇಜಸ್ಸೇ ವಿಶಿಷ್ಟವಾದುದು. ದ್ರೋಣನಲ್ಲಿ ಎರಡೂ ಇವೆ. ನಾನು ಕ್ಷಾತ್ರತೇಜಸ್ಸನ್ನು ಮಾತ್ರವೇ ಹೊಂದಿರುವುದರಿಂದ ದ್ರೋಣನಿಗಿಂತಲೂ ಕೀಳೆನಿಸಿದ್ದೇನೆ. ದ್ರೋಣನಿ

ಗಿಂತಲೂ ಮಿಗಿಲಾದ ಬ್ರಹ್ಮತೇಜಸ್ಸನ್ನು ಹೊಂದಿರುವ ನಿನ್ನ ಆಶ್ರಯವನ್ನು ಹೊಂದಲಿಚ್ಛಿಸಿ ಬಂದಿರುವೆನು. ದ್ರೋಣನಲ್ಲಿರುವ ಬ್ರಹ್ಮತೇಜಸ್ಸಿನ ಜೊತೆಯಲ್ಲಿ ಕ್ಷಾತ್ರತೇಜಸ್ಸೂ ಸೇರಿರುವುದರಿಂದ ಬ್ರಹ್ಮತೇಜಸ್ಸಿನ ಬಲವು ಕಮ್ಮಿಯಾಗುವುದು. ಆದುದರಿಂದ ನಿನ್ನಲ್ಲಿರುವ ಶುದ್ಧವಾದ ಬ್ರಹ್ಮ ತೇಜಸ್ಸಿನ ಬಲವು ದ್ರೋಣನಲ್ಲಿರುವುದಕ್ಕಿಂತಲೂ ಹೆಚ್ಚಿನದೆಂಬುದರಲ್ಲಿ ಸಂಶಯವೇ ಇಲ್ಲ. ಆದುದರಿಂದ ದ್ರೋಣನನ್ನು ಕೊಲ್ಲಲು ಸಮರ್ಥನಾದ ಒಬ್ಬ ಪುತ್ರನ ಪ್ರಾಪ್ತಿಗಾಗಿ ಯಾಗವನ್ನು ಮಾಡಿಸು. ಅರ್ಬುದಸಂಖ್ಯೆಯ ಗೋವುಗಳನ್ನಾದರೂ ಕೊಡಲು ಸಿದ್ಧನಿರುವೆನು."

ದ್ರುಪದನ ಮಾತುಗಳನ್ನು ಕೇಳಿದನಂತರ ಯಾಜನು ಹಾಗೆಯೇ ಆಗ ಲೆಂದು ದ್ರುಪದನಿಗೆ ಆಶ್ವಾಸನೆಯನ್ನಿತ್ತು, ಯಾಗಕ್ಕೆ ಬೇಕಾಗಬಹುದಾದ ಉಪಕರಣಗಳೇನೆಂಬುದನ್ನು ಯೋಚಿಸತೊಡಗಿದನು. ಯಾಗಪ್ರಕ್ರಿಯೆಯು ಬಹಳ ತೊಡಕಾಗಿದ್ದುದರಿಂದ ನಿಷ್ಕಾಮನಾದ ಉಪಯಾಜನ ಸಹಾಯ ವನ್ನೂ ಕೇಳಿದನು. ಉಪಯಾಜನು ವೈತಾನಕ್ಕೆ (ಯಜ್ಞಕ್ಕೆ) ಬೇಕಾದ ಸಂಭಾರಗಳೆಲ್ಲವನ್ನೂ ದ್ರುಪದನಿಗೆ ವಿಶದವಾಗಿ ತಿಳಿಸಿ–'ಈ ಯಜ್ಞದ ಫಲದಿಂದ ನಿನಗೆ ಮಹಾವೀರ್ಯನಾದ, ಮಹಾತೇಜಸ್ವಿಯಾದ, ಮಹಾ ಬಲನಾದ ಮಗನೊಬ್ಬನು ಹುಟ್ಟುವನು'–ಎಂದು ಹೇಳಿ ರಾಜನ ಆತಂಕ ವನ್ನು ಪರಿಹರಿಸಿದನು.

ಯಾಗಕ್ಕೆ ಸಕಲಸಿದ್ಧತೆಗಳೂ ನಡೆದುವು. ಯಾಗವು ಪ್ರಾರಂಭವಾಗಿ ಪೂರ್ಣಾಹುತಿಯೂ ನಿರ್ವಿಘ್ನವಾಗಿ ನೆರವೇರಿತು. ಪೂರ್ಣಾಹುತಿಯಾದ ನಂತರ ಯಾಜನು ದ್ರುಪದನ ಪತ್ನಿಯನ್ನು ಕರೆದು ಹೇಳಿದನು :

"ಮಹಾರಾಣಿ! ಇತ್ತ ಬಾ! ಒಬ್ಬ ಮಗನೂ ಮತ್ತು ಒಬ್ಬ ಮಗಳೂ ನಿನಗೆ ಹುಟ್ಟುತ್ತಾರೆ. ಈ ಹವಿಸ್ಸನ್ನು ಕೂಡಲೇ ಸ್ವೀಕರಿಸು."

ಯಾಜನ ಮಾತುಗಳನ್ನು ಕೇಳಿ ದ್ರುಪದನ ಪತ್ನಿಯು ಹೇಳಿದಳು :

"ಮಹರ್ಷಿಗಳೇ! ನನ್ನ ಮುಖವು ತಾಂಬೂಲದಿಂದಲೂ, ಶರೀರವು ಸುಗಂಧಿತವಾದ ಅಂಗರಾಗಗಳಿಂದಲೂ ಲೇಪಿತವಾಗಿವೆ. ಆದುದರಿಂದ ಈ ಸಮಯದಲ್ಲಿ ನಾನು ಮುಖವನ್ನು ತೊಳೆಯದೇ ಮತ್ತು ಸ್ನಾನಮಾಡದೇ

ಪವಿತ್ರವಾದ ಹವಿಸ್ಸನ್ನು ಮುಟ್ಟಲು ಯೋಗ್ಯಳಲ್ಲ. ನನಗೆ ಒಳ್ಳೆಯದನ್ನು ಮಾಡುವ ಸಲುವಾಗಿ ನೀವು ಸ್ವಲ್ಪಕಾಲ ತಡೆಯಬೇಕಾಗುವುದು."

ಯಾಜನು ಕಾಲಾವಕಾಶಕ್ಕೆ ಒಪ್ಪಲಿಲ್ಲ. ದ್ರುಪದಪತ್ನಿಗೆ ಕಟುವಾಗಿಯೇ ಹೇಳಿದನು : "ಮಹಾರಾಣಿ! ಹವಿಸ್ಸನ್ನು ತೆಗೆದುಕೊಳ್ಳುವ ಇಚ್ಛೆಯಿದ್ದರೆ ಈಗಲೇ ಆಗಮಿಸಿ ಸ್ವೀಕರಿಸು. ಇಲ್ಲದಿದ್ದರೆ ನಿನ್ನ ಸಂಬಂಧವಿಲ್ಲದೆಯೇ ಇಷ್ಟಾರ್ಥವನ್ನು ಪಡೆಯುವ ಸಾಮರ್ಥ್ಯವು ನನಗಿರುವುದು. ಈ ಹವಿಸ್ಸನ್ನು ನಾನು ಸಿದ್ಧಪಡಿಸಿರುವಾಗ–ಉಪಯಾಜನು ಅಭಿಮಂತ್ರಣ ಮಾಡಿರುವಾಗ–ಇಷ್ಟಾರ್ಥಸಿದ್ಧಿಯ ವಿಷಯದಲ್ಲಿ ನನಗಾವ ಸಂಶಯವೂ ಇರುವುದಿಲ್ಲ."

ರಾಣಿಯು ಸಕಾಲದಲ್ಲಿ ಬರಲಿಲ್ಲ. ಯಾಜನು ರಾಣಿಗಾಗಿ ಸಿದ್ಧಪಡಿಸಿದ್ದ ಹವಿಸ್ಸನ್ನು ಯಜ್ಞೇಶ್ವರನಲ್ಲಿ ಸಮರ್ಪಿಸಿಬಿಟ್ಟನು. ಮರುಕ್ಷಣದಲ್ಲಿಯೇ ಅಗ್ನಿಕುಂಡದ ಮಧ್ಯದಿಂದ ದೇವತೆಯಂತೆಯೇ ಪ್ರಕಾಶಮಾನನಾಗಿದ್ದ, ಕಿರೀಟವನ್ನೂ ಕವಚ-ಕರ್ಣಕುಂಡಲಗಳನ್ನೂ ಧರಿಸಿದ್ದ, ಎರಡು ಕೈಗಳಲ್ಲೂ ಧನುರ್ಬಾಣ-ಖಡ್ಗಗಳನ್ನೂ ಧರಿಸಿದ್ದ ಕುಮಾರನು ಹೊರಕ್ಕೆ ಬಂದನು. ಒಡನೆಯೇ ದಿವ್ಯವಾದ ರಥವೊಂದನ್ನು ಹತ್ತಿ ಕುಳಿತು ಸಿಂಹನಾದಮಾಡುತ್ತಾ ಜೈತ್ರಯಾತ್ರೆಗಾಗಿಯೇ ಹೊರಟನು. ಆ ಅದ್ಭುತವನ್ನು ಕಂಡು ಪಾಂಚಾಲದೇಶದ ಪ್ರಜೆಗಳು 'ಸಾಧು-ಸಾಧು' ಎಂದು ಹೇಳುತ್ತಾ ಆನಂದಸಾಗರದಲ್ಲಿ ಮುಳುಗಿದರು. ಹರ್ಷೋಲ್ಲಸಿತರಾಗಿದ್ದ ಪ್ರಜೆಗಳನ್ನು ಪೃಥ್ವೀದೇವಿಯು ಭರಿಸಲು ಅಸಮರ್ಥಳಾದಳು. ಆ ವೇಳೆಗೆ ಸರಿಯಾಗಿ ಅಶರೀರವಾಣಿಯು–'ದ್ರೋಣನ ವಿನಾಶಕ್ಕಾಗಿಯೇ ಈ ಮಗನು ಹುಟ್ಟಿರುತ್ತಾನೆ. ಪಾಂಚಾಲದೇಶದ ಪ್ರಜೆಗಳಿಗೆ ಯಶಸ್ಸನ್ನೂ ಉಂಟುಮಾಡುವನು. ರಾಜನ ಭಯವನ್ನೂ–ದುಃಖವನ್ನೂ ಈ ಕುಮಾರನು ಹೋಗಲಾಡಿಸುವನು'–ಎಂದು ಹೇಳಿತು.

ಒಂದೆರಡು ಕ್ಷಣಗಳು ಕಳೆದನಂತರ ಯಜ್ಞಕುಂಡದ ಮಧ್ಯಭಾಗದಿಂದ ಪಾಂಚಾಲಿಯೆಂದು ಕರೆಯಲ್ಪಡುವ ಒಬ್ಬಳು ಕನ್ಯೆಯೂ ಹೊರಕ್ಕೆ ಬಂದಳು. ಅವಳ ಕಣ್ಣುಗಳು ಕಪ್ಪಾಗಿಯೂ, ಕಮಲದ ದಳಗಳಂತೆ ವಿಶಾಲವಾಗಿಯೂ ಇದ್ದುವು. ಅವಳ ಶರೀರಕಾಂತಿಯು ಕಪ್ಪಾಗಿಯೂ ತಲೆಗೂದಲು

ನೀಳವಾಗಿಯೂ ಗುಂಗುರು-ಗುಂಗುರಾಗಿಯೂ ಇದ್ದಿತು. ಉಗುರುಗಳು ತಾಮ್ರದಂತೆ ಕೆಂಪಾಗಿದ್ದುವು. ಹುಬ್ಬುಗಳು ಬಹಳ ಸುಂದರವಾಗಿದ್ದುವು. ಸ್ತನಯುಗ್ಮವು ಮನೋಹರವಾಗಿಯೂ, ಸ್ಥೂಲವಾಗಿಯೂ ಇದ್ದು ಆಕೆಯು ಮಾನವರ ಮಧ್ಯದಲ್ಲಿ ಹುಟ್ಟಿರುವ ದೇವತೆಯೋ–ಎಂಬಂತೆ ಕಾಣುತ್ತಿದ್ದಳು.

ಅವಳ ಶರೀರದಿಂದ ಹೊರಟ ಕನ್ನೈದಿಲೆಯ ಸುಗಂಧವು ಸುಮಾರು ಕ್ರೋಶದವರೆಗೂ ಪ್ರಸರಿಸಿದ್ದಿತು. ಪ್ರಪಂಚದಲ್ಲಿ ಅವಳಿಗೆ ಸಮಾನರಾದ ಸುಂದರಿಯರು ಯಾರೂ ಇರಲಿಲ್ಲ. ದೇವ-ದಾನವ-ಯಕ್ಷರೂ ಮದುವೆ ಯಾಗಲು ಅಪೇಕ್ಷಿಪಡುವಷ್ಟು ಸುಂದರಿಯಾಗಿದ್ದಳು. ಅವಳು ಹುಟ್ಟಿ ದಾಗಲೂ ಅಶರೀರವಾಣಿಯಾಯಿತು.

'ಈಗ ಹುಟ್ಟಿರುವ ಸುಂದರಿಯು ಪ್ರಪಂಚದಲ್ಲಿಯೇ ಉತ್ತಮ ಸ್ತ್ರೀ ಎನಿಸುವಳು. ಇವಳು ಹೆಸರು ಕೃಷ್ಣೆ. ಕ್ಷತ್ರಿಯರ ನಾಶಕ್ಕೂ ಇವಳೇ ಕಾರಣಳಾಗುವಳು. ದೇವತೆಗಳ ಇಚ್ಛೆಯನ್ನೂ ಪೂರೈಸುವಳು ಮತ್ತು ಕುರುವಂಶದ ರಾಜರಿಗೆ ಇವಳ ಕಾರಣದಿಂದ ಮಹಾವಿಪತ್ತೂ ಸಂಭ ವಿಸುವುದು.'

ಆ ನುಡಿಗಳನ್ನು ಕೇಳಿ ಅಲ್ಲಿ ನೆರೆದಿದ್ದ ಪಾಂಚಾಲದೇಶದ ಪ್ರಜೆಗಳು ಜಯಕಾರಗಳನ್ನು ಮಾಡಿದರು. ಹರ್ಷತುಂದಿಲರಾದ ಪ್ರಜೆಗಳ ಭಾರವನ್ನು ಭೂದೇವಿಯು ಸಹಿಸದಾದಳು. ಸುಂದರರಾದ ಬಾಲಕ-ಬಾಲಕಿಯರನ್ನು ಕಂಡು ದ್ರುಪದನ ಪತ್ನಿಯು ಕೂಡಲೇ ಯಾಜನ ಬಳಿಗೆ ಬಂದು, ಕೈಮುಗಿದು ಪ್ರಾರ್ಥಿಸಿದಳು : "ಮಹರ್ಷಿಗಳೇ! ಈ ಬಾಲಕ-ಬಾಲಕಿಯರು ನನ್ನನ್ನು ಬಿಟ್ಟು ಮತ್ತಾರನ್ನೂ ತಾಯಿಯೆಂದು ಭಾವಿಸದಿರಲಿ."

ಯಾಜನು–'ಹಾಗೆಯೇ ಆಗಲಿ'–ಎಂದು ಅನುಗ್ರಹಿಸಿದನು.

ಯಾಗದ ಪೂರ್ಣಫಲವು ದೊರೆತನಂತರ ಆನಂದಭರಿತರಾದ ಬ್ರಾಹ್ಮಣರು ಯಜ್ಞಕುಂಡದಿಂದ ಹುಟ್ಟಿದ ಬಾಲಕ-ಬಾಲಕಿಯರಿಗೆ ನಾಮಕರಣವನ್ನೂ ಮಾಡಿದರು.

**ಧೃಷ್ಟತ್ವಾದತ್ಯಮರ್ಷಿತ್ವಾದ್ದ್ಯುಮ್ನಾದ್ಯುತ್ಸಮ್ಭವಾದಪಿ ।**
**ಧೃಷ್ಟದ್ಯುಮ್ನಃ ಕುಮಾರೋಽಯಂ ದ್ರುಪದಸ್ಯ ಭವತ್ವಿತಿ ॥೫೩॥**

**ಕೃಷ್ಣೇತ್ಯೇವಾಬ್ರುವನ್ಕೃಷ್ಣಾಂ ಕೃಷ್ಣಾಭೂತ್ಸಾ ಹಿ ವರ್ಣತಃ ।**
**ತಥಾ ತನ್ಮಿಥುನಂ ಜಜ್ಞೇ ದ್ರುಪದಸ್ಯ ಮಹಾಮಖೇ ॥೫೪॥**

ಹುಟ್ಟುವಾಗಲೇ ತೇಜೋಮಯವಾದ ಕವಚ-ಕುಂಡಲಗಳನ್ನು ಧರಿಸಿದ್ದುದರಿಂದಲೂ, ಹೆಚ್ಚಾದ ಶೌರ್ಯವನ್ನು ಹೊಂದಿದ್ದರಿಂದಲೂ ಮತ್ತು ಬಹಳ ಕೋಪಿಷ್ಠನಾದುದರಿಂದಲೂ ಬಾಲಕನಿಗೆ ಧೃಷ್ಟದ್ಯುಮ್ನ ನೆಂತಲೂ–ಕಪ್ಪಾದ ಶರೀರಕಾಂತಿಯಿದ್ದ ಬಾಲಕಿಗೆ ಕೃಷ್ಣೆಯೆಂತಲೂ ಹೆಸರುಗಳನ್ನಿಟ್ಟರು.

ಬ್ರಾಹ್ಮಣೋತ್ತಮರೇ! ಈ ರೀತಿಯಾಗಿ ದ್ರುಪದನಿಗೆ ಮಹಾಯಾಗದ ಯಜ್ಞವೇದಿಯಲ್ಲಿ ಪುತ್ರ-ಪುತ್ರಿಯರ ಪ್ರಾಪ್ತಿಯಾಯಿತು. ಮಹಾಮಹಿಮರಾದ ದ್ರೋಣರು ಅವೆಲ್ಲವನ್ನೂ ತಿಳಿದಿದ್ದರೂ ದ್ರುಪದಪುತ್ರನನ್ನು ತಮ್ಮ ಸಮೀಪಕ್ಕೆ ಬರಮಾಡಿಕೊಂಡು, ಅವನಿಗೆ ಧನುರ್ವಿದ್ಯೆಯನ್ನು ಪೂರ್ಣವಾಗಿ ಉಪದೇಶಿಸಿದರು.

**ಅಮೋಕ್ಷಣೀಯಂ ದೈವಂ ಹಿ ಭಾವಿ ಮತ್ವಾ ಮಹಾಮತಿಃ ।**
**ತಥಾ ತತ್ಕೃತವಾನ್ದ್ರೋಣ ಆತ್ಮಕೀರ್ತ್ಯನುರಕ್ಷಣಾತ್ ॥೫೬॥**

ದೈವೇಚ್ಛೆಯನ್ನು ಮೀರಲಾಗುವುದಿಲ್ಲವೆಂಬುದನ್ನು ನಿರ್ಧರಿಸಿಯೇ ಮಹಾಮೇಧಾವಿಗಳಾದ ದ್ರೋಣರು–ಧೃಷ್ಟದ್ಯುಮ್ನನೇ ತಮಗೆ ಮುಂದೆ ಮೃತ್ಯುವಾಗುವನೆಂದು ತಿಳಿದಿದ್ದರೂ–ತಮ್ಮ ಯಶಸ್ಸಿನ ರಕ್ಷಣೆಗಾಗಿ ಅವನಿಗೆ ಧನುರ್ವಿದ್ಯೆಯನ್ನು ಉಪದೇಶಿಸಿದರು."

ಗ೬೭ನೆಯ ಅಧ್ಯಾಯವು ಮುಗಿಯಿತು.

## ಪಾಂಚಾಲನಗರಕ್ಕೆ ಹೋಗಲು ಕುಂತಿಯೊಡನೆ ಪಾಂಡವರ ಪ್ರಯಾಣಸಿದ್ಧತೆ

ಪಾರಿಕ್ಷಿತ! ಬ್ರಾಹ್ಮಣನ ಮುಖಾರವಿಂದದಿಂದ ದ್ರೌಪದಿಯ ವರ್ಣನೆಯನ್ನು ಕೇಳಿದ ಪಾಂಡವರ ಮನಸ್ಸಿನಲ್ಲಿ ದ್ರೌಪದಿಯ ಭಾವಚಿತ್ರವು ಮೂಡಿತು. ಈಟಿಯಿಂದ ಘಾಸಿಹೊಂದಿದವರಂತೆ ಪಾಂಡವರು ಮದನನ ಬಾಣಗಳಿಂದ ಘಾಸಿಹೊಂದಿ ವ್ಯಾಕುಲಿತರಾದರು. ಅವರಿಗೆ ಮಾನಸಿಕ ಶಾಂತಿಯೂ ಉಳಿಯಲಿಲ್ಲ. ಆದರೆ ಮನಸ್ಸಿನ ಅಶಾಂತಿಯನ್ನು ಯಾರಲ್ಲಿ ಹೇಳಿಕೊಳ್ಳಲು ಸಾಧ್ಯವಾದೀತು? ಮಹಾಮಾತೆಯಾದ ಕುಂತಿಯು ಮಕ್ಕಳ ಆಗಿನ ಪರಿಸ್ಥಿತಿಯನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿದಳು. ವಿಷಯವೇನಿರಬಹುದೆಂಬುದನ್ನೂ ಗ್ರಹಿಸಿ, ಯುಧಿಷ್ಠಿರನನ್ನು ಕರೆದು ಹೇಳಿದಳು :

“ಮಗು! ಈ ಬ್ರಾಹ್ಮಣನ ಮನೆಯಲ್ಲಿ ನಾವು ಬಹಳ ದಿನಗಳನ್ನೇ ಕಳೆದಿರುತ್ತೇವೆ. ಈ ಊರಿನಲ್ಲಿ ವಾಸಿಸುತ್ತಿರುವ ಸಾಧು-ಸಂತರೂ ಮತ್ತು ಸತ್ಪುರುಷರೂ ಕೊಡುತ್ತಿರುವ ಭಿಕ್ಷೆಯಿಂದ ಬಹಳ ಸುಖವಾಗಿಯೂ ಕಾಲ ಕಳೆಯುತ್ತಿದ್ದೇವೆ. ಈ ಊರಿನ ಸುತ್ತ-ಮುತ್ತಲಿರುವ ಫಲಭರಿತವಾದ ತೋಟಗಳನ್ನೂ, ವೃಕ್ಷಗಳಿಂದ ನಿಬಿಡವಾದ ಮಹಾರಣ್ಯಗಳನ್ನೂ ಹಲವು ಬಾರಿ ನೋಡಿರುತ್ತೇವೆ. ಇವುಗಳನ್ನೇ ಪುನಃ ಪುನಃ ನೋಡುವುದು ಮನಸ್ಸಿಗೆ ಹೆಚ್ಚು ಹರ್ಷವನ್ನುಂಟುಮಾಡುವುದಿಲ್ಲ. ಭಿಕ್ಷೆಯೂ ನಮಗೆ ಮೊದಲು ಸಿಕ್ಕುತ್ತಿದ್ದಂತೆ ಯಥೇಚ್ಛವಾಗಿ ಸುಲಭವಾಗಿ ಸಿಕ್ಕುತ್ತಿಲ್ಲ. ಆದುದರಿಂದ ನೀನು ಒಪ್ಪುವೆಯಾದರೆ ಪಾಂಚಾಲದೇಶಕ್ಕೆ ಹೋಗುವುದು ಒಳ್ಳೆಯದೆಂದು ನನಗನಿಸುತ್ತಿದೆ. ನಾವು ಇದುವರೆಗೂ ಆ ದೇಶವನ್ನು ನೋಡಿಯೂ ಇಲ್ಲ. ಆದುದರಿಂದ ಮೊದಲ ನೋಟವು ನಮಗೆ ಹರ್ಷವನ್ನುಂಟುಮಾಡುವುದರಲ್ಲಿ ಸಂಶಯವೇ ಇಲ್ಲ. ಮೇಲಾಗಿ, ಪಾಂಚಾಲದೇಶವು ಸುಭಿಕ್ಷವಾಗಿರುವುದೆಂದೂ, ಧನ-ಧಾನ್ಯ-ಜಲಸಮೃದಿಯಿಂದ ಕೂಡಿರುವ ದೇಶವೆಂದೂ ಕೇಳಿರುತ್ತೇನೆ. ಇದರಿಂದಾಗಿ ನಮಗೆ ಯಥೇಚ್ಛವಾದ ಭಿಕ್ಷೆಯೂ ಸಿಕ್ಕುವುದು. ಅಲ್ಲಿ

ರಾಜನಾಗಿರುವ ಯಜ್ಞಸೇನನೂ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೆಂದು ಕೇಳಿರುತ್ತೇನೆ. ಆದುದರಿಂದ ಒಳ್ಳೆಯ ರಾಜನ ಆಶ್ರಯವನ್ನೂ ಪಡೆದಂತಾ ಗುವುದು. ಅಲ್ಲದೇ ಹೆಚ್ಚುಕಾಲ ಒಂದೇ ಸ್ಥಳದಲ್ಲಿರುವುದೂ ಒಳ್ಳೆಯದಲ್ಲ ವೆಂಬುದು ನನ್ನ ಅಭಿಪ್ರಾಯ. ಈ ಕಾರಣಗಳಿಂದ ನೀನು ಒಪ್ಪುವೆಯಾದರೆ ಅಲ್ಲಿಗೇ ಹೊರಟುಹೋಗೋಣ."

ಪಾಂಚಾಲಿಯನ್ನೇ ಧ್ಯಾನಿಸುತ್ತಿದ್ದ ಪಾಂಡವರು ಪಾಂಚಾಲದೇಶಕ್ಕೆ ಹೋಗಲು ಒಪ್ಪದಿರುವರೇ? ಆದರೂ ಯುಧಿಷ್ಠಿರನು ತನ್ನ ಮನಸ್ಸಿನ ಆತುರವನ್ನು ತೋರ್ಪಡಿಸದೇ ಯಥೋಚಿತವಾಗಿಯೇ ಮಾತನಾಡಿದನು :

"ಅಮ್ಮಾ! ನಿನ್ನ ಆಜ್ಞೆಯನ್ನು ನಿರ್ವಹಿಸುವುದು ನಮ್ಮ ಮುಖ್ಯ ಕರ್ತವ್ಯ. ಮೇಲಾಗಿ ನೀನು ನಮ್ಮ ಹಿತಕ್ಕಾಗಿಯೇ ಹೇಳುತ್ತಿರುವೆಯಾದ್ದರಿಂದ ನಿನ್ನ ಮಾತಿಗೆ ನನ್ನ ಸಂಪೂರ್ಣಸಮ್ಮತಿಯಿದೆ. ಆದರೆ ನನ್ನ ಅನುಜರ ಅಭಿಪ್ರಾಯಗಳು ಹೇಗಿರುವುದೋ ತಿಳಿಯದು."

ಕುಂತಿಯು ಭೀಮಾರ್ಜುನ-ನಕುಲ-ಸಹದೇವರನ್ನೂ ಕರೆದು ಪ್ರಯಾ ಣದ ವಿಷಯವನ್ನು ತಿಳಿಸಿದಳು. ಎಲ್ಲರೂ ಸಂತೋಷದಿಂದಲೇ ತಾಯಿಯ ಮಾತಿಗೆ ಒಪ್ಪಿದರು.

ತಮಗೆ ಅದುವರೆಗೂ ಆಶ್ರಯವನ್ನಿತ್ತಿದ್ದ ಬ್ರಾಹ್ಮಣನಿಗೆ ನಮಸ್ಕರಿಸಿ, ಆಶೀರ್ವಾದಗಳನ್ನೂ ಪಡೆದ ಪಾಂಡವರು ತಾಯಿಯೊಡನೆ ಮಹಾತ್ಮನಾದ ದ್ರುಪದನ ಸುಂದರನಗರಿಯ ಕಡೆಗೆ ಹೊರಡಲು ಸಿದ್ಧರಾದರು.

೧೯೮ನೆಯ ಅಧ್ಯಾಯವು ಮುಗಿಯಿತು.

೧೯೯ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ವ್ಯಾಸರಿಂದ ದ್ರೌಪದಿಯ ಪೂರ್ವಜನ್ಮವೃತ್ತಾಂತಕಥನ

ಜನಮೇಜಯ! ಪಾಂಡವರು ಏಕಚಕ್ರನಗರಿಯಲ್ಲಿ ವೇಷವನ್ನು ಮರೆಸಿಕೊಂಡು ಇರುವಾಗಲೇ ಸತ್ಯವತೀಸುತರಾದ ವ್ಯಾಸರು ಪಾಂಡವರನ್ನು ನೋಡುವ ಸಲುವಾಗಿ ಬ್ರಾಹ್ಮಣನ ಮನೆಗೆ ಆಗಮಿಸಿದರು.

ಮಹರ್ಷಿಗಳು ಬಂದೊಡನೆಯೇ ಪಾಂಡವರೆಲ್ಲರೂ ಮೇಲೆದ್ದು, ಮುಂದೆಹೋಗಿ ಸ್ವಾಗತಿಸಿ, ಒಳಕ್ಕೆ ಕರೆತಂದರು. ಅನಂತರ ಪವಿತ್ರವಾದ

ದರ್ಭಾಸನದಲ್ಲಿ ಕುಳ್ಳಿರಿಸಿ, ಅರ್ಘ್ಯ-ಪಾದ್ಯಾದಿಗಳಿಂದ ಯಥಾವಿಧಿಯಾಗಿ ಸತ್ಕರಿಸಿ ಬದ್ಧಾಂಜಲಿಗಳಾಗಿ ಆಜ್ಞೆಯನ್ನು ನಿರೀಕ್ಷಿಸುತ್ತಾ ವ್ಯಾಸರ ಸುತ್ತಲೂ ನಿಂತರು.

ರಹಸ್ಯದಲ್ಲಿ ಮಾಡಿದ ಪಾಂಡವರ ಸತ್ಕಾರದಿಂದ ವ್ಯಾಸರು ಸಂತೃಪ್ತ ರಾಗಿ, ಅವರನ್ನು ಕುಳಿತುಕೊಳ್ಳಲು ಹೇಳಿ, ಮುಗುಳ್ನಗೆಯನ್ನು ಬೀರುತ್ತಾ ಅಮೃತಧಾರಾಸಮಾನವಾದ ನಾಲ್ಕು ಮಾತುಗಳನ್ನಾಡಿದರು :

"ವೀರರೇ! ನೀವು ಎಂತಹ ಕಷ್ಟಕಾಲಗಳಲ್ಲಿಯೂ ಧರ್ಮಮಾರ್ಗ ವನ್ನು ಬಿಡದೇ ಶಾಸ್ತ್ರವಿಹಿತವಾದ ಮಾರ್ಗದಲ್ಲಿಯೇ ನಡೆಯುತ್ತಿರುವಿ ರಲ್ಲವೇ? ಪೂಜಾರ್ಹರಾದ ಬ್ರಾಹ್ಮಣರನ್ನು ಯಥಾಯೋಗ್ಯವಾಗಿ ಸತ್ಕರಿಸುತ್ತಿರುವಿರಲ್ಲವೇ? ಅವರಿಗೆ ಮಾಡಬೇಕಾದ ಉಪಚಾರಗಳಲ್ಲಿ ಲೋಪ-ದೋಷಗಳುಂಟಾಗದ ರೀತಿಯಲ್ಲಿ ನೋಡಿಕೊಳ್ಳುತ್ತಿರುವಿರಲ್ಲವೇ? ಆಪತ್ಕಾಲಗಳಲ್ಲಿಯೂ ಧರ್ಮಮಾರ್ಗವನ್ನು ಬಿಡದಿರುವುದೂ, ಶಾಸ್ತ್ರವಿಹಿತ ವಾದ ಮಾರ್ಗದಲ್ಲಿ ನಡೆಯುವುದೂ, ಪೂಜಾರ್ಹರಾದ ಬ್ರಾಹ್ಮಣರನ್ನು ಸತ್ಕರಿಸುವುದೂ–ನಿಮ್ಮ ಕರ್ತವ್ಯವಾಗಿರುತ್ತದೆ."

ಜನಮೇಜಯ! ವ್ಯಾಸರು ಪಾಂಡವರನ್ನು ಹೀಗೆ ಪ್ರಶ್ನಿಸಿ ಅವರು ಯಥೋಕ್ತವಾಗಿ ಉತ್ತರಿಸಿದನಂತರ ಧರ್ಮಯುಕ್ತವಾದ ಇನ್ನೂ ಹಲವು ಮಾತುಗಳನ್ನು ಹೇಳಿ ತಾವು ಹೇಳಿದ ಮಾತುಗಳಿಗೆ ವಿಚಿತ್ರವಾದ ಕಥೆಗಳ ಮೂಲಕವಾಗಿ ಅನೇಕನಿದರ್ಶನಗಳನ್ನೂ ಕೊಡುತ್ತಿದ್ದರು.

ಪ್ರಸಂಗಾಂತರದಲ್ಲಿ ಮತ್ತೊಂದು ಕಥೆಯನ್ನೂ ಅವರು ಹೇಳಲು ಉಪಕ್ರಮಿಸಿದರು :

"ಮಹಾತ್ಮನಾದ ಮಹರ್ಷಿಯೊಬ್ಬನ ತಪೋವನದಲ್ಲಿ ಕೆಂದುಟಿ ಗಳಿಂದಲೂ, ಸುಂದರವಾದ ಕಣ್ಣು-ಹುಬ್ಬುಗಳಿಂದಲೂ, ತೆಳುವಾದ ಕಟಿ ಪ್ರದೇಶದಿಂದಲೂ ಕೂಡಿದ್ದ ಕಡುಚೆಲುವೆಯಾದ ಋಷಿಕನ್ಯೆಯೊಬ್ಬಳಿದ್ದಳು. ಅವಳು ಅಷ್ಟು ಚೆಲುವೆಯಾಗಿದ್ದರೂ ಪ್ರಾರಬ್ಧವಶದಿಂದ ಅವಳಿಗೆ ಯೋಗ್ಯ ನಾದ ಪತಿಯು ಸಿಕ್ಕಿರಲಿಲ್ಲ. ಋಷಿಕನ್ಯೆಯು ಜೀವನದಲ್ಲಿ ಬಹಳ ಬೇಸರ ಗೊಂಡು ತಪಸ್ಸನ್ನಾದರೂ ಮಾಡಿ ಪತಿಯನ್ನು ಹೊಂದಬೇಕೆಂಬ ಇಚ್ಛೆ

ಯಿಂದ ದೇವದೇವನಾದ ಶಂಕರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡತೊಡಗಿದಳು. ದಯಾಮಯನಾದ ಮಹಾದೇವನು ಇವಳ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ, ಋಷಿಪುತ್ರಿಯನ್ನು ಕುರಿತು–'ಋಷಿಪುತ್ರಿಯೇ! ನೀನು ಆರಾಧಿಸುತ್ತಿರುವ ಶಂಕರನೇ ನಾನು. ನಿನ್ನ ಅಚಲವಾದ ತಪಶ್ಚರಣೆಗಾಗಿ ಸುಪ್ರೀತನಾಗಿರುವೆನು. ನಿನಗೆ ಮಂಗಳವಾಗಲಿ. ನಿನಗೆ ಬೇಕಾದ ವರವನ್ನು ಕೊಡಲು ಸಿದ್ಧನಿರುವೆನು'–ಎಂದು ಹೇಳಿದನು. ಹೀಗೆ ಹೇಳಿದೊಡನೆಯೇ ಋಷಿಪುತ್ರಿಯ ಕಣ್ಣಳಿಂದ ಆನಂದಬಾಷ್ಪಗಳು ಸುರಿದುವು. 'ಸರ್ವಗುಣ ಸಂಪನ್ನನಾದ ಪತಿಯನ್ನು ಅಪೇಕ್ಷಿಸುತ್ತೇನೆ'–ಎಂದು ಪುನಃ-ಪುನಃ ಶಂಕರನನ್ನು ಹಲವಾರು ಬಾರಿ ಕೇಳಿಕೊಂಡಳು. 'ಮಗಳೇ! ಭರತಕುಲೋತ್ಪನ್ನರಾದ ಐವರು ರಾಜಕುಮಾರರು ನಿನ್ನ ಪತಿಗಳಾಗುವರು' – ಎಂದು ಈಶಾನನು ನುಡಿದೊಡನೆಯೇ ಋಷಿಪುತ್ರಿಗೆ ಗಾಬರಿ ಯಾಯಿತು. 'ಮಹಾದೇವ! ದಯಾಮಯ! ನಿನ್ನ ಅನುಗ್ರಹದಿಂದ ನನಗೆ ಒಬ್ಬನೇ ಪತಿಯು ಸಿಗುವಂತಾಗಲಿ' ಎಂದು ದೈನ್ಯದಿಂದ ಕೇಳಿಕೊಂಡ ಋಷಿಪುತ್ರಿಯನ್ನು ಸಂತೈಸುತ್ತಾ ಶಂಕರನು ಹೇಳಿದನು :

" ಮಗಳೇ! ನೀನು ಐದು ಬಾರಿ ' ಪತಿಂ ದೇಹಿ ಪ್ರಭೋ!' ಎಂದು ಕೇಳಿಕೊಂಡೆಯಲ್ಲವೇ? ಆದುದರಿಂದ ಮುಂದಿನ ಜನ್ಮದಲ್ಲಿ ನಿನಗೆ ಐವರು ಪತಿಗಳು ಸಿಕ್ಕುವರು"–ಎಂದು ಹೇಳಿ ಮಹಾದೇವನು ಅದೃಶ್ಯನಾದನು.

ಮಕ್ಕಳಿರಾ! ಆ ಋಷಿಪುತ್ರಿಯೇ ಇಂದು ದ್ರುಪದನ ಪುತ್ರಿಯಾಗಿ ಜನಿಸಿರುವಳು. ನಿಮ್ಮೆಲ್ಲರಿಗೂ ಅವಳು ಪತ್ನಿಯಾಗಬೇಕೆಂಬುದು ವಿಧಿ ನಿಯಮವೇ ಆಗಿದೆ. ಆದುದರಿಂದ ನೀವೆಲ್ಲರೂ ಈಗ ಯೋಚಿಸಿರು ವಂತೆಯೇ ಪಾಂಚಾಲನಗರಿಗೆ ಹೋಗಿ ವಾಸಿಸಿರಿ. ಅವಳನ್ನು ವರಿಸಿದ ನೀವು ನಿಶ್ಚಯವಾಗಿಯೂ ಸುಖಿಗಳಾಗುವಿರಿ."

ವ್ಯಾಸರು ಹೀಗೆ ಹೇಳಿ ಪಾಂಡವರನ್ನು ಆಶೀರ್ವದಿಸಿ, ಕುಂತಿಯನ್ನೂ ಆಶ್ವಾಸಿಸಿ, ಹೊರಟುಹೋದರು.

೧೬೯ನೆಯ ಅಧ್ಯಾಯವು ಮುಗಿಯಿತು.

## ಪಾಂಡವರ ಪಾಂಚಾಲದೇಶಪ್ರಯಾಣ : ಮಾರ್ಗದಲ್ಲಿ ಚೈತ್ರರಥನೊಡನೆ ಅರ್ಜುನನ ಯುದ್ಧ: ಗಂಧರ್ವನ ಪರಾಜಯ : ಅರ್ಜುನನೊಡನೆ ಮೈತ್ರಿ

ಜನಮೇಜಯ! ಭಗವಾನ್ ವ್ಯಾಸರು ಹೊರಟುಹೋದನಂತರ ಚೆಲುವೆಯಾದ ದ್ರೌಪದಿಯು ತಮ್ಮ ಪತ್ನಿಯಾಗುವಳೆಂಬುದನ್ನು ತಿಳಿದ ಪಾಂಡವರು ಸಂತುಷ್ಟಾಂತರಂಗರಾಗಿ, ತಾಯಿಯನ್ನು ಮುಂದೆಮಾಡಿ ಕೊಂಡು ಪಾಂಚಾಲದೇಶದ ಕಡೆಗೆ ಪ್ರಯಾಣಹೊರಟರು.

ನಾನು ಹಿಂದೆಯೇ ಹೇಳಿದಂತೆ ಪಾಂಡವರು ಪ್ರಯಾಣಹೊರಡುವ ಮೊದಲು ತಮಗೆ ಆಶ್ರಯವನ್ನಿತ್ತಿದ್ದ ಬ್ರಾಹ್ಮಣನನ್ನು ತಮ್ಮ ಮನೆಗೆ ಆಮಂತ್ರಿಸಿ, ಅವನನ್ನು ಯಥೋಚಿತವಾಗಿ ಸತ್ಕರಿಸಿ, ಅಭಿವಾದನಮಾಡಿ ಪ್ರಯಾಣಮಾಡಲು ಅನುಮತಿಯನ್ನು ಪಡೆದವರಾಗಿ, ಹಳ್ಳ-ತಿಟ್ಟುಗಳಿಲ್ಲದೇ ಸಮವಾಗಿದ್ದ ಉತ್ತರದಿಕ್ಕಿನ ಹಾದಿಯನ್ನು ಹಿಡಿದು, ತಾವು ಉದ್ದೇಶಿಸಿದ್ದ ಪಟ್ಟಣದ ಕಡೆಗೆ ಹೊರಟರು.

ದ್ರುಪದನ ಪಟ್ಟಣವನ್ನು ಶೀಘ್ರವಾಗಿ ತಲುಪಬೇಕೆಂಬ ಉತ್ಸಾಹದಿಂದ ಒಂದು ಹಗಲು ಮತ್ತು ಒಂದು ರಾತ್ರಿ ಏಕಪ್ರಕಾರವಾಗಿ ಪ್ರಯಾಣ ಮಾಡುತ್ತಾ, ಗಂಗಾತೀರದಲ್ಲಿರುವ ಸೋಮಾಶ್ರಯಾಯಣವೆಂಬ ತೀರ್ಥ ವನ್ನು ತಲುಪಿದರು. ರಾತ್ರಿಯ ವೇಳೆಯಲ್ಲಿ ಅರ್ಜುನನೇ ದೀಪದ ಪಂಜನ್ನು ಹಿಡಿದುಕೊಂಡು ಪಾಂಡವರೆಲ್ಲರಿಗೂ ದಾರಿಯನ್ನು ತೋರುತ್ತಾ–ರಕ್ಷಿಸುತ್ತಾ ಅವರನ್ನು ಹಳ್ಳ-ಕೊಳ್ಳಗಳಿಲ್ಲದೆಡೆಗಳಲ್ಲಿ ಕರೆದೊಯ್ಯುತ್ತಿದ್ದನು. ಪಾಂಡವರು ಗಂಗಾತೀರಕ್ಕೆ ಬರುವ ವೇಳೆಗೆ ರಾತ್ರಿಯಾಗಿದ್ದಿತು. ಅವರು ಬರುವ ವೇಳೆಗೆ ಸರಿಯಾಗಿ ದರ್ಪದಿಂದ ಕೂಡಿದ್ದ ಗಂಧರ್ವನೊಬ್ಬನು ತನ್ನ ಪತ್ನಿಯರೊಡನೆ ಜಲಕ್ರೀಡೆಯನ್ನಾಡುತ್ತಿದ್ದನು. ಅವನಿಗೆ ಪಾಂಡವರ ಕಾಲ್ಗಳ ಸಪ್ಪಳವು ಕೇಳಿಸಿತು.

ಪಾಂಡವರು ತಮ್ಮೆಡೆಗೇ ಬರುತ್ತಿರುವುದನ್ನು ಕಂಡು ಗಂಧರ್ವನಿಗೆ ಸಹಿಸಲಾರದ ಕೋಪವೇ ಉಂಟಾಯಿತು.

ಪಾಂಡವರು ತಾಯಿಯೊಡನೆ ಹತ್ತಿರಕ್ಕೆ ಬರುತ್ತಿದ್ದಂತೆಯೇ ಗಂಧರ್ವನು ಸ್ವಲ್ಪವೂ ವಿವೇಚಿಸದೇ ಧನುಷ್ಟೇಂಕಾರಮಾಡುತ್ತಾ ಪಾಂಡವರನ್ನು ಕುರಿತು ಹೇಳಿದನು :

**ಸಂಧ್ಯಾ ಸಂರಜ್ಯತೇ ಘೋರಾ ಪೂರ್ವರಾತ್ರಾಗಮೇಷು ಯಾ ।**
**ಅಶೀತಿಭಿರ್ಲವೈರ್ಹೀನಂ ತನ್ಮುಹೂರ್ತಂ ಪ್ರಚಕ್ಷತೇ ॥೮॥**

**ವಿಹಿತಂ ಕಾಮಚಾರಾಣಾಂ ಯಕ್ಷಗನ್ಧರ್ವರಕ್ಷಸಾಮ್ ।**
**ಶೇಷಮನ್ಯನ್ಮನುಷ್ಯಾಣಾಂ ಕರ್ಮಚಾರೇಷು ವೈ ಸ್ಮೃತಮ್ ॥೯॥**

"ರಾತ್ರಿಗೆ ಮೊದಲು ಅಂದರೆ ಸೂರ್ಯಾಸ್ತಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿ ಕೆಂಪಿನಿಂದ ಕೂಡಿದ ಭಯಂಕರವಾದ ಸಂಧ್ಯೆಯು ಆವಿರ್ಭವಿಸುತ್ತದೆ. ಆ ಸಮಯದಲ್ಲಿ ಮೊದಲನೆಯ ಎಂಬತ್ತು ಲವಗಳ ಕಾಲವನ್ನು ( ನಲವತ್ತು ಕ್ಷಣಗಳು ) ಬಿಟ್ಟು ಉಳಿದ ಕಾಲವು ಸ್ವೇಚ್ಛಾಚಾರಿಗಳಾದ ಯಕ್ಷ-ಗಂಧರ್ವ-ರಾಕ್ಷಸರು ಸಂಚರಿಸುವ ಮುಹೂರ್ತವೆಂದು ನಿಶ್ಚಿತವಾಗಿದೆ. ಉಳಿದ ಕಾಲವು ಎಂದರೆ ಹಗಲಿನ ವೇಳೆಯು ಮಾನವರಿಗೆ ಕಾರ್ಯಮಾಡಲು ಅರ್ಥಾತ್ ಸಂಚರಿಸಲು ಯೋಗ್ಯವಾದ ಕಾಲವೆಂದು ಹೇಳಲ್ಪಟ್ಟಿದೆ.

ಆದುದರಿಂದ ಯಕ್ಷ-ಗಂಧರ್ವ-ರಾಕ್ಷಸರ ಸಂಚಾರಕ್ಕೆಂದೇ ನಿರ್ದಿಷ್ಟವಾಗಿರುವ ಈ ವೇಳೆಯಲ್ಲಿ ಲೋಭದಿಂದ ಮಾನವರು ಬಂದರೆ ಅಂತಹ ಅವಿವೇಕಿಗಳನ್ನು ಗಂಧರ್ವರಾದ ನಾವೂ ರಾಕ್ಷಸರೂ ಸೇರಿ ಸೆರೆಹಿಡಿಯುತ್ತೇವೆ. ಈ ಕಾರಣದಿಂದಲೇ ಮಾನವರು ರಾತ್ರಿಯ ವೇಳೆಯಲ್ಲಿ ನದಿಯ ಸಮೀಪಕ್ಕೆ ಹೋಗುವುದು ಅನುಚಿತವೆಂದು ವೇದಪಾರಂಗತರಾದವರು ಹೇಳುತ್ತಾರೆ. ಚತುರಂಗಬಲಸಮೇತನಾಗಿರುವ ರಾಜನೂ ರಾತ್ರಿಯ ವೇಳೆಯಲ್ಲಿ ನದಿಗಳ ಸಮೀಪಕ್ಕೆ ಬರಲಾರನು. ಈ ವಿಷಯಗಳನ್ನು ತಿಳಿಯದಿರುವ ನೀವು ಅವಿವೇಕಿಗಳೇ ಸರಿ. ಕೂಡಲೇ ದೂರಸರಿದು ನಿಲ್ಲಿರಿ. ನನ್ನ ಸಮೀಪಕ್ಕೆ ಬರಬೇಡಿರಿ. ನಾನು ನನ್ನ ಪತ್ನಿಯರೊಡನೆ ನದಿಯಲ್ಲಿ ಸ್ನಾನಮಾಡುತ್ತಿರುವೆನೆಂಬುದೂ ನಿಮಗೆ ತಿಳಿಯದೇಹೋಯಿತೇ? ಮಾನವರೇ! ಮೊದಲು ನಾನಾರೆಂಬುದನ್ನಾದರೂ ತಿಳಿಯಿರಿ. ಭುಜಬಲ-ಪರಾಕ್ರಮಗಳಿಂದ ಕೂಡಿರುವ ಅಂಗಾರಪರ್ಣನೆಂಬ ಗಂಧರ್ವನು ನಾನು. ನನಗೆ ಸ್ವಾಭಿಮಾನ

ವೆಂಬುದು ಬಹಳ ಹೆಚ್ಚಿನದು. ಅಂತೆಯೇ ಕೋಪವೂ ಹೆಚ್ಚು. ನನ್ನ ಮರ್ಯಾದೆಗೆ ಕುಂದುಂಟಾಗುವುದನ್ನು ಖಂಡಿತವಾಗಿಯೂ ನಾನು ಸಹಿಸ ಲಾರೆನು. ನಾನು ಕುಬೇರನ ಮಿತ್ರನಾಗಿಯೂ ಇರುವೆನು. ನೀವೀಗ ಪ್ರವೇಶಿಸಿರುವ ವನಕ್ಕೂ ಅಂಗಾರಪರ್ಣವೆಂದೇ ಹೆಸರು. ಇಲ್ಲಿಯೇ ನಾನು ಸ್ವೇಚ್ಛೆಯಿಂದ ವಿಹರಿಸುತ್ತಾ ಕಾಲಕಳೆಯುವೆನು. ಈ ಪ್ರದೇಶಕ್ಕೆ ದೇವತೆಗಳಾಗಲೀ, ರಾಕ್ಷಸರಾಗಲೀ, ಗಂಧರ್ವರಾಗಲೀ, ಯಕ್ಷರಾಗಲೀ–ಬರಲಾರರು. ಹೀಗಿರುವಾಗ ಹುಲುಮನುಜರಾದ ನಿಮಗೆ ಇಲ್ಲಿಗೆ ಬರುವ ಧೈರ್ಯವು ಹೇಗೆ ತಾನೇ ಉಂಟಾಯಿತು?"

ಆ ಆರ್ಭಟವನ್ನು ಕೇಳಿದ ಪರಾಕ್ರಮಿಯಾದ ಅರ್ಜುನನಿಗೆ ಸಹನೆಯು ಮೀರಿತು. ಗಂಧರ್ವನನ್ನು ಕುರಿತು ಹೇಳಿದನು :

**ಸಮುದ್ರೇ ಹಿಮವತ್ಪಾರ್ಶ್ವೇ ನದ್ಯಾಮಸ್ಯಾಂ ಚ ದುರ್ಮತೇ ।**
**ರಾತ್ರಾವಹನಿ ಸಂಧ್ಯಾಯಾಂ ಕಸ್ಯ ಗುಪ್ತಃ ಪರಿಗ್ರಹಃ ॥೧೬॥**

**ಭುಕ್ತೋ ವಾಪ್ಯಥವಾಭುಕ್ತೋ ರಾತ್ರಾವಹನಿ ಖೇಚರ ।**
**ನ ಕಾಲನಿಯಮೋ ಹ್ಯಸ್ತಿ ಗಙ್ಗಾಂ ಪ್ರಾಪ್ಯ ಸರಿದ್ವರಾಮ್ ॥೧೭॥**

"ದುಷ್ಟಬುದ್ಧಿಯೇ! ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ, ಸಂಧ್ಯಾ ಕಾಲದಲ್ಲಾಗಲೀ–ಸಮುದ್ರ, ಹಿಮವತ್ಪರ್ವತ, ಗಂಗಾನದೀ–ಈ ಸ್ಥಳಗಳಿಗೆ ಹೋಗಲು ಯಾರ ಅಡ್ಡಿಯು ತಾನೇ ಇರುವುದು? ಅಥವಾ ಯಾರು ತಾನೇ ಅಡ್ಡಿಮಾಡಬಲ್ಲರು? ಹೊಟ್ಟೆ ತುಂಬಿರಲಿ, ಉಪವಾಸವಿರಲಿ, ಹಗಲಿನಲ್ಲಾ ಗಲೀ, ರಾತ್ರಿಯಲ್ಲಾಗಲೀ–ಗಂಗಾನದಿಗೆ ಹೋಗಬಹುದು. ಇಂತಹವನು ಇದೇ ಸಮಯದಲ್ಲಿಯೇ ಪವಿತ್ರವಾದ ಗಂಗಾನದಿಗೆ ಹೋಗಬೇಕೆಂಬುದಕ್ಕೆ ಕಾಲವೇ ಮೊದಲಾದ ಯಾವುದೇ ವಿಧವಾದ ನಿಯಮಗಳೇನೂ ಇರುವುದಿಲ್ಲ.

**ವಯಂ ಚ ಶಕ್ತಿಸಮ್ಪನ್ನಾ ಅಕಾಲೇ ತ್ವಾಮಧೃಷ್ಣುಮ ।**
**ಅಶಕ್ತಾ ಹಿ ರಣೇ ಕ್ರೂರ ಯುಷ್ಮಾನರ್ಚನ್ತಿ ಮಾನವಾಃ ॥೧೮॥**

ಕ್ರೂರಿಯೇ! ನಮ್ಮ ವಿಷಯದಲ್ಲಿ ಹೇಳುವುದಾದರೆ : ಅಸದೃಶ ವಾದ ಶಕ್ತಿಯನ್ನು ಹೊಂದಿರುವ ನಾವು ನಿನ್ನ ವಿಷಯವಾಗಿ ಭಯಪಡುವ

ಕಾರಣವೇನೂ ಇರುವುದಿಲ್ಲ. ಸಮಯವಲ್ಲದಿದ್ದರೂ ಧೈರ್ಯದಿಂದಲೇ ನಿನ್ನ ಕ್ರೀಡೆಗೆ ಭಂಗತರಲು ಸಿದ್ಧರಿದ್ದೇವೆ. ಅದರಿಂದುಂಟಾಗಬಹುದಾದ ಅಪಾಯವನ್ನೂ ಎದುರಿಸುವೆವು. ಯುದ್ಧಮಾಡಲು ಅಶಕ್ತರಾಗಿರುವ ಮಾನವರು ಮಾತ್ರವೇ ನಿಮ್ಮನ್ನು ಪೂಜಿಸುವರು.

**ಪುರಾ ಹಿಮವತಶ್ಚೈಷಾ ಹೇಮಶೃಙ್ಗಾದ್ವಿನಿಃಸೃತಾ ।**
**ಗಙ್ಗಾ ಗತ್ವಾ ಸಮುದ್ರಾಮ್ಬುಃ ಸಪ್ತಧಾ ಸಮಪದ್ಯತ ॥೧೯॥**

**ಗಙ್ಗಾಂ ಚ ಯಮುನಾಂ ಚೈವ ಪ್ಲಕ್ಷಜಾತಾಂ ಸರಸ್ವತೀಮ್ ।**
**ರಥಸ್ಥಾಂ ಸರಯೂಂ ಚೈವ ಗೋಮತೀಂ ಗಣ್ಡಕೀಂ ತಥಾ ॥೨೦॥**

**ಅಪರ್ಯುಷಿತಪಾಪಾಸ್ತೇ ನದೀಃ ಸಪ್ತ ಪಿಬನ್ತಿ ಯೇ ।**
**ಇಯಂ ಭೂತ್ವಾ ಚೈಕವಪ್ರಾ ಶುಚಿರಾಕಾಶಗಾ ಪುನಃ ॥೨೧॥**

**ದೇವೇಷು ಗಙ್ಗಾ ಗನ್ಧರ್ವ ಪ್ರಾಪ್ನೋತ್ಯಲಕನನ್ದತಾಮ್ ।**
**ತಥಾ ಪಿತೄನ್ವೈತರಣೀ ದುಸ್ತರಾ ಪಾಪಕರ್ಮಭಿಃ ।**
**ಗಙ್ಗಾ ಭವತಿ ವೈ ಪ್ರಾಪ್ಯ ಕೃಷ್ಣದ್ವೈಪಾಯನೋಽಬ್ರವೀತ್ ॥೨೨॥**

ಮೂಢನಾದ ಗಂಧರ್ವನೇ! ಪೂರ್ವಕಾಲದಲ್ಲಿ ಈ ಗಂಗಾನದಿಯು ಹಿಮವತ್ಪರ್ವತದ ಸ್ವರ್ಣಶಿಖರದಿಂದ ಹುಟ್ಟಿ–ಗಂಗಾ, ಯಮುನಾ, ಸರಸ್ವತೀ, ರಥಸ್ಥಾ, ಸರಯೂ, ಗೋಮತೀ ಮತ್ತು ಗಂಡಕೀ–ಎಂಬ ಏಳು ವಿಭಾಗಗಳಾಗಿ ಒಡೆಯಿತು. ಪಾನಮಾಡಿದವರ ಪಾಪಗಳನ್ನು ಪರಿಹರಿಸುತ್ತಾ ಈ ನದಿಗಳು ಸಮುದ್ರವನ್ನು ಸೇರುವುವು. ಇದೇ ಗಂಗಾನದಿಯು ದೇವ ಲೋಕದಲ್ಲಿ ಪ್ರವಹಿಸುತ್ತಾ 'ಅಲಕನಂದಾ' ಎಂಬ ಹೆಸರನ್ನು ಪಡೆಯು ವುದು. ಪಿತೃಲೋಕದಲ್ಲಿ 'ವೈತರಣೀ' ಎಂಬ ಹೆಸರಿನಿಂದ ಪ್ರವಹಿಸುವುದು. ಪಾಪಿಷ್ಠರಾದವರಿಗೆ ಈ ನದಿಯನ್ನು ದಾಟಿಹೋಗಲು ಬಹಳ ಕಷ್ಟವೇ ಆಗುವುದು. ಈ ಕಾರಣಗಳಿಂದ ಈ ಮಹಾನದಿಯು ತ್ರಿಲೋಕಪಾವನಿ ಯೆಂಬ ಹೆಸರನ್ನು ಪಡೆದಿದೆ. ಗಂಗಾನದಿಯ ಈ ರಹಸ್ಯವನ್ನು ಮಹರ್ಷಿ ಗಳಾದ ಕೃಷ್ಣದ್ವೈಪಾಯನರೇ ಹೇಳಿರುವರು. ಪರಮಪಾವನೆಯಾದ ಇವಳ ಸ್ಪರ್ಶದಿಂದಲೇ ಅನೇಕ ಪಾಪಗಳು ಪರಿಹಾರವಾಗುವುದು ಮಾತ್ರವಲ್ಲದೇ–ಇವಳ ದರ್ಶನದಿಂದ ಎಲ್ಲ ಸಂಕಟಗಳೂ ಪರಿಹಾರವಾಗುವುವು.

**ಅಸಮ್ಬಾಧಾ ದೇವನದೀ ಸ್ವರ್ಗಸಮ್ಪಾದನೀ ಶುಭಾ ।**
**ಕಥಮಿಚ್ಛಸಿ ತಾಂ ರೋದ್ಧುಂ ನೈಷ ಧರ್ಮಃ ಸನಾತನಃ ॥೨೩॥**

ಕಲ್ಯಾಣಮಯಿಯಾದ ಈ ದೇವನದಿಯು ಸಕಲವಿಧವಾದ ಬಾಧೆಗಳನ್ನೂ ಹೋಗಲಾಡಿಸುವ ಸಾಮರ್ಥ್ಯವನ್ನು ಪಡೆದಿದೆ. ಶುಭಾವಹವಾದ ಇದು ತನ್ನಲ್ಲಿ ಮಿಂದವರಿಗೆ ಸ್ವರ್ಗಪ್ರಾಪಕವಾಗುತ್ತದೆ. ಇಂತಹ ಪರಮ ಪಾವನವಾದ ಪುಣ್ಯನದಿಯ ಸಮೀಪಕ್ಕೆ ಬರುತ್ತಿರುವ ನಮ್ಮನ್ನು ನೀನು ಹೇಗೆ ತಾನೇ ಪ್ರತಿಬಂಧಿಸುವೆ? ಹೀಗೆ ಮಾಡುವುದು ಖಂಡಿತವಾಗಿಯೂ ಸನಾತನಧರ್ಮವಲ್ಲ. ಯಾರಿಂದಲೂ ನಿರ್ಬಂಧಪಡಿಸಲು ಸಾಧ್ಯವಿಲ್ಲದ, ಯಾರ ಬಾಧೆಯೂ ಇಲ್ಲದ ಪರಮಪಾವನವಾದ ಗಂಗಾಜಲವನ್ನು ನಿನ್ನ ಮಾತಿನಿಂದ ಮುಟ್ಟದಿರುವೆವೇ? ನಾವು ನಮ್ಮ ಇಚ್ಛಾನುಸಾರವಾಗಿ ಮುಟ್ಟಿಯೇ ಮುಟ್ಟುತ್ತೇವೆ. ಇದನ್ನು ನಿಶ್ಚಯವಾಗಿಯೂ ತಿಳಿದಿರು, ಗಂಧರ್ವ!"

ಪತ್ನಿಯರ ಎದುರಿನಲ್ಲಿ ಅರ್ಜುನನಿಂದ ತನಗುಂಟಾದ ತಿರಸ್ಕಾರವನ್ನು ಅಂಗಾರಪರ್ಣನು ಸಹಿಸಲಿಲ್ಲ. ಅವನು ಜಲಕ್ರೀಡೆಯನ್ನು ಅಲ್ಲಿಗೇ ನಿಲ್ಲಿಸಿ ಧನುಸ್ಸಿಗೆ ಹೆದೆಯನ್ನೇರಿಸಿ, ವಿಷಕಕ್ಕುವ ಸರ್ಪಗಳಂತಿದ್ದ ಅತಿತೀಕ್ಷ್ಣವಾದ ಬಾಣಗಳ ವೃಷ್ಟಿಯನ್ನೇ ಅರ್ಜುನನ ಮೇಲೆ ಸುರಿಸಿದನು. ಆದರೆ ಅವನ ಬಾಣಗಳ ಪ್ರವಾಹವು ಅರ್ಜುನನಿಗೆ ಸ್ವಲ್ಪವಾದರೂ ನೋವನ್ನುಂಟು ಮಾಡಲು ಸಮರ್ಥವಾಗಲಿಲ್ಲ. ಬಲಗೈಯಲ್ಲಿದ್ದ ಪಂಜನ್ನೇ ವರಸೆ-ವರಸೆಯಾಗಿ ತಿರುಗಿಸುತ್ತಾ ತನ್ನೆದುರಾಗಿ ಬರುತ್ತಿದ್ದ ಬಾಣಗಳೆಲ್ಲವನ್ನೂ ಮೈಮೇಲಿದ್ದ ಅಜಿನದಿಂದಲೇ ತಡೆಯುತ್ತಾ, ಶೂರನಾದ ಗಂಧರ್ವನನ್ನು ಕುರಿತು ಹೇಳಿದನು: "ಗಂಧರ್ವರಾ ಜ! ಧನುರ್ವಿದ್ಯಾವಿಶಾರದರನ್ನು ಹೆದರಿಸಲು ಯತ್ನಿಸಬೇಡ. ಏಕೆಂದರೆ: ಅವರ ಮೇಲೆ ನೀನು ಮಾಡುವ ಬಾಣ ಪ್ರಯೋಗಗಳು–ನೀರಿನಲ್ಲುಂಟಾಗುವ ನೊರೆಯಂತೆ–ಕ್ಷಣಮಾತ್ರದಲ್ಲಿ ವಿಲೀನವಾಗಿ ಹೋಗುವುವು. ಗಂಧರ್ವರು ಸಾಮಾನ್ಯಮಾನವರಿಗಿಂತಲೂ ಹೆಚ್ಚು ಪರಾಕ್ರಮಿಗಳೆಂಬ ವಿಷಯವು ನನಗೂ ತಿಳಿದಿರುವುದು. ಆದುದರಿಂದ ನಿನ್ನ ಗರ್ವವನ್ನು ಮುರಿಯಲು ನಾನು ದಿವ್ಯಾಸ್ತ್ರವನ್ನೇ ಪ್ರಯೋಗ ಮಾಡುವೆನು. ಮಾಯಾಯುದ್ಧವನ್ನು ಮಾಡುವುದಿಲ್ಲ. ಈಗ ನಾನು ನಿನ್ನ

ಮೇಲೆ ಬಿಡಲಿರುವ ಈ ದಿವ್ಯಾಸ್ತ್ರವು ದೇವೇಂದ್ರನಿಗೆ ಆಚಾರ್ಯನಾದ, ಪೂಜ್ಯನಾದ ಬೃಹಸ್ಪತಿಯಿಂದ ಭರದ್ವಾಜರಿಗೆ ಉಪದೇಶಿಸಲ್ಪಟ್ಟಿತು. ಭರದ್ವಾಜರು ಈ ದಿವ್ಯಾಸ್ತ್ರದ ಉಪದೇಶವನ್ನು ಅಗ್ನಿವೇಶ್ಯರಿಗೂ, ಅಗ್ನಿವೇಶ್ಯರು ಇದರ ಉಪದೇಶವನ್ನು ನಮ್ಮ ಗುರುಗಳಾದ ದ್ರೋಣರಿಗೂ ಮಾಡಿದರು. ದ್ರೋಣರ ಅನುಗ್ರಹದಿಂದ ಈ ಅಸ್ತ್ರದ ಪ್ರಯೋಗ ಮತ್ತು ಉಪಸಂಹಾರಾದಿಗಳನ್ನು ನಾನು ತಿಳಿದುಕೊಂಡಿರುವೆನು. ಈ ದಿವ್ಯಾಸ್ತ್ರಕ್ಕೆ ಆಗ್ನೇಯಾಸ್ತ್ರವೆಂದು ಹೆಸರು"–ಎಂದು ಹೇಳಿ, ಅರ್ಜುನನು ಆಗ್ನೇಯಾಸ್ತ್ರವನ್ನು ಅಭಿಮಂತ್ರಣಮಾಡಿ ಗಂಧರ್ವನ ಮೇಲೆ ಪ್ರಯೋಗಮಾಡಿದನು. ದಿವ್ಯಾಸ್ತ್ರವು ಕೆಂಡಗಳನ್ನು ಕಾರುತ್ತಾ ಕ್ಷಣಮಾತ್ರದಲ್ಲಿ ಗಂಧರ್ವನು ಕುಳಿತಿದ್ದ ರಥವನ್ನು ಭಸ್ಮಮಾಡಿತು. ಅಸ್ತ್ರದ ಜ್ವಾಲೆಗಳನ್ನು ತಡೆಯಲಾರದೇ ಗಂಧರ್ವನು ಚೇತನಾಹೀನನಾಗಿ ಕೆಳಗುರುಳಿದನು. ಅರ್ಜುನನು ಒಡನೆಯೇ ಅವನ ಬಳಿಗೆ ಹೋಗಿ, ಗಂಧ-ಪುಷ್ಪ-ಹಾರಗಳಿಂದ ಅಲಂಕೃತವಾಗಿದ್ದ ಗಂಧರ್ವನ ಮುಡಿಯನ್ನು ಹಿಡಿದು ದರ-ದರನೆ ಸೆಳೆಯುತ್ತಾ, ಯುಧಿಷ್ಠಿರಾದಿಗಳಿದ್ದೆಡೆಗೆ ತಂದುಹಾಕಿದನು.

ಅದುವರೆಗೂ ಪತಿಯ ಪೌರುಷವನ್ನು ಕುತೂಹಲದಿಂದ ನೋಡುತ್ತಿದ್ದ ಕುಂಭೀನಸಿಯು ತನ್ನ ಪತಿಗೊದಗಿದ ದುರವಸ್ಥೆಯನ್ನು ನೋಡಿ ಕಣ್ಣೀರಿಡುತ್ತಾ, ಪತಿಯ ಪ್ರಾಣಗಳನ್ನಾದರೂ ಉಳಿಸಿಕೊಳ್ಳಬೇಕೆಂಬ ಅಭಿಲಾಷೆಯಿಂದ ಯುಧಿಷ್ಠಿರನೆಡೆಗೆ ಧಾವಿಸಿ ಬಂದು ಪ್ರಾರ್ಥಿಸತೊಡಗಿದಳು :

"ಮಹಾಭಾಗ! ರಕ್ಷಿಸು. ನನ್ನ ಪತಿಯ ವಿಮೋಚನೆಯನ್ನು ಮಾಡು. ನಾನು ಈ ಗಂಧರ್ವನ ಪತ್ನಿಯು. ಕುಂಭೀನಸೀ ಎಂದು ನನ್ನನ್ನು ಕರೆ ಯುವರು. ನನ್ನ ಪತಿಯ ಪ್ರಾಣಗಳನ್ನುಳಿಸಿಕೊಳ್ಳಲು ನಿನ್ನ ಮರೆಹೊಕ್ಕು ಬಂದಿರುವೆನು"–ಎಂದು ಬದ್ಧಾಂಜಲಿಯಾಗಿ ಅಂಗಲಾಚಿಬೇಡಿದಳು. ಮಹಾನುಭಾವನಾದ ಯುಧಿಷ್ಠಿರನಿಗೆ ಕುಂಭೀನಸಿಯ ದುಃಖವನ್ನು ಹೋಗ ಲಾಡಿಸಬೇಕೆಂಬ ಇಚ್ಛೆಯಾಯಿತು. ಅರ್ಜುನನನ್ನು ಕುರಿತು ಹೇಳಿದನು :

"ರಿಪುಸೂದನ! ಯುದ್ಧದಲ್ಲಿ ಪರಾಜಿತರಾದವರನ್ನೂ ಯಶೋಹೀನ ರಾದವರನ್ನೂ ಸ್ತ್ರೀಯರಿಂದ ಪ್ರಾಣಭಿಕ್ಷೆಯನ್ನು ಪ್ರಾರ್ಥಿಸಲ್ಪಟ್ಟವರನ್ನೂ

ಮತ್ತು ಶಕ್ತಿಗುಂದಿರುವವರನ್ನೂ–ಅವರು ಶತ್ರುಗಳೇ ಆಗಿದ್ದರೂ–ಯಾರು ತಾನೇ ಕೊಲ್ಲುತ್ತಾರೆ? ಯಾರೂ ಕೊಲ್ಲಲಾರರು. ಕೊಲ್ಲಲೂಬಾರದು. ಆದುದರಿಂದ ಪತಿಯ ಪ್ರಾಣಭಿಕ್ಷೆಯನ್ನು ಬೇಡುತ್ತಿರುವ ಗಂಧರ್ವಿಗೆ ಅವಳ ಪತಿಯನ್ನು ಒಪ್ಪಿಸಿಬಿಡು."

ಅಣ್ಣನ ಮಾತಿನಂತೆ ಒಡನೆಯೇ ಅರ್ಜುನನು ಗಂಧರ್ವನ ಮುಡಿಯನ್ನು ಬಿಟ್ಟು, ಅವನಿಗೆ ಹೇಳಿದನು : "ಗಂಧರ್ವ! ಪ್ರಾಣಸಹಿತವಾಗಿಯೇ ನಿನ್ನನ್ನು ಬಿಟ್ಟುಬಿಟ್ಟಿದ್ದೇನೆ. ಹೊರಟುಹೋಗು. 'ನನ್ನ ಸ್ಥಿತಿಯು ಹೀಗಾಯಿತಲ್ಲಾ!'–ಎಂದು ದುಃಖಿಸಬೇಡ. ಮಹಾನುಭಾವನಾದ ಯುಧಿಷ್ಠಿರನು ನಿನ್ನ ಮೇಲೆ ಕರುಣೆತೋರಲು ಆಜ್ಞೆಮಾಡಿರುತ್ತಾನೆ."

ಗಂಧರ್ವನು ನಾಚಿ, ತಲೆಯನ್ನು ತಗ್ಗಿಸಿಕೊಂಡು ಸ್ವಲ್ಪದೂರದಲ್ಲಿ ನಿಂತು ಹೇಳಿದನು : "ಅರ್ಜುನ! ನಿನ್ನಿಂದ ನಾನು ಪರಾಜಿತನಾಗಿದ್ದೇನೆ. ಆದುದರಿಂದ 'ಅಂಗಾರಪರ್ಣ' ಎಂಬ ಹೆಸರನ್ನೂ ಇಂದಿನಿಂದ ತ್ಯಜಿಸಿಬಿಡುತ್ತೇನೆ. ಅನ್ವರ್ಥವಲ್ಲದ ಈ ಹೆಸರಿನಿಂದ ಪ್ರಯೋಜನವೇನಿದೆ? ನನ್ನ ದರ್ಪ-ಪರಾಕ್ರಮಗಳು ಮುರಿದುಬಿದ್ದ ಮೇಲೆ ಕೇವಲ ನಾಮಮಾತ್ರದಿಂದ ಅಹಂಕಾರಪಡುವುದು ಯುಕ್ತವಲ್ಲ. ಆದರೆ ನಾನು ನಿನ್ನಿಂದ ಪರಾಜಯವನ್ನು ಹೊಂದಿದುದಕ್ಕಾಗಿ ದುಃಖಪಡುವುದಿಲ್ಲ. ದಿವ್ಯಾಸ್ತ್ರಗಳನ್ನು ಹೊಂದಿರುವ ನಿನ್ನನ್ನು ಈ ಪ್ರಸಂಗದಲ್ಲಿ ಸಂಧಿಸಿದುದು ನನ್ನ ಸುಯೋಗವೆಂದೇ ಭಾವಿಸಿದ್ದೇನೆ. ಮುಂದೆಯೂ ಸಹ ನಿನ್ನೊಡನೆ ಸ್ನೇಹದಿಂದಿರುವ ಅಭಿಲಾಷೆಯಿಂದಿರುವೆನು. ಅದಕ್ಕಾಗಿಯೇ ಗಂಧರ್ವರಿಗೆ ಮಾತ್ರವೇ ತಿಳಿದಿರುವ ಮಹಾವಿದ್ಯೆಯ ಪ್ರಕ್ರಿಯೆಯನ್ನು ನಿನಗೆ ಪೂರ್ಣವಾಗಿ ಉಪದೇಶಿಸುವ ಇಚ್ಛೆಯಿಂದಿರುತ್ತೇನೆ. ನಿನ್ನ ಆಗ್ನೇಯಾಸ್ತ್ರದಿಂದ ನನ್ನ ಉತ್ತಮವಾದ ಚಿತ್ರರಥವು ಭಸ್ಮವಾಗಿ ಹೋಯಿತು. ಇದರಿಂದಾಗಿ ನನ್ನ ರಥದ ಸಂಬಂಧದಿಂದ ಚಿತ್ರರಥನೆಂದು ಪ್ರಸಿದ್ಧಿಹೊಂದಿದ್ದ ನಾನು ದಗ್ಧರಥನಾಗಿರುತ್ತೇನೆ. ಪಾರ್ಥ! ಈ ಮಹಾಯುದ್ಧ ಪ್ರಕ್ರಿಯೆಯು ಪೂರ್ವಕಾಲದಲ್ಲಿ ಬಹಳ ಘೋರವಾದ ತಪಸ್ಸನ್ನು ಮಾಡಿದ ನಂತರ ನನಗೆ ಪ್ರಾಪ್ತವಾಯಿತು. ನನಗೆ ಪ್ರಾಣದಾನವನ್ನು ಮಾಡಿರುವ ನಿನಗೆ ಇಂದು ನಾನು ಆ ವಿದ್ಯೆಯನ್ನು ಉಪದೇಶಮಾಡುವೆನು.

**ಸಂಸ್ತಮ್ಭಯಿತ್ವಾ ತರಸಾ ಜಿತಂ ಶರಣಮಾಗತಮ್ ।**
**ಯೋ ರಿಪುಂ ಯೋಜಯೇತ್ಪ್ರಾಣೈಃ ಕಲ್ಯಾಣಂ ಕಿಂ ನ ಸೋಽರ್ಹತಿ ॥**

ಯುದ್ಧದಲ್ಲಿ ಶತ್ರುವನ್ನು ಪರಾಜಯಗೊಳಿಸಿ, ಸೆರೆಹಿಡಿದನಂತರ ಅವನ ಪ್ರಾರ್ಥನೆಯನ್ನು ಅಂಗೀಕರಿಸಿ ಪ್ರಾಣದಾನವನ್ನು ಮಾಡಿದ ಮಹಾನುಭಾವನು ಶುಭಾವಹವಾದ ವಿದ್ಯೆಯ ಪ್ರಾಪ್ತಿಗೆ ಹೇಗೆತಾನೇ ಅರ್ಹನಾಗುವುದಿಲ್ಲ? ಅರ್ಜುನ! ನೀನು ಈ ವಿದ್ಯೆಯನ್ನು ಪಡೆಯಲು ನಿಶ್ಚಯವಾಗಿಯೂ ಸತ್ಪಾತ್ರನು.

**ಚಾಕ್ಷುಷೀ ನಾಮ ವಿದ್ಯೇಯಂ ಯಾಂ ಸೋಮಾಯ ದದೌ ಮನುಃ ।**
**ದದೌ ಸ ವಿಶ್ವಾವಸವೇ ಮಮ ವಿಶ್ವಾವಸುರ್ದದೌ ॥೪೩॥**

'ಚಾಕ್ಷುಷೀ' ಎಂದು ಈ ವಿದ್ಯೆಗೆ ಹೆಸರು. ಈ ವಿದ್ಯೆಯು ಮೊದಲು ಮನುವಿನಿಂದ ಸೋಮನಿಗೂ, ಅನಂತರ ಸೋಮನಿಂದ ವಿಶ್ವಾವಸುವಿಗೂ, ವಿಶ್ವಾವಸುವಿನಿಂದ ನನಗೂ ಉಪದೇಶಿಸಲ್ಪಟ್ಟಿತು.

**ಸೇಯಂ ಕಾಪುರುಷಂ ಪ್ರಾಪ್ತಾ ಗುರುದತ್ತಾ ಪ್ರಣಶ್ಯತಿ ।**
**ಆಗಮೋಽಸ್ಯಾ ಮಯಾ ಪ್ರೋಕ್ತೋ ವೀರ್ಯಂ**
**ಪ್ರತಿನಿಬೋಧ ಮೇ ॥೪೪॥**

ಈ ಮಹಾವಿದ್ಯೆಯು ಗುರುವಿನಿಂದ ಉಪದಿಷ್ಟವಾಗಿದ್ದರೂ ಉಪದೇಶ ಹೊಂದಿದವನು ಕಾಪುರುಷನಾಗಿದ್ದರೆ (ಪರಾಕ್ರಮಹೀನನಾಗಿದ್ದರೆ) ಈ ವಿದ್ಯೆಯು ನಷ್ಟವಾಗಿ ಹೋಗುತ್ತದೆ. ಈ ವಿದ್ಯೆಯನ್ನು ಪಡೆಯುವವನು ಶ್ರೇಷ್ಠಪುರುಷನಾಗಿರಬೇಕು. ಈ ವಿದ್ಯೆಯು ನನಗೆ ಗುರುಪರಂಪರೆಯಿಂದ ಹೇಗೆ ಪ್ರಾಪ್ತವಾಯಿತೆಂಬುದನ್ನು ಹೇಳಿದೆನಲ್ಲವೇ? ಈ ಚಾಕ್ಷುಷೀವಿದ್ಯೆಯ ಶಕ್ತಿಯು ಎಷ್ಟೆಂಬುದನ್ನಾದರೂ ವಿವರಿಸುವೆನು, ಕೇಳು :

**ಯಚ್ಚಕ್ಷುಷಾ ದ್ರಷ್ಟುಮಿಚ್ಛೇತ್ತ್ರಿಷು ಲೋಕೇಷು ಕಿಂಚನ ।**
**ತತ್ಪಶ್ಯೇದ್ಯಾದೃಶಂ ಚೇಚ್ಛೇತ್ತಾದೃಶಂ ದ್ರಷ್ಟುಮರ್ಹತಿ ॥೪೫॥**

ಈ ವಿದ್ಯೆಯ ಉಪದೇಶವನ್ನು ಪಡೆದಿರುವವನು ಮೂರು ಲೋಕಗಳಲ್ಲಿರುವ ಯಾವ ಒಂದು ವಸ್ತುವನ್ನಾದರೂ ಸ್ಮರಣಮಾತ್ರದಿಂದಲೇ

ನೋಡಬಹುದು ಮತ್ತು ಆ ವಸ್ತುವನ್ನು ಯಾವ ರೂಪದಿಂದ (ಸೂಕ್ಷ್ಮ ಅಥವಾ ಬೃಹದ್ರೂಪ) ನೋಡಲಿಚ್ಛಿಸುವನೋ ಅದೇ ರೂಪದಿಂದಲೇ ಕಾಣ ಬಹುದು. ಈ ವಿದ್ಯೆಯನ್ನು ಪಡೆಯುವ ಅರ್ಹತೆಯುಂಟಾಗಬೇಕಾದರೆ :

**ಏಕಪಾದೇನ ಷಣ್ಮಾಸಾನ್ಸ್ಥಿತೋ ವಿದ್ಯಾಂ ಲಭೇದಿಮಾಮ್ ।**
**ಅನುನೇಷ್ಯಾಮ್ಯಹಂ ವಿದ್ಯಾಂ ಸ್ವಯಂ ತುಭ್ಯಂ ವ್ರತೇಽಕೃತೇ ॥೪೬॥**

ಒಂದೇ ಕಾಲಿನಲ್ಲಿ ನಿಂತು ಆರುತಿಂಗಳ ಕಾಲ ತಪಸ್ಸನ್ನು ಮಾಡಬೇಕು. ಆದರೆ ನಾನು ಈ ವಿದ್ಯೆಯನ್ನು–ನೀನು ಯಾವ ವಿಧವಾದ ವ್ರತಾಚರಣೆಗಳನ್ನು ಮಾಡದಿದ್ದರೂ–ಉಪದೇಶಿಸುವೆನು. ಪಾರ್ಥ! ಚಾಕ್ಷುಷೀವಿದ್ಯೆಯು ಗಂಧರ್ವರಿಗಿರುವುದರಿಂದಲೇ ಅವರು ಮಾನವರಿಗಿಂತಲೂ ಶ್ರೇಷ್ಠ ರೆನಿಸಿರುವರು. ನಾವು ಅಂತರ್ಮುಖರಾಗಿ ಭೂತ-ಭವಿಷ್ಯದ್ವರ್ತಮಾನ ಗಳನ್ನು ತಿಳಿಯುವೆವಾದ್ದರಿಂದ ದೇವತೆಗಳಿಗೆ ಸಮಾನವಾದ ಪ್ರಭಾವವನ್ನೂ ಹೊಂದಿರುವೆವು.

ಮಹಾಪುರುಷನೇ! ನಾನು ನಿನಗೆ ಮತ್ತು ನಿನ್ನ ಸಹೋದರರಿಗೆ ನೂರು-ನೂರು ಕುದುರೆಗಳನ್ನು ಕಾಣಿಕೆಯಾಗಿ ಕೊಡಲು ನಿಶ್ಚಯಿಸಿರುವೆನು. ಇವು ಗಂಧರ್ವಲೋಕದಲ್ಲಿ ಹುಟ್ಟಿ ದಿವ್ಯರೂಪವನ್ನು ಹೊಂದಿರುವುದು ಮಾತ್ರವಲ್ಲದೇ-ಮನಸ್ಸಿಗಿಂತಲೂ ವೇಗವಾಗಿ ಓಡಬಲ್ಲವು. ದೇವತೆಗಳ ಮತ್ತು ಗಂಧರ್ವರ ವಾಹನಕ್ಕಾಗಿ ಈ ಕುದುರೆಗಳನ್ನು ಉಪಯೋಗಿಸ ಲಾಗುತ್ತಿದೆ. ಇವು ನೋಡಲು ಬಹಳ ಕೃಶವಾಗಿ ಕಂಡರೂ–ಸ್ವಲ್ಪವೂ ಆಯಾಸವಿಲ್ಲದೆಯೇ ಬಹಳ ವೇಗವಾಗಿ ಬಹುದೂರ ಹೋಗಬಲ್ಲುವು.

**ಪುರಾ ಕೃತಂ ಮಹೇನ್ದ್ರಸ್ಯ ವಜ್ರಂ ವೃತ್ರನಿಬರ್ಹಣಮ್ ।**
**ದಶಧಾ ಶತದಾ ಚೈವ ತಚ್ಛೀರ್ಣಂ ವೃತ್ರಮೂರ್ಧನಿ ॥೫೦॥**

ಹಿಂದೆ ವೃತ್ರಾಸುರನ ಸಂಹಾರಕ್ಕಾಗಿ ವಜ್ರಾಯುಧವು 'ದಧೀಚಿ' ಎಂಬ ಮಹರ್ಷಿಯ ಬೆನ್ನಿನ ಮೂಳೆಯಿಂದ ಮಾಡಲ್ಪಟ್ಟು ಇಂದ್ರನಿಗೆ ಕೊಡಲ್ಪಟ್ಟಿತೆಂಬ ವಾರ್ತೆಯನ್ನು ಕೇಳಿರುವೆಯಲ್ಲವೇ? ಇಂದ್ರನು ಆ ವಜ್ರಾ ಯುಧವನ್ನು ವೃತ್ರಾಸುರನ ತಲೆಯ ಮೇಲೆ ರಭಸದಿಂದ ಅಪ್ಪಳಿಸಿದಾಗ ವೃತ್ರಾಸುರನು ಮರಣಹೊಂದಿದ್ದು ಮಾತ್ರವಲ್ಲದೇ–ವಜ್ರಾಯುಧವೂ ಹತ್ತು

ನೂರು ಭಾಗಗಳಾಗಿ ಒಡೆದುಹೋಯಿತು. ಹಾಗೆ ಒಡೆದುಹೋದ ವಜ್ರಾಯುಧದ ಚೂರುಗಳನ್ನು ದೇವತೆಗಳು ಉಪಾಸನೆಮಾಡುತ್ತಾರೆ. ಲೋಕದಲ್ಲಿ ಉತ್ಕೃಷ್ಟವೆನಿಸಿರುವ ಧನ, ಕೀರ್ತಿ–ಇವುಗಳೆಲ್ಲವೂ ವಜ್ರಾಯುಧದ ವಿಭಾಗಗಳೇ ಆಗಿವೆ.

ಯಜ್ಞೇಶ್ವರನಿಗೆ ಹವಿಸ್ಸನ್ನರ್ಪಿಸುವ ಬ್ರಾಹ್ಮಣರು ವಜ್ರಪಾಣಿಗಳು. ಯುದ್ಧಕಾಲದಲ್ಲಿ ಉತ್ತಮರಥವನ್ನು ಉಪಯೋಗಿಸುವ ಕ್ಷತ್ರಿಯರು ವಜ್ರರಥರು. ಶ್ರೇಷ್ಠದಾನವನ್ನು ಕೊಡುವ ವೈಶ್ಯರು ದಾನವಜ್ರರು. ಈ ಕಾರಣದಿಂದಲೇ ಕ್ಷತ್ರಿಯನ ವಜ್ರರಥಕ್ಕೆ ಕಟ್ಟುವ ಈ ಕುದುರೆಗಳೂ ವಜ್ರಾಯುಧದ ಭಾಗವೆನಿಸುವುದರಿಂದ ಅವಧ್ಯವಾದುವುಗಳು. ಇದಕ್ಕಿಂತಲೂ ಹೆಚ್ಚಾಗಿ ರಥಾಂಗವೆನಿಸಿರುವ ಕುದುರೆಗಳು ವಡವೆಯಲ್ಲಿ* ಉತ್ಪನ್ನವಾದುವುಗಳು. ಇಂತಹ ಅಶ್ವಕೋಟಿಗಳಲ್ಲಿ ಗಂಧರ್ವಲೋಕದಲ್ಲಿ ಹುಟ್ಟಿರುವ ಕುದುರೆಗಳಿಗೆ ವಿಶೇಷವಾದ ಶಕ್ತಿಯಿರುವುದು. ಇವು ತಮ್ಮ ಯಜಮಾನನು ಇಚ್ಛಿಸಿದಷ್ಟು ವೇಗವಾಗಿ ಹೋಗಬಲ್ಲುವು ಮತ್ತು ಯಜಮಾನನು ಇಚ್ಛಿಸಿದ ಬಣ್ಣಗಳನ್ನೂ ಹೊಂದಬಲ್ಲುವು. ನಾನು ನಿನಗೆ ಕೊಡಲಿರುವ ಕುದುರೆಗಳು ನಿಮ್ಮ ಇಚ್ಛೆಯನ್ನು ಪೂರ್ಣಮಾಡಬಲ್ಲುವು."

ಅರ್ಜುನನು ಎಲ್ಲವನ್ನೂ ಸಾವಧಾನವಾಗಿ ಕೇಳಿದನಂತರ ಗಂಧರ್ವನಿಗೆ ಹೇಳಿದನು :

**ಯದಿ ಪ್ರೀತೇನ ಮೇ ದತ್ತಂ ಸಂಶಯೇ ಜೀವಿತಸ್ಯ ವಾ ।**
**ವಿದ್ಯಾಧನಂ ಶ್ರುತಂ ವಾಪಿ ನ ತದ್ಗನ್ಧರ್ವ ರೋಚಯೇ ॥೫೫॥**

"ಗಂಧರ್ವನೇ! ನೀನು ಪ್ರಸನ್ನನಾಗಿ ಅಥವಾ ನಿನ್ನ ಪ್ರಾಣಗಳನ್ನು ಉಳಿಸಿದುದಕ್ಕೆ ಪ್ರತಿಫಲವಾಗಿ ವಿದ್ಯಾಧನವನ್ನಾಗಲೀ, ಅಶ್ವಗಳನ್ನಾಗಲೀ ಕೊಡುವೆಯಾದರೆ ನಾನವನ್ನು ಸ್ವೀಕರಿಸಲು ಇಚ್ಛಿಸುವುದಿಲ್ಲ. ಶಾಸ್ತ್ರೋಪದೇಶವನ್ನೂ ಮಾಡಿಸಿಕೊಳ್ಳುವುದಿಲ್ಲ. ನಾನು ಯಾವಾಗಲೂ ದಾನವನ್ನಾಗಲೀ ಪ್ರತಿಫಲವನ್ನಾಗಲೀ ಸ್ವೀಕರಿಸಲಾರೆನು."

---

* ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು ಕಾರಣಾಂತರದಿಂದ ಹೆಣ್ಣುಕುದುರೆ (ವಡವಾ ) ಯಾಗಿದ್ದಾಗ ಅವಳಲ್ಲಿ ಸೂರ್ಯನಿಂದ ಹುಟ್ಟಿದ ಕುದುರೆಗಳು ಅಥವಾ ವಡವಾಗ್ನಿ.

**ಸಂಯೋಗೇ ವೈ ಪ್ರೀತಿಕರೋ ಮಹತ್ಸು ಪ್ರತಿದೃಶ್ಯತೇ ।**
**ಜೀವಿತಸ್ಯ ಪ್ರದಾನೇನ ಪ್ರೀತೋ ವಿದ್ಯಾಂ ದದಾಮಿ ತೇ ॥೫೭॥**

**ತ್ವತ್ತೋಽಪ್ಯಹಂ ಗ್ರಹೀಷ್ಯಾಮಿ ಅಸ್ತ್ರಮಾಗ್ನೇಯಮುತ್ತಮಮ್ ।**
**ತಥೈವ ಯೋಗ್ಯಂ ಬೀಭತ್ಸೋ ಚಿರಾಯ ಭರತರ್ಷಭ ॥೫೮॥**

"ಅರ್ಜುನ! ಹಾಗೆಂದೂ ಹೇಳಲಾಗದು. ಸತ್ಪುರುಷರ ಸಮಾಗಮವೇ ಅತ್ಯಂತಪ್ರಿಯವಾದುದು. ಇದಕ್ಕಿಂತಲೂ ಹೆಚ್ಚಾಗಿ, ನೀನು ನನಗೆ ಪ್ರಾಣದಾನವನ್ನು ಮಾಡಿರುವೆ. ಇದಕ್ಕೆ ಕೃತಜ್ಞತೆಯನ್ನು ತೋರಲು ನನ್ನಲ್ಲಿರುವ ವಿದ್ಯೆಯನ್ನು ಉಪದೇಶಿಸಲು ಇಚ್ಛಿಸಿರುವೆನು. ಒಂದು ವೇಳೆ ನಿನಗದು ಸಹ್ಯವೆನಿಸದಿದ್ದರೆ ನಿನ್ನಲ್ಲಿರುವ ಆಗ್ನೇಯಮಹಾಸ್ತ್ರವನ್ನು ನನಗುಪದೇಶಿಸಿ, ನನ್ನಲ್ಲಿರುವ ಚಾಕ್ಷುಷೀವಿದ್ಯೆಯನ್ನು ನೀನು ಪಡೆಯಬಹುದಾಗಿದೆ. ನಮ್ಮಿಬ್ಬರ ಮೈತ್ರಿಯು ಚಿರಕಾಲ ಉಳಿಯಲು ಇದು ಸಾಧಕವಾಗಿದೆ."

"ಗಂಧರ್ವ! ಹಾಗೆಯೇ ಆಗಲಿ. ವಿನಿಮಯಕ್ಕೆ ನಾನೂ ಒಪ್ಪುವೆನು. ನಿನ್ನ ಇಚ್ಛೆಯಂತೆಯೇ ನಮ್ಮ ಮೈತ್ರಿಯು ಚಿರಕಾಲವಿರಲೆಂದು ನಾನೂ ಅಭಿಲಾಷಿಸುವೆನು. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನಿತ್ತು ನನ್ನ ಸಮಸ್ಯೆಗಳನ್ನು ಪರಿಹರಿಸುವೆಯಾ?

**ಸಖೇ ತದ್ಬ್ರೂಹಿ ಗನ್ಧರ್ವ ಯುಷ್ಮಭ್ಯೋ ಯದ್ಭಯಂ ಭವೇತ್ ।**
**ಕಾರಣಂ ಬ್ರೂಹಿ ಗನ್ಧರ್ವ ಕಿಂ ತದ್ಯೇನ ಸ್ಮ ಧರ್ಷಿತಾಃ ।**
**ಯಾನ್ತೋ ವೇದವಿದಃ ಸರ್ವೇ ಸನ್ತೋ ರಾತ್ರಾವರಿಂದಮಾಃ ॥೫೯॥**

ಮಾನವರು ಗಂಧರ್ವರನ್ನು ಕಂಡರೆ ಯಾವ ಕಾರಣಕ್ಕಾಗಿ ಭಯಪಡುವರು? ನಾವು ಧರ್ಮಾತ್ಮರಾಗಿ ವೇದ-ವೇದಾಂಗಗಳನ್ನು ತಿಳಿದಿದ್ದರೂ– ರಾತ್ರಿಯ ವೇಳೆಯಲ್ಲಿ ಇಲ್ಲಿಗೆ ಬಂದ ನಮ್ಮನ್ನು ನೀನು ಭಯಪಡಿಸಿದ್ದೇಕೆ?"

**ಅನಗ್ನಯೋಽನಾಹುತಯೋ ನ ಚ ವಿಪ್ರಪುರಸ್ಕೃತಾಃ ।**
**ಯೂಯಂ ತತೋ ಧರ್ಷಿತಾಃ ಸ್ಥ ಮಯಾ ವೈ ಪಾಣ್ಡುನನ್ದನಾಃ ॥೬೦॥**

"ಪಾಂಡುತನಯರೇ! ನೀವು ಬ್ರಹ್ಮಚರ್ಯಾಶ್ರಮವನ್ನು ದಾಟಿ ಸ್ನಾತಕರಾಗಿದ್ದೀರಿ. ಗೃಹಸ್ಥಾಶ್ರಮವನ್ನು ಸ್ವೀಕರಿಸಿಲ್ಲ. ಔಪಾಸನಾಗ್ನಿ

ಯೊಡನೆ ಬಂದಿರುವುದಿಲ್ಲ. ಪ್ರತಿದಿನವೂ ಅಗ್ನಿಯಲ್ಲಿ ಆಹುತಿಗಳನ್ನು ಕೊಡು ತ್ತಿಲ್ಲ. ಈಗ ನಿಮಗೆ ನಿರ್ದಿಷ್ಟವಾದ ಒಂದು ಆಶ್ರಮಧರ್ಮವೇ ಇಲ್ಲ. ಎರಡನೆಯದಾಗಿ : ನೀವು ಬ್ರಾಹ್ಮಣನನ್ನು ಮುಂದಿಟ್ಟುಕೊಂಡೂ ಬಂದಿಲ್ಲ.

ಈ ಕಾರಣಗಳಿಂದ ನೀವು ನನ್ನಿಂದ ತಿರಸ್ಕರಿಸಲ್ಪಟ್ಟಿರಿ. ಪಾಂಡು ಪುತ್ರರೇ! ಯಕ್ಷ-ರಾಕ್ಷಸ-ಕಿನ್ನರ-ಕಿಂಪುರುಷರೇ ಆದಿಯಾಗಿ ಸಕಲರೂ ಕುರುವಂಶದ ಚರಿತವನ್ನು ತಿಳಿದವರಾಗಿದ್ದಾರೆ. ನಾನೂ ಸಹ ಮಹರ್ಷಿ ಗಳಾದ ನಾರದಾದಿಗಳಿಂದ ನಿಮ್ಮ ವಂಶದ ಚರಿತವನ್ನು ಆಮೂಲಾಗ್ರವಾಗಿ ತಿಳಿದುಕೊಂಡಿರುವೆನು. ಇಷ್ಟು ಮಾತ್ರವಲ್ಲದೇ ಸಾಗರಾಂತವಾದ ಪ್ರಪಂಚ ದಲ್ಲಿ ಸಂಚರಿಸುತ್ತಿದ್ದಾಗ ನಿಮ್ಮ ಪೂರ್ವಜರ ಪರಾಕ್ರಮವೆಷ್ಟೆಂಬುದನ್ನು ಪ್ರತ್ಯಕ್ಷವಾಗಿಯೇ ನೋಡಿರುವೆನು. ತ್ರಿಲೋಕವಿಖ್ಯಾತರಾದ ನಿಮ್ಮ ಆಚಾರ್ಯರಾದ ದ್ರೋಣರಿಗಿರುವ ಧನುರ್ವಿದ್ಯೆಯ ಮತ್ತು ವೇದವಿದ್ಯೆಯ ನೈಪುಣ್ಯದ ವಿಷಯವಾಗಿಯೂ ನನಗೆ ಸ್ವಾನುಭವವಿದೆ. ನಿಮ್ಮ ಜನ್ಮಕ್ಕೆ ಕಾರಣರಾದ ಧರ್ಮ, ವಾಯು, ಇಂದ್ರ, ಅಶ್ವಿನೀದೇವತೆಗಳು, ಪಾಂಡು– ಇವರೆಲ್ಲರನ್ನೂ ನಾನು ತಿಳಿದಿರುವೆನು. ನೀವೈವರೂ ಧನುರ್ವಿದ್ಯೆಯಲ್ಲಿ ನಿಪುಣರೆಂಬುದನ್ನೂ, ಧರ್ಮಪರಾಯಣರೆಂಬುದನ್ನೂ, ವ್ರತನಿಷ್ಠೆ ಯುಳ್ಳವರಾಗಿರುವಿರೆಂಬುದನ್ನೂ ಚೆನ್ನಾಗಿ ತಿಳಿದಿರುವೆನು. ಇಷ್ಟೆಲ್ಲವನ್ನೂ ಕೂಲಂಕಷವಾಗಿ ತಿಳಿದಿದ್ದರೂ ನಾನು ನಿಮ್ಮನ್ನು ಕೆಣಕಿದೆನು. ಇದಕ್ಕೆ ಕಾರಣವಿಷ್ಟೆ :

**ಸ್ತ್ರೀಸಕಾಶೇ ಚ ಕೌರವ್ಯ ನ ಪುಮಾನ್ ಕ್ಷನ್ತುಮರ್ಹತಿ ।**
**ಧರ್ಷಣಾಮಾತ್ಮನಃ ಪಶ್ಯನ್ಬಾಹುದ್ರವಿಣಮಾಶ್ರಿತಃ ॥೭೮॥**

**ನಕ್ತಂ ಚ ಬಲಮಸ್ಮಾಕಂ ಭೂಯ ಏವಾಭಿವರ್ಧತೇ ।**
**ಯತಸ್ತತೋ ಮಾಂ ಕೌನ್ತೇಯ ಸದಾರಂ ಮನ್ಯುರಾವಿಶತ್ ॥೭೯॥**

ಯಾವ ಮನುಷ್ಯನೇ ಆಗಲೀ–ಪತ್ನಿಯೊಡನಿರುವಾಗ ಉಂಟಾಗುವ ತಿರಸ್ಕಾರವನ್ನು ಸಹಿಸಲಾರನು. ಗಂಧರ್ವರಿಗೆ ರಾತ್ರಿಯಲ್ಲಿ ಹೆಚ್ಚು ಬಲವೂ ಇರುತ್ತದೆ. ಮೇಲಾಗಿ ನಾನು ಪತ್ನೀಸಮೇತನಾಗಿ ಜಲಕ್ರೀಡೆಯಾಡು

ತ್ತಿದ್ದೆನು. ಈ ಕಾರಣದಿಂದ ನಿಮ್ಮ ದರ್ಶನಮಾತ್ರದಿಂದಲೇ ಕುಪಿತನಾಗಿ ನಿಮ್ಮನ್ನು ಕೆಣಕಿದೆನು.

ತಾಪತ್ಯವರ್ಧನನೇ! ಇಷ್ಟು ಪರಾಕ್ರಮವನ್ನು ಹೊಂದಿಯೂ ನಿನ್ನಿಂದ ಪರಾಜಿತನಾಗಲು ಕಾರಣವೇನೆಂದು ನೀನು ಕೇಳಬಹುದು. ಅದಕ್ಕೂ ಕಾರಣವಿದೆ. ಹೇಳುವೆನು, ಕೇಳು :

**ಬ್ರಹ್ಮಚರ್ಯಂ ಪರೋ ಧರ್ಮಃ ಸ ಚಾಪಿ ನಿಯತಸ್ತ್ವಯಿ ।**
**ಯಸ್ಮಾತ್ತಸ್ಮಾದಹಂ ಪಾರ್ಥ ರಣೇಽಸ್ಮಿ ವಿಜಿತಸ್ತ್ವಯಾ ॥೭೧॥**

**ಯಸ್ತು ಸ್ಯಾತ್ಕ್ಷತ್ರಿಯಃ ಕಶ್ಚಿತ್ಕಾಮವೃತ್ತಃ ಪರಂತಪ ।**
**ನಕ್ತಂ ಚ ಯುಧಿ ಯುಧ್ಯೇತ ನ ಸ ಜೀವೇತ್ಕಥಂಚನ ॥೭೨॥**

ಆಶ್ರಮಗಳಲ್ಲಿ ಬ್ರಹ್ಮಚರ್ಯಾಶ್ರಮವು ಅತಿಶ್ರೇಷ್ಠವಾದುದು. ನೀನೀಗ ಬ್ರಹ್ಮಚರ್ಯವ್ರತನಿಷ್ಠನಾಗಿರುವೆ. ಈ ಕಾರಣದಿಂದ ನಾನು ಸೋಲಬೇಕಾಯಿತು. ಕಾಮವೃತ್ತನಾದ ಎಂದರೆ ಮದುವೆಯಾಗಿರುವ ಕ್ಷತ್ರಿಯನು ಯಾರೇ ಆಗಿದ್ದರೂ ರಾತ್ರಿಯ ವೇಳೆಯಲ್ಲಿ ನನ್ನೊಡನೆ ಯುದ್ಧಮಾಡಿ ಜೀವಸಹಿತವಾಗಿ ಹಿಂದಿರುಗಲಾರನು.

**ಯಸ್ತು ಸ್ಯಾತ್ಕಾಮವೃತ್ತೋಽಪಿ ಪಾರ್ಥ ಬ್ರಹ್ಮಪುರಸ್ಕೃತಃ ।**
**ಜಯೇನ್ನಕ್ತಂಚರಾನ್ಸರ್ವಾನ್ಸ ಪುರೋಹಿತಧೂರ್ಗತಃ ॥೭೩॥**

**ತಸ್ಮಾತ್ತಾಪತ್ಯ ಯತ್ಕಿಂಚಿನ್ನೃಣಾಂ ಶ್ರೇಯ ಇಹೇಪ್ಸಿತಮ್ ।**
**ತಸ್ಮಿನ್ಕರ್ಮಣಿ ಯೋಕ್ತವ್ಯಾ ದಾನ್ತಾತ್ಮಾನಃ ಪುರೋಹಿತಾಃ ॥೭೪॥**

**ವೇದೇ ಷಡಙ್ಗೇ ನಿರತಾಃ ಶುಚಯಃ ಸತ್ಯವಾದಿನಃ ।**
**ಧರ್ಮಾತ್ಮಾನಃ ಕೃತಾತ್ಮಾನಃ ಸ್ಯುರ್ನೃಪಾಣಾಂ ಪುರೋಹಿತಾಃ ॥೭೫॥**

**ಜಯಶ್ಚ ನಿಯತೋ ರಾಜ್ಞಃ ಸ್ವರ್ಗಶ್ಚ ತದನನ್ತರಮ್ ।**
**ಯಸ್ಯ ಸ್ಯಾದ್ಧರ್ಮವಿದ್ವಾಗ್ಮೀ ಪುರೋಧಾಃ ಶೀಲವಾಞ್ಛುಚಿಃ ॥೭೬॥**

**ಲಾಭಂ ಲಬ್ಧುಮಲಬ್ಧಂ ವಾ ಲಬ್ಧಂ ವಾ ಪರಿರಕ್ಷಿತುಮ್ ।**
**ಪುರೋಹಿತಂ ಪ್ರಕುರ್ವೀತ ರಾಜಾ ಗುಣಸಮನ್ವಿತಮ್ ॥೭೭॥**

**ಪುರೋಹಿತಮತೇ ತಿಷ್ಠೇಽದ್ಯ ಇಚ್ಛೇದ್ಭೂತಿಮಾತ್ಮನಃ ।**
**ಪ್ರಾಪ್ತುಂ ವಸುಮತೀಂ ಸರ್ವಾಂ ಸರ್ವಶಃ ಸಾಗರಾಮ್ಬರಾಮ್ ॥೭೮॥**

**ನ ಹಿ ಕೇವಲಶೌರ್ಯೇಣ ತಾಪತ್ಯಾಭಿಜನೇನ ಚ ।**
**ಜಯೇದಬ್ರಾಹ್ಮಣಃ ಕಶ್ಚಿದ್ಭೂಮಿಂ ಭೂಮಿಪತಿಃ ಕ್ವಚಿತ್ ॥೭೯॥**

**ತಸ್ಮಾದೇವಂ ವಿಜಾನೀಹಿ ಕುರೂಣಾಂ ವಂಶವರ್ಧನ ।**
**ಬ್ರಾಹ್ಮಣಪ್ರಮುಖಂ ರಾಜ್ಯಂ ಶಕ್ಯಂ ಪಾಲಯಿತುಂ ಚಿರಮ್ ॥೮೦॥**

ತಾಪತ್ಯನೇ! ಕಾಮಾಸಕ್ತನಾಗಿದ್ದರೂ (ಮದುವೆಯಾಗಿದ್ದರೂ) ಕ್ಷತ್ರಿಯನಾದವನು ಬ್ರಾಹ್ಮಣನನ್ನು ಮುಂದಿಟ್ಟುಕೊಂಡು ರಾತ್ರಿಯಲ್ಲಿ ಸಂಚರಿಸಬೇಕು. ವೇದ-ವೇದಾಂಗಪಾರಂಗತನಾಗಿರುವ ಬ್ರಾಹ್ಮಣನಿಗೆ ರಾಜನಾದವನು ತನ್ನ ರಾಜ್ಯದ ಯೋಗ-ಕ್ಷೇಮಗಳನ್ನು ಒಪ್ಪಿಸುವುದರಿಂದ ರಾತ್ರಿಯಲ್ಲಿ ಸಂಚರಿಸುವ ಯಕ್ಷ-ಗಂಧರ್ವರನ್ನೂ ಜಯಿಸುವ ಸಾಮರ್ಥ್ಯ ವನ್ನು ಹೊಂದುತ್ತಾನೆ.

ಅರ್ಜುನ! ಈ ಕಾರಣದಿಂದ ತನಗೂ ತನ್ನ ರಾಜ್ಯಕ್ಕೂ ಒಳ್ಳೆಯ ದಾಗಬೇಕೆಂಬ ಅಭಿಲಾಷೆಯಿಂದ ರಾಜನು ಪಂಚೇಂದ್ರಿಯಗಳನ್ನೂ ಜಯಿ ಸಿರುವ ಬ್ರಾಹ್ಮಣನೊಬ್ಬನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಬೇಕು. ವೇದ-ವೇದಾಂಗಗಳಲ್ಲಿ ಪ್ರವೀಣತೆ, ಪರಿಶುದ್ಧತೆ, ಸತ್ಯಸಂಧತೆ, ಧರ್ಮನಿಷ್ಠೆ ಮತ್ತು ಆತ್ಮಸಂಯಮ–ಇವುಗಳೇ ಪುರೋಹಿತನಿಗಿರಬೇಕಾದ ಮುಖ್ಯಗುಣ ಗಳು. ಇವುಗಳ ಜೊತೆಗೆ ನೀತಿಶಾಸ್ತ್ರದಲ್ಲಿ ಪ್ರಾವೀಣ್ಯ, ವಾಕ್ಚಾತುರ್ಯ, ಒಳ್ಳೆಯ ನಡೆ-ನುಡಿಗಳು–ಇವೂ ಸೇರಿರುವ ಸಕಲಗುಣಪರಿಪೂರ್ಣನಾದ ಪುರೋಹಿತನನ್ನು ಪಡೆದಿರುವ ರಾಜನು ಇಹದಲ್ಲಿ ಎಲ್ಲೆಡೆಗಳಲ್ಲಿಯೂ ವಿಜಯಿಯಾಗುವುದು ಮಾತ್ರವಲ್ಲದೇ–ಒಳ್ಳೆಯ ಸದ್ಗತಿಯನ್ನೂ ಪಡೆಯು ವನು. ಅಪ್ರಾಪ್ತವಾದ ಲಾಭವನ್ನು ಪಡೆಯಲೂ ಮತ್ತು ಪಡೆದ ಲಾಭವನ್ನು ರಕ್ಷಿಸಲೂ ರಾಜನಾದವನು ಸದ್ಗುಣಪರಿಪೂರ್ಣನಾದ ಪುರೋಹಿತನನ್ನು ಹೊಂದಿರಲೇಬೇಕು. ಪುರೋಹಿತನ ಸಹಕಾರ-ಸಲಹೆಗಳಿಲ್ಲದೇ ಕೇವಲ ಪರಾಕ್ರಮದಿಂದಾಗಲೀ, ಧೈರ್ಯದಿಂದಾಗಲೀ, ಮಹಾವಂಶದಲ್ಲಿ ಹುಟ್ಟಿರುವುದರಿಂದಾಗಲೀ–ರಾಜನಾದವನು ಕೀರ್ತಿಯನ್ನೂ, ಯಶಸ್ಸನ್ನೂ,

ರಾಜ್ಯಗಳನ್ನೂ ಗಳಿಸಲು ಖಂಡಿತವಾಗಿಯೂ ಸಾಧ್ಯವಾಗಲಾರದು. ತಾಪತ್ಯನೇ! ಸತ್ಕುಲಪ್ರಸೂತನಾದ, ಸರ್ವಗುಣಸಂಪನ್ನನಾದ ಪುರೋಹಿತನ ಸಲಹೆಯಂತೆ ನಡೆಯುವ ರಾಜ್ಯಾಡಳಿತವು ಸುಭಿಕ್ಷವಾಗಿಯೂ, ಚಿರಂತನವಾಗಿಯೂ ಉಳಿಯುವುದು."

೧೭೦ನೆಯ ಅಧ್ಯಾಯವು ಮುಗಿಯಿತು.

೧೭೧ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಸೂರ್ಯಪುತ್ರಿಯಾದ ತಪತಿಯಲ್ಲಿ ಸಂವರಣನ ವ್ಯಾಮೋಹ

ಪಾರಿಕ್ಷಿತ! ಇದುವರೆಗೂ 'ಅರ್ಜುನ', 'ಪಾರ್ಥ' ಮುಂತಾಗಿ ಸಂಬೋಧಿಸುತ್ತಿದ್ದ ಗಂಧರ್ವನು ಇದ್ದಕ್ಕಿದ್ದಂತೆಯೇ 'ತಾಪತ್ಯ' ಎಂದು ಅರ್ಜುನನನ್ನು ಸಂಬೋಧಿಸಿದನು.

( ಸಾಧಾರಣವಾಗಿ ಒಬ್ಬೊಬ್ಬರಿಗೂ ಎರಡು ಅಥವಾ ಮೂರು ನಾಮ ಧೇಯಗಳಿರುತ್ತವೆ. ತಮ್ಮನ್ನು ಇತರರು ಆ ಹೆಸರುಗಳಿಂದ ಕರೆಯುತ್ತಾರೆಂಬ ಅಂಶವೂ ಆಯಾ ಹೆಸರುಗಳನ್ನು ಹೊಂದಿರುವವರಿಗೆ ತಿಳಿದಿರುತ್ತದೆ. ಆದರೆ ಅವನಿಗೇ ತಿಳಿಯದಿರುವ ಹೆಸರಿನಿಂದ ಅವನನ್ನು ಕರೆದರೆ ಕರೆಸಿಕೊಂಡವನಿಗೆ ಭ್ರಾಂತಿಯುಂಟಾಗುವುದು ಸಹಜ. ಅರ್ಜುನನಿಗೂ ಹೀಗೆಯೇ ಆಯಿತು. )

ಅರ್ಜುನನನ್ನು ಅದುವರೆಗೂ 'ತಾಪತ್ಯ' ಎಂದು ಯಾರೂ ಸಂಬೋಧಿ ಸಿರಲಿಲ್ಲ. ಆ ಕಾರಣದಿಂದಲೇ ಅರ್ಜುನನು ಗಂಧರ್ವನನ್ನು ಕೇಳಿದನು :

**ತಾಪತ್ಯ ಇತಿ ಯದ್ವಾಕ್ಯಮುಕ್ತವಾನಸಿ ಮಾಮಿಹ ।**
**ತದಹಂ ಜ್ಞಾತುಮಿಚ್ಛಾಮಿ ತಾಪತ್ಯಾರ್ಥಂ ವಿನಿಶ್ಚಿತಮ್ ॥೧॥**

**ತಪತೀ ನಾಮ ಕಾ ಚೈಷಾ ತಾಪತ್ಯಾ ಯತ್ಕೃತೇ ವಯಮ್ ।**
**ಕೌನ್ತೇಯಾ ಹಿ ವಯಂ ಸಾಧೋ ತತ್ತ್ವಮಿಚ್ಛಾಮಿ ವೇದಿತುಮ್ ॥೨॥**

"ಗಂಧರ್ವರಾಜನೇ! ನೀನು ನನ್ನನ್ನು 'ತಾಪತ್ಯ', 'ತಾಪತ್ಯವರ್ಧನ' ಎಂದು ಮೂರು ಬಾರಿ ಸಂಬೋಧಿಸಿದೆ. ನಾವೆಲ್ಲರೂ ಕುಂತಿಯ ಮಕ್ಕಳಾದ್ದರಿಂದ ಕೌಂತೇಯರೆಂದು ಕರೆಯುವ ವಾಡಿಕೆಯಿದೆ. ಆದರೆ

ನೀನೀಗ 'ತಪತಿಯ ಪುತ್ರನೇ!' ಎಂದು ಸಂಬೋಧನೆಯನ್ನು ಮಾಡುತ್ತಿರುವೆ. ನೀನು ಮೂರು ಬಾರಿ ಅದೇ ನಾಮವನ್ನು ಉಚ್ಚರಿಸಿರುವುದರಿಂದ ಅಪ್ಪಿ-ತಪ್ಪಿ ನಿನ್ನ ಬಾಯಿಂದ 'ತಾಪತ್ಯ' ಎಂಬ ನಾಮವು ಬಂದಿರಬಹುದು– ಎಂದು ಊಹಿಸಲೂ ಸಾಧ್ಯವಿಲ್ಲ. 'ತಪತೀ' ಎಂಬುವಳಾರು? ನಾವು ತಾಪತ್ಯರು ಹೇಗಾದೆವು? ಎಲ್ಲವನ್ನೂ ವಿಶದವಾಗಿ ಹೇಳುವೆಯಾ?"

ಅರ್ಜುನನ ಕೇಳಿಕೆಯಂತೆ ಗಂಧರ್ವನು ಮೂರು ಲೋಕಗಳಲ್ಲಿಯೂ ಸುಪ್ರಸಿದ್ಧವಾಗಿದ್ದ ತಪತಿಯ ಕಥೆಯನ್ನು ಹೇಳತೊಡಗಿದನು :

"ಕೌಂತೇಯ! ಬುದ್ಧಿವಂತರಲ್ಲಿ ಶ್ರೇಷ್ಠನಾದ ಅರ್ಜುನನೇ! ಆಹ್ಲಾದಕರವಾದ ತಪತಿಯ ಕಥೆಯನ್ನೂ ಮತ್ತು ನಾನು ನಿನ್ನನ್ನು ತಾಪತ್ಯನೆಂದು ಕರೆದ ಕಾರಣವನ್ನೂ ವಿಶದವಾಗಿ ಹೇಳುವೆನು. ಅನ್ಯಮನಸ್ಕನಾಗಿರದೇ ಏಕಚಿತ್ತದಿಂದ ಅವಧರಿಸು. ಸ್ವಪ್ರಕಾಶದಿಂದ ಪ್ರಪಂಚವೆಲ್ಲವನ್ನೂ ಬೆಳಗುತ್ತಿರುವ ವಿವಸ್ವಂತನಿಗೆ–ತನಗೆ ಸಮನಾದ ತೇಜಸ್ಸಿನಿಂದಲೇ ಕೂಡಿದ್ದ 'ತಪತೀ' ಎಂಬ ಮಗಳಿದ್ದಳು. ಅವಳು ಸಾವಿತ್ರಿಯ ತಂಗಿಯು. ಅವಳು ಯಾವಾಗಲೂ ತಪಸ್ಸಿನಲ್ಲಿಯೇ ನಿರತಳಾಗಿದ್ದುದರಿಂದ 'ತಪತೀ' ಎಂದೇ ಮೂರು ಲೋಕಗಳಲ್ಲಿಯೂ ಪ್ರಸಿದ್ಧಳಾದಳು. ಯಕ್ಷ-ರಾಕ್ಷಸಾಸುರ-ಅಪ್ಸರ-ಗಂಧರ್ವ-ಮಾನವರಲ್ಲಿ ಅವಳಿಗೆ ಸಮಾನರಾದ ಚೆಲುವೆಯರು ಯಾರೂ ಇರಲಿಲ್ಲ.

ಅವಳ ಶರೀರದ ಯಾವ ಭಾಗಗಳು ಎಷ್ಟೆಷ್ಟಿರಬೇಕೋ–ಎಷ್ಟೆಷ್ಟಿದ್ದರೆ ಸುಲಕ್ಷಣವತೀ ಎಂದೆನ್ನುತ್ತಾರೆಯೋ–ಅಷ್ಟಷ್ಟೇ ಇದ್ದುವು. ಅಂಗಾಂಗಗಳಲ್ಲಿ ಯಾವ ವಿಧವಾದ ನ್ಯೂನತೆಯೂ ಇರಲಿಲ್ಲ. ಒಂದು ದೋಷವೂ ಇರಲಿಲ್ಲ. ಅವಳ ಕಣ್ಣುಗಳು ಕಪ್ಪಾಗಿಯೂ, ವಿಶಾಲವಾಗಿಯೂ ಇದ್ದುವು. ಒಳ್ಳೆಯ ಆಚಾರಶೀಲಳಾಗಿಯೂ, ಸಾಧುಸ್ವಭಾವದವಳಾಗಿಯೂ ಇದ್ದಳು. ಚಿತ್ತಾಹ್ಲಾದಕರವಾಗಿ ಸಿಂಗರಿಸಿಕೊಳ್ಳುತ್ತಿದ್ದಳು.

ಅವಳು ಸರ್ವಾಂಗಸುಂದರಳಾಗಿದ್ದುದು ಮಾತ್ರವಲ್ಲದೇ–ವಿದ್ಯಾವತಿಯೂ ಬುದ್ಧಿವಂತೆಯೂ ಆಗಿದ್ದಳು. ಸೌಂದರ್ಯದಲ್ಲಿಯೂ, ನಡೆ-ನುಡಿಗಳಲ್ಲಿಯೂ, ವಿದ್ಯೆಯಲ್ಲಿಯೂ ಅವಳಿಗೆ ಅನುರೂಪನಾದ ವರನು ಮೂರು ಲೋಕಗಳಲ್ಲಿಯೂ ಸಿಗಲಾರನೆಂದೇ ಸೂರ್ಯನು ನಿಶ್ಚಯಿಸಿದನು.

ತಪತಿಯು ಪ್ರಾಪ್ತವಯಸ್ಕಳಾದನಂತರ ಅವಳಿಗೆ ಅನುರೂಪನಾದ ವರನು ಸಿಕ್ಕಲಿಲ್ಲವೆಂಬ ಯೋಚನೆಯೇ ಸೂರ್ಯನಿಗೆ ಹೆಚ್ಚಾಯಿತು. ಮನಸ್ಸಿಗೆ ಶಾಂತಿಯೇ ಇರಲಿಲ್ಲ.

ಅದೇ ಸಮಯದಲ್ಲಿ ಕುರುಕುಲಶ್ರೇಷ್ಠನಾದ, ಋಕ್ಷಪುತ್ರನಾದ ಸಂವರಣನು ಸೂರ್ಯನ ಒಲುಮೆಗಾಗಿ ಅನೇಕವಿಧವಾದ ವ್ರತ-ನಿಯಮೋಪವಾಸ-ಪೂಜಾದಿಗಳಿಂದ ಸೂರ್ಯೋಪಾಸನೆಯನ್ನು ಮಾಡುತ್ತಿದ್ದನು. ಅಹಂಕಾರರಹಿತನಾಗಿ, ಶುಚೀಭೂತನಾಗಿ, ಸೂರ್ಯನು ಉದಯಿಸಿದೊಡನೆಯೇ ಭಕ್ತಿಭಾವದಿಂದ ಪೂಜೆಮಾಡುತ್ತಿದ್ದನು. ಧರ್ಮಜ್ಞನಾದ, ಅತಿಸುಂದರನಾದ ಮತ್ತು ಭಕ್ತನಾದ ಸಂವರಣನೇ ತಪತಿಗೆ ಅನುರೂಪನಾದ ವರನೆಂದು ನಿರ್ಧರಿಸಿದ ಸೂರ್ಯನು ಸುಪ್ರಸಿದ್ಧವಾದ ಮಹಾವಂಶದಲ್ಲಿ ಹುಟ್ಟಿರುವ ಸಂವರಣನಿಗೇ ತನ್ನ ಮಗಳನ್ನು ಕೊಟ್ಟು ವಿವಾಹಮಾಡಬೇಕೆಂದು ನಿಶ್ಚಯಿಸಿದನು.

**ಯಥಾ ಹಿ ದಿವಿ ದೀಪ್ತಾಂಶುಃ ಪ್ರಭಾಸಯತಿ ತೇಜಸಾ ।**
**ತಥಾ ಭುವಿ ಮಹೀಪಾಲೋ ದೀಪ್ತ್ಯಾ ಸಂವರಣೋಽಭವತ್ ॥೧೭॥**

**ಯಥಾರ್ಚಯನ್ತಿ ಚಾದಿತ್ಯಮುದ್ಯನ್ತಂ ಬ್ರಹ್ಮವಾದಿನಃ ।**
**ತಥಾ ಸಂವರಣಂ ಪಾರ್ಥ ಬ್ರಾಹ್ಮಣಾವರಜಾಃ ಪ್ರಜಾಃ ॥೧೮॥**

ಸೂರ್ಯನು ಸ್ವಪ್ರಕಾಶದಿಂದ ವ್ಯೋಮಮಂಡಲವನ್ನು ದೇದೀಪ್ಯಮಾನವಾಗಿ ಬೆಳಗುವಂತೆ–ಸಂವರಣನು ತನ್ನ ಕೀರ್ತಿಯೆಂಬ ಬೆಳಕಿನಿಂದ ಭೂಮಂಡಲವನ್ನು ಬೆಳಗುತ್ತಿದ್ದನು. ಬ್ರಹ್ಮನಿಷ್ಠರಾದವರು ಉದಯಿಸುತ್ತಿರುವ ಸೂರ್ಯನನ್ನು ಹೇಗೆ ಆರಾಧಿಸುತ್ತಾರೆಯೋ–ಅದೇ ರೀತಿಯಲ್ಲಿ ಸಂವರಣನನ್ನು ಕ್ಷತ್ರಿಯ-ವೈಶ್ಯ-ಶೂದ್ರರು ಆರಾಧಿಸುತ್ತಿದ್ದರು.

**ಸ ಸೋಮಮತಿಕಾನ್ತತ್ವಾದಾದಿತ್ಯಮತಿತೇಜಸಾ ।**
**ಬಭೂವ ನೃಪತಿಃ ಶ್ರೀಮಾನ್ಸುಹೃದಾಂ ದುರ್ಹೃದಾಮಪಿ ॥೧೯॥**

ಅವನ ಮುಖಕಮಲವು ಸೌಮ್ಯವಾಗಿದ್ದು ಸುಹೃದರಿಗೆ ಆಹ್ಲಾದಕರವಾಗಿದ್ದುದರಿಂದ–ಮನಸ್ಸಿಗೆ ಆಹ್ಲಾದವನ್ನುಂಟುಮಾಡುವುದರಲ್ಲಿ ಚಂದ್ರನನ್ನೂ ಮೀರಿಸಿದ್ದನು. ದುರ್ಹೃದರಿಗೆ ಅಥವಾ ದುಷ್ಟರಿಗೆ ಸರ್ವಕಾಲಗಳ

ಲ್ಲಿಯೂ ತನ್ನ ಮಹಾತೇಜಸ್ಸಿನಿಂದ ತಾಪವನ್ನುಂಟುಮಾಡುತ್ತಿದ್ದುದರಿಂದ ತೇಜಸ್ಸಿಗೆ ಹೆಸರಾಂತ ಸೂರ್ಯನನ್ನೂ ಮೀರಿಸಿದ್ದನು.

ಅಂತಹ ಸರ್ವಗುಣಸಂಪನ್ನನಾದ ಸಂವರಣನಿಗೆ ಸೂರ್ಯನು ತನ್ನ ಮಗಳನ್ನು ಕೊಟ್ಟು ವಿವಾಹಮಾಡಬೇಕೆಂದು ನಿಶ್ಚಯಿಸಿದ್ದರಲ್ಲಿ ಆಶ್ಚರ್ಯ ವೇನು? ಪಾರ್ಥ!

ಕೆಲವು ದಿನಗಳು ಕಳೆದುವು. ಒಂದು ದಿನ ಸಂವರಣನು ಬೇಟೆಗಾಗಿ ಪರ್ವತದ ತಪ್ಪಲಿನಲ್ಲಿದ್ದ ಕಾಡಿಗೆ ಹೋದನು. ಬೇಟೆಯಾಡಲು ಪ್ರಾಣಿ ಗಳನ್ನು ಹುಡುಕಿಕೊಂಡು ಅಲೆಯುತ್ತಿದ್ದಾಗ ಅವನ ಕುದುರೆಯು ಹಸಿವು-ಬಾಯಾರಿಕೆಗಳಿಂದ ಬಳಲಿ ಆ ಪರ್ವತದ ಬುಡದಲ್ಲಿಯೇ ಪ್ರಾಣಬಿಟ್ಟಿತು. ಸಂವರಣನು ಸತ್ತ ಕುದುರೆಯನ್ನು ಅಲ್ಲಿಯೇ ಬಿಟ್ಟು, ಪಾದಚಾರಿಯಾಗಿಯೇ ಪರ್ವತದ ಸುತ್ತಲೂ ಜಿಂಕೆಗಳನ್ನು ಹುಡುಕುತ್ತಾ ಸುತ್ತಾಡಿದನು. ರಾಜನು ಹೀಗೆಯೇ ಸುತ್ತುತ್ತಿದ್ದಾಗ ಕಮಲದ ದಳಗಳಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿದ್ದ, ತ್ರಿಲೋಕಸುಂದರಿಯಾದ ಯುವತಿಯೋರ್ವಳ ದರ್ಶನ ವಾಯಿತು. ಆ ಸಮಯದಲ್ಲಿ ರಾಜನ ಅನುಯಾಯಿಗಳು ಯಾರೂ ಇರಲಿಲ್ಲ. ಅಂತೆಯೇ ಯುವತಿಯ ಜೊತೆಯಲ್ಲಿಯೂ ಯಾರೂ ಇರಲಿಲ್ಲ.

ಸಂವರಣನು ನೆಟ್ಟನೋಟದಿಂದ ಚೆಲುವೆಯಾದ ಯುವತಿಯನ್ನು ಎವೆಯಿಕ್ಕದೇ ನೋಡಿದನು. ಅವಳ ಸರ್ವಾಂಗಸೌಂದರ್ಯವನ್ನು ಕಂಡು ಶ್ರೀಲಕ್ಷ್ಮಿಯೇ ಇರಬಹುದೆಂದು ಭ್ರಮಿಸಿದನು. ಸೂರ್ಯನ ತೇಜಸ್ಸೇ ಸ್ತ್ರೀರೂಪವಾಗಿ ಕನ್ಯೆಯ ರೂಪದಲ್ಲಿ ನಿಂತಿರಬಹುದೆಂದೂ ಶಂಕಿಸಿದನು. ನಿಶ್ಚಯವಾಗಿಯೂ ಆ ಯುವತಿಯ ತೇಜಸ್ಸು ಯಜ್ಞೇಶ್ವರನ ಜ್ವಾಲೆಗೆ ಸಮಾನವಾಗಿತ್ತು. ಅವಳ ಶರೀರಕಾಂತಿಯು ಕಳಂಕರಹಿತನಾದ ಚಂದ್ರನ ಕಾಂತಿಯನ್ನು ಅನುಕರಿಸಿದ್ದಿತು. ಪರ್ವತದ ತಪ್ಪಲಿನಲ್ಲಿ ಸ್ಥಾಪಿತವಾದ ಸ್ವರ್ಣಮಯವಾದ ಪುತ್ತಳಿಯಂತೆ–ಕಪ್ಪಾದ ಕಣ್ಗಳ ಆ ಕಾಮಿನಿಯು ಕಾಣು ತ್ತಿದ್ದಳು. ಅಷ್ಟು ಮಾತ್ರವಲ್ಲ ; ಅವಳ ಸ್ವರ್ಣಮಯವಾದ ಶರೀರಕಾಂತಿಯು ಪರ್ವತದ ಮೇಲಿದ್ದ ಗಿಡ-ಮರ-ಬಳ್ಳಿಗಳ ಮೇಲೆ ಚೆಲ್ಲಿ ಸರ್ವವೂ ಸ್ವರ್ಣಮಯವಾಗಿಯೇ ಕಂಡಿತು. ಅವಳ ಸಂದರ್ಶನದ ಫಲವಾಗಿ ಸಂವರಣ

ನಿಗೆ ಹಿಂದೆ ತಾನು ನೋಡಿದ್ದ ಅನೇಕಕಾಮಿನಿಯರ ವಿಷಯದಲ್ಲಿ ತಿರಸ್ಕಾರ ಭಾವನೆಯುಂಟಾಯಿತು. ಅವಳ ಸೌಂದರ್ಯವನ್ನು ನೋಡಿದ್ದರಿಂದಲೇ ತನ್ನ ಚರ್ಮಚಕ್ಷುಸ್ಸಿಗೆ ಸಾರ್ಥಕ್ಯವುಂಟಾಯಿತೆಂದೂ ಆನಂದಿಸಿದನು. ತಾನು ಹುಟ್ಟಿದಂದಿನಿಂದ ಅದುವರೆಗೆ ನೋಡಿದ ಯಾರೊಬ್ಬರ ಸೌಂದರ್ಯವೂ ಈ ಯುವತಿಯ ಸೌಂದರ್ಯಕ್ಕೆ ಸಮನಾಗಲಾರದೆಂದು ನಿರ್ಧರಿಸಿಬಿಟ್ಟನು. ಆ ಚೆಲುವಿನ ರಾಣಿಯು ರಾಜನ ಕಣ್ಮನಗಳನ್ನೂ ತನ್ನ ಸೌಂದರ್ಯವೆಂಬ ಹಗ್ಗದಿಂದ ಬಿಗಿದುಬಿಟ್ಟಳು. ಸಂವರಣನು–ಬಲವಾಗಿ ಬೇರುಬಿಟ್ಟಿರುವ ವೃಕ್ಷದಂತೆ–ಸ್ತಬ್ಧನಾಗಿ ನಿಂತಿದ್ದನು. ನಿಶ್ಚಯವಾಗಿಯೂ ಅವನು ಚೇತನಾ ರಹಿತವಾದ ದೊಡ್ಡ ವಿಗ್ರಹದಂತೆಯೇ ಕಾಣುತ್ತಿದ್ದನು. ಯುವತಿಯ ಸೌಂದರ್ಯಸಾಗರದಲ್ಲಿ ಮುಳುಗಿ-ತೇಲುತ್ತಿದ್ದ ರಾಜನ ಮನಸ್ಸು ಮಾತ್ರ ನಾನಾರೀತಿಯಲ್ಲಿ ಯೋಚಿಸುತ್ತಿದ್ದಿತು. ಸೃಷ್ಟಿಕರ್ತನು ದೇವ-ದಾನವ-ಮಾನವರೆಲ್ಲರನ್ನೂ ಮಥಿಸಿ, ಸೌಂದರ್ಯವೆಂಬ ಬೆಣ್ಣೆಯನ್ನು ತೆಗೆದು ಆ ಬೆಣ್ಣೆಯಿಂದಲೇ ಈ ಸುಂದರಮೂರ್ತಿಯನ್ನು ಸೃಷ್ಟಿಸಿದನೋ–ಎಂಬ ಭ್ರಾಂತಿಯನ್ನೂ ಹೊಂದಿತು. ಇಂತಹ ನೂರಾರು ವಿಷಯಗಳು ಸಂವರಣನ ಮನಸ್ಸಿನಲ್ಲಿ ಚರ್ಚಿತವಾಗಿ, ಕಟ್ಟಕಡೆಗೆ ಮೂರು ಲೋಕಗಳಲ್ಲಿಯೂ ಇಂತಹ ಸೌಂದರ್ಯನಿಧಿಯು ಸಿಕ್ಕಲಾರದೆಂದೂ ನಿಶ್ಚಿತವಾಯಿತು.

ಮಂಗಳಕಾರ್ಯಗಳಿಗೆ ಹೆಸರಾಂತ ಕುಲದಲ್ಲಿ ಹುಟ್ಟಿದ್ದ ಸಂವರಣನು ಕಲ್ಯಾಣಮಯಿಯಾದ ಆ ಕನ್ಯೆಯನ್ನು ನೋಡಿ ಚಿಂತಿಸತೊಡಗಿದನು. ಅನಂಗನು ವಿಶಾಲಾಕ್ಷಿಯ ಕಣ್ಣುಗಳ ಮೂಲಕವಾಗಿ ಅನುಸ್ಯೂತವಾಗಿ ಬಾಣ ಗಳನ್ನು ಬಿಡುತ್ತಿದ್ದುದೇ ಸಂವರಣನ ಚಿಂತೆಗೆ ಕಾರಣವಾಗಿದ್ದಿತು. ಮನ್ಮಥನ ಬಾಣಗಳು ಅಗ್ನಿಯ ರೂಪದಲ್ಲಿ ರಾಜನನ್ನು ದಹಿಸತೊಡಗಿದುವು. ಕಾಮಾತುರರಾದವರಿಗೆ ಭಯವಾಗಲೀ ಲಜ್ಜೆಯಾಗಲೀ ಇರುವುದಿಲ್ಲ. ಅಂತೆಯೇ ಆ ರಾಜನಾದರೂ ಲಜ್ಜೆಯನ್ನು ತೊರೆದವನಾಗಿ, ಲಜ್ಜಾಶೀಲ ಳಾಗಿದ್ದ ಭಾಮಿನಿಯನ್ನು ಕುರಿತು ಅತ್ಯಂತಮಾರ್ದವದಿಂದ ಕೂಡಿದ್ದ ಸುಮನೋಹರವಾದ ಈ ಮಾತುಗಳನ್ನಾಡಿದನು :

'ಮನೋಹರಿ!' ಎಂಬ ಕರ್ಣಾನಂದಕರವಾದ ನಿನಾದವು ವಿವೃತ

ವಾಗಿದ್ದ ತುಟಿಗಳ ಮಧ್ಯದಿಂದ ಹೊರಬಂದಿತು. ಆ ನಿನಾದದೊಡನೆಯೇ ರಾಜನ ಕಣ್ಣುಗಳು ಮತ್ತೂ ಪ್ರಫುಲ್ಲವಾದುವು.

**ಕಾಸಿ ಕಸ್ಯಾಸಿ ರಮ್ಭೋರು ಕಿಮರ್ಥಂ ಚೇಹ ತಿಷ್ಠತಿ ।**
**ಕಥಂ ಚ ನಿರ್ಜನೇಽರಣ್ಯೇ ಚರಸ್ಯೇಕಾ ಶುಚಿಸ್ಮಿತೇ ॥೩೬॥**

**ತ್ವಂ ಹಿ ಸರ್ವಾನವದ್ಯಾಙ್ಗೀ ಸರ್ವಾಭರಣಭೂಷಿತಾ ।**
**ವಿಭೂಷಣಮಿವೈತೇಷಾಂ ಭೂಷಣಾನಾಮಭೀಪ್ಸಿತಮ್ ॥೩೭॥**

**ನ ದೇವೀಂ ನಾಸುರೀಂ ಚೈವ ನ ಯಕ್ಷೀಂ ನ ಚ ರಾಕ್ಷಸೀಮ್ ।**
**ನ ಚ ಭೋಗವತೀಂ ಮನ್ಯೇ ನ ಗನ್ಧರ್ವೀಂ ನ ಮಾನುಷೀಮ್ ॥**

**ಯಾ ಹಿ ದೃಷ್ಟಾ ಮಯಾ ಕಾಶ್ಚಿಚ್ಛ್ರುತಾ ವಾಪಿ ವರಾಙ್ಗನಾಃ ।**
**ನ ತಾಸಾಂ ಸದೃಶೀಂ ಮನ್ಯೇ ತ್ವಾಮಹಂ ಮತ್ತಕಾಶಿನಿ ॥೩೯॥**

**ದೃಷ್ಟ್ವೈವ ಚಾರುವದನೇ ಚನ್ದ್ರಾತ್ಕಾನ್ತತರಂ ತವ ।**
**ವದನಂ ಪದ್ಮಪತ್ರಾಕ್ಷಂ ಮಾಂ ಮಥ್ನಾತೀವ ಮನ್ಮಥಃ ॥೪೦॥**

"ನೀನು ಯಾರು? ಯಾರವಳು? ಏಕಿಲ್ಲಿ ನಿಂತಿರುವೆ? ಶುಚಿ ಸ್ಮಿತೆಯೇ! ನಿರ್ಜನವಾಗಿರುವ ಈ ಅರಣ್ಯದಲ್ಲಿ ಏಕಾಕಿನಿಯಾಗಿ ಏಕೆ ಸಂಚರಿಸುತ್ತಿರುವೆ? ನಿನ್ನ ಎಲ್ಲ ಅಂಗಗಳೂ ಅತ್ಯಂತಸುಂದರವಾಗಿಯೂ ದೋಷರಹಿತವಾಗಿಯೂ ಇವೆ. ನೀನು ಸಕಲವಿಧವಾದ ಆಭರಣಗಳನ್ನೂ ಧರಿಸಿರುವೆ. ಆದರೆ ಈ ಆಭರಣಗಳನ್ನು ನೀನು ನಿನ್ನ ಸೊಬಗನ್ನು ಹೆಚ್ಚಿಸಿ ಕೊಳ್ಳಬೇಕೆಂಬ ಇಚ್ಛೆಯಿಂದ ಧರಿಸಿರುವುದಿಲ್ಲ. ಈ ಆಭರಣಗಳು ತಮ್ಮ ಪ್ರಕಾಶವನ್ನು ಹೆಚ್ಚಿಸಿಕೊಳ್ಳುವ ಆಸೆಯಿಂದ ನಿನ್ನ ಸೌಂದರ್ಯಮಯ ವಾದ ಶರೀರವನ್ನು ಅಲಂಕರಿಸಿರುವಂತಿದೆ. ನೀನು ದೇವಾಸುರ-ಯಕ್ಷ-ರಾಕ್ಷಸ-ನಾಗ-ಗಂಧರ್ವ-ಮಾನವಸ್ತ್ರೀಯರಲ್ಲಿ ಒಬ್ಬಳಲ್ಲವೆಂದು ಭಾವಿಸು ತ್ತೇನೆ. ಮತ್ತಕಾಶಿನಿಯೇ! ನಾನಿದುವರೆಗೆ ಕೇಳಿರುವ ಮತ್ತು ನೋಡಿರುವ ಚೆಲುವೆಯರಲ್ಲಿ ನಿನಗೆ ಸಮಾನರಾದವರು ಯಾರೂ ಇರುವುದಿಲ್ಲ. ಚಾರುಮುಖಿಯೇ! ಕಮಲದಳಗಳಂತೆ ವಿಶಾಲವಾದ ಕಣ್ಣುಗಳುಳ್ಳ ಮತ್ತು ಚಂದ್ರನಿಗಿಂತಲೂ ಹೆಚ್ಚು ಮನೋಹರವಾಗಿರುವ ನಿನ್ನ ಮುಖಾರವಿಂದ ವನ್ನು ನೋಡಿದ ಕ್ಷಣದಿಂದ ಮನ್ಮಥನು ನನ್ನನ್ನು ಹಿಂಸಿಸುತ್ತಿದ್ದಾನೆ."

ಸಂವರಣನ ಬಾಯಿಂದ ಕಾಮಪ್ರಚೋದಕವಾದ ಮಾತುಗಳು ಒಂದಾದಮೇಲೆ ಮತ್ತೊಂದು ಬರುತ್ತಿದ್ದುವೇ ಹೊರತು–ಸೌಂದರ್ಯದ ನಿಧಿಯ ರೂಪದಲ್ಲಿ ನಿಂತಿದ್ದ ಯುವತಿಯ ಕಡೆಯಿಂದ ಯಾವ ಪ್ರತಿವಚನವೂ ಬರಲಿಲ್ಲ. ರಾಜನ ಉದ್ವೇಗವು ಕ್ಷಣ-ಕ್ಷಣಕ್ಕೂ ಹೆಚ್ಚುತ್ತಿದ್ದಿತು. ಏಕಾಕಿನಿಯಾದ ವರಾಂಗಿನಿಯನ್ನು ಆಲಿಂಗಿಸಲು ರಾಜನ ತೋಳುಗಳು ತವಕಿಸುತ್ತಿದ್ದುವು. ಬೇರುಬಿಟ್ಟಂತೆ ಸ್ತಬ್ಧವಾಗಿದ್ದ ಎರಡು ಪಾದಗಳೂ 'ನಾಮುಂದು-ತಾಮುಂದು' ಎಂಬ ಔತ್ಸುಕ್ಯದಿಂದ ಒಂದೆರಡು ಅಡಿಗಳು ಮುಂದೆಯೂ ಹೋದುವು. ಆದರೆ ವರಾಂಗನೆಯು ಕ್ಷಣಮಾತ್ರದಲ್ಲಿ ಮಿಂಚಿನಂತೆ ಮಾಯವಾಗಿಬಿಟ್ಟಳು.

ಕಮಲನೇತ್ರೆಯಾದ ಕಾಮಿನಿಯನ್ನು ಹುಡುಕಿಕೊಂಡು ಸಂವರಣನು ಹೊರಟನು. ಮುಳ್ಳು-ಕಲ್ಲುಗಳೆಂಬ ಪರಿವೆಯೇ ಇಲ್ಲದೇ ಉನ್ಮತ್ತನಂತೆ ಅಲೆದಾಡಿದನು. ಮರ-ಗಿಡ-ಬಳ್ಳಿಗಳನ್ನೂ ತಾನರಸುತ್ತಿರುವ ಕಾಮಿನಿಯೆಂದೇ ಒಮ್ಮೆ ಭ್ರಮಿಸುತ್ತಿದ್ದನು. ಮಾತನಾಡಲು ಹತ್ತಿರಕ್ಕೆ ಹೋದಾಗ ಅದು ಬಳ್ಳಿಯೆಂದು ತಿಳಿದು ಭ್ರಾಂತನಾಗುತ್ತಿದ್ದನು. ಅವನಿಗೆ ಮನಸ್ಸಿನ ಸ್ವಾಧೀನವೇ ತಪ್ಪಿಹೋಯಿತು. 'ವರಾನನೇ! ವರಾಂಗಿ! ಭಾಮಿನಿ!' ಎಂದು ಕೂಗುತ್ತಾ ಹುಚ್ಚನಂತೆ ಕಾಡಿನಲ್ಲೆಲ್ಲಾ ಅಲೆಯತೊಡಗಿದನು. ಎಲ್ಲೆಡೆಗಳಲ್ಲಿಯೂ ಸುತ್ತಿ-ಸುತ್ತಿ ಸೊಪ್ಪಾಗಿ, ಭಾಮಿನಿಯನ್ನು ಕಾಣದೇ ರೋದನಮಾಡುತ್ತಿದ್ದಾಗ ರಾಜನಿಗೆ ಪ್ರಜ್ಞೆಯು ತಪ್ಪಿತು. ಮುಹೂರ್ತಕಾಲ ನಿಶ್ಚೇಷ್ಟನಾಗಿ ಭೂಮಿಯ ಮೇಲೆ ಬಿದ್ದಿದ್ದನು."

೧೭೧ನೆಯ ಅಧ್ಯಾಯವು ಮುಗಿಯಿತು.

೧೭೨ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ತಪತಿ–ಸಂವರಣರ ಸಂಭಾಷಣೆ

ಗಂಧರ್ವನು ಮುಂದುವರಿಸಿ ಹೇಳಿದನು :

**ಅಥ ತಸ್ಯಾಮದೃಶ್ಯಾಯಾಂ ನೃಪತಿಃ ಕಾಮಮೋಹಿತಃ ।**
**ಪಾತನಃ ಶತ್ರುಸಙ್ಘಾನಾಂ ಪಪಾತ ಧರಣೀತಲೇ ॥೧॥**

" ಅರ್ಜುನ! ತಪತಿಯು ಅದೃಶ್ಯಳಾದೊಡನೆಯೇ–ಶತ್ರುಗಳ

ಸಮೂಹವನ್ನೇ ತನ್ನ ಭುಜಬಲ-ಪರಾಕ್ರಮಗಳಿಂದ ಕೆಡಹುವ ಸಾಮರ್ಥ್ಯ ವುಳ್ಳ ಸಂವರಣನು ಕಾಮಮೋಹಿತನಾಗಿ ಭೂಮಿಯ ಮೇಲೆ ನಿಶ್ಚೇಷ್ಟನಾಗಿ ಬಿದ್ದುಬಿಟ್ಟನು.

ಸಂವರಣನು ಕೆಳಗೆ ಬೀಳಲಾಗಿ ಚಾರುಹಾಸಿನಿಯಾದ, ಪೃಥುಶ್ರೋಣಿ ಯಾದ ಆ ಭಾಮಿನಿಯು ಪುನಃ ಸಂವರಣನಿಗೆ ಕಾಣಿಸಿಕೊಂಡಳು. ಕಾಮಾಭಿ ಭೂತನಾಗಿದ್ದ ಕುರುಕುಲಾವತಂಸನಾದ ಸಂವರಣನನ್ನು ಸುಮಧುರವಾದ ವಾಣಿಯಿಂದ ಕಲ್ಯಾಣಿಯು ಮಾತನಾಡಿಸಿದಳು. ನಗು-ನಗುತ್ತಲೇ ತಪತಿಯು ಮಧುವಿನಂತಹ ಸುಮಧುರವಾದ ಈ ಮಾತುಗಳನ್ನು ಸಂವರಣನೊಡನೆ ಹೇಳಿದಳು :

**ಉತ್ತಿಷ್ಠೋತ್ತಿಷ್ಠ ಭದ್ರಂ ತೇ ನ ತ್ವಮರ್ಹಸ್ಯರಿಂದಮ ।**
**ಮೋಹಂ ನೃಪತಿಶಾರ್ದೂಲ ಗನ್ತುಮಾವಿಷ್ಕೃತಃ ಕ್ಷಿತೌ ॥೪॥**

"ರಾಜಸಿಂಹನೇ! ಮೇಲೇಳು. ನಿನಗೆ ಮಂಗಳವಾಗಲಿ. ಅಖಂಡ ಭೂಮಂಡಲದಲ್ಲಿಯೇ ಪರಾಕ್ರಮಿಯೆಂದೂ, ಧರ್ಮಾತ್ಮನೆಂದೂ ಖ್ಯಾತಿ ಯನ್ನು ಹೊಂದಿರುವ ನೀನು ಈ ರೀತಿಯಲ್ಲಿ ಕಾಮಮೋಹಿತನಾಗುವುದು ಸರ್ವಥಾ ಯೋಗ್ಯವಲ್ಲ."

ಮಧುವಿಗೆ ಸದೃಶವಾದ ಆ ಮಾತುಗಳನ್ನು ಕೇಳುತ್ತಲೇ ಸಂವರಣನು ಎಚ್ಚರಗೊಂಡು ಕಣ್ದೆರೆದನು. ಕಣ್ಣೆದುರಿನಲ್ಲಿಯೇ ತನ್ನ ಹೃದಯದಲ್ಲಿ ಸ್ಥಿರವಾಗಿ ನೆಲೆಸಿದ್ದ, ಅಸಿತಾಪಾಂಗಿಯಾದ, ಚೆಲುವಿನ ರಾಣಿಯು ನಿಂತಿರುವುದನ್ನು ಕಂಡನು. ಕಣ್ಣುಗಳು ಮತ್ತಷ್ಟು ವಿಕಸಿತವಾದುವು. ಮುಖವು ಪ್ರಫುಲ್ಲವಾಯಿತು. ಆದರೂ ಪುನಃ ಮಾಯವಾಗಿಬಿಡುವಳೋ ಎಂಬ ಭ್ರಾಂತಿಯು ಸಂವರಣನಿಗಿರದೇ ಇರಲಿಲ್ಲ. ಮತ್ತೆ ಬಂದಿರುವ ಯುವತಿ ಯನ್ನು ಹೇಗಾದರೂ ಮಾಡಿ ಒಲಿಸಿಕೊಳ್ಳಬೇಕೆಂಬ ಆತುರವು ಸಂವರಣನಿ ಗಿದ್ದಿತು. ಮನ್ಮಥಾಗ್ನಿಯಿಂದ ಪರಿತಪಿಸಲ್ಪಡುತ್ತಿದ್ದ ರಾಜನು ದೈನ್ಯಧ್ವನಿಯಿಂದ ಹೇಳತೊಡಗಿದನು :

"ಅಸಿತಾಪಾಂಗಿಯೇ! ನಿನಗೆ ಮಂಗಳವಾಗಲಿ. ಕಾಮಾಗ್ನಿಯ ಬೇಗೆ ಯನ್ನು ತಾಳಲಾರದೇ ನಿನ್ನನ್ನು ಅನನ್ಯಶರಣನಾಗಿ ಪ್ರಾರ್ಥಿಸುತ್ತಿರುವೆನು.

ನನ್ನ ಪ್ರಾರ್ಥನೆಯನ್ನು ಮನ್ನಿಸು. ನನ್ನ ಪ್ರಾಣಗಳು ಹಾರಿಹೋಗುತ್ತಿವೆ. ನಿನ್ನನ್ನು ವ್ಯಾಜವನ್ನಾಗಿ ಮಾಡಿಕೊಂಡು ಕಾಮದೇವನು ತನ್ನ ಅತಿತೀಕ್ಷ್ಣ ವಾದ ಅಸ್ತ್ರಗಳನ್ನು ನನ್ನ ಮೇಲೆ ಅನವರತವಾಗಿ ಪ್ರಯೋಗಿಸುತ್ತಿರುವನು. ಅವನ ಬಾಣಗಳ ಆಘಾತವು ವಿಷಸರ್ಪಗಳ ದಂಶನಕ್ಕಿಂತಲೂ ತೀಕ್ಷ್ಣ ವಾಗಿರುವುದು. ಕಮಲಗಳಿಗೆ ಸಮಾನವಾದ ಕಾಂತಿಯುಳ್ಳವಳೇ! ಇಂತಹ ದಾರುಣಯಾತನೆಯನ್ನು ಅನುಭವಿಸುತ್ತಿರುವಾಗ ನನ್ನ ಮೇಲೆ ಕರುಣೆಯನ್ನು ತೋರಲಾರೆಯಾ? ಸರ್ವಾಂಗಸುಂದರಿಯೇ! ಚಾರುವದನೆಯೇ! ಕಿನ್ನರೋದ್ಗೀತಭಾಷಿಣಿಯೇ! ತ್ರಿಲೋಕಸುಂದರಿಯೇ! ಅಕಳಂಕಳೇ! ನನ್ನ ಪ್ರಾಣಗಳು ನಿನ್ನನ್ನೇ ಅವಲಂಬಿಸಿ ನಿಂತಿವೆ. ನಿನ್ನನ್ನು ಸೇರಿದಲ್ಲದೇ ನಾನು ಖಂಡಿತವಾಗಿಯೂ ಬದುಕಲಾರೆನು. ಪದ್ಮಪತ್ರಾಯತಾಕ್ಷಿ! ನಿನಗಿನ್ನೂ ಕರುಣೆಯೇ ಬಾರದೇ? ಕಾಮದೇವನು ನನ್ನನ್ನು ಬಾಣಗಳಿಂದ ಅನವರತ ವಾಗಿ ಪ್ರಹರಿಸುತ್ತಿರುವುದನ್ನು ಕಾಣುತ್ತಿದ್ದರೂ ನಿನಗೆ ನನ್ನ ಮೇಲೆ ದಯೆ ಯುಂಟಾಗದೇ? ದೇವಿ! ನನ್ನ ಮೇಲೆ ಕರುಣೆಯಿಡು. ದಾರುಣಾವಸ್ಥೆ ಯಲ್ಲಿರುವ ಭಕ್ತನಾದ ನನ್ನನ್ನು ಪರಿತ್ಯಜಿಸುವುದು ಅಥವಾ ನನ್ನ ಪ್ರಾರ್ಥನೆ ಯನ್ನು ತಿರಸ್ಕರಿಸುವುದು ಖಂಡಿತವಾಗಿಯೂ ನಿನಗೆ ಸೂಕ್ತವೆನಿಸಲಾರದು. ಸುಂದರಾಂಗಿ! ನಿನ್ನಲ್ಲಿರುವ ಪ್ರೇಮವೆಂಬ ಔಷಧವನ್ನಿತ್ತು ನನ್ನೀ ಯಾತನೆ ಯನ್ನು ನಿವಾರಣೆಮಾಡು. ನಿನ್ನ ನೋಟದಿಂದಲೇ ಆಕರ್ಷಿಸಲ್ಪಟ್ಟಿರುವ ನನ್ನ ಮನಸ್ಸು ನಿನ್ನೆಡೆಗೆ ಬರಬೇಕೆಂದು ತವಕಿಸುತ್ತಿದೆ. ಕಲ್ಯಾಣಿ! ನಿನ್ನನ್ನು ನೋಡಿದ ಕಣ್ಣಿಗೆ ಬೇರೊಬ್ಬ ಹೆಂಗಸನ್ನು ನೋಡಲು ರುಚಿಸುವುದೇ? ಪ್ರಸನ್ನಳಾಗು, ದೇವಿ! ನಾನು ನಿನ್ನ ವಶನಾಗಿರುವೆನು. ನಿನ್ನ ಭಕ್ತ ನಾಗಿಯೂ ಇದ್ದೇನೆ. ಉದಾಸೀನಮಾಡದೇ ನನ್ನನ್ನು ಸ್ವೀಕರಿಸು. ಭಾಮಿನಿ! ನಿನ್ನನ್ನು ನೋಡಿದ ಕ್ಷಣದಿಂದ ಅನಂಗನು ನನ್ನ ಹೃದಯವನ್ನು ಹೊಕ್ಕು ತೀಕ್ಷ್ಣವಾದ ಬಾಣಗಳಿಂದ ಬಹುವಾಗಿ ಪೀಡಿಸುತ್ತಿರುವನು. ಕಮಲಲೋಚನೇ! ಮನ್ಮಥಾಗ್ನಿಯು ನನ್ನ ಹೃದಯದಲ್ಲಿ ಸೇರಿಕೊಂಡು ನನ್ನ ಅಂಗಾಂಗಗಳನ್ನೆಲ್ಲಾ ದಹಿಸುತ್ತಿರುವುದು. ಮನೋಹರಿ! ನಿನ್ನ ಪ್ರೀತಿ ಸಂಯೋಗವೆಂಬ ತೀರ್ಥವನ್ನು ನನ್ನ ಹೃದಯದಲ್ಲುದ್ಭವಿಸಿರುವ ಮನ್ಮ ಥಾಗ್ನಿಯ ಮೇಲೆ ಚುಮುಕಿಸಿ, ನನಗೆ ಆಹ್ಲಾದವನ್ನುಂಟುಮಾಡಲಾರೆಯಾ?

ಭಾಮಿನಿ! ಪ್ರಚಂಡವಾದ ಧನುಸ್ಸನ್ನೂ ಐದು ಬಾಣಗಳನ್ನೂ ಧರಿಸಿ, ನಿನ್ನ ದರ್ಶನಮಾತ್ರದಿಂದ ಪ್ರಾದುರ್ಭವಿಸಿ, ತೀಕ್ಷ್ಣವಾದ ಬಾಣಗಳಿಂದ ಅನವರತವಾಗಿ ಪ್ರಹರಿಸುತ್ತಿರುವ ಮನ್ಮಥನ ದುರಾಗ್ರಹವನ್ನು ನಿನ್ನ ಆತ್ಮ ಪ್ರದಾನಮಾಡಿ ನಿವಾರಣೆಮಾಡು. ವರಾಂಗನೆಯೇ! ಗಾಂಧರ್ವಸಂಪ್ರದಾಯಾನುಸಾರವಾಗಿ ನಾವಿಬ್ಬರೂ ವಿವಾಹವಾಗೋಣ. ವಿವಾಹಗಳಲ್ಲಿ ಗಾಂಧರ್ವವಿವಾಹವೇ ಶ್ರೇಷ್ಠವಾದುದೆಂದು ಹೇಳಲ್ಪಟ್ಟಿದೆ!"

ತಪತಿಯು ಸಂವರಣನ ಪ್ರಿಯೋಕ್ತಿಗಳೆಲ್ಲವನ್ನೂ ಸಾವಧಾನದಿಂದ ಕೇಳಿದಳು. ಕೇಳಿದೊಡನೆಯೇ ಹಿಂದಿನಂತೆಯೇ ಮಾಯವಾಗಲಿಲ್ಲ. ಸಾಧ್ವಿಗೆ ಉಚಿತವಾದ ಮಾತುಗಳನ್ನೇ ಆಡಿದಳು :

**ನಾಹಮೀಶಾತ್ಮನೋ ರಾಜನ್ಕನ್ಯಾ ಪಿತೃಮತೀ ಹ್ಯಹಮ್ ।**
**ಮಯಿ ಚೇದಸ್ತಿ ತೇ ಪ್ರೀತಿರ್ಯಾಚಸ್ವ ಪಿತರಂ ಮಮ ॥೨೦॥**

"ಮಹಾರಾಜ! ನನ್ನ ಆತ್ಮಕ್ಕೆ (ಶರೀರಕ್ಕೆ) ನಾನು ಒಡತಿಯಲ್ಲ. ಕನ್ಯೆಯಾಗಿರುವುದರಿಂದ ತಂದೆಗೆ ಅಧೀನಳಾಗಿರುವೆನು. ನೀನು ನಿಶ್ಚಯವಾಗಿಯೂ ನನ್ನನ್ನು ಪ್ರೀತಿಸುವುದಾದರೆ ನನ್ನ ತಂದೆಯ ಬಳಿಗೆ ಹೋಗಿ ಅವನನ್ನೇ ಪ್ರಾರ್ಥಿಸು.

**ಯಥಾ ಹಿ ತೇ ಮಯಾ ಪ್ರಾಣಾಃ ಸಂಗೃಹೀತಾ ನರೇಶ್ವರ ।**
**ದರ್ಶನಾದೇವ ಭೂಯಸ್ತ್ವಂ ತಥಾ ಪ್ರಾಣಾನ್ಮಮಾಹರಃ ॥೨೧॥**

ನರೇಶ್ವರ! ಮೊದಲ ನೋಟದಲ್ಲಿಯೇ ನಿನ್ನ ಪ್ರಾಣಗಳು ನನ್ನಿಂದ ಅಪಹೃತವಾದಂತೆಯೇ ನನ್ನ ಪ್ರಾಣಗಳನ್ನೂ ನೀನು ಅಪಹರಿಸಿರುವೆ.

ನನ್ನ ಪ್ರಾಣಗಳೂ ನಿನ್ನ ಅಧೀನವಾಗಿವೆ. ನಿನ್ನನ್ನು ಸೇರದಿದ್ದರೆ ನನ್ನ ಪ್ರಾಣಗಳು ನನ್ನಲ್ಲಿಯೇ ಖಂಡಿತವಾಗಿಯೂ ಉಳಿಯಲಾರವು. ಆದರೂ :

**ನ ಚಾಹಮೀಶಾ ದೇಹಸ್ಯ ತಸ್ಮಾನ್ನೃಪತಿಸತ್ತಮ ।**
**ಸಮೀಪಂ ನೋಪಗಚ್ಛಾಮಿ ನ ಸ್ವತನ್ತ್ರಾ ಹಿ ಯೋಷಿತಃ ॥೨೨॥**

ರಾಜಶ್ರೇಷ್ಠನೇ! ನನ್ನ ದೇಹಕ್ಕೆ ನಾನೇ ಸ್ವಾಮಿನಿಯಲ್ಲವಾದ್ದರಿಂದ ನಿನ್ನನ್ನು ಈಗಲೇ ಸೇರಲಾರೆನು. ಸ್ತ್ರೀಯರು ಸ್ವತಂತ್ರರಲ್ಲವೆಂಬುದನ್ನು

ಧರ್ಮಾತ್ಮನಾದ ನೀನು ಅರಿಯೆಯಾ? ನರಾಧಿಪನೇ! ಕರುಣಾಮಯವಾದ, ಸುಪ್ರಸಿದ್ಧವಾದ ಮತ್ತು ಪವಿತ್ರವಾದ ವಂಶದಲ್ಲಿ ಹುಟ್ಟಿರುವ, ಭಕ್ತವತ್ಸಲನಾದ, ಸರ್ವಾಂಗಸುಂದರನಾದ ನಿನ್ನನ್ನು ತ್ರಿಲೋಕದಲ್ಲಿರುವ ಯಾವ ಕನ್ಯೆಯು ತಾನೇ ಪತಿಯನ್ನಾಗಿ ಸ್ವೀಕರಿಸಲು ಇಚ್ಛಿಸದಿರುವಳು? ಆದುದರಿಂದ ನಮ್ಮ ತಂದೆಯಾದ ಸೂರ್ಯದೇವನನ್ನು ತಪಸ್ಸಿನಿಂದಲೂ, ಧ್ಯಾನದಿಂದಲೂ, ಪೂಜಾವಿಧಾನಗಳಿಂದಲೂ ಅರ್ಚಿಸಿ, ನನಗಾಗಿ ಯಾಚನೆಮಾಡು. ನನ್ನ ತಂದೆಯು ನಿನ್ನಲ್ಲಿ ಸುಪ್ರೀತನಾಗಿ ನನ್ನನ್ನು ನಿನಗೆ ಕೊಟ್ಟು ವಿವಾಹಮಾಡಿದರೆ ನಿಶ್ಚಯವಾಗಿಯೂ ನಾನೂ ನಿನ್ನ ವಿಧೇಯಳಾದ ಪತ್ನಿಯಾಗುವೆನು.

**ಅಹಂ ಹಿ ತಪತೀ ನಾಮ ಸಾವಿತ್ರ್ಯವರಜಾ ಸುತಾ ।**
**ಅಸ್ಯ ಲೋಕಪ್ರದೀಪಸ್ಯ ಸವಿತುಃ ಕ್ಷತ್ರಿಯರ್ಷಭ ॥೨೬॥**

ಕ್ಷತ್ರಿಯಶ್ರೇಷ್ಠನೇ! ನನ್ನನ್ನು 'ತಪತೀ' ಎಂದು ಕರೆಯುವರು. ನಾನು ಸಾವಿತ್ರಿಯ ತಂಗಿ. ಲೋಕಪ್ರದೀಪನಾದ ಸೂರ್ಯನ ಮಗಳು."

೧೭೨ನೆಯ ಅಧ್ಯಾಯವು ಮುಗಿಯಿತು.

೧೭೩ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ವಸಿಷ್ಠರ ಸಹಾಯದಿಂದ ಸಂವರಣನಿಗೆ ತಪತಿಯ ಪ್ರಾಪ್ತಿ

ಗಂಧರ್ವನು ಹೇಳುತ್ತಾನೆ :

**ಏವಮುಕ್ತ್ವಾ ತತಸ್ತೂರ್ಣಂ ಜಗಾಮೋರ್ಧ್ವಮನಿನ್ದಿತಾ ।**
**ಸ ತು ರಾಜಾ ಪುನರ್ಭೂಮೌ ತತ್ರೈವ ನಿಪಪಾತ ಹ ॥೧॥**

"ಅರ್ಜುನ! ಅನಿಂದಿತೆಯಾದ ತಪತಿಯು ಹೀಗೆ ಹೇಳಿ ಊರ್ಧ್ವ ಮುಖಳಾಗಿ (ಆಕಾಶಮಾರ್ಗದಲ್ಲಿ) ಪ್ರಯಾಣಮಾಡಿ ಅದೃಶ್ಯಳಾದಳು. ಕಾಮದೇವನ ತೀಕ್ಷ್ಣವಾದ ಬಾಣಗಳ ಅವ್ಯಾಹತವಾದ ಪ್ರಹಾರಗಳಿಂದ ಸಂವರಣನು ಪುನಃ ನಿಶ್ಚೇತನನಾಗಿ ಕೆಳಗುರುಳಿದನು.

ರಾಜನನ್ನು ಎಲ್ಲಿಯೂ ಕಾಣದೇ ಪರಿವಾರದಿಂದ ಕೂಡಿದ ಮಂತ್ರಿಯು

ಆತನನ್ನು ಎಲ್ಲೆಡೆಗಳಲ್ಲಿಯೂ ಹುಡುಕತೊಡಗಿದನು. ಕಟ್ಟಕಡೆಗೆ ಎಲ್ಲರೂ ರಾಜನು ಬಿದ್ದಿದ್ದ ಸ್ಥಳಕ್ಕೆ ಬಂದರು. ಅಂತರಿಕ್ಷದಲ್ಲಿರುವ ಇಂದ್ರಧ್ವಜವು ಭೂಮಿಯ ಮೇಲೆ ಬಿದ್ದಿದೆಯೋ ಎಂಬಂತೆ ಭೂಮಿಯಲ್ಲಿ ಬಿದ್ದಿದ್ದ ರಾಜನನ್ನು ನೋಡಿದರು. ರಾಜನ ದುರವಸ್ಥೆಯನ್ನು ಕಂಡು ಜ್ಞಾನವೃದ್ಧನೂ, ವಯೋವೃದ್ಧನೂ, ಕೀರ್ತಿಮಂತನೂ ಆದ ಅವನ ಪ್ರಧಾನ ಸಚಿವನು ಅಗ್ನಿಸ್ಪರ್ಶದಿಂದುಂಟಾಗುವ ಸಂಕಟವನ್ನು ಅನುಭವಿಸಿದನು. ಪ್ರಧಾನಾಮಾತ್ಯನು ಒಡನೆಯೇ ರಾಜನ ಸಮೀಪಕ್ಕೆ ಹೋಗಿ, ಕಾಮಾಗ್ನಿಯ ತಾಪಕ್ಕೆ ಸಿಕ್ಕಿ ನಿಶ್ಚೇತನನಾಗಿ ಬಿದ್ದಿದ್ದ ರಾಜನನ್ನು–ತಂದೆಯಾದವನು ಬಿದ್ದಿರುವ ಮಗನನ್ನು ಮೇಲಕ್ಕೆತ್ತುವಂತೆ–ಮೇಲೆತ್ತಿ ಕುಳ್ಳಿರಿಸಿದನು. ರಾಜನು ಕುಳಿತುಕೊಂಡ ಮೇಲೆ ಅಮಾತ್ಯನಿಗೆ ಸ್ವಲ್ಪ ಸಮಾಧಾನವಾಯಿತು. ರಾಜನ ತಲೆಗೆ ತಣ್ಣೀರನ್ನು ಚುಮುಕಿಸಿ, ತಲೆಯನ್ನು ತಟ್ಟುತ್ತಾ, ರಾಜನನ್ನು ಕುರಿತು ಹೇಳಿದನು :

"ಮಹಾರಾಜ! ನಿನಗೆ ಮಂಗಳವಾಗಲಿ. ನೀನು ಯಾವ ಕಾರಣ ದಿಂದಲೂ ಭಯಪಡಬೇಕಾಗಿಲ್ಲ. ನಿನ್ನ ಬೆಂಬಲಿಗರಾಗಿ ನಾವು ಯಾವಾ ಗಲೂ ನಿನ್ನ ಸಮೀಪದಲ್ಲಿಯೇ ಇರುವೆವು"–ಇವೇ ಮುಂತಾದ ಸವಿಮಾತು ಗಳನ್ನಾಡುತ್ತಾ ರಾಜನನ್ನು ಸಂತೈಸಿದನು.

ಶತ್ರುಗಳನ್ನು ಸಂಹಾರಮಾಡುವುದರಲ್ಲಿ ಸಮರ್ಥನಾದ ರಾಜನು ಹಗಲು-ರಾತ್ರಿಗಳೆನ್ನದೇ ಬೇಟೆಯಾಡಿ, ಹಸಿವು-ಬಾಯಾರಿಕೆಗಳಿಂದ ಬಳಲಿ ಬೆಂಡಾಗಿ ಬಿದ್ದಿರಬಹುದೆಂದು ಪ್ರಧಾನಾಮಾತ್ಯನು ಭಾವಿಸಿದನು.

ರಾಜನು ಕೆಳಗೆ ಬಿದ್ದಿದ್ದರೂ ಅವನ ತಲೆಯಲ್ಲಿ ಧರಿಸಿಕೊಂಡಿದ್ದ ಕಿರೀಟವು ಕೆಳಗೆ ಬಿದ್ದಿರಲಿಲ್ಲ. ಯುದ್ಧದಲ್ಲಿ ಶತ್ರುಗಳನ್ನು ಭೂಮಿಯ ಮೇಲೆ ಬೀಳಿಸುವ ರಾಜನು ಬೇಟೆಯ ಬಳಲಿಕೆಯಿಂದ ಕೆಳಗೆ ಬಿದ್ದಿರುವನೆಂದೇ ಮಂತ್ರಿಯು ನಿಶ್ಚಯಿಸಿ, ಕಮಲದ ಸುವಾಸನೆಯಿಂದ ಕೂಡಿದ್ದ ಸುಶೀತಲ ವಾಗಿದ್ದ ಪನ್ನೀರನ್ನು ರಾಜನ ತಲೆಯ ಮೇಲೆ ಚುಮುಕಿಸಿದನು.

ಸಂಪೂರ್ಣವಾಗಿ ಜ್ಞಾನವು ಬಂದನಂತರ ಮಹಾರಾಜನು ತನ್ನ ಸುತ್ತ-ಮುತ್ತಲೂ ಸೈನಿಕರೂ ಮತ್ತು ಅಮಾತ್ಯರೂ ನಿಂತಿರುವುದನ್ನು

ನೋಡಿ, ಅಮಾತ್ಯನೊಬ್ಬನನ್ನುಳಿದು ಮಿಕ್ಕ ಪರಿವಾರದವರನ್ನು ರಾಜಧಾನಿಗೆ ಪ್ರಯಾಣಮಾಡುವಂತೆ ಆಜ್ಞೆಮಾಡಿದನು.

ರಾಜನ ಆಜ್ಞಾನುಸಾರವಾಗಿ ಸೇನೆಯು ರಾಜಧಾನಿಗೆ ಹಿಂದಿರುಗಿತು. ರಾಜಾ ಸಂವರಣನು ಪುನಃ ಆ ಪರ್ವತದ ತಪ್ಪಲಿನಲ್ಲಿಯೇ ಸ್ವಲ್ಪಕಾಲ ಕುಳಿತಿದ್ದನು. ತಪತಿಯು ಹೇಳಿದುದು ಸ್ಮರಣೆಗೆ ಬಂದಿತು. ಅವಳನ್ನು ಪಡೆಯಬೇಕಾದರೆ ಸೂರ್ಯೋಪಾಸನೆಯನ್ನು ಮಾಡಬೇಕು. ಸಾಧ್ವಿಯಾದ, ಸನಾತನಧರ್ಮಾನುಸಾರಿಣಿಯಾದ ತಪತಿಯು ರಾಜನು ಹೇಳಿದಂತೆ ಗಾಂಧರ್ವವಿವಾಹಕ್ಕೆ ಒಪ್ಪಲಿಲ್ಲ. ರಾಜನ ವಿಷಯದಲ್ಲಿ ತನಗಿರುವ ಅನುರಾಗ ವನ್ನು ಸ್ಪಷ್ಟಪಡಿಸಿ ಹೊರಟುಹೋದಳು. ಅದನ್ನು ಸ್ಮರಿಸಿದ ಸಂವರಣನು ಒಡನೆಯೇ ಮೇಲೆದ್ದು, ಸ್ನಾನಮಾಡಿ, ಪರಿಶುದ್ಧನಾಗಿ, ಎರಡು ಕೈಗಳನ್ನೂ ಜೋಡಿಸಿ ಮೇಲಕ್ಕೆತ್ತಿ, ಸೂರ್ಯಾಭಿಮುಖವಾಗಿ ಕುಳಿತು ಪ್ರಾರ್ಥಿಸಿದನು. ಆ ಸಮಯದಲ್ಲಿ ಶತ್ರುಹಂತಕವಾದ ಸಂವರಣನು ತನ್ನ ಕುಲಪುರೋಹಿತ ರಾದ ವಸಿಷ್ಠರನ್ನು ಸ್ಮರಿಸಿಕೊಂಡನು.

ನಿದ್ರಾಹಾರಗಳಾವುವೂ ಇಲ್ಲದೇ ಹಗಲು-ರಾತ್ರಿಗಳೆಂಬ ಪರಿವೆಯೂ ಇಲ್ಲದೇ ಸಂವರಣನು ಸೂರ್ಯಾರಾಧನೆಯನ್ನು ಮಾಡುತ್ತಿದ್ದಾಗ–ಹನ್ನೆರಡ ನೆಯ ದಿನ ವಸಿಷ್ಠರು ಆಪ್ತಶಿಷ್ಯನಾದ ಸಂವರಣನ ಬಳಿಗೆ ಆಗಮಿಸಿದರು.

ವಿಶುದ್ಧಾತ್ಮರಾದ ವಸಿಷ್ಠರು ದಿವ್ಯದೃಷ್ಟಿಯಿಂದ ಸಂವರಣನ ಮನಸ್ಸು ಸೂರ್ಯನ ಮಗಳಾದ ತಪತಿಯಿಂದ ಅಪಹೃತವಾಗಿದೆಯೆಂಬುದನ್ನು ತಿಳಿದುಕೊಂಡರು. ಧರ್ಮಾತ್ಮರಾದ, ಋಷಿಶ್ರೇಷ್ಠರಾದ ವಸಿಷ್ಠರು ರಾಜನ ಮನಸ್ಸಿನ ಆಶಯವನ್ನು ಪೂರ್ಣಮಾಡಿಕೊಡುವ ಅಪೇಕ್ಷೆಯಿಂದ ಜಿತೇಂದ್ರಿಯನಾದ ಸಂವರಣನೊಡನೆ ಕೆಲವು ಮಾತುಗಳನ್ನಾಡಿದರು. ಅನಂತರದಲ್ಲಿ ಸಂವರಣನು ನೋಡುತ್ತಿದ್ದಂತೆಯೇ ಸೂರ್ಯಸಮಾನ ತೇಜಸ್ವಿಗಳಾದ ಭಗವಾನ್ ವಸಿಷ್ಠರು ಸೂರ್ಯನನ್ನು ಕಾಣುವ ಸಲುವಾಗಿ ಊರ್ಧ್ವಮುಖವಾಗಿ ಪ್ರಯಾಣಹೊರಟರು. ಮಹಾಮಹಿಮರಾದ ವಸಿಷ್ಠರು ಸೂರ್ಯನ ಸಮೀಪಕ್ಕೆ ಹೋಗಿ ಬದ್ಧಾಂಜಲಿಗಳಾಗಿ ನಿಂತು 'ನಾನು ವಸಿಷ್ಠ'ನೆಂದು ಹೇಳಿ, ತಮ್ಮ ಪರಿಚಯವನ್ನು ಪ್ರೀತ್ಯಾದರಗಳೊಡನೆ

ಸೂರ್ಯನಿಗೆ ಮಾಡಿಕೊಟ್ಟರು. ಮಹಾತೇಜಸ್ವಿಯಾದ, ತೇಜೋರಾಶಿ ಯಾದ ವಿವಸ್ವಂತನು ಮುನಿಶ್ರೇಷ್ಠರಾದ ವಸಿಷ್ಠರನ್ನು ಕುರಿತು ಹೇಳಿದನು :

"ಮಹರ್ಷಿಗಳೇ! ತಮಗೆ ಸ್ವಾಗತವನ್ನು ಬಯಸುತ್ತೇನೆ. ತಾವು ನನ್ನಲ್ಲಿಗೆ ಆಗಮಿಸಿರುವ ಆಶಯವೇನೆಂಬುದನ್ನು ಹೇಳಿರಿ. ವಾಗ್ಮಿಗಳಲ್ಲಿ ಶ್ರೇಷ್ಠರಾದ ಮಹಾಭಾಗರೇ! ನನ್ನಿಂದ ತಾವು ಏನನ್ನು ಅಪೇಕ್ಷಿಸುವಿರಿ? ತಾವು ಅಪೇಕ್ಷಿಸುವುದನ್ನು ಕೊಡಲು ಸಿದ್ಧನಿರುವೆನು. ಆ ಕಾರ್ಯವು ಎಷ್ಟೇ ದುಷ್ಕರವೇ ಆಗಿರಲಿ ; ಅದನ್ನು ನಾನು ತಪ್ಪದೇ ನಡೆಸಿಕೊಡುವೆನು."

ಸೂರ್ಯದೇವನು ಹೀಗೆ ಹೇಳಿದೊಡನೆಯೇ ಮಹಾತಪಸ್ವಿಗಳಾದ ವಸಿಷ್ಠರು ಭಾನುಮಂತನಿಗೆ ಪುನಃ ನಮಸ್ಕರಿಸಿ ಹೇಳಿದರು :

**ಯೈಷಾ ತೇ ತಪತೀ ನಾಮ ಸಾವಿತ್ರ್ಯವರಜಾ ಸುತಾ ।**
**ತಾಂ ತ್ವಾಂ ಸಂವರಣಸ್ಯಾರ್ಥೇ ವರಯಾಮಿ ವಿಭಾವಸೋ ॥೨೨॥**

**ಸ ಹಿ ರಾಜಾ ಬೃಹತ್ಕೀರ್ತಿರ್ಧರ್ಮಾರ್ಥವಿದುದಾರಧೀಃ ।**
**ಯುಕ್ತಃ ಸಂವರಣೋ ಭರ್ತಾ ದುಹಿತುಸ್ತೇ ವಿಹಂಗಮ ॥೨೩॥**

"ವಿಭಾವಸುವೇ! ನಿನಗೆ 'ತಪತೀ' ಎಂಬ ಹೆಸರಿನ, ಸಾವಿತ್ರಿ ದೇವಿಗೆ ಎರಡನೆಯವಳಾಗಿ ಹುಟ್ಟಿರುವ ಮಗಳಿರುವಳಲ್ಲವೇ? ಅವಳನ್ನು ನನ್ನ ಶಿಷ್ಯನಾದ ಸಂವರಣನಿಗೋಸ್ಕರವಾಗಿ ಪ್ರಾರ್ಥಿಸಲು ಬಂದಿರುವೆನು. ಸಂವರಣನು ನಿನ್ನ ಮಗಳಿಗೆ ಅನುರೂಪನಾದ ವರನಾಗಿದ್ದಾನೆ. ಅವನು ಪೃಥ್ವಿಯಲ್ಲಿ ಸುವಿಖ್ಯಾತನಾದ ರಾಜನಾಗಿರುವನು. ಅವನ ಕೀರ್ತಿಯು ಲೋಕಾಂತರಗಳಲ್ಲಿಯೂ ಹರಡಿದೆ. ಧರ್ಮಾರ್ಥವಿದನೂ, ಉದಾರಿಯೂ ಆಗಿರುವನು. ಆದುದರಿಂದ ನಿನ್ನ ಮಗಳಿಗೆ ಅವನು ಅನುರೂಪನಾದ ಪತಿಯಾಗುವನು."

ಮಹರ್ಷಿಗಳ ಮಾತುಗಳನ್ನು ಕೇಳಿ ಸೂರ್ಯದೇವನು ತನ್ನ ಮಗ ಳನ್ನು ಸಂವರಣನಿಗೆ ವಿವಾಹಮಾಡಿಕೊಡುವುದಾಗಿ ನಿಶ್ಚಯಿಸಿ ಮಗಳಿಗೆ ಅನುರೂಪನಾದ ವರನನ್ನು ಹುಡುಕಿಕೊಟ್ಟುದಕ್ಕಾಗಿ ವಸಿಷ್ಠರನ್ನು ಅಭಿ ನಂದಿಸುತ್ತಾ ಹೇಳಿದನು :

**ವರಃ ಸಂವರಣೋ ರಾಜ್ಞಾಂ ತ್ವಮೃಷೀಣಾಂ ವರೋ ಮುನೇ ।**
**ತಪತೀ ಯೋಷಿತಾಂ ಶ್ರೇಷ್ಠಾ ಕಿಮನ್ಯದಪವರ್ಜನಾತ್ ॥೨೫॥**

"ಮಹರ್ಷಿಗಳೇ! ರಾಜರಲ್ಲಿ ಸಂವರಣನು ಶ್ರೇಷ್ಠನಾಗಿರುವನು. ಮಹರ್ಷಿಗಳಲ್ಲಿ ನೀವು ಶ್ರೇಷ್ಠರಾಗಿರುವಿರಿ. ಅಂತೆಯೇ ಸ್ತ್ರೀಯರಲ್ಲಿ ತಪತಿಯು ಶ್ರೇಷ್ಠಳಾಗಿರುವಳು. ಹೀಗಿರುವಾಗ ನನ್ನ ಕನ್ಯೆಯನ್ನು ಸಂವರಣನಿಗೆ ದಾನಮಾಡುವುದಕ್ಕಿಂತಲೂ ಮಿಗಿಲಾದ ಧರ್ಮವು ಯಾವುದಿರುವುದು? ನನ್ನ ಮಗಳನ್ನು ಸಂವರಣನಿಗಾಗಿ ತಮ್ಮೊಡನೆ ಕಳುಹಿಸಿಕೊಡುವೆನು." ಸೂರ್ಯನು ಹೀಗೆ ಹೇಳಿ ಸರ್ವಾಲಂಕಾರಭೂಷಿತೆಯಾದ, ಅನಿಂದ್ಯಳಾದ ತಪತಿಯನ್ನು ತಾನೇ ಸ್ವತಃ ಕರೆತಂದು ಸಂವರಣನಿಗಾಗಿ ವಸಿಷ್ಠರಿಗೆ ಒಪ್ಪಿಸಿದನು.

ಮಹರ್ಷಿಗಳಾದ ವಸಿಷ್ಠರು ಪರಮಸಂತೋಷದಿಂದ ಸಂವರಣನಿಗಾಗಿ ತಪತಿಯನ್ನು ಸ್ವೀಕರಿಸಿದರು. ಸೂರ್ಯನಿಂದ ಬೀಳ್ಕೊಂಡ ವಸಿಷ್ಠರು– ಕೀರ್ತಿಯಿಂದ ವಿಖ್ಯಾತನಾಗಿದ್ದ, ಮನ್ಮಥನ ಬಾಣಗಳಿಂದ ಪೀಡಿತನಾಗಿ ಸದಾಕಾಲದಲ್ಲಿಯೂ ತಪತಿಯ ಚಿಂತೆಯಲ್ಲಿಯೇ ಇದ್ದ, ಕುರುಕುಲಸಾರ್ವಭೌಮನಾದ ಸಂವರಣನ ಸಮೀಪಕ್ಕೆ ತಪತಿಯೊಡನೆ ಆಗಮಿಸಿದರು. ವಸಿಷ್ಠರೊಡನೆ ಬರುತ್ತಿದ್ದ, ನಗುಮೊಗದಿಂದ ಕೂಡಿದ್ದ, ದೇವಕನ್ಯೆಯಾದ ತಪತಿಯನ್ನು ದೂರದಿಂದಲೇ ನೋಡಿದ ಸಂವರಣನ ಆನಂದಕ್ಕೆ ಪಾರವೇ ಇಲ್ಲವಾಯಿತು. ಮನೋಹರವಾದ ಹುಬ್ಬುಗಳಿಂದ ಕೂಡಿದ್ದ ತಪತಿಯು ತನ್ನ ದೇಹಕಾಂತಿಯಿಂದ ಮಿಂಚಿನೋಪಾದಿಯಲ್ಲಿ ನಾಲ್ಕು ದಿಕ್ಕುಗಳನ್ನೂ ಬೆಳಗುತ್ತಾ ಆಕಾಶದಿಂದ ಇಳಿದುಬರುತ್ತಿದ್ದಳು.

ಅರ್ಜುನ! ನಾನು ಹಿಂದೆಯೇ ಹೇಳಿದಂತೆ ಸಂವರಣನು ಹನ್ನೆರಡು ದಿವಸಗಳ ಕಾಲ ಹಗಲು-ರಾತ್ರಿಗಳೆಂಬ ಪರಿವೆಯೇ ಇಲ್ಲದೇ ಏಕಾಗ್ರಚಿತ್ತನಾಗಿ ಸೂರ್ಯಾರಾಧನೆಯನ್ನು ಮಾಡಿದನಂತರ ವಿಶುದ್ಧಾತ್ಮರಾದ ವಸಿಷ್ಠರು ಸೂರ್ಯನ ಬಳಿಗೆ ಹೋಗಿ ತಪತಿಯನ್ನು ಕರೆತಂದರು. ಈ ರೀತಿಯಾಗಿ ಸಂವರಣನು ದೇವದೇವನಾದ, ವರದನಾದ, ಗೋಪತಿಯಾದ (ಕಿರಣಗಳಿಗೆ ಒಡೆಯನಾದ), ಈಶ್ವರನಾದ ಸೂರ್ಯನನ್ನು ತಪಸ್ಸಿನಿಂದ ಆರಾಧಿಸಿದುದರಿಂದಲೂ, ಪುರೋಹಿತರಾದ ವಸಿಷ್ಠರ ಪ್ರಭಾವದಿಂದಲೂ ತಪತಿಯನ್ನು ತನ್ನ

ಭಾರ್ಯೆಯನ್ನಾಗಿ ಪಡೆದನು. ದೇವ-ಗಂಧರ್ವರಿಂದಲೂ ಸಂಸೇವಿತವಾದ ಆ ಪರ್ವತದ ತಪ್ಪಲಿನಲ್ಲಿಯೇ ನರರ್ಷಭನಾದ ಸಂವರಣನು ವಿಧಿವತ್ತಾಗಿ ತಪತಿಯನ್ನು ಪಾಣಿಗ್ರಹಣಮಾಡಿಕೊಂಡನು.

ವಿವಾಹವಾದನಂತರದಲ್ಲಿ ಸಂವರಣನು ಮಹರ್ಷಿಗಳಾದ ವಸಿಷ್ಠರ ಅನುಜ್ಞೆಯನ್ನು ಪಡೆದುಕೊಂಡು, ಅದೇ ಪರ್ವತದಲ್ಲಿಯೇ ತನ್ನ ಪ್ರಿಯಪತ್ನಿ ಯಾದ ತಪತಿಯೊಡನೆ ವಿಹರಿಸಲಿಚ್ಛಿಸಿದನು. ಅವನು ಪತ್ನಿಯೊಡನೆ ವಿಹರಿ ಸುತ್ತಿದ್ದ ಆ ದಿನಗಳಲ್ಲಿ ಪುರ, ರಾಷ್ಟ್ರ, ವನ, ಉಪವನ–ಇವುಗಳ ರಕ್ಷಣೆಯ ಭಾರವನ್ನು ತನ್ನ ಸಮೀಪದಲ್ಲಿಯೇ ಬಹಳ ದಿನಗಳಿಂದಲೂ ಇದ್ದ ಅಮಾತ್ಯ ನಿಗೆ ವಹಿಸಿಕೊಟ್ಟನು. ಮಹರ್ಷಿಗಳಾದ ವಸಿಷ್ಠರೂ ತಮ್ಮ ಆಶ್ರಮಕ್ಕೆ ತೆರಳುವುದಕ್ಕಾಗಿ ರಾಜನಿಗೆ ತಿಳಿಸಿ ಹೊರಟುಹೋದರು. ಮಂತ್ರಿ-ಪುರೋ ಹಿತರು ಹೊರಟುಹೋದ ನಂತರ ಸಂವರಣನು ತನ್ನ ಪತ್ನಿಯೊಡನೆ ಆ ಪರ್ವತದಲ್ಲಿ ದೇವತೆಗಳು ವಿಹರಿಸುವಂತೆಯೇ ವಿಹರಿಸುತ್ತಿದ್ದನು.

ಸಂವರಣನು ಭಾರ್ಯೆಯೊಡನೆ ಕಾನನ-ವನ-ದುರ್ಗಗಳಲ್ಲಿ ಸ್ವೇಚ್ಛೆ ಯಿಂದ ವಿಹರಿಸುತ್ತಾ, ಹನ್ನೆರಡು ವರ್ಷಗಳನ್ನು ಆ ಪರ್ವತದ ತಪ್ಪಲಿ ನಲ್ಲಿಯೇ ಕಳೆದನು. ಧಾರ್ಮಿಕನಾದ ರಾಜನು ರಾಜ್ಯಕ್ಕೆ ಹೋಗದೆಯೇ ಇದ್ದುದರಿಂದಲೂ, ಯಥಾಪೂರ್ವವಾಗಿ ಯಜ್ಞ-ಯಾಗಾದಿಗಳು ನಡೆಯದೇ ಇದ್ದುದರಿಂದಲೂ–ಸಂವರಣನು ಪತ್ನಿಯೊಡನೆ ವಿಹರಿಸುತ್ತಿದ್ದ ಹನ್ನೆರಡು ವರ್ಷಗಳ ಕಾಲ ದೇವೇಂದ್ರನು ಸಂವರಣನ ರಾಜ್ಯದಲ್ಲಿ ಮಳೆಗರೆಯಲಿಲ್ಲ. ದೀರ್ಘಕಾಲದ ಅನಾವೃಷ್ಟಿಯ ಕಾರಣಗಳಿಂದಾಗಿ ಪ್ರಜೆಗಳೂ ಕ್ಷೀಣಿಸಿದರು. ಸ್ಥಾವರ-ಜಂಗಮಗಳೂ (ಮರ-ಗಿಡ-ಬಳ್ಳಿಗಳು ಮತ್ತು ಪಶು-ಪ್ರಾಣಿಗಳೂ) ವಿನಾಶಹೊಂದಿದುವು. ಸುದಾರುಣವಾದ ಆ ಕಾಲದಲ್ಲಿ ಸಂವರಣನ ರಾಜ್ಯ ದಲ್ಲಿ ಒಂದು ಹನಿ ಕೂಡ ಮಳೆಯಾಗಲಿಲ್ಲ. ಮಂಜೂ ಬೀಳಲಿಲ್ಲ. ಅದ ರಿಂದಾಗಿ ಯಾವ ವಿಧವಾದ ಸಸ್ಯಗಳೂ ಹುಟ್ಟಲಿಲ್ಲ.

ಕ್ಷುದ್ಬಾಧೆಯಿಂದ ಪೀಡಿತರಾದ ಪ್ರಜೆಗಳು ವ್ಯಾಕುಲಚಿತ್ತರಾದರು. ಮನೆ-ಮಠಗಳನ್ನು ತೊರೆದು ದಿಕ್ಕಾಪಾಲಾಗಿ ಹೊರಟುಹೋದರು. ಪ್ರಜೆ ಗಳು ಲೋಕಮರ್ಯಾದೆಯನ್ನೇ ಪರಿತ್ಯಜಿಸಿದರು. ಹೆಂಡತಿ-ಮಕ್ಕಳನ್ನು

ಬಿಟ್ಟು ಹೊರಟುಹೋದರು. ಕೆಲವೆಡೆಗಳಲ್ಲಿ ಸಿಕ್ಕುತ್ತಿದ್ದ ಅಲ್ಪಾಹಾರಕ್ಕಾಗಿ ಹಸಿದ ಪ್ರಜೆಗಳು ಬಡಿದಾಡುತ್ತಿದ್ದರು. ಹಸಿವಿನಿಂದ ಬಳಲಿದ್ದ, ನಿರಾಹಾರಿಗಳಾಗಿದ್ದ, ಕೇವಲ ಎಲುಬು-ಚಕ್ಕಳಗಳಿಂದ ಕೂಡಿದ್ದ, ಶವಸದೃಶರಾಗಿದ್ದ ಪ್ರಜೆಗಳಿಂದ ಕೂಡಿದ್ದ ಸಂವರಣರಾಜನ ರಾಜಧಾನಿಯು–ಪ್ರೇತಗಳಿಂದ ಕೂಡಿದ ಪ್ರೇತರಾಜನ ರಾಜಧಾನಿಯಂತೆಯೇ–ಕಾಣುತ್ತಿದ್ದಿತು. ಸಂವರಣನ ಪ್ರಜೆಗಳು ಅಂತಹ ದುರವಸ್ಥೆಯಲ್ಲಿರುವುದನ್ನು ಗಮನಿಸಿದ ವಸಿಷ್ಠರು ತಮ್ಮ ತಪೋಬಲದಿಂದ ಮಳೆಗರೆಸಿದರು. ಅನೇಕವರ್ಷಗಳ ಪರ್ಯಂತವಾಗಿ ತಪತಿಯೊಂದಿಗೆ ಪರ್ವತದ ತಪ್ಪಲಿನಲ್ಲಿಯೇ ಇದ್ದ ಸಂವರಣನನ್ನೂ ವಸಿಷ್ಠರು ತಪತಿಯೊಡನೆ ರಾಜಧಾನಿಗೆ ಕರೆತಂದರು. ಸಂವರಣನು ರಾಜಧಾನಿಗೆ ಆಗಮಿಸಿದನಂತರವೇ ಅಸುರಹಂತಕನಾದ ದೇವೇಂದ್ರನು ಯಥಾಪೂರ್ವವಾಗಿ ಮಳೆಗರೆದನು. ನರಶಾರ್ದೂಲನಾದ ಸಂವರಣನು ತಪತಿಯೊಡನೆಯೂ–ವಸಿಷ್ಠರೊಡನೆಯೂ ರಾಜಧಾನಿಯನ್ನು ಪ್ರವೇಶಿಸುತ್ತಿರುವಾಗಲೇ ಸಹಸ್ರಾಕ್ಷನು ಪ್ರಜಾಕೋಟಿಗೆ ಆಹ್ಲಾದವಾಗುವ ರೀತಿಯಲ್ಲಿ ಮಳೆಗರೆದನು. ಮಳೆಯಿಂದಾಗಿ ಸಸ್ಯಗಳೂ ಹುಟ್ಟಿದುವು. ಶುದ್ಧಾಂತರಂಗನಾದ, ಪಾರ್ಥಿವಶ್ರೇಷ್ಠನಾದ ಸಂವರಣನಿಂದ ಪರಿಪಾಲಿತವಾದ ಆ ದೇಶವು ಸಮೃದ್ಧವಾಯಿತು. ದೇಶದಲ್ಲಿ ಮತ್ತು ರಾಜಧಾನಿಯಲ್ಲಿ ಸಕಲಪ್ರಜೆಗಳೂ ಆನಂದ ತುಂದಿಲರಾದರು.

ಶಚೀಸಹಿತನಾದ ಇಂದ್ರನಂತೆ–ತಪತೀಸಹಿತವಾದ ಸಂವರಣನು ಹನ್ನೆರಡು ವರ್ಷಗಳ ಪರ್ಯಂತವಾಗಿ ಅನೇಕಾನೇಕ ಯಜ್ಞ-ಯಾಗಾದಿಗಳನ್ನು ಮಾಡಿದನು. ಈ ರೀತಿಯಾಗಿ ವಿವಸ್ವಂತನ ಮಗಳಾದ ತಪತಿಯು ನಿಮ್ಮ ಪೌರ್ವಿಕಿಯಾದಳು. (ನಿಮ್ಮ ಪೂರ್ವಪುರುಷನಾದ ಸಂವರಣನ ಪತ್ನಿಯಾದಳು.) ಅದೇ ಕಾರಣದಿಂದಲೇ ನೀನು ತಾಪತ್ಯನಾದೆ. ತಪಸ್ವಿಗಳಲ್ಲಿ ಶ್ರೇಷ್ಠನಾದ ಅರ್ಜುನನೇ! ತಪತಿಯಲ್ಲಿ ಸಂವರಣನಿಗೆ ಕುರುವೆಂಬ ಮಗನು ಹುಟ್ಟಿದನು. ಕುರುವಂಶಸಂಭೂತನಾದ ನೀನು ಕೌರವನೆಂದು ಕರೆಯಲ್ಪಡುವಂತೆ ತಪತಿಯ ಸಂಬಂಧಾನುಸಂಬಂಧದಿಂದ ತಾಪತ್ಯನೂ ಆಗಿರುವೆ."

೧೭೩ನೆಯ ಅಧ್ಯಾಯವು ಮುಗಿಯಿತು.

೧೭೪ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಗಂಧರ್ವನಿಂದ ವಸಿಷ್ಠರ ಮಹತ್ತ್ವದ ಕಥನ

ವೈಶಂಪಾಯನರು ಹೇಳುತ್ತಾರೆ :

**ಸ ಗನ್ಧರ್ವವಚಃ ಶ್ರುತ್ವಾ ತತ್ತದಾ ಭರತರ್ಷಭ ।**
**ಅರ್ಜುನಃ ಪರಯಾ ಭಕ್ತ್ಯಾ ಪೂರ್ಣಚನ್ದ್ರ ಇವಾಬಭೌ ॥೧॥**

"ಜನಮೇಜಯ! ಗಂಧರ್ವನು ಹೇಳಿದ ತಪತಿಯ ಕಥೆಯನ್ನು ಕೇಳಿ ಅರ್ಜುನನಿಗೆ ತಪತಿಯ ವಿಷಯದಲ್ಲಿಯೂ ಮತ್ತು ವಸಿಷ್ಠರ ವಿಷಯದಲ್ಲಿಯೂ ಭಕ್ತಿಭಾವವು ಅಧಿಕಗೊಂಡಿತು. ತನ್ನ ಪೂರ್ವಜರ ಮಹತ್ತ್ವದ ಕಥೆಯನ್ನು ಕೇಳಿ ಅರ್ಜುನನ ಮುಖವರಳಿ ಪೂರ್ಣಚಂದ್ರನಂತೆ ಪ್ರಕಾಶಿಸಿದನು.

ವಸಿಷ್ಠರಲ್ಲಿದ್ದ ತಪೋಬಲದ ವಿಷಯವಾಗಿ ಅರ್ಜುನನಿಗೆ ಬಹಳವಾದ ಕೌತೂಹಲವುಂಟಾಯಿತು. ಅಂತೆಯೇ ಗಂಧರ್ವನನ್ನು ಕೇಳಿದನು :

" ಗಂಧರ್ವರಾಜ! ವಸಿಷ್ಠರ ತಪಃಪ್ರಭಾವವನ್ನು ಕೇಳಿ ನನ್ನ ಶರೀರವು ಪುಲಕಿತವಾಗಿದೆ. ಅದರ ವಿಷಯವಾಗಿ ಇನ್ನೂ ಹೆಚ್ಚಿನ ವಿಷಯಗಳನ್ನು ಕೇಳಬೇಕೆನ್ನುವ ಆಶಯವಿದೆ. ನಮ್ಮ ಪೂರ್ವಜರಿಗೆ ಪುರೋಹಿತರಾಗಿದ್ದ ವಸಿಷ್ಠಮಹರ್ಷಿಗಳ ಪುಣ್ಯಕಥೆಯನ್ನು ಯಥಾವತ್ತಾಗಿ ಹೇಳುವವನಾಗು."

"ಅರ್ಜುನ! ನಿನಗೆ ಕೇಳಲು ಕುತೂಹಲವಿರುವಂತೆಯೇ ನನಗೂ ಆ ಮಹಾಮಹಿಮರ ಕಥೆಯನ್ನು ಹೇಳುವ ಔತ್ಸುಕ್ಯವೂ ಇದೆ.

**ಬ್ರಹ್ಮಣೋ ಮಾನಸಃ ಪುತ್ರೋ ವಸಿಷ್ಠೋಽರುನ್ಧತೀಪತಿಃ ।**
**ತಪಸಾ ನಿರ್ಜಿತೌ ಶಶ್ವದಜೇಯಾವಮರೈರಪಿ ॥೫॥**

**ಕಾಮಕ್ರೋಧಾವುಭೌ ಯಸ್ಯ ಚರಣೌ ಸಂವವಾಹತುಃ ।**
**ಇನ್ದ್ರಿಯಾಣಾಂ ವಶಕರೋ ವಸಿಷ್ಠ ಇತಿ ಚೋಚ್ಯತೇ ॥೬॥**

ವಸಿಷ್ಠರು ಬ್ರಹ್ಮಮಾನಸಪುತ್ರರು. ಅರುಂಧತಿಯ ಪತಿ. ದೇವತೆ

ಗಳಿಂದಲೂ ಜಯಿಸಲು ಅಸಾಧ್ಯವಾದ ಆಶೆ ಮತ್ತು ಕೋಪಗಳನ್ನು ಜಯಿಸಿದ ಮಹಾಮಹಿಮರು. ಆಶೆ ಮತ್ತು ಕೋಪಗಳು ಅವರ ಪದತಲದಲ್ಲಿ ದಾಸ್ಯರೂಪದಲ್ಲಿದ್ದುವು. ಪಂಚೇಂದ್ರಿಯಗಳನ್ನೂ ಅವರು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿದ್ದರಿಂದಲೇ ಅವರಿಗೆ ವಸಿಷ್ಠರೆಂಬ ಹೆಸರು ಪ್ರಾಪ್ತವಾಯಿತು.

**ಯಸ್ತು ನೋಚ್ಛೇದನಂ ಚಕ್ರೇ ಕುಶಿಕಾನಾಮುದಾರಧೀಃ ।**
**ವಿಶ್ವಾಮಿತ್ರಾಪರಾಧೇನ ಧಾರಯನ್ಮನ್ಯುಮುತ್ತಮಮ್ ॥೭॥**

ವಿಶ್ವಾಮಿತ್ರನ ಅನೇಕವಾದ ಅಪರಾಧಗಳು ವಸಿಷ್ಠರ ಕೋಪವನ್ನು ಉಲ್ಬಣಿಸಬಹುದಾಗಿದ್ದರೂ ಮಹಾಮಹಿಮರಾದ ಅವರು ಆ ಮಹಾಕೋಪ ವನ್ನು ತಮ್ಮಲ್ಲಿಯೇ ಅಡಗಿಸಿಕೊಂಡರೇ ಹೊರತು ಕುಶಿಕವಂಶದ ನಿರ್ಮೂಲನಕ್ಕೆ ಕಾರಣರಾಗಲಿಲ್ಲ.

**ಪುತ್ರವ್ಯಸನಸಂತಪ್ತಃ ಶಕ್ತಿಮಾನಪ್ಯಶಕ್ತವತ್ ।**
**ವಿಶ್ವಾಮಿತ್ರವಿನಾಶಾಯ ನ ಚಕ್ರೇ ಕರ್ಮ ದಾರುಣಮ್ ॥೮॥**

ವಿಶ್ವಾಮಿತ್ರನ ಕುತ್ಸಿತಕಾರ್ಯದ ಕಾರಣದಿಂದ ತಮ್ಮ ನೂರು ಮಕ್ಕಳನ್ನು ಕಳೆದುಕೊಂಡರೂ–ವಸಿಷ್ಠರು ವಿಶ್ವಾಮಿತ್ರನನ್ನು ತಮ್ಮ ತಪಃಪ್ರಭಾವದಿಂದ ಕ್ಷಣಮಾತ್ರದಲ್ಲಿ ನಿರ್ಮೂಲನಮಾಡುವ ಶಕ್ತಿಯುಳ್ಳವರಾಗಿದ್ದರೂ–ಕೇವಲ ಅಶಕ್ತರಂತೆ ಸೈರಣೆಯನ್ನು ತಾಳಿ ಪುತ್ರವಿನಾಶದ ದುಃಖವನ್ನು ಸಹಿಸಿದ ಮಹಾಮಹಿಮರು.

**ಮೃತಾಂಶ್ಚ ಪುನರಾಹರ್ತುಂ ಶಕ್ತಃ ಪುತ್ರಾನ್ಯಮಕ್ಷಯಾತ್ ।**
**ಕೃತಾನ್ತಂ ನಾತಿಚಕ್ರಾಮ ವೇಲಾಮಿವ ಮಹೋದಧಿಃ ॥೯॥**

ಸತ್ತುಹೋಗಿದ್ದ ಪುತ್ರರನ್ನು ಯಮಾಲಯದಿಂದಲೇ ಹಿಂದಕ್ಕೆ ಕರೆತರುವ ಸಾಮರ್ಥ್ಯವುಳ್ಳವರಾಗಿದ್ದರೂ–ಸಮುದ್ರವು ತನ್ನ ಎಲ್ಲೆಯನ್ನು ಮೀರಿಹೋಗದ ರೀತಿಯಲ್ಲಿ–ಸಾಮಾನ್ಯನಿಯಮವನ್ನು ಮೀರಲು ಇಚ್ಛಿಸದ ಮಹಾಪುರುಷರಾದ ವಸಿಷ್ಠರು ಹಾಗೆ ಮಾಡಲಿಲ್ಲ. ಇಂತಹ ಜಿತಾತ್ಮರಾದ ಮತ್ತು ಮಹಾತ್ಮರಾದ ವಸಿಷ್ಠಮಹರ್ಷಿಗಳನ್ನು ಪುರೋಹಿತರನ್ನಾಗಿ

ಮಾಡಿಕೊಂಡು ಇಕ್ಷ್ವಾಕುವೇ ಮೊದಲಾದ ಕ್ಷತ್ರಿಯರಾಜರು ಚಕ್ರಾಧಿಪತ್ಯವನ್ನು ಕಟ್ಟಿದ್ದರು. ಋಷಿಶ್ರೇಷ್ಠರಾದ ವಸಿಷ್ಠರನ್ನು ಪುರೋಹಿತರನ್ನಾಗಿ ಪಡೆದು ಇಕ್ಷ್ವಾಕುಕುಲಸಂಭೂತರಾದ ರಾಜರು ಅನೇಕಾನೇಕ ಕ್ರತುಗಳನ್ನು ಮಾಡಿದರು.

ದೇವೇಂದ್ರನು ಬೃಹಸ್ಪತಿಯನ್ನು ಮುಂದಿಟ್ಟುಕೊಂಡು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದಂತೆ–ಕುರುವಂಶಸಂಭೂತರಾದ ಅನೇಕ ರಾಜರು ವಸಿಷ್ಠರನ್ನು ಮುಂದಿಟ್ಟುಕೊಂಡು ಯಜ್ಞ-ಯಾಗಾದಿಗಳನ್ನು ಮಾಡಿ ಸಂಕಲ್ಪಿತವಾದ ಫಲಗಳನ್ನು ಪಡೆದರು. ಆದುದರಿಂದ ನೀವೂ ಸಹ ವೇದ-ವೇದಾಂಗಗಳನ್ನು ತಿಳಿದಿರುವ, ಧರ್ಮನಿಷ್ಠನಾದ ಬ್ರಾಹ್ಮಣನೊಬ್ಬನನ್ನು ಪುರೋಹಿತನನ್ನಾಗಿ ಸ್ವೀಕರಿಸಬೇಕು.

**ಕ್ಷತ್ರಿಯೇಣಾಭಿಜಾತೇನ ಪೃಥಿವೀಂ ಜೇತುಮಿಚ್ಛತಾ ।**
**ಪೂರ್ವಂ ಪುರೋಹಿತಃ ಕಾರ್ಯಃ ಪಾರ್ಥ ರಾಜ್ಯಾಭಿವೃದ್ಧಯೇ ॥೧೪॥**

ಪಾರ್ಥ! ಚಕ್ರಾಧಿಪತ್ಯವನ್ನು ಕಟ್ಟಬೇಕೆಂಬ ಇಚ್ಛೆಯುಳ್ಳ ಮತ್ತು ಪ್ರಜೆಗಳ ಯೋಗ-ಕ್ಷೇಮಗಳಲ್ಲಿ ಅಭಿಲಾಷೆಯುಳ್ಳ ರಾಜನು ಮೊದಲು ಯೋಗ್ಯನಾದ ಪುರೋಹಿತನನ್ನು ಇಟ್ಟುಕೊಳ್ಳಬೇಕು.

**ಮಹೀಂ ಜಿಗೀಷತಾ ರಾಜ್ಞಾ ಬ್ರಹ್ಮ ಕಾರ್ಯಂ ಪುರಸ್ಸರಮ್ ।**
**ತಸ್ಮಾತ್ಪುರೋಹಿತಃ ಕಶ್ಚಿದ್ಗುಣವಾನ್ವಿಜಿತೇನ್ದ್ರಿಯಃ ।**
**ವಿದ್ವಾನ್ಭವತು ವೋ ವಿಪ್ರೋ ಧರ್ಮಕಾಮಾರ್ಥತತ್ತ್ವವಿತ್ ॥೧೫॥**

ಪೃಥ್ವಿಯನ್ನು ಜಯಿಸಲಿಚ್ಛಿಸುವ ರಾಜನು ಯಾವಾಗಲೂ ಬ್ರಾಹ್ಮಣ ಪುರಸ್ಸರನಾಗಿಯೇ ಇರಬೇಕು. ಆದುದರಿಂದ ಧರ್ಮ-ಕಾಮಾರ್ಥಗಳ ತತ್ತ್ವಗಳನ್ನು ತಿಳಿದಿರುವ, ಗುಣವಂತನಾದ, ಜಿತೇಂದ್ರಿಯನಾದ, ವಿದ್ವಾಂಸನಾದ ಬ್ರಾಹ್ಮಣನೊಬ್ಬನು ನಿಮಗೆ ಪುರೋಹಿತನಾಗಲಿ."

೧೭೪ನೆಯ ಅಧ್ಯಾಯವು ಮುಗಿಯಿತು.

## ವಸಿಷ್ಠರ ಅದ್ಭುತ ಕ್ಷಮಾಗುಣ : ಬಲಗರ್ವಿತನಾದ ವಿಶ್ವಾಮಿತ್ರನ ಪರಾಭವ

ಅರ್ಜುನನು ಗಂಧರ್ವನನ್ನು ಪ್ರಶ್ನಿಸುತ್ತಾನೆ :

**ಕಿಂ ನಿಮಿತ್ತಮಭೂದ್ವೈರಂ ವಿಶ್ವಾಮಿತ್ರವಸಿಷ್ಠಯೋಃ ।**
**ವಸತೋರಾಶ್ರಮೇ ದಿವ್ಯೇ ಶಂಸ ನಃ ಸರ್ವಮೇವ ತತ್ ॥೧॥**

"ಚಿತ್ರರಥ! ದಿವ್ಯಾಶ್ರಮವಾಸಿಗಳಾಗಿದ್ದ ವಿಶ್ವಾಮಿತ್ರ-ವಸಿಷ್ಠರಲ್ಲಿ ಯಾವ ಕಾರಣದಿಂದಾಗಿ ವೈರವುಂಟಾಯಿತು? ವೈರಕ್ಕೆ ಕಾರಣವನ್ನೂ ಮತ್ತು ಅದರಿಂದಾದ ಪರಿಣಾಮಗಳೆಲ್ಲವನ್ನೂ ನನಗೆ ಯಥಾವತ್ತಾಗಿ ಹೇಳು."

"ಅರ್ಜುನ! ವಸಿಷ್ಠರಿಗೆ ಸಂಬಂಧಿಸಿದ ಈ ಆಖ್ಯಾನವು ಬಹಳ ಪ್ರಾಚೀನಕಥೆಯೆಂದು ಎಲ್ಲ ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ. ಆ ಪುರಾಣ ಕಥೆಯನ್ನು ಯಥಾವತ್ತಾಗಿಯೇ ನಿನಗೆ ಹೇಳುವೆನು, ಕೇಳು.

ಭರತರ್ಷಭನೇ! ಕಾನ್ಯಕುಬ್ಜದೇಶದಲ್ಲಿ 'ಗಾಧಿ' ಎಂಬ ಲೋಕ ಪ್ರಸಿದ್ಧನಾದ ಮಹಾರಾಜನೊಬ್ಬನಿದ್ದನು. ಅವನು ಕುಶಿಕಮಹಾರಾಜನ ಮಗನು. ಧರ್ಮಾತ್ಮನಾದ ಗಾಧಿಯ ಪುತ್ರನು ವಿಶ್ವಾಮಿತ್ರನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಅವನಲ್ಲಿ ಅಪಾರವಾದ ಐಶ್ವರ್ಯವೂ ಮತ್ತು ಚತುರಂಗಬಲವೂ ಇದ್ದಿತು. ಆದುದರಿಂದಲೇ ಅವನು ಶತ್ರುಗಳೆಲ್ಲರನ್ನೂ ಪರಾಜಯಗೊಳಿಸಿದ್ದನು.

ವಿಶ್ವಾಮಿತ್ರನೊಮ್ಮೆ ಅಮಾತ್ಯರಿಂದ ಕೂಡಿದವನಾಗಿ ಗಹನವಾದ ಅರಣ್ಯದಲ್ಲಿ ವರಾಹಗಳನ್ನೂ, ಜಿಂಕೆಗಳನ್ನೂ ಬೇಟೆಯಾಡುತ್ತಾ ಸಂಚರಿಸು ತ್ತಿದ್ದನು. ಮರುಭೂಮಿಯಲ್ಲಿಯೂ, ರಮ್ಯವಾದ ಅರಣ್ಯಗಳಲ್ಲಿಯೂ ಮೃಗಗಳ ಬೇಟೆಗಾಗಿ ಸುತ್ತಾಡಿದ ವಿಶ್ವಾಮಿತ್ರನು ಬಹುವಾಗಿ ಆಯಾಸ ಗೊಂಡನು.

ಹಸಿವು-ಬಾಯಾರಿಕೆಗಳಿಂದ ಬಳಲಿದವನಾಗಿ ಆಯಾಸವನ್ನು ಪರಿಹಾರ

ಮಾಡಿಕೊಳ್ಳಲು ಅಲ್ಲಿಯೇ ಇದ್ದ ವಸಿಷ್ಠರ ಆಶ್ರಮಕ್ಕೆ ಆಗಮಿಸಿದನು. ರಾಜನಾದ ವಿಶ್ವಾಮಿತ್ರನು ತಮ್ಮ ಆಶ್ರಮಕ್ಕೆ ಆಗಮಿಸಿರುವುದನ್ನು ಕಂಡು ವಸಿಷ್ಠರು ನರಶ್ರೇಷ್ಠನಾದ ವಿಶ್ವಾಮಿತ್ರನನ್ನು ಸತ್ಕರಿಸಲು ಆದರಪೂರ್ವಕವಾಗಿ ಸ್ವಾಗತಿಸಿದರು.

ಆಗಮಿಸಿದ ರಾಜನಿಗೆ ಯಥಾವಿಧಿಯಾಗಿ ಪಾದ್ಯ-ಅರ್ಘ್ಯ-ಆಚಮನೀಯಾದಿಗಳನ್ನಿತ್ತು ಸ್ವಾಗತಿಸಿ, ಅರಣ್ಯದಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳಿಂದಲೂ ಫಲಾದಿಗಳಿಂದಲೂ, ಹವಿಸ್ಸಿನಿಂದಲೂ ವಿಶ್ವಾಮಿತ್ರನನ್ನು ಸತ್ಕರಿಸಿದರು.

ವಸಿಷ್ಠರು ಇಷ್ಟು ಮಾತ್ರವೇ ಸತ್ಕರಿಸಿದ್ದರೆ ಯಾವ ವಿಧವಾದ ಕ್ಲೇಶಗಳಿಗೂ ಅವಕಾಶವಾಗುತ್ತಿರಲಿಲ್ಲ. ವಸಿಷ್ಠರ ಸಮೀಪದಲ್ಲಿ 'ನಂದಿ ನೀ' ಎಂಬ ಕಾಮಧೇನುವಿತ್ತು. ಆ ಹಸುವು ಯಾವಾಗ ಏನನ್ನೂ ಕೇಳಿದರೂ ಕೊಡುತ್ತಿದ್ದಿತು.

ಕಾಮಧೇನುವು ಕೊಡಲಾಗದ ವಸ್ತುವೇ ಪ್ರಪಂಚದಲ್ಲಿರಲಿಲ್ಲ. ಸಕಲ ಜಾತಿಗಳ ಮತ್ತು ನಾನಾದೇಶಗಳ ಹಣ್ಣುಗಳನ್ನೂ ಕೊಡುತ್ತಿತ್ತು. ಅರಣ್ಯಗಳಲ್ಲಿ ಬೆಳೆಯುವ ಹಣ್ಣು-ಹಂಪಲುಗಳನ್ನೂ ಕೊಡುತ್ತಿತ್ತು. ಯಥೇಚ್ಛವಾಗಿ ಹಾಲನ್ನೂ ಕೊಡುತ್ತಿತ್ತು. ಷಡ್ರಸಗಳಿಂದ ಕೂಡಿದ ಭಕ್ಷ್ಯ-ಭೋಜ್ಯಾದಿಗಳನ್ನೂ, ಲೇಹ್ಯ-ಚೋಷ್ಯ-ಪಾನೀಯಾದಿಗಳನ್ನೂ ಕೊಡುತ್ತಿತ್ತು. ಅವೆಲ್ಲವೂ ಅಮೃತಕ್ಕೆ ಸಮಾನವಾಗಿರುತ್ತಿದ್ದುವು. ಕಾಮಧೇನುವು ಕೊಡುತ್ತಿದ್ದುದು ಭಕ್ಷ್ಯ-ಭೋಜ್ಯಗಳು ಮಾತ್ರವೇ ಅಲ್ಲ. ರತ್ನಹಾರಗಳನ್ನೂ, ದಿವ್ಯಾಂಬರಗಳನ್ನೂ ಕೊಡುತ್ತಿದ್ದಿತು. ಒಟ್ಟಿನಲ್ಲಿ ಮೊದಲೇ ಹೇಳಿದಂತೆ ಕಾಮಧೇನುವಿಗೆ ಕೊಡಲು ಸಾಧ್ಯವಾಗದ ವಸ್ತುವೇ ಪ್ರಪಂಚದಲ್ಲಿರಲಿಲ್ಲ.

ಮಹರ್ಷಿಗಳಾದ ವಸಿಷ್ಠರು ಕಾಮಧೇನುವಿನಿಂದ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಾದಿಗಳನ್ನೂ, ರತ್ನಹಾರಾದಿಗಳನ್ನೂ ಯಥೇಚ್ಛವಾಗಿ ಪಡೆದು ವಿಶ್ವಾಮಿತ್ರನನ್ನೂ ಅವನ ಅಗಣಿತವಾದ ಪರಿವಾರವನ್ನೂ ಸತ್ಕರಿಸಿದರು.

ವಿಶ್ವಾಮಿತ್ರನೂ ಮತ್ತು ಅವನ ಮಂತ್ರಿಗಳೂ ವಸಿಷ್ಠರ ಆತಿಥ್ಯದಿಂದ ತೃಪ್ತರಾದರು. ಸರ್ವಾಂಗಸುಂದರಿಯಾದ ವಸಿಷ್ಠರ ಕಾಮಧೇನುವನ್ನು ನೋಡಿ ವಿಶ್ವಾಮಿತ್ರನಿಗೆ ಬಹಳ ಆಶ್ಚರ್ಯವಾಯಿತು.

**ಷಡುನ್ನತಾಂ ಸುಪಾರ್ಶ್ವೋರುಂ ಪೃಥುಪಞ್ಚಸಮಾವೃತಾಮ್ ।**
**ಮಣ್ಡೂಕನೇತ್ರಾಂ ಸ್ವಾಕಾರಾಂ ಪೀನೋಘಸಮನಿನ್ದಿತಾಮ್ ॥೧೩॥**

**ಸುವಾಲಧಿಂ ಶಙ್ಕುಕರ್ಣಾಂ ಚಾರುಶೃಙ್ಗೀಂ ಮನೋರಮಾಮ್ ।**
**ಪುಷ್ಟಾಯತಶಿರೋಗ್ರೀವಾಂ ವಿಸ್ಮಿತಃ ಸೋಽಭಿವೀಕ್ಷ್ಯ ತಾಮ್ ॥೧೪॥**

ಉನ್ನತವಾದ ಆರು ಅಂಗಗಳಿಂದಲೂ, ಸುಂದರವಾದ ಪಾರ್ಶ್ವಭಾಗಗಳಿಂದಲೂ ಮತ್ತು ತೊಡೆಗಳಿಂದಲೂ, ದೊಡ್ಡ ಐದು ಅವಯವಗಳಿಂದಲೂ, ಕಪ್ಪೆಯ ಕಣ್ಣಿನಂತಹ ಕಣ್ಣುಗಳಿಂದಲೂ, ಸುಂದರವಾದ ಆಕಾರದಿಂದಲೂ, ದಪ್ಪವಾದ ಕೆಚ್ಚಲುಗಳಿಂದಲೂ, ಸುಂದರವಾದ ಬಾಲದಿಂದಲೂ, ಶಂಕುವಿನಂತೆ ತೀಕ್ಷ್ಣವಾದ ಅಗ್ರಭಾಗವುಳ್ಳ ಕಿವಿಗಳಿಂದಲೂ, ಸುಂದರವಾದ ಕೊಂಬುಗಳಿಂದಲೂ, ಪುಷ್ಟವಾದ ಮತ್ತು ವಿಸ್ತೃತವಾದ ಶಿರಸ್ಸಿನಿಂದಲೂ, ಕುತ್ತಿಗೆಯಿಂದಲೂ ಯುಕ್ತಳಾಗಿದ್ದ ನಂದಿನಿಯನ್ನು ಕಂಡು ವಿಶ್ವಾಮಿತ್ರನು ಅಚ್ಚರಿಗೊಂಡನು.*

ಇಂತಹ ಸರ್ವಾಂಗಸುಂದರಿಯಾದ, ಅಕಳಂಕಳಾದ ನಂದಿನಿಯನ್ನು ವಿಶ್ವಾಮಿತ್ರನು ಬಹಳವಾಗಿ ಕೊಂಡಾಡಿದನು.

ವಿಶ್ವಾಮಿತ್ರನು ಸಾಮಾನ್ಯನಲ್ಲ. ದೇಶದ ಅಧಿಪತಿ. ಮಹಾಪರಾ

---

* ಶುಭಲಕ್ಷಣಗಳುಳ್ಳ ಹಸುಗಳಿಗೆ ಉನ್ನತವಾಗಿರಬೇಕಾದ ಆರು ಅಂಗಗಳು ;

ಶಿರೋ ಗ್ರೀವಾ ಸಕ್ಥಿನೀ ಚ ಸಾಸ್ನಾ ಪುಚ್ಛಮಥಸ್ತನಾ ।
ಶುಭಾನ್ಯೇತಾನಿ ಧೇನೂನಾಮಾಯತಾನಿ ಪುಚಕ್ಷತೇ ।

ತಲೆ, ಕುತ್ತಿಗೆ, ಪೃಷ್ಠಭಾಗಗಳು, ಹಿಳಲು, ಬಾಲ ಮತ್ತು ಕೆಚ್ಚಲು–ಇವುಗಳು ಹಸುಗಳಿಗೆ ಉನ್ನತವಾಗಿದ್ದರೆ ಶುಭಲಕ್ಷಣವೆಂದು ಹೇಳುತ್ತಾರೆ.

ಪುಷ್ಟವಾಗಿಯೂ ವಿಸ್ತಾರವಾಗಿಯೂ ಇರಬೇಕಾದ ಐದು ಅವಯವಗಳು :

ಲಲಾಟಂ ಶ್ರವಣೌ ಚೈವ ನಯನದ್ವಿತಯಂ ತಥಾ ।
ಪೃಥೂನ್ಯೇತಾನಿ ಶಸ್ಯನ್ತೇ ಧೇನೂನಾಂ ಪಞ್ಚ ಸೂರಿಭಿಃ ॥

ಹಣೆ, ಎರಡು ಕಿವಿಗಳು ಮತ್ತು ಎರಡು ಕಣ್ಣುಗಳು–ಈ ಐದೂ ವಿಸ್ತಾರವಾಗಿಯೂ ಪುಷ್ಟವಾಗಿಯೂ ಇದ್ದರೆ ವಿದ್ವಾಂಸರು ಅಂತಹ ಧೇನುವನ್ನು ಪ್ರಶಂಸಿಸುತ್ತಾರೆ.

ಕ್ರಮಿಯು. ಈ ಕಾರಣಗಳಿಂದ ವಸಿಷ್ಠರಲ್ಲಿದ್ದ ಅನರ್ಘವಸ್ತುವನ್ನು ಕೇಳಲು ಹಿಂಜರಿಯಲಿಲ್ಲ.

**ಅರ್ಬುದೇನ ಗವಾಂ ಬ್ರಹ್ಮನ್ಮಮ ರಾಜ್ಯೇನ ವಾ ಪುನಃ ।**
**ನನ್ದಿನೀಂ ಸಮ್ಪ್ರಯಚ್ಛಸ್ವ ಭುಂಕ್ಷ್ವ ರಾಜ್ಯಂ ಮಹಾಮುನೇ ॥೧೬॥**

"ಬ್ರಾಹ್ಮಣೋತ್ತಮನೇ! ಹತ್ತು ಕೋಟಿ ಹಸುಗಳನ್ನು ತೆಗೆದುಕೊಂಡು ನನಗೆ ಈ ನಂದಿನಿಯನ್ನು ಕೊಡು. ಅಥವಾ ನನ್ನ ರಾಜ್ಯವನ್ನೇ ನಿನಗೆ ಈ ನಂದಿನಿಯ ವಿನಿಮಯರೂಪದಲ್ಲಿ ಕೊಟ್ಟುಬಿಡುತ್ತೇನೆ. ಮಹಾಮುನಿಯೇ! ನನ್ನಿಂದ ರಾಜ್ಯವನ್ನು ಪಡೆದುಕೊಂಡು ರಾಜ್ಯಸುಖಗಳನ್ನು ಉಪಭೋಗಿಸು."

ವಸಿಷ್ಠರು ಮಂದಸ್ಮಿತರಾಗಿಯೇ ವಿಶ್ವಾಮಿತ್ರನಿಗೆ ಹೇಳಿದರು :

**ದೇವತಾತಿಥಿಪಿತ್ರರ್ಥಂ ಯಾಜ್ಯಾರ್ಥಂ ಚ ಪಯಸ್ವಿನೀ ।**
**ಅದೇಯಾ ನನ್ದಿನೀಯಂ ವೈ ರಾಜ್ಯೇನಾಪಿ ತವಾನಘ ॥೧೭॥**

"ಪಾಪರಹಿತನೇ! ದೇವತೆಗಳ ಪೂಜೆಗಾಗಿ, ಅತಿಥಿಸತ್ಕಾರಕ್ಕಾಗಿ, ಪಿತೃಕಾರ್ಯಕ್ಕಾಗಿ ಮತ್ತು ಯಜ್ಞ-ಹೋಮಾದಿಗಳ ಹೋಮದ್ರವ್ಯಗಳಿಗಾಗಿ ಈ ನಂದಿನಿಯನ್ನು ನಾನು ಕಾಪಾಡುತ್ತಿರುವೆನು. ಈ ಕಾರಣಗಳಿಂದ ನೀನು ನಿನ್ನ ಸಾಮ್ರಾಜ್ಯವನ್ನೇ ಕೊಡುವುದಾದರೂ ಈ ನಂದಿನಿಯನ್ನು ಸರ್ವಥಾ ಕೊಡಲು ಸಾಧ್ಯವಿಲ್ಲ."

ವಿಶ್ವಾಮಿತ್ರನು ವಸಿಷ್ಠರ ಮಾತುಗಳನ್ನು ಕೇಳಿ ಒಮ್ಮೆ ಗಟ್ಟಿಯಾಗಿ ಅಟ್ಟಹಾಸದಿಂದ ನಕ್ಕನು. ಆ ನಗುವಿನಲ್ಲಿ ವಸಿಷ್ಠರ ಮೇಲೆ ತಿರಸ್ಕಾರ ಭಾವನೆಯೂ ಮತ್ತು ಕೋಪವೂ ಅಡಗಿದ್ದುವು.

**ಕ್ಷತ್ರಿಯೋऽಹಂ ಭವಾನ್ವಿಪ್ರಸ್ತಪಃಸ್ವಾಧ್ಯಾಯಸಾಧನಃ ।**
**ಬ್ರಾಹ್ಮಣೇಷು ಕುತೋ ವೀರ್ಯಂ ಪ್ರಶಾನ್ತೇಷು ಧೃತಾತ್ಮಸು ॥೧೮॥**

**ಅರ್ಬುದೇನ ಗವಾಂ ಯಸ್ತ್ವಂ ನ ದದಾಸಿ ಮಮೇಪ್ಸಿತಮ್ ।**
**ಸ್ವಧರ್ಮಂ ನ ಪ್ರಹಾಸ್ಯಾಮಿ ನೇಷ್ಯಾಮಿ ಚ ಬಲೇನ ಗಾಮ್ ॥೧೯॥**

"ವಸಿಷ್ಠರೇ! ನಾನು ವೀರಕ್ಷತ್ರಿಯನು. ನೀವಾದರೋ ತಪಃ

ಸ್ವಾಧ್ಯಾಯಗಳಲ್ಲಿಯೇ ನಿರತರಾದ ಶಾಂತಿಪ್ರಿಯರಾದ ಬ್ರಾಹ್ಮಣರು. ಜಿತೇಂದ್ರಿಯರಾದ, ಪ್ರಶಾಂತಾತ್ಮರಾದ ಬ್ರಾಹ್ಮಣನಿಗೆ ಶೌರ್ಯವೆಲ್ಲಿಯದು? ಹೀಗಿದ್ದರೂ ವೀರಕ್ಷತ್ರಿಯನು ಹೇಳಿದ ಮಾತನ್ನು ತಿರಸ್ಕರಿಸಿದಿರಿ. ಅರ್ಬುದ ಧೇನುಗಳ ವಿನಿಮಯಕ್ಕಾದರೂ ಒಂದು ಹಸುವನ್ನು ಕೊಡುವುದಿಲ್ಲವೆಂದು ಹೇಳಿಬಿಟ್ಟಿರಿ. ನೀವು ಹಾಗೆ ಹೇಳಿದ ಮಾತ್ರದಿಂದ ನಾನು ಈ ಹಸುವನ್ನು ಬಿಟ್ಟುಹೋಗತಕ್ಕವನಲ್ಲ. ಬಿಟ್ಟುಹೋಗುವುದು ನನ್ನ ಧರ್ಮವೂ ಅಲ್ಲ. ರಾಜನಾದವನು ತಾನು ಆಶಿಸಿದ ವಸ್ತುವನ್ನು ಪಡೆಯಲು ಅಸಮರ್ಥನಾದರೆ– ಅವನಲ್ಲಿ ರಾಜಧರ್ಮವೇ ಉಳಿಯುವುದಿಲ್ಲ. ಆದುದರಿಂದ ಕ್ಷತ್ರಿಯ ಯೋಗ್ಯವಾದ ನನ್ನ ಧರ್ಮವನ್ನೆಂದಿಗೂ ಬಿಡದೇ ನಿಮ್ಮಲ್ಲಿರುವ ಈ ಅನರ್ಘ ವಾದ ಧೇನುವನ್ನು ಬಲಾತ್ಕಾರದಿಂದಲೇ ಸೆಳೆದೊಯ್ಯುವೆನು."

ವಿಶ್ವಾಮಿತ್ರನ ದುರಭಿಮಾನದ ಮಾತುಗಳನ್ನು ಕೇಳಿಯೂ ವಸಿಷ್ಠರು ಪ್ರಶಾಂತರಾಗಿಯೇ ಉತ್ತರಿಸಿದರು.

**ಬಲಸ್ಥಶ್ಚಾಸಿ ರಾಜಾ ಚ ಬಾಹುವೀರ್ಯಶ್ಚ ಕ್ಷತ್ರಿಯಃ ।**
**ಯಥೇಚ್ಛಸಿ ತಥಾ ಕ್ಷಿಪ್ರಂ ಕುರು ಮಾ ತ್ವಂ ವಿಚಾರಯ ॥೨೦॥**

"ಮಹಾರಾಜ! ನೀನು ಕ್ಷತ್ರಿಯಕುಲೋತ್ಪನ್ನನೆಂಬುದು ನಿಜ. ರಾಜನೂ ಆಗಿರುವೆ. ಚತುರಂಗಬಲವುಳ್ಳವನೂ ಆಗಿರುವೆ. ಅಪ್ರತಿಮ ಪರಾಕ್ರಮಿಯೆಂದೂ ಪ್ರಸಿದ್ಧನಾಗಿರುವೆ. ಇದರಲ್ಲಿ ನನಗಾವ ಸಂಶಯವೂ ಇಲ್ಲ. ನೀನು ಹೇಗೆ ಇಚ್ಛಿಸುವೆಯೋ ಹಾಗೆಯೇ ಮಾಡು. ಕಾರ್ಯಾ ಕಾರ್ಯಗಳ ವಿವೇಚನೆಯನ್ನೂ ಮಾಡಬೇಕಾಗಿಲ್ಲ."

ಪಾರ್ಥ! ವಸಿಷ್ಠರು ವಿಶ್ವಾಮಿತ್ರನಿಗೆ ಹೀಗೆ ಹೇಳಿದನಂತರ ನಂದಿನಿಯು ಬ್ರಾಹ್ಮಣನಿಗೆ ಸೇರಿದ್ದೆಂಬ (ಬ್ರಹ್ಮಸ್ವತ್ತೆಂಬ) ವಿವೇಚನೆಯೇ ಇಲ್ಲದೇ ವಿಶ್ವಾಮಿತ್ರನು–ಹಂಸಕ್ಕೆ ಮತ್ತು ಚಂದ್ರನಿಗೆ ಸಮಾನವಾದ ಕಾಂತಿ ಯಿಂದ ಕೂಡಿದ್ದ ನಂದಿನಿಯನ್ನು ಬಲಾತ್ಕಾರದಿಂದಲೇ ಸೆಳೆದೊಯ್ಯಲು ಪ್ರಯತ್ನಿಸಿದನು. ಆದರೆ ನಂದಿನಿಯು ಒಡನೆಯೇ ವಿಶ್ವಾಮಿತ್ರನ ವಶಳಾಗ ಲಿಲ್ಲ. ವಿಶ್ವಾಮಿತ್ರನ ಕೈಗೆ ಹಿಡಿಯಲು ಸಿಕ್ಕದೇ ಅತ್ತಲಿತ್ತ ಓಡಾಡಲು ಪ್ರಾರಂಭಿ ಸಿತು. ಪ್ರಾರ್ಥಿಸಿದವರ ಸರ್ವಾರ್ಥಗಳನ್ನೂ ಕೊಡಲು ಸಮರ್ಥಳಾದ ನಂದಿನಿ

ಯನ್ನು ಬಲಾತ್ಕಾರವಿಲ್ಲದೇ ಹಿಡಿದುಕೊಳ್ಳಬೇಕೆಂದು ಪ್ರಯತ್ನಿಸಿದ ವಿಶ್ವಾಮಿತ್ರನು ಅದು ಸಿಕ್ಕದಿದ್ದುದಕ್ಕಾಗಿ ಅದನ್ನು ಕೋಲಿನಿಂದಲೂ, ಚಾವಟಿಯಿಂದಲೂ ಪ್ರಹರಿಸಿದನು. ಕಲ್ಯಾಣಮಯಿಯಾದ ನಂದಿನಿಯು 'ಹಂಭಾ!' 'ಹಂಭಾ!' ಎಂದು ಕೂಗಿಕೊಳ್ಳುತ್ತಾ ಓಡಿಬಂದು ವಸಿಷ್ಠರಿಗೆದುರಾಗಿ ನಿಂತುಕೊಂಡಿತು. ಚೆನ್ನಾಗಿ ಹೊಡೆಯುತ್ತಿದ್ದರೂ ನಂದಿನಿಯು ಆಶ್ರಮದಿಂದ ಹೊರಡಲಿಲ್ಲ.

ನಂದಿನಿಯ ಅವಸ್ಥೆಯನ್ನು ಕಂಡು ವಸಿಷ್ಠರ ಕಣ್ಣುಗಳಲ್ಲೂ ನೀರೂರಿತು. ಕಾಮಧೇನುವಿನ ಮೈಯನ್ನು ಸವರುತ್ತಾ ಹೇಳಿದರು :

**ಶೃಣೋಮಿ ತೇ ರವಂ ಭದ್ರೇ ವಿನದನ್ತ್ಯಾಃ ಪುನಃ ಪುನಃ ।**
**ಹ್ರಿಯಸೇ ತ್ವಂ ಬಲಾದ್ಭದ್ರೇ ವಿಶ್ವಾಮಿತ್ರೇಣ ನನ್ದಿನಿ ।**
**ಕಿಂ ಕರ್ತವ್ಯಂ ಮಯಾ ತತ್ರ ಕ್ಷಮಾವಾನ್ಬ್ರಾಹ್ಮಣೋ ಹ್ಯಹಮ್ ॥**

"ಮಗಳೇ! ನೀನು 'ಹಂಭಾ!' 'ಹಂಭಾ!' ಎಂದು ಬಾರಿ-ಬಾರಿಗೂ ಕೂಗಿಕೊಳ್ಳುತ್ತಿರುವುದನ್ನು ನಾನು ಕೇಳುತ್ತಲೇ ಇದ್ದೇನೆ. ಆದರೆ ನಾನೇನು ಮಾಡಲಿ! ವಿಶ್ವಾಮಿತ್ರನು ನಿನ್ನನ್ನು ಬಲಾತ್ಕಾರದಿಂದ ಸೆಳೆದೊಯ್ಯುತ್ತಿದ್ದಾನೆ. ನಾನಾದರೋ ಕ್ಷಮಾಪರನಾದ ಬ್ರಾಹ್ಮಣನಾಗಿದ್ದೇನೆ. ಈ ಕ್ಷತ್ರಿಯನು ನಿನಗಿಷ್ಟೊಂದು ಯಾತನೆಯನ್ನು ಕೊಡುತ್ತಿದ್ದರೂ ಇವನ ವಿಷಯದಲ್ಲಿ ನನಗೆ ಕೋಪವೇ ಬರುತ್ತಿಲ್ಲ. ನಾನೇನು ಮಾಡಲಮ್ಮ?"

ಇತ್ತಲಾಗಿ ವಿಶ್ವಾಮಿತ್ರನು ನಂದಿನಿಯನ್ನು ಬಂಧಿಸಲು ಚತುರಂಗಬಲ ಸಮೇತನಾಗಿ ಬರುತ್ತಿರುವುದನ್ನು ಕಂಡು ನಂದಿನಿಯು ಭೀತಿಗೊಂಡವಳಂತೆ ವಸಿಷ್ಠರ ಸಮೀಪಕ್ಕೆ ಸರಿದು ನಿಂತು ಹೇಳಿದಳು :

**ಕಶಾಗ್ರದಣ್ಡಾಭಿಹತಾಂ ಕ್ರೋಶನ್ತೀಂ ಮಾಮನಾಥವತ್ ।**
**ವಿಶ್ವಾಮಿತ್ರಬಲೈರ್ಘೋರೈರ್ಭಗವನ್ನಿಮುಪೇಕ್ಷಸೇ ॥೨೭॥**

"ಮಹಾಮಹಿಮರೇ! ವಿಶ್ವಾಮಿತ್ರನ ಸೈನಿಕರು ಚಾವಟಿಗಳಿಂದ ಪ್ರಹರಿಸುತ್ತಾ ನನಗೆ ಇಷ್ಟೊಂದು ಹಿಂಸೆಯನ್ನು ಕೊಡುತ್ತಿರುವುದನ್ನು ನೋಡುತ್ತಿರುವಿರಿ. ಹಿಂಸೆಯನ್ನು ತಾಳಲಾರದೇ ನಾನು ಮಾಡುತ್ತಿರುವ ದೈನ್ಯಧ್ವನಿಯನ್ನು ಕೇಳುತ್ತಲೂ ಇರುವಿರಿ. ಆದರೂ ನೀವೇಕಿಷ್ಟು ಉದಾ

ಸೀನರಾಗಿರುವಿರಿ? ನಾನಿಂದು ನಿರ್ಗತಿಕಳಂತಾಗಿರುವೆನಲ್ಲಾ! ನನ್ನನ್ನು ಚಾವಟಿಯಿಂದಲೂ, ಕೋಲಿನಿಂದಲೂ ಪ್ರಹರಿಸುತ್ತಿದ್ದಾರೆ. ಆದರಿಂದಾಗಿ ನಾನು ಸಂಕಟದಿಂದ ಕೂಗಿಕೊಳ್ಳುತ್ತಿದ್ದೇನೆ." ( ನಂದಿನಿಯ ಕಣ್ಣುಗಳಿಂದ ಅಶ್ರುಬಿಂದುಗಳು ಉದುರುತ್ತಿದ್ದುವು. )

ಪಾರ್ಥ! ನಂದಿನಿಯ ಅಂತಹ ದಾರುಣಾವಸ್ಥೆಯನ್ನು ಕಂಡರೂ, ದುಃಖಪೂರಿತವಾದ ಮಾತುಗಳನ್ನು ಕೇಳಿದರೂ ವಸಿಷ್ಠರ ಮುಖಾರವಿಂದದ ಮೇಲೆ ಕೋಪದ ಛಾಯೆಯೂ ಕಾಣಲಿಲ್ಲ. ಕ್ಷಮಾಶೀಲರಾದ ಮಹರ್ಷಿಗಳು ಕ್ಷಮಾಮೂರ್ತಿಯಾಗಿಯೇ ಉಳಿದರು.

ದುಃಖಿಸುತ್ತಿದ್ದ ನಂದಿನಿಗೆ ಹೇಳಿದರು :

**ಕ್ಷತ್ರಿಯಾಣಾಂ ಬಲಂ ತೇಜೋ ಬ್ರಾಹ್ಮಣಾನಾಂ ಕ್ಷಮಾ ಬಲಮ್ ।**
**ಕ್ಷಮಾ ಮಾಂ ಭಜತೇ ಯಸ್ಮಾದ್ಗಮ್ಯತಾಂ ಯದಿ ರೋಚತೇ ॥೨೯॥**

"ನಂದಿನಿ! ಕ್ಷತ್ರಿಯರಿಗೆ ತೇಜಸ್ಸೇ ( ಶಾರೀರಕಬಲವೇ ) ಬಲವು. ಬ್ರಾಹ್ಮಣರಿಗೆ ಕ್ಷಮೆಯೇ ಬಲವು. ಕ್ಷಮಾಗುಣವೇ ನನ್ನನ್ನು ಅನನ್ಯಭಕ್ತಿಯಿಂದ ಆಶ್ರಯಿಸಿಬಿಟ್ಟಿದೆ. ಆದುದರಿಂದ ನಾನು ನನ್ನ ಕ್ಷಮಾಗುಣವನ್ನು ಪರಿತ್ಯಜಿಸಲಾರೆನು. ನಿನಗಿಚ್ಛೆಯಿದ್ದರೆ ನೀನು ಅವನೊಡನೆಯೇ ಹೋಗ ಬಹುದು."

ಮಹರ್ಷಿಗಳ ಮಾತುಗಳನ್ನು ಕೇಳಿ ದುಃಖದಿಂದ ಪರಿತಪ್ತಳಾಗಿದ್ದ ನಂದಿನಿಯು ಹೇಳಿದಳು :

**ಕಿಂ ನು ತ್ಯಕ್ತಾಸ್ಮಿ ಭಗವನ್ಯದೇವಂ ತ್ವಂ ಪ್ರಭಾಷಸೇ ।**
**ಅತ್ಯಕ್ತಾಹಂ ತ್ವಯಾ ಬ್ರಹ್ಮನ್ನೇತುಂ ಶಕ್ಯಾ ನ ವೈ ಬಲಾತ್ ॥೩೦॥**

"ಮಹರ್ಷಿಗಳೇ! ಹಾಗಾದರೆ ನನ್ನನ್ನು ಪರಿತ್ಯಜಿಸಿಯೇ ಬಿಟ್ಟಿರಾ? ಅಂತೆಯೇ ಹೇಳುತ್ತಿರುವಿರಲ್ಲವೇ? ನೀವು ನನ್ನನ್ನು ಮನಃಪೂರ್ವಕವಾಗಿ ಪರಿತ್ಯಾಗಮಾಡದಿದ್ದರೆ ನನ್ನನ್ನು ವಿಶ್ವಾಮಿತ್ರನ ಸೈನಿಕರು ಬಲಾತ್ಕಾರದಿಂದ ಸರ್ವಥಾ ಸೆಳೆದೊಯ್ಯಲಾರರು."

**ನ ತ್ವಾಂ ತ್ಯಜಾಮಿ ಕಲ್ಯಾಣಿ ಸ್ಥೀಯತಾಂ ಯದಿ ಶಕ್ಯತೇ ।**
**ದೃಢೇನ ದಾಮ್ನಾ ಬದ್ಧ್ವೈಷ ವತ್ಸಸ್ತೇ ಹ್ರಿಯತೇ ಬಲಾತ್ ॥೩೧॥**

"ಮಗಳೇ! ನಾನು ನಿನ್ನನ್ನು ಖಂಡಿತವಾಗಿಯೂ ಪರಿತ್ಯಜಿಸಲಾರೆನು. ನಿನಗೆ ಸಾಮರ್ಥ್ಯವಿರುವುದಾದರೆ ನೀನು ನನ್ನಲ್ಲಿಯೇ ಇರಬಹುದು. ಅಲ್ಲಿ ನೋಡು, ನಂದಿನಿ! ನಿನ್ನ ಕರುವು ವಿಶ್ವಾಮಿತ್ರನ ಸೈನಿಕರಿಂದ ಬಂಧಿತವಾಗಿ ಬಲಾತ್ಕಾರದಿಂದ ಒಯ್ಯಲ್ಪಡುತ್ತಿದೆ."

ವಸಿಷ್ಠರ 'ಸ್ಥೀಯತಾಂ–ನನ್ನಲ್ಲಿಯೇ ಇರಬಹುದು '–ಎಂಬ ಉಚ್ಚಾರಣೆಯೇ ನಂದಿನಿಗೆ ಆಶೀರ್ವಾದರೂಪವಾಯಿತು. ತನ್ನನ್ನು ಯಾರೂ ಸೆಳೆದೊಯ್ಯಲು ಸಾಧ್ಯವಿಲ್ಲವೆಂಬ ದೃಢವಿಶ್ವಾಸವೂ ನಂದಿನಿಗುಂಟಾಯಿತು. ತಲೆಯನ್ನೂ, ಕತ್ತನ್ನೂ ಮೇಲೆತ್ತಿದಳು. ನೋಡಲು ಭಯಂಕರಳಾಗಿ ಕಂಡಳು. ಕಣ್ಣುಗಳು ಕೆಂಡದಂತೆ ಕೆಂಪಾದುವು. 'ಹಂಭಾ' ಎಂದು ಗರ್ಜಿಸುತ್ತಾ ವಿಶ್ವಾಮಿತ್ರನ ಸೈನ್ಯವನ್ನು ನಾಲ್ಕೂ ಕಡೆಗಳಿಂದಲೂ ಮರ್ದಿಸ ತೊಡಗಿದಳು. ಗರ್ಜನೆಮಾಡುತ್ತಾ, ವಿಶ್ವಾಮಿತ್ರನ ಸೈನ್ಯವನ್ನು ಮರ್ದನ ಮಾಡುತ್ತಾ ಓಡಾಡುತ್ತಿದ್ದ ನಂದಿನಿಗೆ ಕೋಪವೂ ಉಕ್ಕೇರಿತು. ನಡುನೆತ್ತಿಯ ಮೇಲೇರಿದ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ– ಕೋಪದಿಂದ ಆವೃತಳಾಗಿದ್ದ ನಂದಿನಿಯನ್ನು ನೋಡಲು ವಿಶ್ವಾಮಿತ್ರನ ಸೈನಿಕರಿಗೆ ಸಾಧ್ಯವಾಗಲಿಲ್ಲ. ಅವಳ ಬಾಲದಿಂದ ಕಾದ ಕೆಂಡಗಳು ಸುತ್ತಲೂ ಎರಚಲ್ಪಟ್ಟುವು. ಕೆಲವು ನಿಮಿಷಗಳು ಕಳೆದನಂತರ ಅವಳ ಬಾಲದಿಂದ ಪಹ್ಲವ ಸೈನ್ಯಸಮೂಹವು ಸೃಷ್ಟಿಯಾಯಿತು. ಕೆಚ್ಚಲಿನಿಂದ ದ್ರಾವಿಡ ಮತ್ತು ಶಕಸೈನ್ಯಗಳು ಉತ್ಪನ್ನವಾದುವು. ಯೋನಿಯಿಂದ ಯವನಸೈನ್ಯದ ಉದಯ ವಾಯಿತು. ಸಗಣಿಯಿಂದಲೂ, ಮೂತ್ರದಿಂದಲೂ ಶಬರಸೈನ್ಯವು ಪ್ರಾದು ರ್ಭವಿಸಿತು. ಅವಳ ಪಾರ್ಶ್ವಭಾಗದಿಂದ ಮತ್ತು ಬಾಯಲ್ಲಿ ಹೊರಟಿದ್ದ ನೊರೆ ಯಿಂದ ಪೌಂಡ್ರರೂ, ಕಿರಾತರೂ, ಯವನರೂ, ಸಿಂಹಳರೂ, ಬರ್ಬರರೂ, ಖಸರೂ, ಚಿಬುಕರೂ, ಪುಲಿಂದರೂ, ಚೀಣರೂ, ಹೂಣರೂ, ಕೇರಲರೂ ಮತ್ತು ಇನ್ನೂ ಅನೇಕ ಮ್ಲೇಚ್ಛರೂ ಉತ್ಪನ್ನರಾದರು. ನಾನಾಸ್ತ್ರಗಳನ್ನೂ, ನಾನಾವಿಧವಾದ ಸಮವಸ್ತ್ರಗಳನ್ನೂ ಧರಿಸಿದ್ದ ಅವರೆಲ್ಲರೂ ವಿಶ್ವಾಮಿತ್ರನು ನೋಡುತ್ತಿದ್ದಂತೆಯೇ ಅವನ ಸೈನ್ಯವನ್ನು ಮುತ್ತಿದರು. ವಿಶ್ವಾಮಿತ್ರನ ಕಡೆಯ ಒಬ್ಬೊಬ್ಬ ಯೋಧನನ್ನೂ ನಂದಿನಿಯಿಂದ ಉತ್ಪನ್ನರಾದ ಐದೈದು-ಏಳೇಳು ಮಂದಿ ಸೈನಿಕರು ಆಕ್ರಮಣಮಾಡಿದರು. ಶಸ್ತ್ರಗಳ ಆಘಾತಕ್ಕೆ

ಸಿಕ್ಕಿದ ವಿಶ್ವಾಮಿತ್ರನ ಸೈನಿಕರು ಕಂಗೆಟ್ಟು ದಿಕ್ಕಾಪಾಲಾಗಿ ಓಡಿಹೋದರು. ಆದರೆ ವಸಿಷ್ಠರ ಕಡೆಯ ಸೈನಿಕರು ಕುಪಿತರಾಗಿದ್ದರೂ ವಿಶ್ವಾಮಿತ್ರನ ಸೈನ್ಯ ದಲ್ಲಿ ಯಾವನೊಬ್ಬನ ಪ್ರಾಣವನ್ನೂ ಅಪಹರಿಸಲಿಲ್ಲ. ನಂದಿನಿಯು ವಿಶ್ವಾ ಮಿತ್ರನ ನಿರ್ಗಮನದಲ್ಲಿ ಮಾತ್ರವೇ ಆಸಕ್ತಳಾಗಿದ್ದಳು. ವಸಿಷ್ಠರ ಪವಿತ್ರವಾದ ತಪೋವನವನ್ನು ಶವಗಳ ರಾಶಿಯಿಂದ ಅಪವಿತ್ರಗೊಳಿಸುವ ಇಚ್ಛೆಯು ನಂದಿನಿಗಿರಲಿಲ್ಲ. ವಿಶ್ವಾಮಿತ್ರನ ಸೈನ್ಯಗಳು ವಸಿಷ್ಠರ ಆಶ್ರಮಭೂಮಿಯಿಂದ ಇಪ್ಪತ್ತೇಳು ಮೈಲಿಗಳಾಚೆಗೆ ದೂಡಲ್ಪಟ್ಟುವು. ಆ ಸೈನ್ಯಕ್ಕೆ ರಕ್ಷಕರೇ ಯಾರೂ ಇರಲಿಲ್ಲ. ವಿಶ್ವಾಮಿತ್ರನು ಆ ವೈಚಿತ್ರ್ಯವನ್ನು ನೋಡಿ ಆಶ್ಚರ್ಯಭರಿತನಾದನು. ಬ್ರಾಹ್ಮಣನ ಬಲವೇ ಹೆಚ್ಚೆನಿಸಿತು. ಕ್ಷತ್ರಿಯಬಲವು ಬ್ರಹ್ಮಬಲದ ಮುಂದೆ ತುಚ್ಛವೆನಿಸಿತು. ಖಿನ್ನನಾಗಿ ಹೇಳಿದನು :

**ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಮ್ ||೪೫||**

"ಕ್ಷತ್ರಿಯಬಲಕ್ಕೆ ಧಿಕ್ಕಾರವಿರಲಿ! ಬ್ರಹ್ಮತೇಜಸ್ಸಿನ ಬಲವೇ ಬಲ." ಹೀಗೆಂದು ಉದ್ಗಾರಮಾಡಿ ಬಲಾಬಲಗಳನ್ನು ಸಂಪೂರ್ಣವಾಗಿ ವಿಚಾರಮಾಡಿ, ತಪಸ್ಸಿನ ಬಲವೇ ಪರಮಶ್ರೇಷ್ಠವಾದ ಬಲವೆಂದೂ ನಿಶ್ಚಯಿ ಸಿದವನಾಗಿ, ಸಕಲಸಂಪತ್ಸಮೃದ್ಧವಾದ ರಾಜ್ಯವನ್ನೂ, ರಾಜ್ಯಲಕ್ಷ್ಮಿಯನ್ನೂ ವರ್ಜಿಸಿ, ಸುಖೋಪಭೋಗಗಳಿಗೆ ತಿಲಾಂಜಲಿಯನ್ನಿತ್ತು ವಿಶ್ವಾಮಿತ್ರನು ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು.

ಆತನು ತಪಸ್ಸಿನಿಂದಲೇ ಅನೇಕವಿಧವಾದ ಸಿದ್ಧಿಗಳನ್ನೂ ಪಡೆದನು. ಉಗ್ರವಾದ ತಪಸ್ಸಿನಿಂದ ಪಾವನನಾದ ವಿಶ್ವಾಮಿತ್ರನು ದಿವ್ಯತೇಜಸ್ಸಿನಿಂದ ತ್ರಿಭುವನಗಳೂ ಪರಿತಪಿಸುವಂತೆ ಮಾಡಿದನು. ಕಟ್ಟಕಡೆಗೆ ತಪಸ್ಸಿನಿಂದಲೇ ಬ್ರಾಹ್ಮಣತ್ವವನ್ನೂ ಪಡೆದು, ಇಂದ್ರನೊಡನೆ ಕುಳಿತು ಸೋಮರಸವನ್ನೂ ಪಾನಮಾಡಿದನು."

೧೭೫ನೆಯ ಅಧ್ಯಾಯವು ಮುಗಿಯಿತು.

೧೭೬ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಶಕ್ತಿಯ ಶಾಪದಿಂದ ಕಲ್ಮಾಷಪಾದನು ರಾಕ್ಷಸನಾದುದು : ರಾಕ್ಷಸನಾದ ಕಲ್ಮಾಷಪಾದನು ವಿಶ್ವಾಮಿತ್ರನ ಪ್ರೇರಣೆಯಿಂದ ವಸಿಷ್ಠಪುತ್ರರನ್ನು ನುಂಗಿದುದು : ವಸಿಷ್ಠರ ಶೋಕ

ಗಂಧರ್ವನು ಅರ್ಜುನನಿಗೆ ಮುಂದಿನ ಕಥೆಯನ್ನು ಹೇಳತೊಡಗಿದನು :

**ಕಲ್ಮಾಷಪಾದ ಇತ್ಯೇವಂ ಲೋಕೇ ರಾಜಾ ಬಭೂವ ಹ ।**
**ಇಕ್ಷ್ವಾಕುವಂಶಜಃ ಪಾರ್ಥ ತೇಜಸಾ ಸದೃಶೋ ಭುವಿ ॥೧॥**

"ಅರ್ಜುನ! ಇಕ್ಷ್ವಾಕುವಂಶಜನಾದ, ಅಪ್ರತಿಮಪರಾಕ್ರಮಿಯೆಂದು ವಿಶ್ವವಿಖ್ಯಾತಿಯನ್ನು ಪಡೆದಿದ್ದ ಕಲ್ಮಾಷಪಾದನೆಂಬ ರಾಜನಿದ್ದನು. ಅವನು ಅಸಾಧಾರಣವಾದ ತೇಜಸ್ಸಿನಿಂದ ಕೂಡಿದ್ದನು.

ರಿಪುಮರ್ದನನಾದ ಅವನು ಒಮ್ಮೆ ಬೇಟೆಯಾಡಲು ಕಾಡಿಗೆ ಹೋಗಿ ನೂರಾರು ಕಾಡುಹಂದಿಗಳನ್ನೂ, ಸಾವಿರಾರು ಖಡ್ಗಮೃಗಗಳನ್ನೂ, ಹಲವಾರು ಜಿಂಕೆಗಳನ್ನೂ ಸಂಹರಿಸಿ, ಬಳಲಿ ಬೆಂಡಾಗಿ ಸ್ವಲ್ಪಕಾಲ ವಿಶ್ರಾಂತಿ ಹೊಂದಲು ನಿಶ್ಚಯಿಸಿದನು.

ವಿಶ್ವಾಮಿತ್ರನು ವಸಿಷ್ಠರ ಶಿಷ್ಯನಾದ ಕಲ್ಮಾಷಪಾದನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡು ಅವನಿಂದ ಯಜ್ಞಗಳನ್ನು ಮಾಡಿಸಬೇಕೆಂದು ಆಶಿಸಿದ್ದನು. ಬಾಯಾರಿಕೆಯಿಂದಲೂ, ಹಸಿವಿನಿಂದಲೂ ಆರ್ತನಾಗಿದ್ದ, ಯುದ್ಧದಲ್ಲಿ ಅಪರಾಜಿತನಾಗಿದ್ದ ಕಲ್ಮಾಷಪಾದನು ವಿಶ್ರಾಂತಿಯ ಸ್ಥಳವನ್ನು ಅರಸುತ್ತಾ ಹೋಗುತ್ತಿದ್ದಾಗ ತನಗೆದುರಾಗಿ ಬರುತ್ತಿದ್ದ ಮಹಾಮಹಿಮರಾದ ವಸಿಷ್ಠರ ಹಿರಿಯಮಗನಾದ ಶಕ್ತಿಯನ್ನು ಕಂಡನು. ಮಹಾಭಾಗನಾದ ಶಕ್ತಿಯು ವಸಿಷ್ಠಕುಲವರ್ಧನನಾಗಿಯೂ, ವಸಿಷ್ಠರ ನೂರು ಮಕ್ಕಳಲ್ಲಿ ಹಿರಿಯವನಾಗಿಯೂ ಇದ್ದನು. ತನಗೆದುರಾಗಿ ಬಂದ ಶಕ್ತಿಯನ್ನು ನೋಡಿ ಕಲ್ಮಾಷಪಾದನು–'ಹಾದಿಯನ್ನು ಬಿಟ್ಟು ಸರಿದು ನಿಲ್ಲು'–ಎಂದು ಹೇಳಿದನು.*

---

* ಹಳ್ಳಿಗಳ ಕಡೆಯ ಕಾಲುಹಾದಿಗಳಲ್ಲಿ ಇಂದಿಗೂ ಇಂತಹ ಅನೇಕ ಸನ್ನಿವೇಶಗಳು

ರಾಜನ ಮಾತುಗಳನ್ನು ಕೇಳಿ ಶಕ್ತಿಯು ಮಧುರವಾದ ಮತ್ತು ಸಮಾಧಾನಕರವಾದ ಈ ಮಾತುಗಳನ್ನಾಡಿದನು :

**ಮಮ ಪನ್ಥಾ ಮಹಾರಾಜ ಧರ್ಮ ಏಷ ಸನಾತನಃ ।**
**ರಾಜ್ಞಾ ಸರ್ವೇಷು ಧರ್ಮೇಷು ದೇಯಃ ಪನ್ಥಾ ದ್ವಿಜಾತಯೇ ॥೮॥**

"ಮಹಾರಾಜ! ನಾನು ಹೋಗುವುದಕ್ಕೆ ಮೊದಲು ಹಾದಿಮಾಡಿ ಕೊಟ್ಟು ಅನಂತರದಲ್ಲಿ ನೀನು ಹೋಗಬೇಕು. ಇದೇ ಸನಾತನಧರ್ಮ. ಶಾಸ್ತ್ರಗಳೂ ಮತ್ತು ಶ್ರುತಿ-ಸ್ಮೃತಿಗಳೂ ಬ್ರಾಹ್ಮಣನಿಗೆ ಹಾದಿಯನ್ನು ಬಿಟ್ಟು ನಿಲ್ಲಬೇಕೆಂದು ಹೇಳುತ್ತವೆ."

ಈ ರೀತಿಯಾಗಿ ಅವರಿಬ್ಬರೂ–'ನೀನು ಹಾದಿಯನ್ನು ಬಿಡು', 'ನೀನು ಹಾದಿಯನ್ನು ಬಿಟ್ಟು ನಿಲ್ಲು'–ಎಂದು ಹೇಳುತ್ತಲೇ ಇದ್ದರು.

ಧರ್ಮವಿಹಿತವಾದ ಮಾರ್ಗದಲ್ಲಿಯೇ ತಾನು ನಡೆಯುತ್ತಿರುವೆನೆಂಬ ಕಾರಣದಿಂದ ಶಕ್ತಿಯು ರಾಜನಿಗೆ ಹಾದಿಯನ್ನು ಬಿಟ್ಟುಕೊಡಲಿಲ್ಲ. ಹಾದಿ ಯನ್ನು ಬಿಡದೇ ತನ್ನೆದುರಿನಲ್ಲಿಯೇ ನಿಂತು ಕ್ಷಣ-ಕ್ಷಣಕ್ಕೂ 'ಅಪಸರ್ಪ' 'ಅಪಸರ್ಪ' ಎಂದು ಹೇಳುತ್ತಿದ್ದ ಶಕ್ತಿಯನ್ನು ರಾಜನು ಕೈಯಲ್ಲಿದ್ದ ಚಾವಟಿಯಿಂದ ಪ್ರಹರಿಸಿದನು.

ಚಾವಟಿಯಿಂದ ಪ್ರಹೃತನಾದ, ಮುನಿಶ್ರೇಷ್ಠನಾದ, ತಪೋವೀರ್ಯ ಶಕ್ತಿಸಂಪನ್ನನಾದ ವಸಿಷ್ಠರ ಮಗ ಶಕ್ತಿಯು ಕೋಪಾವೇಶದಿಂದ ರಾಜನನ್ನು ಶಪಿಸಿಬಿಟ್ಟನು :

**ಹಂಸಿ ರಾಕ್ಷಸವದ್ಯಸ್ಮಾದ್ರಾಜಾಪಸದ ತಾಪಸಮ್ ।**
**ತಸ್ಮಾತ್ತ್ವಮದ್ಯಪ್ರಭೃತಿ ಪುರುಷಾದೋ ಭವಿಷ್ಯಸಿ ॥೧೩॥**

**ಮನುಷ್ಯಪಿಶಿತೇ ಸಕ್ತಶ್ಚರಿಷ್ಯಸಿ ಮಹೀಮಿಮಾಮ್ ।**
**ಗಚ್ಛ ರಾಜಾಧಮೇತ್ಯುಕ್ತಃ ಶಕ್ತಿನಾ ವೀರ್ಯಶಕ್ತಿನಾ ॥೧೪॥**

"ನೀಚನಾದ ರಾಜನೇ! ತಪಸ್ವಿಗಳನ್ನು ಹಿಂಸಿಸುವ ರಾಕ್ಷಸನಂತೆ

---

ನಮ್ಮ ಅನುಭವದಲ್ಲಿಯೂ ಉಂಟಾಗುತ್ತವೆ. ನಮ್ಮ ಎದುರಿಗೆ ಬರುವ ವ್ಯಕ್ತಿಯ ವಿಷಯದಲ್ಲಿ ಒಂದು ವಿಧವಾದ ಪೂಜ್ಯಭಾವನೆ, ಗೌರವ ಅಥವಾ ದಯೆ ಉಂಟಾದರೆ ನಾವೇ ದಾರಿಯಿಂದ ಸರಿದು ನಿಲ್ಲುತ್ತೇವೆ. ಇದು ಸ್ವಾಭಾವಿಕವಾದ ವಿಷಯ.

ತಾಪಸನಾದ ನನ್ನನ್ನು ಇಂದು ಕಾರಣವಿಲ್ಲದೇ ಹಿಂಸಿಸಿದೆಯಾದ ಕಾರಣ ಇಂದಿನಿಂದಲೇ ನಿನಗೆ ನರಮಾಂಸವನ್ನು ಭಕ್ಷಿಸುವ ರಾಕ್ಷಸತ್ವವುಂಟಾಗಲಿ. ಎಲ್ಲಿಯಾದರೂ ತೊಲಗಿಹೋಗು. ರಾಜಾಧಮನೇ! ನೀನು ನರಮಾಂಸಕ್ಕೆ ಹಾತೊರೆಯುತ್ತಾ ಪ್ರಪಂಚದಲ್ಲೆಲ್ಲಾ ಅಲೆದಾಡುತ್ತಿರು."

ಕಲ್ಮಾಷಪಾದನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳಬೇಕೆನ್ನುವ ಇಚ್ಛೆಯು ವಿಶ್ವಾಮಿತ್ರನಿಗೆ ಬಹಳ ದಿನಗಳಿಂದಲೂ ಇದ್ದಿತೆಂದು ಹೇಳಿದ್ದೆನಲ್ಲವೇ? ಆ ಸಮಯದಲ್ಲಿ ವಿಶ್ವಾಮಿತ್ರನಿಗೆ ವಸಿಷ್ಠರ ಮೇಲೆ ಅತಿಯಾದ ವೈರವಿದ್ದಿತು.

ಶಕ್ತಿಗೂ ಮತ್ತು ರಾಜನಿಗೂ ನಡೆಯುತ್ತಿದ್ದ ವಾಗ್ವಾದವನ್ನು ವಿಶ್ವಾ ಮಿತ್ರನು ತನ್ನ ಅಂತರ್ದೃಷ್ಟಿಯಿಂದ ತಿಳಿದವನಾಗಿ ವಿವಾದವು ನಡೆಯುತ್ತಿದ್ದ ಸ್ಥಳಕ್ಕೆ ಒಡನೆಯೇ ಧಾವಿಸಿದನು. ಅವನು ಅಲ್ಲಿಗೆ ಹೋಗುವ ವೇಳೆಗೆ ಸರಿ ಯಾಗಿ ಶಕ್ತಿಯ ಶಾಪವೆಂಬ ಶರವು ರಾಜನ ಮೇಲೆ ಆಗತಾನೇ ಬಿಡಲ್ಪಟ್ಟಿ ದ್ದಿತು. ಕಲ್ಮಾಷಪಾದನಿಗೆ ಶಕ್ತಿಯ ಅತಿತೀಕ್ಷ್ಣವಾದ ಶಾಪದ ಆಘಾತವು ಬಿದ್ದನಂತರ ಜ್ಞಾನೋದಯವಾಯಿತು. ವಸಿಷ್ಠರಿಗೆ ಸಮಾನನಾದ ವಸಿಷ್ಠ ಪುತ್ರನನ್ನು ತಾನು ಪ್ರಹರಿಸಿಬಿಟ್ಟೆನೆಂಬ ಅರಿವೂ-ಪಶ್ಚಾತ್ತಾಪವೂ ಉಂಟಾ ಯಿತು. ಮುಂದೇನಾಗುವುದೆಂಬುದನ್ನು ನೋಡಬೇಕೆನ್ನುವ ಅಭಿಲಾಷೆ ಯಿಂದಲೂ, ತನಗೆ ಪ್ರಿಯವಾಗುವುದನ್ನು ಸಾಧಿಸಿಕೊಳ್ಳಬೇಕೆನ್ನುವ ಆಶಯ ದಿಂದಲೂ ವಿಶ್ವಾಮಿತ್ರನು ಇಬ್ಬರ ಕಣ್ಣಿಗೂ ಕಾಣದಂತೆ ಮರೆಯಾಗಿ ನಿಂತು ಎಲ್ಲವನ್ನೂ ನೋಡುತ್ತಿದ್ದನು. ಶಕ್ತಿಯಿಂದ ಶಪ್ತನಾದ ಕಲ್ಮಾಷಪಾದನು ಅವನನ್ನು ಪ್ರಸನ್ನಗೊಳಿಸುವ ಸಲುವಾಗಿ ಬಹಳ ದೈನ್ಯದಿಂದ ತನ್ನ ಅಪರಾಧ ವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತಾ ಶರಣಾಗತನಾದನು. ಮರೆಯಲ್ಲಿ ನಿಂತಿದ್ದ ವಿಶ್ವಾಮಿತ್ರನು ರಾಜನ ಬದಲಾದ ಮನೋಭಾವವನ್ನು ಗಮನಿಸಿ ದನು. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಶಕ್ತಿಯೂ ಸಮಾಧಾನಹೊಂದುವ ನೆಂದೂ ವಿಶ್ವಾಮಿತ್ರನಿಗೆ ತೋರಿತು. ಹೀಗಾಗಕೂಡದೆಂಬುದು ವಿಶ್ವಾಮಿತ್ರನ ಇಚ್ಛೆಯಾಗಿದ್ದಿತು. ವಸಿಷ್ಠರಿಗೂ–ಕಲ್ಮಾಷಪಾದನಿಗೂ ಪರಸ್ಪರವಾಗಿ ದ್ವೇಷವುಂಟಾಗುವಂತೆ ಮಾಡಿ, ವಸಿಷ್ಠರ ಕ್ಷಮಾಗುಣವನ್ನು

ಮುರಿಯಬೇಕೆಂಬುದೂ, ಕಲ್ಮಾಷಪಾದನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳ ಬೇಕೆಂಬುದೂ ವಿಶ್ವಾಮಿತ್ರನ ಹವಣಿಕೆ.

ವಿಶ್ವಾಮಿತ್ರನು ಒಡನೆಯೇ ತನ್ನ ಸಾಮರ್ಥ್ಯದಿಂದ ಕಿಂಕರನೆಂಬ ರಾಕ್ಷಸನನ್ನು ಆಹ್ವಾನಿಸಿ, ಶಕ್ತಿಯ ಶಾಪದ ಪ್ರಭಾವವನ್ನು ಪಡೆದ ಕಲ್ಮಾಷ ಪಾದನೊಳಗೆ ಸೇರಿಕೊಳ್ಳುವಂತೆ ಆಜ್ಞಾಪಿಸಿದನು. ಅಂತೆಯೇ ಕಿಂಕರನು ವಿಶ್ವಾಮಿತ್ರನ ಆಜ್ಞೆಯಿಂದಲೂ, ಶಕ್ತಿಯ ಶಾಪದ ಪ್ರಭಾವದಿಂದಲೂ ಕಲ್ಮಾಷಪಾದನೊಳಗೆ ಸೇರಿಕೊಂಡನು.

ಕಲ್ಮಾಷಪಾದನನ್ನು ರಾಕ್ಷಸನು ಆವರಿಸಿಕೊಂಡನೆಂಬುದನ್ನು ತಿಳಿದು ತನ್ನ ಕಾರ್ಯವು ಮುಗಿಯಿತೆಂದು ಭಾವಿಸಿ ವಿಶ್ವಾಮಿತ್ರನು ಆ ಅರಣ್ಯಪ್ರದೇಶವನ್ನು ಬಿಟ್ಟು ಹೊರಟುಹೋದನು. ಕಿಂಕರನು ಪ್ರವೇಶಿಸಿದ ಮರುಕ್ಷಣದಲ್ಲಿಯೇ ಕಲ್ಮಾಷಪಾದನು ಕಿಂಕರರಾಕ್ಷಸನಿಂದ ಬಹುವಾಗಿ ಪೀಡಿಸಲ್ಪಟ್ಟು ವಿಸ್ಮೃತನಾಗಿ ಏನೇನು ನಡೆಯಿತೆಂಬುದೆಲ್ಲವನ್ನೂ ಮರೆತುಬಿಟ್ಟನು.

ಅದೇ ವೇಳೆಯಲ್ಲಿಯೇ ಹಸಿವು-ಬಾಯಾರಿಕೆಗಳಿಂದ ಕೂಡಿದ್ದ ಬ್ರಾಹ್ಮಣನೊಬ್ಬನು ರಾಜನ ಸಮೀಪಕ್ಕೆ ಬಂದು ಮಾಂಸಯುಕ್ತವಾದ ಭೋಜನವನ್ನು ಪ್ರಾರ್ಥಿಸಿದನು. ಕಲ್ಮಾಷಪಾದನು ಅವನನ್ನು ಅಲ್ಲಿಯೇ ನಿಲ್ಲುವಂತೆಯೂ, ತಾನು ನಗರಕ್ಕೆ ಹಿಂತಿರುಗಿದನಂತರ ಅವನು ಇಚ್ಛಿಸಿದ ಆಹಾರವನ್ನು ಒದಗಿಸುವುದಾಗಿಯೂ ಬ್ರಾಹ್ಮಣನಿಗೆ ಹೇಳಿ ಹೊರಟುಹೋದನು.

ರಾಜನ ಮಾತಿನಂತೆ ಆಹಾರಾಪೇಕ್ಷೆಯಿಂದ ಬ್ರಾಹ್ಮಣನು ಅಲ್ಲಿಯೇ ನಿಂತನು. ಕಲ್ಮಾಷಪಾದನು ಸ್ವಲ್ಪ ಹೊತ್ತು ಮನಬಂದಂತೆ ಅಲ್ಲಲ್ಲಿ ತಿರುಗು ತ್ತಿದ್ದು, ಕಡೆಗೆ ಅರಮನೆಯನ್ನು (ಅಂತಃಪುರವನ್ನು) ಸೇರಿದನು. ಅವನಿಗೆ ಬ್ರಾಹ್ಮಣನ ಸ್ಮರಣೆಯೇ ಬರಲಿಲ್ಲ.

ಅರ್ಧರಾತ್ರಿಯಲ್ಲಿ ರಾಜನು ಇದ್ದಕ್ಕಿದ್ದಂತೆಯೇ ಎಚ್ಚೆತ್ತು ಬ್ರಾಹ್ಮಣ ನನ್ನು ಸ್ಮರಿಸಿಕೊಂಡನು. ಅವನಿಗೆ ಆಹಾರವನ್ನು ಕೊಡುವೆನೆಂದು ಹೇಳಿ ದ್ದುದೂ ನೆನಪಾಯಿತು. ಒಡನೆಯೇ ಅಡಿಗೆಯವರನ್ನು ಕರೆದು ಕೂಡಲೇ ಅರಣ್ಯಕ್ಕೆ ಹೋಗುವಂತೆಯೂ, ಅಲ್ಲಿ ಆಹಾರಕ್ಕಾಗಿ ಕಾದಿರುವ ಬ್ರಾಹ್ಮಣ

ನಿಗೆ ಸಮಾಂಸಭೋಜನವನ್ನು ಮಾಡಿಸಿ ತೃಪ್ತಿಪಡಿಸಬೇಕೆಂದೂ ಆಜ್ಞಾಪಿಸಿದನು.

ಆ ಹೊತ್ತಿನಲ್ಲಿ ಅಡಿಗೆಯವನಿಗೆ ಬ್ರಾಹ್ಮಣನು ತಿನ್ನಲು ಯೋಗ್ಯವಾದ ಮಾಂಸವು ಎಲ್ಲಿಯೂ ಸಿಕ್ಕಲಿಲ್ಲ. ಆ ವಿಷಯವನ್ನು ರಾಜನಿಗೆ ತಿಳಿಯಪಡಿಸಿದನು. ಒಳಗಡಗಿದ್ದ ಕಿಂಕರನ ಪ್ರಭಾವದಿಂದ ರಾಜನೂ ವಿವೇಕಶೂನ್ಯನಾಗಿ ಅಡಿಗೆಯವರನ್ನು ಗದರಿಸುತ್ತಾ ಹೇಳಿದನು : "ಮಾಂಸವು ಸಿಕ್ಕಲಿಲ್ಲವೆಂದು ಹೇಳಲು ಬಂದೆಯಾ? ಬೇರಾವ ಮಾಂಸವೂ ಸಿಕ್ಕದಿದ್ದರೆ ಮನುಷ್ಯ ಮಾಂಸವನ್ನೇ ಪಕ್ವಮಾಡಿ ಬ್ರಾಹ್ಮಣನಿಗೆ ಕೊಡು. ಬೇಗ ಹೊರಡು. ಪುನಃ ಇಲ್ಲಿ ನಿಲ್ಲಬೇಡ."

ಅಡಿಗೆಯವನಿಗೆ ಪುನಃ ಮಾತನಾಡಲು ಅವಕಾಶವೇ ಆಗಲಿಲ್ಲ. ಮರಣದಂಡನೆಗೆ ಗುರಿಯಾದ ಅಪರಾಧಿಗಳು ಕೊಲೆಗಡುಕರಿಂದ ವಧಿಸಲ್ಪಡುವ ಸ್ಥಳಕ್ಕೆ ಒಡನೆಯೇ ಹೋಗಿ, ನರಮಾಂಸವನ್ನು ತೆಗೆದುಕೊಂಡು ಬಂದನು.

ಬ್ರಾಹ್ಮಣನಿಗೆ ನರಮಾಂಸದ ಭೋಜನವನ್ನು ತೆಗೆದುಕೊಂಡು ಹೋಗಬೇಕೆಂದು ರಾಜನೇ ಹೇಳಿದ್ದುದರಿಂದ ಅಡಿಗೆಯವನ ಮನಸ್ಸಿನಲ್ಲಿ ಅಕಾರ್ಯವನ್ನು ಮಾಡುತ್ತಿರುವೆನೆಂಬ ಭಯವಿರಲಿಲ್ಲ.

ಯಥಾರೀತಿಯಲ್ಲಿ ಪರಿಶೋಧಿಸಿ ಪಕ್ವಮಾಡಿ, ಅನ್ನದೊಡನೆ ಕೂಡಿಸಿಕೊಂಡು ಅರಣ್ಯದಲ್ಲಿ ಅನ್ನಕ್ಕಾಗಿ ಕಾಯುತ್ತಾ ಕುಳಿತಿದ್ದ ತಪಸ್ವಿಯಾದ ಬ್ರಾಹ್ಮಣನ ಸಮೀಪಕ್ಕೆ ಹೋದನು.

ಬ್ರಾಹ್ಮಣನು ಹಸಿವಿನಿಂದ ಬಳಲಿದ್ದರೂ ಸೂದನು ತಂದ ಆಹಾರದ ಸಂವಿಧಾನವನ್ನು ತನ್ನ ಜ್ಞಾನದೃಷ್ಟಿಯಿಂದಲೇ ತಿಳಿದನು. ಆಹಾರವು ನರಮಾಂಸದಿಂದ ಕೂಡಿದೆಯೆಂಬುದರ ಅರಿವಾಯಿತು. ಅಭಕ್ಷ್ಯಭೋಜನವನ್ನು ರಾಜನು ಕಳುಹಿಸಿರುವುದಕ್ಕಾಗಿ ಬ್ರಾಹ್ಮಣನಿಗೆ ಮಿತಿಮೀರಿದ ಕೋಪವೂ ಬಂದಿತು. ತುಟಿಗಳು ಅದುರತೊಡಗಿದುವು. ಹಲ್ಲುಗಳು ಕಟ-ಕಟನೆ ಗುಡುಗಿನ ಶಬ್ದವನ್ನು ಮಾಡತೊಡಗಿದುವು. ತುಟಿಗಳ ಮಧ್ಯಭಾಗದಿಂದ ವಿದ್ಯುದ್ರೂಪವಾದ ವಾಣಿಯು ಬ್ರಾಹ್ಮಣನ ಮುಖದಿಂದ ಹೊರಬಂದಿತು :

**ಯಸ್ಮಾದಭೋಜ್ಯಮನ್ನಂ ಮೇ ದದಾತಿ ಸ ನೃಪಾಧಮಃ ।**
**ತಸ್ಮಾತ್ತಸ್ಯೈವ ಮೂಢಸ್ಯ ಭವಿಷ್ಯತ್ಯತ್ರ ಲೋಲುಪಾ ॥೩೫॥**

**ಸಕ್ತೋ ಮಾನುಷಮಾಂಸೇಷು ಯಥೋಕ್ತಃ ಶಕ್ತಿನಾ ತಥಾ ।**
**ಉದ್ವೇಜನೀಯೋ ಭೂತಾನಾಂ ಚರಿಷ್ಯತಿ ಮಹೀಮಿಮಾಮ್ ॥೩೬॥**

"ನೀಚನಾದ ರಾಜನು ಪೂರ್ವಾಪರವಿವೇಚನೆಯೇ ಇಲ್ಲದೇ ಹಸಿವಿನಿಂದ ತೊಳಲುತ್ತಿರುವ ನನಗೆ ಅಭಕ್ಷ್ಯಭೋಜನವನ್ನು ಕಳುಹಿಸಿರುವನಲ್ಲವೇ? ಇಂದಿನಿಂದ ಆ ದುಷ್ಟರಾಜನಿಗೆ ಅವನು ಕಳುಹಿಸಿರುವ ದುಷ್ಟಾಹಾರದ ಮೇಲೆಯೇ ಆಸಕ್ತಿಯು ವಿಶೇಷವಾಗಿರಲಿ. ಶಕ್ತಿಯ ಶಾಪದಂತೆ ಪ್ರಪಂಚದಲ್ಲಿ ನರಮಾಂಸವನ್ನು ಭಕ್ಷಣಮಾಡುತ್ತಾ, ಪ್ರಾಣಿಮಾತ್ರಕ್ಕೇ ಭಯಂಕರನಾಗಿ ರಾಕ್ಷಸನ ಪೂರ್ಣಸ್ವಭಾವವನ್ನು ಆ ರಾಜನು ಪಡೆಯಲಿ."

ಬ್ರಾಹ್ಮಣನು ಎರಡು ಬಾರಿ ಇದೇ ರೀತಿ ಹೇಳಿದ್ದರಿಂದ ಆ ಶಾಪವು ಮತ್ತೂ ಬಲಿಷ್ಠವಾಯಿತು. ಕಲ್ಮಾಷಪಾದನೂ ರಾಕ್ಷಸನ ಬಲದಿಂದ ಸಮಾವಿಷ್ಟನಾಗಿ ತಾನೊಬ್ಬ ಧಾರ್ಮಿಕನಾದ ರಾಜನೆಂಬ ಸ್ಮೃತಿಯನ್ನೇ ಕಳೆದುಕೊಂಡನು.

'ನಾನು ಕಲ್ಮಾಷಪಾದರಾಜ ; ಪ್ರಜೆಗಳನ್ನು ಮಕ್ಕಳಂತೆ ಕಾಣಬೇಕು ; ತಪಸ್ವಿಗಳನ್ನೂ, ಋಷಿ-ಮಹರ್ಷಿಗಳನ್ನೂ ಗೌರವಿಸಬೇಕು'–ಎನ್ನುವ ವಿವೇಚನೆಯು ಸಂಪೂರ್ಣವಾಗಿ ಹೊರಟುಹೋಯಿತು. ಕಣ್ಣಿಗೆ ಕಂಡ ಮನುಷ್ಯರನ್ನು ಭಕ್ಷಿಸಬೇಕೆಂಬ ಧಾವಂತವು ಹೆಚ್ಚಾಯಿತು. ಅರಮನೆಯನ್ನು ಬಿಟ್ಟು ಹೊರಹೊರಟನು. ಬಾಯ್ದೆರೆದುಕೊಂಡು ಶಕ್ತಿಯಿದ್ದ ತಪೋವನಕ್ಕೂ ನುಗ್ಗಿದನು. ಶಕ್ತಿಯನ್ನು ಕಂಡೊಡನೆಯೇ ಅವನ ರಾಕ್ಷಸತ್ವವು ಕೆರಳಿತು. ಕಟ-ಕಟನೆ ಹಲ್ಲುಕಡಿದು ಗರ್ಜನೆಮಾಡುತ್ತಾ ಶಕ್ತಿಯನ್ನು ಕುರಿತು ಹೇಳಿದನು:

**ಯಸ್ಮಾದಸದೃಶಃ ಶಾಪಃ ಪ್ರಯುಕ್ತೋಽಯಂ ಮಯಿ ತ್ವಯಾ ।**
**ತಸ್ಮಾತ್ತ್ವತ್ತಃ ಪ್ರವರ್ತಿಷ್ಯೇ ಖಾದಿತುಂ ಪುರುಷಾನಹಮ್ ॥೩೭॥**

" ವಸಿಷ್ಠಪುತ್ರನೇ! ನನಗೆ ರಾಕ್ಷಸನಾಗೆಂದೂ ನರಭಕ್ಷಕನಾಗೆಂದೂ

ಅಸದೃಶವಾದ ಶಾಪವನ್ನು ಕೊಟ್ಟ ಕಾರಣ ನಿನ್ನನ್ನೇ ಮೊದಲು ತಿಂದು ಈಗಿನಿಂದಲೇ ನರಭಕ್ಷಕಜೀವನವನ್ನು ಪ್ರಾರಂಭಿಸುತ್ತೇನೆ.”

ಶಕ್ತಿಗೆ ಮುಂದೆ ಮಾತನಾಡಲು ಅಥವಾ ತಪ್ಪಿಸಿಕೊಳ್ಳಲು ಅವಕಾಶವೇ ಆಗಲಿಲ್ಲ. ಹುಲಿಯು ತನಗೆ ಬೇಕೆನಿಸಿದ ಪ್ರಾಣಿಗಳ ಮೇಲೆ ಬಿದ್ದು, ಅವುಗಳ ಪ್ರಾಣಗಳನ್ನು ಹೀರುವಂತೆ–ಕಲ್ಮಾಷಪಾದನು ಶಕ್ತಿಯನ್ನು ಸಂಹರಿಸಿದುದು ಮಾತ್ರವಲ್ಲದೇ–ನುಂಗಿಯೂ ಬಿಟ್ಟನು.

ಇವೆಲ್ಲಕ್ಕೂ ಸೂತ್ರಧಾರನಂತಿದ್ದ ವಿಶ್ವಾಮಿತ್ರನು ಅಷ್ಟರಿಂದಲೇ ತೃಪ್ತನಾಗಲಿಲ್ಲ. ವಸಿಷ್ಠರ ಉಳಿದ ಮಕ್ಕಳನ್ನೂ ನುಂಗಿಬಿಡುವಂತೆ ಕಲ್ಮಾಷಪಾದನ ಒಳಗೆ ಸೇರಿಕೊಂಡಿದ್ದ ಕಿಂಕರರಾಕ್ಷಸನನ್ನು ಉತ್ತೇಜಿಸಿದನು. ಕೋಪಗೊಂಡಿದ್ದ ಸಿಂಹವು ತನ್ನ ಎದುರಿಗೆ ಸಿಕ್ಕುವ ಚಿಕ್ಕ-ಪುಟ್ಟ ಪ್ರಾಣಿಗಳನ್ನು ನುಂಗುತ್ತಾ ಹೋಗುವಂತೆ–ಕಲ್ಮಾಷಪಾದನು ಆಶ್ರಮದಲ್ಲಿದ್ದ ಶಕ್ತಿಯ ಅನುಜರನ್ನೆಲ್ಲಾ ಸಂಹರಿಸಿ ನುಂಗಿಬಿಟ್ಟನು.

ವಿಶ್ವಾಮಿತ್ರನ ಕುತಂತ್ರದಿಂದ ತನ್ನ ಎಲ್ಲ ಮಕ್ಕಳ ವಿನಾಶವಾಯಿತೆಂಬ ವಿಷಯವು ವಸಿಷ್ಠರಿಗೆ ತಿಳಿಯಿತು.

ವಿಶ್ವಾಮಿತ್ರನ ಕುತಂತ್ರದಿಂದ ಇವೆಲ್ಲವೂ ನಡೆದಿದೆಯೆಂದು ತಿಳಿಯಿತಾದರೂ ವಸಿಷ್ಠರು ವಿಶ್ವಾಮಿತ್ರನ ಮೇಲೆ ಕೋಪಗೊಳ್ಳಲಿಲ್ಲ. ಮಹಾಪರ್ವತವು ಭೂಮಿಯನ್ನು ಧರಿಸಿರುವಂತೆ–ಪುತ್ರಶೋಕದ ದುಃಖವನ್ನೂ ಸಹಿಸಿಕೊಂಡರು.

ತಮ್ಮ ವಿರೋಧಿಯಾದ ವಿಶ್ವಾಮಿತ್ರನ ವಂಶವನ್ನು ನಿರ್ಮೂಲ ಮಾಡುವುದಕ್ಕೆ ಬದಲಾಗಿ, ತಾವೇ ತಮ್ಮ ಪ್ರಾಣಗಳನ್ನು ಕಳೆದುಕೊಳ್ಳಬೇಕೆಂದು ನಿಶ್ಚಯಿಸಿದರು.

ಪ್ರಾಣವನ್ನು ನೀಗಿಕೊಳ್ಳಲು ನಿಶ್ಚಯಿಸಿದ ವಸಿಷ್ಠರು ಮೇರುಪರ್ವತವನ್ನು ಹತ್ತಿ ಅಲ್ಲಿಂದ ಕೆಳಕ್ಕೆ ಧುಮುಕಿದರು. ಆದರೆ ಅವರು ಕೆಳಗೆ ಬಿದ್ದಾಗ ಅಲ್ಲಿದ್ದ ಕಲ್ಲಿನ ಬಂಡೆಯು ತನ್ನ ಕಾಠಿನ್ಯವನ್ನು ತೊರೆದು ಹತ್ತಿಯಂತೆ ಮಾರ್ದವವನ್ನು ತಾಳಿ–ಮಹಾಮಹಿಮರಾದ ವಸಿಷ್ಠರ ವಿನಾಶಕ್ಕೆ ಕಾರಣವಾಯಿತೆಂಬ ಆಪಾದನೆಯನ್ನು ಕಳೆದುಕೊಂಡಿತು.

ವಸಿಷ್ಠರಿಗೆ ಬಹಳ ಬೇಸರವಾಯಿತು. ಪರ್ವತದ ಮೇಲಿನಿಂದ ಬಿದ್ದರೂ ಪ್ರಾಣವು ಹೋಗಲಿಲ್ಲ. ಅರಣ್ಯದ ಒಂದೆಡೆಯಲ್ಲಿ ಬೆಂಕಿಯನ್ನು ಹೊತ್ತಿಸಿದರು. ಬೆಂಕಿಯು ಕಾಡುಗಿಚ್ಚಿನಂತೆ ಹೊತ್ತಿಕೊಂಡನಂತರ ಅದ ರೊಳಗೆ ಪ್ರವೇಶಿಸಿದರು. ಯಜ್ಞೇಶ್ವರನು ಶಾಂತನಾಗುವವರೆಗೂ ವಸಿಷ್ಠರು ಅದರ ಮಧ್ಯದಲ್ಲಿಯೇ ಇದ್ದರೂ ಅವರ ಮೈಮೇಲಿದ್ದ ಕೂದಲಿನ ಒಂದು ಮೊನೆಯನ್ನು ಸುಡಲೂ ಯಜ್ಞೇಶ್ವರನು ಸಮರ್ಥನಾಗಲಿಲ್ಲ. ವಸಿಷ್ಠರ ವಿಷಯದಲ್ಲಿ ಯಜ್ಞೇಶ್ವರನು ಶೀತಲಸ್ವಭಾವವನ್ನು ಹೊಂದಿದನು.

ಯಜ್ಞೇಶ್ವರನಿಗಿಂತಲೂ ಹೆಚ್ಚಾದ ತಪೋಜ್ವಾಲೆಯಿಂದ ಕೂಡಿದ್ದ ವಸಿಷ್ಠರ ವಿಷಯದಲ್ಲಿ ಕಾಡುಗಿಚ್ಚೂ ಶೀತಲವಾಯಿತು.

ಮುಂದೇನು ಮಾಡಬೇಕು? ಪುತ್ರಶೋಕದ ದುಃಖಾಗ್ನಿಯೂ ವಸಿಷ್ಠರ ಹೃದಯಾಂತರಾಳದಲ್ಲಿ ಸೇರಿಕೊಂಡು ದಹಿಸುತ್ತಿತ್ತು. ಅಗಾಧವಾದ ಸಮುದ್ರವನ್ನು ಕಂಡರು. ಸಮುದ್ರರಾಜನ ನೆರವಿನಿಂದಲಾದರೂ ತಮ್ಮ ಅಸುವನ್ನು ನೀಗಿಕೊಳ್ಳಬೇಕೆಂದು ನಿಶ್ಚಯಿಸಿದರು. ಕುತ್ತಿಗೆಗೆ ಅತಿಭಾರವಾದ ಕಲ್ಲೊಂದನ್ನು ಕಟ್ಟಿಕೊಂಡು ಸಮುದ್ರದೊಳಕ್ಕೆ ಧುಮುಕಿದರು.

ಸಮುದ್ರರಾಜನು ತಾನೇ ಬ್ರಹ್ಮಹತ್ಯೆಗೆ ಇಚ್ಛೆಪಟ್ಟಾನೆಯೇ?

ಅಲೆಗಳೆಂಬ ಕೈಗಳಿಂದ ವಸಿಷ್ಠರನ್ನು–ತಾಯಿಯು ಮಗುವನ್ನು ಎತ್ತಿ ಕೊಳ್ಳುವಂತೆ–ಎತ್ತಿಕೊಂಡು ಬಂದು ದಂಡೆಯ ಮೇಲೆ ಮಲಗಿಸಿ ಹೊರಟು ಹೋದನು.

ವಸಿಷ್ಠರು ಮೇಲೆದ್ದು ಯಾವ ಪರಿಯಿಂದಲೂ ತಮಗೆ ಮರಣವು ಪ್ರಾಪ್ತಿಯಾಗದಿರುವುದಕ್ಕೆ ನಿಟ್ಟುಸಿರುಬಿಟ್ಟು ತಮ್ಮ ಆಶ್ರಮಕ್ಕೆ ತೆರಳಿದರು."

೧೭೬ನೆಯ ಅಧ್ಯಾಯವು ಮುಗಿಯಿತು.

೧೭೭ನೆಯ ಅಧ್ಯಾಯ ಚೈತರಥಪರ್ವ (ಮುಂದುವರಿದಿದೆ.)

# ಕಲ್ಮಾಷಪಾದನ ಶಾಪವಿಮುಕ್ತಿ: ವಸಿಷ್ಠರ ಅನುಗ್ರಹದಿಂದ ಅಶ್ಮಕನೆಂಬ ಪುತ್ರನ ಪ್ರಾಪ್ತಿ

ಗಂಧರ್ವನು ಹೇಳುತ್ತಾನೆ :

**ತತೋ ದೃಷ್ಟ್ವಾಶ್ರಮಪದಂ ರಹಿತಂ ತೈ ಸುತೈರ್ಮುನಿಃ ।**
**ನಿರ್ಜಗಾಮ ಸುದುಃಖಾರ್ತಃ ಪುನರಪ್ಯಾಶ್ರಮಾತ್ತತಃ ॥೧॥**

"ಅರ್ಜುನ! ವಸಿಷ್ಠರು ಆಶ್ರಮದ ಸುತ್ತಲೂ ನೋಡಿದರು. ಒಳಗೆ ಪ್ರವೇಶಿಸಿದರು. ಆಶ್ರಮವು ಪುತ್ರರಿಂದ ರಹಿತವಾಗಿತ್ತು. ಪುನಃ ಹೃದಯಾಂತರಾಳದಲ್ಲಡಗಿದ್ದ ದುಃಖವು ಹೊರಹೊಮ್ಮಿತು. ಪುತ್ರರಹಿತವಾಗಿದ್ದ ಆ ಆಶ್ರಮದಲ್ಲಿ ತಪೋಧನರಿಗೆ ಒಂದರೆಕ್ಷಣವೂ ನಿಲ್ಲಲು ಸಾಧ್ಯವಾಗಲಿಲ್ಲ. 'ನಾನೀ ದುಃಖವನ್ನು ಸಹಿಸಲಾರೆನು. ಬೇರಾವ ರೀತಿಯಿಂದಲಾದರೂ ನನ್ನ ಅಸುವನ್ನು ನೀಗಿಕೊಳ್ಳಲೇಬೇಕು'–ಎಂದು ಮನಸ್ಸಿನಲ್ಲಿಯೇ ಚಿಂತಿಸುತ್ತಾ ಹೊರಟುಬಿಟ್ಟರು.

ಅಲ್ಲಲ್ಲಿ ತಿರುಗಾಡುತ್ತಿದ್ದಾಗ ಪ್ರವಾಹಪೂರ್ಣವಾಗಿದ್ದ ನದಿಯೊಂದನ್ನು ಕಂಡರು. ಆ ನದಿಯು ದಂಡೆಗಳಲ್ಲಿದ್ದ ಮಹಾವೃಕ್ಷಗಳನ್ನೂ ಕೊಚ್ಚಿಕೊಂಡು ಹೋಗುತ್ತಿದ್ದಿತು. ದುಃಖವನ್ನು ಸಹಿಸಲಾಗದೇ ಪ್ರಾಣಗಳನ್ನು ಕಳೆದುಕೊಳ್ಳುವ ಆಶೆಯು ಪುನಃ ವಸಿಷ್ಠರ ಮನಸ್ಸಿನಲ್ಲಿ ಮೂಡಿತು. 'ಈ ನದಿಯ ನೀರಲ್ಲಾದರೂ ಬಿದ್ದು ಸಾಯುವೆನು'–ಎಂದು ನಿಶ್ಚಯಿಸಿದರು. ಒಡನೆಯೇ ಸಮೀಪದಲ್ಲಿದ್ದ ಬಳ್ಳಿಗಳಿಂದ ಶರೀರವನ್ನು ಬಲವಾಗಿ ಬಿಗಿದುಕೊಂಡು ಆ ಮಹಾಪ್ರವಾಹದಲ್ಲಿ ಧುಮುಕಿದರು. ಆಗಲೂ ವಸಿಷ್ಠರು ಆಶಿಸಿದಂತಾಗಲಿಲ್ಲ. ಪ್ರವಾಹದ ರಭಸದಿಂದ ವಸಿಷ್ಠರ ಮೇಲಿದ್ದ ಕಟ್ಟುಗಳೆಲ್ಲವೂ ಬಿಚ್ಚಿಹೋದುವು. ಪ್ರವಾಹದ ಮೂಲಕವಾಗಿಯೇ ಆ ಮಹಾನದಿಯು ವಸಿಷ್ಠರನ್ನು ದಡಕ್ಕೊಯ್ದುಬಿಟ್ಟಿತು.

**ಉತ್ತತಾರ ತತಃ ಪಾಶೈರ್ವಿಮುಕ್ತಃ ಸ ಮಹಾನೃಷಿಃ ।**
**ವಿಪಾಶೇತಿ ಚ ನಾಮಾಸ್ಯ ನದ್ಯಾಶ್ಚಕ್ರೇ ಮಹಾನೃಷಿಃ ॥೬॥**

ವಸಿಷ್ಠರು ಮೇಲೆದ್ದು ತಮ್ಮ ಇಚ್ಛೆಯು ಪೂರ್ಣವಾಗಲಿಲ್ಲವೆಂದು ಬೇಸರಪಟ್ಟರೂ ತಮ್ಮ ಮೇಲಿದ್ದ ಕಟ್ಟುಗಳನ್ನು ಪ್ರವಾಹದ ರಭಸದಿಂದಲೇ ಕತ್ತರಿಸಿಹಾಕಿದ ನದಿಗೆ 'ವಿಪಾಶಾ' ಎಂದೇ ಹೆಸರನ್ನಿಟ್ಟು ಮುಂದೆ ನಡೆದರು.

ದುಃಖದಿಂದ ಪರಿತಪಿಸುತ್ತಿದ್ದ ವಸಿಷ್ಠರು ಒಂದೆಡೆಯಲ್ಲಿ ನಿಲ್ಲಲಾರದೇ ಪರ್ವತಗಳ ತಪ್ಪಲುಗಳಲ್ಲಿಯೂ, ನದೀ-ನದ-ತಟಾಕಗಳ ದಂಡೆಗಳಲ್ಲಿಯೂ ಅಲೆದಾಡುತ್ತಿದ್ದರು. ಹೀಗೆಯೇ ತಿರುಗಾಡುತ್ತಿದ್ದಾಗ ಮೊಸಳೆಗಳಿಂದಲೂ, ತಿಮಿಂಗಿಲಗಳಿಂದಲೂ ನಿಬಿಡವಾಗಿದ್ದ 'ಹೈಮವತೀ' ಎಂಬ ನದಿಯನ್ನು ಕಂಡರು. ಈ ನದಿಯಲ್ಲಾದರೂ ಬಿದ್ದರೆ ಇಲ್ಲಿರುವ ಮೊಸಳೆ, ತಿಮಿಂಗಿಲಗಳಾದರೂ ತಮ್ಮನ್ನು ನುಂಗಿಬಿಡಬಹುದೆಂದು ವಸಿಷ್ಠರಿಗನ್ನಿಸಿತು. ಪ್ರಾಣವನ್ನು ಕಳೆದುಕೊಳ್ಳಬೇಕೆನ್ನುವ ಹಂಬಲವು ಪುನಃ ವಸಿಷ್ಠರ ಮನದಲ್ಲಿ ಮೂಡಿತು. ಒಡನೆಯೇ ನದಿಯೊಳಕ್ಕೆ ಧುಮುಕಿದರು.

**ಸಾ ತಮಗ್ನಿಸಮಂ ವಿಪ್ರಮನುಚಿನ್ತ್ಯ ಸರಿದ್ವರಾ ।**
**ಶತಧಾ ವಿದ್ರುತಾ ಯಸ್ಮಾಚ್ಛತದ್ರುರಿತಿ ವಿಶ್ರುತಾ ॥೯॥**

ನದಿಯ ಅಧಿದೇವತೆಯು–ತನ್ನೊಳಗೆ ಬಿದ್ದವನು ಯಜ್ಞೇಶ್ವರನಿಗೆ ಸಮಾನನಾದ ಬ್ರಾಹ್ಮಣನೆಂದು ತಿಳಿದು–ನೂರಾರು ಕವಲುಗಳಾಗಿ ಒಡೆದು ಛಿದ್ರ-ಛಿದ್ರವಾಗಿ ಹರಿಯತೊಡಗಿತು. ಅದರಿಂದಾಗಿ ವಸಿಷ್ಠರು ಬಿದ್ದ ಜಾಗದಲ್ಲಿ ನೀರೇ ಉಳಿಯಲಿಲ್ಲ. ಅಂದಿನಿಂದ ಆ ನದಿಗೆ 'ಶತದ್ರು' ಎಂದೇ ಹೆಸರಾಯಿತು. ವಸಿಷ್ಠರು ನಿಟ್ಟುಸಿರುಬಿಡುತ್ತಾ ಮೇಲೆದ್ದು–'ನಾನು ನನ್ನ ಪ್ರಾಣಗಳನ್ನು ಕಳೆದುಕೊಳ್ಳಲು ಅಸಮರ್ಥನಾಗಿದ್ದೇನೆ'–ಎಂದೆನ್ನುತ್ತಾ ಪುನಃ ಆಶ್ರಮದ ಕಡೆಗೆ ತಮ್ಮ ಹೆಜ್ಜೆಗಳನ್ನು ತಿರುಗಿಸಿದರು.

ಅನೇಕ ಗಿರಿ-ಗುಹಾ-ಪರ್ವತಗಳನ್ನು ದಾಟಿ ಅನೇಕದೇಶಗಳನ್ನು ಸುತ್ತಿ ಆಶ್ರಮದೆಡೆಗೆ ಬರುತ್ತಾ ಇದ್ದಾಗ–ಶಕ್ತಿಯ ಧರ್ಮಪತ್ನಿಯಾದ ಅದೃಶ್ಯಂತಿಯು ಮಾವನವರಾದ ವಸಿಷ್ಠರನ್ನು ಹಿಂಬಾಲಿಸಿ ಬಂದಳು. ಅವಳು ಸಮೀಪಕ್ಕೆ ಬರುತ್ತಿದ್ದಂತೆಲ್ಲಾ ಷಡಂಗಯುಕ್ತವಾದ ವೇದಘೋಷವು ಕೇಳುತ್ತಿದ್ದಿತು. ಸುಮಧುರವಾದ ವೇದಘೋಷವನ್ನು ಕೇಳಿದ ವಸಿಷ್ಠರು–

'ನನ್ನನ್ನು ಅನುಸರಿಸುತ್ತಿರುವವರಾರು?'–ಎಂದು ಮುಂದೆ ನಡೆಯುತ್ತಲೇ ಪ್ರಶ್ನಿಸಿದರು :

"ಸದಾ ತಪಶ್ಚರಣೆಯಲ್ಲಿಯೇ ನಿರತಳಾಗಿರುವ, ಶಕ್ತಿಮಹರ್ಷಿಯ ಧರ್ಮಪತ್ನಿಯಾದ ಅದೃಶ್ಯಂತಿಯು ನಾನು. ಇಂದು ದುರ್ದೈವವಶದಿಂದ ನಿಸ್ಸಹಾಯಕಳಾಗಿದ್ದೇನೆ."

ಸೊಸೆಯ ದೈನ್ಯವಾಣಿಯನ್ನು ವಸಿಷ್ಠರು ಕೇಳಿದರು.

"ಮಗಳೇ! ಶಕ್ತಿಯು ಹೇಳುತ್ತಿದ್ದಂತೆ ವೇದ-ವೇದಾಂಗಗಳನ್ನು ಸುಸ್ಪಷ್ಟವಾಗಿ ಸುಮಧುರಕಂಠದಿಂದ ಹೇಳುತ್ತಿರುವವರಾರು?"

"ನಿಮ್ಮ ಮಗನಾದ ಶಕ್ತಿಯ ಶಿಶುವು ನನ್ನ ಉದರದಲ್ಲಿ ಬೆಳೆಯುತ್ತಿದೆ. ಕಳೆದ ಹನ್ನೆರಡು ವರ್ಷಗಳಿಂದಲೂ ಶಿಶುವು ಗರ್ಭದಲ್ಲಿಯೇ ಅಡಗಿದೆ. ಈ ಶಿಶುವಿನ ಸುಮಧುರಸ್ವರವನ್ನೇ ನೀವೀಗ ಕೇಳುತ್ತಿರುವಿರಿ."

ವಸಿಷ್ಠರಿಗೆ ಅದೃಶ್ಯಂತಿಯ ಮಾತುಗಳನ್ನು ಕೇಳಿ ಬಹಳ ಆನಂದ ವಾಯಿತು. 'ತಮ್ಮ ವಂಶದ ಉದ್ಧಾರಕ್ಕಾಗಿ ಶಿಶುವೊಂದು ಉಳಿದಿರುವು ದಲ್ಲಾ!'–ಎಂದು ಆನಂದಬಾಷ್ಪಗಳನ್ನು ಸುರಿಸಿದರು. ಆತ್ಮಹತ್ಯೆಯ ಮನೋಭಾವವನ್ನು ಸಂಪೂರ್ಣವಾಗಿ ತೊರೆದರು. ಅಕಳಂಕರಾದ ವಸಿಷ್ಠರು ತಮ್ಮ ಸೊಸೆಯೊಡನೆ ಸಂತಸದಿಂದ ಆಶ್ರಮದೆಡೆಗೆ ತೆರಳಿದರು.

ಅರ್ಜುನ! ವಸಿಷ್ಠರು ಸೊಸೆಯೊಡನೆ ಆಶ್ರಮಕ್ಕೆ ಹಿಂದಿರುಗುತ್ತಿ ದ್ದಾಗ ಜನರಹಿತವಾದ ಅರಣ್ಯಪ್ರದೇಶದಲ್ಲಿ ಕಲ್ಮಾಷಪಾದನು ಕುಳಿತಿರುವು ದನ್ನು ನೋಡಿದರು. ವಸಿಷ್ಠರನ್ನು ನೋಡಿದೊಡನೆಯೇ ಉಗ್ರನಾದ ಕಿಂಕರ ರಾಕ್ಷಸನಿಂದ ಆವಿಷ್ಟನಾಗಿದ್ದ ಕಲ್ಮಾಷಪಾದನು ಖತಿಗೊಂಡವನಾಗಿ ಮೇಲೆದ್ದು ವಸಿಷ್ಠರನ್ನು ತಿನ್ನುವ ಆಶಯದಿಂದಲೇ ಅವರ ಸಮೀಪಕ್ಕೆ ಆಗಮಿಸಿದನು.

ಕ್ರೂರಕರ್ಮನಾದ ರಾಕ್ಷಸನನ್ನು ಕಂಡೊಡನೆಯೇ ವಸಿಷ್ಠರ ಹಿಂದೆ ನಡೆದುಬರುತ್ತಿದ್ದ ಅದೃಶ್ಯಂತಿಯು ಭಯದಿಂದ ವಿಹ್ವಲಳಾಗಿ ವಸಿಷ್ಠರನ್ನು ಕುರಿತು ಹೇಳಿದಳು :

" ಪೂಜ್ಯರೇ! ಉಗ್ರವಾದ ದಂಡದಿಂದ ಕೂಡಿರುವ ಮೃತ್ಯುವಿನಂತೆ

ಈ ರಾಕ್ಷಸನು ಕೈಯಲ್ಲೊಂದು ದೊಡ್ಡದಾದ ಮರದ ರೆಂಬೆಯನ್ನೂ ಎತ್ತಿಕೊಂಡು ನಮ್ಮೆದುರಾಗಿಯೇ ಬರುತ್ತಿದ್ದಾನೆ. ಸರ್ವವೇದಗಳನ್ನೂ ತಿಳಿದಿರುವ ಮಹಾನುಭಾವರೇ! ನಿಮ್ಮೊಬ್ಬರನ್ನು ಬಿಟ್ಟರೆ ಈ ಪ್ರಪಂಚದಲ್ಲಿ ಬೇರೆ ಯಾರೂ ಈ ರಾಕ್ಷಸನನ್ನು ಎದುರಿಸಿ ನಿಲ್ಲಲಾರರು. ಘೋರದರ್ಶನ ನಾದ, ಪಾಪಿಷ್ಠನಾದ ಈ ರಾಕ್ಷಸನ ದರ್ಶನದಿಂದ ಬಹಳ ಭೀತಳಾಗಿರುವ ನನ್ನನ್ನು ಕಾಪಾಡಿರಿ. ಈ ರಾಕ್ಷಸನು ನಿಶ್ಚಯವಾಗಿಯೂ ನಮ್ಮಿಬ್ಬರನ್ನೂ ತಿನ್ನುವ ಆಶಯದಿಂದಲೇ ಬರುತ್ತಿದ್ದಾನೆ."

"ಹೆದರಬೇಡ, ಮಗಳೇ! ಹೆದರಬೇಕಾದ ಕಾರಣವೂ ಇಲ್ಲ. ಈ ರಾಕ್ಷಸನಿಂದಂತೂ ಯಾವ ಭಯವೂ ಇರುವುದಿಲ್ಲ. ನಿನ್ನೆದುರಾಗಿ ನಿಂತಿರುವ ಯಾರನ್ನು ನೀನು ನೋಡುತ್ತಿರುವೆಯೋ–ಇವನು ರಾಕ್ಷಸನೂ ಅಲ್ಲ. ಆದುದರಿಂದ ಇದು ರಾಕ್ಷಸನಿಂದ ಪ್ರಾಪ್ತವಾಗಿರುವ ಭಯವೂ ಅಲ್ಲ.

ಸುಪ್ರಸಿದ್ಧನಾದ ಮತ್ತು ವೀರ್ಯವಂತನಾದ ಕಲ್ಮಾಷಪಾದನೆಂಬ ರಾಜನಿವನು. ಕಾರಣಾಂತರದಿಂದ ಭೀಕರವಾದ ಸ್ವರೂಪವನ್ನು ತಾಳಿ ಅರಣ್ಯದಲ್ಲಿ ವಾಸಿಸುತ್ತಿದ್ದಾನೆ."

ಅರ್ಜುನ! ಮೇಲೆ ಬೀಳುವುದರಲ್ಲಿದ್ದ ಕಲ್ಮಾಷಪಾದನನ್ನು ಕಂಡು ಮಹಾತೇಜಸ್ವಿಗಳಾದ ಮಹರ್ಷಿಗಳು ಕೇವಲ 'ಹುಂ' ಕಾರಮಾತ್ರದಿಂದಲೇ ಅವನ ಆರ್ಭಟವನ್ನು ಅಡಗಿಸಿ, ಮಂತ್ರಪೂರ್ವಕವಾದ ನೀರಿನಿಂದ ರಾಜ ನನ್ನು ಸಂಪ್ರೋಕ್ಷಿಸಿ, ತಮ್ಮ ಯೋಗವಿದ್ಯೆಯ ಪ್ರಭಾವದಿಂದ ರಾಜನನ್ನು ಘೋರವಾದ ಶಾಪದಿಂದಲೂ ವಿಮುಕ್ತನನ್ನಾಗಿ ಮಾಡಿದರು. ಪರ್ವಕಾಲ ದಲ್ಲಿ ಸೂರ್ಯನು ರಾಹುವಿನಿಂದ ಗ್ರಸ್ತನಾಗುವಂತೆ–ಹನ್ನೆರಡು ವರ್ಷಗಳ ಕಾಲ ಕಲ್ಮಾಷಪಾದನು ವಾಸಿಷ್ಠನ ದಿವ್ಯತೇಜಸ್ಸಿನಿಂದ ಪ್ರಾದುರ್ಭೂತವಾದ ಶಾಪದಿಂದ ಗ್ರಸ್ತನಾಗಿದ್ದನು. ಮಂತ್ರಪೂತವಾದ ತೀರ್ಥದ ಪ್ರಭಾವದಿಂದ ವಿಶ್ವಾಮಿತ್ರಪ್ರೇಷಿತನಾದ ಕಿಂಕರನೂ ರಾಜನಲ್ಲಿ ಉಳಿದುಕೊಳ್ಳಲು ಸಾಧ್ಯ ವಾಗಲಿಲ್ಲ. ರಾಕ್ಷಸನಿಂದಲೂ ವಿಮುಕ್ತನಾದ ಕಲ್ಮಾಷಪಾದನು–ಸೂರ್ಯನು ಕೆಂಪಾದ ಕಿರಣಗಳಿಂದ ಸಂಧ್ಯಾಕಾಲದ ಮೋಡವನ್ನು ಬೆಳಗುವಂತೆ–ತನ್ನ ದಿವ್ಯತೇಜಸ್ಸಿನಿಂದ ಆ ಮಹತ್ತರವಾದ ಅರಣ್ಯವನ್ನೇ ಬೆಳಗಿದನು.

'ತಾನಾರು? ಎಲ್ಲಿದ್ದೇನೆ? ತನಗೀ ಅವಸ್ಥೆಯು ಏಕೆ ಉಂಟಾಗಿತ್ತು?'–ಇವೆಲ್ಲದರ ಸ್ಮರಣೆಯೂ ರಾಜನಿಗುಂಟಾಗಿ, ತನ್ನ ಎದುರಿಗೆ ನಿಂತಿದ್ದ ವಸಿಷ್ಠರಿಗೆ ಸಾಷ್ಟಾಂಗಪ್ರಣಾಮಮಾಡಿ, ಬದ್ಧಾಂಜಲಿಯಾಗಿ ನಿಂತು ಹೇಳಿದನು:

"ಮಹಾನುಭಾವರೇ! ನಾನು ತಮ್ಮ ಶಿಷ್ಯನಾದ (ನಿಮ್ಮಿಂದ ಯಾಗ ಮಾಡಿಸಿಕೊಳ್ಳುವ) ಸೌದಾಸನಾಗಿರುವೆನು. ಮುನಿಶ್ರೇಷ್ಠರೇ! ತಮಗೆ ಸಂತೋಷವನ್ನುಂಟುಮಾಡಲು ಯಾವ ಕಾರ್ಯವನ್ನು ಬೇಕಾದರೂ ಮಾಡುವೆನು. ದಯೆಯಿಟ್ಟು ಆಜ್ಞೆಮಾಡಿರಿ."

"ಮಹಾರಾಜ! ಕಾಲಾನುಗುಣವಾಗಿ ಎಲ್ಲವೂ ನಡೆದಿದೆ. ನೀನು ರಾಜಧಾನಿಯನ್ನು ಸೇರಿ, ಪ್ರಜೆಗಳನ್ನು ಧರ್ಮದಿಂದ ಪಾಲನೆಮಾಡು. ಆದರೆ ಒಂದು ವಿಷಯವು ಮಾತ್ರ ನೆನಪಿನಲ್ಲಿರಲಿ :

**ಬ್ರಾಹ್ಮಣಂ ತು ಮನುಷ್ಯೇನ್ದ್ರ ಮಾವಮಂಸ್ಥಾಃ ಕದಾಚನ ॥೩೧॥**

ಮುಂದೆ ಯಾವಾಗಲೂ ಯಾವ ಕಾರಣದಿಂದಲೂ ಬ್ರಾಹ್ಮಣನನ್ನು ಅವಮಾನಗೊಳಿಸಬೇಡ."

"ಋಷಿಸತ್ತಮರೇ! ಇನ್ನು ಮುಂದೆ ಖಂಡಿತವಾಗಿಯೂ ಬ್ರಾಹ್ಮಣನಿಂದೆಯನ್ನು ಮಾಡುವುದಿಲ್ಲ. ನಿಮ್ಮ ಆಜ್ಞೆಯ ಪಾಲನೆಯಲ್ಲಿಯೇ ನಿರತನಾಗಿ ಬ್ರಾಹ್ಮಣಶ್ರೇಷ್ಠರನ್ನು ಸರ್ವದಾ ಸತ್ಕರಿಸುವೆನು.

ವೇದವಿದರಲ್ಲಿ ಶ್ರೇಷ್ಠರಾದ ವಸಿಷ್ಠರೇ! ನಾನು ತಮ್ಮ ಅನುಗ್ರಹದಿಂದ ಪುತ್ರನೊಬ್ಬನನ್ನು ಪಡೆಯಬೇಕೆಂಬ ಅಭಿಲಾಷೆಯಿಂದಿರುವೆನು. ಏಕೆಂದರೆ : ನಾನು ಇಕ್ಷ್ವಾಕುಕುಲವೃದ್ಧಿಗೆ ಶೀಲ-ರೂಪ-ಗುಣೋಪೇತನಾದ ವಂಶೋದ್ಧಾರಕನಾದ ಪುತ್ರನನ್ನು ಪಡೆಯಲು ಅಪೇಕ್ಷಿಸಿದ್ದೇನೆ. ಪುತ್ರಹೀನನಾಗಿರುವ ನನ್ನನ್ನು ಪುತ್ರವಂತನನ್ನಾಗಿ ಮಾಡಲು ತಾವು ಸಮರ್ಥರಾಗಿರುವಿರಿ."

ಅರ್ಜುನ! ಕಲ್ಮಾಷಪಾದನಿಂದ ಮತ್ತು ವಿಶ್ವಾಮಿತ್ರನ ಕೃತ್ರಿಮದಿಂದ ವಸಿಷ್ಠರು ಎಷ್ಟು ಅಗಾಧವಾದ ದುಃಖಕ್ಕೀಡಾದರೆಂಬುದನ್ನು ನಾನು ಈ ಹಿಂದೆ ಹೇಳಿರುವೆನಲ್ಲವೇ? ಆದರೆ ವಿಶ್ವಾಮಿತ್ರನಿಂದಲೇ ಹೀಗಾಯಿತು ಎಂಬ

ಮನೋಭಾವವು ವಸಿಷ್ಠರ ಹೃದಯದಲ್ಲಿ ಸ್ವಲ್ಪವಾದರೂ ಇರಲಿಲ್ಲ. ಅವರ ಅಂತಃಕರಣವು ಅಷ್ಟು ಪರಿಶುದ್ಧವಾಗಿದ್ದಿತು. ರಾಜನು ವಂಶೋದ್ಧಾರಕನಾದ ಮಗನೊಬ್ಬನನ್ನು ಪ್ರಾರ್ಥಿಸಿದೊಡನೆಯೇ ಸತ್ಯಸಂಧರಾದ ದ್ವಿಜಸತ್ತಮರಾದ ವಸಿಷ್ಠರು, ಧನುರ್ಧರನಾದ ಕಲ್ಮಾಷಪಾದನಿಗೆ–'**ದದಾನಿ**' 'ನಿನಗೆ ಶೀಲ-ಗುಣಸಂಪನ್ನನಾದ ಮಗನನ್ನು ಅನುಗ್ರಹಿಸುತ್ತೇನೆ'–ಎಂದೇ ಹೇಳಿಬಿಟ್ಟರು. ಯಥಾಯೋಗ್ಯವಾದ ಕಾಲದಲ್ಲಿ ವಸಿಷ್ಠರು ಕಲ್ಮಾಷಪಾದ ನೊಡನೆ ಲೋಕಪ್ರಸಿದ್ಧವಾದ ಅಯೋಧ್ಯಾನಗರಿಗೆ ಪ್ರಯಾಣಮಾಡಿದರು.

ಅಯೋಧ್ಯೆಯ ನಾಗರಿಕರು ಹನ್ನೆರಡು ವರ್ಷಗಳ ಕಾಲ ತಮ್ಮ ರಾಜನನ್ನು ಕಾಣದಿದ್ದುದರಿಂದ ಅವನನ್ನು–ಅಮರಾವತಿಯಲ್ಲಿ ದೇವತೆಗಳು ಇಂದ್ರನನ್ನು ಸ್ವಾಗತಿಸುವಂತೆ–ಮಹಾನಂದದಿಂದ ಸ್ವಾಗತಿಸಿದರು. ಅಯೋಧ್ಯಾನಗರವಾಸಿಗಳಿಗೆ, ಪುರೋಹಿತಪುರಃಸರನಾಗಿ ಬರುತ್ತಿದ್ದ ತಮ್ಮ ರಾಜನು ಬಾಲಸೂರ್ಯನಂತೆಯೇ ಕಂಡನು. ಸುಂದರಪುರುಷರಲ್ಲಿ ಶ್ರೇಷ್ಠ ನಾಗಿದ್ದ ರಾಜನು–ಶರತ್ಕಾಲದ ಚಂದ್ರನಂತೆ–ತನ್ನ ಸೌಂದರ್ಯಾತಿಶಯ ದಿಂದ ಅಯೋಧ್ಯಾನಗರಿಯನ್ನು ಬೆಳಗಿದನು.

ರಾಜನನ್ನು ಸ್ವಾಗತಿಸಲು ಕಟ್ಟಿದ್ದ ತಳಿರು-ತೋರಣಗಳೂ, ಧ್ವಜ-ಪತಾಕೆಗಳೂ ರಾಜನಿಗೆ ಆಹ್ಲಾದವನ್ನುಂಟುಮಾಡಿದುವು. ತಾಳ- ಮೃದಂಗಾದಿ ಮಂಗಳವಾದ್ಯಗಳೊಡನೆ ರಾಜನು ವಸಿಷ್ಠಸಮೇತನಾಗಿ ಅರಮನೆಯನ್ನು ಸೇರಿದನು.

ರಾಜರ್ಷಿಯಾದ ಕಲ್ಮಾಷಪಾದನು ಅಯೋಧ್ಯಾಪಟ್ಟಣವನ್ನು ಪ್ರವೇಶಿ ಸಿದನಂತರ ರಾಜನ ಆಜ್ಞಾನುಸಾರವಾಗಿ ಅವನ ಧರ್ಮಪತ್ನಿಯು ವಸಿಷ್ಠರನ್ನು ಉಪಚರಿಸುತ್ತಿದ್ದಳು.

ಧರ್ಮಜ್ಞರಾದ ವಸಿಷ್ಠರು ದಿವ್ಯವಾದ ಶಾಸ್ತ್ರೀಯವಿಧಿಗೆ ಅನುಸಾರ ವಾಗಿ ಋತುಸ್ನಾನಮಾಡಿದ ರಾಣಿಯನ್ನು ಅನುಗ್ರಹಿಸಿದರು. ಕೆಲವು ದಿನ ಗಳಲ್ಲಿಯೇ ಮಹಾರಾಣಿಯು ಗರ್ಭವತಿಯಾದಳು. ವಸಿಷ್ಠರು ರಾಜನಲ್ಲಿಗೆ ಹೋಗಿ ತೇಜಃಪುಂಜಯುಕ್ತನಾದ ಮಗನು ಹುಟ್ಟುವನೆಂದು ಹೇಳಿ ಯಥೋಚಿತವಾದ ಪೂಜೆಯನ್ನು ರಾಜನಿಂದ ಸ್ವೀಕರಿಸಿ, ತಮ್ಮ ಆಶ್ರಮಕ್ಕೆ ತೆರಳಿದರು.

ರಾಣಿಯು ಗರ್ಭಧಾರಣೆಮಾಡಿ ಅನೇಕವರ್ಷಗಳಾದರೂ ಮಗುವು ಹುಟ್ಟಲೇ ಇಲ್ಲ. ರಾಣಿಯಾದ ಮದಯಂತಿಗೆ ಬಹಳ ಬೇಸರವಾಯಿತು. ಕಲ್ಲನ್ನು ತೆಗೆದುಕೊಂಡು ಹೊಟ್ಟೆಯನ್ನು ಕುಟ್ಟಿಕೊಂಡಳು. ಆದರೂ ಶಿಶುವಿನ ಜನನವಾಗಲಿಲ್ಲ. ಹನ್ನೆರಡು ವರ್ಷಗಳು ಕಳೆದ ಬಳಿಕ ಗಂಡುಮಗುವಿನ ಉದಯವಾಯಿತು. ಆ ಮಗುವು ಕಲ್ಲಿನ ಘಾತದಿಂದಾಗಿ ಹುಟ್ಟಿತಾದ ಕಾರಣ ಅದಕ್ಕೆ ಅಶ್ಮಕನೆಂದೇ ಹೆಸರನ್ನಿಟ್ಟರು.

ಮುಂದೆ ಅಶ್ಮಕನು ಚಕ್ರವರ್ತಿಯಾಗಿ, ರಾಜ್ಯವನ್ನು ಧರ್ಮದಿಂದ ಪರಿಪಾಲನೆ ಮಾಡುತ್ತಾ, ಇಕ್ಷ್ವಾಕುವಂಶಪ್ರದೀಪನಾಗಿ ಪೌದನ್ಯವೆಂಬ ಹೊಸ ನಗರಿಯನ್ನೂ ನಿರ್ಮಾಣಮಾಡಿದನು.”

೧೭೭ನೆಯ ಅಧ್ಯಾಯವು ಮುಗಿಯಿತು.

೧೭೮ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಶಕ್ತಿಪುತ್ರನಾದ ಪರಾಶರನ ಜನ್ಮ : ತಂದೆಯ ಮರಣ ವಾರ್ತೆಯನ್ನು ಕೇಳಿ ಪರಾಶರನ ಕೋಪ : ಸಮಾಧಾನ ಪಡಿಸಲು ವಸಿಷ್ಠರಿಂದ ಔರ್ವೋಪಾಖ್ಯಾನದ ಕಥನ

ಗಂಧರ್ವನು ಮುಂದುವರಿಸಿ ಹೇಳುತ್ತಾನೆ :

**ಆಶ್ರಮಸ್ಥಾ ತತಃ ಪುತ್ರಮದೃಶ್ಯನ್ತೀ ವ್ಯಜಾಯತ ।**
**ಶಕ್ತೇಃ ಕುಲಕರಂ ರಾಜನ್ದ್ವಿತೀಯಮಿವ ಶಕ್ತಿನಮ್ ॥೧॥**

“ಅರ್ಜುನ! ಕೆಲವು ದಿನಗಳು ಕಳೆದನಂತರ ಆಶ್ರಮದಲ್ಲಿದ್ದ ಅದೃಶ್ಯಂತಿಯು ಗಂಡುಮಗುವನ್ನು ಪ್ರಸವಿಸಿದಳು. ಮಗುವು ತೇಜಃಪುಂಜ ಯುಕ್ತವಾಗಿದ್ದು ಶಕ್ತಿಯನ್ನೇ ಹೋಲುತ್ತಿದ್ದು, ಎರಡನೆಯ ಶಕ್ತಿಯೋ ಎಂಬಂತಿದ್ದಿತು. ಹುಟ್ಟಿದ ಪೌತ್ರನಿಗೆ ಜಾತಕರ್ಮ-ನಾಮಕರಣಾನ್ನಪ್ರಾಶನಾದಿ ವಿಧ್ಯುಕ್ತಕರ್ಮಗಳನ್ನು ಅನುಕ್ರಮವಾಗಿ ವಸಿಷ್ಠರೇ ಮಾಡಿದರು.

**ಪರಾಸುಃ ಸ ಯತಸ್ತೇನ ವಸಿಷ್ಠಃ ಸ್ಥಾಪಿತೋ ಮುನಿಃ ।**
**ಗರ್ಭಸ್ಥೇನ ತತೋ ಲೋಕೇ ಪರಾಶರ ಇತಿ ಸ್ಮೃತಃ ॥೨॥**

ವಂಶೋದ್ಧಾರಕನಾದ ಗಂಡುಮಗುವು ತಮ್ಮ ಸೊಸೆಯ ಗರ್ಭಾಂಬುಧಿಯಲ್ಲಿರುವುದೆಂದು ತಿಳಿದನಂತರ ವಸಿಷ್ಠರು ಆತ್ಮವಿನಾಶದ ಇಚ್ಛೆಯನ್ನು ತೊರೆದರಲ್ಲವೇ? ಆ ಕಾರಣದಿಂದ ಮಗುವಿಗೆ 'ಪರಾಶರ' ( ಮರಣದಿಂದ ಪಾರುಮಾಡಿದವನು ) ಎಂದೇ ಹೆಸರನ್ನಿಟ್ಟರು.

ಧರ್ಮಾತ್ಮನಾದ ಪರಾಶರನು ವಸಿಷ್ಠರನ್ನೇ ತನ್ನ ತಂದೆಯೆಂದು ಭಾವಿಸಿದನು. ಹುಟ್ಟಿದಾಗಿನಿಂದ ಅಜ್ಜನನ್ನು ಪಿತೃಭಾವದಿಂದಲೇ ಕಾಣುತ್ತಿದ್ದನು. ದೊಡ್ಡವನಾದ ಮೇಲೂ ಪರಾಶರನು ವಸಿಷ್ಠರನ್ನು ತನ್ನ ತಾಯಿಯ ಸಮಕ್ಷದಲ್ಲಿಯೂ 'ತಾತ', 'ತಾತ' ( ತಂದೆಯೇ! ) ಎಂದೇ ಸಂಬೋಧಿಸುತ್ತಿದ್ದನು. ವಸಿಷ್ಠರನ್ನು ಪರಾಶರನು ತಂದೆಯೆಂದು ಪೂರ್ಣಾರ್ಥದಲ್ಲಿಯೇ ಕರೆಯುತ್ತಿದ್ದನು. ಅವನಿಗೆ ಅವರು ತನ್ನ ತಂದೆಯಲ್ಲವೆಂಬ ವಿಷಯವೇ ತಿಳಿದಿರಲಿಲ್ಲ. ಪರಾಶರನು ವಸಿಷ್ಠರನ್ನು ಸುಮಧುರಧ್ವನಿಯಲ್ಲಿ 'ತಾತ', 'ತಾತ' ಎಂದು ಕರೆಯುತ್ತಿದ್ದರೆ ತಾಯಿಯಾದ ಅದೃಶ್ಯಂತಿಯ ಹೃದಯದಲ್ಲಿ ಅನಿರ್ವಾಚ್ಯವಾದ ಸಂಕಟವಾಗುತ್ತಿತ್ತು. ತನ್ನ ಪತಿಯ ಸ್ಮರಣೆಯುಂಟಾಗಿ ಕಣ್ಣೀರಿಡುತ್ತಿದ್ದಳು. ಅಜ್ಜನನ್ನೇ ತಂದೆಯೆಂದು ಕರೆಯುತ್ತಿರುವುದನ್ನು ಕೇಳಲು ಸಾಧ್ಯವಾಗದೇ ಒಂದು ದಿನ ಅಶ್ರುಪೂರ್ಣಾಕ್ಷಿಯಾದ ಅದೃಶ್ಯಂತಿಯು ಪುತ್ರನೊಡನೆ ಹೇಳಿದಳು :

**ಮಾ ತಾತ ತಾತ ತಾತೇತಿ ಬ್ರೂಹ್ಯೇನಂ ಪಿತರಂ ಪಿತುಃ ।**
**ರಕ್ಷಸಾ ಭಕ್ಷಿತಸ್ತಾತ ತವ ತಾತೋ ವನಾನ್ತರೇ ॥೭॥**

"ಮಗು! ಪರಾಶರ! ಇವರು ನಿನ್ನ ತಂದೆಯ ತಂದೆಯವರಪ್ಪ! ನಿನಗೆ ಅಜ್ಜಂದಿರಾಗಬೇಕು. ಆದುದರಿಂದ ಇನ್ನು ಮುಂದೆ ಇವರನ್ನು 'ತಾತ' 'ತಾತ' ಎಂದು ಕರೆಯಬೇಡ. ನಿಮ್ಮ ತಂದೆಯವರನ್ನು ರಾಕ್ಷಸನೊಬ್ಬನು ಕಾಡಿನಲ್ಲಿ ನುಂಗಿದನು. ಮಗುವೇ! ನೀನು ತಂದೆಯೆಂದು ತಿಳಿದಿರುವ ಇವರು ನಿನ್ನ ತಂದೆಯಲ್ಲ. ಇನ್ನು ಮುಂದೆ ಇವರನ್ನು 'ಪಿತಾಮಹ' ಎಂದು ಕರೆಯಬೇಕು. 'ತಾತ' ಎಂದು ಕರೆಯಬೇಡ. ಹಾಗೆ ಕರೆದರೆ ನನಗೆ ಬಹಳ ದುಃಖವಾಗುವುದು."

ತಾಯಿಯ ಮಾತುಗಳನ್ನು ಕೇಳಿ ಸತ್ಯನಿಷ್ಠನಾದ ಪರಾಶರನಿಗೂ

ಬಹಳ ದುಃಖವಾಯಿತು. 'ನನ್ನ ತಂದೆಯನ್ನು ರಾಕ್ಷಸನೊಬ್ಬನು ನುಂಗಿ ಬಿಟ್ಟನೇ?' – ಎಂದು ಹಲ್ಲುಕಡಿದು ಹೇಳುತ್ತಾ ಗರ್ಜಿಸಿದನು–'ಹಾಗಾದರೆ ಇಂದೇ ನಾನು ಇಲ್ಲಿಂದ ಹೊರಟು ಸರ್ವಲೋಕಗಳನ್ನೂ ವಿನಾಶಮಾಡು ವೆನು."

ಮಹಾಮಹಿಮರಾದ, ಸ್ಥೈರಣೆಯ ಮೂರ್ತಿಗಳಾದ, ಬ್ರಹ್ಮನಿಷ್ಠರಾದ, ಮಹಾತ್ಮರಾದ, ತಪಸ್ವಿಗಳಾದ ವಸಿಷ್ಠರು–ಪ್ರಪಂಚವನ್ನೇ ವಿನಾಶಮಾಡಿ ಬಿಡುವೆನೆನ್ನುವ ಮೊಮ್ಮಗನ ಗರ್ಜನೆಯನ್ನು ಕೇಳಿ–ಮೇಲೆದ್ದು ಬಂದು, ಮೊಮ್ಮಗನ ಕೈಹಿಡಿದು, ತಮ್ಮ ದರ್ಭಾಸನದ ಪಕ್ಕದಲ್ಲಿಯೇ ಕುಳ್ಳಿರಿಸಿ ಕೊಂಡು ಹೇಳತೊಡಗಿದರು :

"ಮಗು! ಹಿಂದಿನ ಕಾಲದಲ್ಲಿ ಕೃತವೀರ್ಯನೆಂಬ ಸುಪ್ರಸಿದ್ಧನಾದ ರಾಜನಿದ್ದನು. ಅವನು ವೇದ-ವೇದಾಂಗಪಾರಂಗತರಾಗಿದ್ದ ಭೃಗುಗಳ ಶಿಷ್ಯ ನಾಗಿದ್ದನು. ಸೋಮಯಾಗವನ್ನು ಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ಭೂರಿದಕ್ಷಿಣೆಗಳನ್ನು ಕೊಟ್ಟನು. ತನ್ನ ಐಶ್ವರ್ಯವನ್ನೆಲ್ಲಾ ಭೃಗುವಂಶ ಸಂಭೂತರಾದ ಬ್ರಾಹ್ಮಣರಿಗೇ ಹಂಚಿಬಿಟ್ಟನೆಂದೂ ಹೇಳುತ್ತಾರೆ.

ಸ್ವಲ್ಪಕಾಲ ಕಳೆದನಂತರ ವಿಧಿಯ ನಿಯಮಾನುಸಾರವಾಗಿ ಕೃತ ವೀರ್ಯನು ಸ್ವರ್ಗಸ್ಥನಾದನು. ಅನಂತರ ಸಿಂಹಾಸನವನ್ನು ಹತ್ತಿದ ರಾಜರು ಹಣವಂತರಾಗಿರಲಿಲ್ಲ. ಕೃತವೀರ್ಯನು ತನ್ನಲ್ಲಿದ್ದ ಐಶ್ವರ್ಯವನ್ನೆಲ್ಲಾ ಬ್ರಾಹ್ಮಣರಿಗೆ ಹಂಚಿಬಿಟ್ಟಿದ್ದನಲ್ಲವೇ? ಕೃತವೀರ್ಯನ ಪೀಳಿಗೆಯವರು ಹಣ ವನ್ನು ಹೇಗೆ ಪಡೆಯಬೇಕೆಂಬುದನ್ನು ಯೋಚಿಸತೊಡಗಿದರು. ಭಾರ್ಗವ ರಲ್ಲಿ ತಮ್ಮ ಐಶ್ವರ್ಯವೆಲ್ಲವೂ ಸೇರಿಹೋಗಿರುವುದೆಂಬ ವಿಷಯವು ಅವರಿಗೆ ತಿಳಿದಿತ್ತು. ಆ ರಾಜಕುಮಾರರು ಐಶ್ವರ್ಯಭಿಕ್ಷೆಗಾಗಿ ಬ್ರಾಹ್ಮಣರಲ್ಲಿಗೆ ಹೋದರು.

ಅವರು ಬರುವ ಸುಳಿವನ್ನು ತಿಳಿದು ಕೆಲವರು ತಮ್ಮಲ್ಲಿದ್ದ ಐಶ್ವರ್ಯ ವನ್ನು ಭಯದಿಂದ ಭೂಮಿಯಲ್ಲಿ ಹೂತಿಟ್ಟರು. ಕೆಲವರು–ಕ್ಷತ್ರಿಯರು ತಮ್ಮಲ್ಲಿದ್ದ ಐಶ್ವರ್ಯವನ್ನು ಸುಲಿದುಕೊಂಡು ಹೋಗಿಬಿಡುವರೆಂಬ ಭಯ

ದಿಂದ ಬೇರೆಯ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟುಬಿಟ್ಟರು. ಒಬ್ಬಿಬ್ಬರು ಕೇಳಿದಷ್ಟು ಹಣವನ್ನು ಕ್ಷತ್ರಿಯರಿಗೆ ಕೊಟ್ಟಿದ್ದೂ ಉಂಟು. ಅಷ್ಟರಿಂದಲೇ ಕ್ಷತ್ರಿಯರಿಗೆ ತೃಪ್ತಿಯಾಗಲಿಲ್ಲ. ಬ್ರಾಹ್ಮಣರು ಐಶ್ವರ್ಯವನ್ನು ಭೂಮಿಯಲ್ಲಿ ಹೂತಿಟ್ಟಿರಬಹುದೆಂಬ ಸಂದೇಹದಿಂದ ಕ್ಷತ್ರಿಯನೊಬ್ಬನು ಬ್ರಾಹ್ಮಣನ ಮನೆಯ ಒಳಭಾಗದಲ್ಲಿ ಅಗೆದು ನೋಡಿದನು. ಅಲ್ಲಿ ಅವನಿಗೆ ಅಪಾರವಾದ ಐಶ್ವರ್ಯವು ಸಿಕ್ಕಿತು. ಭಯದಿಂದ ಶರಣಾಗತರಾಗಿ ಬಂದ ಬ್ರಾಹ್ಮಣರನ್ನು ಕ್ಷತ್ರಿಯರು ಬಹುವಾಗಿ ಅವಮಾನಿಸಿದರು. ಕ್ಷಮೆಬೇಡಿದರೂ ಆ ಕ್ಷತ್ರಿಯ ಕುಮಾರರ ಕೋಪವು ಶಾಂತವಾಗಲಿಲ್ಲ. ಮಹಾಧನುಸ್ಸುಗಳನ್ನು ಧರಿಸಿದ್ದ ಅವರು ತಮ್ಮ ಕೋಪಾವೇಶದಲ್ಲಿ ಅಲ್ಲಿದ್ದ ಬ್ರಾಹ್ಮಣರನ್ನೆಲ್ಲಾ–ಹೆಂಗಸರು, ಮಕ್ಕಳು, ಮುದುಕರು–ಎಂಬ ವಿವೇಚನೆಯೇ ಇಲ್ಲದೇ ನಿಶಿತವಾದ ಬಾಣ ಗಳಿಂದ ಕೊಲ್ಲಲು ಮೊದಲಿಟ್ಟರು. ಗರ್ಭಿಣೀಸ್ತ್ರೀಯರನ್ನೂ ಅವರು ಬಿಡಲಿಲ್ಲ. ಬ್ರಾಹ್ಮಣರ ವಂಶವನ್ನೇ ನಿರ್ವಂಶಮಾಡಬೇಕೆಂಬುದು ಆ ಕ್ಷತ್ರಿಯರ ಇಚ್ಛೆಯಾಗಿದ್ದಿತು. ಆ ಮಧ್ಯದಲ್ಲಿ ಕೆಲವು ಹೆಂಗಸರು ಕ್ಷತ್ರಿಯರಿಂದ ತಪ್ಪಿಸಿ ಕೊಳ್ಳಲು ಹಿಮವತ್ಪರ್ವತದ ತಪ್ಪಲಿಗೆ ಓಡಿಹೋದರು. ಅವರಲ್ಲಿ ಸಾಧ್ವಿ ಯೊಬ್ಬಳು ಹೇಗಾದರೂ ಮಾಡಿ ಭೃಗುವಂಶವನ್ನು ಉಳಿಸಬೇಕೆಂದು ಸಂಕ ಲ್ಪಿಸಿ, ತಾನು ಗರ್ಭವತಿಯೆಂಬುದು ಕ್ಷತ್ರಿಯರಿಗೆ ತಿಳಿಯಕೂಡದೆಂದು ತನ್ನ ಹೊಟ್ಟೆಯಲ್ಲಿದ್ದ ಗರ್ಭವನ್ನು ಯೋಗಬಲದಿಂದ ತೊಡೆಯೊಳಗೆ ಸೇರಿಸಿ ಬಿಟ್ಟಳು. ಅವಳ ಜೊತೆಯಲ್ಲಿಯೇ ಇದ್ದ ಮತ್ತೊಬ್ಬ ಬ್ರಾಹ್ಮಣಿಯು ಆ ವಿಷಯವನ್ನು ತಿಳಿದು, ಗರ್ಭಿಣೀಸ್ತ್ರೀಯು ತನ್ನ ಜೊತೆಯಲ್ಲಿದ್ದರೆ ಕ್ಷತ್ರಿಯ ರಿಂದ ಆಪತ್ತು ಸಂಭವಿಸುವುದೆಂದು ಭಯಪಟ್ಟವಳಾಗಿ ತನ್ನ ಪ್ರಾಣವನ್ನಾ ದರೂ ಉಳಿಸಿಕೊಳ್ಳಬೇಕೆಂದು ಕ್ಷತ್ರಿಯರಲ್ಲಿಗೆ ಹೋಗಿ ಆ ವಿಷಯವನ್ನು ಹೇಳಿಬಿಟ್ಟಳು.

ಭೃಗುವಂಶದ ಒಂದು ಭ್ರೂಣವನ್ನೂ ಉಳಿಸಬಾರದೆಂದು ನಿಶ್ಚಯಿಸಿದ್ದ ಕ್ಷತ್ರಿಯರು ಸಾಧ್ವಿಯ ಬಳಿಗೆ ಒಡನೆಯೇ ಹೊರಟುಬಂದರು. ಅನಿರ್ವಾಚ್ಯ ವಾದ ಶೋಭೆಯಿಂದ ಕೂಡಿದ್ದ ಗರ್ಭಿಣಿಯನ್ನು ಕಂಡರು. ಸಾಧ್ವಿಯು ತರ-ತರನೆ ನಡುಗಿದಳು. ಊರುಪ್ರದೇಶದಲ್ಲಿದ್ದ ಮಗುವು ತನ್ನ ತಾಯಿ

ಗೊದಗಿದ ಆಪತ್ತನ್ನು ತಿಳಿದು ಒಡನೆಯೇ ತಾಯಿಯ ತೊಡೆಯನ್ನು ಸೀಳಿಕೊಂಡೇ ಹೊರಕ್ಕೆ ಬಂದಿತು.

ಕೆಳಕ್ಕೆ ಬಿದ್ದ ಮಗುವನ್ನು ನೋಡುತ್ತಲೇ ಸುತ್ತಲೂ ಇದ್ದ ಕ್ಷತ್ರಿಯರ ಕಣ್ಣುಗಳು ಕೋರೈಸಿಹೋದುವು. ಸೂರ್ಯನು ನಡುನೆತ್ತಿಯ ಮೇಲೆ ಬಂದಾಗ ನೋಡಲು ಅಸಾಧ್ಯವಾದ ತೇಜಸ್ಸಿನಿಂದ ಕೂಡಿರುವಂತೆ–ಅತಿಶಯವಾದ ತೇಜಸ್ಸಿನಿಂದ ಕೂಡಿದ್ದ ಮಗುವು–ತನ್ನನ್ನು ನೋಡುತ್ತಿದ್ದ ಕ್ಷತ್ರಿಯರ ಕಣ್ಣುಗಳನ್ನು ಇಂಗಿಸಿಬಿಟ್ಟಿತು. ಕಣ್ಣುಗಳನ್ನು ಕಳೆದುಕೊಂಡ ಕ್ಷತ್ರಿಯರು ಹಿಮವತ್ಪರ್ವತದ ತಪ್ಪಲಿನಲ್ಲಿದ್ದ ಹಳ್ಳ-ಕೊಳ್ಳಗಳಲ್ಲಿ ಬಿದ್ದು, ದಿಕ್ಕುಗಾಣದೇ ಭ್ರಾಂತರಾದರು. ಅತ್ಯಂತದುಃಖಿತರಾಗಿ ಕಣ್ಣುಗಳನ್ನು ಪಡೆದುಕೊಳ್ಳುವ ಅಭಿಲಾಷೆಯಿಂದ ದೋಷರಹಿತಳಾದ ಆ ಸಾಧ್ವಿಯನ್ನೇ ಮರೆಹೊಗಲು ನಿಶ್ಚಯಿಸಿದರು. ಜ್ವಾಲೆಯಿಂದ ರಹಿತವಾದ ಅಗ್ನಿಯಂತೆ–ಕಣ್ಣುಗಳನ್ನು ಕಳೆದುಕೊಂಡು ಪರಿತಪಿಸುತ್ತಿದ್ದ ಕ್ಷತ್ರಿಯರು ಅತ್ಯಂತವಿನೀತರಾಗಿ, ಬದ್ಧಾಂಜಲಿಗಳಾಗಿ ಆ ಸಾಧ್ವಿಯನ್ನು ಪ್ರಾರ್ಥಿಸಿದರು : "ದೇವಿ! ಭಗವತಿಯ ವರಪ್ರಸಾದದಿಂದ ನಮಗೆಲ್ಲರಿಗೂ ಪುನಃ ಕಣ್ಣುಗಳು ಬರುವಂತಾಗಲಿ. ನಾವೆಲ್ಲರೂ ಈ ಹೀನಕರ್ಮವನ್ನು ಬಿಟ್ಟು ನಮ್ಮ ದೇಶಕ್ಕೆ ಹಿಂದಿರುಗುತ್ತೇವೆ. ಶುಭಾಂಗಿ! ಪುತ್ರವತಿಯಾಗಿರುವ ನೀನು ನಮ್ಮ ಮೇಲೆ ಕರುಣೆದೋರಲು ಸಮರ್ಥಳಾಗಿರುವೆ. ಪುನಃ ನಮ್ಮ ಕಣ್ಣುಗಳನ್ನು ಕೊಡುವುದರ ಮೂಲಕ ನಮ್ಮೆಲ್ಲರನ್ನೂ ರಕ್ಷಿಸು, ಮಹಾತಾಯೇ!"

೧೭೮ನೆಯ ಅಧ್ಯಾಯವು ಮುಗಿಯಿತು.

೧೭೯ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಪಿತೃದೇವತೆಗಳಿಂದ ಔರ್ವನ ಕೋಪೋಪಶಮನ

"ಪರಾಶರ! ಸಾಧ್ವಿಯು 'ಮಕ್ಕಳಿರಾ!' ಎಂದೇ ಸಂಬೋಧಿಸಿದಳು. ತನ್ನನ್ನು ಕೊಲೆಮಾಡಲು ಬಂದಿದ್ದವರೆಂಬ ನಿಷ್ಠುರತೆಯು ಅವಳ ಹೃದಯದಲ್ಲುಳಿಯಲಿಲ್ಲ. ತಾಯಿಯ ಹೃದಯವಲ್ಲವೇ!

"ನಾನು ನಿಮ್ಮ ಕಣ್ಣುಗಳನ್ನು ಅಪಹರಿಸಲಿಲ್ಲ. ನನಗೆ ನಿಮ್ಮ ಮೇಲೆ ಕೋಪವೂ ಇಲ್ಲ. ಭೃಗುವಂಶದಲ್ಲಿ ಹುಟ್ಟಿರುವ ಈ ಶಿಶುವು ನಿಮ್ಮ ಮೇಲೆ

ಕೋಪಗೊಂಡಿರುವುದಂತೂ ನಿಶ್ಚಯ. ಈ ಶಿಶುವೇ ನಿಮ್ಮ ದೃಷ್ಟಿಗಳ ಅಪಹಾರಕ್ಕೂ ಕಾರಣವಾಗಿರುತ್ತದೆ. ತನ್ನ ವಂಶದವರೆಲ್ಲರ ಕಗ್ಗೊಲೆಯನ್ನು ನೆನೆದು ಇದರ ಕೋಪವು ಉಲ್ಬಣಿಸಿರುತ್ತದೆ. ಮಕ್ಕಳಿರಾ! ನೀವು ಭ್ರೂಣ ಗಳನ್ನೂ ಬಿಡದೇ ಭೃಗುವಂಶವನ್ನೇ ವಿನಾಶಮಾಡಲು ಹೊರಟಾಗ ವಂಶೋ ದ್ಧಾರಕನೆಂದು ಈ ಮಗುವನ್ನು ನಾನು ನನ್ನ ತೊಡೆಯೊಳಗೆ ಸೇರಿಸಿ ನೂರು ವರ್ಷಗಳ ಕಾಲ ಕಾಪಾಡಿದೆನು. ನನ್ನ ಗರ್ಭದಲ್ಲಿರುವಾಗಲೇ ಈ ಶಿಶುವು ವೇದ-ವೇದಾಂಗಗಳನ್ನೂ ಅಧ್ಯಯನಮಾಡಿತು. ತನ್ನ ತಾತ-ಮುತ್ತಾತಂದಿರ ಕೊಲೆಗೆ ಕಾರಣರಾಗಿರುವ ನಿಮ್ಮನ್ನು ಈ ಶಿಶುವು ವಿನಾಶಮಾಡಲು ನಿಶ್ಚಯಿಸಿದೆ. ನೀವು ನಿರ್ಘೃಣರಾಗಿ ಇವನ ತಂದೆಯನ್ನು ಕೊಂದಿರಾದ್ದರಿಂದ ಈ ಶಿಶುವಿಗೆ ಮಹತ್ತರವಾದ ಕೋಪವುಂಟಾಗಿದೆ. ಆ ಕೋಪದಿಂದ ನಿಮ್ಮೆಲ್ಲರನ್ನೂ ಸಂಹಾರಮಾಡಲು ನಿಶ್ಚಯಿಸಿದೆ.

ಇದಕ್ಕಿರುವ ದೈವಿಕವಾದ ತೇಜಸ್ಸಿನಿಂದ ನಿಮ್ಮ ಕಣ್ಣುಗಳು ಸುಟ್ಟು ಹೋದುವು. ಆದುದರಿಂದ ನೀವು ಈ ಶಿಶುವನ್ನೇ ಕ್ಷಮೆಬೇಡಿರಿ. ನಿಮ್ಮ ಪ್ರಾರ್ಥನೆಯಿಂದ ಈ ಮಗುವೇನಾದರೂ ಸಂತುಷ್ಟವಾದರೆ ನಿಮಗೆ ಪುನಃ ಕಣ್ಣುಗಳನ್ನು ದಯಪಾಲಿಸಬಹುದು."

ಬ್ರಾಹ್ಮಣಿಯ ಮಾತುಗಳನ್ನು ಕೇಳಿ ರಾಜಕುಮಾರರೆಲ್ಲರೂ ಶಿಶುವನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡಿ –'ಪೂಜ್ಯನೇ! ಪ್ರಸನ್ನನಾಗು'–ಎಂದು ಅಂಗಲಾಚಿ ಬೇಡಿಕೊಂಡರು.

ಬಾಲಕನು ಸುಪ್ರೀತನಾದನು. ರಾಜಕುಮಾರರಿಗೆ ಕಣ್ಣುಗಳು ಕಾಣು ವಂತಾಯಿತು. ಕ್ಷತ್ರಿಯರು ತಾಯಿ-ಮಕ್ಕಳಿಬ್ಬರಿಗೂ ನಮಸ್ಕರಿಸಿ ತಮ್ಮದೇಶಕ್ಕೆ ಹೊರಟುಹೋದರು.

**ಅನೇನೈವ ಚ ವಿಖ್ಯಾತೋ ನಾಮ್ನಾ ಲೋಕೇಷು ಸತ್ತಮಃ ।**
**ಸ ಔರ್ವ ಇತಿ ವಿಪ್ರರ್ಷಿರೂರುಂ ಭಿತ್ವಾ ವ್ಯಜಾಯತ ॥೮॥**

ವಿಪ್ರರ್ಷಿಯಾದ ಅವನು–ತಾಯಿಯ ಊರುವನ್ನು (ತೊಡೆಯನ್ನು) ಸೀಳಿಕೊಂಡು ಹೊರಗೆ ಬಂದನಾದ ಕಾರಣ, ಔರ್ವನೆಂದೇ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿದನು.

ಔರ್ವಮಹರ್ಷಿಯು, ಕ್ಷತ್ರಿಯರಿಂದ ಕೊಲ್ಲಲ್ಪಟ್ಟ ತನ್ನ ಬಂಧು-ದಾಯಾದರನ್ನು ಸುಪ್ರೀತರನ್ನಾಗಿ ಮಾಡಲು ಪ್ರಪಂಚದಲ್ಲಿರುವ ಪ್ರಾಣಿಗಳೆಲ್ಲವನ್ನೂ ವಿನಾಶಮಾಡಲು ನಿಶ್ಚಯಿಸಿದನು.

ಪರಾಶರ! ಕ್ಷತ್ರಿಯರು ಮಾಡಿದ ಅಪರಾಧಕ್ಕಾಗಿ ಲೋಕವನ್ನೇ ಸಂಪೂರ್ಣವಾಗಿ ವಿನಾಶಮಾಡಿಬಿಡಬೇಕೆಂದು ಔರ್ವನು ನಿಶ್ಚಯಮಾಡಿದನು. ವಿಶ್ವವನ್ನೇ ನಿರ್ಮೂಲಮಾಡಿ ತನ್ಮೂಲಕವಾಗಿ ಕ್ಷತ್ರಿಯರಿಂದ ಸಂಹೃತರಾಗಿದ್ದ ತನ್ನ ಪಿತೃಗಳಿಗೆ ಸಂತುಷ್ಟಿಯನ್ನುಂಟುಮಾಡಬೇಕೆಂದು ನಿಶ್ಚಯಿಸಿದವನಾಗಿ, ಸರ್ವಲೋಕವಿನಾಶಕ್ಕಾಗಿ ಸಂಕಲ್ಪಮಾಡಿ, ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ತನ್ನ ಪಿತೃದೇವತೆಗಳನ್ನು ಸಂತುಷ್ಟಿಗೊಳಿಸುವ ಸಲುವಾಗಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದ ಔರ್ವನು ತಪಸ್ಸಿನ ಪ್ರಭಾವದಿಂದ ದೇವಾಸುರ-ಮಾನುಷಲೋಕಗಳನ್ನೂ ಸಂತಾಪಗೊಳಿಸಿದನು. ತಮ್ಮ ಕುಲದೀಪಕನಾದ ಔರ್ವನು ಘೋರವಾದ ತಪಸ್ಸನ್ನು ಮಾಡುತ್ತಿರುವನೆಂಬುದನ್ನು ಅವನ ಪಿತೃದೇವತೆಗಳು ತಿಳಿದವರಾಗಿ, ಒಡನೆಯೇ ಪಿತೃಲೋಕದಿಂದ ಔರ್ವನ ಬಳಿಗೆ ಬಂದು ಹೇಳಿದರು :

"ಔರ್ವ! ನೀನು ಅತಿಘೋರವಾದ ತಪಶ್ಚರಣೆಯಲ್ಲಿ ನಿರತನಾಗಿರುವೆ. ನಿನ್ನ ತಪಸ್ಸಿನ ಶಕ್ತಿಯೆಷ್ಟೆಂಬುದನ್ನೂ ನಾವು ತಿಳಿದಿರುವೆವು. ನಿನ್ನ ತಪಸ್ಸಿನ ಜ್ವಾಲೆಗಳಿಂದ ಪರಿತಪಿಸುತ್ತಿರುವ ಈ ಮೂರು ಲೋಕಗಳ ಮೇಲೆಯೂ ಕರುಣೆಯಿಡು. ಉಲ್ಬಣಿಸುತ್ತಿರುವ ನಿನ್ನ ಕೋಪವನ್ನು ಹತೋಟಿಗೆ ತೆಗೆದುಕೋ. ಮಗು! ನಿನ್ನ ಪೂರ್ವಜರಾದ, ಜಿತೇಂದ್ರಿಯರಾದ ಭೃಗುಗಳು ಅಸಮರ್ಥರಾಗಿದ್ದು ಕ್ಷತ್ರಿಯರ ಕತ್ತಿಗೀಡಾಗಿ ಪ್ರಾಣತೊರೆದರೆಂದು ಭಾವಿಸಿರುವೆಯಾ? ಹಾಗೆಂದಿಗೂ ತಿಳಿಯಬೇಡ. ನಮಗೆ ಅನೇಕ ಸಹಸ್ರ ವರ್ಷಗಳವರೆಗೂ ಸಾವೇ ಇಲ್ಲದಿದ್ದುದರಿಂದ ಪ್ರಾಪಂಚಿಕವ್ಯವಹಾರಗಳಲ್ಲಿ ಬೇಸತ್ತು, ಕ್ಷತ್ರಿಯರನ್ನು ನೆಪಮಾಡಿಕೊಂಡು, ಸಂತೋಷದಿಂದಲೇ ಸಾವನ್ನಪ್ಪಿದೆವು. ನಮ್ಮ ಮನೆಗಳಲ್ಲಿ ಭೂಮಿಯೊಳಗೆ ಐಶ್ವರ್ಯವನ್ನು ಬಚ್ಚಿಟ್ಟಿದುದಕ್ಕೆ ಕಾರಣವು ಧನದ ಮೇಲಿನ ಆಸೆಯೆಂದು ಭ್ರಮಿಸಬೇಡ. ಕ್ಷತ್ರಿಯರನ್ನು ಪ್ರಚೋದಿಸಿ, ಅವರೊಡನೆ ಜಗಳಮಾಡಿ ಸಾಯುವ ಸಲುವಾಗಿಯೇ ಹಾಗೆ ಮಾಡಿದೆವು. ಸ್ವರ್ಗಪ್ರಾಪ್ತಿಯಲ್ಲಿ ಆಸಕ್ತರಾಗಿದ್ದ ನಮಗೆ

ಆ ಹಣದಿಂದೇನಾಗಬೇಕಾಗಿದೆ? ನಮ್ಮ ಲೋಕದಲ್ಲಿ ಕುಬೇರನು ಯಥೇಚ್ಛವಾಗಿ ದ್ರವ್ಯವನ್ನು ನಮಗಾಗಿ ಸಿದ್ಧಪಡಿಸಿಟ್ಟಿರುವನು. ಮೃತ್ಯುವು ನಮ್ಮನ್ನು ಯಾವ ಕಾರಣದಿಂದಲೂ ಒಯ್ಯಲಾರದೆಂದು ಯಾವಾಗ ತಿಳಿದೆವೋ–ಆಗ ನಾವು ಮೃತ್ಯುವನ್ನಪ್ಪಲು ಈ ಉಪಾಯವನ್ನು ಮಾಡಿದೆವು.

'ಆತ್ಮಹತ್ಯೆಯನ್ನು ಮಾಡಿಕೊಳ್ಳಬಹುದಾಗಿತ್ತಲ್ಲವೇ?'–ಎಂದೂ ನೀನು ಪ್ರಶ್ನಿಸಬಹುದು. ಆತ್ಮಹತ್ಯೆಯು ಮಹಾಪಾಪಕರವಾದುದು.

**ಆತ್ಮಹಾ ಚ ಪುಮಾಂಸ್ತಾತ ನ ಲೋಕಾಲ್ಲಭತೇ ಶುಭಾನ್ ।**
**ತತೋಽಸ್ಮಾಭಿಃ ಸಮೀಕ್ಷ್ಯೈವಂ ನಾತ್ಮನಾತ್ಮಾ ನಿಪಾತಿತಃ ॥೨೦॥**

ಆತ್ಮಹತ್ಯೆಯನ್ನು ಮಾಡಿಕೊಳ್ಳುವವರಿಗೆ ಒಳ್ಳೆಯ ಲೋಕಗಳು ಲಭಿಸಲಾರವೆಂದು ಶ್ರುತಿ-ಸ್ಮೃತಿಗಳು ಸಾರುತ್ತವೆ. ಇದನ್ನು ಯೋಚಿಸಿಯೇ ನಾವು ಪ್ರಾಪಂಚಿಕಜೀವನದಲ್ಲಿ ಅತಿಯಾಗಿ ಬೇಸತ್ತಿದ್ದರೂ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಇಚ್ಛಿಸಲಿಲ್ಲ. ಈ ಕಾರಣದಿಂದ 'ನಮ್ಮಸುಪ್ರೀತಿಗಾಗಿ' ಎಂದು ಮಾಡುತ್ತಿರುವ ಈ ನಿನ್ನ ಘೋರತಪಸ್ಸಿನಿಂದ ನಮಗೆ ಸಂತೋಷವಾಗಲಾರದು. ಆದುದರಿಂದ ಪ್ರಪಂಚವನ್ನು ವಿನಾಶಗೊಳಿಸುವ ಪಾಪಭೂಯಿಷ್ಠವಾದ ಈ ಕಾರ್ಯದಿಂದ ನಿನ್ನ ಮನಸ್ಸನ್ನು ಕೂಡಲೇ ಹಿಂದಕ್ಕೆ ತೆಗೆದುಕೋ. ಕುಮಾರ! ಕ್ಷತ್ರಿಯರನ್ನು ವಿನಾಶಮಾಡಬೇಡ. ಅವರನ್ನು ವ್ಯಾಜವನ್ನಾಗಿಟ್ಟುಕೊಂಡು ಈ ಸಪ್ತಲೋಕಗಳನ್ನೂ ವಿನಾಶಮಾಡಬೇಡ. ತಪಸ್ಸಿನ ಶಕ್ತಿಯೆಲ್ಲವನ್ನೂ ಕ್ಷಣಮಾತ್ರದಲ್ಲಿ ವಿನಾಶಗೊಳಿಸಲಿರುವ ಈ ಕೋಪವನ್ನು ಮೊದಲು ಉಪಸಂಹಾರಮಾಡು."

೧೭೯ನೆಯ ಅಧ್ಯಾಯವು ಮುಗಿಯಿತು.

೧೮೦ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಔರ್ವ ಮತ್ತು ಪಿತೃದೇವತೆಗಳ ಸಂಭಾಷಣೆ : ಔರ್ವನಿಂದ ಸಮುದ್ರದಲ್ಲಿ ಕ್ರೋಧಾಗ್ನಿಯ ವಿಸರ್ಜನೆ

ವಸಿಷ್ಠರು ಮುಂದುವರಿಸಿ ಹೇಳಿದರು :

"ಪರಾಶರ! ಪಿತೃದೇವತೆಗಳ ಮಾತುಗಳನ್ನು ಸಾವಧಾನವಾಗಿ ಕೇಳಿದ ನಂತರ ಔರ್ವನು ಹೇಳತೊಡಗಿದನು :

"ಪಿತೃದೇವತೆಗಳೇ! ನಿಮ್ಮ ಘೋರವಾದ ಹತ್ಯೆಯನ್ನು ನೆನೆದು ಕೋಪದಿಂದ ಉದ್ರಿಕ್ತನಾಗಿ ಪ್ರಪಂಚವನ್ನೇ ವಿನಾಶಮಾಡಬೇಕೆಂದು ಪ್ರತಿಜ್ಞೆಯನ್ನು ಕೈಗೊಂಡಿರುವುದು ನಿಶ್ಚಯ. ಆ ಪ್ರತಿಜ್ಞೆಯು ವ್ಯರ್ಥವಾಗಲೂ ಕೂಡದು. ಪ್ರತಿಜ್ಞೆಯಾಗಲೀ, ಕೋಪವಾಗಲೀ–ನಿಷ್ಪ್ರಯೋಜಕವಾಗುವುದನ್ನು ನಾನು ಸಹಿಸಲಾರೆನು. ನನ್ನ ಪ್ರತಿಜ್ಞಾನುಸಾರವಾಗಿ ನಾನು ನಡೆಯದೇ ಹೋದರೆ–ನನ್ನಲ್ಲಡಗಿರುವ ಕೋಪವು ಖಂಡಿತವಾಗಿಯೂ ಉಪಶಮನವನ್ನು ಹೊಂದುವುದಿಲ್ಲ. ಪ್ರತೀಕಾರವನ್ನು ಮಾಡಿದನಂತರವೇ ಅದು ಉಪಶಮನವಾಗುವುದು. ಹಾಗೆ ಮಾಡದಿದ್ದಲ್ಲಿ–ಬೆಂಕಿಯು ತನ್ನ ಹುಟ್ಟಿಗೆ ಮೂಲವಾದ ಅರಣಿಯನ್ನೇ ಸುಟ್ಟುಹಾಕುವಂತೆ–ಈ ಕೋಪವು ನನ್ನನ್ನೇ ಸುಟ್ಟುಬಿಡುತ್ತದೆ.

**ಯೋ ಹಿ ಕಾರಣತಃ ಕ್ರೋಧಂ ಸಂಜಾತಂ ಕ್ಷನ್ತುಮರ್ಹತಿ ।**
**ನಾಲಂ ಸ ಮನುಜಃ ಸಮ್ಯಕ್ತ್ರಿವರ್ಗಂ ಪರಿರಕ್ಷಿತುಮ್ ॥೩॥**

ನ್ಯಾಯವಾದ ಕಾರಣದಿಂದ ಉತ್ಪನ್ನವಾದ ಕೋಪವನ್ನು ಯಾವಾತನು ಹುದುಗಿಸಿಟ್ಟುಕೊಳ್ಳುವನೋ, ಅದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡುವುದಿಲ್ಲವೋ–ಅವನು ಧರ್ಮಾರ್ಥ-ಕಾಮಗಳನ್ನು ರಕ್ಷಿಸಲು ಸಮರ್ಥನಾಗಲಾರನು.

**ಅಶಿಷ್ಟಾನಾಂ ನಿಯನ್ತಾ ಹಿ ಶಿಷ್ಟಾನಾಂ ಪರಿರಕ್ಷಿತಾ ।**
**ಸ್ಥಾನೇ ರೋಷಃ ಪ್ರಯುಕ್ತಃ ಸ್ಯಾನ್ನೃಪೈಃ ಸರ್ವಜಿಗೀಷುಭಿಃ ॥೪॥**

ಅಪರಾಧಿಗಳ ವಿಷಯದಲ್ಲಿಯೂ ಕೋಪಗೊಳ್ಳದೇ ಅವರನ್ನು ಶಿಕ್ಷಿಸದಿದ್ದರೆ–ಅದು ಧರ್ಮವೆನಿಸುವುದಿಲ್ಲ. ವಿಶ್ವವನ್ನೇ ಜಯಿಸಲಿಚ್ಛಿಸುವ ರಾಜರಿಂದ ಕೋಪವು ದುಷ್ಟರ ಶಿಕ್ಷೆಗೂ–ಶಿಷ್ಟರ ರಕ್ಷಣೆಗೂ ಸಮಯವರಿತು ನಿಯೋಜಿಸಲ್ಪಡುತ್ತದೆ. ದುಷ್ಟರ ವಿಷಯದಲ್ಲಿ ಕೋಪವನ್ನು ತಾಳುವುದು ಧರ್ಮವೆನಿಸುತ್ತದೆ.

ಪಿತೃಗಳೇ! ಕ್ಷತ್ರಿಯರು ಮಾಡಿದ ದುರಾಚಾರದ ವಿಷಯವಾಗಿ ನಾನು ಪ್ರತ್ಯಕ್ಷದರ್ಶಿಯಾಗಿದ್ದೇನೆ. ಅದನ್ನು ಸ್ಮರಿಸಿದೊಡನೆಯೇ ಕೋಪವು ಉಲ್ಬಣಿಸುವುದೇ ಹೊರತು ಉಪಶಮನವಾಗಲಾರದು. ನನ್ನ ತಾಯಿಯು ನನ್ನನ್ನು ರಕ್ಷಿಸುವ ಸಲುವಾಗಿಯೇ ತನ್ನ ಯೋಗಶಕ್ತಿಯಿಂದ ತೊಡೆಯೊಳಗೆ

ನನ್ನನ್ನು ಸೇರಿಸಿದ್ದಳು. ನಾನವಳ ತೊಡೆಯ ಗರ್ಭದಲ್ಲಿದ್ದೆನು. ಕ್ಷತ್ರಿಯಾಧಮರು–ಹೆಂಗಸರು ಮಕ್ಕಳೆಂಬ ವಿವೇಚನೆಯೇ ಇಲ್ಲದೇ, ನನ್ನ ಮಾತಾ-ಪಿತೃವರ್ಗದವರನ್ನು ಕೊಲ್ಲುತ್ತಿದ್ದಾಗ ಅವರು ಮಾಡುತ್ತಿದ್ದ ದಾರುಣವಾದ ಗರ್ಜನೆಗಳನ್ನು ಗರ್ಭಸ್ಥನಾದ ನಾನು ಕೇಳುತ್ತಿದ್ದೆನು. ಕ್ಷತ್ರಿಯಾಧಮರು ಭೃಗುವಂಶೀಯರಾದ ಬ್ರಾಹ್ಮಣಸ್ತ್ರೀಯರ ಗರ್ಭಗಳಲ್ಲಿದ್ದ ಭ್ರೂಣಗಳನ್ನೂ ಹತ್ಯೆಮಾಡಲಾರಂಭಿಸಿದಾಗ ನನ್ನನ್ನು ಈ ಕೋಪವು ಆವರಿಸಿತು.

ಪ್ರಪಂಚವನ್ನು ಜಯಿಸಬೇಕೆಂದು ಇಚ್ಛೆಯಿರುವ ರಾಜನು ತೋರ್ಪಡಿಸುವ ಕೋಪವು ನಿರರ್ಥಕವಾದುದೆಂದು ಹೇಳಲಾಗುವುದಿಲ್ಲ. ಅವನು ತೋರ್ಪಡಿಸುವ ಕೋಪವು ದುಷ್ಟರ ದೌಷ್ಟ್ಯವನ್ನು ನಿಯಂತ್ರಣಮಾಡುವುದರಲ್ಲಿಯೂ–ಶಿಷ್ಟರ ಪಾಲನೆಯಲ್ಲಿಯೂ ಪರ್ಯವಸಾನವಾಗುತ್ತದೆ.

ಪಿತೃಗಳೇ! ನನ್ನ ಕೋಪಕ್ಕೆ ಕಾರಣವನ್ನು ಇನ್ನೂ ವಿವರಿಸಿ ಹೇಳುವೆನು, ಕೇಳಿರಿ. ಆ ಸಮಯದಲ್ಲಿ ಪೂರ್ಣಗರ್ಭವತಿಯರಾದ ನಮ್ಮ ತಾಯಂದಿರು ಮತ್ತು ತಾತಂದಿರು ಕ್ಷತ್ರಿಯರ ಭಯದಿಂದ ಎಲ್ಲ ಲೋಕಗಳಿಗೂ ಧಾವಿಸಿದರು. ಆದರೆ ಅವರಿಗೆ ಎಲ್ಲಿಯೂ ಆಶ್ರಯವು ಸಿಗಲಿಲ್ಲ. ಭೃಗುವಂಶದ ಸ್ತ್ರೀಯರಿಗೆ ಆ ಸಮಯದಲ್ಲಿ ರಕ್ಷಕರಾರೂ ಇರಲೇ ಇಲ್ಲ. ಅನೇಕರು ಕ್ಷತ್ರಿಯಾಧಮರ ಕೈಗೆ ಸಿಕ್ಕಿ ಹತರಾದರು. ಗರ್ಭಿಣಿಯರಾದ ಸ್ತ್ರೀಯರು ಉಳಿಯುವ ಸಾಧ್ಯತೆಯೇ ಇರಲಿಲ್ಲ. ಭಾರ್ಗವಬ್ರಾಹ್ಮಣರ ಭ್ರೂಣಗಳನ್ನೂ ಉಳಿಸಕೂಡದೆಂಬುದು ಕ್ಷತ್ರಿಯರ ಪ್ರತಿಜ್ಞೆಯಾಗಿತ್ತು. ಆ ಸಮಯದಲ್ಲಿ ನನ್ನ ತಾಯಿಯು ಭೃಗುವಂಶದ ಬೀಜವನ್ನಾದರೂ ಉಳಿಸುವ ಆಶಯದಿಂದ ಪರಮಾದ್ಭುತವಾದ ಕಾರ್ಯವನ್ನೇ ಮಾಡಿದಳು. ತನ್ನ ಯೋಗಶಕ್ತಿಯಿಂದ ಗರ್ಭವನ್ನು ತೊಡೆಯೊಳಗೆ ಸೇರಿಸಿಬಿಟ್ಟಳು. ಹೀಗೆ ಮಾಡಿದುದರಿಂದ ನಮ್ಮ ತಾಯಿಯೂ ಉಳಿದುಕೊಂಡಳು ; ನಾನೂ ಉಳಿಯುವಂತೆ ಮಾಡಿದಳು.

ಪಿತೃದೇವತೆಗಳೇ! ಇದು ಲೋಕನ್ಯಾಯ :

**ಪ್ರತಿಷೇದ್ಧಾ ಹಿ ಪಾಪಸ್ಯ ಯದಾ ಲೋಕೇಷು ವಿದ್ಯತೇ ।**
**ತದಾ ಸರ್ವೇಷು ಲೋಕೇಷು ಪಾಪಕೃನ್ನೋಪಪದ್ಯತೇ ॥೯॥**

ಪಾಪಕಾರ್ಯಗಳಿಗೆ ಪ್ರತಿಷೇಧವನ್ನು ಮಾಡುವವರು ಇರುವವರೆಗೆ, ಪಾಪಕಾರ್ಯಗಳಿಗೆ ಶಿಕ್ಷೆಯಿರುವವರೆಗೆ, ಪಾಪಕಾರ್ಯಗಳನ್ನು ಮಾಡಿದರೆ ಕಠಿನಶಿಕ್ಷೆಯಾಗುವುದೆಂದು ತಿಳಿದಿರುವವರೆಗೆ–ಯಾವ ಲೋಕದಲ್ಲಿಯೂ ಪಾಪಕಾರ್ಯಗಳನ್ನು ಮಾಡುವವನಿರುವುದಿಲ್ಲ. ಪಾಪಕಾರ್ಯಕ್ಕೆ ತಕ್ಕುದಾದ ಶಿಕ್ಷೆಯಾಗಲೇಬೇಕು.

**ಯದಾ ತು ಪ್ರತಿಷೇದ್ಧಾರಂ ಪಾಪೋ ನ ಲಭತೇ ಕ್ವಚಿತ್ ।**
**ತಿಷ್ಠನ್ತಿ ಬಹವೋ ಲೋಕಾಸ್ತದಾ ಪಾಪೇಷು ಕರ್ಮಸು ॥೧೦॥**

ತಾನು ಮಾಡಿದ ಪಾಪಕಾರ್ಯಕ್ಕೆ ಪ್ರತಿಷೇಧಿಸುವವನೇ ಇಲ್ಲವೆಂದು ಪಾಪಕರ್ಮಿಯು ತಿಳಿದನಾದರೆ–ಆಗ ಬಹುಜನರು ಪಾಪಕರ್ಮಗಳಲ್ಲಿಯೇ ನಿರತರಾಗುತ್ತಾರೆ. ಪಾಪಕರ್ಮಗಳನ್ನು ಮಾಡುವವರೇ ಹೆಚ್ಚುತ್ತಾ ಹೋಗುತ್ತಾರೆ. ಕ್ಷತ್ರಿಯರು ಮಾಡಿದ ದುಷ್ಕಾರ್ಯಕ್ಕೆ ಆ ಸಮಯದಲ್ಲಿ ಸ್ವಲ್ಪವಾದರೂ ಪ್ರತಿಷೇಧವಿದ್ದಿದ್ದರೆ ಇಂತಹ ಬಹುದಾರುಣವಾದ ಕೊಲೆ ಗಳನ್ನು ಮಾಡಲು ಅವರು ಪ್ರವೃತ್ತರಾಗುತ್ತಿರಲಿಲ್ಲ. ಆದರೆ ದುಷ್ಟರನ್ನು ಪ್ರತಿಷೇಧಿಸಲು ಸಾಮರ್ಥ್ಯವಿಲ್ಲದವರ ರೀತಿಯೇ ಬೇರೆ ಆಗಿದೆ.

**ಜಾನನ್ನಪಿ ಚ ಯಃ ಪಾಪಂ ಶಕ್ತಿಮಾನ್ನ ನಿಯಚ್ಛತಿ ।**
**ಈಶಃ ಸನ್ಸೋಽಪಿ ತೇನೈವ ಕರ್ಮಣಾ ಸಮ್ಪ್ರಯುಜ್ಯತೇ ॥೧೧॥**

ಶಕ್ತಿಮಂತನಾದವನು–ಪಾಪಕರ್ಮಿಗಳನ್ನು ಪ್ರತಿಷೇಧಿಸಲು ಸಮರ್ಥ ನಾಗಿದ್ದೂ ತನ್ನ ಕಣ್ಮುಂದೆಯೇ ನಡೆಯುತ್ತಿರುವ ಪಾಪಕರ್ಮಗಳನ್ನು ನೋಡುತ್ತಾ ಖಂಡಿತವಾಗಿಯೂ ಸುಮ್ಮನಿರಬಾರದು. ಹಾಗೆ ಸುಮ್ಮನಿದ್ದರೆ ಅಂತಹವನು ರಾಜನೇ ಆಗಿದ್ದರೂ ಪಾಪಿಷ್ಠರು ಮಾಡುವ ಪಾಪಕರ್ಮಗಳಲ್ಲಿ ಸಹಭಾಗಿಯಾಗುತ್ತಾನೆ. ಅವನಿಗೂ ಪಾಪದ ಲೇಪವು ತಪ್ಪಿದ್ದಲ್ಲ.

ಪ್ರಾಣವೆಂಬುದು ಪ್ರಾಣಿಸಾಮಾನ್ಯಕ್ಕೆ ಪರಮಪ್ರಿಯವೆಂದು ತಿಳಿ ದಿದ್ದೂ ಕ್ಷತ್ರಿಯಾಧಮರು ಭೃಗುವಂಶೀಯರನ್ನು ಆಶ್ರಮದಿಂದ ಹೊರಕ್ಕೆ ಸೆಳೆದು, ಹೆಂಗಸರು, ಮಕ್ಕಳು, ಮುದುಕರು–ಎಂಬ ವಿವೇಚನೆಯೇ ಇಲ್ಲದೇ ತುಂಡು-ತುಂಡಾಗಿ ಕತ್ತರಿಸುತ್ತಿದ್ದಾಗ ಶಕ್ತನಾದ ಯಾವ ರಾಜನಾಗಲೀ ಅವರ ಸಂರಕ್ಷಣೆಗೆ ಬರಲಿಲ್ಲ. ಆದರಿಂದಲೇ ನಾನಿಷ್ಟು ಕ್ರುದ್ಧನಾಗಿದ್ದೇನೆ.

ನಿರ್ದೋಷಿಗಳ ಕೊಲೆಯಾಗುತ್ತಿದ್ದ ಕಾಲದಲ್ಲಿ ಪ್ರತಿಷೇಧಿಸದೇ ಮೌನ ವಹಿಸಿದ ಈ ಪ್ರಪಂಚವನ್ನೇ ವಿನಾಶಮಾಡುವ ಸಾಮರ್ಥ್ಯವು ನನಗಿದೆ. ಆದುದರಿಂದ, ಪಿತೃಗಳೇ! ದಯೆಯಿಟ್ಟು ಕ್ಷಮಿಸಿರಿ. ನಿಮ್ಮ ಸಲಹೆಯಂತೆ ನಡೆಯಲು ನನಗೆ ಖಂಡಿತವಾಗಿಯೂ ಸಾಧ್ಯವಿಲ್ಲ. ಪಾಪಿಷ್ಠರನ್ನು ಶಿಕ್ಷಿಸಲು ಸಮರ್ಥನಾಗಿರುವ ನಾನು ಕರ್ತವ್ಯಪರಿಪಾಲನಮಾಡದೇ ಉಪೇಕ್ಷೆಮಾಡಿದೆ ನಾದರೆ ಆ ಪಾಪಿಷ್ಠರ ಪಾಪದಿಂದ ಭೀತಿಯು ನನಗೂ ತಪ್ಪಿದ್ದಲ್ಲ. ಪ್ರಪಂಚ ವನ್ನೇ ಸುಡಲು ಸಮರ್ಥವಾಗಿರುವ ಈ ನನ್ನ ಕೋಪಾಗ್ನಿಯನ್ನು ನಿಗ್ರಹಿಸಿದೆ ನಾದರೆ ಅದು ನನ್ನನ್ನೇ ಭಸ್ಮಮಾಡಿಬಿಡುತ್ತದೆ. ನೀವು ಸರ್ವಲೋಕಗಳಿಗೂ ಹಿತವನ್ನೇ ಬಯಸುವವರೆಂಬುದು ನನಗೂ ತಿಳಿದಿದೆ. ಆದುದರಿಂದ ನನಗೂ, ಲೋಕಗಳಿಗೂ ಹಿತವಾಗುವಂತೆ ಮಾಡಿರಿ."

ಪಿತೃದೇವತೆಗಳು ಹೇಳುತ್ತಾರೆ :

**ಯ ಏಷ ಮನ್ಯುಜಸ್ತೇಽಗ್ನಿರ್ಲೋಕಾನಾದಾತುಮಿಚ್ಛತಿ ।**
**ಅಪ್ಸು ತಂ ಮುಞ್ಚ ಭದ್ರಂ ತೇ ಲೋಕಾಹ್ಯಪ್ಸು ಪ್ರತಿಷ್ಠಿತಾಃ ॥೧೭॥**

"ಮಗು! ನಿನ್ನ ಕೋಪದಿಂದ ಸಮುದ್ಭೂತವಾಗಿರುವ ಅಗ್ನಿಯು ಲೋಕಗಳನ್ನೇ ಭಕ್ಷಿಸಿಬಿಡಲು ಇಚ್ಛಿಸುತ್ತಿದೆಯಲ್ಲವೇ? ಲೋಕಗಳೆಲ್ಲವೂ ನೀರಿನಲ್ಲಿ ಪ್ರತಿಷ್ಠಿತವಾಗಿವೆ. ಆದುದರಿಂದ ನಿನ್ನ ಕೋಪಾಗ್ನಿಯನ್ನು ನೀರಿನಲ್ಲಿ ವಿಸರ್ಜಿಸಿಬಿಟ್ಟರೆ ಆ ಕೋಪಾಗ್ನಿಗೆ ಲೋಕಗಳನ್ನೇ ಬಲಿಕೊಟ್ಟಂತಾಗುವುದು. ನಿನಗೂ ಶುಭವಾಗುತ್ತದೆ.

**ಆಪೋಮಯಾಃ ಸರ್ವರಸಾಃ ಸರ್ವಮಾಪೋಮಯಂ ಜಗತ್ ।**
**ತಸ್ಮಾದಪ್ಸು ವಿಮುಞ್ಚೇಮಂ ಕ್ರೋಧಾಗ್ನಿಂ ದ್ವಿಜಸತ್ತಮ ॥೧೮॥**

ಸರ್ವರಸಗಳೂ ಆಪೋಮಯವಾಗಿರುತ್ತವೆ. ಅಂತೆಯೇ ಜಗತ್ತೆಲ್ಲವೂ ಜಲದ ಪರಿಣಾಮವೇ ಆಗಿರುವುದು. ಆದುದರಿಂದ ನೀರಿನಲ್ಲಿ ನಿನ್ನ ಕ್ರೋಧಾಗ್ನಿಯನ್ನು ವಿಸರ್ಜಿಸು.

ಬ್ರಾಹ್ಮಣೋತ್ತಮ! ನಾವು ಹಿಂದೆಯೇ ಹೇಳಿದಂತೆ ಲೋಕಗಳೆಲ್ಲವೂ ಜಲಮಯವಾದುದೆಂದು ಶ್ರುತಿ-ಸ್ಮೃತಿಗಳೂ ಸಾರುತ್ತವೆ. ನಿನಗೆ ಲೋಕ ಗಳನ್ನು ವಿನಾಶಮಾಡುವ ಇಚ್ಛೆಯಿರುವುದಾದರೆ ಮಹೋದಧಿಯಲ್ಲಿ

ವಿಸರ್ಜಿತವಾಗುವ ನಿನ್ನ ಕೋಪಾಗ್ನಿಯು ಲೋಕಕ್ಕೆ ಆಧಾರಭೂತವಾದ ಜಲವನ್ನು ಸರ್ವಕಾಲದಲ್ಲಿಯೂ ದಹಿಸುತ್ತಿರಲಿ.

ನೀನು ಹೀಗೆ ಮಾಡಿದೆಯಾದರೆ (ಸಮುದ್ರದಲ್ಲಿ ನಿನ್ನ ಕೋಪಾಗ್ನಿಯನ್ನು ವಿಸರ್ಜಿಸಿದೆಯಾದರೆ) ನೀನು ಮಾಡಿದ ಪ್ರತಿಜ್ಞೆಯು ಸತ್ಯವಾಗಿ ಪರಿಣಮಿಸುತ್ತದೆ. ದೇವತೆಗಳಿಂದ ಸಹಿತವಾದ ಈ ಸರ್ವಲೋಕಗಳೂ ವಿನಾಶಹೊಂದುವುದಿಲ್ಲ."

ಪರಾಶರ! ಪಿತೃಗಳು ಹೇಳಿದಂತೆ ಔರ್ವನು ಕ್ರೋಧದಿಂದ ಸಮುದ್ಭೂತವಾಗಿದ್ದ ಅಗ್ನಿಯನ್ನು ಸಮುದ್ರದಲ್ಲಿ ಉತ್ಸರ್ಜಿಸಿದನು. ಔರ್ವನ ಆ ಕೋಪಾಗ್ನಿಯು ಕುದುರೆಯ ಶಿರಸ್ಸನ್ನು ಧರಿಸಿ, ಬಾಯಿಂದ ಬೆಂಕಿಯ ಜ್ವಾಲೆಗಳನ್ನು ಅನವರತವಾಗಿ ಕಕ್ಕುತ್ತಾ, ಮಹೋದಧಿಯ ನೀರನ್ನು ಸತತವಾಗಿ ಹೀರುತ್ತಿರುತ್ತದೆ. ಆ ವಡವಾನಲದ ನಿಜಸ್ವರೂಪವನ್ನು ವೇದವಿದರು ತಿಳಿದಿರುತ್ತಾರೆ.

ಪರಾಶರ! ನೀನು ಜ್ಞಾನಿಗಳಲ್ಲಿ ಶ್ರೇಷ್ಠನಾಗಿರುವೆ. ಪರಲೋಕಗಳ ವಿಷಯಗಳನ್ನೂ ಸಂಪೂರ್ಣವಾಗಿ ತಿಳಿದವನಾಗಿರುವೆ. ಲೋಕಗಳ ವಿನಾಶದಿಂದ ಎಷ್ಟು ಅನರ್ಥಗಳು ಸಂಭವಿಸುವುವೆಂಬ ವಿಷಯವೂ ನಿನಗೆ ತಿಳಿದಿದೆ. ಆದುದರಿಂದ ಯಾರೋ ಕೆಲವರು ಮಾಡಿದ ತಪ್ಪಿಗಾಗಿ ಲೋಕಗಳನ್ನೇ ವಿನಾಶಮಾಡಲು ಯತ್ನಿಸುವುದು ಖಂಡಿತವಾಗಿಯೂ ಯುಕ್ತವೆನಿಸುವುದಿಲ್ಲ."

೧೮೦ನೆಯ ಅಧ್ಯಾಯವು ಮುಗಿಯಿತು.

೧೮೧ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಪುಲಸ್ತ್ಯರೇ ಮುಂತಾದ ಮಹರ್ಷಿಗಳ ಉಪದೇಶದಂತೆ ಪರಾಶರನಿಂದ ರಾಕ್ಷಸಯಾಗಸಮಾಪ್ತಿ

"ಪಾರ್ಥ! ವಸಿಷ್ಠರು ಔರ್ವನ ಕಥೆಯನ್ನು ಪರಾಶರನಿಗೆ ಹೇಳಿ, ಅವನನ್ನು ಸ್ವಲ್ಪಮಟ್ಟಿಗೆ ಸಮಾಧಾನಪಡಿಸಿದರು. ಪ್ರಪಂಚವನ್ನೇ ವಿನಾಶಮಾಡಬೇಕೆಂದಿದ್ದ ನಿರ್ಧಾರವನ್ನು ಪರಾಶರನು ಬದಲಾಯಿಸಿದನು. ಆದರೆ ತಂದೆಯನ್ನು ಭಕ್ಷಿಸಿದ ರಾಕ್ಷಸರ ವಂಶವನ್ನು ನಿರ್ಮೂಲಮಾಡಿಯೇ ತೀರುವೆ

ನೆಂದು ನಿಶ್ಚಯಿಸಿದನು. ವೇದ-ವೇದಾಂಗಪಾರಂಗತನಾದ ಪರಾಶರನು ಒಂದು ರಾಕ್ಷಸಯಾಗವನ್ನೇ ಪ್ರಾರಂಭಿಸಿದನು. ರಾಕ್ಷಸರೆಲ್ಲರೂ ಆಬಾಲ ವೃದ್ಧರಾದಿಯಾಗಿ ಮಹರ್ಷಿಯ ಮಂತ್ರೋಚ್ಚಾರಣೆಯಿಂದ ಆಕರ್ಷಿಸಲ್ಪಟ್ಟ ವರಾಗಿ ಪತಂಗದ ಹುಳುಗಳಂತೆ ಯಜ್ಞಕುಂಡದಲ್ಲಿ ಬಂದು ಬೀಳುತ್ತಿದ್ದರು. ವಸಿಷ್ಠರಿಗೆ ತಮ್ಮ ಮೊಮ್ಮಗನು ಮಾಡುತ್ತಿದ್ದ ಯಾಗದಲ್ಲಿ ಆಸಕ್ತಿಯಿಲ್ಲ ದಿದ್ದರೂ, ರಾಕ್ಷಸರನ್ನು ಯಜ್ಞದ ಮೂಲಕವಾಗಿಯೇ ನಿರ್ಮೂಲಮಾಡುವೆ ನೆಂಬ ಪರಾಶರನ ಎರಡನೆಯ ಪ್ರತಿಜ್ಞೆಗೆ ಭಂಗಮಾಡಲು ಪ್ರಯತ್ನಿಸಲಿಲ್ಲ. ಆ ಮಹಾಯಜ್ಞದಲ್ಲಿ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ–ಎಂಬ ಮೂರು ಅಗ್ನಿಗಳ ಮಧ್ಯಭಾಗದಲ್ಲಿ ಕುಳಿತಿದ್ದ ಪರಾಶರನು ನಾಲ್ಕನೆಯ ಅಗ್ನಿ ಯಂತೆಯೇ ಪ್ರಕಾಶಿಸುತ್ತಿದ್ದನು. ಮೋಡದಿಂದ ಹೊರಬಂದ ರವಿಯಂತೆ– ಪರಾಶರನು ಆ ಯಜ್ಞವೇದಿಕೆಯ ಮೇಲೆ ಕುಳಿತು, ಯಜ್ಞಭೂಮಿಯ ಪ್ರಾಂಗಣವನ್ನೆಲ್ಲಾ ತನ್ನ ದಿವ್ಯವಾದ ತೇಜಸ್ಸಿನಿಂದ ಬೆಳಗುತ್ತಿದ್ದನು. ಯಜ್ಞೇಶ್ವರನಿಗೆ ಘೃತಾಹುತಿಯು ಯಥೇಚ್ಛವಾಗಿ ಸಲ್ಲಿಸಲ್ಪಡುತ್ತಿದ್ದಿತು.

ಅಲ್ಲಿಗೆ ಆಗಮಿಸಿದ್ದ ವಸಿಷ್ಠಾದಿಮಹರ್ಷಿಗಳು ದೀಪ್ಯಮಾನವಾದ ತೇಜಸ್ಸನ್ನು ಹೊಂದಿದ್ದ ಪರಾಶರನನ್ನು ಎರಡನೆಯ ಸೂರ್ಯನೆಂದೇ ಭಾವಿಸಿದರು.

ರಾಕ್ಷಸರ ಮಾರಣಹೋಮವು ಅವ್ಯಾಹತವಾಗಿ ನಡೆಯುತ್ತಿದ್ದಾಗ ಉದಾರಿಗಳಾದ ಅತ್ರಿಮಹರ್ಷಿಗಳು ಆ ಯಾಗವನ್ನು ಹೇಗಾದರೂ ಮಾಡಿ ನಿಲ್ಲಿಸಬೇಕೆಂಬ ಅಭಿಲಾಷೆಯಿಂದ ಅಲ್ಲಿಗೆ ಆಗಮಿಸಿದರು. (ಪರಾಶರನ ಹೊರತು) ಬೇರೆಯವರಿಂದ ಮಾಡಲು ದುಃಸಾಧ್ಯವಾದ ರಾಕ್ಷಸಸತ್ರವನ್ನು ಒಡನೆಯೇ ಮುಗಿಸಲು ಇಚ್ಛಿಸಿ ಯಜ್ಞಶಾಲೆಗೆ ಬಂದರು. ಅವರೊಡನೆ ಪುಲಸ್ತ್ಯ, ಪುಲಹ, ಕ್ರತು, ಮಹಾಕ್ರತು–ಇವರೆಲ್ಲರೂ ರಾಕ್ಷಸರನ್ನು ರಕ್ಷಿಸುವ ಸಲುವಾಗಿ ಪರಾಶರನ ಯಾಗಮಂಟಪಕ್ಕೆ ಬಂದರು.

ಅನೇಕ ರಾಕ್ಷಸರು ತಮ್ಮ ಕಣ್ಣೆದುರಿನಲ್ಲಿಯೇ ಮಂತ್ರದಿಂದ ಆಹೂತ ರಾಗಿ, ಯಜ್ಞೇಶ್ವರನಲ್ಲಿ ಬಿದ್ದು ಪ್ರಾಣಬಿಡುತ್ತಿರುವುದನ್ನು ನೋಡುತ್ತಿದ್ದ ಶತ್ರುನಿಬರ್ಹಣನಾದ ಪುಲಸ್ತ್ಯ ಬ್ರಹ್ಮನು ಪರಾಶರನನ್ನು ಕುರಿತು ಹೇಳಿದನು:

"ಮಗು, ಪರಾಶರ! ನೀನೀಗ ಮಾಡುತ್ತಿರುವ ರಾಕ್ಷಸಯಾಗಕ್ಕೆ ಪ್ರತಿಬಂಧಕವೇ ಇಲ್ಲವಲ್ಲವೇ? ನಿಮ್ಮ ತಂದೆಯನ್ನಾಗಲೀ, ನಿಮ್ಮ ತಂದೆಯ ಸಾವನ್ನಾಗಲೀ, ಆ ಸಾವಿಗೆ ಕಾರಣವನ್ನಾಗಲೀ–ತಿಳಿಯದೇ ನಿರ್ದೋಷಿಗಳಾದ ಈ ಸಾವಿರಾರು ರಾಕ್ಷಸರ ಪ್ರಾಣಾಪಹಾರದಿಂದ ನಿನಗೆ ಸಂತೋಷವುಂಟಾಗುವುದೇ?

**ಪ್ರಜೋಚ್ಛೇದಮಿಮಂ ಮಹ್ಯಂ ನ ಹಿ ಕರ್ತುಂ ತ್ವಮರ್ಹಸಿ ।**
**ನೈಷ ತಾತ ದ್ವಿಜಾತೀನಾಂ ಧರ್ಮೋ ದೃಷ್ಟಸ್ತಪಸ್ವಿನಾಮ್ ॥೧೨॥**

ನನ್ನ ಸಂತಾನಪರಂಪರೆಯಾದ ಜೀವಕೋಟಿಯನ್ನು ಈ ರೀತಿಯಲ್ಲಿ ನಿಷ್ಕಾರಣವಾಗಿ ವಧೆಮಾಡುತ್ತಿರುವುದು ಸರ್ವಥಾ ಯೋಗ್ಯವಲ್ಲ. ಮಗುವೇ! ನೀನು ಮಾಡುತ್ತಿರುವುದು ಬ್ರಾಹ್ಮಣರಿಗೆ ಯೋಗ್ಯವಾದ ಕ್ರಿಯೆಯೂ ಆಗಿರುವುದಿಲ್ಲ.

**ಶಮ ಏವ ಪರೋ ಧರ್ಮಸ್ತಮಾಚರ ಪರಾಶರ ।**
**ಅಧರ್ಮಿಷ್ಠಂ ವರಿಷ್ಠಃ ಸನ್ಕುರುಷೇ ತ್ವಂ ಪರಾಶರ ॥೧೩॥**

ಪರಾಶರ! ಬ್ರಾಹ್ಮಣರು ಯಾವಾಗಲೂ ತಪಃಸ್ವಾಧ್ಯಾಯನಿರತರಾಗಿರಬೇಕು. ಶಾಂತಿಯೇ ಬ್ರಾಹ್ಮಣರಿಗಿರುವ ಪರಮಧರ್ಮ. ಆದುದರಿಂದ ಯಾವಾಗಲೂ ಶಾಂತನಾಗಿರುವುದನ್ನು ಅಭ್ಯಾಸಮಾಡು. ವಾಸಿಷ್ಠ! ನೀನು ಮಹಾತ್ಮರಾದ ವಸಿಷ್ಠರ ಕುಲೋತ್ಪನ್ನನಾಗಿದ್ದು, ವೇದ-ವೇದಾಂಗಗಳನ್ನು ಅಭ್ಯಸಿಸಿ, ಧರ್ಮಸೂಕ್ಷ್ಮವನ್ನೂ ತಿಳಿದವನಾಗಿ–ಇಂತಹ ದುಷ್ಟವಾದ, ಹೇಯವಾದ, ಧರ್ಮಕ್ಕೆ ವಿರುದ್ಧವಾದ ಕಾರ್ಯದಲ್ಲಿ ತೊಡಗುವುದೇ? ಧರ್ಮಾತ್ಮನಾದ ಶಕ್ತಿಯು ಸದ್ಗತಿಯನ್ನು ಹೊಂದಿರುವನು. ನೀನು ಮಾಡುವ ಪಾಪಕಾರ್ಯದ ಫಲವು ನಿನ್ನ ತಂದೆಗೂ ಲಭಿಸಿ, ಅವನನ್ನೂ ಪತಿತನನ್ನಾಗಿ ಮಾಡುವುದಾಗಿದೆ. ಅದಕ್ಕೆ ಕಾರಣನಾಗಬೇಡ.

ಶಾಕ್ತನೇ! ನಿಮ್ಮ ತಂದೆಯ ಮರಣವು ಹೇಗೆ ಉಂಟಾಯಿತು? ಅದಕ್ಕೆ ಕಾರಣರಾರು?–ಎಂಬುದನ್ನು ಆಲೋಚಿಸು. ಅವನಿತ್ತ ಶಾಪದ ಫಲವಾಗಿಯೇ ಅವನಿಗೆ ಮೃತ್ಯುವು ಒದಗಿಬಂದಿತು. ತಾನು ಮಾಡಿದ ತಪ್ಪಿನಿಂದಲೇ ಶಕ್ತಿಯು ಸ್ವರ್ಗಕ್ಕೆ ಒಯ್ಯಲ್ಪಟ್ಟನು. ನನ್ನಿಂದ ಸೃಷ್ಟಿಸಲ್ಪಟ್ಟಿ

ರುವ ರಾಕ್ಷಸಕೋಟಿಯಲ್ಲಿ ಶಕ್ತಿಯಂತಹ ಮಹಾತಪಸ್ವಿಯನ್ನು ನುಂಗಲು ಸಮರ್ಥರಾದವರು ಒಬ್ಬರಾದರೂ ಇರುವುದಿಲ್ಲ. ಶಕ್ತಿಯು ತಾನಾಗಿಯೇ ರಾಜನಿಗೆ ಶಾಪದ ಮೂಲಕವಾಗಿ ತನ್ನನ್ನು ನುಂಗಿಹಾಕುವ ಸಾಮರ್ಥ್ಯವನ್ನಿತ್ತು ಅದರ ಫಲವಾಗಿ ತಾನೇ ಬಲಿಯಾದನು. ಆ ಸಮಯದಲ್ಲಿ ವಿಶ್ವಾಮಿತ್ರನೂ ನೆಪಮಾತ್ರಕ್ಕೆ ಕಾರಣನಾದನು. ಶಕ್ತಿಯು ಮಾತ್ರವಲ್ಲದೇ ಕಲ್ಮಾಷಪಾದನೂ ಸ್ವರ್ಗದಲ್ಲಿ ಸುಖದಿಂದಿರುವನು. ಶಕ್ತಿಯ ಅನುಜರೂ ಸ್ವರ್ಗದಲ್ಲಿ ದೇವತೆಗಳೊಡನೆ ಆನಂದದಿಂದ ಕಾಲಕಳೆಯುತ್ತಿರುವರು.

ನಿನ್ನ ಪಿತಾಮಹರಾದ ವಸಿಷ್ಠರಿಗೆ ಈ ಎಲ್ಲ ವಿಷಯಗಳೂ ತಿಳಿದಿವೆ. ದೋಷರಹಿತರಾದ ಈ ಸಾವಿರಾರು ಮಂದಿ ರಾಕ್ಷಸರ ನಿರ್ಮೂಲನಕ್ಕೂ ನೀನು ನಿಮಿತ್ತಮಾತ್ರನಾಗಿರುವೆ. ವಿಧಿನಿಯಮದಂತೆ ರಾಕ್ಷಸರ ವಿನಾಶವು ಸಾಕಷ್ಟಾಗಿದೆ. ಇಲ್ಲಿಗೆ ನಿನ್ನ ಯಾಗವನ್ನು ಪೂರ್ಣಮಾಡು."

ಪುಲಸ್ತ್ಯ ಬ್ರಹ್ಮನ ಮಾತಿನಂತೆ ಮತ್ತು ವಸಿಷ್ಠರ ಆದೇಶದಂತೆ ಶಕ್ತಿಯ ಮಗನಾದ ಪರಾಶರನು ಯಜ್ಞವನ್ನು ಸಮಾಪನಮಾಡಿದನು. ರಾಕ್ಷಸರನ್ನು ಆಹುತಿಕೊಡಲು ಪ್ರತಿಷ್ಠಾಪನೆಮಾಡಿದ್ದ ಯಜ್ಞೇಶ್ವರನನ್ನು ಹಿಮವತ್ಪರ್ವತದ ಉತ್ತರಭಾಗದಲ್ಲಿರುವ ನಿಬಿಡವಾದ ಕಾಡಿನಲ್ಲಿ ವಿಸರ್ಜಿಸಿದನು. ಅಂದು ಪರಾಶರನು ವಿಸರ್ಜಿಸಿದ ಅಗ್ನಿಯು ಇಂದಿಗೂ ಪರ್ವಕಾಲಗಳಲ್ಲಿ ಆ ಪ್ರದೇಶದಲ್ಲಿರುವ ರಾಕ್ಷಸರನ್ನೂ, ಮರ-ಗಿಡ-ಬಳ್ಳಿಗಳನ್ನೂ, ಬಂಡೆಗಳನ್ನೂ ಆಹುತಿಯನ್ನಾಗಿ ತೆಗೆದುಕೊಳ್ಳುತ್ತಿದೆ."

೧೮೧ನೆಯ ಅಧ್ಯಾಯವು ಮುಗಿಯಿತು.

೧೮೨ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಕಲ್ಮಾಷಪಾದನಿಗೆ ಆಂಗೀರಸೀಬ್ರಾಹ್ಮಣಿಯ ಶಾಪ ಮತ್ತು ಅದರ ಪರಿಣಾಮ

(ಗಂಧರ್ವನು ಹೇಳಿದ ವಸಿಷ್ಠರ ಕಥೆಯಿಂದ ವಸಿಷ್ಠರ ವಿಷಯದಲ್ಲಿ ಅಪಾರವಾದ ಭಕ್ತಿ-ಗೌರವಗಳು ಹುಟ್ಟುವುದು ಸಹಜ. ಆದರೆ ಒಂದು ವಿಷಯದಲ್ಲಿ ಮಾತ್ರ ಮಾನವನ ಮನಸ್ಸು ಅಳುಕುತ್ತದೆ. ಮಹಾಮಹಿಮ ರಾದ, ಜಿತೇಂದ್ರಿಯರಾದ, ಆತ್ಮದರ್ಶಿಗಳಾದ ವಸಿಷ್ಠರು ಕಲ್ಮಾಷಪಾದನ

ಪತ್ನಿಯೊಡನೆ ಸೇರಿ ವಂಶದ ಅಭಿವೃದ್ಧಿಗೆ ಕಾರಣರಾದರು. ಧರ್ಮಸೂಕ್ಷ್ಮ ವನ್ನರಿತ ಮಹರ್ಷಿಗಳು ಮಾಡಿದ ಕಾರ್ಯದಲ್ಲಿ ದೋಷವನ್ನೆಣಿಸುವ ಧೈರ್ಯವು ಯಾರಿಗೂ ಇಲ್ಲವಾದರೂ ಸ್ವಾಭಾವಿಕವಾಗಿಯೇ ಮಹರ್ಷಿಗಳು ಹೀಗೇಕೆ ಮಾಡಿದರು? – ಎಂಬ ಮಾನಸಿಕವಿಕಲ್ಪವು ಉಂಟಾಗಿಯೇ ತೀರು ವುದು. ಅರ್ಜುನನ ಮನಸ್ಸಿನಲ್ಲಿಯೂ ಇದೇ ವಿಧವಾದ ಮಾನಸಿಕವಿಕಲ್ಪ ವುಂಟಾಯಿತು.)

ಕಿರೀಟಿಯು ಗಂಧರ್ವನನ್ನು ಸ್ಪಷ್ಟವಾಗಿಯೇ ಕೇಳಿದನು :

"ಗಂಧರ್ವರಾಜ! ಯಾವ ಕಾರಣದಿಂದ ಕಲ್ಮಾಷಪಾದನು ತನ್ನ ಧರ್ಮಪತ್ನಿಯನ್ನು ಮಹಾಮಹಿಮರಾದ ವಸಿಷ್ಠರೊಡನೆ ಸೇರುವಂತೆ ಆಜ್ಞಾಪಿಸಿದನು? ಧರ್ಮಪರಾಯಣರಾದ ವಸಿಷ್ಠರೇಕೆ ಅಗಮ್ಯಾಗಮನವನ್ನು ಮಾಡಿದರು? ಮಹರ್ಷಿಗಳಾದ ವಸಿಷ್ಠರು ಈ ಒಂದು ವಿಷಯದಲ್ಲಿ ತಪ್ಪಿನಡೆದರೇ?–ನನಗುಂಟಾಗಿರುವ ಈ ಸಂಶಯವನ್ನು ದಯೆಯಿಟ್ಟು ನಿವಾರಣೆಮಾಡುವೆಯಾ?"

ಗಂಧರ್ವನು ಮಂದಸ್ಮಿತವಾಗಿ ಹೇಳಿದನು :

"ಧನಂಜಯ! ನಿನ್ನ ಸಂಶಯವನ್ನು ನಿವಾರಣೆಮಾಡುವೆನು. ವಸಿಷ್ಠರ ಮತ್ತು ವಿಶ್ವಾಮಿತ್ರರ ವಿಷಯವಾಗಿ ಎಲ್ಲವನ್ನೂ ವಿವರವಾಗಿ ತಿಳಿಸುವೆನು. ಕಲ್ಮಾಷಪಾದನಿಗೆ ಸಂಭವಿಸಿದ ಶಕ್ತಿಯ ಶಾಪ ; ಬ್ರಾಹ್ಮಣನ ಶಾಪ ; ಕಿಂಕರನ ಪ್ರಭಾವ–ಇವುಗಳೆಲ್ಲವನ್ನೂ ಕೇಳಿದೆಯಲ್ಲವೇ? ಈ ಮೂರು ದುಷ್ಟಶಕ್ತಿಗಳ ಪರಿಣಾಮದಿಂದ ಕಲ್ಮಾಷಪಾದನು ಕೋಪಾವಿಷ್ಟನಾಗಿ ಕೆಂಡದಂತಹ ಕಣ್ಣುಗಳನ್ನು ತಿರುಗಿಸುತ್ತಾ ಕಾಡಿನಲ್ಲಿ ಅಲೆದಾಡುತ್ತಿದ್ದನು. ಅಂತಹ ದುರವಸ್ಥೆಯಲ್ಲಿಯೂ ಪತಿಯನ್ನು ಅಗಲಿರಲು ಇಚ್ಛಿಸದೇ ಸಾಧ್ವಿಯಾದ ಅವನ ಪತ್ನಿಯೂ ರಾಜನನ್ನು ಅನುಸರಿಸಿಯೇ ತಿರುಗಾಡುತ್ತಿದ್ದಳು.

ಸಾವಿರಾರು ಜಿಂಕೆಗಳಿಂದಲೂ, ಸಾರಂಗಗಳಿಂದಲೂ, ಹುಲಿ, ಕರಡಿ, ಸಿಂಹ–ಮುಂತಾದ ದುಷ್ಟಪ್ರಾಣಿಗಳಿಂದಲೂ, ನಾನಾವಿಧವಾದ ವೃಕ್ಷ ಗಳಿಂದಲೂ, ಲತಾ-ಗುಲ್ಮಾದಿಗಳಿಂದಲೂ, ಪ್ರಾಣಿಗಳ ಘೋರನಿನಾದ ಗಳಿಂದಲೂ ತುಂಬಿಹೋಗಿದ್ದ ಕಾಡಿನಲ್ಲಿ ಕಲ್ಮಾಷಪಾದನು ಅಲೆದಲೆದು,

ಹಸಿವು-ಬಾಯಾರಿಕೆಗಳಿಂದ ಬಳಲಿ ಬೆಂಡಾದನು. ಆಹಾರಕ್ಕಾಗಿ ಅತ್ತಲಿತ್ತ ಅಲೆದಾಡಿದನು. ರಾಜನಾಗ ಶಾಪದ ಕಾರಣದಿಂದ ನರಭಕ್ಷಕನಾಗಿದ್ದ ನಲ್ಲವೇ? ಅವನಿಗೆ ಜಿಂಕೆ ಮುಂತಾದ ಸಾಧುಪ್ರಾಣಿಗಳ ಮಾಂಸವು ಸೊಗಸು ತ್ತಿರಲಿಲ್ಲ. ಪ್ರಾಣಿಗಳಿಂದ ನಿಬಿಡವಾಗಿರುವ ಕಾಡಿನಲ್ಲಿ ನರಮಾಂಸವು ಹೇಗೆ ತಾನೇ ಸಿಕ್ಕಬೇಕು? ರಾಜನು ಬಹಳ ಹೊತ್ತು ತಿರುಗಿದನು. ಕಟ್ಟಕಡೆಗೆ ನಿಗೂಢವಾದ ಏಕಾಂತಸ್ಥಳದಲ್ಲಿ ಸುರತಸುಖದಲ್ಲಿದ್ದ ಬ್ರಾಹ್ಮಣ-ಬ್ರಾಹ್ಮಣಿ ಯರನ್ನು ಕಂಡನು. ಕಲ್ಮಾಷಪಾದನನ್ನು ಕಂಡೊಡನೆಯೇ ಬ್ರಾಹ್ಮಣ-ಬ್ರಾಹ್ಮಣಿಯರು ಮೇಲೆದ್ದು ಓಡಲಾರಂಭಿಸಿದರು. ರಾಜನು ಬಿಡುವನೇ? ಬಹಳ ಹೊತ್ತು ಹುಡುಕಿ ಸಿಕ್ಕಿರುವ ಆಹಾರವದು. ಹಸಿವಿನ ಸಂಕಟವು ಬಹಳವಾಗಿತ್ತು. ಕಲ್ಮಾಷಪಾದನು ಬ್ರಾಹ್ಮಣ-ಬ್ರಾಹ್ಮಣಿಯರನ್ನು ಅಟ್ಟಿಸಿ ಕೊಂಡೇ ಹೋದನು. ನಾಗಾಲೋಟದ ನಾಲ್ಕೇ ಹೆಜ್ಜೆಗಳನ್ನಿಟ್ಟು ಬ್ರಾಹ್ಮಣ ನನ್ನು ಹಿಡಿದನು. ಬ್ರಾಹ್ಮಣಿಯು ನಡುಗಿದಳು. ದುಃಖದಿಂದ ಪರಿತಪಿಸಿ ದಳು. ಕಣ್ಣೀರಿಡುತ್ತಾ ರಾಜನಿಗೆ ಹೇಳಿದಳು : "ಸತ್ಯವ್ರತನೇ! ನಾನು ಹೇಳುವುದನ್ನು ಕೇಳು. ಅನಂತರ ಮನಬಂದಂತೆ ಮಾಡು. ನೀನು ಸೂರ್ಯವಂಶದಲ್ಲಿ ಹುಟ್ಟಿರುವವನು. ಯಾವಾಗಲೂ ಧರ್ಮರಕ್ಷಣೆ ಯಲ್ಲಿಯೂ, ಹಿರಿಯರ ಸೇವೆಯಲ್ಲಿಯೂ ಸರ್ವದಾ ನಿರತನಾಗಿರುವವನು. ಶಾಪದ ಕಾರಣದಿಂದ ವಿಮೋಹಿತನಾಗಿದ್ದರೂ ಇಂತಹ ಮಹಾಪಾಪವನ್ನು ಮಾಡಲು ಯತ್ನಿಸಬಾರದು. ಮಹಾರಾಜ! ನಾನು ಹೇಳುತ್ತಿರುವುದು ಕೇವಲ ಬ್ರಹ್ಮಹತ್ಯೆಯ ದೋಷವನ್ನಲ್ಲ. ಬ್ರಹ್ಮಹತ್ಯೆಯನ್ನಾದರೂ ಯಾವ ಕಾಲದಲ್ಲಿ ಮಾಡುತ್ತಿರುವೆಯೆಂಬುದನ್ನು ಪರ್ಯಾಲೋಚಿಸು. ಋತುಸ್ನಾತೆಯಾದ ನಾನು ನನ್ನ ಪತಿಯೊಡನೆ ಸೇರಿ ಸಂತಾನಕ್ಕಾಗಿ ಸುರತಸುಖವನ್ನು ಅನುಭವಿಸುತ್ತಿದ್ದೆನು. ಈ ಮಧ್ಯದಲ್ಲಿ ನೀನು ಬಂದೆಯಾದ ಕಾರಣ ಭಯದಿಂದ ವಿಹ್ವಲರಾಗಿ ನಾವಿಬ್ಬರೂ ಮೇಲೆದ್ದು ಓಡಿದೆವು. ಮಹಾರಾಜ! ದಯೆಯಿಟ್ಟು ನನ್ನ ಪತಿಯನ್ನು ಬಿಟ್ಟುಬಿಡು."

ಬ್ರಾಹ್ಮಣಿಯ ರೋದನವು ಅರಣ್ಯರೋದನವೇ ಆಯಿತು. ಕಲ್ಮಾಷ ಪಾದನಿಗೆ ಯುಕ್ತಾಯುಕ್ತತೆಯ ವಿವೇಚನೆಯೇ ಉಂಟಾಗಲಿಲ್ಲ. ಹುಲಿಯು ತನ್ನ ಬೇಟೆಯನ್ನು ಸಿಗಿದು ತಿನ್ನುವಂತೆ–ಕಲ್ಮಾಷಪಾದನು ಬ್ರಾಹ್ಮಣನನ್ನು

ಎರಡು ಭಾಗಗಳನ್ನಾಗಿ ಸೀಳಿ, ಗಬ-ಗಬನೆ ಬ್ರಾಹ್ಮಣಿಯ ಎದುರಿನಲ್ಲಿಯೇ ನುಂಗಿಬಿಟ್ಟನು.

(ಆ ಸಮಯದಲ್ಲಿ ಬ್ರಾಹ್ಮಣಿಯ ಹೃದಯವೇದನೆಯು ಎಷ್ಟಿರಬಹುದು? ಕೋಪದ ಆವೇಗವು ಎಷ್ಟಿರಬಹುದು? ವ್ಯಾಸರ ನುಡಿಗಳಲ್ಲಿಯೇ ಹೇಳುವುದಾದರೆ :) ಬ್ರಾಹ್ಮಣಿಗುಂಟಾದ ಹೃದಯವೇದನೆಯಿಂದ ಮತ್ತು ಅಪರಿಮಿತವಾದ ಕೋಪದಿಂದ ಅವಳ ಕಣ್ಣುಗಳಿಂದ ದ್ರವರೂಪವಾಗಿ ಹೊರಟ ಅಶ್ರುಬಿಂದುಗಳು ಕಾದ ಕೆಂಡದ ರೂಪವನ್ನು ತಾಳಿ–ಅವಳು ನಿಂತಿದ್ದ ಪ್ರದೇಶವನ್ನೇ ಸುಟ್ಟು ಭಸ್ಮಮಾಡಿದುವು. ಸತ್ತ್ವಗುಣದ ಮೂರ್ತಿಯಾಗಿದ್ದ ಬ್ರಾಹ್ಮಣಿಯ ಸೌಜನ್ಯಮಯವಾದ ಮುಖಾರವಿಂದವನ್ನು ಕರಾಳತೆಯು ಆವರಿಸಿತು. ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ, ತಲೆಗೆದರಿ ದಿಟ್ಟತನದಿಂದ ನಿಂತಿದ್ದ ಬ್ರಾಹ್ಮಣಿಯು ನೋಡಲು ಬಹಳ ಭಯಂಕರಳಾಗಿ ಕಾಣುತ್ತಿದ್ದಳು.

ಕೋಪಾವೇಶದಿಂದ ಹಲ್ಲುಗಳನ್ನು ಬಾರಿ-ಬಾರಿಗೂ ಕಡಿಯುತ್ತಾ ಕರಾಳರೂಪಿಣಿಯಾಗಿದ್ದ ಬ್ರಾಹ್ಮಣಿಯು ಹೇಳಿದಳು : "ಪರಮನೀಚನೇ! ಕ್ರೂರಿಯೇ! ಪಾಪಿಷ್ಠನೇ! ನನ್ನ ಕಣ್ಣೆದುರಿನಲ್ಲಿಯೇ ನಿರ್ದಯೆಯಿಂದ ನನ್ನ ಯಶೋವಂತನಾದ ಪ್ರಿಯಪತಿಯನ್ನು ಸೀಳಿ ತಿಂದೆಯಲ್ಲವೇ? ನನ್ನ ಮನೋಗತವಾಗಿದ್ದ, ರಹಸ್ಯವಾಗಿದ್ದ ಆಶಯವನ್ನು ತಿಳಿಸಿದರೂ ನೀನಿಂತಹ ನೀಚವಾದ ಕಾರ್ಯವನ್ನು ಮಾಡಿದೆಯಲ್ಲವೇ? ಇದಕ್ಕೆ ತಕ್ಕ ಶಾಸ್ತಿಯನ್ನು ಮಾಡಿಯೇ ತೀರುವೆನು. ಋತುಸ್ನಾತೆಯಾದ ನಿನ್ನ ಪತ್ನಿಯೊಡನೆ ಸುರತ ಸುಖವನ್ನು ಅಪೇಕ್ಷಿಸಿ ಹೋದ ದಿನವೇ ನಿನಗೂ ಮರಣವು ಸಂಭವಿಸಲಿ. ಇಷ್ಟು ಮಾತ್ರವಲ್ಲ ; ಯಾವ ವಸಿಷ್ಠಮಹರ್ಷಿಗಳ ನೂರು ಮಕ್ಕಳನ್ನೂ ನೀನು ತಿಂದುಬಿಟ್ಟೆಯೋ–ಅದೇ ಮಹರ್ಷಿಗಳಿಂದಲೇ ನಿನ್ನ ಭಾರ್ಯೆಯಲ್ಲಿ ನಿನಗೊಬ್ಬ ಮಗನು ಹುಟ್ಟುವನು. ಅವರಿಂದ ನಿನ್ನ ಹೆಂಡತಿಯಲ್ಲಿ ಹುಟ್ಟಿದ ಮಗುವಿನಿಂದಲೇ ನಿನ್ನ ವಂಶವು ಬೆಳೆಯುವುದು."

ಅರ್ಜುನ! ಸಾಧ್ವಿಯಾದ ಆಂಗೀರಸಿಯು ರಾಜನನ್ನು ಹೀಗೆ ಶಪಿಸಿ

ಅವನ ಸಮೀಪದಲ್ಲಿಯೇ ಅಗ್ನಿಯನ್ನು ಪ್ರತಿಷ್ಠಾಪಿಸಿ ಧಗ-ಧಗನೆ ಉರಿಯು ತ್ತಿದ್ದ ಯಜ್ಞೇಶ್ವರನಲ್ಲಿ ಪ್ರವೇಶಿಸಿದಳು. ಜ್ಞಾನಯೋಗದಿಂದಲೂ ತಪಃ ಪ್ರಭಾವದಿಂದಲೂ ವಸಿಷ್ಠರು ಎಲ್ಲ ವಿಷಯಗಳನ್ನೂ ಜ್ಞಾನದೃಷ್ಟಿಯಿಂದಲೇ ತಿಳಿದುಕೊಂಡರು. ಬಹಳ ಕಾಲಾನಂತರ ಶಾಪದಿಂದ ವಿಮುಕ್ತನಾದ ಬಳಿಕ ಕಲ್ಮಾಷಪಾದನೊಮ್ಮೆ ಋತುಸ್ನಾತೆಯಾಗಿದ್ದ ತನ್ನ ಪತ್ನಿಯ ಬಳಿಗೆ ಹೋದನು. ಅವನ ಪತ್ನಿಯಾದ ಮದಯಂತಿಗೆ ಬ್ರಾಹ್ಮಣಿಯ ಶಾಪದ ವಿಷಯವು ಶಲ್ಯದಂತೆ ಹೃದಯದಲ್ಲಿ ನೆಟ್ಟಿತ್ತಾದ್ದರಿಂದ ಸಮಾಗಮಕ್ಕೆ ಅವಕಾಶವನ್ನೀಯಲಿಲ್ಲ. ಕಾಮಮೋಹಿತನಾಗಿದ್ದ ರಾಜನಿಗೆ ಆ ಶಾಪದ ವಿಷಯವೇ ಮರೆತುಹೋಗಿದ್ದಿತು. ಪತ್ನಿಯು ಅದನ್ನು ನೆನಪಿಗೆ ತರಲಾಗಿ ರಾಜನು ಸಂಭ್ರಾಂತನಾದನು. ಆ ಶಾಪವನ್ನು ನೆನೆ-ನೆನೆದು ರಾಜನು ಬಹುವಾಗಿ ಪರಿತಪಿಸಿದನು. ಬ್ರಾಹ್ಮಣಿಯ ಶಾಪದಿಂದ ಅವಲಿಪ್ತನಾಗಿದ್ದ ಕಲ್ಮಾಷಪಾದನು ಶಾಪದ ಕಾರಣದಿಂದಲೇ ಮಹರ್ಷಿಗಳಾದ ವಸಿಷ್ಠರ ಮೂಲಕವಾಗಿ ವಂಶಕ್ಕೆ ಅಕ್ಷಯಕರನಾದ ಪುತ್ರನನ್ನು ಪಡೆಯಬೇಕಾಯಿತು."

೧೮೨ನೆಯ ಅಧ್ಯಾಯವು ಮುಗಿಯಿತು.

೧೮೩ನೆಯ ಅಧ್ಯಾಯ ಚೈತ್ರರಥಪರ್ವ (ಮುಂದುವರಿದಿದೆ.)

## ಪಾಂಡವರಿಗೆ ಪುರೋಹಿತರಾಗಲು ಧೌಮ್ಯರ ಅಂಗೀಕಾರ

ಜನಮೇಜಯ! ಅರ್ಜುನನು ಪುರೋಹಿತರ ವಿಷಯವಾಗಿ ಗಂಧರ್ವನನ್ನು ಪ್ರಶ್ನಿಸಿದನು :

"ಗಂಧರ್ವರಾಜ! ವೇದ-ವೇದಾಂಗಪಾರಂಗತರಾದ, ನಮಗೆ ಅನು ರೂಪರಾಗಿರುವ ಪುರೋಹಿತರು ಎಲ್ಲಿದ್ದಾರೆ? ತಿಳಿಸು. ನೀನು ಎಲ್ಲವನ್ನೂ ತಿಳಿದವನಾಗಿರುವೆ."

"ಅರ್ಜುನ! ದೇವಲಮಹರ್ಷಿಗಳ ಕೊನೆಯ ಅನುಜರೊಬ್ಬರಿದ್ದಾರೆ. ಅವರು ಉತ್ಕೋಚಕತೀರ್ಥದ ಸಮೀಪದಲ್ಲಿರುವ ಆಶ್ರಮದಲ್ಲಿ ತಪಸ್ಸನ್ನು ಮಾಡುತ್ತಿದ್ದಾರೆ. ಧೌಮ್ಯರೆಂದು ಅವರ ಹೆಸರು. ನನಗೆ ತಿಳಿದಿರುವಂತೆ

ಅವರು ನಿಮಗೆ ಅನುರೂಪರಾದ ಪುರೋಹಿತರಾಗಲು ಸಮರ್ಥರಾಗಿದ್ದಾರೆ. ನಿಮಗೂ ಸಮ್ಮತವಾದರೆ ಅವರನ್ನು ನಿಮ್ಮ ಪುರೋಹಿತರನ್ನಾಗಿ ಮಾಡಿ ಕೊಳ್ಳಬಹುದು."

ಗಂಧರ್ವರಾಜನು ಹೀಗೆ ಹೇಳಿದನಂತರ ಅರ್ಜುನನು ಗಂಧರ್ವನ ವಿಷಯದಲ್ಲಿ ಸುಪ್ರೀತನಾಗಿ, ಆಗ್ನೇಯಾಸ್ತ್ರವನ್ನು ಯಥಾವಿಧಿಯಾಗಿ ಉಪದೇಶಿಸಿ ಹೇಳಿದನು :

"ಗಂಧರ್ವರಾಜ! ನೀನು ಕೊಡಬೇಕೆಂದಿರುವ ಕುದುರೆಗಳು ನಿನ್ನ ಲ್ಲಿಯೇ ಇರಲಿ. ನಮಗೆ ಕುದುರೆಗಳ ಅವಶ್ಯಕತೆಯು ಒದಗಿದಾಗ ಖಂಡಿತ ವಾಗಿಯೂ ಅವುಗಳನ್ನು ಪ್ರತಿಗ್ರಹಿಸುತ್ತೇವೆ. ನಿನಗೆ ಮಂಗಳವಾಗಲಿ."

ಅರ್ಜುನನು ಹೀಗೆ ಹೇಳಿದನಂತರ ಗಂಧರ್ವ-ಪಾಂಡವರು ಪರಸ್ಪರ ವಾಗಿ ಅಭಿನಂದಿಸಿ, ರಮ್ಯವಾದ ಭಾಗೀರಥೀತೀರಪ್ರದೇಶದಿಂದ ಇಚ್ಛಾನು ಸಾರವಾಗಿ ಹೊರಟುಹೋದರು.

ಜನಮೇಜಯ! ಪಾಂಡವರು ಗಂಧರ್ವನ ಸಲಹೆಯಂತೆ ಉತ್ಕೋ ಚಕತೀರ್ಥದ ಸಮೀಪದಲ್ಲಿದ್ದ ಧೌಮ್ಯರ ಆಶ್ರಮಕ್ಕೆ ಹೋಗಿ, ಆಶ್ರಮ ದಲ್ಲಿದ್ದ ಧೌಮ್ಯರಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಅವರನ್ನು ತಮ್ಮ ಪುರೋಹಿತರಾಗಲು ಪ್ರಾರ್ಥಿಸಿಕೊಂಡರು. ಸರ್ವವೇದವಿದರಾದ ಧೌಮ್ಯರು ಪಾಂಡವರನ್ನು ಸ್ವಾಗತಿಸಿ, ಕಂದ-ಮೂಲ-ಫಲಾದಿಗಳನ್ನಿತ್ತು ಸತ್ಕರಿಸಿ, ಅವರ ಪ್ರಾರ್ಥನೆಯಂತೆ ಪುರೋಹಿತರಾಗಲು ಒಪ್ಪಿಕೊಂಡರು. ಪಾಂಡವರನ್ನು ತಮ್ಮ ಯಾಜ್ಯರನ್ನಾಗಿ ಸ್ವೀಕರಿಸಿದರು. ಧೌಮ್ಯರು ತಮ್ಮ ಪುರೋಹಿತರಾಗಲು ಒಪ್ಪಿದುದಕ್ಕಾಗಿ ಪಾಂಡವರೂ ಸಂತೋಷಭರಿತ ರಾದರು. ತಮಗೆ ರಾಜ್ಯ-ಕೋಶಾದಿಗಳು ಲಭಿಸಿದುವೆಂದೇ ಭಾವಿಸಿದರು. ಇಷ್ಟು ಮಾತ್ರವಲ್ಲ ; ಬ್ರಾಹ್ಮಣಪುರಃಸರರಾಗಿ ತಾವು ಪಾಂಚಾಲನಗರಕ್ಕೆ ಹೋದರೆ ಸ್ವಯಂವರದಲ್ಲಿ ದ್ರೌಪದಿಯು ತಮ್ಮನ್ನೇ ವರಿಸುವಳೆಂದೂ ನಿಶ್ಚಯಿಸಿದರು. ಗುರುಗಳಿಂದ ಅಥವಾ ಪುರೋಹಿತರಿಂದ ಕೂಡಿದ (ಪುರೋಹಿತನನ್ನು ಪಡೆದ ) ಭರತರ್ಷಭರು ಇನ್ನು ಮುಂದೆ ತಾವು ಅನಾಥರಲ್ಲವೆಂದೂ, ತಮ್ಮ ಯೋಗ-ಕ್ಷೇಮಗಳನ್ನು ನೋಡಿಕೊಳ್ಳುವ

ನಾಥರೊಬ್ಬರಿದ್ದಾರೆಂದೂ ಭಾವಿಸಿದರು. ಪುರೋಹಿತರಾದರೂ ಸಾಮಾನ್ಯರಾಗಿರಲಿಲ್ಲ. ಧೌಮ್ಯರು ವೇದಾರ್ಥತತ್ತ್ವಜ್ಞರಾಗಿದ್ದರು. ಉದಾರಿಗಳಾಗಿದ್ದರು. ಧರ್ಮವಿದರಾದ ಧೌಮ್ಯರಿಂದ ಪಾಂಡವರು ಯಜಮಾನರಾಗಿ ಪರಿಗ್ರಹಿಸಲ್ಪಟ್ಟರು.

ಬುದ್ಧಿ, ವೀರ್ಯ-ಬಲೋತ್ಸಾಹಗಳಿಂದ ಯುಕ್ತರಾದ, ದೇವತೆಗಳೋಪಾದಿಯಲ್ಲಿ ಸಂಘಟಿತರಾಗಿದ್ದ ಮತ್ತು ವೀರ್ಯವಂತರಾಗಿದ್ದ ಪಾಂಡವರು, ಸ್ವಧರ್ಮದಿಂದ ತಮ್ಮ ರಾಜ್ಯವನ್ನು ಪಡೆದೇ ಪಡೆಯುತ್ತಾರೆಂದು ಧೌಮ್ಯರೂ ನಿಶ್ಚಯಿಸಿದರು.

ಧೌಮ್ಯರು ಪಾಂಡವರಿಗೆ ಸ್ವಸ್ತಿವಾಚನವನ್ನು ಹೇಳಿ ಆಶೀರ್ವದಿಸಿದರು. ಬಳಿಕ ನರಶ್ರೇಷ್ಠರಾದ ಪಾಂಡವರು ಧೌಮ್ಯಪುರಃಸರರಾಗಿ ಪಾಂಚಾಲಿಯ ಸ್ವಯಂವರಕ್ಕೆ ಹೋಗಲು ನಿಶ್ಚಯಿಸಿದರು.

೧೮೩ನೆಯ ಅಧ್ಯಾಯವು ಮುಗಿಯಿತು.

**ಎರಡನೆಯ ಸಂಪುಟವು ಮುಗಿಯಿತು.**

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



# ಪರಿಶಿಷ್ಟ

## ಧೃತರಾಷ್ಟ್ರನ ಮಕ್ಕಳ ಪಟ್ಟಿಯಲ್ಲಿ ಯಾವುದು ಸರಿ?

ವೈಶಂಪಾಯನರು ಜನಮೇಜಯನಿಗೆ ಮಹಾಭಾರತದ ಕಥೆಯನ್ನು ಹೇಳುವಾಗ ಕೆಲವು ಪ್ರಕರಣಗಳು ಎರಡು ಬಾರಿ ಅಥವಾ ಮೂರು ಬಾರಿ ಪುನರುಕ್ತವಾಗಿರುವುದುಂಟು. ಪುನರುಕ್ತಿಗಳಲ್ಲಿ ಕೆಲವೆಡೆಗಳಲ್ಲಿ ಶ್ಲೋಕಗಳು ಸ್ವಲ್ಪ ವ್ಯತ್ಯಾಸವಾಗಿರುತ್ತವೆ. ಕೆಲವೆಡೆಗಳಲ್ಲಿ ಕಥೆಯೂ ಅಲ್ಪ-ಸ್ವಲ್ಪ ವ್ಯತ್ಯಾಸವಾಗಿರುವುದೂ ಉಂಟು. ಕೆಲವು ಪ್ರಕರಣಗಳನ್ನಿಲ್ಲಿ ಉದಾಹರಿಸಲಾಗಿದೆ. ವಿಷಯಗಳನ್ನು ಹೆಚ್ಚು ತಿಳಿದವರು ಇದರ ಮೇಲೆ ಮತ್ತಷ್ಟು ಬೆಳಕು ಚೆಲ್ಲಿ ಪ್ರಕಟಣೆಗೂ ಕೊಡಬಹುದು. ಅಂತಹ ಉತ್ತಮವಾದ ಅವಕಾಶವು ಸಿಕ್ಕಿದರೆ ಸಂಪುಟಗಳ ಪರಿಶಿಷ್ಟದಲ್ಲಿ ಪ್ರಕಟಿಸುವೆವು.

## ಧೃತರಾಷ್ಟ್ರನ ಮಕ್ಕಳ ನಾಮಧೇಯಗಳು

ಎರಡು ಕಡೆಗಳಲ್ಲಿ ಧೃತರಾಷ್ಟ್ರನ ಮಕ್ಕಳ ಹೆಸರುಗಳು ಬಂದಿವೆ.

ಆದಿಪರ್ವದ ೬೭ನೆಯ ಅಧ್ಯಾಯದಲ್ಲಿ ಮತ್ತು ೧೧೬ನೆಯ ಅಧ್ಯಾಯದಲ್ಲಿ. ಈ ಎರಡು ಅಧ್ಯಾಯಗಳೂ ಸಂಭವನಾಮಕ ಉಪಪರ್ವದಲ್ಲಿಯೇ ಇವೆ. ಎರಡು ಕಡೆಗಳಲ್ಲಿಯೂ ಜನಮೇಜಯನ ಪ್ರಶ್ನೆಯು ಸಾಧಾರಣವಾಗಿ ಒಂದೇ ರೀತಿಯಲ್ಲಿದೆ.

**ಜ್ಯೇಷ್ಠಾನುಜ್ಯೇಷ್ಠತಾಮೇಷಾಂ ನಾಮಧೇಯಾನಿ ವಾ ವಿಭೋ ।**
**ಧೃತರಾಷ್ಟ್ರಸ್ಯ ಪುತ್ರಾಣಾಮಾನುಪೂರ್ವ್ಯೇಣ ಕೀರ್ತಯ ॥**

೬೭ನೆಯ ಅಧ್ಯಾಯ ಶ್ಲೋಕ ೯೨

**ಜ್ಯೇಷ್ಠಾನುಜ್ಯೇಷ್ಠತಾಂ ತೇಷಾಂ ನಾಮಾನಿ ಚ ಪೃಥಕ್ಪೃಥಕ್ ।**
**ಧೃತರಾಷ್ಟ್ರಸ್ಯ ಪುತ್ರಾಣಾಮಾನುಪೂರ್ವ್ಯಾತ್ಪ್ರಕೀರ್ತಯ ॥**

೧೧೬ನೆಯ ಅಧ್ಯಾಯ ಶ್ಲೋಕ ೧

ಈ ಎರಡು ಕಡೆಗಳಲ್ಲಿಯೂ ವೈಶಂಪಾಯನರು ಕೌರವರ ನಾಮಗಳು ಆನುಪೂರ್ವಿಯಾಗಿಯೇ ಇರುವುವೆಂದು ಹೇಳಿದ್ದಾರೆ.

**ನಾಮಧೇಯಾನುಪೂರ್ವ್ಯಾ ಚ ಜ್ಯೇಷ್ಠಾನುಜ್ಯೇಷ್ಠತಾಂ ವಿದುಃ ।**

೬೭ನೆಯ ಅಧ್ಯಾಯ ಶ್ಲೋಕ ೧೦೭

**ನಾಮಧೇಯಾನುಪೂರ್ವ್ಯೇಣ ವಿದ್ಧಿ ಜನ್ಮಕ್ರಮಂ ನೃಪ ॥**

೧೧೬ನೆಯ ಅಧ್ಯಾಯ ಶ್ಲೋಕ ೧೫

ಆದರೆ ಸಂಭವಪರ್ವದಲ್ಲಿಯೇ ಎರಡು ಕಡೆಗಳಲ್ಲಿ ಬರುವ ಈ ಹೆಸರುಗಳಲ್ಲಿ ವ್ಯತ್ಯಾಸವಿದೆ.

ಇಲ್ಲಿ ಕೊಟ್ಟಿರುವ ಪಟ್ಟಿಯನ್ನು ಪರಾಮರ್ಶಿಸಿದರೆ ಆನುಪೂರ್ವಿಯೂ ಎರಡು ಕಡೆಗಳಲ್ಲಿ ಒಂದೇ ಸಮನಾಗಿರುವುದಿಲ್ಲ. 116ನೆಯ ಅಧ್ಯಾಯದಲ್ಲಿ ಹೆಸರುಗಳು ಹೆಚ್ಚಾಗಿ ಬಂದಿರುವುದರಿಂದ ಕೆಲವೆಡೆಗಳಲ್ಲಿ 67ನೆಯ ಅಧ್ಯಾಯದಲ್ಲಿ ಬರುವ ಎರಡು ಹೆಸರುಗಳನ್ನು ಸೇರಿಸಿ ಒಂದೇ ಹೆಸರೆಂದು ಹೇಳಬೇಕಾಗುತ್ತದೆ. (96) ಮಹಾಬಾಹು (97) ವ್ಯೂಢೋರು ಎಂಬುದನ್ನು (97) ಮಹಾಬಾಹುವಾದ ವ್ಯೂಢೋರು ಎಂದೇ ಮಾಡಬೇಕಾಗಿದೆ. (23) ಚಾರು (24) ಚಿತ್ರಾಂಗದ ಎರಡೂ ಸೇರಿ (26) ಚಾರುಚಿತ್ರಶರಾಸನ ಎಂಬುದಾಗಿಯೂ ಆಗಿರುವುದು. ಅರ್ಥಾತ್ ಎರಡು ಕಡೆಗಳಲ್ಲಿಯೂ ವೈಶಂಪಾಯನರು ಅನುಕ್ರಮವಾಗಿಯೇ ಇದೆ–ಎಂದು ಹೇಳಿದ್ದರೂ ಎರಡು ಕಡೆಗಳಲ್ಲೂ ಹೇಳಿರುವುದಕ್ಕೆ ಹೊಂದಾಣಿಕೆಯಿಲ್ಲ. ಚಾರುಚಿತ್ರಶರಾಸನ, ವಿಕಟಾನನ, ಸುನಾಭ, ಚಿತ್ರಬಾಹು, ಮಹಾಬಾಹು, ಚಿತ್ರಾಂಗ, ಕುಂಡಲ–ಇತ್ಯಾದಿಗಳು 67ನೆಯ ಅಧ್ಯಾಯದಲ್ಲಿ ಹೇಳಿರುವ ಚಿತ್ರಚಾಪ, ವಿಕಟ, ಪದ್ಮನಾಭ, ಚಿತ್ರಬಾಹು, ಚಿತ್ರಾಂಗದ, ಸುಕುಂಡಲ–ಇವರುಗಳ ಉಪನಾಮ ಗಳಿರಬಹುದೆಂದು ವ್ಯಾಖ್ಯಾನಕಾರರೊಬ್ಬರು ಹೇಳಿದ್ದಾರೆ. ಆದರೆ ಹೀಗೆ ಭಾವಿಸಿದರೂ ಅನುಕ್ರಮ ಸಂಖ್ಯೆಯು ಒಂದಕ್ಕೊಂದಕ್ಕೆ ಸರಿಹೋಗುವುದಿಲ್ಲ.

ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರು ಪ್ರಕಟಿಸಿರುವ ಮಹಾಭಾರತದಲ್ಲಿ 67ನೆಯ ಅಧ್ಯಾಯದಲ್ಲಿ ಬರುವ (ಅವರ ಪುಸ್ತಕದಲ್ಲಿ 61ನೆಯ ಅಧ್ಯಾಯ) ಈ ಪ್ರಕರಣವನ್ನು ಪ್ರಕ್ಷಿಪ್ತವೆಂದು ಬಿಡಲಾಗಿದೆ. ಮುಂದೆ 116ನೆಯ ಅಧ್ಯಾಯದಲ್ಲಿ (ಅವರ ಪುಸ್ತಕದ 108ನೆಯ ಅಧ್ಯಾಯ) ದುರ್ಯೋಧನಾದಿಗಳ ಹೆಸರುಗಳು ಇತರ ಪುಸ್ತಕಗಳಲ್ಲಿರುವ ಹೆಸರುಗಳಿಗೆ ಅನುರೂಪವಾಗಿಯೇ ಇದ್ದರೂ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ.

## ಮೂರು ಕಡೆಗಳಲ್ಲಿಯೂ ಬರುವ ನಾಮಧೇಯಗಳು ಈ ಕೆಳಗೆ ಕಾಣಿಸಿದಂತಿವೆ

| | 67ನೆಯ ಅಧ್ಯಾಯ | 116ನೆಯ ಅಧ್ಯಾಯ | ಭಂ. ಪುಸ್ತಕ 108ನೆಯ ಅಧ್ಯಾಯ |
|---|---|---|---|
| 1 | ದುರ್ಯೋಧನ | ದುರ್ಯೋಧನ | ದುರ್ಯೋಧನ |
| 2 | ಯುಯುತ್ಸು | ಯುಯುತ್ಸು | ಯುಯುತ್ಸು |
| 3 | ದುಃಶಾಸನ | ದುಃಶಾಸನ | ದುಃಶಾಸನ |
| 4 | ದುಃಸಹ | ದುಃಸಹ | ದುಃಸಹ |
| 5 | ದುಃಶಲ | ದುಃಶಲ | ದುಃಶಲ |
| 6 | ದುರ್ಮುಖ | ಜಲಸಂಧ | ಜಲಸಂಧ |
| 7 | ವಿವಿಂಶತಿ | ಸಮ | ಸಮ |
| 8 | ವಿಕರ್ಣ | ಸಹ | ಸಹ |
| 9 | ಜಲಸಂಧ | ವಿಂದ | ವಿಂದ |
| 10 | ಸುಲೋಚನ | ಅನುವಿಂದ | ಅನುವಿಂದ |
| 11 | ವಿಂದ | ದುರ್ಧರ್ಷ | ದುರ್ಧರ್ಷ |
| 12 | ಅನುವಿಂದ | ಸುಬಾಹು | ಸುಬಾಹು |
| 13 | ದುರ್ಧರ್ಷ | ದುಷ್ಪ್ರಧರ್ಷಣ | ದುಷ್ಪ್ರಧರ್ಷಣ |
| 14 | ಸುಬಾಹು | ದುರ್ಮರ್ಷಣ | ದುರ್ಮರ್ಷಣ |
| 15 | ದುಷ್ಪ್ರಧರ್ಷಣ | ದುರ್ಮುಖ | ದುರ್ಮುಖ |
| 16 | ದುರ್ಮರ್ಷಣ | ದುಷ್ಕರ್ಣ | ದುಷ್ಕರ್ಣ |
| 17 | ದುರ್ಮುಖ | ಕರ್ಣ | ಕರ್ಣ |
| 18 | ದುಷ್ಕರ್ಣ | ವಿವಿಂಶತಿ | ವಿವಿಂಶತಿ |
| 19 | ಕರ್ಣ | ವಿಕರ್ಣ | ವಿಕರ್ಣ |
| 20 | ಚಿತ್ರ | ಶಲ | ಜಲಸಂಧ |
| 21 | ಉಪಚಿತ್ರ | ಸತ್ತ್ವ | ಸುಲೋಚನ |
| 22 | ಚಿತ್ರಾಕ್ಷ | ಸುಲೋಚನ | ಚಿತ್ರ |

| | | | |
|---|---|---|---|
| 23 | ಚಾರು | ಚಿತ್ರ | ಉಪಚಿತ್ರ |
| 24 | ಚಿತ್ರಾಂಗದ | ಉಪಚಿತ್ರ | ಚಿತ್ರಾಕ್ಷ |
| 25 | ದುರ್ಮದ | ಚಿತ್ರಾಕ್ಷ | ಚಾರುಚಿತ್ರ |
| 26 | ದುಷ್ಪ್ರಧರ್ಷ | ಚಾರುಚಿತ್ರಶರಾಸನ | ಶರಾಸನ |
| 27 | ವಿವಿತ್ಸು | ದುರ್ಮದ | ದುರ್ಮದ |
| 28 | ವಿಕಟ | ದುರ್ವಿಗಾಹ | ದುಷ್ಪ್ರಗಾಹ |
| 29 | ಸಮ | ವಿವಿತ್ಸು | ವಿವಿತ್ಸು |
| 30 | ಊರ್ಣನಾಭ | ವಿಕಟಾನನ | ವಿಕಲ |
| 31 | ಪದ್ಮನಾಭ | ಊರ್ಣನಾಭ | ಸಮ |
| 32 | ನಂದ | ಸುನಾಭ | ಊರ್ಣನಾಭ |
| 33 | ಉಪನಂದ | ನಂದ | ಸುನಾಭ |
| 34 | ಸೇನಾಪತಿ | ಉಪನಂದ | ನಂದ |
| 35 | ಸುಷೇಣ | ಚಿತ್ರಬಾಣ | ಉಪನಂದ |
| 36 | ಕುಂಡೋದರ | ಚಿತ್ರವರ್ಮಾ | ಸೇನಾಪತಿ |
| 37 | ಮಹೋದರ | ಸುವರ್ಮಾ | ಸುಷೇಣ |
| 38 | ಚಿತ್ರಬಾಹು | ದುರ್ವಿರೋಚನ | ಕುಂಡೋದರ |
| 39 | ಚಿತ್ರವರ್ಮಾ | ಅಯೋಬಾಹು | ಮಹೋದರ |
| 40 | ಸುವರ್ಮಾ | ಮಹಾಬಾಹುಚಿತ್ರಾಂಗ | ಚಿತ್ರಬಾಣ |
| 41 | ದುರ್ವಿರೋಚನ | ಚಿತ್ರಕುಂಡಲ | ಚಿತ್ರವರ್ಮಾ |
| 42 | ಅಯೋಬಾಹು | ಭೀಮವೇಗ | ಸುವರ್ಮಾ |
| 43 | ಮಹಾಬಾಹು | ಭೀಮಬಲ | ದುರ್ವಿಮೋಚನ |
| 44 | ಚಿತ್ರಚಾಪ | ಬಲಾಕೀ | ಅಯೋಬಾಹು |
| 45 | ಸುಕುಂಡಲ | ಬಲವರ್ಧನ | ಚಿತ್ರಾಂಗ |
| 46 | ಭೀಮವೇಗ | ಉಗ್ರಾಯುಧ | ಚಿತ್ರಕುಂಡಲ |
| 47 | ಭೀಮಬಲ | ಸುಷೇಣ | ಭೀಮವೇಗ |
| 48 | ಬಲಾಕಿ | ಕುಂಡೋದರ | ಭೀಮಬಲ |
| 49 | ಭೀಮ | ಮಹೋದರ | ಬಲಾಕೀ |

| | | | |
|---|---|---|---|
| 50 | ವಿಕ್ರಮ | ಚಿತ್ರಾಯುಧ | ಬಲವರ್ಧನ |
| 51 | ಉಗ್ರಾಯುಧ | ನಿಷಂಗೀ | ಉಗ್ರಾಯುಧ |
| 52 | ಭೀಮಶರ | ಪಾಶೀ | ಭೀಮಕರ್ಮಾ |
| 53 | ಕನಕಾಯು | ವೃಂದಾರಕ | ಕನಕಾಯು |
| 54 | ದೃಢಾಯುಧ | ದೃಢವರ್ಮಾ | ದೃಢಾಯುಧ |
| 55 | ದೃಢವರ್ಮಾ | ದೃಢಕ್ಷತ್ರ | ದೃಢವರ್ಮಾ |
| 56 | ದೃಢಕ್ಷತ್ರ | ಸೋಮಕೀರ್ತಿ | ದೃಢಕ್ಷತ್ರ |
| 57 | ಸೋಮಕೀರ್ತಿ | ಅನೂದರ | ಸೋಮಕೀರ್ತಿ |
| 58 | ಅನೂದರ | ದೃಢಸಂಧ | ಅನೂದರ |
| 59 | ಜರಾಸಂಧ | ಜರಾಸಂಧ | ದೃಢಸಂಧ |
| 60 | ದೃಢಸಂಧ | ಸತ್ಯಸಂಧ | ಜರಾಸಂಧ |
| 61 | ಸತ್ಯಸಂಧ | ಸದಃಸುವಾಕ್ | ಸತ್ಯಸಂಧ |
| 62 | ಸಹಸ್ರವಾಕ್ | ಉಗ್ರಶ್ರವಸ | ಸದ |
| 63 | ಉಗ್ರಶ್ರವಸ | ಉಗ್ರಸೇನ | ಸುವಾಕ್ |
| 64 | ಉಗ್ರಸೇನ | ಸೇನಾನೀ | ಉಗ್ರಶ್ರವಸ |
| 65 | ಕ್ಷೇಮಮೂರ್ತಿ | ದುಷ್ಪರಾಜಯ | ಅಶ್ವಸೇನ |
| 66 | ಅಪರಾಜಿತ | ಅಪರಾಜಿತ | ಸೇನಾನೀ |
| 67 | ಪಣ್ಡಿತಕ | ಪಣ್ಡಿತಕ | ದುಷ್ಪರಾಜಯ |
| 68 | ವಿಶಾಲಾಕ್ಷ | ವಿಶಾಲಾಕ್ಷ | ಅಪರಾಜಿತ |
| 69 | ದುರಾಧನ | ದುರಾಧರ | ಪಿಂಡತಕ |
| 70 | ದೃಢಹಸ್ತ | ದೃಢಹಸ್ತ | ವಿಶಾಲಾಕ್ಷ |
| 71 | ಸುಹಸ್ತ | ಸುಹಸ್ತ | ದುರಾವರ |
| 72 | ವಾತವೇಗ | ವಾತವೇಗ | ದೃಢಹಸ್ತ |
| 73 | ಸುವರ್ಚಸ | ಸುವರ್ಚಸ | ಸುಹಸ್ತ |
| 74 | ಆದಿತ್ಯಕೇತು | ಆದಿತ್ಯಕೇತು | ವಾತವೇಗ |
| 75 | ಬಹ್ವಾಶೀ | ಬಹ್ವಾಶೀ | ಸುವರ್ಚಸ |
| 76 | ನಾಗದತ್ತ | ನಾಗದತ್ತ | ಆದಿತ್ಯಕೇತು |

| | | | |
|---|---|---|---|
| 77 | ಅನುಯಾಯೀ | ಅಗ್ರಯಾಯೀ | ಬಹ್ವಾಶೀ |
| 78 | ಕವಚೀ | ಕವಚೀ | ನಾಗದಂತ |
| 79 | ನಿಷಂಗೀ | ಕ್ರಥನ | ಅಗ್ರಯಾಯೀ |
| 80 | ದಂಡೀ | ದಂಡೀ | ಕವಚೀ |
| 81 | ದಂಡಧಾರ | ದಂಡಧಾರ | ನಿಷಂಗೀ |
| 82 | ಧನುರ್ಗ್ರಹ | ಧನುರ್ಗ್ರಹ | ಪಾಶೀ |
| 83 | ಉಗ್ರ | ಉಗ್ರ | ದಂಡಧಾರ |
| 84 | ಭೀಮರಥ | ಭೀಮರಥ | ಧನುರ್ಗ್ರಹ |
| 85 | ವೀರ | ವೀರಬಾಹು | ಉಗ್ರ |
| 86 | ವೀರಬಾಹು | ಅಲೋಲುಪ | ಭೀಮರಥ |
| 87 | ಅಲೋಲುಪ | ಅಭಯ | ವೀರಬಾಹು |
| 88 | ಅಭಯ | ರೌದ್ರಕರ್ಮಾ | ಲೋಲುಪ |
| 89 | ರೌದ್ರಕರ್ಮಾ | ದೃಢರಥಾಶ್ರಯ | ಅಭಯ |
| 90 | ದೃಢರಥ | ಅನಾಧೃಷ್ಯ | ರೌದ್ರಕರ್ಮಾ |
| 91 | ಅನಾಧೃಷ್ಯ | ಕುಂಡಭೇದೀ | ದೃಢರಥ |
| 92 | ಕುಂಡಭೇದೀ | ವಿರಾವೀ | ಅನಾಧೃಷ್ಯ |
| 93 | ವಿರಾವೀ | ಪ್ರಮಥ | ಕುಂಡಭೇದೀ |
| 94 | ದೀರ್ಘಲೋಚನ | ಪ್ರಮಾಥಿ | ವಿರಾವೀ |
| 95 | ದೀರ್ಘಬಾಹು | ದೀರ್ಘರೋಮಾ | ದೀರ್ಘಲೋಚನ |
| 96 | ಮಹಾಬಾಹು | ದೀರ್ಘಬಾಹು | ದೀರ್ಘಬಾಹು |
| 97 | ವ್ಯೂಢೋರು | ಮಹಾಬಾಹುವ್ಯೂಢೋರು | ವ್ಯೂಢೋರು |
| 98 | ಕನಕಾಂಗದ | ಕನಕಧ್ವಜ | ಕನಕಧ್ವಜ |
| 99 | ಕುಂಡಜ | ಕುಂಡಾಶೀ | ಕುಂಡಾಶೀ |
| 100 | ಚಿತ್ರಕ | ವಿರಜಸ | ವಿರಜಸ |

ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರು ಅನೇಕ ಪುಸ್ತಕಗಳನ್ನು ಪರಿಶೀಲಿಸಿ ಪ್ರಕಟಿಸಿರುತ್ತಾರೆ. ಆದುದರಿಂದ ಆ ಪಾಠವೇ ಶುದ್ಧವಾದುದೆಂದು ಭಾವಿಸಬಹುದಾಗಿದೆ.

ಯುಯುತ್ಸುವಿನ ವಿಷಯವಾಗಿ ಕೆಲವು ಸಂದೇಹಗಳಿವೆ. ಎಲ್ಲ ಪಾಠಗಳಲ್ಲಿಯೂ ದುರ್ಯೋಧನನಾದ ಮೇಲೆ ಯುಯುತ್ಸುವು ಎರಡನೆಯವನಾಗುತ್ತಾನೆ. ಅನಂತರ ದುಃಶಾಸನನ ಹೆಸರು ಬರುತ್ತದೆ. ದುರ್ಯೋಧನನ ಎಲ್ಲ ಕಾರ್ಯಗಳಲ್ಲಿಯೂ ದುಃಶಾಸನನೇ ಅವನ ಹಿಂದಿರುತ್ತಾನೆಯೇ ಹೊರತು ಯುಯುತ್ಸುವಿನ ಹೆಸರೇ  ಬರುವುದಿಲ್ಲ. ಯುಯುತ್ಸುವು ಯಾರು? ಧೃತರಾಷ್ಟ್ರನಿಗೆ ವೈಶ್ಯಸ್ತ್ರಿಯಲ್ಲಿ ಹುಟ್ಟಿದ ಮಗನೇ? ಅಥವಾ ಗಾಂಧಾರಿಯ ಹೊಟ್ಟೆಯಲ್ಲಿ ಹುಟ್ಟಿದ್ದ ಎರಡನೆಯ ಮಗನೇ?

೬೭ನೆಯ ಅಧ್ಯಾಯದ ೯೦ನೆಯ ಶ್ಲೋಕದಲ್ಲಿ– 'ಶತಂ ದುಃಶಾಸನಾದೀನಾಂ ಸರ್ವೇಷಾಂ ಕ್ರೂರಕರ್ಮಣಾಮ್' ಎಂದಿರುತ್ತದೆ. ದುಃಶಾಸನನೇ ಆದಿಯಾಗಿ ನೂರು ಮಂದಿ ಎಂದು ಹೇಳಿರುವುದರಿಂದ ದುಃಶಾಸನನೇ ಎರಡನೆಯವನಾಗಿರಬೇಕು. ಆದರೆ ಯುಯುತ್ಸುವು ಸೇರದಿದ್ದರೆ ದುಃಶಾಸನನೇ ಮೊದಲುಗೊಂಡು ನೂರು ಸಂಖ್ಯೆಯಾಗುವುದಿಲ್ಲ. ಯುಯುತ್ಸುವೂ ಸೇರಬೇಕು. ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಪುತ್ರನನ್ನು ಎರಡನೆಯವನನ್ನಾಗಿಟ್ಟುಕೊಂಡಿರಬಹುದೆಂದು ಭಾವಿಸಲೂ ಅವಕಾಶವಿದೆ. ಆದರೆ ಒಬ್ಬನೇ ಯುಯುತ್ಸುವಿದ್ದರೆ ದುಃಶಾಸನಾದಿಯಾಗಿ ಯುಯುತ್ಸುವೂ ಸೇರಿ ತೊಂಬತ್ತೊಂಬತ್ತು ಮಂದಿಯಾಗುವರೇ ಹೊರತು ನೂರಾಗುವುದಿಲ್ಲ. ನೂರಾಗಬೇಕಾದರೆ ದುರ್ಯೋಧನನೂ ಸೇರಬೇಕು. ಅಥವಾ ದುರ್ಯೋಧನನ ನಂತರ ಹೇಳಿರುವ ಯುಯುತ್ಸುವು ಗಾಂಧಾರೀ ಪುತ್ರನೆಂದೂ, ಕಡೆಯಲ್ಲಿ ವೈಶ್ಯಸ್ತ್ರೀಯ ಪುತ್ರನಾದ ಯುಯುತ್ಸುವನ್ನೂ ಸೇರಿಸಿಕೊಂಡರೆ ನೂರೊಂದಾಗುತ್ತದೆಯೆಂದೂ ಭಾವಿಸಬೇಕಾಗುತ್ತದೆ.

೬೭ನೆಯ ಅಧ್ಯಾಯದಲ್ಲಿ ವೈಶ್ಯಸ್ತ್ರೀಯ ಪುತ್ರನಾದ ಯುಯುತ್ಸುವಿನ ವಿಷಯವನ್ನು ಪ್ರತ್ಯೇಕವಾಗಿಯೇ ಹೇಳಲಾಗಿದೆ.

**ವೈಶ್ಯಾಪುತ್ರೋ ಯುಯುತ್ಸುಶ್ಚ ಧಾರ್ತರಾಷ್ಟ್ರಃ ಶತಾಧಿಕಃ ।**
**ಏತದೇಕಶತಂ ರಾಜನ್ಕನ್ಯಾ ಚೈಕಾ ಪ್ರಕೀರ್ತಿತಾ ॥೧೦೬॥**

ಆದರೆ ಈ ವಿಷಯವು ೧೧೬ನೆಯ ಅಧ್ಯಾಯದಲ್ಲಿ ಬರುವುದಿಲ್ಲ.

**ಇತಿ ಪುತ್ರಶತಂ ರಾಜನ್ಕನ್ಯಾ ಚೈವ ಶತಾಧಿಕಾ ।**
**ನಾಮಧೇಯಾನುಪೂರ್ವ್ಯೇಣ ವಿದ್ಧಿ ಜನ್ಮಕ್ರಮಂ ನೃಪ ॥೧೫॥**

ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನವರು ಪ್ರಕಟಿಸಿರುವ ಪುಸ್ತಕದಲ್ಲಿ 'ಶತಂ ದುಃಶಾಸನಾದೀನಾಂ' ಎಂಬ ಶ್ಲೋಕವು ಇರುತ್ತದೆ. ಆದರೆ ಹಿಂದೆ ಹೇಳಿದಂತೆ ಕೌರವರ ನಾಮಧೇಯಗಳಾಗಲೀ, ಯುಯುತ್ಸುವು ವೈಶ್ಯಸ್ತ್ರೀಯಲ್ಲಿ ಹುಟ್ಟಿದ ನೂರೊಂದನೆಯವನೆಂಬ ವಿಷಯವಾಗಲೀ ಬರುವುದಿಲ್ಲ. ೬೩ನೆಯ ಅಧ್ಯಾಯದ ೧೧೮ನೆಯ ಶ್ಲೋಕದಲ್ಲಿ ಈ ವಿಷಯವು ಸ್ಪಷ್ಟವಾಗಿದೆ.

**ತಥಾ ಪುತ್ರಶತಂ ಜಜ್ಞೇ ಧೃತರಾಷ್ಟ್ರಸ್ಯ ಧೀಮತಃ ।**
**ದುರ್ಯೋಧನಪ್ರಭೃತಯೋ ಯುಯುತ್ಸುಃ ಕರಣಸ್ತಥಾ ॥**

ಈ ಕಾರಣಗಳಿಂದ ಇಬ್ಬರು ಯುಯುತ್ಸುಗಳಿದ್ದರೆಂದು ಹೇಳುವುದು ಅನಿವಾರ್ಯವಾಗುತ್ತದೆ. 'ಶತಂ ದುಃಶಾಸನಾದೀನಾಂ' ಎಂಬ ಶ್ಲೋಕದಲ್ಲಿ ಬರುವ ಶತಸಂಖ್ಯೆಯು ಕೇವಲ 'ಅಪಾರ' ಎಂಬ ಅರ್ಥದಲ್ಲಿಯೇ ಹೊರತು ನಿಶ್ಚಯಾರ್ಥವಲ್ಲ. ಅನುಕ್ರಮವಾಗಿ ಯುಯುತ್ಸುವು ಎರಡನೆ ಯವನಾದರೂ ಅವನ ಹೆಸರನ್ನು ಹೇಳದಿರಲು ಕಾರಣವೇನೆಂದರೆ : ಅವನೊಬ್ಬ ಅಪ್ರಸಿದ್ಧನಾಗಿದ್ದನೆಂದೇ ಹೇಳಬೇಕಾಗಿದೆ.

ಗಾಂಧಾರೀಪುತ್ರನಾದ ಯುಯುತ್ಸುವಿನ ಹೆಸರು ನಾಮಾನುಕ್ರಮಣಿಕೆ ಯಲ್ಲಿ ಹೊರತಾಗಿ ಮತ್ತೆಲ್ಲಿಯೂ ಬರುವುದಿಲ್ಲ. ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಯುಯುತ್ಸುವಿನ ಪಾತ್ರವು ಮಹಾಭಾರತದಲ್ಲಿ ಸಂಪೂರ್ಣವಾಗಿದೆ. ಈ ಕಾರಣದಿಂದ ಧೃತರಾಷ್ಟ್ರನಿಗೆ ದುಃಶಲೆಯೂ ಸೇರಿ ಒಟ್ಟು ೧೦೨ ಮಕ್ಕಳಿದ್ದ ರೆಂದು ನಿಶ್ಚಯಿಸಬಹುದಾಗಿದೆ.

## ಪರಿಶಿಷ್ಟ-೨

## ಮಹಾಭಾರತದಲ್ಲಿ ಕುಟುಂಬಯೋಜನೆಯು ಹೇಳಿದೆಯೇ?

**ನಾತಶ್ಚತುರ್ಥಂ ಪ್ರಸವಮಾಪತ್ಸ್ವಪಿ ವದನ್ತ್ಯುತ ।**
**ಅತಃ ಪರಂ ಸ್ವೈರಿಣೀ ಸ್ಯಾದ್ಬನ್ಧಕೀ ಪಞ್ಚಮೇ ಭವೇತ್ ॥**

ಅಧ್ಯಾಯ ೧೨೩ ಶ್ಲೋಕ ೭೭

ಇದು ಕುಂತಿಯು ಪಾಂಡುವಿಗೆ ಹೇಳುವ ಮಾತು. ಇದರ ಅರ್ಥವು ಹೀಗಾಗುತ್ತದೆ 'ಆಪತ್ಕಾಲದಲ್ಲಿಯೂ ನಾಲ್ಕನೆಯ ಪ್ರಸವವನ್ನು ಶಾಸ್ತ್ರಜ್ಞ ರಾದವರು ಒಪ್ಪುವುದಿಲ್ಲ. ಮೂರನೆಯ ಪ್ರಸವವಾದ ಮೇಲೆ ನಾಲ್ಕನೆಯ ಶಿಶುವನ್ನು ಪ್ರಸವಿಸಿದರೆ ಸ್ವೈರಿಣಿಯೂ–ಐದನೆಯದನ್ನು ಪ್ರಸವಿಸಿದರೆ ಬಂಧಕಿಯೂ ಆಗುತ್ತಾಳೆ.' ಈ ಅರ್ಥವಿಲ್ಲಿ ಸ್ಪಷ್ಟವಾಗಿದೆ. ಇದೇ ಅರ್ಥವನ್ನೇ ಕುಟುಂಬಯೋಜನೆಯ ಜಾಹಿರಾತಿಗೂ ಕುಂತಿಯ ಚಿತ್ರವನ್ನೇ ಕೊಟ್ಟು ಈ ಶ್ಲೋಕಾರ್ಥವನ್ನು ಬಳಸಲಾಗುತ್ತಿದೆ. ಈ ಶ್ಲೋಕವನ್ನೆ ಆಧಾರ ವನ್ನಾಗಿಟ್ಟುಕೊಂಡು ಹಿಂದೆಯೂ ಕುಟುಂಬಯೋಜನೆಯಿತ್ತು ; **'ಯನ್ನೇ ಹಾಸ್ತಿ ನ ತತ್ಕ್ವಚಿತ್'**– ಮಹಾಭಾರತದಲ್ಲಿ ಇಲ್ಲದ ವಿಷಯಗಳೇ ಇಲ್ಲ– ಮುಂತಾಗಿಯೂ ಹೇಳಿಕೊಳ್ಳಲಡ್ಡಿಯಿಲ್ಲ. ಆದರೆ ನಾವು ಶ್ಲೋಕಗಳಿಗೆ ಅರ್ಥಮಾಡಬೇಕಾದರೆ ಸಂದರ್ಭವನ್ನು ಸಂಪೂರ್ಣವಾಗಿ ವಿವೇಚಿಸಬೇಕು. ಕುಂತಿಯು ಅದುವರೆಗೆ ನಿಯೋಗದ ಮೂಲಕವಾಗಿ ಮೂವರು ಪುತ್ರರನ್ನು ಪಡೆದಿದ್ದಳು. ಅವಳಿಗೆ ದುರ್ವಾಸರು ಉಪದೇಶಿಸಿದ್ದ ಮಹಾಮಂತ್ರ ವಿದ್ದುದರಿಂದ ಹಲವಾರು ದೇವತೆಗಳಿಂದ ಇನ್ನೂ ಕೆಲವು ಪುತ್ರರನ್ನೂ ಪಡೆಯಬಹುದಾಗಿದ್ದಿತು. ಇದು ಪಾಂಡುವಿಗೂ ತಿಳಿದಿದ್ದಿತು. ಪುತ್ರ ಕಾಮಿಯಾದ ಪಾಂಡುವು–ಸುಪುತ್ರನಾದ ಅರ್ಜುನನು ಹುಟ್ಟಿದ ಮೇಲೂ ಮತ್ತೊಬ್ಬ ಪುತ್ರನನ್ನು ಮಂತ್ರಬಲದಿಂದ (ನಿಯೋಗದಿಂದ) ಪಡೆದು ಕೊಳ್ಳಬೇಕೆಂದು ಇಚ್ಛಿಸಿದನು.

**ಪಾಣ್ಡುಸ್ತು ಪುನರೇವೈನಾಂ ಪುತ್ರಲೋಭಾನ್ಮಹಾಯಶಾಃ ।**
**ವಕ್ತುಮೈಚ್ಛದ್ಧರ್ಮಪತ್ನೀಂ.....**

ಈ ಸಂದರ್ಭದಲ್ಲಿ ಕುಂತಿಯು ನಾಲ್ಕನೆಯವನಿಂದ ಪ್ರಸವವು ಕೂಡ ದೆಂದು ಹೇಳುತ್ತಾಳೆ.

ನಾಲ್ಕನೆಯವನಿಂದ ಗರ್ಭಧಾರಣೆಮಾಡುವವಳು ಸ್ವೈರಿಣಿಯಾಗುವ ಳೆಂದೂ ಐದನೆಯವನಿಂದ ಗರ್ಭಧಾರಣೆಮಾಡುವವಳು ಬಂಧಕಿಯಾಗುವ ಳೆಂದೂ ಅವಳ ಅಭಿಪ್ರಾಯವಾಗಿದೆ. ಅದು ಹೊರತಾಗಿ ನಾಲ್ಕು ಮತ್ತು ಐದನೆಯ ಮಕ್ಕಳನ್ನೇ ಪಡೆಯಕೂಡದೆಂಬುದು ಅವಳ ಅಭಿಪ್ರಾಯವಲ್ಲ.

ಒಂದು ವೇಳೆ ಅವಳ ಅಭಿಪ್ರಾಯದಲ್ಲಿ ಮೂರಕ್ಕಿಂತಲೂ ಹೆಚ್ಚು

ಮಕ್ಕಳೇ ಆಗಕೂಡದು ಎಂದಿದ್ದರೆ–ಅದರಿಂದ ಆಗುವ ಪರಿಣಾಮವನ್ನೂ ಸ್ವಲ್ಪ ವಿವೇಚಿಸೋಣ.

**ದಶಾಸ್ಯಾಂ ಪುತ್ರನಾಧೇಹಿ ಪತಿಮೇಕಾದಶಂ ಕೃಧಿ ।**

ಇತ್ಯಾದಿ ವೇದಮಂತ್ರಗಳು ಬಹುಪುತ್ರತ್ವವನ್ನು ಶ್ಲಾಘಿಸುತ್ತವೆ. 'ಅಷ್ಟಪುತ್ರಸೌಭಾಗ್ಯವತೀ ಭವ' 'ಎಂಟು ಮಕ್ಕಳಾಗಲಿ'–ಎಂದು ವೃದ್ಧರು ಹರಸುವುದನ್ನು ನಾವು ಈಗಲೂ ಕೇಳುತ್ತಿದ್ದೇವೆ. 'ಮಕ್ಕಳಾದರೂ, ಮಳೆಯಾದರೂ ದೇಶಕ್ಕೆ ಹಾನಿಯಿಲ್ಲ'–ಎಂಬ ಗಾದೆಯನ್ನೂ ಕೇಳಿದ್ದೇವೆ. ನಮ್ಮ ಶ್ರುತಿ-ಸ್ಮೃತಿಗಳ ಅಭಿಪ್ರಾಯದಲ್ಲಿ ಹೆಚ್ಚು ಮಕ್ಕಳಾಗಕೂಡದೆಂದಿದ್ದರೆ ಆ ವಿಷಯವು ಕುಂತಿಯೊಬ್ಬಳಿಗೆ ಮಾತ್ರವೇ ತಿಳಿದಿರುವಷ್ಟು ನಿಗೂಢವಾಗಿರುತ್ತಿರಲಿಲ್ಲ. ಕುಂತಿಯು ಹೇಳಿದಂತೆ ನಾಲ್ಕು ಮಕ್ಕಳುಳ್ಳವರು ಸ್ವೈರಿಣಿಯರೂ, ಐದು ಮಕ್ಕಳುಳ್ಳವರು ಬಂಧಕಿಯರೂ ಆಗಿಬಿಟ್ಟರೆ ನಮ್ಮಲ್ಲಿಯೇ ಅನೇಕರು ಸ್ವೈರಿಣಿಯರ ಮತ್ತು ಬಂಧಕಿಯರ ಮಕ್ಕಳೂ ಆಗುತ್ತೇವೆ. ಕುಟುಂಬಯೋಜನೆಯು ಭರದಿಂದ ಪ್ರಚಾರವಾಗುತ್ತಿರುವ ಈ ಕಾಲದಲ್ಲಿಯೂ ನಾಲ್ಕು ಮತ್ತು ನಾಲ್ಕಕ್ಕಿಂತಲೂ ಹೆಚ್ಚು ಮಕ್ಕಳಿರುವವರು ಅನೇಕರಿದ್ದಾರೆ. ಮೇಲಾಗಿ ಕುಂತಿಯ ಓರಗಿತ್ತಿಯಾದ ಗಾಂಧಾರಿಗೇ ನೂರು ಮಕ್ಕಳು ಹುಟ್ಟಿದ್ದುವು.

ನಾಲ್ಕು ಮಕ್ಕಳಾದವಳು ಸ್ವೈರಿಣೀ, ಐದು ಮಕ್ಕಳಾದವಳು ಬಂಧಕೀ ಎಂಬ ಶಾಸ್ತ್ರವಾಕ್ಯವಿದ್ದಲ್ಲಿ ನಾವೆಂದಿಗೂ ಅದನ್ನು ಮೀರುತ್ತಿರಲಿಲ್ಲ. ಆ ಪದ್ಧತಿಯು ಸಾಂಕೇತಿಕವಾಗಿಯೇ ಆದರೂ ಉಳಿದು ಬರುತ್ತಿದ್ದಿತು. ಈ ಎಲ್ಲ ಕಾರಣಗಳಿಂದಾಗಿ– 'ನಾಲ್ಕು ಮಕ್ಕಳನ್ನು ಪ್ರಸವಿಸಿದವಳು ಸ್ವೈರಿಣೀ, ಐದು ಮಕ್ಕಳನ್ನು ಪ್ರಸವಿಸಿದವಳು ಬಂಧಕೀ'–ಎಂದು ಈ ಶ್ಲೋಕಕ್ಕೆ ಅರ್ಥಮಾಡುವುದು ಬಹಳ ಸಾಹಸವೇ ಆಗುತ್ತದೆ. ಕಡೆಯದಾಗಿ 'ಸ್ವೈರಿಣೀ ಮತ್ತು ಬಂಧಕೀ' ಎಂಬ ಪದಗಳಿಗೆ ಅರ್ಥವೇನೆಂಬುದನ್ನು ವಿವೇಚಿಸೋಣ. ಅಮರಕಾರರು :

**ಪುಂಶ್ಚಲೀ ಚರ್ಷಣೀ ಬನ್ಧಕ್ಯಸತೀ ಕುಲಟೇತ್ವರೀ ।**
**ಸ್ವೈರಿಣೀ ಪಾಂಸುಲಾ ಚ...** ( ಮನುಷ್ಯವರ್ಗಃ ) **॥೨೭॥**

ಸ್ವೈರಿಣಿಯನ್ನೂ, ಬಂಧಕಿಯನ್ನೂ– 'ಅಸತೀ'– ಸತೀತ್ವವನ್ನು ಉಳಿಸಿಕೊಂಡಿರದವಳು ; ಪರಪುರುಷಗಾಮಿನೀ ಎಂಬರ್ಥದಲ್ಲಿ ಹೇಳಿದ್ದಾರೆ. ಇದಕ್ಕಿಂತಲೂ ಸ್ಪಷ್ಟವಾಗಿ ಮಹರ್ಷಿಗಳಾದ ಯಾಜ್ಞವಲ್ಕ್ಯರು ತಮ್ಮ ಸ್ಮೃತಿಯಲ್ಲಿ ಸ್ವೈರಿಣಿಯು ಯಾರೆಂಬುದನ್ನು ನಿರೂಪಿಸಿದ್ದಾರೆ.

**ಸ್ವೈರಿಣೀ ಯಾ ಪತಿಂ ಹಿತ್ವಾ ಸವರ್ಣಂ ಕಾಮತಃ ಶ್ರಯೇತ್ ।**

ಅಧ್ಯಾಯ ೧ ಶ್ಲೋಕ ೬೭

**ಯಾ ಪುನಃ ಕೌಮಾರಂ ಪತಿಂ ತ್ಯಕ್ತ್ವಾ ಕಾಮತಃ ಸವರ್ಣ-ಮಾಶ್ರಯತಿ ಸಾ ಸ್ವೈರಿಣೀತಿ ।** ಯಾರು ಕಾಮುಕಳಾಗಿ ತನ್ನ ಯುವಕನಾದ ಪತಿಯನ್ನು ಪರಿತ್ಯಜಿಸಿ, ಕಾಮವಶಳಾಗಿ, ತನ್ನ ವರ್ಣದವನೇ ಆದ ಇನ್ನೊಬ್ಬನನ್ನು ಸೇರುತ್ತಾಳೆಯೋ–ಅವಳಿಗೆ ಸ್ವೈರಿಣೀ ಎಂದು ಹೆಸರು.

ಆದುದರಿಂದ ' ಸ್ವೈರಿಣೀ ಮತ್ತು ಬಂಧಕೀ ' ಎಂಬೀ ಪದಗಳಿಗೆ 'ನಾಲ್ಕು ಮತ್ತು ಐದನೆಯ ಪುರುಷನೊಡನೆ ಸಂಗಮಾಡುವವಳು' ಎಂಬ ಅಭಿಪ್ರಾಯವೇ ಹೊರತು ನಾಲ್ಕು ಮತ್ತು ಐದನೆಯ ಪ್ರಸವವೇ ಆಗಕೂಡದೆಂಬುದು ಕುಂತಿಯ ಅಥವಾ ಅವಳು ಹೇಳಿರುವ ಈ ಶ್ಲೋಕದ ಅಭಿಪ್ರಾಯವಲ್ಲ.

## ವಿಷಯವ್ಯತ್ಯಾಸ

೧೪೧ನೆಯ ಅಧ್ಯಾಯದಲ್ಲಿ ಪಾಂಡವರು ಅರಗಿನ ಮನೆಯಿಂದ ತಪ್ಪಿಸಿಕೊಂಡ ವಿಷಯವನ್ನು ಸಂಕ್ಷೇಪವಾಗಿ ತಿಳಿಸುವಾಗ ವಿದುರನೇ ನಾವೆಯನ್ನು ಸಿದ್ಧಪಡಿಸಿ– 'ಧೃತರಾಷ್ಟ್ರನು ವಂಶದ ಕೀರ್ತಿಯನ್ನೇ ನಾಶಮಾಡಲು ಹುಟ್ಟಿರುವನೆಂದೂ, ಅವನು ನಿಮ್ಮನ್ನು ಮೃತ್ಯುವಿಗೀಡುಮಾಡಲು ಸನ್ನಾಹ ಮಾಡುತ್ತಿರುವನೆಂದೂ, ಆದುದರಿಂದ ತಾನು ಸಿದ್ಧಪಡಿಸಿರುವ ನೌಕೆಯಲ್ಲಿ ಪ್ರಯಾಣಮಾಡಿ ಮೃತ್ಯುವಿನಿಂದ ಪಾರಾಗಬೇಕೆಂದೂ'– ಕುಂತಿಗೆ ಹೇಳುತ್ತಾನೆ. ಮುಂದೆ ಗಂಗಾನದಿಯನ್ನು ದಾಟುವ ಪ್ರಕರಣವು ಬಂದಾಗ ವಿದುರಪ್ರೇಷಿತನಾದ ನಾವಿಕನು ಮಾತ್ರವೇ ಬರುತ್ತಾನೆ. ವಿದುರನು ಬಂದು ಕುಂತಿಯೊಡನೆ ಮಾತನಾಡುವ ಪ್ರಕರಣವೇ ಇಲ್ಲಿರುವುದಿಲ್ಲ.

ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನವರು

ಪ್ರಕಟಿಸಿರುವ ಮಹಾಭಾರತದಲ್ಲಿ ೧೪೧ನೆಯ ಅಧ್ಯಾಯದ ಪ್ರಸ್ತಾಪವೇ ಇಲ್ಲ. ಗಂಗೆಯನ್ನು ದಾಟಿಸಲು ವಿದುರಪ್ರೇಷಿತನಾದ ನಾವಿಕನು ಬಂದ ಪ್ರಕರಣವನ್ನೂ ಪ್ರಕ್ಷಿಪ್ತವೆಂದೇ ಅಭಿಪ್ರಾಯಪಡಲಾಗಿದೆ. ೧೪೧ನೆಯ ಅಧ್ಯಾಯದಲ್ಲಿ ಸಂಕ್ಷಿಪ್ತ ಕಥೆಯನ್ನು ತಿಳಿಸುವಾಗ ಕೂಡ ಅಸಂಭವವಾದುದನ್ನು ಹೇಳಿರುವುದರ ಕಾರಣವನ್ನು ಊಹಿಸಲು ಸಾಧ್ಯವಿಲ್ಲ. ಆದರೆ ಈ ವಿಷಯವು ಗೋರಖಪುರ, ಕುಂಭಕೋಣಗಳಲ್ಲಿ ಪ್ರಕಟವಾಗಿರುವ ಪುಸ್ತಕಗಳಲ್ಲಿಯೂ ಮತ್ತು ಮಹಾಭಾರತದ ಆಂಗ್ಲಭಾಷಾಂತರದಲ್ಲಿಯೂ ಇರುವುದರಿಂದ ನಾವೂ ಇದನ್ನು ಪ್ರಕಟಿಸಿರುತ್ತೇವೆ.

–:೦:–

॥ ಶ್ರಿಯೈನಮಃ ಶ್ರೀಗುರುಭ್ಯೋ ನಮಃ ॥

## ಮಹಾಭಾರತದ ಸಂಕ್ಷಿಪ್ತಪರಿಚಯ ಮತ್ತು ಅದರ ಮಹತ್ತ್ವ

ಮೂಲಲೇಖಕರು : ಶ್ರೀರಾಮ- ಅನುವಾದಕರು : ಶ್ರೀಹರಿ

ಶ್ರೀಮನ್ಮಹಾಭಾರತವು ಆರ್ಷಸಾಹಿತ್ಯ–ಎಂದರೆ ಪುರಾತನಸಾಹಿತ್ಯದ ಏಕಮೇವ ಮಹಾಗ್ರಂಥವು. ವಿಷಯ ಮತ್ತು ಆಕಾರ–ಈ ಎರಡು ದೃಷ್ಟಿ ಗಳಿಂದಲೂ ಇದರ ಮಹತ್ತ್ವವು ಸರ್ವಮಾನ್ಯವಾಗಿದೆ. ಸಮಗ್ರಭಾರತವರ್ಷದ ಸಂಸ್ಕೃತಿ, ಸಭ್ಯತೆ, ಆದರ್ಶ–ಇವುಗಳ ಪ್ರಾಚೀನಸ್ವರೂಪವು ಈ ಗ್ರಂಥದಲ್ಲಿ ಪೂರ್ಣರೂಪದಲ್ಲಿ ಸಿಕ್ಕುವುದು. ಮಹಾಭಾರತವು ಒಂದು ಅಗಾಧವಾದ ಮಹಾಸಾಗರದಂತೆ ಇದೆ. ಇದರೊಳಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ–ಈ ನಾಲ್ಕು ಪುರುಷಾರ್ಥಗಳನ್ನೂ ಕುರಿತಾದ ಅನಂತವಾದ ಉಪದೇಶರತ್ನಗಳು ತುಂಬಿವೆ. ವಿಶ್ವದ ಸರ್ವಮಾನ್ಯಗ್ರಂಥವಾದ ಶ್ರೀಮದ್ಭಗವದ್ಗೀತೆಯೂ ಈ ಮಹಾಸಾಹಿತ್ಯಸಾಗರದಲ್ಲಿರುವ ಒಂದು ಅತ್ಯಂತ ಜಾಜ್ವಲ್ಯಮಾನವಾದ ರತ್ನ. ಮಹಾಭಾರತವನ್ನು ಸಂಪೂರ್ಣ ವೇದ, ಉಪನಿಷತ್, ದರ್ಶನ, ಪುರಾಣ, ಧರ್ಮಶಾಸ್ತ್ರ, ಅರ್ಥಶಾಸ್ತ್ರ ಮತ್ತು ಮೋಕ್ಷಶಾಸ್ತ್ರಗಳ ಏಕೈಕಪ್ರತಿನಿಧಿಗ್ರಂಥವೆಂದು ತಿಳಿದರೆ ಅದು ಅತಿಶಯೋಕ್ತಿ ಎನಿಸದು. ಇದರ ಐತಿಹಾಸಿಕಮಹತ್ತ್ವವೂ ಕಡಿಮೆಯದಲ್ಲ. ಭಾರತ ವರ್ಷದ ಪೂರ್ವಕಾಲದ ಭೌಗೋಳಿಕ ಮತ್ತು ರಾಜಕೀಯಪರಿಸ್ಥಿತಿಗಳ

ಸ್ಪಷ್ಟಚಿತ್ರವು ನಮಗೆ ಈ ಗ್ರಂಥದಲ್ಲಿ ದೊರೆಯುತ್ತದೆ. ಇದಲ್ಲದೇ ಜ್ಯೌತಿಷ, ರಾಜನೀತಿ–ಇವೇ ಮೊದಲಾದ ವಿಷಯಗಳ ಬಗ್ಗೆಯೂ ಬೆಳಕು ಚೆಲ್ಲಿದೆ. ಈ ಎಲ್ಲ ಕಾರಣಗಳಿಂದಲೂ ಈ ಗ್ರಂಥವು ಸರ್ವವಿದ್ವಜ್ಜನಾದರಣೀಯವಾಗಿದೆ.

ಈ ಗ್ರಂಥದ ಕರ್ತೃಗಳು ಭಗವಾನ್ ವೇದವ್ಯಾಸಮಹರ್ಷಿಗಳು. ಅವರು ಅರುವತ್ತು ಲಕ್ಷ ಶ್ಲೋಕಸಂಖ್ಯೆಯ ಮಹಾಭಾರತ ಸಂಹಿತೆಯನ್ನು ರಚಿಸಿದರು.

**ಷಷ್ಟಿಂ ಶತಸಹಸ್ರಾಣಿ ಚಕಾರಾನ್ಯಾಂ ಸ ಸಂಹಿತಾಮ್ ।**

[ಆದಿಪರ್ವ-ಅ.೧ ಶ್ಲೋ-೧೦೫]

ಅದರಲ್ಲಿ ಒಂದೇ ಗ್ರಂಥದ ನಾಲ್ಕು ಚಿಕ್ಕ-ದೊಡ್ಡ ಸಂಸ್ಕರಣಗಳಿದ್ದುವು. ಪ್ರತಿಸಂಸ್ಕರಣವೂ ಸಂಕ್ಷೇಪವಾಗಿಯೋ ಅಥವಾ ವಿಸ್ತಾರವಾಗಿಯೋ ಮಹಾಭಾರತದ ಸಂಪೂರ್ಣವಿಷಯಗಳನ್ನೂ ಒಳಗೊಂಡಿದ್ದಿತು. ಅವುಗಳಲ್ಲಿ ಮೂವತ್ತು ಲಕ್ಷ ಶ್ಲೋಕಗಳನ್ನೊಳಗೊಂಡ ಪ್ರಥಮಸಂಸ್ಕರಣವನ್ನು ದೇವರ್ಷಿಗಳಾದ ನಾರದರು ದೇವಲೋಕದಲ್ಲಿ ದೇವತೆಗಳಿಗಾಗಿ ಪ್ರಚುರಪಡಿಸಿದರು. ಹದಿನೈದು ಲಕ್ಷ ಶ್ಲೋಕಸಂಖ್ಯೆಯ ದ್ವಿತೀಯಸಂಸ್ಕರಣವು ಪಿತೃಲೋಕದಲ್ಲಿ ಪಿತೃಗಳಿಗೋಸ್ಕರ ದೇವಲ ಮತ್ತು ಅಸಿತಮುನಿಗಳಿಂದ ಪ್ರಚಾರಿತವಾಯಿತು. ಹದಿನಾಲ್ಕು ಲಕ್ಷ ಶ್ಲೋಕಸಂಖ್ಯೆಯ ಮೂರನೆಯ ಸಂಸ್ಕರಣವನ್ನು ಶುಕಮಹರ್ಷಿಗಳು ಗಂಧರ್ವ, ಯಕ್ಷ ಮತ್ತು ರಾಕ್ಷಸರಿಗೆ ಉಪದೇಶಿಸಿದರು. ಒಂದು ಲಕ್ಷ ಶ್ಲೋಕಸಂಖ್ಯೆಯ ನಾಲ್ಕನೆಯ ಸಂಸ್ಕರಣವು ಮನುಷ್ಯಲೋಕದಲ್ಲಿ ಪ್ರಚುರವಾಯಿತು. ಇದರ ವಕ್ತಾರರು ಧರ್ಮಾತ್ಮರಾದ, ಸರ್ವವೇದವಿದರಾದ, ವ್ಯಾಸಶಿಷ್ಯರಾದ ವೈಶಂಪಾಯನರು. ರಾಜನಾದ ಜನಮೇಜಯನೂ ಮತ್ತು ಯಜ್ಞಶಾಲೆಯಲ್ಲಿ ನೆರೆದಿದ್ದ ಋಷಿವರ್ಯರೂ ಶ್ರೋತೃಗಳು. [ಆ.ಅ.೧, ಶ್ಲೋ. ೬-೯,] ಜನಮೇಜಯನ ಯಜ್ಞಶಾಲೆಯಲ್ಲಿ ಮಹಾಭಾರತವನ್ನು ಕೇಳಿದನಂತರ ಉಗ್ರಶ್ರವ ಸೌತಿಗಳು ನೈಮಿಷಾರಣ್ಯದಲ್ಲಿ ನೆರೆದಿದ್ದ ಶೌನಕಾದಿ ಋಷಿಗಳಿಗೆ ಅದೇ ಕಥೆಯನ್ನು ಹೇಳಿದರು. ವ್ಯಾಸಮಹರ್ಷಿಗಳು ಒಂದು ನೂರು ಪರ್ವಗಳಲ್ಲಿ

ಹೇಳಿದ ಮಹಾಭಾರತ ಕಥೆಯನ್ನೇ ಉಗ್ರಶ್ರವಸೌತಿಗಳು ಹದಿನೆಂಟು ಪರ್ವಗಳಲ್ಲಿ ಅಡಗಿಸಿ ಹೇಳಿದರು. [ಆ.ಪ.ಅ.೧ ಶ್ಲೋ.೬೩-೯೪] ಪ್ರಾಯಶಃ ಎಲ್ಲ ಪುರಾಣಗಳನ್ನೂ ಮತ್ತು ಮಹಾಭಾರತವನ್ನೂ ಲೋಮಹರ್ಷಣ ಸೂತರು ಅಥವಾ ಅವರ ಮಕ್ಕಳಾದ ಉಗ್ರಶ್ರವರೇ ಹೇಳಿರುತ್ತಾರೆ. ಮೊದಲು ಲೋಮಹರ್ಷಣರೇ ಋಷಿಗಳ ಸತ್ರಗಳಲ್ಲಿ ಪುರಾಣಶ್ರವಣವನ್ನು ಮಾಡಿಸುತ್ತಿದ್ದರು. ಆದರೆ ತೀರ್ಥಯಾತ್ರೆಮಾಡುತ್ತಿದ್ದ ಬಲರಾಮನು ನೈಮಿಷಾರಣ್ಯದಲ್ಲಿ ಋಷಿಸಮೂಹದ ಮಧ್ಯದಲ್ಲಿ ಉಚ್ಚಾಸನದಲ್ಲಿ ಕುಳಿತಿದ್ದ ಲೋಮಹರ್ಷಣಸೂತರನ್ನು ಕಂಡು ಕುಪಿತನಾಗಿ ಅವರನ್ನು ಅನ್ಯಾಯಿ ಗಳೆಂದು ತಿಳಿದು ಕೊಂದುಬಿಟ್ಟನು. [ಶ್ರೀಮದ್ಭಾಗವತ, ದಶಮಸ್ಕಂಧ, ಅ. ೭೮ ಶ್ಲೋ. ೨೨-೨೮] ಅಂದಿನಿಂದ ಲೋಮಹರ್ಷಣರ ಪುತ್ರರಾದ ಉಗ್ರಶ್ರವರೇ ತಂದೆಯ ಕಾರ್ಯವನ್ನು ವಹಿಸಿಕೊಂಡರು. ಜನಮೇಜಯನ ಮಹಾಭಾರತಶ್ರವಣಕಾಲದಲ್ಲಿ ಲೋಮಹರ್ಷಣಸೂತರು ಜೀವಿಸಿರಲಿಲ್ಲ. ಲೋಮಹರ್ಷಣಸೂತರ ಮತ್ತು ಉಗ್ರಶ್ರವಸೌತಿಗಳ ಕಾಲದಲ್ಲಿ ಭಗವಾನ್ ವೇದವ್ಯಾಸರು ಮತ್ತೊಮ್ಮೆ ಮಹಾಭಾರತವನ್ನೂ ಮತ್ತು ಇತರ ಪುರಾಣ ಗಳ ಪ್ರಮುಖವಕ್ತಾರರ ಮತ್ತು ಶ್ರೋತಾರರ ಸಂವಾದಗಳನ್ನೂ ನೂತನ ಸಂಸ್ಕರಣದಲ್ಲಿ ಅಳವಡಿಸಿ, ಪುರಾಣಗಳ ಶ್ಲೋಕಸಂಖ್ಯೆಯನ್ನು ಎಣಿಕೆ ಮಾಡಿ, ಪ್ರತಿಯೊಂದು ಪುರಾಣದಲ್ಲಿಯೂ ಮಿಕ್ಕೆಲ್ಲ ಪುರಾಣಗಳ ಸಂಕ್ಷಿಪ್ತ ಪರಿಚಯವನ್ನೂ ಭಗವಾನ್ ವ್ಯಾಸರು ಕೊಟ್ಟಿದ್ದಾರೆ. ಆದುದರಿಂದಲೇ ಪ್ರಾಯಶಃ ಎಲ್ಲ ಪುರಾಣಗಳೂ ಸೂತಪೌರಾಣಿಕರ ಪ್ರವಚನದಿಂದಲೇ ಪ್ರಾರಂಭವಾಗುತ್ತವೆ. ಈ ನೂತನ ಸಂಸ್ಕರಣದ ಸಂಪಾದನೆಯ ಸಮಯ ದಲ್ಲಿಯೇ ಮಹಾಭಾರತದಲ್ಲಿ ಸೌತಿ-ಶೌನಕರ ಸಂವಾದ ಮತ್ತು ವೈಶಂಪಾ ಯನ-ಜನಮೇಜಯರ ಸಂವಾದಗಳು ಅಳವಡಿಸಲ್ಪಟ್ಟಂತೆ ತೋರುತ್ತದೆ. ಅನಂತರ ಅನುಕ್ರಮಣಿಕಾಪರ್ವ ಮತ್ತು ಪರ್ವಸಂಗ್ರಹಪರ್ವ ಮುಂತಾ ದುವುಗಳಲ್ಲಿ ಗ್ರಂಥದಲ್ಲಿ ವರ್ಣಿತವಾದ ವಿಷಯಗಳ ಸಂಕ್ಷಿಪ್ತಸೂಚಿಯೂ ಮತ್ತು ಶ್ಲೋಕಸಂಖ್ಯೆಗಳೂ ಕೊಡಲ್ಪಟ್ಟಿವೆ. ಇದರಿಂದ ಮಹಾಭಾರತದಲ್ಲಿ ಮುಂದೆ ಪ್ರಕ್ಷಿಪ್ತಶ್ಲೋಕಗಳ ಮತ್ತು ಪ್ರಕ್ಷಿಪ್ತವಿಷಯಗಳ ಸೇರಿ ಹೋಗುವಿಕೆಯ ಶಂಕೆಯು ಪ್ರಾಯಶಃ ದೂರವಾಯಿತು. ಅನುಕ್ರಮಣಿಕಾ

ಧ್ಯಾಯದಲ್ಲಿ ಕೊಟ್ಟಿರುವ ಶ್ಲೋಕಸೂಚಿಯ ಪ್ರಕಾರ ಮಹಾಭಾರತದಲ್ಲಿ ಒಟ್ಟು ೧,೯೨೩ ಅಧ್ಯಾಯಗಳೂ ಮತ್ತು ೮೪,೨೪೪ ಶ್ಲೋಕಗಳೂ ಇವೆ. ಖಿಲಪರ್ವವಾದ ಹರಿವಂಶದ ೧೨,೦೦೦ ಶ್ಲೋಕಗಳನ್ನೂ ಸೇರಿಸಿದರೆ ಒಟ್ಟು ೯೬,೨೪೪ ಶ್ಲೋಕಗಳಾಗುತ್ತವೆ. ಇದೇ ಈಗಿರುವ ಮಹಾಭಾರತದ ಶ್ಲೋಕ ಸಂಖ್ಯೆಯಾಗಿದೆ. ಪ್ರತ್ಯೇಕಪರ್ವಗಳ, ಅಧ್ಯಾಯಗಳ ಮತ್ತು ಶ್ಲೋಕಗಳ ವಿವರಣೆಯು ಕೆಳಗೆ ಕೊಟ್ಟಿರುವ ಕೋಷ್ಟಕದಿಂದ ತಿಳಿದುಬರುತ್ತದೆ.

| | ಪರ್ವ | | ಅಧ್ಯಾಯ | ಶ್ಲೋಕ |
|---|---|---|---|---|
| 1 | ಆದಿಪರ್ವ | .... | 227 | 8,884 |
| 2 | ಸಭಾಪರ್ವ | .... | 78 | 2,511 |
| 3 | ವನಪರ್ವ | .... | 269 | 11,664 |
| 4 | ವಿರಾಟಪರ್ವ | .... | 67 | 2,050 |
| 5 | ಉದ್ಯೋಗಪರ್ವ | .... | 186 | 6,698 |
| 6 | ಭೀಷ್ಮಪರ್ವ | .... | 117 | 5,884 |
| 7 | ದ್ರೋಣಪರ್ವ | .... | 170 | 8,909 |
| 8 | ಕರ್ಣಪರ್ವ | .... | 69 | 4,964 |
| 9 | ಶಲ್ಯಪರ್ವ | .... | 59 | 3,220 |
| 10 | ಸೌಪ್ತಿಕಪರ್ವ | .... | 18 | 870 |
| 11 | ಸ್ತ್ರೀಪರ್ವ | .... | 27 | 775 |
| 12 | ಶಾಂತಿಪರ್ವ | .... | 329 | 14,732 |
| 13 | ಅನುಶಾಸನಪರ್ವ | .... | 146 | 8,000 |
| 14 | ಆಶ್ವಮೇಧಿಕಪರ್ವ | .... | 103 | 3,320 |
| 15 | ಆಶ್ರಮವಾಸಿಕಪರ್ವ | .... | 42 | 1,111 |
| 16 | ಮೌಸಲಪರ್ವ | .... | 8 | 320 |
| 17 | ಮಹಾಪ್ರಸ್ಥಾನಪರ್ವ | .... | 3 | 123 |
| 18 | ಸ್ವರ್ಗಾರೋಹಣಪರ್ವ | .... | 5 | 209 |
| | ಒಟ್ಟು | .... | 1,923 | 84,244 |

| | | | | |
|---|---|---|---|---|
| | | | 1,923 | 84,244 |
| 19 | ಹರಿವಂಶ | .... | 318 | 12,000 |
| | ಒಟ್ಟುಸಂಖ್ಯೆ | .... | 2,241 | 96,244 |

ಈಚಿನ ಕೆಲವು ಪ್ರತಿಗಳಲ್ಲಿ ಸಂಪೂರ್ಣ ಒಂದು ಲಕ್ಷ ಶ್ಲೋಕಗಳೂ ಮತ್ತು ಅದಕ್ಕಿಂತ ಹೆಚ್ಚು ಸಂಖ್ಯೆಯ ಶ್ಲೋಕಗಳೂ ನೋಡಸಿಗುತ್ತವೆ. ಆದರೆ ಮಹಾಭಾರತದ ಶ್ಲೋಕಗಳ ಪ್ರಾಮಾಣಿಕಸಂಖ್ಯೆಯು ಮೇಲೆ ಹೇಳಿರುವುದೇ ಆಗಿದೆ. ಈಗಿರುವ ಮಹಾಭಾರತ ಗ್ರಂಥವು ಸುಮಾರು ಒಂದು ಲಕ್ಷ ಶ್ಲೋಕ ಸಂಖ್ಯೆಯದೆಂಬ ಅಭಿಪ್ರಾಯವು ಪ್ರಾಚೀನಕಾಲದಿಂದಲೂ ಇದೆ ಮತ್ತು ಅನುಕ್ರಮಣಿಕಾಧ್ಯಾಯದಿಂದ ಇದರ ಸಮರ್ಥನೆಯೂ ದೊರೆಯುತ್ತದೆ. ವಿವಿಧೋಪಾಖ್ಯಾನಯುಕ್ತವಾದ ಒಂದು ಲಕ್ಷ ಶ್ಲೋಕಯುಕ್ತವಾದ ಗ್ರಂಥವೇ 'ಆದಿಭಾರತ'ವೆಂದು ಕರೆಯಲ್ಪಡುತ್ತದೆ. [ಆ.ಪ. ಅ-೧ ಶ್ಲೋಕ ೧೦೧] ಭಗವಾನ್ ವ್ಯಾಸಮಹರ್ಷಿಗಳು ಆದಿಭಾರತದಿಂದಲೇ ೨೪,೦೦೦ ಶ್ಲೋಕ ಗಳನ್ನು ಆರಿಸಿ ಒಂದು ಭಾರತಸಂಹಿತೆಯನ್ನು ಮಾಡಿದ್ದರು. ಅದರಲ್ಲಿ ಭರತವಂಶೀಯರ ಕಥೆಯು ಮಾತ್ರವಿದ್ದು, ಮಿಕ್ಕ ಉಪಾಖ್ಯಾನಗಳಿರಲಿಲ್ಲ. ಆ ಗ್ರಂಥವು ವಿದ್ವಜ್ಜನರಲ್ಲಿ ಭಾರತವೆಂದು ಪ್ರಸಿದ್ಧಿ ಪಡೆಯಿತು. [ಆ.ಪ. ಅ.೧-೧೦೨] ಈಗ ಆ ಹೆಸರಿನ ಬೇರೆ ಯಾವ ಗ್ರಂಥವೂ ದೊರಕುವುದಿಲ್ಲ.

ಮಹಾಭಾರತದಲ್ಲಿ ಮೂರು ಭಾಗಗಳುಂಟೆಂದೂ, ಅವು ಜಯ, ಭಾರತ, ಮಹಾಭಾರತಗಳೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. 'ಜಯ'ವು ವ್ಯಾಸಕೃತ, 'ಭಾರತ' ವು ವೈಶಂಪಾಯನಕೃತ ಮತ್ತು ' 'ಮಹಾಭಾರತ' ವು ಉಗ್ರಶ್ರವಸೌತಿಕೃತ–ಎಂಬುದು ಇವರ ಅಭಿಪ್ರಾಯ. 'ಜಯ' ಗ್ರಂಥದ ಶ್ಲೋಕಸಂಖ್ಯೆಯೆಷ್ಟೆಂಬುದನ್ನು ಅವರು ಸ್ಪಷ್ಟವಾಗಿ ಹೇಳದಿದ್ದರೂ 'ಜಯ' ಗ್ರಂಥವನ್ನೇ ತಮ್ಮದೇ ಶ್ಲೋಕಗಳಿಂದ ಹೆಚ್ಚಿಸಿ 24,000 ಶ್ಲೋಕಸಂಖ್ಯೆಯ ಭಾರತವನ್ನು ವೈಶಂಪಾಯನರು ರಚಿಸಿದರೆಂದೂ, ಅದನ್ನು ಇನ್ನೂ ಅನೇಕೋಪಾಖ್ಯಾನಗಳಿಂದ ಹೆಚ್ಚಿಸಿ ಒಂದು ಲಕ್ಷ ಶ್ಲೋಕ ಸಂಖ್ಯೆಯ ಮಹಾಭಾರತಗ್ರಂಥವನ್ನು ಉಗ್ರಶ್ರವಸೌತಿಗಳು ರಚಿಸಿದ ರೆಂದೂ ಅಭಿಪ್ರಾಯಪಡುತ್ತಾರೆ. ಈ ವಿದ್ವಾಂಸರ ಅಭಿಪ್ರಾಯದಂತೆ

ಭಾರತಕ್ಕೆ ದೊಡ್ಡ ಎಂದರೆ ಬೃಹದಾಕಾರವನ್ನು ಕೊಟ್ಟುದುದರಿಂದ ಅದಕ್ಕೆ 'ಮಹಾಭಾರತ'ವೆಂದು ಹೆಸರುಬಂದಿತು. ಇದರಿಂದಲೇ ಈ ವಿದ್ವಾಂಸರು ವ್ಯಾಸ, ವೈಶಂಪಾಯನ ಮತ್ತು ಸೌತಿಗಳು ಸಮಕಾಲೀನರಲ್ಲವೆಂದೂ ಅಭಿಪ್ರಾಯಪಡುತ್ತಾರೆ. ವೈಶಂಪಾಯನರು ವ್ಯಾಸರ ಸಾಕ್ಷಾಚ್ಛಿಷ್ಯರಲ್ಲ ವೆಂದೂ, ಅವರ ಶಿಷ್ಯಪರಂಪರೆಯಲ್ಲಿ ಒಬ್ಬರಾಗಿರಬೇಕೆಂದೂ ಅಭಿಪ್ರಾಯ ಪಡುತ್ತಾರೆ. ಭಾರತವರ್ಷದ ಐತಿಹಾಸಿಕಪರಿಸ್ಥಿತಿಯ ದಿಗ್ದರ್ಶನಮಾಡುತ್ತಾ ಈ ವಿದ್ವಾಂಸರು ಕ್ರಿ.ಪೂ. ಸುಮಾರು ೨೦೦-೩೦೦ ವರ್ಷಗಳಲ್ಲಿ ಜೈನ ಮತ್ತು ಬೌದ್ಧಮತಗಳು ಪ್ರಬಲಹೊಂದಿ ಸನಾತನಧರ್ಮದ ಮೇಲೆ ದಾಳಿ ಯಾಗುತ್ತಿದ್ದಾಗ ಸೌತಿಗಳು ಮಹಾಭಾರತಕ್ಕೆ ವರ್ತಮಾನರೂಪವನ್ನು ಕೊಟ್ಟರೆಂದು ಅಭಿಪ್ರಾಯಪಡುತ್ತಾರೆ.

ವಿಚಾರಮಾಡಿದರೆ : ಮೇಲಿನ ಅಭಿಪ್ರಾಯವು ಸರಿಯಲ್ಲವೆಂದು ತೋರುತ್ತದೆ. ಮಹಾಭಾರತದ ವಿಷಯದಲ್ಲಿ ನಿರ್ಣಯಮಾಡಲು ಹೊರಗಿನ ಯಾವ ಪ್ರಮಾಣವನ್ನೇ ಆಗಲೀ ಆಶ್ರಯಿಸುವ ಅಗತ್ಯವಿಲ್ಲ. ಈ ಗ್ರಂಥ ದೊಳಗೇ ನಿರ್ಣಯಮಾಡಲು ಸಾಕಷ್ಟು ಸಾಮಗ್ರಿಗಳಿವೆ. ಪ್ರಥಮತಃ, ಜಯ, ಭಾರತ ಮತ್ತು ಮಹಾಭಾರತಗಳು ಬೇರೆ-ಬೇರೆ ಗ್ರಂಥಗಳೆಂದು ಸಿದ್ಧ ಮಾಡುವುದು ಕಷ್ಟಸಾಧ್ಯ. ಹಿಂದೆಯೇ ಹೇಳಿದಂತೆ ಉಪಾಖ್ಯಾನಸಹಿತವಾದ ಒಂದು ಲಕ್ಷ ಶ್ಲೋಕಸಂಖ್ಯೆಯ ಗ್ರಂಥವೇ 'ಆದಿಭಾರತ'ವೆಂದು ತಿಳಿಯುತ್ತದೆ. ಉಪಾಖ್ಯಾನರಹಿತವಾದ ೨೪,೦೦೦ ಶ್ಲೋಕಸಂಖ್ಯೆಯ ಸಂಕಲನಗ್ರಂಥವು 'ಭಾರತ'ವೆಂದೂ ಕರೆಯಲ್ಪಡುತ್ತದೆ. ಈ ರೀತಿಯಾಗಿ 'ಆದಿಭಾರತ'– 'ಭಾರತ'ಗಳಲ್ಲಿ ಯಾವ ವಿಧವಾದ ವಾಸ್ತವಿಕಭೇದವೂ ಕಾಣಬರುವುದಿಲ್ಲ. ೨೪,೦೦೦ ಶ್ಲೋಕಗಳ ಸಂಕ್ಷಿಪ್ತಸಂಕಲನವು ವೈಶಂಪಾಯನರಿಂದ ರಚಿತ ವಾದುದೆಂದು ಮಹಾಭಾರತದಲ್ಲಿ ಎಲ್ಲಿಯೂ ಹೇಳಿಲ್ಲ. ಅಲ್ಲಿ 'ಚಕ್ರೇ' ಎಂಬ ಕ್ರಿಯಾಪದಕ್ಕೆ, ಹಿಂದಿನ ಶ್ಲೋಕದಲ್ಲಿ ಅದರ ಕರ್ತೃಪದವು 'ದ್ವೈಪಾಯನ' ಎಂದಿದೆ. ಆದ್ದರಿಂದ ಅದರ ಸಂಪಾದಕರು ವ್ಯಾಸರೆಂದೇ ತಿಳಿಯುತ್ತದೆ. ಇದ ರೊಂದಿಗೆ ಮಹಾಭಾರತವನ್ನು ಸಂಗ್ರಹಿಸಿ ಭಾರತವನ್ನು ರಚಿಸಲಾಯಿತೇ ಹೊರತು ಭಾರತವನ್ನು ಹಿಗ್ಗಿಸಿ ಮಹಾಭಾರತವನ್ನು ರಚಿಸಲಿಲ್ಲವೆಂಬುದನ್ನು ಜ್ಞಾಪಕದಲ್ಲಿಡುವುದೊಳ್ಳೆಯದು. ಆದುದರಿಂದ ಮಹಾಭಾರತವೇ ಮೊದಲು

ರಚಿಸಲ್ಪಟ್ಟಿತೆಂಬುದು ನಿಶ್ಚಯ. 'ಆದ್ಯಂ ಭಾರತಂ' ಎಂಬ ವಚನವು ಇದನ್ನು ಪುಷ್ಟೀಕರಿಸುತ್ತದೆ. ಒಂದು ಲಕ್ಷಶ್ಲೋಕಸಂಖ್ಯೆಯ ಮಹಾಭಾರತ ಸಂಹಿತೆಯು ವ್ಯಾಸಕೃತವೋ, ಸೌತಿಕೃತವೋ–ಎಂಬುದನ್ನೀಗ ನೋಡೋಣ. 'ಜಯ ಮತ್ತು ಮಹಾಭಾ ರತ'ಗಳು ಬೇರೆ ಬೇರೆ ಗ್ರಂಥಗಳೋ, ಒಂದೇ ಗ್ರಂಥದ ಬೇರೆ ಬೇರೆ ಹೆಸರುಗಳೋ–ಎಂಬುದೂ ವಿಚಾರಣೀಯವೇ. ಈ ಎರಡೂ ಪ್ರಶ್ನೆಗಳಿಗೆ ಉತ್ತರವನ್ನು ವೈಶಂಪಾಯನರ ಮಾತಿನಲ್ಲೇ ಕೇಳೋಣ.

**ಇದಂ ಶತಸಹಸ್ರಂ ತು ಶ್ಲೋಕಾನಾಂ ಪುಣ್ಯಕರ್ಮಣಾಮ್ ।**
**ಸತ್ಯವತ್ಯಾತ್ಮಜೇನೇಹ ವ್ಯಾಖ್ಯಾತಮಮಿತೌಜಸಾ ।**
**ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾ ॥**

ಅಮಿತತೇಜಸ್ವಿಗಳಾದ, ಸತ್ಯವತೀನಂದನರಾದ ವ್ಯಾಸಮಹರ್ಷಿಗಳು ಈ ಲೋಕದಲ್ಲಿ ಈ ಒಂದು ಲಕ್ಷ ಶ್ಲೋಕಗಳನ್ನು ರಚನೆಮಾಡಿದರು. 'ಜಯ' ಎಂಬ ಹೆಸರಿನ ಇತಿಹಾಸವು ಇದು. ವಿಜಯೇಚ್ಛುಗಳು ಈ ಗ್ರಂಥವನ್ನು ಶ್ರವಣಮಾಡಬೇಕು.

**ತ್ರಿಭಿರ್ವರ್ಷೈಃ ಸದೋತ್ಥಾಯ ಕೃಷ್ಣದ್ವೈಪಾಯನೋ ಮುನಿಃ ।**
**ಮಹಾಭಾರತಮಾಖ್ಯಾನಂ ಕೃತವಾನಿದಮದ್ಭುತಮ್ ॥**

ಭಗವಾನ್ ವ್ಯಾಸಮಹರ್ಷಿಗಳು ಮೂರು ವರ್ಷಗಳ ಅವಿರತ ಪರಿ ಶ್ರಮದಿಂದ ಈ ಅದ್ಭುತೋಪಾಖ್ಯಾನವಾದ ಮಹಾಭಾರತವನ್ನು ರಚಿಸಿದರು.

ಮೇಲಿನ ವಿಚಾರಗಳಿಂದ 'ಜಯ' ಮತ್ತು 'ಮಹಾಭಾರತ'ಗಳು ಒಂದೇ ಗ್ರಂಥದ ಹೆಸರುಗಳೆಂದೂ, 'ಭಾರತ'ವೆಂಬುದು ಗ್ರಂಥದ ಸಂಕ್ಷಿಪ್ತ ರೂಪವೆಂದೂ, ಇವೆರಡರ ಕರ್ತೃಗಳು ಮೂವರು ಬೇರೆ ಬೇರೆ ವ್ಯಕ್ತಿಗಳ ಲ್ಲದೇ ಭಗವಾನ್ ವ್ಯಾಸರೇ ಎಂದೂ ತಿಳಿದುಬರುತ್ತದೆ. ಹಿಂದೆ ಹೇಳಿದ ವಿದ್ವಾಂಸರ ಮತಾನುಸಾರವಾಗಿ 'ಜಯ' ಎಂಬುದು ಬೇರೆಯ ಗ್ರಂಥವೆಂದು ತಿಳಿಯುವುದಾದರೆ ಅದರ ಶ್ಲೋಕಸಂಖ್ಯೆಯು ಎಷ್ಟೆಂಬ ಪ್ರಶ್ನೆಯೇಳುತ್ತದೆ. ೨೪,೦೦೦ ಶ್ಲೋಕಗಳಿದ್ದ ಗ್ರಂಥವನ್ನು ಹೆಚ್ಚಿಸಿ ಸೌತಿಗಳು ೧ ಲಕ್ಷ ಶ್ಲೋಕಗಳನ್ನು ರಚಿಸಿದರೆಂದಾದರೆ–ಅದೇ ಪ್ರಕಾರ ವೈಶಂಪಾಯನರೂ ಮೂಲಗ್ರಂಥವಾದ 'ಜಯ'ವನ್ನು ದೊಡ್ಡದುಮಾಡಿ ೨೪,೦೦೦ ಶ್ಲೋಕಸಂಖ್ಯೆಯ 'ಭಾರತ'

ವನ್ನು ರಚಿಸಿದರೆಂದಾದರೆ–'ಜಯ' ಗ್ರಂಥದ ಶ್ಲೋಕಸಂಖ್ಯೆಯು ಏನಿಲ್ಲೆಂದಾದರೂ ಕಮ್ಮಿಯೆಂದರೆ ೫,೦೦೦ ಮತ್ತು ಹೆಚ್ಚೆಂದರೆ ೧೦ ಅಥವಾ ೧೨ ಸಾವಿರ ಶ್ಲೋಕಸಂಖ್ಯೆಯದಾಗಿರಬೇಕು. ವ್ಯಾಸರಂತಹ ಪ್ರತಿಭಾವಂತ ಮಹರ್ಷಿಗಳು ಮೂರು ವರ್ಷಗಳ ಕಾಲ ಅವಿಶ್ರಾಂತವಾಗಿ ಪರಿಶ್ರಮಪಟ್ಟು ರಚಿಸಿದ ಗ್ರಂಥವಿದೆಂದು ನಂಬಲು ಸಾಧ್ಯವೇ? ಮೂಲಗ್ರಂಥವು ೧೨,೦೦೦ ಶ್ಲೋಕಸಂಖ್ಯೆಯದೆಂದು ಒಪ್ಪಿಕೊಂಡರೆ–ಪ್ರತಿದಿನ ರಚಿತವಾದ ಶ್ಲೋಕಗಳ ಸರಾಸರಿ ಸಂಖ್ಯೆಯು ಹತ್ತು-ಹನ್ನೆರಡು ಶ್ಲೋಕಗಳಾಗುತ್ತವೆ. ಇದಕ್ಕೋಸ್ಕರ ಸಾಕ್ಷಾತ್ ಗಣೇಶನೇ ಲೇಖಕನಾಗಿರಬೇಕಾಗಿತ್ತೇ? ಸಾಧಾರಣಮನುಷ್ಯರಿಗೇ ದಿನಕ್ಕೆ ಹತ್ತು-ಹನ್ನೆರಡು ಶ್ಲೋಕಗಳನ್ನು ಬರೆಯಲು ಸಾಧ್ಯವಾಗುತ್ತಿರಲಿಲ್ಲವೇ? ಈಗಲೂ ಸಹ ದಿನಕ್ಕೆ ಒಂದು ನೂರು ಶ್ಲೋಕಗಳನ್ನು ರಚನೆಮಾಡುವಷ್ಟು ಪ್ರತಿಭಾವಂತರಾದ ವಿದ್ವಾಂಸರಿದ್ದಾರೆ. ಭಗವಾನ್ ವ್ಯಾಸಮಹರ್ಷಿಗಳು ೬೦ ಲಕ್ಷ ಶ್ಲೋಕಗಳ ಸಂಹಿತೆಯನ್ನು ರಚಿಸಿದ್ದರೆಂದು ಹಿಂದೆಯೇ ಹೇಳಿದೆ. ಅಂತಹ ಮಹಾಗ್ರಂಥವನ್ನು ಲಿಪಿಬದ್ಧವನ್ನಾಗಿ ಮಾಡಲು ಗಣೇಶನಂತಹವರ ಆವಶ್ಯಕತೆಯಿತ್ತು. ಆದ್ದರಿಂದಲೇ ಆ ಗ್ರಂಥದ ಲಿಪಿಪ್ರತಿಗಳು ದೇವಲೋಕ, ಪಿತೃಲೋಕ, ಗಂಧರ್ವಲೋಕ ಮತ್ತು ಮನುಷ್ಯಲೋಕಗಳಲ್ಲಿ ಶೀಘ್ರವಾಗಿ ಹರಡಲು ಸಾಧ್ಯವಾಯಿತು.

ಸೌತಿಗಳಿಂದ ವೃದ್ಧಿಸಲ್ಪಟ್ಟು 'ಭಾರತ'ದ ಹೆಸರು 'ಮಹಾಭಾರತ' ವಾಯಿತೆಂಬ ಕಲ್ಪನೆಯೂ ನಿರಾಧಾರವಾದುದೇ. ಗ್ರಂಥದಲ್ಲಿಯೇ ಮಹಾಭಾರತಶಬ್ದದ ವ್ಯುತ್ಪತ್ತಿಗಳಿಂದ 'ಮಹಾಭಾರತ' ಎಂಬ ಹೆಸರಿನ ಸಾರ್ಥಕತೆಯು ಸಿದ್ಧವಾಗುತ್ತದೆ. ಮಹಾಭಾರತವನ್ನು ಐದನೆಯ ವೇದವೆಂದೂ ಪರಿಗಣಿಸಲಾಗುತ್ತದೆ. ಕೃಷ್ಣದ್ವೈಪಾಯನರಿಂದ ಪ್ರಕಟವಾದುದರಿಂದ 'ಕಾರ್ಷ್ಣವೇದ' ವೆಂದೂ ಕರೆಯುತ್ತಾರೆ. (**ಕಾರ್ಷ್ಣಂ ವೇದಮಿಮಂ ವಿದ್ವಾನ್** [ಆ.ಪ.ಅ.೧ ಶ್ಲೋಕ ೨೬೮]) ಒಂದು ಸಲ ದೇವತೆಗಳು ಭಾರತವನ್ನೂ–ನಾಲ್ಕು ವೇದಗಳನ್ನೂ ತಕ್ಕಡಿಯಲ್ಲಿಟ್ಟು ತೂಗಿದರು. ರಹಸ್ಯಸಹಿತವಾದ ಸಂಪೂರ್ಣವೇದಗಳಿಗಿಂತಲೂ ಮಹತ್ತಾಗಿದ್ದುದರಿಂದ (ಭಾರವಾಗಿದ್ದುದರಿಂದ) ಇದನ್ನು ಮಹಾಭಾರತವೆಂದು ಕರೆಯಲಾಯಿತು. ತಕ್ಕಡಿಯಲ್ಲಿಟ್ಟು ತೂಗಿದ ಸಮಯದಲ್ಲಿ ಮಹತ್ತ್ವ ಮತ್ತು ಗುರುತ್ವ (ಭಾರ)

ಎರಡರಲ್ಲಿಯೂ ಹೆಚ್ಚೆನಿಸಿತು. ಮಹತ್ತಾಗಿದ್ದುದರಿಂದಲೂ, ಭಾರವಾಗಿದ್ದುದ ರಿಂದಲೂ ಮಹಾಭಾರತವೆಂದು ಕರೆಯಲ್ಪಡುತ್ತದೆ. (ಆ.ಪ.ಅ. ೧ ಶ್ಲೋಕ ೨೭೧-೨೭೪) ಭರತಕುಲದ ಕ್ಷತ್ರಿಯರ ಮಹಾವಂಶದ ವರ್ಣನೆಯನ್ನು ಮಾಡಿರುವುದರಿಂದ ಮಹಾಭಾರತವೆಂದು ಕರೆಯಲಾಗುತ್ತಿದೆ.

ಸೌತಿಗಳೂ ಮತ್ತು ವೈಶಂಪಾಯನರೂ ಭಗವಾನ್ ವ್ಯಾಸರ ಸಮ ಕಾಲೀನರೆಂಬುದು ಮಹಾಭಾರತದಲ್ಲಿಯೇ ಸಿದ್ಧವಿರುವಾಗ ಅವರಿಬ್ಬರೂ ವ್ಯಾಸರಿಗಿಂತಲೂ ಈಚಿನವರೆಂದು ಹೇಳುವುದರ ಅರ್ಥವಾದರೂ ಏನು? ಜನಮೇಜಯನು ವ್ಯಾಸರನ್ನು ಕೌರವ-ಪಾಂಡವರ ವೈಮನಸ್ಯಕ್ಕೆ ಕಾರಣವನ್ನು ಕೇಳಿದಾಗ–ವ್ಯಾಸಮಹರ್ಷಿಗಳು ತಮ್ಮ ಹತ್ತಿರದಲ್ಲೇ ಕುಳಿತಿದ್ದ ಶಿಷ್ಯರಾದ ವೈಶಂಪಾಯನರಿಗೆ–'ನನ್ನಿಂದ ನೀನು ಕೇಳಿದುದೆಲ್ಲವನ್ನೂ ಜನಮೇಜಯನಿಗೆ ಹೇಳು'–ಎಂದು ಆಜ್ಞಾಪಿಸಿದರು. (ಆ.ಪ. ಶ್ಲೋಕ ೨೧-೨೨) ಈ ರೀತಿಯಾಗಿ ವ್ಯಾಸರಿಂದಲೇ ಸಾಕ್ಷಾತ್ತಾಗಿ ಅಧ್ಯಯನಮಾಡಿದವರನ್ನು, ವ್ಯಾಸರಿಗಿಂತಲೂ ಈಚಿನವರೆಂದೂ, ಅವರ ಶಿಷ್ಯಪರಂಪರೆಯಲ್ಲಿ ಒಬ್ಬ ರಾಗಿರಬೇಕೆಂದೂ ಹೇಳುವುದು ಯಾವ ಅನ್ವೇಷಣೆಯ ಫಲವೋ ನಮಗೆ ತಿಳಿಯದು. ಸೌತಿಗಳೇ ನೈಮಿಷಾರಣ್ಯದಲ್ಲಿ ಋಷಿಸಮೂಹದ ಮಧ್ಯದಲ್ಲಿ–'ಜನಮೇಜಯನ ಸರ್ಪಯಾಗದಲ್ಲಿ ಮಹಾಭಾರತವನ್ನು ಕೇಳಿ ಇಲ್ಲಿಗೆ ಬರು ತ್ತಿದ್ದೇನೆ'–ಎಂದು ಹೇಳಿರುವಾಗ ಕೇವಲ ಊಹಾಪೋಹಗಳಿಂದಲೇ ಕ್ರಿ.ಪೂ. ೩ನೆಯ ಶತಮಾನದಲ್ಲಿ ಅವರಿದ್ದರೆಂದು ಹೇಳುವುದು ಯಾವ ರೀತಿಯ ಬುದ್ಧಿವಂತಿಕೆಯೋ ತಿಳಿಯದು. ಭಗವಾನ್ ಶಂಕರಾಚಾರ್ಯರೂ ಸಹ ಧಾರ್ಮಿಕ ಸಂಘರ್ಷದ ಸಮಯದಲ್ಲಿಯೇ ಅವತರಿಸಿದ್ದರು. ಆಗಲೂ ಬೌದ್ಧರ ಪ್ರಾಬಲ್ಯವು ಹೆಚ್ಚಾಗಿಯೇ ಇದ್ದಿತು. ಆದರೆ ಅವರೇ ಈಗಿರುವ ಮಹಾ ಭಾರತವೇ ಮೊದಲಾದ ಪುರಾಣಗಳನ್ನು ಪ್ರಾಚೀನಗಳೆಂದು ಪರಿಗಣಿಸಿ, ಪ್ರಮಾಣಭೂತಗಳೆಂದು ಗೌರವಿಸಿ, ತಮ್ಮ ಉದ್ಗ್ರಂಥಗಳಲ್ಲಿ ಉದ್ಧರಿಸಿ ದ್ದಾರೆ. ಈಗ ನಾವು ಪ್ರಾಚೀನಗ್ರಂಥಗಳೆಂದು ಪರಿಗಣಿಸುವಂತೆಯೇ ಪೂರ್ವಾ ಚಾರ್ಯರುಗಳೂ ಅವುಗಳನ್ನು (ಅವರ ಕಾಲದಲ್ಲಿಯೇ) ಪ್ರಾಚೀನಗ್ರಂಥ ಗಳೆಂದು ಮನ್ನಿಸಿದ್ದಾರೆ. ಒಂದು ಸಮಯ ಅವರ ಕಾಲಕ್ಕೆ ಸ್ವಲ್ಪ ಮುಂಚೆಯೇ ಪುರಾಣಾದಿ ಗ್ರಂಥಗಳಿಗೆ ಈಗಿರುವ ರೂಪವು ಕೊಡಲ್ಪಟ್ಟಿತೆಂದು ತಿಳಿಯುವು

ದಾದರೆ–ಈ ಗ್ರಂಥಗಳ ಬಗೆಗೆ ಪೂರ್ವಾಚಾರ್ಯರುಗಳು ಅಷ್ಟು ಆಸ್ಥೆಯನ್ನು ತೋರುತ್ತಿರಲಿಲ್ಲ. ಈ ಮೇಲೆ ಹೇಳಿದ ಪ್ರಮಾಣಗಳು ವಿಶ್ವಸನೀಯವಲ್ಲ ವೆಂದರೆ–ಸಂಪೂರ್ಣಮಹಾಭಾರತಗ್ರಂಥದ ಮೇಲೆಯೇ ವಿಶ್ವಾಸವನ್ನಿಡು ವಂತಿಲ್ಲ. ಆದ್ದರಿಂದ ಕೇವಲ ಅನುಮಾನದಿಂದ ಅಥವಾ ಬಹಿರಂಗವಾದ ಆಧಾರಗಳಿಂದಲೇ ಮಹಾಭಾರತದ ಒಳಗೇ ಸಿಗುವ ಪ್ರಮಾಣಗಳ ಉಪೇಕ್ಷೆಯು ಸರ್ವಥಾ ಸಮ್ಮತವಲ್ಲ.

ಪ್ರತಿಯೊಂದು ಗ್ರಂಥದಲ್ಲಿಯೂ ಮೊದಲು ಉಪಕ್ರಮ ಅಥವಾ ಪ್ರಸ್ತಾವನೆಯನಂತರ ಗ್ರಂಥದ ಮುಖ್ಯವಿಷಯವು ಪ್ರಾರಂಭವಾಗುತ್ತದೆ. ಮಹಾಭಾರತದ ಮುಖ್ಯವಿಷಯದ ಆರಂಭವು ಯಾವ ಅಧ್ಯಾಯದಿಂದ ಆಗುತ್ತದೆ?–ಎಂಬುದರ ಬಗೆಗೆ ಮತಭೇದವಿದೆ. ಸೌತಿಗಳು ಮೂರು ಮತಭೇದಗಳನ್ನು ಹೇಳಿದ್ದಾರೆ.

**ಮನ್ವಾದಿ ಭಾರತಂ ಕೇಚಿದಾಸ್ತೀಕಾದಿ ತಥಾ ಪರೇ ।**
**ತಥೋಪರಿಚರಾದನ್ಯೇ ವಿಪ್ರಾಃ ಸಮ್ಯಗಧೀಯತೇ ॥**

[ಆ. ಪ. ಅ. ೧ ಶ್ಲೋ. ೫೨]

ಕೆಲವರು 'ಮನು'ವಿನಿಂದ ಮಹಾಭಾರತದ ಆರಂಭವೆಂದು ತಿಳಿಯು ತ್ತಾರೆ. 'ಮನು' ಎಂಬುದಕ್ಕೆ ಮಂತ್ರ ಮತ್ತು ವೈವಸ್ವತಮನು ಎಂದು ಎರಡು ವಿಧವಾಗಿ ಅರ್ಥಮಾಡುತ್ತಾರೆ. 'ಮಂತ್ರ' ಎಂದು ಅರ್ಥಮಾಡು ವವರು ಗ್ರಂಥಾರಂಭದಲ್ಲಿ ಬರುವ 'ನಾರಾಯಣಂ ನಮಸ್ಕೃತ್ಯ' ಅಥವಾ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ಮಂತ್ರದಿಂದಲೇ ಗ್ರಂಥಾರಂಭವೆನ್ನುವರು. ಇದು ಸರಿಯೆಂದೇ ಎನ್ನಿಸುತ್ತದೆ. 'ಮನು' ಪದಕ್ಕೆ 'ವೈವಸ್ವತಮನು' ಎಂದು ಅರ್ಥಮಾಡುವವರು ಆದಿಪರ್ವದ ಪ್ರಥಮಾಧ್ಯಾ ಯದ ೪೨ನೆಯ ಶ್ಲೋಕದಿಂದ ಆರಂಭವಾಗುವುದೆನ್ನುವರು. ಅಲ್ಲಿ ವಿವ ಸ್ವಂತನ ಮಗನಾದ 'ದಿವಸ್ಪುತ್ರನ' ಹೆಸರೂ ಬಂದಿದೆ. ಅವನೇ ವೈವಸ್ವತಮನು ಎಂದು ಪ್ರಸಿದ್ಧನಾಗಿರುವನು. ಕೆಲವರು ಆಸ್ತಿಕನ ಕಥೆಯಿಂದಲೇ ಗ್ರಂಥಾರಂಭ ವೆನ್ನುವರು. ಇದು ಆದಿಪರ್ವದ ಹದಿಮೂರನೆಯ ಅಧ್ಯಾಯದಿಂದ ಆರಂಭವಾಗುವುದು. ಮತ್ತೆ ಕೆಲವು ವಿದ್ವಾಂಸರು ಗ್ರಂಥಾರಂಭವು ಆದಿ ಪರ್ವದ ೬೩ನೆಯ ಅಧ್ಯಾಯದಲ್ಲಿ ಬರುವ ಉಪರಿಚರರಾಜನ ಕಥೆಯಿಂದ

ಆಗುವುದೆಂದು ಅಭಿಪ್ರಾಯಪಡುತ್ತಾರೆ. ಇದರಿಂದ ಎಲ್ಲಿಂದ ಮುಖ್ಯವಾಗಿ ಗ್ರಂಥಾರಂಭವಾಗುವುದೋ ಅಲ್ಲಿಂದಲೇ ವ್ಯಾಸರ ರಚನೆಯೆಂದೂ, ಅದಕ್ಕೆ ಮುಂಚಿನದೆಲ್ಲವೂ ವೈಶಂಪಾಯನರ ಅಥವಾ ಸೌತಿಗಳ ಕೃತಿಗಳೆಂದೂ ತಿಳಿಯಕೂಡದು. ಗ್ರಂಥಸಂಪಾದನೆಯಲ್ಲಿ ವೈಶಂಪಾಯನರೂ ಮತ್ತು ಸೌತಿಗಳೂ ಸಹಾಯಮಾಡಿದ್ದರೂ ಪ್ರಾಧಾನ್ಯವು ವ್ಯಾಸರದೇ ಆಗಿದೆ. ಮಹಾ ಭಾರತದಲ್ಲಿ ಯಾವ ಯಾವ ವಿಷಯಗಳ ವರ್ಣನೆಗಳು ಬರುವುವೋ–ಅವುಗಳ ಸಂಕ್ಷಿಪ್ತ ವಿವರವು ಮೊದಲಲ್ಲಿಯೇ ಕೊಡಲ್ಪಟ್ಟಿದೆ. ವಿಷಯಗಳ ಪೂರ್ಣಜ್ಞಾನವು ಮಹಾಭಾರತದ ಸಂಪೂರ್ಣವಾದ ಅಧ್ಯಯನದಿಂದಲೇ ಸಾಧ್ಯ. ಆದರೂ ಸಂಕ್ಷೇಪವಾಗಿ ಮಹಾಭಾರತದಲ್ಲಿ ವರ್ಣಿತವಾದ ವಿಷಯ ಗಳ ದಿಗ್ದರ್ಶನವು ಮಾತ್ರವೇ ಬೇಕಾಗಿದ್ದರೆ ಆದಿಪರ್ವದ ಎರಡು ಅಧ್ಯಾಯ ಗಳನ್ನು ನೋಡಬೇಕು. ಅವುಗಳಲ್ಲಿ ಮಹಾಭಾರತಸ್ವರೂಪದ ಒಳ್ಳೆಯ ಪರಿಚಯವು ಸಿಗುವುದು. ಸ್ವಯಂ ವ್ಯಾಸಮಹರ್ಷಿಗಳೇ ಬ್ರಹ್ಮದೇವನಿಗೆ ಹೇಳಿದ ಗ್ರಂಥದ ವಿಷಯದ ಸಾರಾಂಶವಿದು. ವ್ಯಾಸಮಹರ್ಷಿಗಳು ಹೇಳು ತ್ತಾರೆ : "ನಾನು ಈ ಗ್ರಂಥದಲ್ಲಿ ವೇದಗಳ ರಹಸ್ಯವನ್ನು ಹೇಳಿದ್ದೇನೆ. ವೇದಾಂಗಗಳು, ಉಪನಿಷತ್ತುಗಳು ಮತ್ತು ವೇದಗಳ ವರ್ಣನೆಯನ್ನು ವಿಸ್ತಾರ ವಾಗಿ ಮಾಡಿದ್ದೇನೆ. ಇತಿಹಾಸ-ಪುರಾಣಗಳ ವಿಸ್ತೃತವರ್ಣನೆಯನ್ನು ಮಾಡಿ ದ್ದೇನೆ. ಇದರಲ್ಲಿ ಭೂತ, ಭವಿಷ್ಯತ್, ವರ್ತಮಾನ ಈ ಮೂರು ಕಾಲಗಳ ವರ್ಣನೆಯನ್ನು ಮಾಡಿದ್ದೇನೆ. ಜರಾ, ಮೃತ್ಯು, ಭಯ, ವ್ಯಾಧಿ–ಇವೇ ಮುಂತಾದುವುಗಳ ಅಭಾವತ್ವದ ನಿಶ್ಚಯವೂ ಮತ್ತು ಜಗನ್ಮಿಥ್ಯಾತ್ವವೂ ಪ್ರತಿಪಾದಿಸಲ್ಪಟ್ಟಿದೆ. ಮೂರು ಧರ್ಮಗಳ ಮತ್ತು ಆಶ್ರಮಗಳ ಲಕ್ಷಣಗಳು ಈ ಗ್ರಂಥದಲ್ಲಿ ಹೇಳಲ್ಪಟ್ಟಿವೆ. ನಾಲ್ಕು ವರ್ಣಗಳ ಉತ್ಪತ್ತಿಯೂ, ತಪಸ್ಸು ಮತ್ತು ಬ್ರಹ್ಮಚರ್ಯಗಳ ವಿಧಿಗಳೂ ಹೇಳಲ್ಪಟ್ಟಿವೆ. ಗ್ರಹ, ನಕ್ಷತ್ರ, ತಾರೆಗಳೂ ಮತ್ತು ಯುಗಗಳ ಪರಿಮಾಣಗಳೂ, ನ್ಯಾಯ, ಶಿಕ್ಷೆ, ಚಿಕಿತ್ಸೆ, ದಾನ, ಅಂತರ್ಯಾಮಿಯ ಸ್ವರೂಪ ಹಾಗೂ ದೇವ ಮತ್ತು ಮಾನವಜನ್ಮಗಳ ಕಾರಣ–ಇವೆಲ್ಲವುಗಳ ಪ್ರತಿಪಾದನೆಯೂ ಮಾಡಲ್ಪಟ್ಟಿದೆ. ತೀರ್ಥ, ನದೀ, ಪರ್ವತ, ವನ, ಸಮುದ್ರ ಮತ್ತು ದಿವ್ಯನಗರಗಳ ವರ್ಣನೆಯಿದೆ. ದುರ್ಗ, ಸೈನ್ಯ ಮತ್ತು ವ್ಯೂಹರಚನೆಗಳ ವಿಧಿಗಳೂ ಮತ್ತು ಯುದ್ಧಚಾತುರ್ಯಗಳೂ

ಹೇಳಲ್ಪಟ್ಟಿವೆ. ನಾನಾವಿಧವಾದ ಜಾತಿಗಳ ಮತ್ತು ಅವುಗಳ ನಡೆ-ನುಡಿಗಳ ಬಗ್ಗೆಯೂ ಹೇಳಲ್ಪಟ್ಟಿದೆ. ನೀತಿಶಾಸ್ತ್ರಗಳ ವರ್ಣನೆಯೂ ಹಾಗೂ ಸರ್ವ ವ್ಯಾಪಿಯಾದ ಪರಬ್ರಹ್ಮತತ್ತ್ವದ ಪ್ರತಿಪಾದನೆಯೂ ಮಾಡಲ್ಪಟ್ಟಿದೆ.

ಮೇಲೆ ಹೇಳಿದ ವಿಷಯಗಳಿಂದ ಗ್ರಂಥದ ಮಹತ್ತ್ವ, ಗಂಭೀರತೆ ಮತ್ತು ಉಪಾದೇಯತ್ವಗಳ ಬಗೆಗೆ ಯಾವ ಸಂದೇಹಕ್ಕೂ ಎಡೆಯಿರಲಾರದು. ಮೇಲೆ ಹೇಳಿದ ವಿಷಯಗಳಲ್ಲಿ ಯಾವುದು ಎಲ್ಲಿ ವರ್ಣಿಸಲ್ಪಟ್ಟಿದೆ?–ಎಂಬುದನ್ನು ಹೇಳಲು ಈ ಚಿಕ್ಕಲೇಖನದಲ್ಲಿ ಸಾಧ್ಯವಿಲ್ಲ. ಮಹಾಭಾರತವು ಇತಿಹಾಸಮಾತ್ರವಲ್ಲದೇ–ಅತ್ಯಂತಮನೋಹರವಾದ ಕಾವ್ಯವೂ ಆಗಿದೆ. ಸ್ವಯಂ ವ್ಯಾಸರೇ ಬ್ರಹ್ಮದೇವನ ಹತ್ತಿರ 'ಕಾವ್ಯ'ವೆಂದು ಈ ಗ್ರಂಥವನ್ನು ಕರೆದಿದ್ದಾರೆ. **'ಕೃತಂ ಮಯೇದಂ ಭಗವನ್ ಕಾವ್ಯಂ ಪರಮಪೂಜಿತಮ್।'** ಬ್ರಹ್ಮದೇವನೂ ಕೂಡ ಇದರ ಕಾವ್ಯತ್ವವನ್ನು ಒಪ್ಪಿಕೊಂಡಿದ್ದಾನೆ. ಬ್ರಹ್ಮದೇವನು–'ಮಹರ್ಷೇ! ಜನ್ಮದಿಂದಲೇ ನಿನ್ನ ವಾಣಿಯು ಬ್ರಹ್ಮಪ್ರತಿಪಾದನಮಾಡುತ್ತಿರುವುದೆಂಬುದನ್ನು ತಿಳಿದಿದ್ದೇನೆ. ನೀನೆಂದೂ ಅಸತ್ಯವನ್ನಾಡಿದವನೇ ಅಲ್ಲ. ನೀನೇ ಗ್ರಂಥವನ್ನು ಕಾವ್ಯವೆಂದು ಕರೆದಿರುವುದರಿಂದ ಇದು ಕಾವ್ಯವೇ ಆಗಿದೆ. ಮಹಾಕವಿಗಳೂ ಈ ಕಾವ್ಯಕ್ಕಿಂತಲೂ ವಿಸ್ತಾರವಾದ ಕಾವ್ಯವನ್ನು ರಚಿಸುವುದರಲ್ಲಿ ಅಸಮರ್ಥ ರಾಗಿದ್ದಾರೆ.'

**ಜನ್ಮಪ್ರಭೃತಿ ಸತ್ಯಾಂ ತೇ ವೇದ್ಮಿ ಗಾಂ ಬ್ರಹ್ಮವಾದಿನೀಮ್ ।**
**ತ್ವಯಾ ಚ ಕಾವ್ಯಮಿತ್ಯುಕ್ತಂ ತಸ್ಮಾತ್ಕಾವ್ಯಂ ಭವಿಷ್ಯತಿ ।**
**ಅಸ್ಯ ಕಾವ್ಯಸ್ಯ ಕವಯೋ ನ ಸಮರ್ಥಾ ವಿಶೇಷಣೇ ॥**

[ಆ. ಪ. ಅ. ೧ ಶ್ಲೋ. ೭೨-೭೩]

ಈ ಮಾತು ತ್ರಿಕಾಲಸತ್ಯವು. ಮಹಾಭಾರತದಲ್ಲಿ ವನ, ಪರ್ವತ, ಉದ್ಯಾನ, ನದೀ, ಸರೋವರ, ನಗರಗಳೇ ಮುಂತಾದ ಅನೇಕ ರಮಣೀಯ ಪ್ರದೇಶಗಳ ಸರಸ-ಮನೋಹರವರ್ಣನೆಗಳು ಬರುತ್ತವೆ. ಆ ವರ್ಣನೆಗಳು ರಸಾಸ್ವಾದಮಾಡುವ ಯಾವುದೇ ಸಹೃದಯರ ಮನಸ್ಸನ್ನು ಮುಗ್ಧ ಗೊಳಿಸದೇ ಇರಲಾರವು. ಇದರಲ್ಲಿ ಬರುವ ವಿವಿಧೋಪಾಖ್ಯಾನಗಳಲ್ಲಿ ಮತ್ತು ಪ್ರಸಂಗಗಳಲ್ಲಿ ಶೃಂಗಾರ, ವೀರ, ಕರುಣ, ರೌದ್ರ, ಅದ್ಭುತ,

ಭಯಾನಕ, ಬೀಭತ್ಸ, ಹಾಸ್ಯ ಮತ್ತು ಶಾಂತ–ಈ ಎಲ್ಲ ರಸಗಳ ಅಭಿ ವ್ಯಂಜನಗಳೂ ನೋಡಸಿಗುತ್ತವೆ. ಸಹೃದಯರಾದ ಪಾಠಕರನ್ನು ನಿರಂತರವೂ ನವರಸದಲ್ಲಿ ಅವಗಾಹನೆ ಮಾಡಿಸುವ ಮಹಾಕಾವ್ಯವು ಇದರಂತೆ ಇನ್ನೊಂದಿರಲಾರದು. ಸಂಸ್ಕೃತಸಾಹಿತ್ಯದ ಪೂರ್ವಾಚಾರ್ಯರು ಕಾವ್ಯ ಗುಣಗಳ ಬಗೆಗೆ ವಿಚಾರಮಾಡುವಾಗ ಮಹಾಭಾರತದ ಅನೇಕ ಶ್ಲೋಕ ಗಳನ್ನು ಉದಾಹರಣಾರ್ಥವಾಗಿ ಉದ್ಧರಿಸಿದ್ದಾರೆ. ಧ್ವನ್ಯಾಲೋಕದಲ್ಲಿ ಆನಂದವರ್ಧನಾಚಾರ್ಯರು 'ಪ್ರಬಂಧವ್ಯಙ್ಗ್ಯಸಂಲಕ್ಷ್ಯಕ್ರಮಧ್ವನಿ'ಯ ಉದಾಹರಣೆಗೆ ಮಹಾಭಾರತದ ಗೃಧ್ರ-ಗೋಮಾಯುಸಂವಾದವನ್ನು ಉಲ್ಲೇಖಿಸಿದ್ದಾರೆ. ಅಭಿನವಗುಪ್ತಪಾದರು, ಮಮ್ಮಟ ಮತ್ತು ವಿಶ್ವನಾಥ ಪಂಚಾನನಭಟ್ಟ–ಮುಂತಾದವರೆಲ್ಲರೂ ಈ ಸಂವಾದವನ್ನು ತಮ್ಮ ಗ್ರಂಥ ಗಳಲ್ಲಿ ಉದ್ಧರಿಸಿದ್ದಾರೆ. ರುದ್ರಭಟ್ಟನ ಕಾವ್ಯಾಲಂಕಾರದಲ್ಲಿ ಮಹಾಭಾರತ ಶ್ಲೋಕಗಳ ದೃಷ್ಟಾಂತವು ಸಿಗುತ್ತದೆ. ಇಷ್ಟೇ ಅಲ್ಲ ; ಮಹಾಭಾರತದಲ್ಲಿ ಬರುವ ಸುಂದರಕಥೆಗಳೊಂದೊಂದೂ ಒಂದೊಂದು ಸ್ವತಂತ್ರವಾದ ಮಹಾ ಕಾವ್ಯವಾಗಲು ಅರ್ಹವಾಗಿವೆ. ಸಂಸ್ಕೃತಸಾಹಿತ್ಯದ ಮೂರು ಮಹಾಕಾವ್ಯ ಗಳಾದ ಕಿರಾತಾರ್ಜುನೀಯ, ಶಿಶುಪಾಲವಧ ಮತ್ತು ನೈಷಧೀಯಚರಿತೆಗಳು ಮಹಾಭಾರತದಲ್ಲಿ ಬರುವ ಆಖ್ಯಾನಗಳ ಮೇಲೆಯೇ ಆಧರಿಸಿ ರಚಿತವಾಗಿವೆ. ಮಹಾಕವಿ ಕಾಲಿದಾಸನ ಅಭಿಜ್ಞಾನಶಾಕುಂತಲ, ಭಟ್ಟನಾರಾಯಣನ ವೇಣೀಸಂಹಾರ ಮತ್ತು ಇತರ ಕವಿಗಳ ಪ್ರಭಾವತೀಪರಿಣಯ ಮತ್ತು ಧನಂಜಯವಿಜಯವೇ ಮೊದಲಾದ ಅನೇಕ ಕಾವ್ಯಗಳ ಆಗರವು ಮಹಾ ಭಾರತವೇ ಆಗಿದೆ. ಮಹಾಭಾರತದಲ್ಲಿ ಬರದಿರುವ ಯಾವ ಸುಂದರ ಕಥೆಯೂ ಪ್ರಪಂಚದಲ್ಲಿಲ್ಲವೆಂಬುದು ಎಷ್ಟು ಕಾಲಕ್ಕೂ ಸತ್ಯ.

**'ಅನಾಶ್ರಿತ್ಯೈತದಾಖ್ಯಾನಂ ಕಥಾ ಭುವಿ ನ ವಿದ್ಯತೇ'**

[ಆ. ಪ. ಅ. ೨ ಶ್ಲೋಕ ೩೮೮]

'ಎಲ್ಲ ಶ್ರೇಷ್ಠ ಕವಿಗಳೂ ಮಹಾಭಾರತದಲ್ಲಿ ಬರುವ ಕಥೆಗಳ ಆಧಾರ ದಿಂದಲೇ ಕಾವ್ಯರಚನೆಯನ್ನು ಮಾಡುತ್ತಾರೆ.'

**'ಇದಂ ಕವಿವರೈಃ ಸರ್ವೈರಾಖ್ಯಾನಮುಪಜೀವ್ಯತೇ'**

[ಆ. ಪ. ಅ. ೨ ಶ್ಲೋಕ ೩೮೯]

ಈ ಭವಿಷ್ಯೋಕ್ತಿಯು ಎಷ್ಟು ಸತ್ಯವೆಂಬುದು ಮೇಲಿನ ದೃಷ್ಟಾಂತ ಗಳಿಂದ ತಿಳಿದುಬರುತ್ತದೆ. ಈ ಮಹಾಭಾರತಕಾವ್ಯದ ಪ್ರಧಾನರಸವು ಶಾಂತ ಭಕ್ತಿ ಅಥವಾ ಶಾಂತರಸವು. ಇದೇ 'ಅಙ್ಗೀ' (ಪ್ರಧಾನ) ರಸವು. ಇದರಿಂದಲೇ ಸಂಪೂರ್ಣಗ್ರಂಥವು ಪುಷ್ಟಿಗೊಂಡಿದೆ. ಮಿಕ್ಕ ರಸಗಳು ಅಂಗ ಭೂತಗಳಾಗಿವೆ. ಅಂಗಭೂತರಸಗಳಲ್ಲಿ ವೀರರಸಕ್ಕೆ ಪ್ರಾಧಾನ್ಯವಿದೆ. ಇದರಲ್ಲಿ ವರ್ಣಿತವಾಗಿರುವ ಭೀಷಣಸಂಘರ್ಷ ಮತ್ತು ಅದರ ಪರಿಣಾಮ ಗಳನ್ನು ನೋಡಿ ಚಿತ್ತದಲ್ಲಿ ನಿರ್ವೇದ ಮತ್ತು ವೈರಾಗ್ಯ ಮುಂತಾದುವುಗಳ ಸಂಚಾರವುಂಟಾಗುತ್ತದೆ. ಆದ್ದರಿಂದ ಇವುಗಳೇ ಸಂಚಾರೀಭಾವಗಳು. 'ಶಮ' ಅಥವಾ 'ಶಾಂತಿರತಿ'ಗಳೇ ಸ್ಥಾಯೀಭಾವಗಳಾಗಿವೆ. ಈ ಶಾಂತಿ ರತಿಯ ಆಲಂಬನವೇ ಭಗವಾನ್ ಶ್ರೀಕೃಷ್ಣನು.

ಆಚಾರ್ಯ ಆನಂದವರ್ಧನರು ಧ್ವನ್ಯಾಲೋಕದ ನಾಲ್ಕನೆಯ ಉದ್ಯೋತದಲ್ಲಿ ಕಾವ್ಯದೃಷ್ಟಿಯಿಂದ ಮಹಾಭಾರತವನ್ನು ವಿಚಾರ ಮಾಡುತ್ತಾ– **"ಮಹಾಭಾರತೇಽಪಿ.... ವೃಷ್ಣಿಪಾಣ್ಡವವಿರಸಾವಸಾನ-ವೈಮನಸ್ಯದಾಯಿನೀಂ ಸಮಾಪ್ತಿಮುಪನಿಬಧ್ನತಾ ಮಹಾಮುನಿನಾ ವೈರಾಗ್ಯಜನನತಾತ್ಪರ್ಯಂ ಪ್ರಾಧಾನ್ಯೇನ ಸ್ವಪ್ರಬನ್ಧಸ್ಯ ದರ್ಶಯತಾ ಮೋಕ್ಷಲಕ್ಷಣಃ ಪುರುಷಾರ್ಥಃ ಶಾನ್ತೋರಸಶ್ಚ ಮುಖ್ಯತಯಾ ವಿವಕ್ಷಾವಿಷಯತ್ವೇನ ಸೂಚಿತಃ.... ಕಾವ್ಯನಯೇ ತೃಷ್ಣಾಕ್ಷಯಸುಖ ಪರಿಪೋಷಲಕ್ಷಣಃ ಶಾನ್ತೋ ರಸೋ ಮಹಾಭಾರತಸ್ಯಾಙ್ಗಿತ್ವೇನ ವಿವಕ್ಷಿತ ಇತಿ ಸುಪ್ರತಿಪಾದಿತಮ್ । ಅತ್ಯನ್ತಸಾರಭೂತತ್ವಾ-ಚ್ಚಾಯಮರ್ಥೋ ವ್ಯಙ್ಗ್ಯತ್ವೇನೈವ ದರ್ಶಿತಃ ನ ತು ವಾಚ್ಯತ್ವೇನ । ಸಾರಭೂತೋ ಹ್ಯರ್ಥಃ ಸ್ವಶಬ್ದಾನಭಿಧೇಯತ್ವೇನ ಪ್ರಕಾಶಿತಃ ಸುತರಾಮೇವ ಶೋಭಾಮಾವಹತಿ । ಪ್ರಸಿದ್ಧಿಶ್ಚೇಯಮಸ್ತ್ಯೇವ ವಿದಗ್ಧವಿದ್ವತ್ಪರಿಷತ್ಸು ಯದಭಿಮತತರಂ ವಸ್ತು ವ್ಯಙ್ಗ್ಯತ್ವೇನ ಪ್ರಕಾಶತೇ ನ ಸಾಕ್ಷಾಚ್ಛಬ್ದವಾಚ್ಯತ್ವೇನೈವ ।"**

"ಮಹರ್ಷಿ ವ್ಯಾಸರು ಮಹಾಭಾರತದಲ್ಲಿ ವರ್ಣಿಸಿರುವ ಯದು ವಂಶೀಯರ ಮತ್ತು ಪಾಂಡವರ ದುರಂತಾವಸಾನವನ್ನು ಓದಿದರೆ ಚಿತ್ತ ದಲ್ಲಿ ನಿರ್ವೇದವೇ ಉಂಟಾಗುತ್ತದೆ. ಈ ಸಂಸಾರದ ಬಗೆಗೆ ವೈರಾಗ್ಯವನ್ನು

ಹುಟ್ಟಿಸುವುದಕ್ಕಾಗಿಯೇ ಅದು ಬರೆಯಲ್ಪಟ್ಟಿದೆ. ಇದರ ಮೂಲಕವಾಗಿ ಅವರು ಈ ಪ್ರಬಂಧದ ತಾತ್ಪರ್ಯವು ವೈರಾಗ್ಯಜನಕವೆಂದೇ ತೋರಿಸಿದ್ದಾರೆ. ಇದರಿಂದ ಈ ಗ್ರಂಥದಲ್ಲಿ ( ಮಹಾಭಾರತದಲ್ಲಿ ) ಭಗವತ್ಪ್ರಾಪ್ತಿ ಅಥವಾ ಪರಮಪುರುಷಾರ್ಥ ಮತ್ತು ಶಾಂತರಸಗಳ ನಿರೂಪಣೆಯೇ ಪ್ರಧಾನ ವೆಂಬುದು ಗ್ರಂಥಕರ್ತರಾದ ವ್ಯಾಸರ ಅಭಿಪ್ರಾಯವೆಂಬುದು ಸೂಚಿತವಾಗು ತ್ತದೆ. ಕಾವ್ಯದೃಷ್ಟಿಯಿಂದ ತೃಷ್ಣೆಯ ಅಭಾವರೂಪವಾದ ಯಾವ ಸುಖ ವಿದೆಯೋ–ಅದನ್ನು ಪುಷ್ಟೀಕರಿಸುವ ಶಾಂತರಸವೇ ಮಹಾಭಾರತದ 'ಅಜ್ಗೀ' ( ಪ್ರಧಾನ ) ರಸವು–ಇದು ಚೆನ್ನಾಗಿ ಪ್ರತಿಪಾದಿತವಾಗಿದೆ. ಗ್ರಂಥದ ಸಾರಭೂತವಾದ ಈ ಅರ್ಥವು ವಾಚ್ಯರೂಪದಲ್ಲಿ ಸ್ಪಷ್ಟಪಡಿಸಲಾಗದಿದ್ದರೂ, ವ್ಯಂಗ್ಯರೂಪದಿಂದ ಸೂಚಿತವಾಗಿದೆ. ಸಾರಭೂತವಾದ ಅರ್ಥವನ್ನು ವಾಚಕ ಶಬ್ದದ ಮೂಲಕ ಪ್ರಕಟಪಡಿಸದೇ, ವ್ಯಂಗ್ಯರೂಪದಲ್ಲಿ ಪ್ರಕಟಿಸುವುದ ರಲ್ಲಿಯೇ ಶೋಭೆಯಿದೆ. ಸಹೃದಯವಿದ್ವಾಂಸರ ಮಂಡಲಿಗಳಲ್ಲಿ ತಮಗೆ ಅತ್ಯಂತವಾಗಿ ಇಷ್ಟತರವಾದ ವಸ್ತು ( ವಿಷಯ )ವನ್ನು ಸಂಕೇತದ ಅಥವಾ ವ್ಯಂಜನದ ಮೂಲಕವಾಗಿ ಸೂಚಿಸುತ್ತಾರೆಯೇ ಹೊರತು, ಸಾಕ್ಷಾತ್ತಾಗಿ ಅದರ ಹೆಸರಿನಿಂದಲ್ಲ (ವಾಚ್ಯವೃತ್ತಿಯಿಂದಲ್ಲ )ವೆಂಬುದು ಪ್ರಸಿದ್ಧವಾಗಿದೆಯಷ್ಟೇ. ಇದರಿಂದಲೂ ಪೂರ್ವೋಕ್ತವಾದ ಅಭಿಪ್ರಾಯವು ಸ್ಪಷ್ಟವಾಗುತ್ತದೆ.

ಈ ರೀತಿ ಇತಿಹಾಸ, ಅಧ್ಯಾತ್ಮಶಾಸ್ತ್ರ ಮತ್ತು ಮಹಾಕಾವ್ಯ–ಈ ಎಲ್ಲ ದೃಷ್ಟಿಗಳಿಂದಲೂ ಮಹಾಭಾರತದ ಸ್ವಾಧ್ಯಾಯವು ಉಕ್ತವಾಗಿದೆ. ಈ ವಿಧವಾದ ಸರ್ವಗುಣಸಂಪನ್ನವಾದ ಕಾವ್ಯವು ಇನ್ನೊಂದಿಲ್ಲವೆಂದು ಹೇಳ ಬಹುದು. ಆದಿಪರ್ವ ಮತ್ತು ಸ್ವರ್ಗಾರೋಹಣಪರ್ವಗಳಲ್ಲಿ ಈ ಗ್ರಂಥದ ಪಠಣದ ಮಹಿಮೆಯೂ–ಅದರಿಂದ ಹೊಂದಬಹುದಾದ ಮಹತ್ತರಫಲ ಗಳೂ ವರ್ಣಿತವಾಗಿವೆ.

ದ್ವೈಪಾಯನೋಷ್ಠಪುಟನಿಃಸೃತಮಪ್ರಮೇಯಂ
ಪುಣ್ಯಂ ಪವಿತ್ರಮಥ ಪಾಪಹರಂ ಶಿವಂ ಚ ।
ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ
ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ ॥

[ಆ. ಪ. ಅ. ೨ ಶ್ಲೋ. ೩೯೨]

ಪುಷ್ಕರವು ತೀರ್ಥರಾಜವೆನಿಸಿದೆ ; ಪುಷ್ಕರಸ್ನಾನವು ಬಹುಪುಣ್ಯಕರ ವೆನಿಸಿದೆ. ಆದರೆ ಯಾರು ಭಗವಾನ್ ದ್ವೈಪಾಯನರಿಂದ ಹೇಳಲ್ಪಟ್ಟ ಮಹಾಭಾರತವನ್ನು ಓದುವರೋ ಅಥವಾ ಕೇಳುವರೋ–ಅವರು ಪುಷ್ಕರ ತೀರ್ಥದಲ್ಲಿ ಸ್ನಾನಮಾಡುವ ಅವಶ್ಯಕತೆಯೇ ಇರುವುದಿಲ್ಲ.

**ಯದಹ್ನಾ ಕುರುತೇ ಪಾಪಂ ಬ್ರಾಹ್ಮಣಸ್ತ್ವಿನ್ದ್ರಿಯೈಶ್ಚರನ್ ।**
**ಮಹಾಭಾರತಮಾಖ್ಯಾಯ ಸನ್ಧ್ಯಾಂ ಮುಚ್ಯತಿ ಪಶ್ಚಿಮಾಮ್ ॥**

[ಆ. ಅ. ೨ ಶ್ಲೋಕ ೩೯೩]

**ಯದ್ರಾತ್ರೌ ಕುರುತೇ ಪಾಪಂ ಕರ್ಮಣಾ ಮನಸಾ ಗಿರಾ ।**
**ಮಹಾಭಾರತಮಾಖ್ಯಾಯ ಪೂರ್ವಾಂ ಸನ್ಧ್ಯಾಂ ಪ್ರಮುಚ್ಯತೇ ॥**

[ಆ. ಅ. ೨ ಶ್ಲೋಕ ೩೯೪]

ಸಾಯಂ-ಪ್ರಾತಃಕಾಲಗಳಲ್ಲಿ ಮಹಾಭಾರತವನ್ನು ಪಾರಾಯಣಮಾಡು ವವರ ಹಗಲು ಮತ್ತು ರಾತ್ರಿಗಳಲ್ಲಿ ಇಂದ್ರಿಯಗಳಿಂದ ಮಾಡಲ್ಪಟ್ಟ ಪಾಪ ಗಳೆಲ್ಲವೂ ನಶಿಸಿಹೋಗುತ್ತವೆ.

**ಯೋ ಗೋಶತಂ ಕನಕಶೃಙ್ಗಮಯಂ ದದಾತಿ**
**ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ ।**
**ಪುಣ್ಯಾಂ ಚ ಭಾರತಕಥಾಂ ಶೃಣುಯಾಚ್ಚ ನಿತ್ಯಂ**
**ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ॥**

[ಆ. ಪ. ಅ. ೨ ಶ್ಲೋಕ ೩೯೫]

ಒಬ್ಬ ಮನುಷ್ಯನು ಪ್ರತಿದಿನವೂ–ಬಂಗಾರದ ಕವಚಗಳಿಂದ ಸಿಂಗರಿ ಸಿದ ಕೋಡುಗಳುಳ್ಳ ಒಂದು ನೂರು ಗೋವುಗಳನ್ನು ವೇದವಿದನಾದ ಮತ್ತು ಬಹುಶ್ರುತನಾದ ಬ್ರಾಹ್ಮಣನಿಗೆ ದಾನಕೊಟ್ಟು ಹೊಂದುವ ಮಹತ್ತರವಾದ ಪುಣ್ಯಫಲವನ್ನೇ ಪ್ರತಿದಿನವೂ ಮಹಾಭಾರತವನ್ನು ಶ್ರವಣಮಾಡುವವನೂ ಪಡೆಯುತ್ತಾನೆ.

**ಶ್ರುತ್ವಾ ತ್ವಿದಮುಪಾಖ್ಯಾನಂ ಶ್ರಾವ್ಯಮನ್ಯನ್ನ ರೋಚತೇ ।**
**ಪುಂಸ್ಕೋಕಿಲರುತಂ ಶ್ರುತ್ವಾ ರೂಕ್ಷಾ ಧ್ವಾಂಕ್ಷಸ್ಯ ವಾಗಿವ ॥**

[ಆ. ಪ. ಅ. ೨ ಶ್ಲೋಕ ೩೮೪]

ಮಹಾಭಾರತವನ್ನು ಕೇಳಿದನಂತರ ಬೇರೆ ಯಾವುದೂ ರುಚಿಸುವುದಿಲ್ಲ. ಕೋಗಿಲೆಯ ಮಧುರಧ್ವನಿಯನ್ನು ಕೇಳಿದನಂತರ ಕಾಗೆಯ ಕರ್ಕಶಧ್ವನಿಯನ್ನು ಯಾರು ತಾನೇ ಕೇಳಲು ಅಪೇಕ್ಷಿಸುತ್ತಾರೆ?

**ಯ ಇದಂ ಶ್ರಾವಯೇದ್ವಿದ್ವಾನ್ಬ್ರಾಹ್ಮಣಾನಿಹ ಪರ್ವಸು ।**
**ಧೂತಪಾಪ್ಮಾ ಜಿತಸ್ವರ್ಗೋ ಬ್ರಹ್ಮ ಗಚ್ಛತಿ ಶಾಶ್ವತಮ್ ॥**

[ಆ. ಪ. ಅ. ೬೨ ಶ್ಲೋ ೩೬]

ಯಾವ ವಿದ್ವಾಂಸನು ಪರ್ವಕಾಲಗಳಲ್ಲಿ ಈ ಮಹಾಭಾರತವನ್ನು ಬ್ರಾಹ್ಮಣರಿಗೆ ಓದಿ ಹೇಳುವನೋ–ಅವನು ಪಾಪಮುಕ್ತನಾಗಿ ಸನಾತನ ಬ್ರಹ್ಮವನ್ನು ಹೊಂದುತ್ತಾನೆ.

**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।**
**ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್ ॥**

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ವಿಷಯವಾಗಿ ಇಲ್ಲಿ ಏನು ಹೇಳಲ್ಪಟ್ಟಿದೆಯೋ–ಅದೇ ಬೇರೆಡೆಗಳಲ್ಲಿ ದೊರಕುತ್ತದೆ. ಇದರಲ್ಲಿ ಹೇಳಲ್ಪಡದಿರುವುದು ಬೇರೆಲ್ಲಿಯೂ ಇಲ್ಲವೇ ಇಲ್ಲ.

**ಶಾಸ್ತ್ರೇಷು ಭಾರತಂ ಸಾರಂ ತತ್ರ ನಾಮಸಹಸ್ರಕಮ್ ।**
**ವೈಷ್ಣವಂ ಕೃಷ್ಣಗೀತಾ ಚ ತಜ್ಜ್ಞಾನಾನ್ಮುಚ್ಯತೇಽಞ್ಜಸಾ ।**
**ನ ಭಾರತಸಮಂ ಶಾಸ್ತ್ರಂ ಕುತ ಏವಾನಯೋಃ ಸಮಮ್ ॥**

ಮಹಾಭಾರತವು ಸಮಸ್ತಶಾಸ್ತ್ರಗಳ ಸಾರವಾಗಿದೆ. ಅದರಲ್ಲಿಯೂ ಭಗವದ್ಗೀತೆ ಮತ್ತು ವಿಷ್ಣುಸಹಸ್ರನಾಮಗಳು ಅತ್ಯಂತಶ್ರೇಷ್ಠವಾದುವುಗಳು. ಅವುಗಳ ಪಠನ-ಮನನಗಳಿಂದ ಮನುಷ್ಯನು ಮುಕ್ತನಾಗುತ್ತಾನೆ. ಭಾರತಕ್ಕೆ ಸಮಾನವಾದ ಶಾಸ್ತ್ರವೇ ಇಲ್ಲವೆಂದ ಮೇಲೆ ಗೀತೆ ಮತ್ತು ಸಹಸ್ರನಾಮಗಳ ವಿಷಯದಲ್ಲಿ ಹೇಳುವುದೇನಿದೆ? [ ಬ್ರಹ್ಮಾಣ್ಡಪುರಾಣ, ಗೀತಾತಾತ್ಪರ್ಯ]

**ವೇದೇ ರಾಮಾಯಣೇ ಚೈವ ಪುರಾಣೇಷು ಚ ಭಾರತೇ ।**
**ಆದಾವನ್ತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥**

[ಸ್ವ. ಪ. ಅ. ೬ ಶ್ಲೋಕ. ೯೩]

- ಹರಿಃ ಓಂ ತತ್ಸತ್ -

